ವೃತ್ತದಲ್ಲಿ ಮಾನವ ಸರಪಳಿ ರಚನೆ; ಸುಮಾರು ಅಡ್ಡಿ; ೩೮ ಮಂದಿ ಬಂಧನ.

ಇವು ಇಂದು ಮಧ್ಯಾಹ್ನ ಕಂಡುಬಂದ ದೃಶ್ಯಗಳು. ಒಂದಂಕಿ ಲಾಟರಿ ಮಾರಾಟ ನಿಷೇಧಿಸಬೇಕೆಂದು ಒತ್ತಾಯಿಸಿ ಸಯ್ಯಾಜಿರಾವ್ ರಸ್ತೆಯ ಪಕ್ಷದ ಕಚೇರಿಯಿಂದ ಜಿಲ್ಲಾಧಿಕಾರಿಗಳ ಕಚೇರಿಯ ವರೆಗೆ ಮೆರವಣಿಗೆಯಲ್ಲಿ ತೆರಳಿ ಮನವಿ ಅರ್ಪಿಸಿದ ತರುವಾಯ ಯುವ ಜನತಾ ದಳದ ಕಾರ್ಯಕರ್ತರು ರಾಜ್ಯ ಘಟಕದ ಅಧ್ಯಕ್ಷ ಆರ್. ವಿ. ಹರೀಶ್ ಅವರ ನೇತೃತ್ವದಲ್ಲಿ ಕೆ. ಆರ್. ವೃತ್ತಕ್ಕೆ ಬಂದು 'ಮಾನವ ಸರಪಳಿ' ನಿರ್ಮಿಸಿದರು.

'ಕೇಂದ್ರ ಸರ್ಕಾರಕ್ಕೆ ಧಿಕ್ಕಾರ'; 'ವಿ. ಸಿ. ಶುಕ್ಲಾಗೆ ಧಿಕ್ಕಾರ', 'ತಮಿಳ್ನಾಡು ಮುಖ್ಯಮಂತ್ರಿ ಜಯಲಲಿತಾಗೆ ಧಿಕ್ಕಾರ', 'ಕಾವೇರಿ ನಮ್ಮದು', 'ನ್ಯಾಯ ಬೇಕು' ಇವೇ ಮೊದಲಾದ ಘೋಷಣೆಗಳನ್ನು ಕೂಗುತ್ತಿದ್ದ ಅವರು ಸುಮಾರು ೧೫ ನಿಮಿಷಗಳಾದರೂ ಅಲ್ಲಿಂದ ಕದಲಲಿಲ್ಲ. ಇದರಿಂದಾಗಿ ವಾಹನ ಸಂಚಾರ ಅಸ್ತವ್ಯಸ್ತಗೊಂಡಿತು. ಈ ವೇಳೆಗೆ ತುಂತುರು ಮಳೆ ಆರಂಭವಾಯಿತು.

ಮಳೆ ಬಂದರೂ ಅವರು ಅಲ್ಲಿಂದ ಕದಲದಿದ್ದಾಗ ಪೋಲೀಸರು ಅವರನ್ನು ತೆರವು ಮಾಡಿಸಲು ಪ್ರಯತ್ನಿಸುತ್ತಿದ್ದರು. ತಾತಯ್ಯ ಪ್ರತಿಮೆ ಕಡೆ ನಿಂತಿದ್ದವರು ಅಲ್ಲಿಂದ ಕದಲಿದರು. ಆದರೆ ಸಂಚಾರಕ್ಕೆ ಪೋಲೀಸರು ಅನುವು ಮಾಡಿಕೊಡುತ್ತಿದ್ದಾಗ ಎಲ್ಲ ಕಾರ್ಯಕರ್ತರು ಸಯ್ಯಾಜಿರಾವ್ ರಸ್ತೆ ಕಡೆ ಹೋಗುವ ವಾಹನಗಳನ್ನು ತಡೆದಿದ್ದರಿಂದ ಪೋಲೀಸರು ಅವರನ್ನು ಬಂಧಿಸಿದರು.

ಹರೀಶ್ ಅವರಲ್ಲದೇ ನಗರ ಅಧ್ಯಕ್ಷರೂ ಆದ ಮೇಯರ್ ಡಿ.ಧ್ರುವಕುಮಾರ್, ಜಿಲ್ಲಾ ಅಧ್ಯಕ್ಷ ಬನ್ನೂರು ಕುಮಾರ್, ಕಾರ್ಯದರ್ಶಿ ಮಂಚಯ್ಯ, ಮುಖಂಡರಾದ ವಿ. ಶ್ರೀನಿವಾಸಮೂರ್ತಿ, ವೈ.ಎನ್. ಶಂಕರೇಗೌಡ, ಶಿವಣ್ಣ; ಆರ್.ಚಂದ್ರಶೇಖರ್, ಚೌಹಳ್ಳಿ ಪುಟ್ಟಸ್ವಾಮಿ, ಸಿ.ಕುಮಾರಸ್ವಾಮಿ, ಅಯ್ಯೂಬ್, ಖಲೀಲ್, ವಾಸುದೇವ, ಸಿ. ಮೋಹನ್ ಪ್ರಕಾಶ್, ಜಗದೀಶ್ ... ಗೌಡ, ... ಸ್ವಾಮಿ ಮತ್ತಿತರರು ಬಂಧನಕ್ಕೊಳಗಾದರು.

ಸರ್ಕಲ್ ಇನ್ಸ್‌ಪೆಕ್ಟರ್ ಕೆ. ಎಸ್. ತಮ್ಮಯ್ಯ ಅವರ ನೇತೃತ್ವದಲ್ಲಿ ಇವರನ್ನೆಲ್ಲ ಬಂಧಿಸಿ ದೇವರಾಜ ಠಾಣೆಗೆ ಕರೆದೊಯ್ಯಲಾಯಿತು. ಬಂಧಿತ ೩೮ ಮಂದಿಯನ್ನು ನಂತರ ಬಿಡುಗಡೆ ಮಾಡಲಾಯಿತು.

ಒಂದಂಕಿ ಲಾಟರಿ

ಇದಕ್ಕೂ ಮುಂಚೆ 'ಒಂದಂಕಿ ಲಾಟರಿ ನಿಷೇಧಿಸಿ ಬಡ ಸಂಸಾರಗಳನ್ನು ಉಳಿಸಿ' ಕಾರ್ಯಕ್ರಮದ ಅಂಗವಾಗಿ ಪಕ್ಷದ ಕಚೇರಿಯಲ್ಲಿ ಜಿಲ್ಲಾ ಅಧ್ಯಕ್ಷ ಬನ್ನೂರು ಕುಮಾರ್ ಅವರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು.

ರಾಜ್ಯ ಯುವ ಜನತಾ ದಳ ಅಧ್ಯಕ್ಷ ಆರ್. ವಿ. ಹರೀಶ್ ಅವರು ಮಾತನಾಡಿ ಒಂದಂಕಿ ಲಾಟರಿಯಿಂದಾಗಿ ಸಾವಿರಾರು ಕುಟುಂಬಗಳು ಬೀದಿ ಪಾಲಾಗಿದ್ದು, ಇದನ್ನು ಕೂಡಲೇ ನಿಷೇಧಿಸಬೇಕೆಂದು ಆಗ್ರಹಪಡಿಸಿದರು.

ಆಗಸ್ಟ್ ೯ ರಂದು ಬೆಂಗಳೂರಿನಲ್ಲಿ ಏಕೀಕೃತ

# ಎಲ್ಲರ ಗಮನ—ಅವಿಶ್ವಾಸ ನಿಲುವಳಿ

ಹೊಸದಿಲ್ಲಿ, ಜುಲೈ ೨೪—ಸೋಮವಾರದಿಂದ ಆರಂಭಗೊಳ್ಳಲಿರುವ ಸಂಸತ್ತಿನ ಮಳೆಗಾಲದ ಅಧಿವೇಶನದಲ್ಲಿ ನರಸಿಂಹರಾವ್ ಸರ್ಕಾರದ ವಿರುದ್ಧ ಮಂಡಿಸಲಾಗುವ ಅವಿಶ್ವಾಸ ಗೊತ್ತುವಳಿ ಸ್ವೀಕೃತವಾಗುವುದೇ ಅಥವಾ ಬಿದ್ದುಹೋಗುವುದೇ ಎಂಬುದರ ಬಗ್ಗೆ ಈಗ ಎಲ್ಲರ ಗಮನ ಕೇಂದ್ರೀಕೃತವಾಗಿದೆ.

ಅಧಿವೇಶನದ ತಾತ್ಕಾಲಿಕ ಕಲಾಪ ಪಟ್ಟಿಯಂತೆ, ಶಾಸನಾತ್ಮಕ ಹಾಗೂ ಇತರೆ ಕಾರ್ಯಕ್ರಮಗಳ ದೊಡ್ಡ ಪಟ್ಟಿಯೇ ಇದ್ದರೂ ಹಾಗೂ ವಿವಿಧ ಪಕ್ಷಗಳವರು ಹಲವಾರು ಪ್ರಮುಖ ವಿಷಯಗಳನ್ನು ಎತ್ತುವುದು ಸಂಭಾವ್ಯವಾಗಿದ್ದರೂ, ಈಗಾಗಲೇ ರಾಷ್ಟ್ರೀಯ ರಂಗ ಎಡ ಪಕ್ಷಗಳ ಒಕ್ಕೂಟ ಹಾಗೂ ಬಿಜೆಪಿ ಪ್ರತ್ಯೇಕವಾಗಿ ನೀಡಿರುವ ಅವಿಶ್ವಾಸ ಸೂಚನೆಗಳ ಹಣೆಬರಹ ಏನಾಗುತ್ತದೆಂಬುದರ ಬಗೆಗೇ ಎಲ್ಲರೂ ಕುತೂಹಲಗೊಂಡಿದ್ದಾರೆ.

ಪ್ರಧಾನಿ ಹಾಗೂ ಅವರ ಪಕ್ಷದ ಪ್ರಮುಖರು ಕಳೆದ ಜುಲೈ ಹಾಗೂ ಡಿಸೆಂಬರ್‌ನಲ್ಲಿ ತಮ್ಮ ಸರ್ಕಾರದ ವಿರುದ್ಧ ಮಂಡಿಸಲ್ಪಟ್ಟು ಬಿದ್ದುಹೋದ ಅವಿಶ್ವಾಸ ಸೂಚನೆಗಳಂತೆಯೇ ಈ ಸಲದ ವಿಶ್ವಾಸ ಸೂಚನೆ ಕೂಡಾ ಬಿದ್ದುಹೋಗುತ್ತದೆಂಬ ವಿಶ್ವಾಸ ತಳೆದಿದ್ದರೆ, ಅವಿಶ್ವಾಸ ನಿಲುವಳಿ ಮಂಡಿಸುತ್ತಿರುವ ಪಕ್ಷಗಳವರು, ಅವು ಸ್ವೀಕೃತವಾಗುವ ಬಗೆಗೆ ಅಷ್ಟೊಂದು ಭರವಸೆಯಿದ್ದಂತೆ ಕಾಣುವುದಿಲ್ಲ.

ಹಾಗೆಂದು ಕಾಂಗ್ರೆ ಪಕ್ಷವಾಗಲಿ ಅಥವಾ ವಿರೋಧ ಪಕ್ಷಗಳಾಗಲಿ ಸುಮ್ಮನೆ ಕುಳಿತಿಲ್ಲ. ಸದಸ್ಯರನ್ನು ತಮ್ಮ ತಮ್ಮ ಕಡೆಗೆ ಸೆಳೆದುಕೊಳ್ಳಲು ಎರಡೂ ಪಾಳಯದವರು ಏನೆಲ್ಲಾ ಪ್ರಯತ್ನ ಮಾಡುತ್ತಿದ್ದಾರೆ.

ಲೋಕಸಭೆಯಲ್ಲಿ ಪಕ್ಷಗಳ ಬೆಂಬಲ ಮುಂದಿನಂತಿದೆ : ಕಾಂಗ್ರೆ ೨೫೧, ಬಿಜೆಪಿ ೧೧೯, ಜನತಾ ದಳ ೪೦, ಸಿಪಿಎಂ ೩೫, ಜನತಾ ದಳ (ಎ) ೨೦, ಸಿಪಿಐ ೧೪, ಎಐಎಡಿಎಂಕೆ ೧೧, ತೆಲುಗು ದೇಶಂ ೩, ಜೆಎಂಎಂ ೬, ಆರೆಸ್‌ಪಿ ೪, ಫಾರ್ವರ್ಡ್ ಬ್ಲಾಕ್ ೩, ಸಮಾಜವಾದಿ ಪಕ್ಷ ೩, ಬಿಎಸ್‌ಪಿ ೩, ಇತರರು ೧೩.

ಲೋಕಸಭೆಯಲ್ಲಿ ಒಟ್ಟುಬಲ ೫೪೫ ಆಗಿದ್ದರೂ,

■ ಸಂಜೆ ೬.೩೦ಕ್ಕೆ ಗೋಕುಲಂ ರಸ್ತೆ ಸತ್ಸಂಗಭವನದಲ್ಲಿ ಸ್ವಾಮಿ ಕೈವಲ್ಯ ಚೈತನ್ಯ ಅವರಿಂದ ಪ್ರವಚನ.

## ಸೀಳುನೋಟ

"ಬಿಎಸ್‌ಎಫ್‌ನವರು ಹಿಡಿದ ಕತ್ತೆಗಳೂ ವೀರಪ್ಪನ್ ಬೆಂಬಲಿಗರವು"



'ಈ ಮನುಷ್ಯ ಪ್ರಾಣೀನೇ ಹಾಗೆ! ಸಹಾಯಕ್ಕೆ ಬಳಸಿಕೊಳ್ಳೋದಲ್ಲದೆ, ತನ್ನ ತಪ್ಪನ್ನು ನಮ್ಮ ತಲೆಗೆ ಕಟ್ಟಿಬಿಡ್ತಾನೆ!"

# ಮಾಹಿತಿದಾರ ತೊರೆದ ಬಂದೂಕು ಜಪ್ತಿ

(ನಮ್ಮ ಪ್ರತಿನಿಧಿಯಿಂದ)

ಹನೂರು, ಜುಲೈ ೨೪ – ಪೋಲೀಸ್ ಮಾಹಿತಿದಾರನೊಬ್ಬ ತನ್ನ ಆತ್ಮರಕ್ಷಣೆಗೆ ನೀಡಿದ್ದ ಬಂದೂಕನ್ನು ತೊರೆದುಹೋಗಿದ್ದು, ಅದನ್ನು ಪೋಲೀಸರು ಜಪ್ತಿ ಮಾಡಿದ್ದಾರೆ.

ಕುಖ್ಯಾತ ನರಹಂತಕ ವೀರಪ್ಪನ್‌ನ ಬಲಗೈ ಬಂಟ ಗುರುನಾಥನ್‌ನನ್ನು ಹಿಡಿಯಲು ಸಹಕರಿಸಿದ ವೈನ್‌ಸ್ಟೋರ್ ನಟರಾಜ್, ಸತ್ತಿಮಂಗಲದ ನಾಗರಾಜು ಹಾಗೂ ಮುತ್ತುರಾಮನ್ ಈ ಮೂವರ ಪೈಕಿ ನಾಗರಾಜು ಎಂಬಾತ ಅರಣ್ಯದಂಚಿನಲ್ಲಿದ್ದರಿಂದ ಆತ ಸ್ವಯಂ ರಕ್ಷಣೆಗೆ ರಾಚಯ್ಯನವರು ಎಸ್.ಐ. ಆಗಿದ್ದಾಗ ಬಂದೂಕು ನೀಡಲಾಗಿತ್ತೆಂದೂ ತಿಳಿದಿದೆ.

ಒಮ್ಮೆ ವೀರಪ್ಪನ್ ತಂಡ ಈತನ ಮನೆ ಮೇಲೆ ದಾಳಿ ಮಾಡಿದಾಗ ಸಿಗದೇ ತಪ್ಪಿಸಿಕೊಂಡಿದ್ದ ಆತ ಮತ್ತೆ ತಂಡ ದಾಳಿ ಮಾಡಬಹುದೆಂದು ಹೆದರಿ ಊರು ಖಾಲಿ ಮಾಡಿದ್ದು, ಆತನಿಂದ ಪೋಲೀಸರು ಬಂದೂಕನ್ನು ಹಿಂದಕ್ಕೆ ಪಡೆದಿರಲಿಲ್ಲವೆನ್ನಲಾಗಿದೆ.

ಆ ಬಂದೂಕನ್ನು ಅರ್ಜುನ್ ದೊಡ್ಡಿಯಲ್ಲಿರುವ ಈತನ ಮಾವ ಮಾದೇವನ ಬಳಿ ಇರಿಸಿದ್ದನೆಂದೂ ಈ ವಿಷಯ ಮುತ್ತುರಾಮನ್‌ಗೆ ಗೊತ್ತಾಗಿ ಈಗ ಕೆಲ ದಿನಗಳ ಹಿಂದೆ ರಾಮಾಪುರದ ಪೋಲೀಸ್ ಇನ್ಸ್‌ಪೆಕ್ಟರ್ ಮರಿಸ್ವಾಮಿಯವರಿಗೆ ತಿಳಿಸಲಾಗಿ ಅವರು ಬಂದೂಕನ್ನು ವಶಕ್ಕೆ ತೆಗೆದುಕೊಂಡರೆಂದು ತಿಳಿದುಬಂದಿದೆ.

## ಕೊಲೆ ಆರೋಪಿ ಆಸ್ಪತ್ರೆಯಿಂದ ಪರಾರಿ

ತಿ.ನರಸೀಪುರ, ಜುಲೈ ೨೪ – ಈ ತಾಲ್ಲೂಕಿನ ಕೇತುಪುರದ ಮಾಜಿ ಶಾಸಕ ಸಿದ್ದಯ್ಯನವರ ಮಗ ಸತೀಶ್ ಎಂಬಾತನ ಕೊಲೆಗೆ ಸಂಬಂಧಿಸಿದಂತೆ ಬೇಕಾಗಿದ್ದ ಪ್ರಮುಖ ಆರೋಪಿ ಬೋರೇ... ಎಂಬಾತ ಮೈಸೂರಿನ ಜೆಎಸ್‌ಎಸ್... ಪರಾರಿಯಾಗಿದ್ದಾನೆಂದು ...

ಆತ ...

ಮುದ್ರಣ
೭೭೭, ೭ನೇ ಕ್ರಾಸ್, ರಾಮಾನುಜ ರಸ್ತೆ,
ಮೈಸೂರು – ೫೭೦ ೦೦೪
ದೂರವಾಣಿ : ೨೭೩೨೪, ೩೨೯೭೦

ಪುಟ: ೨೧ ಸಂಚಿಕೆ : ೨೦೪ ನೋಂದಣಿ ಸಂಖ್ಯೆ : ಕೆಆರ್‌ಎಸ್‌ಎನ್ ೧೨೩

ಮೈಸೂರು ೧೯೧೫ ವರ್ಷ

## ಕಾವೇರಿ ಜಲ ವಿವಾದ

# ...ಇಂದು ದಿಲ್ಲಿಗೆ ರಾಜ್ಯದ ಸಚಿ...

...ಸೂರು, ಜುಲೈ ೨೪–ಕಾವೇರಿ ...ದಲ್ಲಿ ರಾಜ್ಯದ ಹಿತ ಕಾಪಾಡಬೇಕು ...ನಿ ಪಿ.ವಿ. ನರಸಿಂಹರಾವ್ ಹಾಗೂ ...ದ್ರ ಸಚಿವರನ್ನು ಭೇಟಿ ಮಾಡಿ ...ಾಡಿಕೊಳ್ಳಲು ರಾಜ್ಯದ ಸಚಿವರ ...ಂದು ನಾಳೆ ಹೊಸದಿಲ್ಲಿಗೆ ತೆರಳಲಿದೆ. ...ಮಂತ್ರಿ ಎಂ. ವೀರಪ್ಪ ಮೊಯ್ಲಿ, ...ಮಂತ್ರಿ ಎಸ್.ಎಂ. ಕೃಷ್ಣ, ಕಾನೂನು ...ಳ್ಳಿ ರಾಮಸ್ವಾಮಿ, ಗ್ರಾಮೀಣಾ... ...ಚಿವ ಎಂ.ವೈ. ಘೋರ್ಪಡೆ, ... ಸಚಿವ ಎ.ಕೃಷ್ಣಪ್ಪ ಹಾಗೂ ...ರಾ ಸಚಿವ ಕೆ.ಎನ್. ನಾಗೇಗೌಡ ಅವರು ಈ ನಿಯೋಗದಲ್ಲಿ ಇರುತ್ತಾರೆ.

ನ್ಯಾಯಮಂಡಳಿ ನೀಡಿರುವ ಮಧ್ಯಂತರ ತೀರ್ಪಿನ ಜಾರಿಗೆ ಉಸ್ತುವಾರಿ ಸಮಿತಿ ರಚಿಸುವುದಾಗಿ ಕೇಂದ್ರ ಜಲಸಂಪನ್ಮೂಲ ಸಚಿವ ವಿ.ಸಿ. ಶುಕ್ಲಾ ಅವರು ನೀಡಿರುವ ಹೇಳಿಕೆಯ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಉಂಟಾಗಿರುವ ಅನುಮಾನವನ್ನು ದೂರಮಾಡಲು ಸ್ಪಷ್ಟೀಕರಣ ನೀಡುವಂತೆ ಕೋರಲು ನಿಯೋಗ ದಿಲ್ಲಿಗೆ ತೆರಳುತ್ತಿದೆ.

ರಾಜ್ಯದ ರೈತರ ಹಿತ ಕಾಯುವುದು ಕಾಂಗ್ರೆ ಪಕ್ಷದ ಸರ್ಕಾರದ ಮುಖ್ಯ ಕರ್ತವ್ಯವಾಗಿದೆ. ಈ ಹಿಂದೆ ದಿವಂಗತ ಇಂದಿರಾಗಾಂಧಿ ಅಥವಾ ರಾಜೀವ್ ಗಾಂಧಿ ಅವರು ರಾಜ್ಯದ ವಿಷಯದಲ್ಲಿ ಈ ರೀತಿ ನಡೆದುಕೊಂಡಿರಲಿಲ್ಲ ಎಂಬುದನ್ನು ವರಿಷ್ಠರಿಗೆ ಮನವರಿಕೆ ಮಾಡಿಕೊಡುವುದಾಗಿ ನಿಯೋಗದಲ್ಲಿ ತೆರಳಲಿರುವ ನಾಗೇಗೌಡರು ಆಂದೋಲನಕ್ಕೆ ತಿಳಿಸಿದರು.

### ಜಯಾ ಸರ್ಕಾರ ವಜಾ ಮಾಡಬೇಕಿತ್ತು –ಅಜೀಜ್ ಸೇಠ್

ಮೈಸೂರು, ಜುಲೈ ೨೪ – ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ನಿರಶನ ಹೂಡಿದ್ದ ತಮಿಳುನಾಡು ಮುಖ್ಯಮಂತ್ರಿ ಜಯಲಲಿತಾ ಅವರ ಸರ್ಕಾರವನ್ನು ವಜಾ ಮಾಡಬೇಕಿದ್ದಿತು ಎಂದು ಹಿರಿಯ ಕಾ... ಸೇಠ್ ಅವರು ಇಂದಿ...

ಜಯಲಲಿತಾ ... ವಿರೋಧಿ ಕೃತ್ಯ. ಹಿ... ರಾಜ್ಯಪಾಲರು ಹಾ... ಪ್ರತಿನಿಧಿಯಾಗಿ ಕೇಂದ್ರ... ವಿ.ಸಿ.ಶುಕ್ಲಾ ಅವರು ... ಕುಳಿತಿದ್ದ ಸ್ಥಳಕ್ಕೆ ಹೋ... ಪತ್ರಕರ್ತರಿಗೆ ತಿಳಿಸಿದ...

ತಮಿಳುನಾಡಿಗೆ ... ಮಧ್ಯಂತರ ತೀರ್ಪು ... ಸಮಿತಿ ರಚನೆಗೆ ಒಪ್ಪಿಲ್ಲ...

### ...ದೇಶ್ವರ ಬೆಟ್ಟ: ... ಅಡಚಣೆ ಇಲ್ಲ

...ರ ಬೆಟ್ಟ, ಜುಲೈ ೨೪–ಇಲ್ಲಿನ ಶ್ರೀ ...ಮಿ ದೇವಸ್ಥಾನದಲ್ಲಿ ಪೂಜೆ, ಸೇವೆ ...ದಿಗಳು ಎಂದಿನಂತೆ ನಡೆಯುತ್ತಿವೆ ...ನದ ನಿರ್ವಾಹಕ ಅಧಿಕಾರಿ ಡಿ. ...ವ್ವಾರೆ..

...ಬಂಧಿಸುವ ಕಾರ್ಯಾಚರಣೆಗಾಗಿ ...ಡುಬಿಟ್ಟಿರುವ ರಾಜ್ಯ ಮೀಸಲು ...ಸಿಂದಾಗಲಿ, ಗಡಿ ಭದ್ರತಾ ...ಸ್ತಾರಿಗಳಿಗೆ ಯಾವ ಅನಾನು... ...ದೂ ರಾಜ್ಯದ ವಿವಿಧ ಭಾಗ... ...ಗೆ ಸಂಸ್ಥೆ ಬಸ್ಸುಗಳು ಹಾಗೂ ...ದಿನಂತೆ ಬಂದು ಹೋಗುತ್ತಿವೆ ...ವ ಬಸ್ಸುಗಳು ಸಹಾ ಯಾವ... ...ವೆ ಸಂಚರಿಸುತ್ತಿವೆ ಎಂದೂ...

# ಕಾವೇರಿ ನ್ಯಾಯಮಂಡಳಿ ಬಹಿ...

ಬೆಂಗಳೂರು, ಜುಲೈ ೨೪ – ಕಗ್ಗಂಟಾಗಿರುವ ಕಾವೇರಿ ಜಲವಿವಾದವನ್ನು ನ್ಯಾಯಮಂಡಳಿಯು ಬಗೆಹರಿಸುವುದಿಲ್ಲವಾದ ಕಾರಣ ಅದನ್ನು ರಾಜ್ಯ ಸರ್ಕಾರವು ಬಹಿಷ್ಕರಿಸಬೇಕೆಂದು ರಾಜ್ಯ ರೈತ ಸಂಘವು ಆಗ್ರಹಪಡಿಸಿದೆ.

ಕರ್ನಾಟಕವು ತಮಿಳುನಾಡಿಗೆ ೨೦೫ ಟಿಎಂಸಿ ನೀರನ್ನು ಕೂಡ ಬಿಡಲು ಸಾಧ್ಯವಿಲ್ಲವೆಂಬ ಅರಿವು ನ್ಯಾಯಮಂಡಳಿಗೆ ಸಂಪೂರ್ಣವಾಗಿ ಇದ್ದರೂ, ಅದು ಕರ್ನಾಟಕವು ೨೫೦ ಟಿಎಂಸಿ ನೀರನ್ನು ಬಿಡಬೇಕೆಂದು ಬಯಸಿದೆ ಎಂದು ರೈತ ಸಂಘದ ಅಧ್ಯಕ್ಷ ಎಂ.ಡಿ.ನಂಜುಂಡಸ್ವಾಮಿಯವರು ಇಂದಿಲ್ಲಿ ಆರೋಪಿಸಿದರು.

ಕರ್ನಾಟಕವು ತಮಿಳುನಾಡಿಗೆ ... ನ್ಯಾಯಮಂಡಳಿಗೆ ನೇಮಿಸಿರುವುದರ ಫಲ ಇದಾಗಿದೆ ಎಂದು ಅವರು ಹೇಳಿದರು.

ರಾಜ್ಯ ಸರ್ಕಾರಗಳು ಮತ್ತು ಕೇಂದ್ರ ಸರ್ಕಾರ ಈ ವಿವಾದದಿಂದ ದೂರ ಉಳಿದು, ಈ ಸಮಸ್ಯೆಯನ್ನು ತಾಂತ್ರಿಕ ಪರಿಣಿತರ ಬಳಿಗೆ ಕೊಂಡೊಯ್ಯಲು ರೈತರಿಗೆ ಅವಕಾಶ ನೀಡಿದರೆ ವಿವಾದವನ್ನು ಬಗೆಹರಿಸಬಹುದು ಎಂದು ಅವರು ಅಭಿಪ್ರಾಯಪಟ್ಟರು. ಸಮಸ್ಯೆಯನ್ನು ಬಗೆಹರಿಸಬೇಕೆಂದಿದ್ದಲ್ಲಿ, ನ್ಯಾಯ ಮಂಡಳಿಯನ್ನು ನೇಮಿಸುವುದಕ್ಕೆ ಮುಂಚೆ, ಜಲಹಂಚಿಕೆಯ ಬಗೆಗಿನ ಹೆಲ್ಸಂಕಿ ಒಪ್ಪಂದದ ಆಧಾರದ ಮೇಲೆ ಸಮರ್ಪಕ ರಾಷ್ಟ್ರೀಯ ಜಲ ನೀತಿಯನ್ನು ಅನುಸರಿಸಬೇಕೆಂದು ಅವರು ಸ್ಪಷ್ಟಪಡಿಸಿ...

...ಯನ್ನು ಪ್ರಕಟಿಸುವುದ... ...ವನ್ನು ಸಮರ್ಥಿಸಿಕೊಳ್ಳ... ಹೇಳಿಕೆ ಸತ್ಯವಲ್ಲ ಎ... ಎಂದು ಅವರು ತಿಳಿಸಿದ...

ಪ್ರಧಾನಿಯ...

ಶುಕ್ಲಾ ಅವರು ಈ ...ರ್ಪಕವಾಗಿ ವ್ಯವಹರಿಸ... ಪ್ರಧಾನಿ ಪಿ.ವಿ.ನರಸಿಂಹ... ಸಮಸ್ಯೆಯನ್ನು ಬಗೆಹ... ಕಾವೇರಿ ವಿವಾದಕ್ಕೆ ಸಂಬ... ಸಮಿತಿಯು ಒತ್ತಾಯಿಸಿ... ...ಸಿದ ನಂಜುಂಡಸ್ವಾಮಿ...

ಪ್ರಶ್ನೆ 2. ಈ ಪ್ರಶ್ನೆಗಳಲ್ಲಿ ಐದನ್ನು ಆರಿಸಿಕೊಂಡು ಐದಾರು ವಾಕ್ಯಗಳಲ್ಲಿ ಉತ್ತರಿಸಿರಿ.

1. ಯೇತಿಯ ಬಗೆಗಳು, ಅವುಗಳ ಬಗೆಗೆ ಷರ್ಪಾ ಜನರ ಭಾವನೆ.

ಉತ್ತರ : ಯೇತಿಗಳಲ್ಲಿ ಎರಡು ಪ್ರಕಾರಗಳು. "ಮೈತ್ರಿ" ಎಂಬುದು ನರಭಕ್ಷಕ; "ಚುತ್ರಿ" ಎಂಬುದು ಪ್ರಾಣ ಭಕ್ಷಕ, ಈ ಪ್ರಾಣಿಯು ಪಾದ ಹಿಮ್ಮೊಗವಾಗಿರುತ್ತದೆ. ಯೇತಿ ಅಥವಾ ಹಿಮಮಾನವನ ದರ್ಶನದಿಂದ ಅನಿಷ್ಟ ಸಂಭವಿಸುತ್ತದೆ ಎಂಬ ನಂಬಿಕೆ ಷರ್ಪಾ ಜನರಲ್ಲಿದೆ. ಆದ್ದರಿಂದ ಅವರು ಅದನ್ನು ನೋಡಲು ಬಯಸುವದಿಲ್ಲ.

2. ಜಗದೀಶಚಂದ್ರರು ಬರಷು ವಿಜ್ಞಾನಿಯಲ್ಲ, ಸಾಹಿತಿಯೂ ಹೌದು.

ಉತ್ತರ : ಬೋಸರಿಗೆ ವಿಜ್ಞಾನದಲ್ಲಿ ಆಳವಾದ ಅನುಭವವಿದ್ದಂತೆ ಭಾಷೆ ಮತ್ತು ಸಾಹಿತ್ಯದ ಬಗ್ಗೆಯೂ ಇದ್ದಿತೆಂದು ಅವರ ಪತ್ರಗಳಿಂದ ತಿಳಿದು ಬರುತ್ತದೆ. ಅವರು ಸಾಹಿತ್ಯ ಲೋಕದ ಉಜ್ವಲ ತಾರೆಯಾಗಿಯೂ ಬೆಳಗಿದರು. ಬಂಗಾಳಿ ಸಾಹಿತ್ಯ ಪರಿಷನ್ಮಂದಿರದ ಅಧ್ಯಕ್ಷರಾಗಿ ರಾಮ ಮೋಹನ ಪುಸ್ತಕ ಭಾಂಡಾರ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ರವೀಂದ್ರನಾಥ ಠಾಕೂರರ ಸ್ನೇಹಿತರು. ಅವರ ಕೃತಿಗಳನ್ನು ಓದಿ ಅವುಗಳಿಗೆ ತಮ್ಮ ಅಭಿಪ್ರಾಯ ಸೂಚಿಸುತ್ತಿದ್ದರು. ಹೀಗೆ ಬೋಸರು ಸಾಹಿತ್ಯ ಆಧ್ಯಾತ್ಮ ಧಾರ್ಮಿಕ ವಿಷಯುಗಳ ಬಗೆಗೂ ಯೋಚಿಸುತ್ತಿದ್ದರು.

3. ಅರವಿಂದರು ಚಂದ್ರನಾಗೂರನ್ನು ಬಿಟ್ಟು ಪಾಂಡಿಚೇರಿಗೆ ಬರಲು ಕಾರಣ !

ಉತ್ತರ : ಚಂದ್ರನಾಗೂರ ಅರವಿಂದರ ಸಾಧನೆಗೆ ಯೋಗ್ಯ ಸ್ಥಳವಾಗಿರಲಿಲ್ಲ. ರಾಜಕೀಯದ ಕಾರ್ಯಚಟುವಟಿಕೆಗಳು ಹೆಚ್ಚಾಗಿದ್ದವು. ಬೇರೊಂದು ಸ್ಥಳಕ್ಕಾಗಿ ಆಲೋಚಿಸುತ್ತಿದ್ದ ಅವರಿಗೆ ಪಾಂಡಿಚೇರಿ ಹೊಳೆಯಿತು. ಅದು ಕಲ್ಕತ್ತಾದಿಂದ ಸಾಕಷ್ಟು ದೂರ ವಿದ್ದಿತಲ್ಲದೆ ಬ್ರಿಟಿಷರ ಆಡಳಿತಕ್ಕೊಳಪಟ್ಟದ್ದಿಲ್ಲ. ಫ್ರೆಂಚರಿಗೆ ಸೇರಿತ್ತು. ಅದೊಂದು ಸಮುದ್ರ ತೀರದಲ್ಲಿ ಪ್ರಶಾಂತ ಸ್ಥಳವಾಗಿತ್ತು. ಅರವಿಂದರ ಸಾಧನೆಗೆ ಅನುಕೂಲವಾಗಿತ್ತು. ಈ ಕಾರಣ ಅರವಿಂದರು ಚಂದ್ರನಾಗೂರನ್ನು ಬಿಟ್ಟು ಪಾಂಡಿಚೇರಿಗೆ ಬಂದರು.

4. ಅರವಿಂದರು ಐ. ಸಿ. ಎಸ್. ಪದವಿಯನ್ನು ಪಡೆಯಲು ಆಗಲಿಲ್ಲ; ಏಕೆ ?

ಉತ್ತರ : ಅಣ್ಣನ ಒತ್ತಾಯಕ್ಕಾಗಿ ಅರವಿಂದರು ಐ. ಸಿ. ಎಸ್. ಪರೀಕ್ಷೆಗೆ ಕುಳಿತರು. ಎಲ್ಲ ವಿಷಯಗಳಲ್ಲಿ ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾದರೂ ಕುದುರೆ ಸವಾರಿಯ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕಿತ್ತು. ಆದರೆ ತಂದೆಯವರಿಂದ ಬಂದ ಪತ್ರಿಕೆಯ ವಿಷಯ ಓದಿ, ಬ್ರಿಟಿಷರ ಅನ್ಯಾಯಗಳ ಪರಿಚಯ ಹೊಂದಿ ಬ್ರಿಟಿಷರ ಸೇವಕನಾಗಲು ಇಷ್ಟವಿರಲಿಲ್ಲ. ಈ ಕಾರಣ ಐ. ಸಿ. ಎಸ್. ಪರೀಕ್ಷೆ ಪೂರ್ಣಮಾಡುವ ಹಾಗೂ ಪದವಿಯನ್ನು ಪಡೆಯುವದು ಆಗಲಿಲ್ಲ.

5. ಫರೀದ್‌ಪುರದ ಒಂದು ಪ್ರಸಂಗವನ್ನು ತಿಳಿಸಿ.

ಉತ್ತರ : ಫರೀದ್‌ಪುರದಲ್ಲಿಯ ಒಂದು ದೇವಸ್ಥಾನದ ಪಕ್ಕದಲ್ಲಿ ಒಂದು ವಿಚಿತ್ರ ಈಚಲು ಮರವಿತ್ತು. ಸಂಜೆಯ ಸಮಯ ದೇವಸ್ಥಾನದಲ್ಲಿ ಪೂಜೆ ನಡೆಯುತ್ತಿದ್ದಾಗ ಆ ಮರ ಅತ್ತ–ಇತ್ತ ಬಾಗುತ್ತಿತ್ತು. ಇದನ್ನು ಕಂಡ ಜನರು ಆ ಮರದ ಬಗೆಗೆ ದೈವೀಭಾವನೆ ಹೊಂದಿದ್ದರು. ಇದನ್ನು ತಿಳಿದ ಬೋಸರು ತಮ್ಮ ಯಂತ್ರದ ನೆರವಿನಿಂದ ಆ ಮರದ ವರ್ತನೆಯನ್ನು ಪರೀಕ್ಷಿಸಿ, ಇತರ ಸಸ್ಯಗಳಂತೆಯೇ ಅದೂ ಕೂಡಾ ಪರಿಸರದ ವ್ಯತ್ಯಾಸದ ಪ್ರಭಾವದಿಂದ ಏರಿಳಿಯುವದೆಂಬುದನ್ನು ಜನರಿಗೆ ತಿಳಿಸಿಕೊಟ್ಟರು.

ಪ್ರಶ್ನೆ 3. ಕೆಳಗಿನ ವಿಷಯಗಳಲ್ಲಿ ಒಂದನ್ನು ಆರಿಸಿಕೊಂಡು ಎರಡು ಪುಟಗಳಿಗೆ ಮೀರದಂತೆ ಒಂದು ಪ್ರಬಂಧ ಬರೆಯಿರಿ.

1. ಸ್ತ್ರೀಯರೂ ಉದ್ಯೋಗವೂ, 2. ನಾ ಕಂಡ ವಸ್ತು ಪ್ರದರ್ಶನ, 3. ಶಾಲಾ ಪ್ರವಾಸ, 4. ಕಾಡಿನ ರಕ್ಷಣೆ, ದೇಶದ ಸಂಪತ್ತಿನ ರಕ್ಷಣೆ.

ಉತ್ತರ : ಶಾಲಾ ಪ್ರವಾಸ

ಶಿಕ್ಷಣದ ಉದ್ದೇಶ ಮಗುವಿನ ಸರ್ವಾಂಗೀಣ ಬೆಳವಣಿಗೆಯಾಗಿ ಸರಿಯಾದ ವ್ಯಕ್ತಿತ್ವವನ್ನು ನಿರೂಪಿಸುವದೇ ಆಗಿದೆ. ಮುಂದೆ ಯೋಗ್ಯ ನಾಗರಿಕನೂ, ರಾಷ್ಟ್ರದ ಉತ್ತಮ ಪ್ರಜೆಯೂ ಆಗುವಂತೆ ತರಬೇತಿಯನ್ನು ನೀಡುವದಾಗಿದೆ. ಮಗುವಿಗೆ ಶಿಕ್ಷಣ ಔಪಚಾರಿಕವಾಗಿಯೂ, ಅನೌಪಚಾರಿಕವಾಗಿಯೂ ದೊರೆಯಬಲ್ಲದು. ಅಂಥದರಲ್ಲಿ ಶಾಲಾ ಶಿಕ್ಷಣವು ಬಹು ಮುಖ್ಯ ಪಾತ್ರ ವಹಿಸುತ್ತದೆ. ಹೀಗೆ ಶಿಕ್ಷಣ ದೊರೆಯುವ ಹಲವಾರು ಸೌಕರ್ಯಗಳಲ್ಲಿ ಶಾಲಾ ಪ್ರವಾಸವೂ ಒಂದಾಗಿದೆ. ಇದನ್ನು ಶಿಕ್ಷಣದ ಒಂದು ಅಂಗವೆಂದೇ ಹೇಳಬಹುದು. ಪ್ರತ್ಯಕ್ಷ ಅನುಭವ ಪಡೆಯಲು, ಕಲಿತುಕೊಳ್ಳಲು, ನಡೆ–ನುಡಿ, ಇರುವಿಕೆಯನ್ನು ನೋಡಿ ತಿದ್ದಿಕೊಳ್ಳಲು ಹೊರ ಪ್ರಪಂಚದ ಜ್ಞಾನ ಗಳಿಸಲು,

ಮನೋಲ್ಲಾಸ ಹೊಂದಲು ಶಾಲಾ ಪ್ರವಾಸ ಬಹುಮಟ್ಟಿಗೆ ಕಾರಣವಾಗಿದೆ.

ಹೀಗೆ ಒಂದು ಸಲ ನಮ್ಮ ಶಾಲೆಯಲ್ಲಿ ಪ್ರವಾಸವನ್ನು ಏರ್ಪಡಿಸಿದ್ದರು. ನಾನು ಉತ್ಸಾಹದಿಂದ ಅದರಲ್ಲಿ ಭಾಗಿಯಾಗಿದ್ದನು. ನಮ್ಮ ಪ್ರವಾಸಕ್ಕಾಗಿ ಸುಖಾಸನಗಳುಳ್ಳ ಬಸ್ಸಿನ ಏರ್ಪಾಡು ಮಾಡಿದ್ದರು. ಗೊತ್ತುಪಡಿಸಿದ ಬಸ್ಸು ಹೊರಡುವ ಸರಿಯಾದ ವೇಳೆಗೆ ಬಂದಿತು. ನಾವೆಲ್ಲ–ನಮ್ಮ ಸ್ಥಳಗಳಲ್ಲಿ ಕುಳಿತುಕೊಂಡೆವು. ನಮ್ಮ ವರ್ಗದ ಶಿಕ್ಷಕರು, ಇತರ ಕೆಲ ಶಿಕ್ಷಕರು ಹಾಗೂ ವರ್ಗದ ಹಿರೇಮಣಿ ಎಲ್ಲ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದರು. ನಮ್ಮ ಪ್ರಯಾಣ ಬೆಂಗಳೂರಿನಿಂದ ಹೊರಟು ಶ್ರೀರಂಗಪಟ್ಟಣ, ಬೃಂದಾವನ, ಮೈಸೂರು ಸ್ಥಳಗಳನ್ನು ಸಂದರ್ಶಿಸುವಂತೆ ಯೋಜಿಸಲಾಗಿತ್ತು. ಈಗ ಬಸ್ಸು ಪ್ರಯಾಣ ಪ್ರಾರಂಭಿಸಿತು.

ನಾವೆಲ್ಲ ಬಸ್ಸಿನಲ್ಲಿ ಉಲ್ಲಾಸದಿಂದ ಹಾಡು.ಕಥೆ, ವಿನೋದಗಳಲ್ಲಿ ತೊಡಗಿರಲು ದಾರಿ ಸಾಗುತ್ತಿದ್ದಂತೆ ಬಸ್ಸು ಶ್ರೀರಂಗಪಟ್ಟಣದ ರಂಗನಾಥ ದೇವಸ್ಥಾನದ ಎದುರಿನಲ್ಲಿ ನಿಂತಿತ್ತು. ಅಲ್ಲಿಯ ಕಾವೇರಿಯಲ್ಲಿ ಕೈಕಾಲು ಮುಖ ತೊಳೆದು ದೇವಸ್ಥಾನವನ್ನು ಪ್ರವೇಶಿಸಿ ದರ್ಶನ ಪಡೆದುಕೊಂಡು ಹೊರಬಂದವು. ಸ್ಥಳ ಮಹಾತ್ಮೆಯನ್ನು ಕುರಿತು ನಮ್ಮ ಗುರುಗಳು ವಿವರಣೆಯನ್ನಿತ್ತರು. ಒಂದು ನಿಮಿಷ ಕುಳಿತೆವು. ಬಸ್ಸಿನ ಹಾರ್ನ ಬಾರಿಸಿ ನಮ್ಮನ್ನು ಎಚ್ಚರಿಸಿತು. ಹಾಗೆಯೇ ಎದ್ದು ಬಂದು ಬಸ್ಸನ್ನು ಹತ್ತಿದೆವು. ಏನೋ ಒಂದು ಬಗೆಯ ಆನಂದ ಅನುಭವಿಸಿದೆವು. ದೇಹ ಮನಸ್ಸು ಎರಡೂ ಹಗುರಾದವು. ಆದರೆ ಬಸ್ಸು ಮುಂದೆ ಸಾಗಿದ್ದರ ಪರಿವೆಯೇ ಇರಲಿಲ್ಲ. ಈಗ ಮೈಸೂರಿನಲ್ಲಿ ಭೋಜನಾಲಯವೊಂದರ ಮುಂದೆ ನಿಂತಿರುವದು ತಿಳಿಯಿತು. ಭೋಜನಕ್ಕಾಗಿ ಅವಕಾಶ ಕೊಡಲಾಗಿತ್ತು. ನಾವೆಲ್ಲ ಭೋಜನ ತೀರಿಸಿಕೊಂಡು ಪುನಃ ಬಸ್ಸನ್ನೇರಿದೆವು. ಅದೀಗ ಮೃಗಾಲಯದ ಮುಂದೆ ಬಂದು ನಿಂತಿತು.

ಅಪ್ಪಣೆ ಚೀಟಿ ಪಡೆದುಕೊಂಡು ಮೃಗಾಲಯವನ್ನು ಪ್ರವೇಶಿಸಿದೆವು. ಒಳಗಡೆಯಲ್ಲಿ ಮೃಗ ಪಕ್ಷಿಗಳ ಓಡಾಟ, ಹಾರಾಟ, ಚೀರಾಟಗಳನ್ನು ಗಮನಿಸುತ್ತಾ ನಡೆದಾಡಿದೆವು. ವಿವಿಧ ರೀತಿಯ ಪಕ್ಷಿಗಳು, ಪ್ರಾಣಿಗಳು, ಕೋತಿಗಳು, ಜಿಂಕೆಗಳು, ಕಾಡು ಮೃಗಗಳು, ಸರ್ಪಗಳು ಮುಂತಾದವುಗಳನ್ನು ನೋಡುತ್ತ ಅವುಗಳ ಚಟುವಟಿಕೆಗಳನ್ನು, ಕೂಗನ್ನು ಕೇಳುತ್ತ ಉಲ್ಲಸಿತರಾಗಿ ಮುಂದೆ ಮುಂದೆ ಸಾಗುತ್ತಿದ್ದೆವು. ಎಲ್ಲವೂ ಆಕರ್ಷಕವಾಗಿದ್ದಿತು. ಅನೇಕ ಹೊಸ ಹೊಸ ಪ್ರಾಣಿ ಪಕ್ಷಿಗಳನ್ನು ಪತ್ಯಕ್ಷ ನೋಡಿ, ಅವುಗಳ ಆಹಾರ–ವಿಹಾರ, ಸಂತಾನ, ವಸತಿ ಇತ್ಯಾದಿಗಳ ಬಗೆಗ ತಿಳಿದುಕೊಂಡೆವು. ಸುಮಾರು ಎರಡು ಗಂಟೆಯಾಗಿರಬೇಕು. ಮನಸ್ಸಿಲ್ಲದ ಮನಸ್ಸಿನಿಂದಲೇ ಆ ಜಾಗ ಬಿಟ್ಟೆವು. ಹೊರಗೆ ಬಂದು ಎಳ ನೀರನ್ನು ಕುಡಿದು ಬಸ್ ಹತ್ತಿದೆವು.

ಈಗ ನಮ್ಮ ಬಸ್ಸು ಚಾಮುಂಡಿ ಬೆಟ್ಟದ ಮೇಲೆ ಸಾಗುತ್ತಿರುವಾಗ ಎರಡೂ ಕಡೆಗಳಲ್ಲಿಯ ಆ ರಮ್ಯ ಸೃಷ್ಟಿ ಸೌಂದರ್ಯವನ್ನು ನೋಡಿ ಸಂತೋಷಪಟ್ಟೆವು. ಅದೊಂದು ಅಪೂರ್ವ ಅನುಭವ. ದೇವಸ್ಥಾನದ ಸಮೀಪಕ್ಕೆ ಬಸ್ಸು ಬಂದು ನಿಂತಿತ್ತು. ನಾವೆಲ್ಲ ಇಳಿದಾಗ ನಮ್ಮೆದುರಿಗೆ ನಿಂತಿದ್ದ ಮಹಿಷಾಸುರ ಭವ್ಯ ಮೂರ್ತಿಯನ್ನು ಕಂಡೆವು. ಅಲ್ಲಿಂದ ಚಾಮುಂಡೇಶ್ವರಿಯ ದರ್ಶನಕ್ಕೆ ಹೋದೆವು. ತಾಯಿಯ ದರ್ಶನವಾಯಿತು. ಕಣ್ಣು ತಣಿದವು. ಫಲ-ಪುಷ್ಪಗಳನ್ನರ್ಪಿಸಿ, ಪೂಜೆ ಮಾಡಿಸಿ. ನಮಸ್ಕಾರ ಮಾಡಿ ಹೊರಗೆ ಬಂದೆವು. ಅಲ್ಲಿಯೇ ಕೆಲನಿಮಿಷ ಅತ್ತಿತ್ತ ಅಡ್ಡಾಡಿ, ವಸ್ತುಗಳನ್ನು ಖರೀದಿಸಿ, ಸುತ್ತಲಿನ ದೃಶ್ಯ ವೀಕ್ಷಿಸಿದೆವು. ಮೈಸೂರು ನಗರದ ವೈಶಿಷ್ಟ್ಯವನ್ನು ಆ ಎತ್ತರದ ಸ್ಥಾನದಿಂದ ನೋಡಿದಾಗ ಮೈಮರೆಯುವಂತಾಯಿತು.ಹಾಗೆಯೇ ಬೆಟ್ಟದ ಮೇಲಿನ ನಂದಿಯನ್ನು ಕಂಡು ವಂದಿಸಿ ಮುಂದೆ ಸಾಗಿ ಬಂದು ಪುನಃ ಬಸ್ಸಿನಲ್ಲಿ ಹತ್ತಿದೆವು. ಈಗ ಭಕ್ತಿಯಿಂದ ಹಾಡಿದೆವು.

ಈಗ ಬಸ್ಸು ಮೈಸೂರ ಅರಮನೆಯ ಮುಂದೆ ನಿಂತಿದ್ದಿತು. ಎಲ್ಲರೂ ಇಳಿದು ಅಪ್ಪಣೆ ಪಡೆದು ಅರಮನೆಯನ್ನು ಪ್ರವೇಶಿಸಿದೆವು. ಆ ಭವ್ಯ ಸುಂದರ ಅಲಂಕೃತ ಅರಮನೆಯನ್ನು ಒಳ-ಹೊರಗೆಲ್ಲ ಸುತ್ತಿ ನೋಡಲು ನಮ್ಮ ಎರಡೂ ಕಣ್ಣುಗಳು ಸಾಲದಾದವು. ಮೈಸೂರ ಅರಸರ ಘನತೆ, ಔದಾರ್ಯ, ಕಲಾಪ್ರೇಯತೆ ಇವೆಲ್ಲ ಇತಿಹಾಸವನ್ನು ಸ್ಮರಣೆಗೆ ತಂದು ಕೊಟ್ಟವು. ಅವರ್ಣನೀಯ ಆನಂದ ಹೊಂದಿದೆವು. ಅಲ್ಲಿಂದ ಹೊರಬಂದು ಮುಂದೆ ಸಾಗಿ ಕಲಾಭವನವನ್ನು ಸಂದರ್ಶಿಸಿದೆವು. ಅಲ್ಲಿಯ ವಸ್ತು ಸಂಗ್ರಹಾಲಯ, ಕಲಾಕೃತಿಗಳು ಎಲ್ಲವೂ ಮನಸೂರೆಗೊಂಡವು. ಅದೆಲ್ಲವನ್ನು ವರ್ಣಿಸುವದು ಅಸಾಧ್ಯ. ನೋಡಿ ತಣಿಯ ಬೇಕೇ ಹೊರತು ವಿವರಿಸಲು ಸಾಧ್ಯವಿಲ್ಲ. ಈಗಾಗಲೇ ಸೂರ್ಯಾಸ್ತದ ಸಮಯ ಸಮೀಪಿಸಿತು. ಲಗುಬಗೆಯಿಂದ ಉಪಹಾರ ಗೃಹವೊಂದರಲ್ಲಿ ಸಾಯಂಕಾಲದ ಉಪಹಾರವನ್ನು ಸ್ವೀಕರಿಸಿದೆವು. ಈಗ ನಮ್ಮ ಬಸ್ಸು ಮೈಸೂರ ನಗರದ ಮುಖ್ಯ ಮಾರ್ಗಗಳಲ್ಲಿ ಸಂಚರಿಸುತ್ತ ಬೃಂದಾವನದ ಕಡೆ ಸಾಗಿತು.ಊರಿನಲ್ಲಿ ಸಾಗುತ್ತಿರುವಾಗ ಇಕ್ಕೆಲಗಳಲ್ಲಿ ನಗರದಸೌಂದರ್ಯವನ್ನೂ,

ರಸ್ತೆಗಳನ್ನು, ವಾಹನಗಳನ್ನು ವ್ಯಾಪಾರದ ಮಳಿಗೆಗಳನ್ನು ಜನ ಸಂದಣಿಯನ್ನು ವೀಕ್ಷಿಸುತ್ತಿದ್ದೆವು. ಅಲ್ಲಿಯ ಜನಜೀವನದ ಬಗೆಗೆ ಒಂದು ರೀತಿಯ ಅನುಭವ ನಮಗಾಯಿತು.

ಸುಮಾರು ಏಳು ಗಂಟೆಯ ಹೊತ್ತಿಗೆ ಬೃಂದಾವನಕ್ಕೆ ಬಂದು ಸೇರಿದೆವು. ಅಲ್ಲಿಯ ಬಣ್ಣ ಬಣ್ಣದ ದೀಪಗಳು ನಮ್ಮನ್ನು ದೂರದಿಂದಲೇ ಬರಮಾಡಿಕೊಂಡಿದ್ದವು. ಕಾವೇರಿ ಮಾತೆಯ ಪ್ರತಿಮೆಯನ್ನು ಕಂಡು ಕೈ ಮುಗಿದೆವು. ಆಧುನಿಕ ಭಗೀರಥ ವಿಶ್ವೇಶ್ವರಯ್ಯನವರನ್ನು ಕೃತಜ್ಞತೆಯಿಂದ ಸ್ಮರಿಸಿದೆವು. ಹಾಗೆಯೇ ಮುಂದೆ ಮುಂದೆ ಸಾಗಿ ಬೃಂದಾವನಕ್ಕೆ ಒಂದುಸುತ್ತು ಹಾಕಿ ಬಂದೆವು. ಇತ್ತೀಚೆಗೆ ನಿರ್ಮಿಸಲಾದ "ಸಂಗೀತ ಕಾರಂಜಿ" ಸರ್ವರ ಮನಸೆಳೆಯಿತು. ಇದೊಂದು ಅಲೌಕಿಕವಾದ ಕಾಣಿಕೆಯೇ ಸರಿ. ಅಲ್ಲಲ್ಲಿ ವಿವಿಧ ಗತಿಯಲ್ಲಿ ಚೆಲುವನ್ನು ಸೂಸುವ ಬಣ್ಣದ ಕಾರಂಜಿಗಳು ಜುಳು–ಜುಳು ಮಂಜುಳರವದೊಡನೆ ಹರಿಯುತ್ತಿರುವ ನೀರು ತಂಪಾಗಿ ಸೂಸುತ್ತಿರುವ ಪರಿಮಳ ಎಲ್ಲವೂ ಸ್ವರ್ಗಸುಖವನ್ನು ನೀಡುತ್ತಿದ್ದಂತೆ ಭಾಸವಾಯಿತು. ಎಲ್ಲ ಪಂಚೇಂದ್ರಿಯಗಳೂ ಪ್ರಚೋದನೆಗೊಂಡು ತೃಪ್ತಿಪಡೆದವು. ಆ ಪ್ರಶಾಂತ ವಾತಾವರಣದಲ್ಲಿ ಮನಸ್ಸಿಗೆ ಶಾಂತಿ ದೊರೆಯಿತು. ಎಲ್ಲವೂ ಮೈಮರೆಯುವಂತಾಯ್ತು. ಬೆಳಗಾಗುವ ವರಗೂ ಅಲ್ಲಿಯೇ ಹಾಗೆಯೇ ಕುಳಿತು ಬಿಡುವ ಆಶೆ,ಆದರೆ ಗಡಿಯಾರ ಬೆದರಿಸಿತು. ಬಸ್ಸಿಗೆ ಓಡಿದೆವು. ನಮ್ಮನ್ನುಹತ್ತಿಸಿಕೊಂಡು ಬಸ್ಸು ನಮ್ಮೂರ ಕಡೆ ಓಡಿತು. ಆನಂದದ ಲಹರಿಯಲ್ಲಿ ನಾವೆಲ್ಲ ತೇಲುತ್ತಿದ್ದಂತೆ ಕೆಲ ಸಮಯದಲ್ಲಿ ಬಸ್ಸು ನಮ್ಮ ಶಾಲೆಯ ಬಳಿ ಬಂದು ನಿಂತಿತ್ತು. ನಮಗೆ ಇಳಿಯುವ ಮನಸ್ಸಿರಲಿಲ್ಲವಾದರೂ ಇಳಿಯಲೇ ಬೇಕಾಯಿತು. ನಮ್ಮ ನಮ್ಮ ಮನೆಗಳಿಗೆ ಬಂದು ಸೇರಿದಾಗ ರಾತ್ರಿ ಹನ್ನೊಂದು ಗಂಟೆ ಸಮಯವಾಗಿತ್ತು. ಒಳ ನಡೆದು ಮಲಗಿದ ನನಗೆ ಒಳ್ಳೆಯ ನಿದ್ರೆ ಬಂತು. ಕನಸಿನಲ್ಲಿ ಆ ಎಲ್ಲ ರಮ್ಯ ನೋಟ, ಹಾಡು-ನಲಿವುಗಳು ತೇಲಿದವು. ಅಂತೂ ನಮ್ಮ ಶಾಲಾ ಪ್ರವಾಸ ಸಾರ್ಥಕವಾಯಿತು ಎಂಬುವದೇ ನನಗೆ ಸಮಾಧಾನ.

ಪ್ರಶ್ನೆ 4. ನಿಮ್ಮ ಬೀದಿಗೆ ಬೀದಿ ದೀಪಗಳನ್ನು ಹಾಕಿಸಿಕೊಡಲು ವಿನಂತಿಸಿ, ವಿದ್ಯುಚ್ಛಕ್ತಿ ಮಂಡಲಿಯ ಮುಖ್ಯಸ್ಥರಿಗೆ ಒಂದು ಪತ್ರ ಬರೆಯಿರಿ. ಅಥವಾ ನಿಮ್ಮ ಶಾಲೆಯ "ಪೋಷಕ ಬೋಧಕ ಸಂಘದ" ಸಮ್ಮೇಲನಕ್ಕೆ ನಿಮ್ಮ ತಾಯಿಯನ್ನು ಆಹ್ವಾನಿಸಿ ಒಂದು ಪತ್ರ ಬರೆಯಿರಿ.

ಉತ್ತರ : ವಿದ್ಯುಚ್ಛಕ್ತಿ ಮಂಡಲಿಯ ಮುಖ್ಯಸ್ಥರಿಗೆ ಪತ್ರ.

ಹೆಸರು.........
ವಿಳಾಸ.........
ಊರು.........
ದಿನಾಂಕ.........

ಮಾನ್ಯ ಮುಖ್ಯ ಅಭಿಯಂತರರು,
ಕರ್ನಾಟಕ ರಾಜ್ಯ ವಿದ್ಯುತ್ ಮಂಡಳಿ.
ಊರು.........

ಇವರಿಗೆ—

ಮಾನ್ಯರೇ,

ನಮ್ಮ ಶಹರದ ಪೂರ್ವ ಭಾಗದಲ್ಲಿ ನಿರ್ಮಾಣಗೊಂಡ ವಿದ್ಯಾನಗರ ಬಡಾವಣೆಯಲ್ಲಿ ಬೀದಿ ದೀಪಗಳಿಲ್ಲದ ಕತ್ತಲೆಯು ಆವರಿಸಿಕೊಂಡಿದ್ದು ಜನರು ಸಂಚಾರ ಮಾಡಲು ತುಂಬಾ ತೊಂದರೆಯಾಗಿದೆ. ಸೂರ್ಯಾಸ್ತದ ನಂತರ ಇಲ್ಲಿಯ ನಿವಾಸಿಗಳಿಗೆ ಶಹರ ಸಂಪರ್ಕವೇ ಕಡಿದು ಹೋಗುವಂಥ ಪರಿಸ್ಥಿತಿ ಒದಗಿದೆ. ರಾತ್ರಿಯ ಹೊತ್ತಿನಲ್ಲಿ ಕಳುವು–ತುಡುಗುಗಳು ಹೆಚ್ಚಾಗಲು ಸಹಾಯಕವಾಗುತ್ತದೆ. ಆದುದರಿಂದ ಕೂಡಲೇ ಇಲ್ಲಿ ಬೀದಿಯ ದೀಪಗಳನ್ನು ಹಾಕಿಸಿ ಸಂಚಾರಕ್ಕೆ ಅನುಕೂಲ ಮಾಡಿಕೊಡಬೇಕಾಗಿ ವಿನಂತಿ. ಸಾರ್ವಜನಿಕರ ಹಿತದೃಷ್ಟಿಯಿಂದ ಈ ಕಾರ್ಯ ಬೇಗ ಮಾಡಿಸಿಕೊಡಬೇಕಾಗಿ ಬಡಾವಣೆಯ ಸಮಸ್ತ ನಾಗರಿಕರ ಪರವಾಗಿ ಮತ್ತೊಮ್ಮೆ ವಿನಂತಿಸಿಕೊಳ್ಳುತ್ತೇನೆ. ಇತಿ.

ತಮ್ಮ ವಿಶ್ವಾಸಿ,
ಹೆಸರು (ಸಹಿ).........

## ತಾಯಿಗೆ ಪತ್ರ

ಉತ್ತರ :

ಊರು.........
ದಿನಾಂಕ.........

ಪೂಜ್ಯ ಮಾತೋಶ್ರೀಯವರ ಚರಣಗಳಿಗೆ—

ತಮ್ಮ ಚಿ॥.........ನು ಮಾಡುವ ಅನಂತ ನಮಸ್ಕಾರಗಳು. ಇಲ್ಲಿ ನಾನು ಆರೋಗ್ಯವಾಗಿದ್ದೇನೆ. ನನ್ನ ಅಭ್ಯಾಸವೂ ಚೆನ್ನಾಗಿ ನಡೆದಿರುತ್ತದೆ. ಇದೇ ತಿಂಗಳು ದಿ.........ರಂದು ನಮ್ಮ ಶಾಲೆಯಲ್ಲಿ ಪೋಷಕ ಬೋಧಕ ಸಂಘದ ಸಮ್ಮೇಲನ ಏರ್ಪಡಿಸಿದೆ. ಅಂದು ಪಾಲಕರು ಶಾಲೆಗೆ ಬಂದು ಶಿಕ್ಷಕರನ್ನು ಕಂಡು ತಮ್ಮ ಮಕ್ಕಳ ಅಭ್ಯಾಸ ಹಾಗೂ ಇತರ ಚಟುವಟಿಕೆಗಳ ಪ್ರಗತಿಯ ಬಗ್ಗೆ ತಿಳಿದುಕೊಳ್ಳುತ್ತಾರೆ. ಪಾಲಕರು – ಶಿಕ್ಷಕರು ಸೇರಿ ವಿದ್ಯಾರ್ಥಿಗಳ ಪ್ರಗತಿಯ ಬಗ್ಗೆ ಚರ್ಚಿಸುತ್ತಾರೆ. ತಂದೆಯವರು ಕೆಲಸದ ನಿಮಿತ್ತ ಪರಊರಿಗೆ ಹೋಗಿದ್ದುದು ತಿಳಿದಿದೆ. ಕಾರಣ ನೀನೇ ಈ ಸಲ ಸಮ್ಮೇಲನಕ್ಕೆ ಬರಬೇಕು. ಬರುವ

ದಿನಾಂಕ ಹಾಗೂ ವೇಳೆಯನ್ನು ಮುಂಚಿತವಾಗಿ ತಿಳಿಸಿದರೆ ನಾನು ಬಸ್‌ಸ್ಟ್ಯಾಂಡಿನಲ್ಲಿ ನಿರೀಕ್ಷಿಸುತ್ತಿರುವೆ. ತಪ್ಪದೇ ಬರಬೇಕು, ಇಂತಿ ಶಿರಸಾಷ್ಟಾಂಗ ನಮಸ್ಕಾರಗಳು.

ಪ್ರೀತಿಯ ಮಗ
ಹೆಸರು (ಸಹಿ)..........

ಪ್ರಶ್ನೆ 5. ಇಲ್ಲಿ ಬಿಟ್ಟಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ.

1 "ಮನೆಗೆದ್ದು ಮಾರು ಗೆಲಿ" ಎಂಬುದೊಂದು......
2 ಓ ಆದಾ ನಮ್ಮೂರ ನೋಟದ ಕಿಟ್ಟು ಗೊತ್ತಿಲ್ಲ ವೇನು......... ಇಲ್ಲಿರಬೇಕಾದ ಲೇಖನ ಚಿಹ್ನೆ ಗಳಾವವು ?
3 ತೇನಸಿಂಗನು ಪರ್ವತ ಸಾಮ್ರಾಜ್ಯದ......ಆಗುವ ಸೂಚನೆ ಇದಾಗಿತ್ತು.
4 ತಂಗಿಗೆ ಪತ್ರ ಬರೆದು ಮುಗಿಸುವಾಗಿನ ಒಕ್ಕಣೆ... ......ಎಂದಿರಬೇಕು.
5 ನಾನು ಮಾತೃಭಾಷೆಯನ್ನು ಪ್ರೀತಿಸುತ್ತೇನೆ...... ಈ ವಾಕ್ಯವನ್ನು ಪ್ರಶ್ನಾರ್ಥಕ ವಾಕ್ಯವಾಗಿ ಮಾರ್ಪಡಿಸಿರಿ.

ಉತ್ತರ : 1) ನಾಣ್ಣುಡಿ. 2) ಓ, ಗೊತ್ತಿಲ್ಲವೇನು? 3) ಚಕ್ರವರ್ತಿ, 4) ಇಂತೀ, ಆಶೀರ್ವಾದಗಳು, 5) ನಾನು ಮಾತೃಭಾಷೆಯನ್ನು ಪ್ರೀತಿಸುವದಿಲ್ಲವೇ ?

ಪ್ರಶ್ನೆ 6. ಈ ಪದ್ಯವನ್ನು ಓದಿಕೊಂಡು ಸಾರಾಂಶವನ್ನು ನಿಮ್ಮ ಮಾತಿನಲ್ಲಿ ಬರೆಯಿರಿ.

ಪಡುವಣ ತೀರದ　　ಹಗಲಿರುಳೆನ್ನದೆ
ಕನ್ನಡ ನಾಡಿನ　　ಹೊಡೆಯು ಜಡಿ ಮಳೆ
ಕಾರ್ಗಾಲದ　　ಬಡಿಕೋಲ್ಮಿಂಚಿನ
ವೈಭವವೇನು?　　ಲಾಗುಗಳು!
ಬಲ್ಲದರಿನಿತೋ　　ಮಾನೆಗಳ ಮನೆಗಳ
ತೀರದ ನೀರಿನ　　ಒಳಗೂ ಹೊರಗೂ
ಜಡದೇಹದ ಕಾರ್ಮುಗಿ　　ಜಿನುಗುತಿರುವ ಹನಿಸೋನೆ
ಲೇನು?　　ಗಳು!
ಕೆರೆಗಳನುಕ್ಕಿಸಿ　　ಮುಗಿಲಿನ ಹುಬ್ಬಿನ
ತೊರೆಗಳ ಸೊಕ್ಕಿಸಿ　　ಗಂಟಿಕ್ಕುತ ಬಿರು
ಗುಡ್ಡವ ಬೆಟ್ಟವ ಕೊರೆ　　ದನಿಯಲಿ ಬೆದರಿಸುತಿಹ
ಕೊರೆದು　　ನಲ್ಲ
ಕಡಲಿನ ತೆರೆಗಳ　　ನಲ್ಲನೆನುತೆ ಆ
ರಿಂಗಣ ಗುಣಿಯಿಸಿ　　ಗಸವೆಣ್ಣಾಗುತೆ
ತೊರೆ ತೊರೆವ್ರುದದೋ　　ಸುರಿಸಿದ ಕಣ್ಣೀರ್ರೊವ್ವನ
ಸುರಿಸುರಿದು　　ವೆಲ್ಲಾ

ಉತ್ತರ : ಕನ್ನಡ ನಾಡಿನ ಪಶ್ಚಿಮ ತೀರದ ನಾಡಿನಲ್ಲಿ ಮಳೆಗಾಲದ ವೈಭವ ಹೇಳತೀರದು. ಎಷ್ಟು ಸುರಿದರೂ ಮುಗಿಯದ ನೀರಿನ ಮೋಡಗಳು ಆಕಾಶದಲ್ಲಿ ಎಲ್ಲೆಲ್ಲೂ ತುಂಬಿರುತ್ತವೆ.

ಮಳೆಯು ಧಾರಾಕಾರವಾಗಿ ಸುರಿಯುತ್ತಲೇ ಇದೆ. ಕೆರೆಗಳು ತುಂಬಿ ಕೋಡಿ ಬಿದ್ದು ಹರಿಯುತ್ತವೆ. ತೊರೆಗಳು ಭೋರ್ಗರೆಯುತ್ತವೆ. ಗುಡ್ಡ ಬೆಟ್ಟಗಳನ್ನು ಕೊರೆ ಕೊರೆದು ನೀರಿನ ಪ್ರವಾಹ ಅಬ್ಬರದಿಂದ ಸಾಗುತ್ತದೆ. ಮಳೆಯ ನೀರು ಸಮುದ್ರದ ತೆರೆಗಳೋಪಾದಿಯಲ್ಲಿ ಕುಣಿ ಕುಣಿಯುತ್ತಿರುವಂತೆ ಬರುತ್ತದೆ.

ಹಗಲು ರಾತ್ರಿ ಎನ್ನದೆ ಒಂದೇ ಸವನೆ ಜಡಿ ಮಳೆ ಸುರಿಯುತ್ತದೆ. ಕೋಲ್ಮಿಂಚುಗಳು ಆಕಾಶದಲ್ಲಿ ಹೊಳೆಯುತ್ತವೆ, ಅತಿಯಾದ ಮಳೆಯಿಂದ ಮನೆಗಳು ಸೋರುತ್ತವೆ. ಮನೆಯ ಹೊರಗೂ ಛತ್ತಿನ ನೀರು ಧಾರಾಕಾರವಾಗಿ ಸುರಿಯುತ್ತದೆ. ಮನಸ್ಸಿಗಂತೂ ತುಂಬ ಬೇಸರವಾಗುತ್ತದೆ.

ಮುಗಿಲೆಂಬ ಮುಖದಲ್ಲಿ ಮಿಂಚುಗಳೆಂಬ ಹುಬ್ಬಗಳು ಸಿಟ್ಟಿನಿಂದ ಗಂಟಿಕ್ಕಿರುವಂತೆ ಕಾಣುತ್ತವೆ. ಗುಡುಗುಗಳ ಆರ್ಭಟಿದೊಂದಿಗೆ ನಲ್ಲನು ಬೆದರಿಸುವಂತೆ ಆಕಾಶವೆಂಬ ಹೆಣ್ಣು ಹೆದರಿ ಅಳುತ್ತ ಸುರಿಸುತ್ತಿರುವ ಕಣ್ಣೀರೆ ಈ ಮಳೆಯಲ್ಲ (ಎಂದು ಕವಿ ಸೊಗಸಾಗಿ ವರ್ಣಿಸಿದ್ದಾನೆ).

ಪ್ರಶ್ನೆ 7. ಈ ಗದ್ಯ ಭಾಗವನ್ನು ಸಾವಧಾನವಾಗಿ ಓದಿಕೊಂಡು ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

ಮಹಾಪುರುಷರು ಜನರ ಕಷ್ಟಗಳನ್ನು ಕಂಡು ಮರುಗಿ ಸಹಾನುಭೂತಿ ತೋರುವರು. ಬಡವರೊಂದಿಗೆ ಕಲೆತು, ಅವರ ಮಟ್ಟದಲ್ಲಿ ನಿಂತು, ಸ್ವಲ್ಪವಾಗಿ ಅವರನ್ನು ಮೇಲೆತ್ತುವರು. ಸ್ವಾರ್ಥ ಜೀವನವನ್ನು ನಡೆಸಿ, ಅಪಾರವಾದ ಐಶ್ವರ್ಯವನ್ನು ಗಳಿಸುವದಕ್ಕಿಂತ ಸಾಮಾನ್ಯ ಜನರ ದುಃಖದ ನೂರರಲ್ಲಿ ಒಂದು ಪಾಲನ್ನಾದರೂ ಹೋಗಲಾಡಿಸಲು ತಮ್ಮ ಜೀವಮಾನವನ್ನೆಲ್ಲಾ ಕಳೆಯುವದೇ ಉತ್ತಮ. ನಿನ್ನ ಸುತ್ತಮುತ್ತ ರೋಗರುಜಿನ, ಕೊಳೆಕಶ್ಮಲ, ಅತೃಪ್ತಿ ಅಸಮಾಧಾನ ತುಂಬಿರುವಾಗ ನೀನು ಸುಖಿಯಾಗಿರಲು ಸಾಧ್ಯವೇ? ಇವುಗಳನ್ನು ಹೋಗಲಾಡಿಸಿ ಉತ್ತಮಗೊಳಿಸಲು ಪ್ರಯತ್ನಿಸುವದೇ ಎಲ್ಲರ ಕರ್ತವ್ಯ. ನೀನೂ ಅದೇ ಗುರಿಯನ್ನು ಸಾಧಿಸಬೇಕು. ಈ ಪ್ರಪಂಚದ ನಾಟಕ

ದಲ್ಲಿ ನೀನು ನಿನ್ನ ಪಾತ್ರವನ್ನು ಉತ್ತಮ ರೀತಿಯಲ್ಲಿ ನಿರ್ವಹಿಸು.

1 ಮಹಾಪುರುಷರು ಇತರರ ಕಷ್ಟಗಳಲ್ಲಿ ಹೇಗೆ ಭಾಗಿಯಾಗುವರು ?

ಉತ್ತರ : ಮಹಾಪುರುಷರು ಇತರರ ಕಷ್ಟಗಳನ್ನು ಕಂಡು ಮರುಗಿ, ಸಹಾನುಭೂತಿ ತೋರಿ, ಅವರೊಂದಿಗೆ ಕಲೆತು ಅವರನ್ನು ಮೇಲೆತ್ತುವರು.

2 ಮಾನವನು ತನ್ನ ಜೀವನವನ್ನು ಹೇಗೆ ಕಳೆದರೆ ಉತ್ತಮ ?

ಉತ್ತರ : ಸ್ವಾರ್ಥದಿಂದ ಅಪಾರ ಐಶ್ವರ್ಯವನ್ನು ಗಳಿಸುವದಕ್ಕಿಂತ ಸಾಮಾನ್ಯ ಜನರ ದುಃಖದಲ್ಲಿ ಸ್ವಲ್ಪವನ್ನಾದರೂ ಹೋಗಲಾಡಿಸಲು ಜೀವನವನ್ನು ಕಳೆಯುವದು ಉತ್ತಮ.

3 ಮಾನವನು ಯಾವಾಗ ನೆಮ್ಮದಿಯಾಗಿರಲು ಸಾಧ್ಯವಿಲ್ಲ ?

ಉತ್ತರ : ಸುತ್ತಲೂ ರೋಗರುಜಿನ, ಕೊಳೆ-ಕಶ್ಮಲ, ಅತೃಪ್ತಿ, ಅಸಮಾಧಾನ ಇರುವಾಗ ಮಾನವನು ನೆಮ್ಮದಿಯಾಗಿರಲು ಸಾಧ್ಯವಿಲ್ಲ.

4 ಎಲ್ಲರೂ ನಿರ್ವಹಿಸಬೇಕಾದ ಕರ್ತವ್ಯವಾವುದು?

ಉತ್ತರ : ಸಾಮಾನ್ಯ ಜನರ ದುಃಖಗಳನ್ನು ನಿವಾರಿಸಿ, ಅವರ ಕಷ್ಟಗಳಲ್ಲಿ ಪಾಲ್ಗೊಂಡು, ಅವರೊಂದಿಗೆ ಬೆರೆತು ಅವರನ್ನು ಮೇಲಕ್ಕೆತ್ತುವ ಕಾರ್ಯವನ್ನು ನಿರ್ವಹಿಸಬೇಕಾದುದು ಎಲ್ಲರ ಕರ್ತವ್ಯವಾಗಿದೆ.

—●—

# ಕನ್ನಡ

ಅಕ್ಟೋಬರ 1966 ಪ್ರಥಮ ಪತ್ರಿಕೆ

ಸಮಯ : 2½ ಗಂಟೆ ಅಂಕಗಳು : 100

ಪ್ರಶ್ನೆ 1 ಒಂದೊಂದು ಪುಟಕ್ಕೆ ಮೀರದಂತೆ ಯಾವುದಾದರೂ ಮೂರು ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

1 ಧರ್ಮರಾಯ ಮತ್ತು ವೈಶಂಪಾಯನ ಸರೋವರದಲ್ಲಿ ಮುಳುಗಿದ್ದ ದುರ್ಯೋಧನನ ನಡುವೆ ನಡೆದ ಸಂಭಾಷಣೆಯನ್ನು ಸಂಗ್ರಹಿಸಿ ಬರೆಯಿರಿ.

ಉತ್ತರ : ದುರ್ಯೋಧನನು ದ್ವೈಪಾಯನ ಸರೋವರದಲ್ಲಿ ಅಡಗಿ ಕುಳಿತಿದ್ದನು. ಪಾಂಡವರು ಅವನನ್ನು ಹುಡುಕುತ್ತ ಅಲ್ಲಿಗೆ ಬಂದು, ನೀರಿನಲ್ಲಿ ಅಡಗಿದ ದುರ್ಯೋಧನನಿಗೆ, ಧರ್ಮರಾಯ "ಏನಯ್ಯಾ ಕ್ಷತ್ರಿಯರೆಲ್ಲರನ್ನೂ ನಿನ್ನ ಕುಲವನ್ನೂ ಕೊಲ್ಲಿಸಿ ಜೀವಗಳ್ಳನಾಗಿ ಅಡಗಿಕೊಂಡೆಯಾ? ಎದ್ದು ಬಂದು ಯುದ್ಧ ಮಾಡು, ನೀನು ಕ್ಷತ್ರಿಯನು, ಯುದ್ಧ ತಪ್ಪಿಸಿಕೊಳ್ಳಲಾರೆ, ಕ್ಷತ್ರಿಯ ಧರ್ಮವನ್ನು ಪಾಲಿಸು" ಎಂದನು. ಅದಕ್ಕೆ ದುರ್ಯೋಧನನು— "ನಾನು ಪ್ರಾಣಕ್ಕೆ ಹೆದರಿ ಓಡಿ ಬಂದವನಲ್ಲ. ನಾನು ನನ್ನ ರಥ, ಸಾರಥಿ, ಬಾಣ, ಬತ್ತಳಿಕೆ ಎಲ್ಲವನ್ನೂ ಕಳೆದುಕೊಂಡು ಒಬ್ಬೊಂಟಿಗನಾಗಿದ್ದು ಆಯಾಸ ಪರಿಹರಿಸಿಕೊಳ್ಳಲು ಇಲ್ಲಿಗೆ ಬಂದಿದ್ದೇನೆ. ನೀನೂ, ನಿನ್ನ ಜೊತೆಯವರು ಸ್ವಲ್ಪ ಸುಧಾರಿಸಿಕೊಳ್ಳಿ, ಆಮೇಲೆ ನಾನು ನಿಮ್ಮೆಲ್ಲರನ್ನೂ ಎದುರಿಸುತ್ತೇನೆ". ಎಂದು ಮರುನುಡಿದನು. ಯುಧಿಷ್ಠಿರ— "ನಾವು ಸುಧಾರಿಸಿಕೊಂಡೇ ನಿನ್ನನ್ನು ಹುಡುಕುತ್ತಿದ್ದೆವು. ಎದ್ದು ಬಾ. ಗೆದ್ದು ರಾಜ್ಯಪಡೆ ಇಲ್ಲವೆ ಸತ್ತು ಸ್ವರ್ಗಪಡೆ" ಎನ್ನಲು, "ನನಗೆ ರಾಜ್ಯವೇತಕ್ಕೆ? ನನ್ನ ತಮ್ಮಂದಿರನ್ನೂ ಕ್ಷತ್ರಿಯ ಶ್ರೇಷ್ಠ ರಾಜರನ್ನೂ ಕಳೆದುಕೊಂಡು, ರಾಜ್ಯಕ್ಕೆ ಆಶೆ ಪಡಲೆ? ನಾನು ಅನುಭವಿಸಿಬಿಟ್ಟ ಭೂಮಿಯನ್ನು ನೀವು ಪಾಂಡವರು ಅನುಭವಿಸಬಹುದು" ಎಂದು ಹೇಳಿದನು. ಧರ್ಮರಾಜನು-"ನಮಗೆ ನಿನ್ನ ಭಿಕ್ಷೆ ಬೇಕಿಲ್ಲ. ಯುದ್ಧಮಾಡಿಯೇ ಪಡೆಯುತ್ತೇವೆ. ನಿನ್ನ ಅನ್ಯಾಯಕ್ಕೆ ನೀನು ಪ್ರಾಣ ನೀಗಲೇಬೇಕು. ಏಳು ಯುದ್ಧ ಮಾಡು" ಎಂದನು. ಅದಕ್ಕೆ ದುರ್ಯೋಧನನು— "ನಾನು ಎಲ್ಲವನ್ನು ಕಳೆದುಕೊಂಡ ಏಕಾಂಗಿ; ಮೈ-ಕೈಯಲ್ಲಿ ಗಾಯಗೊಂಡವನು. ನಿಮ್ಮಲ್ಲಿ ಯಾರಾದರೂ ಒಬ್ಬರು ಯುದ್ಧ ಮಾಡಬಹುದು" ಎಂದು ಕೋರಿದನು. ಯುಧಿಷ್ಠಿರ "ಹಾಗೇ ಆಗಲಿ ನಿನಗೆ ಬೇಕಾದ ಆಯುಧದಿಂದ, ನಿನಗೆ ಬೇಕಾದ ಒಬ್ಬರೊಡನೆ ಯುದ್ಧಮಾಡು ಬಾ ಹೊರಕ್ಕೆ" ಎಂದು ಕರೆದನು. ದುರ್ಯೋಧನ—"ಒಪ್ಪಿದೆ ನೆಲದ ಮೇಲೆ ನಿಂತು ಗದಾಯುದ್ಧ ಮಾಡೋಣ" ಎಂದನು. ಅದಕ್ಕುತ್ತರವಾಗಿ ಯುಧಿಷ್ಠಿರನು— "ಆಗಲಿ, ಎದ್ದು ಹೊರಕ್ಕೆ ಬಾ" ಎಂದನು. ಆಗ ಭೀಮನು ತನ್ನ ಗದೆಯೊಂದಿಗೆ ಯುದ್ಧಕ್ಕೆ ಬಾ ಎಂದು ಆಹ್ವಾನಿಸಿದನು.

2 ದೇ. ಜವರೇಗೌಡರು ಪ್ರಾಥಮಿಕ ಶಾಲೆಯಲ್ಲಿ ಸೇರಿದ ಸನ್ನಿವೇಶ.

ಉತ್ತರ : ಜವರೇಗೌಡರ ತಂದೆ ಕಡುಬಡವರು, ವಯಸ್ಸಾದ ಮುದುಕರು, ತಮ್ಮ ಎರಡನೇಯ ಕಿರಿಯಮಗನೇ ಜವರೇಗೌಡರು. ಈತನಿಗೆ ಬಾಲ್ಯದಲ್ಲಿ ಆಡುಗಳನ್ನು ಮೇಯಿಸಿಕೊಂಡು ಬರಲು ಕೆಲಸ ಒಪ್ಪಿಸಿದ್ದರು. ಜವರೇಗೌಡರಿಗೆ ಓದಿನ ಮೇಲೆ ಆಶೆ. ಅದಕ್ಕಾಗಿ ಆಡುಗಳನ್ನು ಒಂದೆಡೆಯಲ್ಲಿ ಮೇಯಲು ಬಿಟ್ಟು ಶಾಲೆಯಲ್ಲಿ ಹೋಗಿ ಕುಳಿತು, ಅವರಿಂದಲೇ ಪಾಟಿ-ಪುಸ್ತಕಗಳನ್ನು ಪಡೆದು ಅಕ್ಷರ ಕಲಿಯುತ್ತಿದ್ದರು.

ಒಂದು ದಿನ ಅವರ ಆಡುಗಳು ಹತ್ತಿರದ ಹಿಪ್ಪಲಿನೇರಳೆ ತೋಟಕ್ಕೆ ನುಗ್ಗಿ ಮೇಯ್ದು ಬಿಟ್ಟವು. ಆ ಜಮೀನಿನ ಒಡೆಯರು ಆಡುಗಳನ್ನು ಗೌಡರ ಮನೆಗೆ ಅಟ್ಟಿಸಿಕೊಂಡು ಹೋಗಿ, ಅವರ ತಂದೆ–ತಾಯಿಗಳೊಡನೆ ದೊಡ್ಡ ಜಗಳ ಮಾಡಿದರು. ಮುದುಕ ನಿಗೆ ಕೋಪ ಬಂದು ಶಾಲೆಗೆ ಹೋಗಿ ಮಗನನ್ನು ಹೊರಕರೆದು ನೇರಳೆ ಕಡ್ಡಿಯಿಂದ ಚೆನ್ನಾಗಿ ಬಡಿದರು. ಬೇಡವೆಂದರೂ ಆಡು ಗಳನ್ನು ಎಲ್ಲಿಯೋ ಬಿಟ್ಟು ಶಾಲೆಗೆ ಹೋಗಿದ್ದಕ್ಕೆ ಬಯ್ದು ಹೊಡೆದರು.

ಹುಡುಗನು ತಂದೆಯ ಹೊಡೆತಗಳಿಂದ ಗೋಳಾಡ ಹತ್ತಿದನು; ಶಾಲೆಯ ಉಪಾಧ್ಯಾಯ ವೆಂಕಟರಾಮ ಅಯ್ಯಂಗಾರ ಇದನ್ನು ನೋಡಿ ಓಡಿ ಬಂದು, ಮುದುಕನ ಕೈಯನ್ನು ಹಿಡಿದು ಹೊಡೆಯುವದನ್ನು ತಪ್ಪಿಸಿದರು. ಅನಂತರ ಹುಡುಗನನ್ನು ಮುಖ್ಯೋಪಾಧ್ಯಾಯರ ಬಳಿಗೆ ಕರೆದುಕೊಂಡು ಹೋಗಿ ಅವ ನಿಗೆ ಕಲಿಯುವ ಆಶೆಯಿರುವದನ್ನೂ ಅವನ ತಂದೆಯ ಬಡತನ ವನ್ನೂ ವಿವರಿಸಿದರು. ಮಗನಿಗೆ ವಿದ್ಯೆ ಕಲಿಸುವಂತೆ ತಂದೆಗೆ ಬುದ್ಧಿ ಮಾತು ಹೇಳಬೇಕೆಂದರು.

ಹೆಚ್. ಕೆ. ವೀರಣ್ಣಗೌಡರು ಆ ಶಾಲೆಯ ಮುಖ್ಯೋ ಪಾಧ್ಯಾಯರು. ಆ ಹುಡುಗನ ತಂದೆಯನ್ನು ಕರೆಸಿ ಮಗನನ್ನು ಶಾಲೆಗೆ ಕಳಿಸುವಂತೆ ಹೇಳಿದರು. ತನ್ನ ಮನೆತನದ ಬಡತನ ಪರಿಸ್ಥಿತಿಯಿಂದ ಅದು ಸಾಧ್ಯವಾಗದೆಂದು ಮುದುಕ ಮರುನುಡಿ ದನು. ಆಗ ಮುಖ್ಯೋಪಾಧ್ಯಾಯರು ಹುಡುಗನಿಗೆ ಬೇಕಾದ ಪುಸ್ತಕ, ಬಟ್ಟೆಗಳನ್ನು ತಾವೇ ಕೊಡಿಸುವದಾಗಿ ಹೇಳಿ ಅವನನ್ನು ಶಾಲೆಗೆ ಕಳುಹಿಸದಿದ್ದರೆ ಜುಲ್ಮಾನೆ ಹಾಕಿಸುವದಾಗಿ ಬೆದರಿಸಿ ದರು. ಉಪಾಯವಿಲ್ಲದೆ ಅತ ಒಪ್ಪಿಕೊಂಡ. ಇಂಥ ಕಡುಬಡ ತನದ ಪರಿಸ್ಥಿತಿಯಲ್ಲಿಯೂ ಇತರರ ಸಹಾಯ ಪಡೆದು ಧೈರ್ಯ ಸಾಹಸಗಳಿಂದ ಕಲಿತು ಜವರೇಗೌಡರು ಮುಂದೆ ದೊಡ್ಡ ವಿದ್ವಾಂಸರಾದರು.

**3 ಹಾರಾಡುವ ತಟ್ಟೆಗಳ ಬಗೆಗೆ ತಿಳಿದು ಬರುವ ಸಂಗತಿಗಳು.**

**ಉತ್ತರ :** ನಮಗೆ ಗೊತ್ತಿಲ್ಲದ ಯಾವುದೇ ನೆಲೆಯಲ್ಲಿ ವಿಜ್ಞಾನ, ತಂತ್ರಜ್ಞಾನಗಳಲ್ಲಿ ನಮಗಿಂತ ಸಾವಿರಾರು ಪಾಲು ಮುಂದುವರೆದಿರುವ ಒಂದು ಜೀವ ವಿಶೇಷ ಇದೆ. ಆ ಮುಂದು ವರಿದ ಲೋಕದಿಂದ ಇದುವರೆಗೂ ನಾವು ಕಾಣದಿದ್ದ, ಊಹಿ ಸಲು ಸಾಧ್ಯವಾಗದ ವೇಗದಿಂದ ವಾಹನಗಳು ಬರುತ್ತವೆ ಅವೇ ಹಾರಾಡುವ ತಟ್ಟೆಗಳು. ಕನಿಷ್ಠ ಪಕ್ಷ ಐನೂರು ವರ್ಷಗಳಿಂದ ನಮ್ಮ ಭೂಮಿಯ ಜನ ಇತರ ಗ್ರಹಗಳಿಂದ ಬೇರೆ ಜನರು ಇಲ್ಲಿಗೆ ಬರುತ್ತಿದ್ದಾರೆ ಎಂದೂ ಅವರನ್ನು ಹೊತ್ತು ತರುವ ಈ ಸಾಧನಗಳೇ ಹಾರಾಡುವ ತಟ್ಟೆಗಳೆಂದೂ ತಿಳಿಯಲಾಗಿದೆ. ಎಷ್ಟೋ ಸಲ ಉಲ್ಕಾ ಪಾತಗಳನ್ನೂ ಅಥವಾ ಉಪಗ್ರಹಗಳ ಚಲನವಲನಗಳನ್ನೂ ಹಾರಾಡುವ ತಟ್ಟೆಗಳೆಂದು ತಪ್ಪು ತಿಳಿಯ ಲಾಗುತ್ತದೆ. ಎಷ್ಟೋ ವೈಜ್ಞಾನಿಕರು ಇಂಥ ಅಸಾಧಾರಣ ವಾದ, ಅಸಾಮಾನ್ಯ ವೇಗದಿಂದ ಚಲಿಸುವ ವಾಹನಗಳನ್ನೂ ಕಂಡು ಅವುಗಳನ್ನು ಬೆನ್ನಟ್ಟಿ ಹೋಗಿ ತಾವೇ ಅದೃಶ್ಯವಾಗಿ ದ್ದಾರೆ. ಅವರ ಗತಿ ಏನಾಯಿತು ಎಂಬುದು ತಿಳಿಯದೇ ಇವ ತ್ತಿಗೂ ರಹಸ್ಯವೇ ಆಗಿ ಉಳಿದಿದೆ.

ಅಮೇರಿಕ ಸರಕಾರವು ಇಂಥ ಗುರುತಿಸಲು ಸಾಧ್ಯವಾಗದ ಹಾರಾಡುವ ವಸ್ತುಗಳ ಸಂಶೋಧನೆಗೆ ಒಂದು ಕೇಂದ್ರವನ್ನು ತೆರೆದಿದೆ. ಜಗತ್ತಿನ ಯಾವ ಮೂಲೆಯಲ್ಲೇ ಆಗಲಿ ಇಂಥ ಹಾರುವ ತಟ್ಟೆಗಳನ್ನು ಕಂಡರೆ ಈ ಕೇಂದ್ರಕ್ಕೆ ತಿಳಿಸಲು ವಿನಂತಿಸ ಲಾಗಿದೆ. ಟೆಲಿಫೋನಿನ ವೆಚ್ಚವನ್ನು ಈ ಸಂಸ್ಥೆಯೇ ಕೊಡು ವದು. ಅಂತೂ ಹಾರಾಡುವ ತಟ್ಟೆಗಳು ವಿಜ್ಞಾನಿಗಳಿಗೆ ಒಂದು ಸವಾಲು.

**4 ಕಣ್ವರು ಶಕುಂತಲೆಯನ್ನು ಪತಿ ಮನೆಗೆ ಕಳಿಸಿ ಕೊಡುವ ಸನ್ನಿವೇಶವನ್ನು ಸಂಗ್ರಹಿಸಿ ಬರೆಯಿರಿ.**

**ಉತ್ತರ :** ಗಂಡನ ಮನೆಗೆ ಹೊರಟುನಿಂತ ಶಕುಂತಲೆಗೆ ಅಲ್ಲಿ ಹೇಗೆ ಇರಬೇಕೆಂಬುದರ ಬಗೆಗೆ ಕಣ್ವರು ಮಗಳಿಗೆ ಹೇಳಿದ ಬುದ್ಧಿಯ ಮಾತುಗಳು. "ಹಿರಿಯರ ಸೇವೆ ಮಾಡು, ಸವತಿಯ ರೊಂದಿಗೆ ಸ್ನೇಹಿತೆಯಂತಿರು. ಪತಿ ಸಿಟ್ಟಾದರೆ ಹೇವದಿಂದ ಪ್ರತಿಕೂಲೆಯಾಗಿ ವರ್ತಿಸಬೇಡ. ಪರಿವಾರದ ಜನರನ್ನು ಹೆಚ್ಚಾಗಿ ನೋಡಿಕೋ. ಸಾಂಪತ್ತಿಕ ಸ್ಥಿತಿ ಒದಗಿದಾಗ ವಿನೀತ ಳಾಗಿರು, ಹೆಣ್ಣು ಮಕ್ಕಳು ಹೀಗಿದ್ದರೆ ಒಳ್ಳೇ ಗರತಿಯರೆನಿಸಿ ಕೊಳ್ಳುತ್ತಾರೆ. ಇದಕ್ಕೆ ವಿರುದ್ಧವಾಗಿ ನಡೆದರೆ ವಂಶಕ್ಕೆ ಕಂಟಕ ಪ್ರಾಮರಾಗುತ್ತಾರೆ. ಕುಲೀನನಾದ ಪತಿಗೆ ಒಪ್ಪುವ ರಾಣಿಯಾಗಿ ವೈಭವದಿಂದ ಬಾಳು. ಪತಿಯ ಎಲ್ಲ ಕಾರ್ಯಗಳಲ್ಲಿ ಅನುಕೂಲೆ ಯಾಗಿರು. ಪೂರ್ವದಿಕ್ಕು ಸೂರ್ಯನನ್ನು ಪಡೆದ ಹಾಗೆ ನೀನು ಸುಪುತ್ರನನ್ನು ಪಡೆದು ನನ್ನ ಅಗಲುವಿಕೆಯನ್ನು ಮರೆತು ಬಾಳು. ಭೂಮಿಗೊಡೆಯನಾದ ಪತಿಯ ರಾಣಿಯಾಗಿ ಭೂಮಿಗೆ ಸವತಿಯಾಗುವೆ, ಆ ಪ್ರತಿರಥನಿಂದ ಮಗನನ್ನು ಪಡೆದು, ಆ ಮಗನಿಗೆ ರಾಜ್ಯವನ್ನು ಒಪ್ಪಿಸಿ, ನಿನ್ನ ಪತಿಯೊಡನೆ ಮತ್ತೆ ಈ ಆಶ್ರಯವನ್ನು ಕಾಣುವೆ" ಎಂದು ಹೇಳಿದರು. "ನಿನಗೆ ಮಾರ್ಗ ವೆಲ್ಲ ಮಂಗಳಕರವಾಗಲಿ" ಎಂದು ಶುಭ ಹಾರೈಸಿ ಬೀಳ್ಕೊಟ್ಟು ಆಶ್ರಮಕ್ಕೆ ಹಿಂದಿರುಗುತ್ತಾರೆ.

ಇದೇ ಪ್ರಸಂಗದಲ್ಲಿ ಶಕುಂತಲೆಗೆ ಆಕೆಯ ಸಖಿಯರು ಕೂಡಾ—ದುಷ್ಯಂತ ಆಕೆಯನ್ನು ಮರೆತದ್ದೇ ಆದರೆ ಈ ಉಂಗುರವನ್ನು ತೋರಿಸು ಎಂದಾಗ ಶಕುಂತಲೆಯು ಭಯಭೀತಳಾಗುತ್ತಾಳೆ. ಆಗ ಸಖಿಯರು, ಅತಿಸ್ನೇಹವು ಪಾಪಶಂಕಿಯಾದದ್ದು, ನೀನು ಹೆದರಬೇಡ ಎಂದು ಆಕೆಗೆ ಸಮಾಧಾನ ಹೇಳಿ ಬೀಳ್ಕೊಡುತ್ತಾರೆ.

5. ರವೀಂದ್ರರ ಬಾಲ್ಯ ವಿದ್ಯಾಭ್ಯಾಸವನ್ನು ಕುರಿತು ಬರೆಯಿರಿ.

ಉತ್ತರ : ಬಾಲಕ ರವೀಂದ್ರರಿಗೆ ಪ್ರಕೃತಿ ಸೌಂದರ್ಯ ಆಕರ್ಷಕವೆನಿಸಿತ್ತು. ಹೂ, ಗಿಡ, ನೀರು, ಆಕಾಶ ಇತ್ಯಾದಿಗಳನ್ನು ನೋಡುತ್ತ ತಲ್ಲೀನರಾಗುತ್ತಿದ್ದರು. ತಂದೆ ದೇವೇಂದ್ರನಾಥರು ಈತನನ್ನು ನಾರ್ಮಲ್ ಶಾಲೆಗೆ ಸೇರಿಸಿದರು. ಆ ಶಾಲೆ ಈತನಿಗೆ ಹಿಡಿಸಲಿಲ್ಲ, ಸೆರೆಮನೆಯಂತೆ ಕಂಡಿತು. ಕೊನೆಕೊನೆಗೆ ಶಾಲೆಗೆ ಹೋಗುವದನ್ನು ನಿಲ್ಲಿಸಿರುತ್ತಿದ್ದನು. ತಂದೆಯವರು ಸ್ವತಃ ಮಗನಿಗೆ ಇಂಗ್ಲೀಷ ಮತ್ತು ಸಂಸ್ಕೃತಗಳನ್ನು ಹೇಳಿ ಕೊಡುತ್ತಿದ್ದರು. ಹಾಗೆಯೇ ಖಗೋಳ ಮತ್ತು ಸಸ್ಯ ಶಾಸ್ತ್ರಗಳ ಪರಿಚಯವನ್ನೂ ಮಾಡಿಕೊಟ್ಟರು. ರವೀಂದ್ರರ ಅಣ್ಣ ಪ್ರತಿಭಾಶಾಲೆ ಹಾಗೂ ಕಲಾಭಿಜ್ಞ. ಅವರಿಂದ ರವೀಂದ್ರರು ಅಪಾರವಾಗಿ ಕಲಿತರು. ಹೀಗೆ ರವೀಂದ್ರರ ಜ್ಞಾನ ವಿಕಾಸಕ್ಕೆ ಅವರ ತಂದೆ ಮತ್ತು ಅಣ್ಣಂದಿರು ಬಹುಮಟ್ಟಿಗೆ ಕಾರಣರಾದರು.

ರವೀಂದ್ರರ ಮನೆ ಐಶ್ವರ್ಯ, ವಿದ್ಯೆ, ಕಲೆ ಹಾಗೂ ಉತ್ತಮ ಸಂಸ್ಕೃತಿಯನ್ನು ಪಡೆದಿದ್ದಿತು. ರವೀಂದ್ರರ ಮನಸ್ಸಿನ ಮೇಲೆ ಬಾಲ್ಯದಲ್ಲಿಯೇ ಇವೆಲ್ಲವುಗಳ ಪ್ರಭಾವ ಬಿದ್ದಿತ್ತು. ಇದಲ್ಲದೆ ಬಂಧುಗಳಲ್ಲಿಯೂ ಅನೇಕ ವಿದ್ವಾಂಸರಿದ್ದುದರಿಂದ ರವೀಂದ್ರರಿಗೆ ಅವರ ಪ್ರೋತ್ಸಾಹವೂ ಸಿಗುತ್ತಿತ್ತು. ಅವರ ಅಣ್ಣನ ಗೆಳೆಯ ಚೌಧುರಿ ಎನ್ನುವವರು ಬಾಲಕ ರವೀಂದ್ರರಿಗೆ ಕವಿತೆಗಳನ್ನು ಬರೆಯಲು ಪ್ರೋತ್ಸಾಹಿಸಿದರು. ಅವರು ಬಾಲಕರಿರುವಾಗಲೇ ಪ್ರಕೃತಿ ಸೌಂದರ್ಯ, ಸಂಗೀತ, ಸಮಾಜಗಳ ಬಗೆಗೆ ಕವನಗಳನ್ನು ಬರೆದು ಪತ್ರಿಕೆಗಳಿಗೆ ಕಳುಹಿಸುತ್ತಿದ್ದರು. ಹೀಗೆ ಸಾಮಾನ್ಯ ಶಾಲೆಯಲ್ಲಿ ಕಲಿಯದಿದ್ದರೂ ಪರಿಸರದ ಪ್ರಭಾವ ಮತ್ತು ಮನೆಯಲ್ಲಿಯ ವಾತಾವರಣದಿಂದ ರವೀಂದ್ರರು ವಿದ್ಯೆ ಕಲಿತರು.

ಪ್ರಶ್ನೆ 2. ಒಂದೊಂದು ಪುಟಕ್ಕೆ ಮೀರದಂತೆ ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡನ್ನು ಕುರಿತು ಬರೆಯಿರಿ.

1 ಸ್ವಾತಂತ್ರ್ಯ ವರ್ಧಂತಿ ಕವನದಲ್ಲಿ ಕವಿಯು ಜನತೆಗೆ ನೀಡಿರುವ ಸಂದೇಶ.

ಉತ್ತರ : ನಮಗೆ ಸ್ವಾತಂತ್ರ್ಯ ಬಂದಿದೆ, ಅದು ನಮ್ಮನ್ನು ಬಂಧನದಿಂದ ಬಿಡಿಸಿದೆ. ನಮ್ಮಲ್ಲಿ ಬಾಂಧವ್ಯ ಭಾವನೆಯನ್ನು ಬಿತ್ತಿದೆಯಲ್ಲದೆ ನಮ್ಮ ಬುದ್ಧಿಶಕ್ತಿಯನ್ನು ರಚನಾತ್ಮಕ ಕಾರ್ಯಗಳಿಗೆ ಉಪಯೋಗಿಸಿಕೊಳ್ಳಬೇಕಾಗಿದೆ. ಇನ್ನೂ ಬಹಳಷ್ಟನ್ನು ನಾವು ಸಾಧಿಸಬೇಕಾಗಿದೆ.

ಸ್ವತಂತ್ರರಾದ ನಾವು ಸ್ವಚ್ಛಂದ್ರ ಪ್ರವೃತ್ತಿಯವರಾಗಬಾರದು. ಸ್ವಾತಂತ್ರ್ಯದ ಅರ್ಥ ಇದಲ್ಲ, ಆಡಳಿತದ ಒಂದು ಒಳ್ಳೆಯ ವ್ಯವಸ್ಥೆಗೆ ನಾವೆಲ್ಲ ಒಳಪಡಬೇಕು. ಧರ್ಮದ ಆರಾಧನೆಗೆ ತೊಡಗಬೇಕು,ರಾಷ್ಟ್ರದ ಪ್ರತಿಯೊಬ್ಬ ಪ್ರಜೆಯೂ ವಿದ್ಯಾವಂತನಾಗಬೇಕು, ಜೀವನಾವಶ್ಯಕತೆಗೆ ಆಧಾರವೂ ಆಗಿರಬೇಕು. ಯಾವುದೋ ಒಂದು "ಇಜಂ"ಗೆ ಯಾಂತ್ರಿಕವಾಗಿ ಅಂಟಿಕೊಳ್ಳುವದು ನಿಷ್ಪ್ರಯೋಜಕ, ಕೇವಲ ಪಕ್ಷದ ಹೆಸರಿನಲ್ಲಿ ಸ್ವಾರ್ಥ ಸಾಧನೆ, ವಂಚನೆ, ದ್ವೇಷಾ–ಸೂಯೆಗಳಿಗೆ ಬಲಿಯಾಗಬಾರದು. ಉತ್ತಮ ಚಾರಿತ್ರ್ಯ ಕಾಯ್ದುಕೊಳ್ಳುವಲ್ಲಿ ಪರಿಶ್ರಮಿಸಬೇಕು. ಜನರಲ್ಲಿ ಶಾಂತಿ, ಸಹನೆ, ಸಹಬಾಳ್ವೆ, ಸಹಕಾರ ಭಾವನೆಗಳು ಮೂಡಿ ಬರಬೇಕು. ನಮ್ಮೆಲ್ಲ ಭಾವನೆಗಳು ಉಚ್ಚಮಟ್ಟದವಿರಬೇಕು. ಅಹಂಕಾರವಳಿದು ಪೌರುಷವಂತರಾಗಿ ಬಾಳಬೇಕು.

ನಮಗೆ ಸ್ವಾತಂತ್ರ್ಯ ಬಂದ ದಿನ ಅದು ನಿತ್ಯ ನೂತನವೇ. ಈ ದಿನ ನಮ್ಮೆಲ್ಲರಿಗೆ ಹೊಸ ಹೊಸ ಶಕ್ತಿ, ಸಾಮರ್ಥ್ಯ,ಸಂತೋಷಗಳನ್ನು ತರಬೇಕು. ಈಶಭಕ್ತಿ–ದೇಶ ಭಕ್ತಿ ಎರಡೂ ಸಮರಸವಾಗಿ ಬೆರೆತು ನಮ್ಮ ಹೃದಯದಲ್ಲಿ ದಿವ್ಯ ಕನಸನ್ನು ಕಾಣುವಂತಾಗಬೇಕು. ಅದನ್ನು ನನಸಾಗಿ ಮಾಡುವುದರಲ್ಲಿಯೇ ನಮ್ಮ ಸಾಧನೆ, ಆಗ ಮಾತ್ರ ಮನಸ್ಸಿಗೆ ಹರ್ಷ.

2. ನುಡಿಮುತ್ತುಗಳಲ್ಲಿ ಕವಿಯು ಮೂಡಿಸಿರುವ ಅಭಿಪ್ರಾಯ.

ಉತ್ತರ : ಸಾಮಾನ್ಯವಾಗಿ ಜಗತ್ತಿನಲ್ಲಿ ಬೆಲೆ ಇರುವದು ಹಣವಂತರಿಗೆ. ಹಣವಿದ್ದರೆ ಎಲ್ಲರೂ ಅವನ ಬಂಧುಗಳೆಂದು ಹೇಳಿಕೊಳ್ಳುವರು. ಅದೇ ವ್ಯಕ್ತಿ ಹಣವಿಲ್ಲದಾಗಲು, ಬಂಧುಗಳೆಂದು ಹೇಳಿಕೊಂಡವರಲ್ಲ ದೂರಾಗುತ್ತಾರೆ. ಆದ್ದರಿಂದ ಬಂಧುತ್ವದ ಸೂತ್ರವಾಗಿ ಹಣವಿದೆಯೋ ಹೊರತು ಹೃದಯದ ಭಾವನೆಗಳಿಲ್ಲ. ಇದೊಂದು ಸಮಾಜದಲ್ಲಿಯ ದುರ್ದೆಶೆ.

ಕುಂಬಾರ ಕುಡಿಕೆ ಮಾಡಬೇಕಾದರೆ ಮಣ್ಣನ್ನು ಹದಗೊಳಿಸಿ ಚಕ್ರದ ಮೇಲೆ ಅದನ್ನಿಟ್ಟು ಕೋಲಿನಿಂದ ತಿಗರಿಯನ್ನು ತಿರುಗಿಸಬೇಕು. ಕೈಚಳಕವಿಂದ ಕುಡಿಕೆಯ ಆಕಾರ ಹೊರಡಿಸ

ಬೇಕು. ಇವುಗಳಲ್ಲಿ ಯಾವುದೇ ಒಂದನ್ನು ಮಾಡಿದರೆ ಕುಡಿಕೆಯೂ ಆಗುವದಿಲ್ಲ. ಅವನು ಕುಂಬಾರನೂ ಆಗುವದಿಲ್ಲ. ಆದ್ದರಿಂದ ಯಾವುದೇ ಒಂದು ಉದ್ಯೋಗ ತನ್ನ ಉದ್ಯೋಗದ ಎಲ್ಲ ಅಂಶಗಳನ್ನು ತಿಳಿದಿರಬೇಕಾದುದು ಅವಶ್ಯ.

ಬಾಳೆಹಣ್ಣನ್ನು ಒಬ್ಬ ತಿನ್ನುತ್ತಾನೆ. ಆದರ ಸಿಪ್ಪೆಯನ್ನು ಅಲಕ್ಷತನದಿಂದ ರಸ್ತೆಯಲ್ಲಿ ಎಸೆಯುತ್ತಾನೆ. ಮತ್ತೊಬ್ಬ ತಿಳಿಯದೆ ಅದರ ಮೇಲೆ ಕಾಲಿಟ್ಟು ಜಾರಿಬಿದ್ದು ತೊಂದರೆಗೊಳಗಾನಾಗುತ್ತಾನೆ. ಒಬ್ಬನ ಅಲಕ್ಷತನ ಮತ್ತೊಬ್ಬನ ಕಷ್ಟಕ್ಕೆ ಕಾರಣವಾಯಿತು. ಇದು ಆಗದಂತೆ ನೋಡಿಕೊಳ್ಳಬೇಕಾದರೆ ನಮ್ಮಲ್ಲಿ ಅಲಕ್ಷಭಾವ ತೊಲಗಿ ಸದಾ ಜಾಗ್ರತ ಭಾವವಿರಬೇಕು.

ನಿದ್ರೆಯಂಥ ಸ್ಥಿತಿಯಲ್ಲಿ ಮನುಷ್ಯ ತಾನೊಬ್ಬ ವಿಶ್ರಾಂತಿ ಪಡೆದು ಅದರ ಸುಖವನ್ನು ಅನುಭವಿಸಬಲ್ಲ. ಆದರ ಅದೇ ಮನುಷ್ಯ ಎಚ್ಚತ್ತು ದುಡಿಮೆಗೆ ನಿಂತಾಗ ಆ ದುಡಿಮೆಯ ಪರಿಣಾಮ ವ್ಯಾಪಕವಾಗುತ್ತದೆ. ಎಲ್ಲರಿಗೂ ಸುಖವನ್ನುಂಟು ಮಾಡುತ್ತದೆ. ಆದ್ದರಿಂದ ಬಹುಜನ ಹಿತಕಾರಿಯಾದ ಕಾರ್ಯಗಳಲ್ಲಿ ಮನುಷ್ಯ ತನ್ನ ಹೆಚ್ಚಿನ ಸಮಯವನ್ನು ಕಳೆಯಬೇಕು.

ಈ ಎಲ್ಲ ಅಭಿಪ್ರಾಯಗಳು 'ನುಡಿಮುತ್ತುಗಳು' ಎಂಬ ಕವನದಲ್ಲಿ ಮೂಡಿ ಬಂದಿವೆ. ಈ ನುಡಿಮುತ್ತುಗಳು ನಮ್ಮ ಬದುಕಿಗೆ ದಾರಿದೀಪಗಳಾಗಿವೆ.

3 ಮಾನವನ ಬೂಟಾಟಿಕೆಯ ಭಕ್ತಿ ವ್ಯರ್ಥ ಎಂಬುದನ್ನು ಪುರಂದರದಾಸರು ಹೇಗೆ ಸಮರ್ಥಿಸಿದ್ದಾರೆ?

ಉತ್ತರ : ಪುರಂದರದಾಸರು ಸಮಾಜದಲ್ಲಿನ ಕಪಟ, ವಂಚನೆ, ಸುಳ್ಳು, ಘಾತುಕತನ ಮುಂತಾದ ಅವಗುಣಗಳನ್ನು "ಬೇವು ಬೆಲ್ಲದೊಳಿಡಲೇನು ಫಲ" ಎಂಬ ಕೀರ್ತನೆಯಲ್ಲಿ ಖಂಡಿಸಿದ್ದಾರೆ. ವಿವಿಧ ಉದಾಹರಣೆಗಳಿಂದ ಸ್ಪಷ್ಟಗೊಳಿಸಿದ್ದಾರೆ. ಮಾನವನ ಬೂಟಾಟಿಕೆಯ ಭಕ್ತಿ ವ್ಯರ್ಥ ಎಂದೂ ಸಮರ್ಥಿಸಿದ್ದಾರೆ.

ಡಾಂಭಿಕತನದಿಂದ ಮಂತ್ರಪಠಣ ಮಾಡುವದು, ಸುಳ್ಳನ್ನು ಹೇಳಿ ದೇವರನ್ನು ಧ್ಯಾನಿಸುವದು, ವ್ಯರ್ಥವಾದವುಗಳು. ಮನಃ ಪರಿಶುದ್ಧವಿಲ್ಲದೆ ಇವುಗಳಿಂದ ಯಾವ ಫಲವೂ ದೊರೆಯದು. ಇದಲ್ಲದೆ ಜನರಿಗೆ ವಂಚನೆ ಮಾಡುವವರು ಜಪಗಳನ್ನು ಮಾಡಿದರೂ ಸುಖವಿಲ್ಲ. ತಾಮಸ, ಕೋಪವನ್ನು ಬಿಡದವನು ಎಷ್ಟು ಉಪವಾಸ, ವ್ರತಗಳನ್ನು ಮಾಡಿದರೂ ಲಾಭವಿಲ್ಲ. ಮನಸ್ಸಿನಲ್ಲಿ ಘಾತುಕತನ ಇಟ್ಟುಕೊಂಡು ಗೀತಾಪಾರಾಯಣ ಮಾಡಿದರೆ ಫಲ ದೊರೆಯದು. ತಂದೆ-ತಾಯಿಗಳನ್ನು ಬಳಲಿಸುವ ಮಗ ಎಂತಹ ಪುಣ್ಯಯಾತ್ರೆಗಳನ್ನು ಮಾಡಿದರೂ ಪುಣ್ಯವೇನೂ ಬರಲಾರದು. ಹಾಗೆಯೇ ಹೀನ ಕಾರ್ಯಗಳನ್ನು ದಿನವೂ ಮಾಡುತ್ತ ನದಿಯಲ್ಲಿ ಸ್ನಾನಮಾಡಿ ಶುದ್ಧನೆಂದೂ, ಆಚಾರವಂತನೆಂದೂ ಬೀಗುವವನಿಗೆ ಏನು ಫಲ! ಎಲ್ಲವೂ ವ್ಯರ್ಥ. ಇಂಥ ಆಡಂಬರವುಳ್ಳವೆ ಬೂಟಾಟಿಕೆ ಎಲ್ಲವೂ ವ್ಯರ್ಥ ಎಂದು ಪುರಂದರದಾಸರು ನೀತಿ ಬೋಧೆಯನ್ನು ಅರುಹಿದ್ದಾರೆ.

4 ಮಲ್ಲಯ್ಯನ ದರ್ಶನಕ್ಕಾಗಿ ಸಿದ್ಧರಾಮನ ಹಂಬಲ.

ಉತ್ತರ : ಮಲ್ಲಯ್ಯನನ್ನು ಕಾಣುವ ಹಂಬಲದಿಂದ ಸಿದ್ಧರಾಮನು ಹುಡುಕುತ್ತ ಹೊರಟನು ಮಲ್ಲಯ್ಯ, ಮಲ್ಲಯ್ಯ ಎಂದು ಕೂಗಿ ಕರೆಯುತ್ತ ಬಿಸಿಲು, ಗಾಳಿಗಳೆನ್ನದೆ, ಕಾಯ್ದ ಮರಳನ್ನು ಲೆಕ್ಕಿಸದೆ ಹೋಗುತ್ತಿದ್ದನು. ಅವನ ಅವಸ್ಥೆಯನ್ನು ಕಂಡ ಶ್ರೀಶೈಲ ಯಾತ್ರಿಕರು ಮಲ್ಲಯ್ಯನನ್ನು ತೋರಿಸುವದಾಗಿ ಹೇಳಿ ಶ್ರೀಶೈಲಕ್ಕೆ ಆತನನ್ನು ಕರೆದುಕೊಂಡು ಹೋಗುತ್ತಾರೆ. ಅಲ್ಲಿ ಮಲ್ಲಿಕಾರ್ಜುನ ಲಿಂಗವನ್ನು ತೋರಿಸಲಾಗಿ, ಅವನು ನಿರಾಶನಾಗಿ ತಾನು ಕಂಡ ಮಲ್ಲಯ್ಯ ಆ ಕಲ್ಲು ಅಲ್ಲ ಎಂದು ಹೇಳುತ್ತಾನೆ. "ಸರ್ಪಭೂಷಣ, ಜಟೆಯಲ್ಲಿ ಗಂಗೆ, ಹಣೆಗಣ್ಣು, ಗಜಚರ್ಮಾಂಬರ, ಎಡಗಡೆ ನಾರಿ, ವೃಷಭವಾಹನ" ಈ ಮುಂತಾದ ಲಕ್ಷಣಗಳಿಂದ ಕೂಡಿದ ಮಲ್ಲಯ್ಯನನ್ನು ತಾನು ಕಂಡಿರುವದಾಗಿ ಹೇಳಿ, ಅವನನ್ನು ತೋರಿಸುವಂತೆ ಕೇಳುತ್ತಾನೆ. ಆದರೆ ಅವರು ಅವನನ್ನು ತಾವು ತೋರಿಸಲು ಸಾಧ್ಯವಿಲ್ಲವೆಂದು ಹೇಳುತ್ತಾರೆ.

ಸಿದ್ಧರಾಮನು ಹಾಗೆಯೇ ಮುಂದೆ ನಡೆದು "ಹಿಂಬಾಲಿಸಿ ಕರೆದರೆ ಏಕೆ ಓ ಎನ್ನುವದಿಲ್ಲಾ, ಸುಡು ಬಿಸಿಲಿನಲ್ಲಿ ಬೆಂದುನೆಲದ ಮೇಲೆ ಹೊರಳಾಡಿದರೂ ನಿನಗೆ ಕರುಣೆ ಬರಲಿಲ್ಲವೆ? ಮರುಳನಿಗೆ, ಅನಾಥನಿಗೆ, ಅನನ್ಯಗತಿಕನಿಗೆ ಕರುಣೆದೋರು" ಎಂದು ಗಿಡಮರಗಳೂ ಕಂಬನಿಗರೆಯುವಂತೆ ಶಿವನಿಗಾಗಿ ಹಂಬಲಿಸುತ್ತಾನೆ. ತನ್ನ ಪ್ರತಿಧ್ವನಿಯನ್ನೇ ಮಾರ್ಕೊಗೆಂದು ಭ್ರಮಿಸಿ, ಎಲ್ಲೆಲ್ಲೂ ಮಲ್ಲಯ್ಯನನ್ನೇ ಕಲ್ಪಿಸಿಕೊಂಡು ಕಡು ಬಿಸಿಲಲ್ಲಿ ಸುತ್ತಾಡುವನು. ಆತನನ್ನು ಎಲ್ಲಿಯೂ ಕಾಣದೆ ಕೊನೆಗೆ ರುದ್ರಗಮ್ಮರಿಯತ್ತ ಬಂದು ನಿಂತು. "ಘನಸತ್ಯವಂತನಾದ ನೀನು ಪರ್ವತದಲ್ಲಿ ಇರುವೆಯೆಂದು ಕಾಣಲು ಬಂದರೆ ನೀನು ಸಿಟ್ಟಾಗಿ ಅಡಗಿ ಕುಳಿತುಕೊಳ್ಳುವದೇ! ಹಿಂದೆ ನೀನು ತೋರಿದ ನಿಜ ರೂಪವನ್ನು ತೋರಿಸು, ಇಲ್ಲವಾದರೆ ಈ ದೊಡ್ಡ ಕಮ್ಮರಿಯಲ್ಲಿ ಬೀಳುತ್ತೇನೆ" ಎಂದು ಪರಿಪರಿಯಾಗಿ ಹಲುಬಿದನು. ಆಗ ಭಕ್ತವತ್ಸಲನಾದ ಶಿವನು ಅಲ್ಲಿಗೆ ಬಂದು ಪ್ರತ್ಯಕ್ಷನಾಗಿ "ಬಳಲಿದ ಮಗನೆ" ಎಂದು ತಬ್ಬಿಕೊಂಡು ಸಮಾಧಾನಪಡಿಸುತ್ತಾನೆ, ಅವನ ಅಪಾರ ಭಕ್ತಿಗೆ ಶಿವ-ಪಾರ್ವತಿಯರೀರ್ವರೂ ಮೆಚ್ಚಿ ಹರಸುತ್ತಾರೆ.

ಪ್ರಶ್ನೆ 3 (ಅ) ಕೆಳಗಿನ ಪದ್ಯದ ಸಾರಾಂಶವನ್ನು ಬರೆಯಿರಿ.

ಮಗನೆ ತಮ್ಮಂದಿರನು ಪಾಲಿಸು
ವಿಗಡತನವನು ಮಾಣು ಪರರೋ
ಲಗವನೀ ಮಾಡುವರೇ ನಿನಿಗಿತ್ತಂಡವನು ಬರಲೆ।
ಸೊಗಸು ನಾನೆಂದುದನು ಹಿಸುಣರ
ಹಗೆನುಡಿಯ ಕೇಳದಿರು ಪಟ್ಟವ
ಬಿಗಿಸಿಕೊಳು ಸಲಿಸೆನ್ನ ವಚನವನೆಂದಳು ಕುಂತಿ ॥

ಉತ್ತರ : "ಮಗನೆ ನಿನ್ನ ತಮ್ಮಂದಿರನ್ನು ರಕ್ಷಿಸು. ದುಸ್ಸಾಹಸವನ್ನು ಬಿಟ್ಟುಬಿಡು. ನೀನು ಪರರಸೇವೆ ಮಾಡುವದು ಸರಿಯಲ್ಲ. ಎರಡೂ ತಂಡದವರು ನಿನಗೆ ತಮ್ಮಂದಿರು. ನಾನು ಹೇಳುವ ಮಾತು ಹಿತವೆಂದು ತಿಳಿ. ಚಾಡಿಕೋರರ ದ್ವೇಷದ ಮಾತಿಗೆ ಕಿವಿ ಕೊಡಬೇಡ, ಪಟ್ಟಾಭಿಷಿಕ್ತನಾಗು, ನನ್ನಮಾತನ್ನು ನಡೆಸಿಕೊಡು" ಎಂದು ಕುಂತಿ ಅಂದಳು.

(ಬ) ಕೆಳಗಿನ ಹಳಗನ್ನಡ ಪದ್ಯಭಾಗವನ್ನು ಹೊಸ ಗನ್ನಡಕ್ಕೆ ಅನುವಾದಿಸಿರಿ.

"ದೇವಾ ನೀ ಪಿರಿಯಂ ಆರ್ಗೆನೆಣಿಕೆಯಪ್ಪುದನೀವಲ್ತ ಕ್ಕೈವಂ ನಾಳಿನ ಪಂತದೊಳ್ ಬಾಲೆಗೆ ನಾರದನೊಳ್ ಬೇಸರ್ ಪುಟ್ಟುವವೋಲ್ ಮೊಗಂ ಕೋಡಗ ವೋಗದಂತೆ ಪುಟ್ಟುಗೆ ಅಂತರನ್ಯಗಳ ತಿಳಿಯಲ್‌ಬಾರದು ಇಂತೊಂದು ದಮಗೆಯ್ದಾಡಾಂಗೆಲ್ದೆ"

ಉತ್ತರ : ದೇವಾ, ನೀನು ದೊಡ್ಡವನು, ಯಾರಿಗೆ ಏನು ಇಚ್ಛೆಯಾಗುವದೋ ಅದನ್ನು ನಡೆಯಿಸಲು ಅರ್ಹನು. ನಾಳೆ ನಡೆಯುವ ಪಂದ್ಯದಲ್ಲಿ ಆ ಕನ್ಯೆಗೆ ನಾರದನಲ್ಲಿ ಬೇಸರ ಹುಟ್ಟುವಂತೆ ಅವನ ಮುಖವು ಕೋತಿಯ ಮುಖವಾಗಿಹುಟ್ಟಲಿ, ಆದರೆ ಇತರರಿಗೆ ತಿಳಿಯಬಾರದು. ಇಷ್ಟು ಮಾತ್ರ ದಯೆ ತೋರಿದರೆ ನಾನು ಗೆದ್ದೆ–(ಪರ್ವತನು ನಾರಾಯಣನಿಗೆ ಹೇಳಿದ ಮಾತು).

ಪ್ರಶ್ನೆ 4 . ಕೆಳಗಿನ ಪದ್ಯಭಾಗವನ್ನು ಪೂರ್ತಿಗೊಳಿಸಿರಿ.

1 ನಾಡ ಸೊಬಗೇ.........ನಿಂದಿರುವುದೇ.
2 ನಡೆವುದೊಂದೇ.........ಸರ್ವಜ್ಞ.

ಉತ್ತರ : (ನಿಮ್ಮ ಪಠ್ಯಪುಸ್ತಕದ ಪದ್ಯಭಾಗದಲ್ಲಿ ನೋಡಿರಿ)

ಪ್ರಶ್ನೆ 5 ಇವರಲ್ಲಿ ಇಬ್ಬರ ಸ್ಥಳ, ಕಾಲ ಮತ್ತು ಕೃತಿಗಳನ್ನು ತಿಳಿಸಿರಿ.

1. ಮುದ್ದಣ 2. ಬಿ. ಎಂ ಶ್ರೀ
3. ಎಸ್. ವ್ಹಿ. ಪರಮೇಶ್ವರಭಟ್ಟ.

ಉತ್ತರ : 1. ಮುದ್ದಣ : ನಂದಳಿಕೆ ಲಕ್ಷ್ಮೀನಾರಾಯಣಪ್ಪ ಇವರ ಹೆಸರು. ಮುದ್ದಣ ಇದು ಅವರ ಕಾವ್ಯ ನಾಮ. ಈ ಕವಿಯ ಜನ್ಮ ತಳೆದ ಊರು ನಂದಳಿಕೆ. 1870 ನೇ ಜನೇವರಿ 24 ರಂದು ಜನ್ಮ ತಳೆದರು. ವೃತ್ತಿಯಿಂದ ಶಾರೀರಿಕ ಶಿಕ್ಷಣದ ಶಿಕ್ಷಕರಾಗಿದ್ದರು.

ಇವರ ಕೃತಿಗಳು : "ರತ್ನಾವಳಿ", "ಕುಮಾರ ವಿಜಯ" ಎಂಬ ಎರಡು ಯಕ್ಷಗಾನಗಳು, "ರಾಮಾಶ್ವಮೇಧ" ಮತ್ತು "ಅದ್ಭುತ ರಾಮಾಯಣ" ಎಂಬ ಗದ್ಯ ಗ್ರಂಥಗಳು, "ಶ್ರೀರಾಮ ಪಟ್ಟಾಭಿಷೇಕ" ಎಂಬ ಪದ್ಯ ಕಾವ್ಯ. ಇವರು 1901 ರಲ್ಲಿ ನಿಧನರಾದರು.

2. ಬಿ. ಎಂ. ಶ್ರೀ : (1984ನೇ ಎಪ್ರೇಲಿ ಪ್ರಥಮ ಪತ್ರಿಕೆ 5ನೇ ಉಪಪ್ರಶ್ನೆ ನೋಡಿರಿ)

3. ಎಸ್. ವ್ಹಿ. ಪರಮೇಶ್ವರಭಟ್ಟ: ಇವರು1914 ರಲ್ಲಿ ತೀರ್ಥಹಳ್ಳಿ ತಾಲೂಕಿನ ವಾಳೂರಿನಲ್ಲಿ ಜನಿಸಿದರು. ಮೈಸೂರು ವಿಶ್ವವಿದ್ಯಾಲಯದಿಂದ ಎಂ. ಎ. ಪದವಿಯನ್ನು ಸುವರ್ಣ ಪದಕದೊಂದಿಗೆ ಪಡೆದರು. ಕನ್ನಡ ಅಧ್ಯಾಪಕರಾಗಿ ಕಾರ್ಯ ಮಾಡಿದ್ದಾರೆ. ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದ್ದಾರೆ.

ಇವರ ಕೃತಿಗಳು : ಸುಮಾರು 60 ಕೃತಿಗಳನ್ನು ರಚಿಸಿದ್ದಾರೆ. ರಾಗಿಣಿ, ಜಹನಾರ, ಇಂದ್ರಚಾಪ, ಸುರಗಿ ಸುರಹೊನ್ನೆ, ಚಂದ್ರವಿಥಿ, ಉಪ್ಪುಕಡಲು, ಸಾಮರ ಇತ್ಯಾದಿ ಇವರ ಕೃತಿಗಳಲ್ಲಿ ಕೆಲವು.

ಪ್ರಶ್ನೆ 6. ಕೆಳಗಿನ ವಾಕ್ಯಗಳ ಸಂದರ್ಭ ಮತ್ತು ಸ್ವಾರಸ್ಯವನ್ನು ತಿಳಿಸಿರಿ.

1 ಇದು ಮಹತ್ಕಾರ್ಯ ಸಾಧಿಸುವ ಲಕ್ಷಣವುಳ್ಳ ಮುಖ.

ಉತ್ತರ : ಈ ಮಾತು "ಬಂಕಾಪುರದಲ್ಲಿ ರನ್ನಮಯ್ಯ" ಎಂಬ ಗದ್ಯಪಾಠದಲ್ಲಿ ಬಂದಿದೆ. ತದೇಕಚಿತ್ತದಿಂದ ಪ್ರವಚನವನ್ನು ಆಲಿಸುತ್ತಿದ್ದ ರನ್ನನನ್ನು ಗುರುಗಳಾದ ಅಜಿತಸೇನಾಚಾರ್ಯರು ಕರೆಕಳುಹಿಸಿದರು. ಆಗಮಿಸಿದ ರನ್ನನ ಮುಖವನ್ನು ಸೂಕ್ಷ್ಮವಾಗಿ ಅವಲೋಕಿಸಿದರು. ಅವನಲ್ಲಿಯ ದಕ್ಷತೆ, ಸ್ಫೂರ್ತಿಯನ್ನು ತೋರಬಲ್ಲ ಮುಖಭಾವನೆಯನ್ನು ಗುರುತಿಸಿ "ಇದು ಮಹತ್ಕಾರ್ಯ ಸಾಧಿಸುವ ಲಕ್ಷಣವುಳ್ಳ ಮುಖ" ಎಂದು ಕೊಂಡರು.

2 ಕಟ್ಟಿಸಿದ ಮಾಳಿಗೆಲ್ಲಾ ತಟ್ಟನೆ ಬಿದ್ದಾಂಗಾತು.

ಉತ್ತರ : ಈ ಮಾತು "ಕೆರೆಗೆ ಹಾರ" ಎಂಬ ಗದ್ಯ ಪಾಠದಲ್ಲಿ ಬಂದಿದೆ. ಮಾದೇವರಾಯನು ದಂಡಿನಲ್ಲಿರುವಾಗ ಅವನ ಹೆಂಡತಿ ಭಾಗೀರತಿ ಕೆರೆಗೆ ಹಾರವಾದಳು. ಆ ರಾತ್ರಿ ಅವನಿಗೆ ಕೆಟ್ಟ ಕನಸು ಬಿತ್ತು. ಅದರಲ್ಲಿ ಕಟ್ಟಿಸಿದ ಮಹಡಿಮನೆ ಬಿದ್ದು ಹೋದಂತಾಯಿತು. ಸೆಲ್ಲೆ ಸುಟ್ಟಾಂಗಾತು. ಕೋಲು ಮುರಿದ್ದಾಂಗಾತು. ಈ ಅಪಶಕುನಗಳಿಂದ ಗಾಬರಿಗೊಂಡ ಅವನು ಬತ್ತಲೆ ಕುದುರೆ ಏರಿ ಹೊರಟ, ಕೆಟ್ಟ ಫಲಗಳು ಹೀಗೆ ಅಪಶಕುನಗಳಾಗಿ ಕಾಣುತ್ತವೆ ಎನ್ನುವದು ಜನರಲ್ಲಿ ನಂಬಿಕೆ.

3 ದೇವರ ಒಡವೆಗಳನ್ನು ದೇವರಿಗೆ ಒಪ್ಪಿಸಲು ಬಂದಿದ್ದೇನೆ.

ಉತ್ತರ : "ಕಳ್ಳರ ಗುರು" ಎಂಬ ಪಾಠದಿಂದ ಈ ಮಾತನ್ನು ಆಯ್ದುಕೊಳ್ಳಲಾಗಿದೆ. ಕಳ್ಳರ ನಾಯಕನಾದ ಭೀಮ ನಾಯಕ ತನ್ನ ಮಗನ ರೋಗವನ್ನು ಗುಣಪಡಿಸಿದ ವೈದ್ಯರೇ ಆತನಿಗೆ ದೇವರಾದರು. ಈ ಮೊದಲು ವೈದ್ಯರ ಮನೆಯಿಂದ ಕದ್ದು ತಂದ ವಸ್ತುಗಳನ್ನೆಲ್ಲ ಗಂಟುಕಟ್ಟಿಕೊಂಡು ಹೋಗಿ ಅವರಿಗೆ ಒಪ್ಪಿಸುತ್ತ ಮೇಲಿನಂತೆ ಹೇಳಿದ ಮಾತಿದು. ಅವರು ಮಾಡಿದ ಉಪಕಾರಕ್ಕೆ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಾನೆ.

4 ಎನ್ನಯ ಭಾಷೆ ಸಂದುದು.

ಉತ್ತರ : ಈ ಮಾತು "ಹೋದ ಬಾಣವ ಮರಳಿ ತೊಡದಿರು" ಎಂಬ ಪದ್ಯ ಭಾಗದಲ್ಲಿ ಬರುತ್ತದೆ.. ಕುಂತಿಯು ಕರ್ಣನನ್ನು ಗಂಗೆಯ ಮಡಿಲಿಗೆ ಹಾಕುವಾಗ, ಅವನ ರಕ್ಷಣೆಯ ಭಾರ ನಿನ್ನದೇ ಎಂದು ಪ್ರಾರ್ಥಿಸಿಕೊಂಡಿದ್ದಳು. ಇಷ್ಟು ದಿನ ಗಂಗೆ ಅವನ ರಕ್ಷಣೆ ಮಾಡಿದಳು. ಈಗ ಆಕೆ ಸ್ತ್ರೀ ವೇಷದಿಂದ ಬಂದು ಕುಂತಿಗೆ "ಎನ್ನಯ ಭಾಷೆ ಸಂದುದು" ಎಂದುಅಂದಳು. ಮುಂದೆ ನಡೆಯಲಿರುವ ಮಹಾಭಾರತ ಯುದ್ಧದಲ್ಲಿ. ಕರ್ಣನ ರಕ್ಷಣೆಯ ಹೊಣೆಯಿಂದ ತಪ್ಪಿಸಿಕೊಂಡಳು.

ಪ್ರಶ್ನೆ 7. ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

1. ಲಕ್ಕುವಿನ ಬಗೆಗೆ ಅಮೀರಾಲಿಖಾನನ ಮೆಚ್ಚುಗೆಗಳೇನು ?

ಉತ್ತರ : ಅಮೀರಾಲಿಖಾನನ ಎತ್ತುಗಳಲ್ಲಿ "ಲಕ್ಕು" ಎಂಬ ಹೋರಿ ಇದ್ದಿತು. ಅದು ತುಂಬಾ ಬಲಶಾಲಿಯಿತ್ತಲ್ಲದೆ ಯಾವುದೇ ಗೂಳಿಗೂ ಮಣಿಯದಂತಿತ್ತು. ಅದರ ಗುಟುರೆ ಸಿಂಹಗರ್ಜನೆಯಂತಿದ್ದಿತು. ಒಟ್ಟಿನಲ್ಲಿ ಅದು ಎತ್ತುಗಳ ರಾಜನಾಗಿದ್ದಿತು. ಅದನ್ನು ಮೆಚ್ಚಿಕೊಂಡಿದ್ದ ಖಾನನು ಒಳ್ಳೇ ಅಭಿಮಾನದಿಂದ ಬಂದವರೊಡನೆ "ಮೇರಾ ಲಕ್ಕು ಹಮಾರಾ ಗಾಂವಕಾ ಶೇರ್ ಹೈ" ಎನ್ನುತ್ತಿದ್ದ. ಅದು ಹುಲಿಯ ಜೊತೆ ಹೋರಾಡಿ ಬಂದಾಗ ಅವರ ವಿಜಯೋತ್ಸವಕ್ಕೆ ದೊಡ್ಡ ಔತಣವನ್ನೇ ಮಾಡಿದ.

2. ಗರತಿಯು ಕಂಡ ಮುದ್ದು ಮಗುವಿನ ಚಿತ್ರಣ.

ಉತ್ತರ : ಗರತಿಯು ತನ್ನ ಮುದ್ದು ಮಗುವನ್ನು ತುಂಬ ಅಕ್ಕರೆಯಿಂದ ಕಾಣುತ್ತಾಳೆ. ಅದು ಅವಳಿಗೆ ಹೊನ್ನ ತಾವರೆ, ಹಣ್ಣುಳ್ಳ ಗಿಡಕ್ಕೆ ಗಿಣಿ ಮುದ್ದಾಗಿರುವಂತೆ ಆ ಮಗು ತನ್ನ ಮನೆಗೆ ಮುದ್ದು ಎನ್ನುತ್ತಾಳೆ. ಅವಳಿಗೆ ಹೆಣ್ಣು–ಗಂಡು ಎಲ್ಲ ಸಮಾನರೆ, ಮಗು ಮನೆಯ ನಂದಾದೀಪವಷ್ಟೇ.

3. ಕನ್ನಡನಾಡಿನಲ್ಲಿ ಯಾವ ಯಾವ ಅರಸರ, ಅರಸಿಯರ ವೀರಶ್ರೀ ಮೆರೆದಿದೆ ?

ಉತ್ತರ : ಕನ್ನಡನಾಡಿನಲ್ಲಿ ಗಂಗ, ಕದಂಬ, ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ, ವಿಜಯನಗರದ ಹುಕ್ಕ–ಬುಕ್ಕ, ಪುಲಕೇಶಿ, ವಿಕ್ರಮ, ಚೆನ್ನಮ್ಮ, (ಕಿತ್ತೂರ ಚನ್ನಮ್ಮ) ಮೊದಲಾದ ಅರಸರ, ಅರಸಿಯರ ವೀರಶ್ರೀ ಮೆರೆದಿದೆ. ಕನ್ನಡನಾಡು ಮಹಾಶೂರರು ಮೆರೆದನಾಡು.

4. ಕಾಡುಕೋಣ ವೃಕ್ಷದೇವತೆಗೆ ಸಮಾಧಾನ ಹೇಳಿದ ರೀತಿ..

ಉತ್ತರ : (1984 ನೇ ಎಪ್ರೀಲ ಪ್ರಥಮ ಪತ್ರಿಕೆ 7 ನೇ ಪ್ರಶ್ನೆಯ 2 ನೆಯ ಉಪಪ್ರಶ್ನೆಯ ಉತ್ತರ ನೋಡಿರಿ.)

5. "ಕೆರೆಗೆ ಹಾರ" ಹಾಡನ್ನು ಓದಿದಾಗ ಲೇಖಕರಿಗೆ ಆದ ಅನುಭವ.

ಉತ್ತರ : ಜನಪದ ಕಾವ್ಯಗಳು ಹಳ್ಳಿಗಳ ಹಾಡು ಎಂದು ಅನಾದರಣೆಗೆ ಈಡಾಗುವ ಬದಲಾಗಿ ಪ್ರೌಢಿಮೆಯುಳ್ಳವರೂ ಸಹ ಅವುಗಳಲ್ಲಿಯ ಸತ್ವವನ್ನು ಕಾಣುತ್ತಿದ್ದಾರೆ. ಇಂಥ ಒಂದು ಹಾಡು "ಕರೆಗೆ ಹಾರ" ಇದನ್ನು ಲೇಖಕರು ಜಯ–ಕರ್ನಾಟಕದಲ್ಲಿ ಓದಿದರು. ಆಗ ಅವರಿಗೆ "ನಮ್ಮ ಕಾವ್ಯಾಕಾಶದಲ್ಲಿ ಹೊಳಪಿನ ನಕ್ಷತ್ರವೊಂದನ್ನು ಹೊಸದಾಗಿ ಕಂಡಂತೆ" ಎಂಬ ಅನುಭವಾಯಿತು.

ಪ್ರಶ್ನೆ 8. ಅಡವಿಯೊಳಗೆ ಹೊಲಗೆಟ್ಟವೆಗತ್ತನ್ಯಳಂ, ಕಂಡ ಶಿಶುವ ಸೋಲುತ್ತು, ಇಲ್ಲಿರುವ ಅಲಂಕಾರವನ್ನು ಹೆಸರಿಸಿ ಸಮನ್ವಯ ಮಾಡಿರಿ.

ಉತ್ತರ : ಇದು ಉಪಮಾಲಂಕಾರ, ತಾಯಿಯನ್ನು ಕಳೆದುಕೊಂಡ ಶಿಶು, ಅನ್ಯಳನ್ನು ಕಂಡಗತಿಯಂತೆ; ಅಡವಿಯಲ್ಲಿ

ಅಲೆದು ಮಲ್ಲಯ್ಯನಿಗಾಗಿ ಹಂಬಲಿಸುತ್ತಿದ್ದ ಸಿದ್ಧರಾಮನಿಗೆ ಶ್ರೀಶೈಲ ಮಲ್ಲಿಕಾರ್ಜುನ ಲಿಂಗವನ್ನು ಕಂಡಾಗ ಅವನ ಗತಿ ಆಯಿತು. ಶಿಶು–ಉಪಮಾನ, ಸಿದ್ಧರಾಮ–ಉಪಮೇಯ, ನಿರಾಶೆ–ಸಾದೃಶ್ಯ ಧರ್ಮ, ಪೋಲ್ತು–ಉಪಮಾವಾಚಕ.

ಪ್ರಶ್ನೆ 9. ಕೆಳಗಿನ ಪದ್ಯ ಭಾಗಕ್ಕೆ ಪ್ರಸ್ತಾರ ಹಾಕಿ, ಗಣ ವಿಂಗಡಿಸಿ, ಛಂದಸ್ಸಿನ ಹೆಸರು ಬರೆಯಿರಿ.

ಕರೆದೊಡೇಕೋ ಎನ್ನ ಮಲ್ಲಯ್ಯ ಬೆಂಬತ್ತಿ
ಹರಿದೊಡೇಕೊ ಎನ್ನ ಮಲ್ಲಯ್ಯ ಕಡುಬಿಸಿಲ
ಉರಿಗೆ ನೆಲಕಾಯ್ದು ಹುಡಿಯೊಳಗೆ ಹೊರಳಿದು
ಮಿಡುಕೆ

ಉತ್ತರ : ಕರೆದೊಡೇ । ಕೋ ಎನ್ನ । ಮಲ್ಲಯ್ಯ । ಬೆಂಬತ್ತಿ ।

UUU— । ——U । —U— । —UU
ಶಿ ಶಿ ಶಿ ಶಿ

ಹರಿದೊಡೇ । ಕೋ ಎನ್ನ । ಮಲ್ಲಯ್ಯ । ಕಡುಬಿಸಿಲ ।

UUU— । ——U । —U— ।
UUUUU ।
ಶಿ ಶಿ ಶಿ ಶಿ

ಉರಿಗನೆಲ । ಕಾಯ್ದುಹುಡಿ । ಯೊಳಗ ಹೊರ । ಳಿದು ಮಿಡುಕೆ ।

UUUUU । —UUU । UUUUU ।
UUUUU ।
ಶಿ ಶಿ ಶಿ ಶಿ

1, 2, 4, 5, ಸಾಲುಗಳಲ್ಲಿ 5 ಮಾತ್ರೆಯ 4 ಗಣಗಳೂ, 3, 6 ಸಾಲುಗಳಲ್ಲಿ 5 ಮಾತ್ರೆಯ 6 ಗಣಗಳೂ ಒಂದು ಗುರುವೂ ಬಂದರೆ ವಾರ್ಧಿಕ ಷಟ್ಪದಿ ಇರುವದು.

ಪ್ರಶ್ನೆ 10. ಕೆಳಗಿನ ಪದಗಳನ್ನು ನಿಮ್ಮ ವಾಕ್ಯಗಳಲ್ಲಿ ಬಳಸಿರಿ.

ಅಜಗಜಾಂತರ, ನಿತ್ಯ ನೂತನ, ಹಾಸಿಗೆ ಹಿಡಿ.

ಉತ್ತರ : 1 ಆನೆ ಮತ್ತು ಆಡುಗಳ ಸಾಮರ್ಥ್ಯದಲ್ಲಿ ಅಜಗಜಾಂತರ ವ್ಯತ್ಯಾಸವಿದೆ.

2 ಅವಳ ಆ ಹಾಡು ನಿತ್ಯ ನೂತನವಾದುದು.

3 ವಿನೋದನ ತಂದೆ ಕಳೆದ ಮೂರು ತಿಂಗಳಿಂದ ಹಾಸಿಗೆ ಹಿಡಿದಿದ್ದಾರೆ.

ಪ್ರಶ್ನೆ 11. (ಅ) ಇವುಗಳ ವಿಗ್ರಹವಾಕ್ಯ ಬರೆದು ಸಮಾಸದ ಹೆಸರನ್ನು ತಿಳಿಸಿ.

1 ಕಂಬನಿ 2 ತರುಗುಲ್ಮಲತೆಗಳು 3 ರವಿಸುತ

ಉತ್ತರ : 1 ಕಣ್ಣ ಪನಿ–ಕಂಬನಿ; ಷಷ್ಠಿ ತತ್ಪುರುಷ ಸಮಾಸ.

2 ತರುಗಳೂ ಗುಲ್ಮಗಳೂ ಲತೆಗಳೂ–ತರುಗುಲ್ಮಲತೆಗಳು; ದ್ವಂದ್ವ ಸಮಾಸ.

3 ರವಿಯ ಸುತ–ರವಿಸುತ; ಷಷ್ಠಿ ತತ್ಪುರುಷ ಸಮಾಸ.

(ಬ) ಕೆಳಗಿನವುಗಳನ್ನು ಸಂಧಿ ಬಿಡಿಸಿ ಆ ಸಂಧಿಯ ಹೆಸರನ್ನು ತಿಳಿಸಿ.

1 ಗಜಾಸುರ. 2. ಕೈಯಡೆ. 3 ತರುಣೇಂದು.

ಉತ್ತರ : 1 ಗಜ + ಅಸುರ = ಗಜಾಸುರ, ಸವರ್ಣ ದೀರ್ಘ ಸಂಧಿ

2 ಕೈ + ಎಡೆ = ಕೈಯೆಡೆ, ಯಕಾರಾಗಮ ಸಂಧಿ.

3 ತರುಣ + ಇಂದು = ತರುಣೇಂದು, ಗುಣಸಂಧಿ.

(ಕ) ಕೆಳಗಿನ ಪದಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

1 ಸುವ್ಯವಸ್ಥೆ 2 ಅಂತರಂಗ 3 ನಂಬಿಕೆ

ಉತ್ತರ : 1 ಅವ್ಯವಸ್ಥೆ 2 ಬಹಿರಂಗ 3 ಅಪನಂಬಿಕೆ.

ಪ್ರಶ್ನೆ 12. (ಅ) ಕೆಳಗಿನ ಪ್ರಶ್ನೆಗಳಿಗೆ ಒಂದೊಂದು ವಾಕ್ಯದಲ್ಲಿ ಉತ್ತರ ಬರಿಯಿರಿ.

ಉತ್ತರ : 1 ಮಾನವನ ಅಂತರಾಳದಲ್ಲಿ ಮೂಲತಃ ಇರುವ ಗುಣಗಳಾವುವು ?

ದಯೆ, ಕರುಣೆ, ಪರೋಪಕಾರ ಇವು ಮಾನವನಲ್ಲಿ ಮೂಲತಃ ಇರುವ ಗುಣಗಳು.

2 ಗರತಿಯು ದಿನದ ಕೆಲಸಗಳನ್ನು ಯಾವಾಗ ಪ್ರಾರಂಭಿಸುತ್ತಿದ್ದಳು?

ಉದಯ ಕಾಲದಲ್ಲಿ ಮಕ್ಕಳು ಇನ್ನೂ ಮಲಗಿರುವಾಗಲೇ ಗರತಿಯು ತನ್ನ ದಿನದ ಕೆಲಸಗಳನ್ನು ಪ್ರಾರಂಭಿಸುತ್ತಿದ್ದಳು.

3 ಭಾಗೀರತಿಯ ಗಂಡನು ಯಾರು ?
ಮಾದೇವರಾಯನು ಭಾಗೀರತಿಯ ಗಂಡ.

4 ಊರೆಲ್ಲ ನೆಂಟರು ಯಾವಾಗ ಆಗುವರು ?
ಹಣದ ಗಂಟು ಕೈಯಲ್ಲಿದ್ದಾಗ ಊರೆಲ್ಲ ನೆಂಟರಾಗುವರು.

5 ತರುಣನಿಗೆ ಬೇಕಾದ ತಾಳ್ಮೆಯಾವುದು?
ತರುಣನಿಗೆ ನಡುನಡುವ ನಿಂತು ನೋಡುವ ತಾಳ್ಮೆ ಬೇಕು.

(ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿ ಮಾಡಿರಿ.

ಉತ್ತರ : 1 ಬೆಟಗೇರಿ ಕೃಷ್ಣಶರ್ಮರ ಕಾವ್ಯನಾಮ ......(ಆನಂದಕಂದ)

2 ಪಂಚ ನದಿಗಳು ಹರಿಯುವ ಜಿಲ್ಹೆ...... (ವಿಜಾಪುರ).

3 "ಸುಖಜೀವನ" ಬರೆದ ಕವಿ.......... (ಬಿ. ಎಂ. ಶ್ರೀ)

4 ಹನ್ನೆರಡು ತಿಂಗಳಿಗೊಮ್ಮೆ ಬರುವ ಪತ್ರಿಕೆ........(ವಾರ್ಷಿಕ ಪತ್ರಿಕೆ)

5 ರನ್ನಮಯ್ಯನ ಗುರು.......(ಅಜಿತ ಸೇನಾಚಾರ್ಯರು)

ಪ್ರಶ್ನೆ 13. ಮೊದಲೆರಡು ಪದಗಳಿಗಿರುವ ಸಂಬಂಧ ದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದಗಳನ್ನು ಬರೆಯಿರಿ.

ಉತ್ತರ : 1 ದ. ರಾ. ಬೇಂದ್ರೆ-ಕವಿ; ಚಾರ್ಲಿ; ಚಾಪ್ಲಿನ್—(ನಟ)

2 ಪಾಪ-ಪುಣ್ಯ; ವಿವೇಕ—(ಅವಿವೇಕ)

3 ಮಾತಂಗಾ—ಮಗಣ; ಹನುಮ—(ನಗಣ)

4 ಕಾರ್ಯ—ಕಜ್ಜ; ಕಬ್ಬ—(ಕಾವ್ಯ)

5 ಅತ್ಯಾರ್ಥ—ಯಣ್‌ಸಂಧಿ; ಕರು ಣಾಬ್ಧಿ—(ಸವರ್ಣದೀರ್ಘಸಂಧಿ)

ಪ್ರಶ್ನೆ 14. ಆಯಾ ಗುಂಪಿಗೆ ಸೇರಿದ ಪದವನ್ನು ಆಯ್ದು ಬರೆಯಿರಿ.

ಉತ್ತರ : 1 ಭೋಗ, ಕುಸುಮ, ಭಾಮಿನಿ, ಕಂದ (ಉ—ಕಂದ)

2 ರಾಮ ಲಕ್ಷ್ಮಣ ಭರತರು, ಅರಮನೆ, ತರುಗುಲ್ಮಲತೆ, ಭೀಮ ಅರ್ಜುನ ನಕುಲ ಸಹದೇವರು (ಉ—ಅರಮನೆ)

3 ಇರ್ತಂಡ, ಇರ್ತೋಳ, ಪೆರ್ಮಡಿ, ಮುಮ್ಮಡಿ (ಉ—ಪೆರ್ಮಡಿ)

4 ಉಪಮಾ, ಶ್ಲೇಷ, ರೂಪಕ, ಪ್ರಾಸ (ಉ—ಪ್ರಾಸ)

5 ದಾತಾರ, ಲಕ್ಷ್ಮಿ, ಮುಖ, ಜಪಾ (ಉ—ದಾತಾರ)

ಪ್ರಶ್ನೆ 15. "ಅ" ಗುಂಪಿನ ಪದಗಳಿಗೆ "ಬ" ಗುಂಪಿನ ಪದಗಳಲ್ಲಿ ಸರಿಯಾದುದನ್ನು ಜೋಡಿಸಿ ಬರೆಯಿರಿ.

| "ಅ" | "ಬ" |
|---|---|
| 1 ಕುವೆಂಪು | ಅ) ತತ್ಸಮ |
| 2 ಪರವಸ | ಆ) ಕೃದಂತ ಭಾವನಾಮ |
| 3 ವಾರ್ಧಕ | ಇ) ತದ್ಭವ |
| 4 ಉಡುಗೆ | ಈ) ಕೆ. ವಿ. ಪುಟ್ಟಪ್ಪ |
| 5 ಗುರು | ಉ) ಷಟ್ಪದಿ |
| | ಊ) ಬಿ. ಡಿ. ಸುಬ್ಬಯ್ಯ |
| | ಋ) ದೀರ್ಘಾಕ್ಷರ |

ಉತ್ತರ : 1–ಈ, 2-ಇ, 3–ಉ, 4-ಆ, 5-ಋ.

# ಕನ್ನಡ

## ಅಕ್ಟೋಬರ–೧೯೮೮ ದ್ವಿತೀಯ ಪತ್ರಿಕೆ

ಅವಧಿ : 2 ಘಂಟೆ ಅಂಕಗಳು : 50

ಪ್ರಶ್ನೆ 1. ಈ ಕೆಳಗಿನ ಪ್ರಶ್ನೆಗಳಲ್ಲಿ ಎರಡನ್ನು ಆರಿಸಿಕೊಂಡು ಒಂದೊಂದು ಪುಟಕ್ಕೆ ಮೀರದಂತೆ ಉತ್ತರ ಬರೆಯಿರಿ.

1 ಸ್ವಾತಂತ್ರ್ಯಯೋಧರಾಗಿ ಸೆರೆಮನೆ ಪ್ರವೇಶಿಸಿದ ಅರವಿಂದರು ಅಧ್ಯಾತ್ಮಯೋಗಿಯಾಗಿ ಹೊರಬಂದರು ಹೇಗೆ? ವಿವರಿಸಿ.

ಉತ್ತರ : ಅರವಿಂದರು ಭಾರತದ ಸ್ವಾತಂತ್ರ್ಯಕ್ಕಾಗಿ, ಕ್ರಾಂತಿಕಾರಿಗಳಾಗಿ, ಉಗ್ರಗಾಮಿಗಳಾಗಿ ಹೋರಾಡಲು ಸಿದ್ಧರಾಗುತ್ತಿದ್ದರು. ಹಲವಾರು ಇಂಥ ಕ್ರಾಂತಿಕಾರೀ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು, ಹೆಣಗುತ್ತಿದ್ದರು. ಇನ್ನೊಂದು ಕಡೆ ಆಂತರಿಕ ಸಾಧನೆಯ ದಾತಾರರಾಗಲು ಅವರ ಆಧ್ಯಾತ್ಮಿಕ ಶಕ್ತಿ ಹವಣಿಸುತ್ತಿತ್ತು. ಅದು ಬಾಲ್ಯದಿಂದಲೂ ಒಂದಲ್ಲ ಒಂದು ರೀತಿಯಿಂದ ರಕ್ಷಿಸಿಕೊಂಡು ಬಂದ ಶಕ್ತಿಯಾಗಿತ್ತು. ಈ ಇಬ್ಬಗೆಯ ಸಾಧನೆಯಲ್ಲಿ ಅರವಿಂದರು ಮುಂದುವರಿದರು. ತಮ್ಮ ರಾಜಕೀಯ ಗೊಂದಲದ ಮಧ್ಯೆ ಯೋಗ ಸಾಧನೆಯನ್ನೂ ಮುಂದುವರಿಸಿಕೊಂಡು ಹೋದರು. ಯೋಗ ಹಾಗೂ ಆಧ್ಯಾತ್ಮ ವಿಷಯಕವಾಗಿ ಅನೇಕರ ಸಲಹೆ ಹಾಗೂ ಮಾರ್ಗದರ್ಶನ ಪಡೆದರು. ಬರ ಬರುತ್ತ ರಾಜಕೀಯ ಗೊಂದಲ ಅವರಿಗೆ ಬೇಸರವನ್ನುಂಟು ಮಾಡಿತು. ಆದಕ್ಕೆ ಅವರು ತಮ್ಮ ಯೋಗಸಾಧನೆಯನ್ನು ಮುಂದುವರಿಸಲು ನಿರ್ಧರಿಸಿದರು. ತಮ್ಮದೇ ಆದ ರೀತಿಯಲ್ಲಿ ಮುನ್ನಡೆಯಲು ನಿರ್ಣಯಿಸಿದರು. ಅವರ ಅರಿವೇ ಅವರಿಗೆ ಗುರುವಾಗಿ ಪರಿಣಮಿಸಿತು.

ಅರವಿಂದರು ಕಲಕತ್ತೆಗೆ ಬಂದ ನಂತರ ಬರೀಂದ್ರ ಮತ್ತು ಕ್ರಾಂತಿಕಾರಿಗಳ ಚಟುವಟಿಕೆಗಳು ಬೆಳೆಯುತ್ತಿದ್ದವು. ಕೆಲವೊಂದು ಹಲ್ಲೆಗಳ ಪ್ರಕರಣಗಳಿಂದಾಗಿ ಆಗಿನ ಸರಕಾರ ಕ್ರಾಂತಿಕಾರರ ಚಳವಳಿ ನಿರ್ಮೂಲಗೊಳಿಸಬೇಕೆಂದು ದೃಢ ನಿರ್ಧಾರ ಮಾಡಿತು. ಅನುಮಾನ ಬಂದವರನ್ನೆಲ್ಲ ಬಂಧಿಸಹತ್ತಿದರು. ಇವರ ತಮ್ಮ ಬರೀಂದ್ರ ಕುಮಾರನನ್ನು ಬಂಧಿಸಿದರು. ಹಾಗೆಯೇ ರಾಜದ್ರೋಹದ ಅಪಾದನೆಯ ಮೇರೆಗೆ ಅರವಿಂದರನ್ನೊಳಗೊಂಡು ಮೂವತ್ನಾಲ್ಕು ಜನರನ್ನು ಬಂಧಿಸಿದರು. ಅವರನ್ನು ಅಲಿಪುರದ ಸೆರೆ ಮನೆಯಲ್ಲಿಟ್ಟಿದ್ದರು. ಅದರಲ್ಲಿ ಹದಿನೈದು ಜನರನ್ನು ಸೆಷನ್ಸ ವಿಚಾರಣೆಗೆ ಗುರಿಪಡಿಸಿದರು. ಬರೀಂದ್ರಕುಮಾರ ಮತ್ತು ಅರವಿಂದರೂ ಅದರಲ್ಲಿ ಸೇರಿದ್ದರು.

ಈ ಎಲ್ಲ ರಾಜಕೀಯ ಗೊಂದಲದಿಂದ ಲೌಕಿಕ ಹೋರಾಟದಿಂದ ಹಿಂದೆ ಸರಿದರು. ಸೆರೆಮನೆಯಲ್ಲಿ ಯೋಗಾಭ್ಯಾಸ ಮುಂದುವರೆಸಿದರು. ಈ ಸೆರೆಮನೆಯಲ್ಲಿಯ ಒಂದು ವರ್ಷ ಬಹಳ ಮಹತ್ವಪೂರ್ಣಕಾಲವಾಯಿತು. ಅವರ ಜೀವನದಲ್ಲಿ ಅದೊಂದು ಪರಿವರ್ತನೆಯ ಘಟ್ಟ. ಸೆರೆಮನೆ ಅವರ ಆಧ್ಯಾತ್ಮಿಕ ಸಾಧನೆಯ ತಪೋ ಭೂಮಿಯಾಯಿತು; ಧರ್ಮದ ನೆಲಮನೆಯಾಯಿತು. ಹೀಗೆ ಅರವಿಂದರು ಸೆರೆಮನೆಯನ್ನು ಸ್ವಾತಂತ್ರ್ಯ ಯೋಧರಾಗಿ ಪ್ರವೇಶಿಸಿದ್ದರೂ, ಹೊರಗೆ ಬಂದದ್ದು ಆಧ್ಯಾತ್ಮಿಕ ಯೋಗಿಯಾಗಿ.

**2. ಜಗತ್ತಿನ ನೆತ್ತಿಯನ್ನು ಏರಿನಿಂತ ತೇನಸಿಂಗ್ ಮತ್ತು ಹಿಲರಿ ಹೇಗೆ ಭಾವಪರವಶರಾದರು ? ಅಲ್ಲಿ ಅವರು ಹದಿನೈದು ನಿಮಿಷಗಳನ್ನು ಹೇಗೆ ಕಳೆದರು ?**

ಉತ್ತರ : 1953 ಮೇ 29 ರಂದು ಸುಮಾರು 11-30 ಗಂಟೆಯ ಹೊತ್ತಿಗೆ ತೇನಸಿಂಗ ಮತ್ತು ಹಿಲರಿ ಇವರು ಜಗತ್ತಿನ ನೆತ್ತಿಯನ್ನೇರಿ ಅದ್ಭುತ ವಿಜಯ ಸಾಧಿಸಿದರು. ಅಲ್ಲಿ ಅವರು ತಮ್ಮ ವಿಜಯೋತ್ಸವಕ್ಕಾಗಿ ಭಾವಪರವಶರಾಗಿ ಕಳೆದ ಹದಿನೈದು ನಿಮಿಷಗಳು ಅವಿಸ್ಮರಣೀಯ. ವಿಜಯಿಗಳೀರ್ವರೂ ಕೈಕುಲುಕಿ; ದೇವರ ಪ್ರಾರ್ಥನೆ ಮಾಡಿದರು. ಭಾವನಾರಾಗಿ ಭದ್ರಾಲಿಂಗನಗೈದರು. ಒಬ್ಬರನ್ನೊಬ್ಬರು. ಪರವಶ ಯಥೇಚ್ಛವಾಗಿ ಬೆನ್ನುತಟ್ಟಿದರು. ತೇನಸಿಂಗ ತನ್ನ ಮಂಜು ಕೊಡಲಿಯನ್ನು ಎತ್ತಿ ಹಿಡಿದಾಗ ಅದರ ಸುತ್ತ ಕಟ್ಟಲಾದ ನಾಲ್ಕು ಧ್ವಜಗಳು ಗಾಳಿಯಲ್ಲಿ ಹಾರಾಡುತ್ತಿದ್ದವು ಆಗ ಹಿಲರಿ ಕ್ಯಾಮರಾ ಕ್ಲಿಕ್ ಮಾಡಿದ ತೇನಸಿಂಗ ತನ್ನ ಮಂಜು ಕೊಡಲಿಯಿಂದ ನಾಲ್ಕು ಧ್ವಜಗಳನ್ನು ಬಿಚ್ಚಿ ತೆಗೆದನು. ಸಂಯುಕ್ತ ರಾಷ್ಟ್ರ, ಭಾರತ, ನೇಪಾಳ ಮತ್ತು ಬ್ರಿಟನ್ ಬಾವುಟಗಳನ್ನು ಎವರೆಸ್ಟ ಶಿಖರದ ಮೇಲೆ ಹಳದಿ ದಾರದ ತುದಿಗಳನ್ನು ಹಿಮದ ಆಳದಲ್ಲಿ ಹೂತ. ಹಿಲರಿ ಅದರ ಫೋಟೋ ತೆಗೆದ. ಆನಂತರ ಅವನು ಹಿಮದಲ್ಲಿ ಕುಳಿಯೊಂದನ್ನು ಕೊರೆದ. ಅದರಲ್ಲಿ ಅವನು ದಾರಿಯುದ್ದಕ್ಕೂ ಹೊತ್ತು ತಂದ ಸಿಹಿ ಪದಾರ್ಥ, ತನ್ನ ಮಗಳು ಕೊಟ್ಟ ಪೆನ್ಸಿಲು ಹಾಗೂ ಹಿಲರಿ ಕೊಟ್ಟ ಅರಿವೆಯ ಕರಿ ಬೆಕ್ಕು, ಇತರ ವಸ್ತುಗಳನ್ನು ಊಡಿಯಲ್ಲಿಟ್ಟ. ನಂತರ ಅವರು ಮೌನವಾಗಿ ಪ್ರಾರ್ಥನೆ ಸಲ್ಲಿಸಿದರು. ತೇನಸಿಂಗ್ ತನ್ನ ಇಷ್ಟ ದೇವತೆಗೆ ಕೃತಜ್ಞತೆ ಸಲ್ಲಿಸಿದ. ಇವರೀರ್ವರು ಜಗತ್ತಿನಲ್ಲಿಯೇ ಇದುವರೆಗೆ ಯಾರೂ ಮಾಡದ ಮಹಾ ಸಾಹಸವನ್ನು ಮಾಡಿದ್ದರು. ಅವರ ಆನಂದಕ್ಕೆ ಪಾರವೇ ಇರಲಿಲ್ಲ.

**3. ಜಗದೀಶಚಂದ್ರಬೋಸರು, ಪಾಶ್ಚಾತ್ಯರು ಭಾರತೀಯ ವಿಜ್ಞಾನಿಯ ಬಗೆಗೆ ತಳೆದಿದ್ದ ಭಾವನೆಯನ್ನು ಹೇಗೆ ವಿರೋಧಿಸಿದರು ?**

ಉತ್ತರ : ಭಾರತಕ್ಕೆ ಮರಳಿದ ಬಳಿಕ ಜಗದೀಶಚಂದ್ರರಿಗೆ ಕಲಕತ್ತೆಯ ಪ್ರೆಸಿಡೆನ್ಸಿ ಕಾಲೇಜಿನ ಭೌತಶಾಸ್ತ್ರ ಅಧ್ಯಾಪಕ ಹುದ್ದೆ ದೊರೆಯಿತು. ಅವರು ಅಲ್ಲಿ ಒಂದು ವಿಚಿತ್ರ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಆಗ ಆಂಗ್ಲರಿಗೆ ಕೊಡುತ್ತಿದ್ದಂತೆ ಭಾರತೀಯ ಅಧ್ಯಾಪಕರಿಗೆ ಪೂರ್ಣ ಸಂಬಳ ಕೊಡುತ್ತಿರಲಿಲ್ಲ. ಅಲ್ಲದೆ ಆಂಗ್ಲರಿಗಿದ್ದ ಕೆಲವು ವಿಶೇಷ ಸವಲತ್ತುಗಳೂ

ಭಾರತೀಯ ಅಧ್ಯಾಪಕರುಗಳಿಗೆ ಇರುತ್ತಿರಲಿಲ್ಲ. ಇದಕ್ಕೆ ಕಾರಣ ವೆಂದರೆ ಭಾರತೀಯರು ವಿಜ್ಞಾನ ವಿಷಯವನ್ನು ಬೋಧಿಸು ವಲ್ಲಿ ಅಸಮರ್ಥರು. ಆಂಗ್ಲರ ಸರಿಸಮಾನ ನಿಲ್ಲಲಾರರು ಎಂಬು ದಾಗಿತ್ತು. ಆ ಕಾಲೇಜಿನ ಪ್ರಿನ್ಸಿಪಾಲರಿಗೆ ಜಗದೀಶ ಚಂದ್ರ ರನ್ನು ಅಲ್ಲಿ ಸೇರಿಸಿಕೊಳ್ಳುವದು ಕೂಡಾ ಇಷ್ಟವಿರಲಿಲ್ಲ.

ಜಗದೀಶಚಂದ್ರರು ಅಲ್ಲಿಯ ವ್ಯವಸ್ಥೆಯನ್ನು ಪ್ರತಿಭಟಿ ಸಿದರು. ಇದು ಭಾರತೀಯರಿಗೆ ಆಂಗ್ಲರು ಮಾಡುತ್ತಿರುವ ಅವ ಮಾನವೆಂದು ಬಗೆದರು. ಆಂಗ್ಲ ಅಧ್ಯಾಪಕರಿಗೆ ಕೊಡುವಂತೆ ತಮಗೂ ಸರಿಸಮಾನವಾಗಿ ಸಂಬಳವನ್ನು ಕೊಡುವವರೆಗೆ ತಾವು ಸಂಬಳವನ್ನೇ ತೆಗೆದುಕೊಳ್ಳುವದಿಲ್ಲವೆಂದು ಸಂಬಂಧಪಟ್ಟವರಿಗೆ ತಿಳಿಸಿ, ಅದರಂತೆಯೇ ಮೂರು ವರ್ಷಗಳ ಕಾಲ ಕೆಲಸ ಮಾಡಿ ದರು.

ಬೋಸರು ಸಂಬಳವನ್ನು ಪಡೆಯದಿದ್ದರೂ ಅತ್ಯಂತ ನಿಷ್ಠೆ ಹಾಗೂ ಪ್ರೀತಿಯಿಂದ ತಮ್ಮ ಕೆಲಸ ನಿರ್ವಹಿಸುತ್ತಿದ್ದರು ಈ ಮೂಲಕ ವಿದ್ಯಾರ್ಥಿಗಳ ಹಾಗೂ ಅಧಿಕಾರಗಳ ಗಮನ ಸೆಳೆ ದರು. ಇವರ ಪ್ರತಿಭೆ, ಬೋಧನಕ್ರಮ, ಸಂಕಲ್ಪಶಕ್ತಿ ಹಾಗೂ ಸ್ವದೇಶಾಭಿಮಾನ ಎಲ್ಲರಿಗೂ ಅಚ್ಚರಿಯುಂಟು ಮಾಡಿತು. ಪ್ರಿನ್ಸಿಪಾಲರು ಹಾಗೂ ಅಧಿಕಾರಿಗಳು ಈಗ ಬೋಸರ ಆತ್ಮೀಯ ರಾದರು. ತಾನಾಗಿಯೇ ಮುಂದೆ ಬಂದು ಪೂರ್ಣ ಸಂಬಳ ಕೊಡುವದಾಗಿ ಒಪ್ಪಿದರು. ಅವರ ಅಚಲ ಮನೋಭಾವವನ್ನೂ, ಅಸಾಧಾರಣ ಬುದ್ಧಿವಂತಿಕೆಯನ್ನು ಕೊಂಡಾಡಿದರು.

ಪ್ರಶ್ನೆ 2. ಕೆಳಗಿನ ಪ್ರಶ್ನೆಗಳಲ್ಲಿ ಐದನ್ನು ಆರಿಸಿ ಕೊಂಡು ಸಂಕ್ಷೇಪವಾಗಿ ವಿವರಿಸಿರಿ.

1. ಷರ್ಪಾ ಜನರ ಜೀವನ ಮತ್ತು ವೃತ್ತಿಯನ್ನು ತಿಳಿಸಿರಿ

ಉತ್ತರ : ಷರ್ಪಾಗಳು ಹಿಮಾಲಯದ ತಪ್ಪಲಿನಲ್ಲಿ ವಾಸಿಸುವ ಜನ, ಇವರು ಚಳಿಯಿಂದ ಬಲು ಗಟ್ಟಿಗರು, ಧೈರ್ಯ–ಸ್ಥೈರ್ಯಗಳಿಗೆ ಹೆಸರಾದವರು. ಹಲಗೆಯ ಮನೆಗಳಲ್ಲಿ ವಾಸಿಸುವ ಇವರು, ಆರ್ಥಿಕವಾಗಿ ಕಷ್ಟದಲ್ಲಿದ್ದರೂ ಆನಂದ– ವಿನೋದಗಳಿಂದ ಜೀವಿಸುತ್ತಾರೆ. ಸಾಮಾನ್ಯವಾಗಿ ಆಲೂ ಗಡ್ಡೆಯನ್ನು ಬೆಳೆಯುತ್ತಾರೆ. ಚಮರೀ ಮೃಗಗಳನ್ನು ಸಾಕಿ ಉಪಜೀವಿಸುತ್ತಾರೆ, ಪರ್ವತಾರೋಹಿಗಳ ಸಾಮಾನು ಹೊರು ವದು ಹಾಗೂ ಅವರಿಗೆ ನೆರವಾಗುವದು ಇವರ ವೃತ್ತಿಯಾಗಿದೆ, ಇವರು ಸ್ನೇಹಪರರು, ಬೌದ್ಧ ಮತಕ್ಕೆ ಸೇರಿದವರು, ಅತಿಥಿ ಗಳನ್ನು ಟೀ ಮತ್ತು ಮಧ್ಯಪಾಂಗ್ ಕೊಟ್ಟು ಸತ್ಕರಿಸುವರು.

2. ಜಗದೀಶಚಂದ್ರರ ಬಾಲ್ಯ ಜೀವನದ ಮುಖ್ಯ ಘಟನೆಗಳಾವುವು ?

ಉತ್ತರ : ತಂದೆ ಭಗವಾನ್ ಚಂದ್ರರು ಒಮ್ಮೆ ಶಿಕ್ಷೆ ಕೊಡುವಾಗ ಒಬ್ಬ ದರೋಡೆಕಾರನಿಗೆ ಹಿತೋಪದೇಶ ಮಾಡಿ ದ್ದರು. ಅವನಿಗೆ ತಮ್ಮ ಮನೆಯಲ್ಲಿಯೇ ಕೆಲಸ ಕೊಟ್ಟು ಜಗ ದೀಶಚಂದ್ರರನ್ನು ನೋಡಿಕೊಳ್ಳಲು ನೇಮಿಸಿದರು. ಅವನು ಬಾಲಕ ಜಗದೀಶಚಂದ್ರನನ್ನು ಆಟವಾಡಿಸಿ, ರೋಮಾಂಚಕ ಸ್ವಾರಸ್ಯವಾದ ಕಥೆ ಹೇಳುತ್ತಿದ್ದನು. ಬಾಲಕನಿಗೆ ಎಲ್ಲವೂ ಆಕರ್ಷಿತವಾಗಿದ್ದಿತು. ಮನೆಯಲ್ಲಿ ತಂದೆ, ಅಜ್ಜಿ, ಸೇವಕರು, ಸಹೋದರಿಯರು, ಅಣ್ಣ ಇವರೆಲ್ಲ ಆತನ ಸಹಜವಾದ ಜ್ಞಾನ ಸಾಧನೆಗೆ ಪ್ರೇರಕರಾಗಿ, ಸಹಾಯಕರಾಗಿ ವರ್ತಿಸುತ್ತಿದ್ದರು. ಇದೆಲ್ಲ ಬಾಲಕ ಜಗದೀಶಚಂದ್ರಬೋಸರ ಮೇಲೆ ಅಗಾಧ ಪರಿಣಾಮ ಬೀರಿತು ತಂದೆಯವರು ಒಂದು ಕಠಿಣ ಪರಿಸ್ಥಿತಿ ಯಲ್ಲಿ ತಮ್ಮ ಬಂಗಲೆಯ ಆವರಣದಲ್ಲಿಯೇ ವೃತ್ತಿ ಶಿಕ್ಷಣ ಶಾಲೆ ಯನ್ನು ತೆರೆದರು. ಈ ಶಾಲೆಯಿಂದಲೂ ಜಗದೀಶಚಂದ್ರರಿಗೆ ವೃತ್ತಿ ಶಿಕ್ಷಣದ ಬಗೆಗೆ ಅರಿತುಕೊಳ್ಳಲು ಸಹಾಯಕವಾಯಿತು.

3. ತೇನಸಿಂಗ್‌ನ ಜನ್ಮಸ್ಥಳದ ಐತಿಹ್ಯವೇನು ?

ಉತ್ತರ : ತ್ಸಚು ಎಂಬುದು ತೇನ್‌ಸಿಂಗ್‌ನ ಜನ್ಮಸ್ಥಳ. ಅದು ಬುದ್ಧನ ತಂಗುದಾಣವಾಗಿತ್ತಂತೆ. ತ್ಸಚು ಎಂದರೆ ಬಿಸಿ ನೀರಿನ ಬುಗ್ಗೆಗಳು ಎಂದರ್ಥ. ಅಲ್ಲಿರುವ ಬುದ್ಧನ ತಲೆಯಂತೆ ಕಾಣುವ ಬಂಡೆಯನ್ನು ಮುಟ್ಟಿ ಪ್ರಾರ್ಥಿಸಿದರೆ ನೀರು ಹರಿ ಯುತ್ತದಂತೆ. ಅಲ್ಲಿ ಬುದ್ಧನು ಧ್ಯಾನಮಗ್ನನಾಗಿ ಸಂಚರಿಸು ತ್ತಿದ್ದನಂತೆ. ಅವನಿಗೆ ನೀರಿಗೆ ಬದಲು ಕೆರೆಯ ತುಂಬಾ ಚಹ ಆಗುತ್ತಿತ್ತಂತೆ. ಈ ರೀತಿಯಾಗಿ ಷರ್ಪಾಗಳ ನಂಬಿಕೆಯಾಗಿದೆ.

4. ಡಾ. ಜಗದೀಶಚಂದ್ರ ಬೋಸರು ಸರ್ ಜಗ ದೀಶಚಂದ್ರಬೋಸರಾದುದು ಹೇಗೆ

ಉತ್ತರ : ಬೋಸರು ವಿಜ್ಞಾನ ಜಗತ್ತಿನಲ್ಲಿ ಮಾಡಿದ ಹಲವು ಸಾಧನೆಗಳು, ಸಂಶೋಧನೆಗಳು ಅವರಿಗೆ ಅಪಾರ ಖ್ಯಾತಿಯನ್ನೂ ಗೌರವವನ್ನೂ ತಂದು ಕೊಟ್ಟವು. ಅವರ ಕೀರ್ತಿ ಎಲ್ಲೆಡೆ ಹರಡಿತು, ಪ್ರಶಸ್ತಿಗಳ ಸುರಿಮಳೆಯಾಯಿತು. ಭಾರತ ಸರಕಾರ 1903 ರಲ್ಲಿ ಅವರಿಗೆ ಸಿ. ಐ. ಇ. ಪ್ರಶಸ್ತಿ ಕೊಟ್ಟಿತು. 1912 ರಲ್ಲಿ ಸಿ. ಎಸ್. ಐ. ಎಂಬ ಪ್ರಶಸ್ತಿಯಿತ್ತು ಗೌರವ ಸಲ್ಲಿಸಿತು. 1916 ರಲ್ಲಿ ರಲ್ಲಿ ಬ್ರಿಟಿಷ್ ಸರಕಾರವು ಅವರಿಗೆ ನೈಟ್ (ಸರ್) ಪದವಿಯನ್ನಿತ್ತು ಗೌರವಿಸಿತು. ಬ್ರಿಟಿಷ ಸರಕಾರದ ಅತ್ಯುನ್ನತ ಪ್ರಶಸ್ತಿ ಇದು. ಹೀಗೆ ಅವರು ಸರ್ ಜಗದೀಶ ಚಂದ್ರ ಬೋಸರಾದರು.

5. ಅಗಸ್ಟ್ 15 ರ ಮಹತ್ವವೇನು ?

ಉತ್ತರ : ಆಗಸ್ಟ 15 ರ ಭಾರತಕ್ಕೆ ಬ್ರಿಟಿಷರ ದಾಸ್ಯವು ಕಳೆದು ಸ್ವಾತಂತ್ರ್ಯ ಬಂದ ದಿನ. ಸಾವಿರಾರು ವರ್ಷಗಳ ಬಂಧನದಿಂದ ಬಿಡುಗಡೆಯಾಗಿ, ಸ್ವತಂತ್ರ್ಯ ಭಾರತ ಸರಕಾರವು ಅಸ್ತಿತ್ವಕ್ಕೆ ಬಂದ ಶುಭದಿನ. ಭಾರತವನ್ನು ಬಂಧ ಮುಕ್ತ ಗೊಳಿಸುವಲ್ಲಿ ಮೊದಲು ಪ್ರಯತ್ನಿಸಿದವರು ಅರವಿಂದ ಘೋಷರು, ಹಾಗೂ ಅವರ ಕ್ರಾಂತಿಕಾರಿ ಸದಸ್ಯರು. ಅದನ್ನೇ ಮುಂದುವರೆಸಿಕೊಂಡು ರಾಷ್ಟ್ರದಾದ್ಯಂತ ಅದೆಷ್ಟೋ ಧುರೀಣರು ಹೋರಾಡಿದರು. ಲಾಲಾಲಜಪತರಾಮ್, ಬಾಳ ಗಂಗಾಧರ ಟಿಳಕ, ಬಿಪಿನ ಚಂದ್ರಪಾಲ್, ಚಿತ್ತರಂಜನದಾಸ್, ರಾಸ್ ಬಿಹಾರಿ ಘೋಷ, ಮಹಾತ್ಮಾಗಾಂಧಿ, ಸರದಾರ ವಲ್ಲಭ ಭಯಿ ಪಟೇಲ, ವಿಜಯಲಕ್ಷ್ಮಿ ಪಂಡಿತ, ಸರೋಜಿನಿನಾಯಿಡು. ಜವಾಹರಲಾಲ ನೆಹರೂ, ಮಹದೇವಭಾಯಿ ದೇಸಾಯಿ ಮೊದಲಾದವರು ತ್ಯಾಗ, ಅಹಿಂಸೆ, ಬಲಿದಾನಗಳಿಂದ ಹೋರಾಡಿ ಸ್ವಾತಂತ್ರ್ಯಕ್ಕಾಗಿ ದುಡಿದು ಮಡಿದವರು. ಹೀಗೆ ಅಗಸ್ಟ 15 ಮಹತ್ವಪೂರ್ಣ ದಿನವಾಗಿದೆ.

ಪ್ರಶ್ನೆ 3. ಈ ಕೆಳಗಿನ ವಿಷಯಗಳಲ್ಲಿ ಒಂದನ್ನು ಆರಿಸಿಕೊಂಡು ಎರಡು ಪುಟದಲ್ಲಿ ಪ್ರಬಂಧ ಬರೆಯಿರಿ.

1) ನಿಮ್ಮ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು. 2) ನೀವು ಕಂಡ ಕಾರ್ಖಾನೆ, 3) ರಾಷ್ಟ್ರದುನ್ನತಿ ಮತ್ತು ಗ್ರಾಮೋದ್ಯೋಗ, 4) ನಾಡಹಬ್ಬ.

ಉತ್ತರ : 1) ನಿಮ್ಮ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು.

(ಮುಖ್ಯಾಂಶಗಳು :– ನಿಮ್ಮ ಜಿಲ್ಲೆಯ ಹೆಸರು—ಐತಿಹಾಸಿಕ ಮಹತ್ವ ಪಡೆದ ಸ್ಥಳಗಳ ಹೆಸರು—ಅವುಗಳ ಮಹತ್ವ—ಸ್ಮಾರಕಗಳ ವಿವರ—ಕಲೆ—ಸಾಹಿತ್ಯ ಸಂಸ್ಕೃತಿ ಮಹತ್ವ ಪಡೆದ ಸ್ಥಳಗಳ ಹೆಸರು—ಅವುಗಳ ಮಹತ್ವದ ವಿವರ—ಶೈಕ್ಷಣಿಕ ಧಾರ್ಮಿಕ,. ರಾಜಕೀಯ ಅಂಶಗಳಿಂದ ಮಹತ್ವ ಪಡೆದ ಸ್ಥಳಗಳು—ಅವುಗಳ ವಿವರ—ಔದ್ಯೋಗಿಕ ಹಾಗೂ ಇನ್ನಿತರ ಕಾರಣಗಳಿಂದ ಪ್ರೇಕ್ಷಣೀಯವೆನಿಸಿದ ಸ್ಥಳಗಳ ವಿವರಗಳನ್ನು ಕೊಡಿರಿ ).

2. ನೀವು ಕಂಡ ಕಾರ್ಖಾನೆ :

ಉತ್ತರ : (ಮುಖ್ಯಾಂಶಗಳು :– ನೀವು ಸಂದರ್ಶಿಸಿದ ಯಾವುದಾದರೊಂದು ಕಾರ್ಖಾನೆಯ ಹೆಸರು ಹಾಗೂ ಸ್ಥಳ. ಪರಿಚಯ–ಕಾರ್ಖಾನೆಯ ಬಾಹ್ಯಪರಿಸರ-ಆಂತರಿಕ ಕಾರ್ಯದ ವಿವರ—ಕಾರ್ಖಾನೆಯಲ್ಲಿ ನಿಮಗಾದ ಅನುಭವ—ಜನತೆ ಹಾಗೂ ನಾಡಿಗೆ ಹಾಗೂ ರಾಷ್ಟ್ರಕ್ಕೆ ಅದರ ಉಪಯೋಗ ಮುಂತಾದ ವಿವರಣೆ)

3. ರಾಷ್ಟ್ರದುನ್ನತಿ ಮತ್ತು ಗ್ರಾಮೋದ್ಯೋಗ.

ಉತ್ತರ : ಯಾವುದೊಂದು ರಾಷ್ಟ್ರ ಉನ್ನತಿ ಪಡೆಯಬೇಕಾದರೆ ಅಲ್ಲಿಯ ಜನತೆಯ ಅಭಿವೃದ್ಧಿಯಾಗಬೇಕು. ಭಾರತದಂತ ಬೃಹತ್‌ರಾಷ್ಟ್ರ ವಿಶೇಷವಾಗಿ ಹಳ್ಳಿಗಳಿಂದ ಕೂಡಿದ ನಾಡಾಗಿದೆ. ಹಳ್ಳಿಗಳ ಉದ್ಧಾರವಾದಾಗಲೇ ರಾಷ್ಟ್ರದ ಉದ್ಧಾರವೆಂಬುದು ಸತ್ಯ. ಸ್ವಾಭಾವಿಕವಾಗಿ ಹಳ್ಳಿಗರು ಮುಗ್ಧರು, ಅಜ್ಞಾನ, ಮೂಢನಂಬಿಕೆ ರೂಢಿ—ಪರಂಪರೆಗೆ ಒಳಗಾದವರು, ಅವರಿಗೆ ಸರಿಯಾದ ಶಿಕ್ಷಣ ಹಾಗೂ ಅನುಕೂಲತೆಗಳು, ಅವಕಾಶಗಳು ದೊರೆಯದೆ ಇರುವ ಅಭಾವ ಹಳ್ಳಿಗರ ಪ್ರಗತಿಗೆ ಇರುವ ತೊಂದರೆ. ಇದನ್ನು ಹೋಗಲಾಡಿಸಬೇಕು. ಸರಿಯಾದ ಶಿಕ್ಷಣ ವ್ಯವಸ್ಥೆಯಾಗಬೇಕು. ಅಲ್ಲಿಯೇ ಜೀವನ ನಡೆಸಲು ಅನುಕೂಲವಾಗುವ ಉದ್ಯೋಗ—ಧಂದೆಗಳಿಗೆ ಅವಕಾಶ ದೊರೆಯಬೇಕು. ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿ ಸುಧಾರಣೆ ಹೊಂದಬೇಕು. ಸಮಾಜ ಜೀವನ ಸಹನೆ, ಸಹಕಾರ, ಸೌಹಾರ್ದಯುತವಾಗಿ ನಡೆಯುವದಾಗಬೇಕು. ಅಂದಾಗಲೇ ಹಳ್ಳಿಗಳ ಉದ್ಧಾರ ಹಾಗೂ ರಾಷ್ಟ್ರದ ಉನ್ನತಿ ಸಾಧ್ಯ.

ಇಂದು ಎಲ್ಲೆಲ್ಲೂ ಶಹರಗಳು ಭರದಿಂದ ಬೆಳೆಯುತ್ತಲಿವೆ. ಆಧುನಿಕ ಯಂತ್ರಗಳ ಉಪಯೋಗ, ನವೀನ ತಂತ್ರಜ್ಞಾನ ಇವುಗಳಿಂದಾಗಿ ನಗರಗಳಲ್ಲಿ ಸಣ್ಣ ಮಧ್ಯಮ ಹಾಗೂ ಬೃಹತ್ ಪ್ರಮಾಣದ ಕಾರ್ಖಾನೆಗಳು ತಲೆ ಎತ್ತಲಿವೆ. ಇವುಗಳ ಪರಿಣಾಮವಾಗಿ ಮಾನವಶಕ್ತಿಯ ಉಪಯೋಗ ಕಡಿಮೆಯಾಗುತ್ತಲಿದೆ. ಆದರಿಂದ ನಿರುದ್ಯೋಗ ಸಮಸ್ಯೆಯು ಬಿಡಿಸಲಾರದಂತಾಗಿದೆ. ಈ ಗಂಭೀರ ಸಮಸ್ಯೆಯನ್ನು ಪ್ರತಿಯೊಬ್ಬರೂ ವಿಚಾರಿಸಬೇಕು. ದಿ ಮಹಾತ್ಮಾ ಗಾಂಧೀಜಿಯವರು ಗ್ರಾಮೋದ್ಯೋಗಗಳನ್ನು ಹೆಚ್ಚಿಸಿ ಹೆಚ್ಚು ಜನರಿಗೆ ದುಡಿಯಲು ಅವಕಾಶ ಮಾಡಿ ಕೊಡಬೇಕೆಂದು ಮಾರ್ಗದರ್ಶನ ಮಾಡಿದರು. ಅದಕ್ಕಾಗಿ ವೃತ್ತಿ ಮೂಲ ಶಿಕ್ಷಣವನ್ನೂ ಬಳಕೆಯಲ್ಲಿ ತರಲು ಪ್ರಯತ್ನಿಸಿದರು, ಸ್ವತಂತ್ರ ಗ್ರಾಮ ಜೀವನದ ಪುನರುದ್ಧಾರಕ್ಕೆ ಶ್ರಮಿಸಿದರು. ಗ್ರಾಮೋದ್ಯೋಗದ ಮೂಲಕ ತಯಾರಾದ ದೇಶೀಯ ವಸ್ತುಗಳನ್ನೇ ಉಪಯೋಗಿಸುವಂತೆ ಜನರಿಗೆ ಬೋಧಿಸಿದರು. ಅವರ ಉತ್ತೇಜನದ ಫಲವಾಗಿ ಖಾದಿ ಉದ್ಯೋಗ–ದಿಂದ ಅಸಂಖ್ಯಾತ ಬಡ ಹಳ್ಳಿಯ ಜನರು ಉಪಜೀವಿಸುತ್ತಿದ್ದರು.

ಗ್ರಾಮೋದ್ಯೋಗಗಳಾದ ನೇಯ್ಗೆ, ಕುಂಬಾರಿಕೆ, ಕಮ್ಮಾರಿಕೆ, ಬಡಿಗತನ, ಅಕ್ಕಸಾಲೆ, ಚರ್ಮಗಾರಿಕೆ, ಉಪ್ಪಾರಿಕೆ, ಗಾಣ ನಡೆಸುವದು, ಕರಕುಶಲ ಕೆಲಸ ಹೀಗೆ ಅನೇಕ ವೃತ್ತಿಗಳು ಹಳ್ಳಿಗಳಲ್ಲಿ ಸಾಮಾನ್ಯತಃ ಎಲ್ಲರಿಗೂ ಕೈಕೆಲಸವನ್ನು ಒದಗಿಸಬಲ್ಲವು. ಅವುಗಳಿಂದ ಪ್ರತಿಕುಟುಂಬವೂ ಯೋಗ್ಯ ದುಡಿಮೆಯನ್ನು ಮಾಡಿ ತನ್ನ ಉಪಜೀವನವನ್ನು ನಿರಾಯಾಸವಾಗಿ ನಡೆಯಿಸಬಲ್ಲುದು. ಮೇಲಾಗಿ ಪರಸ್ಪರರಲ್ಲಿ ಸಹಕಾರ, ಸೌಹಾರ್ದ, ಸಹನಶೀಲತೆ, ಪ್ರೀತಿ ವಿಶ್ವಾಸಗಳು ಹೆಚ್ಚುವ ಮೂಲಕ ಸಮತಾ ಭಾವನೆಯೊಂದಿಗೆ ಇಡಿಯ ಹಳ್ಳಿಯ ಜನರು ಐಕ್ಯತೆಯಿಂದ, ನೆಮ್ಮದಿಯಿಂದ ಇರಲು ಸಾಧ್ಯವಾಗುವದು. ಈ ರೀತಿ ಗ್ರಾಮೋದ್ಯೋಗಗಳಿಗೆ ಪ್ರೋತ್ಸಾಹ ನೀಡಿದರೆ ಲಕ್ಷಾಂತರ ಜನರಿಗೆ ಜೀವನೋಪಾಯ ಸಿಕ್ಕುತ್ತದೆ. ನಿರುದ್ಯೋಗ ಸಮಸ್ಯೆಯ ಪರಿಹಾರವೂ ಸುಧಾರಿಸುತ್ತದೆ. ಭಾರತದಂತಹ ಜನ ತುಂಬಿದ ರಾಷ್ಟ್ರಗಳಲ್ಲಿ ಯಂತ್ರಗಳ ಬಳಕೆ ಹೆಚ್ಚಾಗಬಾರದು. ಗ್ರಾಮೋದ್ಯೋಗಗಳೇ ಹೆಚ್ಚಾಗಿ ಪ್ರೋತ್ಸಾಹಿಸಲ್ಪಡಬೇಕು. ಆಗ ಮಾತ್ರ ರಾಷ್ಟ್ರ ಅಭಿವೃದ್ಧಿಯಾದೀತು.

4. ನಾಡಹಬ್ಬ

ಉತ್ತರ : (ಮುಖ್ಯಾಂಶಗಳು :– ನಾವು ಆಚರಿಸುವ ಹಲವಾರು ಹಬ್ಬಗಳು—ಹಬ್ಬಗಳ ಆಚರಣೆಯ ಮುಖ್ಯ ಉದ್ದೇಶ—ರಾಜಕೀಯ, ಧಾರ್ಮಿಕ, ಸಾಮಾಜಿಕ ಹಬ್ಬಗಳು—ನಾಡಹಬ್ಬ ಆಚರಣೆಯ ದಿನಗಳು—ದಸರಾ ಹಬ್ಬದಾಚರಣೆ—ಮೈಸೂರಿನಲ್ಲಿ ಜರುಗುವ ಜಂಬೂ ಸವಾರಿ—ಇತರ ಕಾರ್ಯಕ್ರಮಗಳು, ನಾಡಿನಾದ್ಯಂತ ನಾಡ ಹಬ್ಬ ಆಚರಿಸುವ ವಿಧಿ ವಿಧಾನ ಹಾಗೂ ಕಾರ್ಯಚಟುವಟಿಕೆಗಳು—ನಾಡಹಬ್ಬ ಆಚರಣೆಯಲ್ಲಿಯ ಹಿನ್ನೆಲೆ)

**ಪ್ರಶ್ನೆ 4. ನಿಮ್ಮ ಊರಿನಲ್ಲಿ ನಡೆಯುವ ರಥೋತ್ಸವದ ದಿನಾಂಕವನ್ನು ವೃತ್ತಪತ್ರಿಕೆಯಲ್ಲಿ ಪ್ರಕಟಿಸುವಂತೆ ಪತ್ರಿಕೆಯ ಸಂಪಾದಕರಿಗೆ ಒಂದು ಪತ್ರ ಬರೆಯಿರಿ.**

ಗದಗ
ದಿ...............

ಮಾನ್ಯ ಸಂಪಾದಕರು,
"ನವೋದಯ" ದಿನಪತ್ರಿಕೆ, ಗದಗ.
ಅವರಲ್ಲಿ ವಿಜ್ಞಾಪನೆಗಳು—
ಮಾನ್ಯರೇ,

ನಮ್ಮ ಗದಗ—ಬೆಟಗೇರಿ ಊರಿನ ಪ್ರಸಿದ್ಧ ಬನಶಂಕರಿ ದೇವಿ ರಥೋತ್ಸವವು ಪ್ರತಿವರುಷದಂತೆ ಈ ಸಲವೂ ಭಾರತ ಪೌರ್ಣಿಮೆಯಂದು ಇದೇ ತಿಂಗಳು.......ನೆಯ ದಿನಾಂಕ....... ವಾರದಂದು ವೈಭವದಿಂದ ನಡೆಯಲಿದೆ. ಭಕ್ತಾದಿಗಳು ಈ ರಥೋತ್ಸವದ ಕಾರ್ಯಕ್ರಮದಲ್ಲಿ ಭಾಗವಹಿಸಿ ಶ್ರೀ ದೇವಿಯ ಅನುಗ್ರಹಕ್ಕೆ ಪಾತ್ರರಾಗಲು ಈ ಮೂಲಕ ವಿನಂತಿಸುತ್ತೇನೆ. ಇಂತು.

..............
ದೇವಸ್ಥಾನದ ಟ್ರಸ್ಟಿಗಳ ಪರವಾಗಿ,

ಮೇಲ್ಕಂಡ ಸಮಾಚಾರವನ್ನು ತಮ್ಮ ದಿನಪತ್ರಿಕೆಯಲ್ಲಿ ಪ್ರಕಟಿಸಬೇಕಾಗಿ ವಿನಂತಿಸಿದೆ.

ಅಥವಾ

**ನೀವು ಓದಲು ಬಯಸಿದ ಒಂದು ಪುಸ್ತಕವನ್ನು ತರಿಸಿಕೊಳ್ಳಲು ಅನುಮತಿ ಕೇಳಿ ನಿಮ್ಮ ತಂದೆಗೆ ಒಂದು ಪತ್ರ ಬರೆಯಿರಿ.**

ಉತ್ತರ :

ಊರು............
ವಿಳಾಸ.............
ದಿನಾಂಕ............

ಪೂಜ್ಯ ತೀರ್ಥರೂಪರವರ ಪಾದಗಳಿಗೆ—

ತಮ್ಮ ಚಿ..........ನು ಮಾಡುವ ಅನಂತ ಸಾಷ್ಟಾಂಗ ಪ್ರಣಾಮಗಳು ಉ. ಕು. ತರುವಾಯ ಇಲ್ಲಿ ನನ್ನ ಅಭ್ಯಾಸವೂ ಸರಿಯಾಗಿ ನಡದಿದೆ. ಆರೋಗ್ಯವಾಗಿರುತ್ತೇನೆ. ಈಗ ನನಗೆ ಅಭ್ಯಾಸಕ್ಕೆ ಇಂಗ್ಲೀಷ—ಕನ್ನಡ ನಿಘಂಟು ಅವಶ್ಯಬೇಕಾಗಿದೆ. ಅದರ ಬೆಲೆ ಇಪ್ಪತ್ತು ರೂಪಾಯಿಗಳು, ಕಾರಣ ನೀವು ಅನುಮತಿಕೊಟ್ಟು, ಕೂಡಲೇ ಹಣವನ್ನು ಎಂ. ಓ. ಮೂಲಕ ಕಳಿಸಿಕೊಡಲು ಪ್ರಾರ್ಥಿಸುತ್ತೇನೆ. ಮನೆಯಲ್ಲಿ ಮಾತೃ ಶ್ರೀಯವರಿಗೆ ನನ್ನ ಅನಂತ ಪ್ರಣಾಮಗಳು, ಕಿರಿಯರಿಗೆ ನನ್ನ ಶುಭಾಶೀರ್ವಾದಗಳು. ಅಲ್ಲಿ ಸರ್ವರ ಕ್ಷೇಮ ಸಮಾಚಾರಕ್ಕೆ ತಿಳಿಸುತ್ತಿರಬೇಕು. ಇತಿ ಸಾ. ನಮಸ್ಕಾರಗಳು.

ತಮ್ಮ ಪ್ರೀತಿಯ ಮಗ
..............

**ಪ್ರಶ್ನೆ 5. ಇಲ್ಲಿ ಬಿಟ್ಟಿರುವ ಸ್ಥಳಗಳನ್ನು ಯೋಗ್ಯ ಶಬ್ದಗಳಿಂದ ತುಂಬಿರಿ.**

ಉತ್ತರ : 1 ತಂಗಿಗೆ ಪತ್ರ ಬರೆದು ಮುಗಿಸುವಾಗಿನ ಒಕ್ಕಣೆ........................ ಇಂತು ಆಶೀರ್ವಾದಗಳು.

2 ಛೇ, ನಿನ್ನ ಭಾವನೆ ಸರಿಯಲ್ಲ ಅವನು ಒಳ್ಳೆಯವನು.

ಛೇ ! ನಿನ್ನ ಭಾವನೆ ಸರಿಯಲ್ಲ. ಅವನು ಒಳ್ಳೆಯವನು.

3 "ಫಾಂಗ್ ಲಾ" ಇದರ ಅರ್ಥ, ಪರ್ಷಾ ಭಾಷೆಯಲ್ಲಿ...... ಎಂದು. ಹಿಮದ ಕಣಿವೆ.

4 ಜಗದೀಶಚಂದ್ರರು ಜನ್ಮತಾಳಿದ್ದು... ಎಂಬ ಗ್ರಾಮದಲ್ಲಿ ರಾರಿಖಿಲ್.

5 "ಹಣವಂತ" ಎಂಬುದು....... ನಾಮಪದ. ತದ್ಧಿತಾಂತ.

ಪ್ರಶ್ನೆ 6. ಈ ಪದ್ಯವನ್ನು ಓದಿಕೊಂಡು ಅದರ ಕೆಳಗಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

ವನಸುವದೊಲೆನ್ನ ಜೀ
ವನವು ವಿಕಸಿಸುವಂತೆ
ಮನವ ನಸುಗೊಳಿಸು ಹೇ ದೇವ,
ಜನಕೆ ಸಂತಸನೀವ
ಘನನು ನಾನೆಂದೆಂಬ
ಎಣಿಕೆ ತೋರದೆ ಜಗದ ಪೊಗಳಿಕೆಗೆ ಬಾಯ್ಬಿಡದೆ
ಕಾನನದಿ ಮಲ್ಲಿಗೆಯು
ಮೌನದಿಂ ಬಿರಿದು ನಿಜ
ಸೌರಭವಸೂಸಿ ನಲವಿಂ ।
ತಾನೆಲೆಯ ಮಿಂತಿರ್ದು
ದೀನತೆಯ ತೋರಿ ಅಭಿ
ಮಾನವನು ತೊರೆದು ಕೃತಕೃತ್ಯತೆಯ ಪಡೆವಂತೆ ॥
ಉಪಕಾರಿ ನಾನು ಎ
ನ್ನುವ ಕ್ಷತ್ರಿಯ ಜಗಕೆಂಬ
ವಿಪರೀತ ಮತಿಯ ನುಳಿದು
ವಿಪುಲಾಶ್ರಯವ ನೀವ
ಸುಫಲ ಸುಮಭರಿತ ಪಾ
ದಪದಂತೆ ನೈಜಮಾದೊಲ್ಪಿನಿಂ ಬಾಳ್ವವೊಲು॥

ಪ್ರಶ್ನೆ 1. ಕವಿಯು ಹೇಗೆ ಬದುಕಬೇಕೆಂದು ದೇವರನ್ನು ಕೇಳಿಕೊಂಡಿದ್ದಾನೆ ?

ಉತ್ತರ : ವನಸುಮದ ಹಾಗೆ ತನ್ನ ಜೀವನವು ವಿಕಾಸಗೊಳ್ಳಬೇಕೆಂದು ಕವಿಯು ದೇವರನ್ನು ಕೇಳಿದ್ದಾನೆ.

2 ಬಾಳಿನಲ್ಲಿ ಕೃತಕೃತ್ಯತೆಯನ್ನು ಪಡೆಯುವದು ಹೇಗೆ ?

ದೀನನಾಗಿ, ದುರಭಿಮಾನವಿಲ್ಲದ ಶಾಂತ, ನಿರಾಡಂಬರ ಜೀವನ ನಡೆಯಿಸುವದರಿಂದಲೇ ಬಾಳಿನಲ್ಲಿ ಕೃತಕೃತ್ಯತೆಯನ್ನು ಪಡೆಯಲು ಸಾಧ್ಯ.

3 ವಿಪರೀತ ಮತಿಯನುಳಿದು ಬದುಕುವದು ಎಂತು ?

ತಾನೊಬ್ಬ ದೊಡ್ಡ ಉಪಕಾರಿ; ತನ್ನಿಂದ ಜಗತ್ತಿಗೆ ತುಂಬ ಉಪಯೋಗ ಇದೆ ಎಂಬ ಅಹಂಕಾರ ಮನುಷ್ಯನಿಗಿರಬಾರದು. ಮರವು ಜನರಿಗೂ, ಪ್ರಾಣಿಗಳೂ ಆಶ್ರಯ ಕೊಡುವದಲ್ಲದೆ ಫಲಪುಷ್ಪಗಳನ್ನೂ ಕೊಡುತ್ತದೆ. ಆದರೂ ಅದರದು ನಿರಾಡಂಬರ ಜೀವನ. ಅದರಂತೆ. ತನ್ನ ಜೀವನವೂ ನಮ್ರತೆ, ದೈನ್ಯತೆಗಳಿಂದ ಕೂಡಿದ್ದು ನಿರಹಂಕಾರಿಯಾಗಿ ಇರಬೇಕು ಎಂಬುದು ಕವಿಯ ಆಶಯ.

4 ಈ ಪದ್ಯಕ್ಕೆ ಸೂಕ್ತ ತಲೆ ಬರಹವನ್ನು ಕೊಡಿ.
"ವನಸುಮ" ಇದರ ತಲೆ ಬರಹ.

ಪ್ರಶ್ನೆ 7. ಇವುಗಳಲ್ಲಿ ಒಂದನ್ನು ಏಳೆಂಟು ವಾಕ್ಯಗಳಲ್ಲಿ ವಿಸ್ತರಿಸಿ ಬರೆಯಿರಿ.

1. ಏನು ಬೇಡಿದರೊಬ್ಬ ದಾನಿಯನ್ನು ಬೇಡು; ದೀನನಾ ಬೇಡಿದೊಡೆ ಆ ದೀನ ಏನು ಕೊಟ್ಟಾನು ?

ಉತ್ತರ : ಯಾವ ಕೆಲಸವನ್ನು ಮಾಡಿದರೂ ಪಾತ್ರಾಪಾತ್ರವನ್ನರಿತು ಮಾಡಬೇಕು- ಯಾರಲ್ಲಿ ಅರ್ಹತೆ ಇದೆಯೋ ಅಂಥವರಿಂದ ಕಾರ್ಯ ಮಾಡಿಸಿಕೊಳ್ಳಬೇಕು. ದಾನವನ್ನು ಬೇಡುವಾಗ ದಾನವನ್ನು ಕೊಡಲು ಸಮರ್ಥನಿರುವವನನ್ನು ಹಾಗೂ ಅಂಥ ಮನಸ್ಸಿದ್ದವನನ್ನು ಬೇಡಬೇಕು, ಅವನು ದಾನಿಯಾಗಿರಬೇಕು. ಆಗ ಮಾತ್ರ ದಾನದೊರೆಯಬಲ್ಲದು. ಸಾಮರ್ಥ್ಯವಿಲ್ಲದ ದೀನ ದರಿದ್ರನನ್ನು ಬೇಡಿದರೆ ಅವನೆಲ್ಲಿಂದ ದಾನ ಕೊಡಬೇಕು. ಒಂದು ವೇಳೆ ಮನಸ್ಸಿದ್ದರೂ ಸಾಮರ್ಥ್ಯಬೇಕಲ್ಲವೇ ಆದ್ದರಿಂದ ಅರ್ಹನಾದವನನ್ನು ಬೇಡಬೇಕು.

2 ಊರು ಸೂರೆ ಹೋದ ಮೇಲೆ ಹೆಬ್ಬಾಗಿಲಿಕ್ಕಿದರು.

ಉತ್ತರ : ಯಾವ ಕೆಲಸವನ್ನಾದರೂ ಸಮಯವರಿತು ಮಾಡಬೇಕು. ಮುಂಜಾಗ್ರತೆಯಿಂದ ಯೋಚಿಸಿ ಮಾಡುವ ಕಾರ್ಯ ಹೆಚ್ಚು ಫಲಕಾರಿಯಾಗಬಲ್ಲದು. ಬೀಜ ಬಿತ್ತುವ ಮುಂಚೆಯೂ, ಬೀಜ ಒಣಗಿ ಹೋದ ಮೇಲೂ ಮಳೆ ಹೊಯ್ದರೆ ಏನು ಲಾಭ ? ಅದರಿಂದ ಹಾನಿಯೇ ತಟ್ಟುವದು. ಹಾಗೆಯೇ ಹಿಂದಿನ ಕಾಲದಲ್ಲಿ ನಗರಗಳಿಗೆ ರಾಜರು ಕಟ್ಟಿಸಿದ ಕೋಟೆ-ಕೊತ್ತಲಗಳಿರುತ್ತಿದ್ದವು. ಅವುಗಳಿಗೆ ಬರ-ಹೋಗಲು ಹೆಬ್ಬಾಗಿಲುಗಳಿರುತ್ತಿದ್ದವು. ಅಂಥವುಗಳನ್ನು ಆಕಸ್ಮಾತ್

ಕಳ್ಳರೋ, ಶತ್ರುಗಳೋ ನುಗ್ಗಿ ಕೊಳ್ಳೆಹೊಡೆದುಕೊಂಡು ಹೋದ ಮೇಲೆ ಹೆಬ್ಬಾಗಿಲನ್ನು ಬಂದು ಮಾಡಿದರೆ ಯಾವ ಲಾಭವಾದೀತು? ಮೊದಲೇ ಎಚ್ಚರಿಕೆಯಿಂದ ಸೂಕ್ತ ಕ್ರಮ ಕೈಕೊಳ್ಳುವದು ಯೋಗ್ಯವಾದುದು.

# ಕನ್ನಡ

**ಎಪ್ರೀಲ ೧೯೮೫** **ಪ್ರಥಮ ಪತ್ರಿಕೆ**

**ಅವಧಿ : 2॥ ಗಂಟೆ** **ಅಂಕಗಳು : 100**

**ಪ್ರಶ್ನೆ 1. ಕೆಳಗಿನ ಪ್ರಶ್ನೆಗಳಲ್ಲಿ ಒಂದೊಂದು ಪುಟಕ್ಕೆ ಮೀರದಂತೆ ಯಾವುದಾದರೂ ಮೂರು ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

**1. ದುರ್ಯೋಧನನ ತೊಡೆ ಮುರಿಯಲು ಕೃಷ್ಣನು ಹೂಡಿದ ತಂತ್ರವೇನು ?**

**ಉತ್ತರ :** ಭೀಮ–ದುರ್ಯೋಧನರ ನಡುವೆ ಗದಾಯುದ್ಧ ಬಹಳ ಹೊತ್ತು ನಡೆಯಿತು. ಅದನ್ನು ನೋಡಿ ಕೃಷ್ಣನು ಅರ್ಜುನನೊಡನೆ—"ಭೀಮನು ದುರ್ಯೋಧನನ ತೊಡೆ ಮುರಿಯುತ್ತೇನೆಂದು ಪ್ರತಿಜ್ಞೆ ಮಾಡಿದ್ದಾನೆ. ಅವನು ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಳ್ಳಬೇಕು. ತನ್ನ ಬಲವನ್ನು ನಂಬಿಕೊಂಡು ನ್ಯಾಯದಿಂದಲೇ ಯುದ್ಧ ಮಾಡುತ್ತಿದ್ದರೆ, ಇದು ಸಾಧ್ಯವಾಗುವದಿಲ್ಲ. ಮೋಸಗಾರನನ್ನು ಮೋಸದಿಂದಲೇ ಜಯಿಸಬೇಕು. ಇಲ್ಲದಿದ್ದರೆ ಯುಧಿಷ್ಠಿರನು ಸಂಕಟಕ್ಕೆ ಸಿಕ್ಕು ಬೀಳುತ್ತಾನೆ. ಸೋತು ಬಂದು ಜೀವದ ಮೇಲಣ ಆಶೆಯಿಂದ ಯುದ್ಧ ಮಾಡುತ್ತಿರುವವರು ಆಶೆಯಲ್ಲವನ್ನೂ ಬಿಟ್ಟು ಒಮ್ಮನಸ್ಸಿನಿಂದ ಯುದ್ಧ ಮಾಡುತ್ತಿದ್ದಾರೆ. ಅಂಥವರೊಡನೆ ಹೋರಾಡುವದು ಮಹಾಕಷ್ಟ ಆದ್ದರಿಂದ ಈಗ ಭೀಮನು ಅನ್ಯಾಯದಿಂದಲಾದರೂ ದುರ್ಯೋಧನನನ್ನು ಕೊಲ್ಲದಿದ್ದರೆ ನಮಗೆಲ್ಲರಿಗೂ ಕೌರವನೇ ರಾಜನಾಗುವದು ಖಂಡಿತ" ಎಂದನು.

ಈ ಮಾತನ್ನು ಕೇಳಿದ ಅರ್ಜುನನ್ನು ಭೀಮನಿಗೆ ಕಾಣುವ ಹಾಗೆ ತನ್ನ ಎಡದ ತೊಡೆಯನ್ನು ತಟ್ಟಿ ತೋರಿಸಿದನು. ಅದನ್ನು ಅರ್ಥ ಮಾಡಿಕೊಂಡ ಭೀಮನು ಇದೆಲ್ಲ ಕೃಷ್ಣನ ತಂತ್ರವೇ ಎಂದು ಮನಗಂಡು ಆತನ ಹಿತವಚನದಂತೆ ನಡೆಯುವದೇ ಈಗ ಸಮಯವೆಂದು ಭಾವಿಸಿ ಎದುರಾಳಿ ದುರ್ಯೋಧನನೊಡನೆ ಭೀಕರವಾಗಿ ಗದಾಯುದ್ಧ ಮುಂದುವರೆಸುವನು. ಸಮಯ ಸಾಧಿಸಿ ಭೀಮನು ದುರ್ಯೋಧನನ ಎಡದ ತೊಡೆಗೆ ಗುರಿಯಿಟ್ಟು ಬಲವಾದ ಪ್ರಹಾರ ಮಾಡಿದನು. ಆಗಲೇ ಆತನು ತೊಡೆ ಮುರಿದು ಭೂಮಿಗೆ ಬಿದ್ದನು. ಇಲ್ಲಿ ಕೃಷ್ಣನ ತಂತ್ರವನ್ನು ಕಾಣಬಹುದು.

**2. ಗ್ರಾಮದ ಜನರು ಹುಲಿ ಬೇಟೆಗೆ ಹೊರಟ ಸಂಭ್ರಮ**

**ಉತ್ತರ :** ಮರುದಿವಸ ಗ್ರಾಮದ ಜನರೆಲ್ಲ ಒಟ್ಟುಗೂಡಿ ಆ ಹುಲಿಯನ್ನು ಕೊಲ್ಲಲೇಬೇಕೆಂದು ಪ್ರತಿಜ್ಞೆ ಮಾಡಿದರು. ಊರಲ್ಲಿದ್ದ ಬೇಟೆಗಾರರು, ನಾಯಿಗಳು, ತಿರಿಲೋಕ್, ಕತ್ತಿ, ಢೋಲು, ತಮಟೆ, ಕೊಂಬು, ಕಹಳೆ ಮೊದಲಾದ ವಾದ್ಯ ಹಾಗೂ ಆಯುಧಗಳನ್ನು ಹಿಡಿದುಕೊಂಡು ಕಾಡಿಗೆ ನುಗ್ಗಿದರು. ನಾಯಿಗಳು ಬಗುಳಿದವು. ತಮಟೆ, ಡೋಲು, ಕೊಂಬು, ಕಹಳೆಗಳ ನಾದದಿಂದ ಕಾಡಿನಲ್ಲಿ ಅಶಾಂತ ವಾತಾವರಣ ನಿರ್ಮಾಣವಾಯಿತು. ಚಿಕ್ಕ ಪುಟ್ಟ ಕಾಡು ಪ್ರಾಣಿಗಳು, ಜಿಂಕೆ,–ಕಡವೆ, ಸಾರಂಗ ಮೊದಲಾದವು ಜೀವಭಯದಿಂದ ದಿಕ್ಕಾಪಾಲಾಗಿ ಓಡಿದವು. ಆದರೆ ಬೇಟೆಗಾರರೆಲ್ಲ ಏಕ ಚಿತ್ತದಿಂದ ಹುಲಿಯನ್ನೇ ಕಾಯುತ್ತಿದ್ದರು.

ಲಕ್ಕು ಮತ್ತು ಹೆಬ್ಬುಲಿ ಕಾದಾಡಿದ ಸ್ಥಳಕ್ಕೆ ಬೇಟೆಗಾರರು ಬಂದಾಗ ಹೊತ್ತು ನೆತ್ತಿಗೇರಿತ್ತು. ಹುಲಿಯ ಸುಳಿವೇ ಸಿಗದಾಗಲು ಅವರೆಲ್ಲ ತಮ್ಮ ಜತೆ ತಂದಿದ್ದ ಆಹಾರವನ್ನು ಬಿಚ್ಚಿ ತಿನ್ನಲು ಕುಳಿತರು. ಕೆಲವರು ಹಾಗೆಯೇ ದಣುವಾರಿಸಿಕೊಳ್ಳಲು ಒರಗಿದರು. ಸ್ವಲ್ಪ ದೂರದಲ್ಲಿ ಒಂದು ನಾಯಿಯು ಅಂಜಿ ಬೊಗಳ ತೊಡಗಿತು. ಉಳಿದ ನಾಯಿಗಳೂ ಓಡಿ ಹೋಗಿ ಒಟ್ಟಿಗೆ ಕಲೆತು ಒಣಗಿ ಬಿದ್ದ ದೊಡ್ಡ ಮರದಡಿಯತ್ತ ಮುಖ ಮಾಡಿ ಬೊಗಳಹತ್ತಿದವು. ಆಗ ಬೇಟೆಗಾರರು ಎದ್ದು ಸುಳಿವನ್ನು ಹಿಡಿದು ಅನ್ವೇಷಣೆ ಮಾಡುತ್ತ ಸಮೀಪಿಸಿದಾಗ ಹುಲಿಯೊಂದು ಸತ್ತು ಬಿದ್ದಿತ್ತು. ಲಕ್ಕುವಿನ ಮುರಿದಕೊಂಬು ಅದರ ದೇಹದಲ್ಲಿ ನೆಟ್ಟಿತ್ತು. ಹುಲಿ ಲಕ್ಕುವಿನಿಂದಲೇ ಸಾವನ್ನಪ್ಪಿತ್ತು. ಇದನ್ನೆಲ್ಲ ಕಂಡ ಬೇಟೆಗಾರರು ಲಕ್ಕುವಿನ ವಿಜಯಕ್ಕೆ ಸಂಭ್ರಮದಿಂದ ಕುಣಿದಾಡಿ ಸತ್ತ ಹುಲಿಯನ್ನು ಹೊತ್ತು ಊರ ಕಡೆಗೆ ನಡೆದರು.

**3. ಕೈಲಾಸ ದೇವಾಲಯದ ಮಹತ್ವ.**

**ಉತ್ತರ :** ಎಲ್ಲೋರಾದ ದೇವಾಲಯಗಳಲ್ಲೆಲ್ಲಾ ಕೈಲಾಸ ದೇವಾಲಯ ಅತ್ಯಂತ ಪ್ರಮುಖವೂ, ಸುಂದರವೂ ಆಗಿದೆ. ಒಂದೇ ಬಂಡೆಯಲ್ಲಿ ಕೊರೆದ ಇಂಥ ಶಿಲ್ಪ ಜಗತ್ತಿನಲ್ಲಿ ಮತ್ತೆಲ್ಲೂ ಕಾಣಬರುವದಿಲ್ಲ. ಇದನ್ನು ಸುಮಾರು ಕ್ರಿ. ಶ. 730 ರಲ್ಲಿ ರಾಷ್ಟ್ರ ಕೂಟರ ದೊರೆಯಾದ ಕೃಷ್ಣನು ಇದನ್ನು

ಕೊರೆಯಿಸಿರಬಹುದು ಎಂದು ತಿಳಿಯುತ್ತದೆ. ಇದು ಹೆಚ್ಚಾಗಿ ದ್ರಾವಿಡ ಶೈಲಿಗೆ ಸೇರಿದುದು. ಒಂದು ಗುಡ್ಡದ ಬಂಡೆಯಲ್ಲಿ ಸುತ್ತಲೂ 230 ಗಜ ಉದ್ದವೂ 35 ಗಜ ಆಳವೂ ಇರುವ ದೊಡ್ಡ ಹಳ್ಳವನ್ನು ಕಡಿದು ಮಧ್ಯದಲ್ಲಿ ಉಳಿದ ಬಂಡೆಯಲ್ಲಿ ಗೋಪುರ, ಚಾವಣಿ, ಕಂಬಗಳು ಮೊದಲಾಗಿ ಸಾಂಗವಾಗಿ ಎರಡು ಅಂತಸ್ತಿನ ಶಿವಾಲಯವನ್ನು ಕೊರೆದಿರುವ ಸಾಹಸ ಅದ್ಭುತವಾದದು. ಅಂಗಳದ ಸುತ್ತಲಿರುವ ಕೈಸಾಲೆಯಲ್ಲಿ ಶಿವ, ವಿಷ್ಣು, ಶಕ್ತಿ ಮೊದಲಾದ ದೇವತೆಗಳ ವಿವಿಧ ಲೀಲೆಗಳನ್ನೂ, ದೇವಾಲಯದ ಪೀಠದ ಮೇಲೆ ಯುದ್ಧ ಮಾಡುತ್ತಿರುವ ಸುಂದರವಾದ ಆನೆಗಳು, ಶಾರ್ದೂಲಗಳು ಮೊದಲಾದುವನ್ನೂ, ದೇವಾಲಯದ ಮುಂದುಗಡೆ ನಂದಿ ಮಂಟಪವನ್ನೂ ಕೊರೆದಿದೆ. ಈ ಮಂಟಪದ ಬಳಿ ರಾಮಾಯಣ, ಮಹಾಭಾರತ ಮೊದಲಾದ ಕಥೆಗಳ ಶಿಲ್ಪಗಳಿವೆ. ಇವುಗಳಲ್ಲಿ ರಾವಣನು ಕೈಲಾಸ ಪರ್ವತವನ್ನು ಎತ್ತುವ ಚಿತ್ರವೊಂದು ವಿಸ್ಮಯವನ್ನುಂಟು ಮಾಡುತ್ತದೆ.

ದೇವಾಲಯದ ಬಿಳಿಗೋಡೆಯ ಗಚ್ಚಿನ ಮೇಲೆ ಹಸಿರು ಬಣ್ಣದ ಕೆಲವು ಚಿತ್ರಗಳು ಮಾತ್ರ ಇವೆ. ಆಲಯದ ನವರಂಗದಲ್ಲಿ ಹದಿನಾರು ದೊಡ್ಡ ಕಂಬಗಳೂ, ಅಂತರಾಳದ ಚಾವಣಿಯಲ್ಲಿ ಬ್ರಹ್ಮ ವಿಷ್ಣು ಸಮೇತಳಾದ ಅನ್ನಪೂರ್ಣಾದೇವಿಯೂ, ಗರ್ಭಗುಡಿಯಲ್ಲಿ ಬಂಡೆಯಲ್ಲೇ ಕೆತ್ತಿದ ಲಿಂಗವೂ, ಅಂಗಳದ ಎರಡೂ ಬದಿಗಳಲ್ಲೂ ಬಂಡೆಯಲ್ಲಿ ಕೆತ್ತಿದ ಸುಂದರವಾದ ಆನೆಗಳೂ, ದೀಪಸ್ತಂಭವೂ ಕೈಲಾಸ ದೇವಾಲಯದ ಕೀರ್ತಿಯನ್ನು ಜಗತ್ತಿನಲ್ಲಿ ಹೆಚ್ಚಿಸಿವೆ. ಸಣ್ಣ ಕೈಲಾಸ ಎಂಬುದೂ ಇದೆ. ಇದು ಜೈನ ದೇವಾಲಯವಾಗಿದ್ದು, ದೊಡ್ಡ ಕೈಲಾಸ ದೇವಾಲಯವನ್ನು ಅನುಕರಿಸಿದಂತಿದೆ. ಇಲ್ಲಿನ ಶಿಲ್ಪದಲ್ಲಿ ಪಾರ್ಶ್ವನಾಥ, ಗೊಮ್ಮಟ, ಶಚೀಸಮೇತನಾದ ಇಂದ್ರ, ಗರ್ಭಗೃಹದಲ್ಲಿ ಸಿಂಹಾಸನಸ್ಥನಾದ ಮಹಾವೀರ ಮೊದಲಾದವು ಸುಂದರವಾಗಿವೆ. ಸುತ್ತಲಿನ ಗೋಡೆಗಳಲ್ಲಿ ತೀರ್ಥಂಕರರೂ, ದೊಡ್ಡದಾದ ಇಂದ್ರನ ಮೂರ್ತಿಯೂ ಇವೆ. ಎಲ್ಲೋರದ ಶಿಲ್ಪದಲ್ಲಿ ಕೈಲಾಸ ದೇವಾಲಯದ ಶಿಲ್ಪಕೃತಿ ಅದ್ಭುತವಾದುದು.

### 4. ಭಾಗೀರಥಿಯು ಕೆರೆಗೆ ಹಾರವಾದ ಬಗೆ

ಕೆರೆಗೆ ತನ್ನನ್ನು ಹಾರವಾಗಿ ಕೊಡುವ ವಿಚಾರ ಭಾಗೀರಥಿಗೆ ತಿಳಿಯಿತು. ಆಕೆ ಮೌನವಾಗಿ ಶೋಕಿಸಿದಳು. ತನ್ನ ಅಳಲನ್ನು ಯಾರಿಗೂ ತೋರಗೊಡಲಿಲ್ಲ. ತಂದೆ ತಾಯಿಗಳನ್ನು ಕಂಡು ಬರಲು ಅತ್ತೆ–ಮಾವಂದಿರ ಅನುಮತಿಯನ್ನು ಪಡೆದುಕೊಂಡು ತವರಿಗೆ ಬಂದಳು. ಆಕೆಯ ಬಾಡಿದ ಮುಖ ಹಾಗೂ ದುಃಖವನ್ನು ಕಂಡು ಕೇಳಿದರೆ ಅಡಕ್ಕೊಂದು ಸುಳ್ಳು ನೆಪ ಹೇಳಿದಳು. ತನ್ನ ಮನೆತನ, ಕುಲ–ಗೌರವಕ್ಕೆ ಚ್ಯುತಿ ಬರಬಾರದೆಂದು ಅವಳ ವಿಚಾರ. ತಂದೆ ತಾಯಿಗಳೂ ಸಮಯಕ್ಕೆ ಸರಿಯಾಗಿ ಸಮಾಧಾನದ ಮಾತು ಆಡಿದರು. ಅಲ್ಲಿಂದ ತನ್ನ ಅಕ್ಕನನ್ನು ಕಂಡು ಮಾತನಾಡಿದಳು. ಅವಳೂ ಸಹ ಸಮಾಧಾನ ಮಾಡಿದಳು.

ಭಾಗೀರಥಿ ತನ್ನ ಗೆಳತಿಯ ಬಳಿಗೆ ಹೋಗಿ ಕೆರೆಗೆ ತನ್ನನ್ನು ಹಾರ ಕೊಡುವ ನಿಜ ವಿಷಯವನ್ನು ತಿಳಿಸಿದಳು.ಅವಳು "ಕೊಟ್ಟರೆ ಕೊಡಲೇಳು; ಇಟ್ಟಂಗೆ ಇರಬೇಕು" ಎಂದು ಧೈರ್ಯ ಹೇಳಿದಳು. ಅವಳಿಗೂ ಮನಸ್ಸು ದೃಢವಾಯಿತು. ಬರಲಿರುವ ದುರಂತವನ್ನು ಎದುರಿಸಲು ಸಿದ್ಧಳಾದಳು. ಕೆರೆಗೆ ಹಾರಕೊಡುವ ದಿನ ಬಂತು. ಭಾಗೀರಥಿಯು ನೀರೆರೆದುಕೊಂಡು, ಮಡಿಯುಟ್ಟು ಸಿಂಗಾರ ಮಾಡಿಕೊಂಡು ಸಿದ್ಧಳಾದಳು. ಮನೆಯವರೆಲ್ಲ ಕೂಡಿಕೊಂಡು ಹೋಗಿ ಕೆರೆಗೆ ಪೂಜೆ ಮಾಡಿದರು. ಹೊರಟು ಬರುವಾಗ ಬಂಗಾರದ ಬಟ್ಟಲನ್ನು ಬೇಕೆಂದೇ ಬಿಟ್ಟು ಬಂದರು. ಅದನ್ನು ಮರೆತು ಬಂದುದಾಗಿ ಹೇಳಿ, ಆ ಬಟ್ಟಲನ್ನು ತರುವಂತೆ ಭಾಗೀರಥಿಗೆ ಹೇಳಿದರು. ಅವಳು ಅದನ್ನು ತೆಗೆದುಕೊಂಡು ಬರುತ್ತಿದ್ದಂತೆ ಗಂಗೆ ಉದ್ಭವವಾಗಿ ಮೇಲೆ ಉಕ್ಕಿ ಬರಲಾರಂಭಿಸಿದಳು. ಮೇಲೇರುವಷ್ಟರಲ್ಲಿ ಕೆರೆ ತುಂಬಿತು ಭಾಗೀರಥಿ ಕೆರೆಗೆ ಹಾರವಾದಳು. ತನ್ನ ಮಹಾತ್ಯಾಗ ಹಾಗೂ ಬಲಿದಾನ ಮಾಡಿದ ಕೀರ್ತಿಗೆ ಪಾತ್ರಳಾದಳು. ಭಾಗೀರಥಿಯು ತೋರಿದ ಧೈರ್ಯ, ಸಾಹಸ ಮತ್ತು ತ್ಯಾಗ ಉನ್ನತಮಟ್ಟದ್ದಾಗಿವೆ.

### 5. ಗುರುತ್ವ ಪೊಳ್ಳುಗಳು ಅಥವಾ ಲಗ್ರಾಂಜ್ ಬಿಂದುಗಳು.

ಉತ್ತರ : ಆಕಾಶವೆಂದರೆ ವಿವಿಧ ಕಾಯಗಳ ಗುರುತ್ವಾಕರ್ಷಣ ಬಲಗಳಿಂದ ಸೋಚಿತವಾಗಿರುವ ಸಮುದ್ರ. ಈ ಗುರುತ್ವ ಸಮುದ್ರದೊಳಗೆ ಜಲರಾಶಿಯಲ್ಲಿ ಗಾಳಿಗುಳ್ಳೆರುವಂತೆ ಕೆಲವು ಪೊಳ್ಳುಗಳಿರುತ್ತವೆ. ಇವುಗಳಿಗೆ ಗುರುತ್ವ ಪೊಳ್ಳುಗಳೆನ್ನುತ್ತಾರೆ. ಬೇರೆ ಬೇರೆ ಪ್ರಭಾವೀ ಆಕಾಶಕಾಯಗಳ ಗುರುತ್ವಾಕರ್ಷಣ ಬಲಗಳು ಪರಸ್ಪರ ರದ್ದುಗೊಂಡು ಗುರುತ್ವ ಪೊಳ್ಳುಗಳು ಉಂಟಾಗಿರುತ್ತವೆ. ಇವುಗಳ ಅಸ್ತಿತ್ವವನ್ನು ಮೊದಲು ಊಹಿಸಿದವನು ಲಗ್ರಾಂಜ್ ಆದ್ದರಿಂದ ಈ ಗುರುತ್ವಪೊಳ್ಳುಗಳನ್ನು ಲಗ್ರಾಂಜ್ ಬಿಂದುಗಳೆಂದೂ ಕರೆಯುವರು. ಕ್ರಿ. ಶ. 1736 ರಿಂದ 1817 ರ ವರೆಗೆ ಬದುಕಿದ್ದ ಜೋಸೇಫ್ ಲೂಯಿ ಲಗ್ರಾಂಜ್ ಗಣಿತಜ್ಞನಾಗಿದ್ದನು. ಲಗ್ರಾಂಜ್‌ನ ಇಂಗ್ಲೀಷ

ಮೊದಲಕ್ಷರ "L" ಆದುದರಿಂದ ಈ ಗುರುತ್ವಪೊಳ್ಳುಗಳನ್ನು 'L' ಎಂದೂ ಸೂಚಿಸುವರು. ಸೂರ್ಯ, ಚಂದ್ರ, ಭೂಮಿಗಳಿಗೆ ಸಂಬಂಧಿಸಿದಂತೆ ಲಗ್ರಾಂಜ್ ವಲಯಗಳು ಇವೆಯಂತೆ. ದ್ವೀಪ ಭಾಗಗಳನ್ನು ಚಂದ್ರನ ಮೇಲೆ ತಯಾರಿಸಿ, ಅವುಗಳನ್ನು ಲಗ್ರಾಂಜ್ ಪ್ರದೇಶಗಳಿಗೆ ಸಾಗಿಸಬಹುದು. ಮನುಷ್ಯ ಭೂಮಿಯಿಂದ ಆಕಾಶಕ್ಕೆ ಹಾರಿ ಹೋಗಿ ಕೆಲವೊಂದು ಕಾಲ ಅಲ್ಲಿದ್ದು ಮರಳಿ ಹಿಂತಿರುಗಬಹುದು.

ಪ್ರಶ್ನೆ 2. ಒಂದೊಂದು ಪುಟಕ್ಕೆ ಮೀರಿದಂತೆ ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡನ್ನು ಕುರಿತು ಉತ್ತರ ಬರೆಯಿರಿ.

1. ಕುವೆಂಪುರವರು ಬಣ್ಣಿಸಿರುವಂತೆ ಭಾದ್ರಪದ ಸುಪ್ರಭಾತದ ಸೊಬಗು.

ಉತ್ತರ : ಭಾದ್ರಪದ ಮಾಸವು ಮಳೆಗಾಲದಲ್ಲಿ ಬರುತ್ತದೆ. ಒಂದು ದಿನ ಮುಂಜಾನೆ ಕವಿಕಂಡ ನಿಸರ್ಗದ ಸೌಂದರ್ಯವನ್ನು ಈ ಕವನದಲ್ಲಿ ವರ್ಣಿಸುತ್ತಾನೆ. ನೆಲಮುಗಿಲುಗಳು ಒಂದುಗೂಡುವ ದಿಗಂತವನ್ನು ಕವಿ, ಕಣ್ಣಿನ ರೆಪ್ಪೆಗಳಿಗೆ ಹೋಲಿಸಿ, ಹಗಲಿನ ಕಣ್ಣು ತೆರೆಯುತ್ತಿತ್ತು. ಅಂದರೆ ಸೂರ್ಯೋದಯವಾಗುತ್ತಿತ್ತು ಎಂದು ಹೇಳುತ್ತಾನೆ. ಗಗನವೆಂಬ ಪಕ್ಷಿಯು ಮೋಡಗಳೆಂಬ ತನ್ನ ಗರಿಗಳನ್ನು ಕಾಯಿಸುತ್ತಿತ್ತು ಎಂದು ಹೋಲಿಸಿದ್ದಾನೆ. ಮಳೆಯಿಂದಾಗಿ ನೆಲವೆಲ್ಲ ಹಸಿರುಮಯವಾಗಿರುತ್ತದೆ. ಎಲ್ಲೆಡೆ ಸಸ್ಯ ಸಮೂಹ ಕಂಗೊಳಿಸುತ್ತದೆ. ಅದನ್ನು ನೋಡಿ ಭೂಮಿಯ ಮೈಯೆಲ್ಲ ಪಚ್ಚೆಯಂತೆ ಹಚ್ಚ ಹಸುರಾಗಿತ್ತು. ಕವಿಯ ಕಣ್ಣುಗಳು ಆ ಹಸಿರನ್ನು ಆಸ್ವಾದಿಸುತ್ತಿದ್ದವು. ಆ ಸೊಬಗಿನ ಸವಿಯನ್ನು ವರ್ಣಿಸುವಾಗ "ಜೇನು ತುಪ್ಪದಲ್ಲಿ ತೊಯ್ದು ಹಣ್ಣಿನಂತೆ" ಎಂಬ ಹೋಲಿಕೆಯನ್ನು ಕೊಡುತ್ತಾನೆ. ಸೂರ್ಯೋದಯದ ಆ ಸೊಬಗು ಅಂಥ ಅನಿರ್ವಚನೀಯ ಆನಂದವನ್ನು ಉಂಟುಮಾಡುತ್ತದೆ. ಆ ಮುಂಜಾವಿನ ಸೌಂದರ್ಯ ಇಲ್ಲಿ ಕವಿಗೆ ವಿಶ್ವಕವಿಯಾದ ಭಗವಂತನನ್ನು ಕಾಣುವಂತೆ ಮಾಡಿತ್ತು. ಕವಿ ಸೌಂದರ್ಯದ ಆರಾಧಕ "ಸತ್ಯಂ ಶಿವಂ ಸುಂದರಂ" ಎನ್ನುವಂತೆ, ಕವಿ ಸೌಂದರ್ಯದಲ್ಲಿ ಶಿವಸ್ವರೂಪವನ್ನು ಕಂಡೆನು, ಎಂದು ಕುವೆಂಪುರವರು ಬಣ್ಣಿಸಿರುತ್ತಾರೆ.

2. ಹಳಕಟ್ಟಿಯವರ ಉದಾತ್ತ ವ್ಯಕ್ತಿತ್ವವನ್ನು ಅಕಬರ ಅಲಿ ಹೇಗೆ ವರ್ಣಿಸಿದ್ದಾರೆ ?

ಉತ್ತರ : ಬೆಳವಲದ ನಾಡಿನಲ್ಲಿ ಈ ಹಿಂದೆ ಶಿವಶರಣರು ಬಿತ್ತಿದ ವಚನ, ನುಡಿಮುತ್ತು, ಮಾಣಿಕಗಳು ಮರೆಯಾದಾಗ ಅವುಗಳನ್ನು ನೆಲದ ಮರೆಯ ನಿಧಾನ ಹೊರತೆಗೆದಂತೆ ಸದ್ದು ಗದ್ದಲವಿಲ್ಲದೆ ಹೆಕ್ಕಿ ತೆಗೆದು, ಜನಕ್ಕೆ ನೀಡಿದ ಫ. ಗು. ಹಳಕಟ್ಟಿಯವರ ಉದಾತ್ತ ವ್ಯಕ್ತಿತ್ವ ಈ ಕವನದಲ್ಲಿ ವರ್ಣಿತವಾಗಿದೆ.

ಮುಂಗಾರು ಮಳೆ ಬೀಳುತ್ತಿದ್ದಂತೆ ಸದ್ದಿಲ್ಲದೆ ಕತ್ತೆತ್ತಿ ಮಿದುವಾದ ಹುಲ್ಲಿನಂತೆ ಹಳಕಟ್ಟಿಯವರಿದ್ದರು. ಅವರ ಗುಣ ಸ್ವಭಾವಗಳು ಅತಿನವಿರು; ರೇಶಿಮೆಯ ನಯ ಅವರ ಮಾತುಗಳಲ್ಲಿತ್ತು. ಹಳಕಟ್ಟಿಯವರು ತಮ್ಮ ಸಾಹಿತ್ಯ ಸೃಷ್ಟಿಯಿಂದ ಜನಮನವನ್ನು ಗೆದ್ದು ಸೂರೆಗೊಂಡರು. ಅವರ ಸಾಹಿತ್ಯವೆಂದರೆ ಕುಸುರಿನ ಕೆಲಸದ ಹಸಿರು ಬಾವುಟದಂತೆ; ಅದನ್ನವರು ಬಾನೆತ್ತರಕ್ಕೆ ಹಾರಿಸಿದರು. ಕನ್ನಡದ ಕೀರ್ತಿಯನ್ನು ಎಲ್ಲೆಡೆಯೂ ಹರಡಿ, ಕನ್ನಡಿಗರನ್ನು ತಟ್ಟಿ ಎಬ್ಬಿಸಿದರು.

ಬೆಳವಲನಾಡು ಶಿವಶರಣರ ಬೀಡು, ಅದು ಕ್ಷೀಣ ಪರಿಸ್ಥಿತಿಯಲ್ಲಿರುವದನ್ನು ನೋಡಿ ತುಂಬ ಮರುಗಿದರು. ಶಿವಶರಣರ ವಚನಾಮೃತಧಾರೆ ಆ ನಾಡಿನಲ್ಲಿ ಸುರಿದಿತ್ತು, ಶಿವಭಕ್ತಿಯನ್ನು ಹರಿಸಿತ್ತು. ಆದರೆ ಅದೆಲ್ಲ ಇಂದು ಬರಡಾಗಿತ್ತು. ಅದಕ್ಕಾಗಿ ಅವರು ಕಸಿವಿಸಿಗೊಂಡರು. ಅವುಗಳನ್ನು ಹೆಕ್ಕಿ ತೆಗೆಯಲು ಹೊರಟರು.

ಶುಭಪ್ರೇರಣೆಗೊಂಡು, ಉದಾತ್ತ ಧ್ಯೇಯದೊಂದಿಗೆ, ಕಾಯಕದ ಮಹತ್ವವನ್ನು ಸಾರಲು ಹಳಕಟ್ಟಿಯವರು ತಮ್ಮ ಸರ್ವಶಕ್ತಿಯನ್ನು ಸವೆಸಿದರು. ಬೆಳವಲು ನಾಡಿನ ನೆಲದಲ್ಲಿ ಹೂತು ಹೋದ, ವಚನಗಳೆಂಬ ಸಂಪತ್ತನ್ನು ಹೊರತೆಗೆಯುವದಕ್ಕಾಗಿ ತಮ್ಮ ಜೀವಮಾನವನ್ನೇ ಸವೆಸಿದರು. ಜನರ ಮನಸ್ಸುಗಳಲ್ಲಿ, ನೆನಪುಗಳಲ್ಲಿ ಆಳವಾಗಿ ಹೂತುಹೋಗಿದ್ದ ಆ ವಚನಗಳನ್ನು ಹುಡಿಕಿ ಹುಡುಕಿ ತೆಗೆದರು. ಅದೆಲ್ಲವನ್ನೂ ಕ್ರೋಢೀಕರಿಸಿ ಪ್ರಕಟಿಸಿ ಪುನರುಜ್ಜೀವನಗೊಳಿಸಿದರು. ಹಳಕಟ್ಟಿಯವರು ಗಂಧದ ಕೊರಡಿನಂತೆ ತಮ್ಮ ಜೀವನವನ್ನು ಸವೆಸಿ ಉಳಿದವರಿಗೆ ಅದರ ದಿವ್ಯ ಸುಗಂಧವನ್ನಿತ್ತರು. ಸದ್ದು ಗದ್ದಲ ಮಾಡದೇ ಮುನ್ನಡೆದು ಬಸವನ ಹುಳುವಿನ ಹಾಗೆ ಸಾಗಿದರು. ಉಳಿದವರಿಗೂ ಅದನ್ನೇ ಮಾರ್ಗದರ್ಶನ ಮಾಡಿದರು. ನಿಷ್ಕಾಮ ಸೇವೆಯೊಂದಿಗೆ ಮಹಾತ್ಕಾರ್ಯವನ್ನು ಸಾಧಿಸಿದರು. ಎಲೆಯ ಮರೆಯ ಕಾಯಿಯಂತಿದ್ದು ಅವರು ಮಾಡಿದ ಸಾಹಿತ್ಯ ಸೇವೆ ಅಪಾರವಾದುದು, ಸ್ತುತ್ಯವಾದುದು.

3. ವಚನಾಮೃತದಲ್ಲಿ ಒಡಮೂಡಿರುವ ನೀತಿ ತತ್ವ.

ಉತ್ತರ : ಹನ್ನೆರಡನೆಯ ಶತಮಾನದಲ್ಲಿ ತಲೆದೋರಿದ ವಚನ ಸಾಹಿತ್ಯವು ಒಂದು ಹೊಸಕ್ರಾಂತಿಯನ್ನೇ ಉಂಟು

ಮಾಡಿತು. ಶಿವಶರಣರು ಗೂಢವಾದ ಧಾರ್ಮಿಕ ಸಂಗತಿಗಳನ್ನು ಜನಸಾಮಾನ್ಯರ ಆಡು ಭಾಷೆಯಲ್ಲಿ ವಚನಗಳ ರೂಪದಲ್ಲಿ ರಚಿಸಿ ಪ್ರಚಾರಪಡಿಸಿದರು. ಈ ವಚನ ಸಾಹಿತ್ಯ ಬಹು ಜನಪ್ರಿಯ ವಾಯಿತು. ಜನರಲ್ಲಿಯ ದುರ್ಗುಣಗಳನ್ನು ದೂರಮಾಡಿ ಅವರಲ್ಲಿ ದೈವೀ ಪ್ರೇರಣೆ ಜಾಗ್ರತೆಗೊಂಡು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವದೇ ವಚನಗಳಸಾರ. ಇಲ್ಲಿ ಬಸವಣ್ಣ ಮತ್ತು ಅಕ್ಕ ಮಹಾದೇವಿ ಇವರ ವಚನಗಳನಾಯ್ದುಕೊಂಡಿದ್ದು ಅವುಗಳ ಸಾರಾಂಶ ಇಂತಿದೆ.

ಕಲ್ಲು ಎಷ್ಟು ಕಾಲ ನೀರಿನಲ್ಲಿಯೇ ಮುಳುಗಿದ್ದರೂ ಮೆತ್ತಗಾಗುವದಿಲ್ಲ. ಹಾಗೆಯೇ ಶಿವಭಕ್ತನಾದವನಿಗೆ ಮನಸ್ಸು ಮೃದುವಾಗಿ, ಶಿವಭಕ್ತಿ ಮೂಡದಿದ್ದರೆ ಜೀವನ ವ್ಯರ್ಥವಾಗುತ್ತದೆ. ಯಾರದೋ ನಿಧಿಯನ್ನು ಕಾಯುವ, ಅದನ್ನು ಅನುಭವಿಸುವ ಯೋಗ್ಯತೆ ಇಲ್ಲದ ಪಿಶಾಚಿಯ ಜೀವನದಂತೆ ತನ್ನ ಜೀವನವೂ ವ್ಯರ್ಥವಾಗುವದೆಂದು ಬಸವಣ್ಣನವರು ಹೇಳಿದ್ದಾರೆ.

ದಾರಿ ತಪ್ಪಿದ ಮಗು ತನ್ನ ತಾಯಿಯನ್ನು ಹುಡುಕುವ ಹಾಗೆ, ಹಿಂದಿನಿಂದ ಬೇರೆಯಾದ ಹಸು ತನ್ನ ಹಿಂಡನ್ನುಸೇರಲು ಬಯಸುವಂತೆ, ತಾವು ಪ್ರಪಂಚದ ಬಾಳಿಗೆ ಬಿದ್ದು ಶಿವಶರಣರ ಸಂಗದಿಂದ ದೂರವಾಗಿರುವದಾಗಿಯೂ, ಸೂರ್ಯನ ಬರವನ್ನೇ ಇದಿರು ನೋಡುವ ಕಮಲದಂತೆ ಶಿವಶರಣರ ಬರವಿಗೆ ತಾವೂ ಎದುರು ನೋಡುತ್ತಿರುವದಾಗಿಯೂ ಹೇಳುತ್ತಾರೆ. ಶರಣರ ಸಂಗದಿಂದ ಶಿವಭಕ್ತಿ ಹೆಚ್ಚಿ ಶಿವನ ಕೃಪೆಗೆ ಪಾತ್ರರಾಗಬಹುದು ಎಂಬುದೇ ಬಯಕೆ.

ಅಕ್ಕಮಹಾದೇವಿ ಶಿವಶರಣೆಯರಲ್ಲಿ ವೀರಾಗ್ರಣಿ, ಅವಳು ತನ್ನ ವಚನಗಳಲ್ಲಿ ಭಕ್ತಿಯ ಏಕನಿಷ್ಠೆ ಮತ್ತು ಚೆನ್ನಮಲ್ಲಿಕಾರ್ಜುನನ ಪರಿ ಇವುಗಳನ್ನು ವಿವರಿಸಿದ್ದಾಳೆ. ಚಂದನವನ್ನು ಕಡಿದು, ಕೊರೆದು, ತೇಯ್ದರೂ ಅದೂ ತನ್ನ ಮೂಲಗುಣವಾದ ಸುವಾಸನೆಯನ್ನು ಬಿಟ್ಟು ಕೊಡುವದಿಲ್ಲ. ಬಂಗಾರವನ್ನು ಕತ್ತರಿಸಿ, ತಿಕ್ಕಿದರೂ ಅದೂ ಕೂಡ ಎಂದೂ ಕಳಂಕ ಹೊಂದುವದಿಲ್ಲ. ಕಬ್ಬನ್ನು ತುಂಡರಿಸಿ, ಗಾಣದಲ್ಲಿ ಹಾಕಿ ತಿರುವಿ, ರಸವನ್ನು ಕುದಿಸಿ ಸಕ್ಕರ ಮಾಡಿದರೂ ಅದು ತನ್ನ ಸಿಹಿ ಗುಣವನ್ನು ಬಿಟ್ಟುಕೊಡುವದಿಲ್ಲ. ಅಂತೆಯೇ ದೃಢವಾದ, ಏಕನಿಷ್ಠರಾದ ಭಕ್ತರು ತಮ್ಮ ಭಕ್ತಿಯನ್ನು ಎಂಥ ಪ್ರಸಂಗ ಬಂದರೂ ಬಿಟ್ಟುಕೊಡುವದಿಲ್ಲ, ಎನ್ನುತ್ತಾಳೆ ಅಕ್ಕ ಮಹಾದೇವಿ.

ಕಿತ್ತಳೆ, ನಿಂಬೆ, ಮಾವು, ಮಾದ ಇವುಗಳಿಗೆಲ್ಲ ಹುಳಿ ನೀರನ್ನು ಹಣಿಸುವವರು ಯಾರು? ಕಬ್ಬು, ಬಾಳೆ, ಹಲಸು, ತೆಂಗು ಇವುಗಳಿಗೆ ಸಿಹಿ ನೀರನ್ನು ಯಾರು ಎರೆದರು? ಬತ್ತಕ್ಕೆ ಅನ್ನವಾಗುವಂಥ ನೀರು ಹಣಿಸಿದವರು ಯಾರು? ಮರುಗ, ಮಲ್ಲಿಗೆ, ಪಚ್ಚೆ ಮಡಿವಾಳ ಮೊದಲಾದ ಸುಗಂಧ ಸಸ್ಯಗಳಿಗೆ ಪರಿಮಳದ ನೀರನ್ನು ಯಾರು ಹಾಕಿದರು? ಹೀಗೆ ಇವೆಲ್ಲವುಗಳಿಗಿದ್ದ ನೀರು ಒಂದೇ, ನೆಲ ಒಂದೇ, ಆಕಾಶ ಒಂದೇ, ನೀರು ಹಲವು ದ್ರವ್ಯಗಳಿಂದ ಕೂಡಿಕೊಂಡು ಬೇರೆ ಬೇರೆ ಆಗುವ ಹಾಗೆ ನನ್ನ ದೇವ ಚೆನ್ನ ಮಲ್ಲಿಕಾರ್ಜುನನು ಹಲವು ಲೋಕಗಳನ್ನು ತಾನೇ ಒಳಗೊಂಡಿದ್ದರೂ ತಾನು ಬೇರೆ ಬೇರೆಯಾಗಿ ಕಾಣುತ್ತಾನೆ ಎಲ್ಲೆಲ್ಲೂ ಮಲ್ಲಿಕಾರ್ಜುನನನ್ನೇ ಕಾಣುತ್ತಿದ್ದವಳು ಅಕ್ಕಮಹಾದೇವಿ.

**4. ಸಿದ್ಧರಾಮನಿಗೆ ಮಲ್ಲಿನಾಥನು ತೋರಿದ ನಿಜ ರೂಪ.**

**ಉತ್ತರ :** ಸಿದ್ಧರಾಮನಿಗೆ ಹೊಲದಲ್ಲಿ ಶಿವನು ತೋರಿದ್ದ ನಿಜರೂಪದ ಲಕ್ಷಣಗಳನ್ನು ಆತನೇ ವಿವರಿಸಿದ ರೀತಿ ಎಂದರೆ– ಮುಡಿಯಲ್ಲಿ ಚಂದ್ರನನ್ನು, ಜಡೆಯಲ್ಲಿ ಗಂಗೆಯನ್ನು ಧರಿಸಿದವನು, ಐದು ಮುಖಗಳುಳ್ಳವನು. ಹತ್ತು ಕೈಗಳನ್ನು ಹೊಂದಿದ ಕಪ್ಪು ಗೊರಳನು. ಹಣೆಯಲ್ಲಿ ಕಣ್ಣುಳ್ಳ ತ್ರಿನೇತ್ರನು, ಸರ್ಪಾಭರಣಗಳನ್ನು ಧರಿಸಿದವನು. ಕಣ್ಣ ಕಿಡಿಯಿಂದ ದಶಪುರವನ್ನು, ಮನ್ಮಥನನ್ನು ಸುಟ್ಟು ಭಸ್ಮವನ್ನು ಲೇಪಿಸಿಕೊಂಡವನು. ವಿಷಕಂಠನು, ಆನೆಯ ಚರ್ಮವನ್ನು ವಸ್ತ್ರವನ್ನಾಗಿ ಧರಿಸಿದವನು. ಪತ್ನಿಯಾದ ಪಾರ್ವತಿಯನ್ನು ಎಡಬದಿಯಲ್ಲಿ ಕುಳ್ಳಿರಿಸಿಕೊಂಡ ಅರ್ಧನಾರೀಶ್ವರನು, ವೃಷಭವಾಹನನು. ಈ ಎಲ್ಲ ಲಕ್ಷಣಗಳುಳ್ಳ ಮಲ್ಲಯ್ಯನನ್ನು ಸಿದ್ಧರಾಮನು ಕಂಡಿದ್ದನು. ಮಲ್ಲಿನಾಥನನ್ನು ಕಾಣಲು ಹಂಬಲಿಸುತ್ತಿದ್ದಾಗ ಈ ಲಕ್ಷಣಗಳೆಲ್ಲವನ್ನು ವಿವರಿಸುತ್ತಾನೆ.

**ಪ್ರಶ್ನೆ 3. (ಅ) ಕೆಳಗಿನ ಪದ್ಯದ ಸಾರಾಂಶವನ್ನು ಬರೆಯಿರಿ.**

ವೀರ ರವಿಸುತನೊಂದು ದಿನದಲಿ
ವಾರದಲಿ ಪರಿತೋಷಮಿಗೆ ಭಾ–
ಗೀರಥೀ ತೀರದಲಿ ತಾತಂರ್ಯವನು ಕೊಡುತ
ಸೌರಮಂತ್ರವ ಜಪಿಸುತಿರ ಲೌ–
ದಾರಿಯಥ ಸುರತರುವ ಕುಂತೀ–
ನಾರಿ ಕಾಣಲು ಬಂದಳಾತ್ಮಜನಿದ್ದ ನದಿಗಾಗಿ"

**ಉತ್ತರ :** ಸೂರ್ಯನ ಪುತ್ರನಾದ ಕರ್ಣನು ಒಂದು ರವಿವಾರದ ದಿನ ಭಾಗೀರಥೀ ನದೀ ತೀರದಲ್ಲಿ ಅತ್ಯಂತ ಸಂತೋಷ

ದಿಂದ ತನ್ನ ತಂದೆಯಾದ ಸೂರ್ಯ ದೇವಗೆ ಅರ್ಘ್ಯವನ್ನು ಕೊಡುತ್ತ ಸೂರ್ಯ ಮಂತ್ರವನ್ನು ಜಪಿಸುತ್ತಿದ್ದನು. ಆಗ ಮಹಾದಾನಿಯಾದ ಆ ಕರ್ಣನನ್ನು ನೋಡಲು ಕುಂತಿಯ ಮಗ ಸಿದ್ಧ ನದಿಯ ಬಳಿಗೆ ಬಂದಳು.

(ಬ) ಕೆಳಗಿನ ಹಳಗನ್ನಡ ಗದ್ಯಭಾಗವನ್ನು ಹೊಸ ಗನ್ನಡಕ್ಕೆ ಅನುವಾದಿಸಿರಿ.

ಅನ್ನೆಗಮೊರ್ಮೆ ರಾಯನೊಡ್ಡೋಲಗಂಗೊಟ್ಟು ಅಣುಗಿ ವೆರಸಿರ್ಪಿನಂ ಪೊಗೆಯ ನುಳಿದಗ್ಗಿಯ ಪೊಲೊಂದೆಡೆಯೊಳ್ ತಣ್ಣಗೊಂಡ ನೇಸರಪೊಲ್ ಪೆರ ತೊಂದಡಯೊಳ್ ಬೆಳಗುವ ನಾರದ ಪರ್ವತರೆಂಬಿರ್ವರ್ ಮುನಿಗಳ್ ಏಕಕಾಲದೊಳಾಗಸ ದತ್ತಣಿ ನಂಬರೀಷ ನರಮನೆಯ್ತಂದರ್ ಕಂಡಾಗಳ್ ಭಕ್ತಿ ಮಳೆಯ ಆಸನದಿಂದಿರಿದ್ದೊಡನೆಯ ಪೋಗಿ ಕರೆತಂದು ಅರ್ಘ್ಯ ಪಾದ್ಯಂಗಳನ್ನಿತ್ತು, ಸಮರ್ಪಿಸಿ, ತಾನುಮವರ ಕೆಲದೊಳ್ ಮಂಡಿಸಿ, ಮೆದುನುಡಿಯಿಂಕುಶಲಮಂ ಬೆಸಗೊಳು ತಿಂತುಪ ಚರಿಸುತಿರ್ದಂ.

ಉತ್ತರ : ಬೇರೊಂದು ದಿನ ಒಮ್ಮೆ ರಾಜನು ತನ್ನ ಒಡ್ಡೋಲಗವನ್ನು ಬಿಟ್ಟು ತನ್ನ ಮಗಳೊಂದಿಗೆ ಮಾತನಾಡುತ್ತಿದ್ದ ಸಮಯದಲ್ಲಿ ಒಂದು ಕಡೆ ಹೊಗೆಯಿಲ್ಲದಿರುವ ಅಗ್ನಿಯಂತೆ ಇರುವ, ಇನ್ನೊಂದೆಡೆ ತಣ್ಣಗಾದ ಸೂರ್ಯನಂತಿರುವ, ನಾರದ ಮತ್ತು ಪರ್ವತರೆಂಬ ಇಬ್ಬರು ಮುನಿಗಳು ಏಕಕಾಲದಲ್ಲಿ ಆಕಾಶ ಕಡೆಯಿಂದ ಅಂಬರೀಷನ ಅರಮನೆಗೆ ಬಂದರು. ಅವರನ್ನು ಕಂಡ ರಾಜನಿಗೆ ಉತ್ಕಟ ಭಕ್ತಿಯುಂಟಾಯಿತು. ಆತ ಕೂಡಲೇ ತನ್ನ ಸಿಂಹಾಸನದಿಂದಿಳಿದು ಹೋಗಿ ಅವರನ್ನು ಕರೆತಂದು ಅರ್ಘ್ಯಪಾದ್ಯಗಳನ್ನು ಕೊಟ್ಟು ಪೂಜಿಸಿ, ತಾನೂ ಅವರ ಪಕ್ಕದಲ್ಲಿಯೇ ಕುಳಿತು, ಮೃದು ನುಡಿಗಳಿಂದ ಕುಶಲವಾರ್ತೆಯನ್ನು ಕೇಳುತ್ತ ಅವರನ್ನು ಉಪಚರಿಸುತ್ತಿದ್ದನು.

ಪ್ರಶ್ನೆ 4. ಈ ಕೆಳಗಿನ ಪದ್ಯ ಭಾಗಗಳನ್ನು ಪೂರ್ಣಗೊಳಿಸಿ.

1) ಈಳೆ ನಿಂಬೆ ಮಾವು......... ಉದಕವನೆರೆದವರಾರಯ್ಯ ?

2) ಇಂತೀ ಜಲವು.........ತನ್ನ ಪರಿ ಬೇರೆ.

ಉತ್ತರ : (ನಿಮ್ಮ ಪಠ್ಯಪುಸ್ತಕದಲ್ಲಿ ನೋಡಿರಿ)

ಪ್ರಶ್ನೆ 5. ಇವರಲ್ಲಿ ಇಬ್ಬರ ಸ್ಥಳ, ಕಾಲ ಮತ್ತು ಕೃತಿಗಳನ್ನು ತಿಳಿಸಿರಿ.

1) ನಂಜುಂಡ ಕವಿ 2) ದ. ರಾ. ಬೇಂದ್ರೆ

3) ಕೆ. ಎಸ್. ನರಸಿಂಹಸ್ವಾಮಿ

ಉತ್ತರ : 1) ನಂಜುಂಡಕವಿ– ಈತನು ಕ್ರಿ.ಶ. 15 ನೇ ಶತಮಾನದವನು. ಕ್ಷತ್ರೀಯ ವಂಶದವನು. ಈತನು ರಾಮನಾಥ ಚರಿತ್ರೆಯನ್ನು ಸಾಂಗತ್ಯದಲ್ಲಿ ಬರೆದಿದ್ದಾನೆ. ನೇಮಿ ಜಿನೇಶ ಸಂಗತಿ, ಸಮ್ಯುಕ್ತ್ವ ಕಾಮುದಿ, ಸೂಪಶಾಸ್ತ್ರ ಇತರ ಕೃತಿಗಳು.

2) ದ. ರಾ. ಬೇಂದ್ರೆ– ಇವರು ಧಾರವಾಡದಲ್ಲಿದ್ದವರು. 20 ನೆಯ ಶತಮಾನದ ಕನ್ನಡದ ವರಕವಿ. ಇವರ "ಅರಳು ಮರಳು" ಗ್ರಂಥಕ್ಕೆ ಕೇಂದ್ರಸಾಹಿತ್ಯ ಅಕ್ಯಾಡೆಮಿಯ ಬಹುಮಾನ ದೊರೆತಿದೆ. "ನಾಕು ತಂತಿ" ಎಂಬ ಕವನ ಸಂಕಲನಕ್ಕೆ ಜ್ಞಾನಪೀಠ ಪ್ರಶಸ್ತಿಯೂ ಲಭಿಸಿದೆ. ಗರಿ, ನಾದಲೀಲೆ, ಉಯ್ಯಾಲೆ, ಸಖೀಗೀತ, ಮೊದಲಾದವು ಇವರ ಕೃತಿಗಳು.

3) ಕೆ. ಎಸ್. ನರಸಿಂಹಸ್ವಾಮಿ– 1915 ರಲ್ಲಿ ಮೈಸೂರಿನಲ್ಲಿ ಜನಿಸಿದವರು. ಸರ್ಕಾರೀ ಉದ್ಯೋಗದಿಂದ ನಿವೃತ್ತರು ಇವರು "ಮೈಸೂರ ಮಲ್ಲಿಗೆ" ಕವನ ಸಂಕಲನದಿಂದ ಪ್ರಸಿದ್ಧರಾಗಿದ್ದಾರೆ "ಉಂಗುರ" "ಶಿಲಾಲತೆ" "ಮನೆಯಿಂದ ಮನೆಗೆ" "ತೆರೆದ ಬಾಗಿಲು" ಇವು ಇವರ ಕೃತಿಗಳು. ಅನೇಕ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿದ್ದಾರೆ.

ಪ್ರಶ್ನೆ 6. ಕೆಳಗಿನ ವಾಕ್ಯಗಳ ಸಂದರ್ಭ ಮತ್ತು ಸ್ವಾರಸ್ಯವನ್ನು ತಿಳಿಸಿರಿ.

1) ಮರೆಹೊಕ್ಕವರನ್ನು ಹಗೆಗೆ ಒಪ್ಪಿಸುವದು ರಾಜಧರ್ಮವಲ್ಲ.

ಉತ್ತರ : ಈ ಮಾತನ್ನು "ಚೆನ್ನಮ್ಮಾಜಿ" ಎಂಬ ಪಾತ್ರದಿಂದ ಆಯ್ದುಕೊಳ್ಳಲಾಗಿದೆ. ಶಿವಾಜಿಯ ಎರಡನೆಯ ಮಗ ರಾಜಾರಾಮನು ಮೊಗಲರಿಂದ ತಪ್ಪಿಸಿಕೊಳ್ಳಲು ಕೆಳದಿಯ ಚೆನ್ನಮ್ಮಾಜಿಯ ಮೊರೆಹೊಕ್ಕನು. ಅವನನ್ನು ತಮಗೆ ಒಪ್ಪಿಸುವಂತೆ ಬಾದಷಹನು ಆಜ್ಞೆ ಮಾಡಿದಾಗ ಚೆನ್ನಮ್ಮಾಜಿ ಈ ನಿರ್ಣಯ ತೆಗೆದುಕೊಂಡಳು. ಆಪತ್ತಿನಲ್ಲಿ ಸಿಕ್ಕು ಶರಣುಬಂದವರನ್ನು ರಕ್ಷಿಸುವದು ರಾಜಧರ್ಮ, ಅದುವೇ ಆರ್ಯ ಧರ್ಮವೆಂದು ತನಗೆ ಮೊಗಲರನ್ನು ಎದುರಿಸುವ ವಿಪತ್ತು ಬಂದರೂ ಸಾಧಿಸಿದಳು.

2) "ಅಮ್ಮಾ, ಈಗ ತಾನೇ ಹುಟ್ಟಿದ ಮಗುವಿನಿಂದ ಪ್ರಯೋಜನವಾದರೂ ಏನು?"

ಉತ್ತರ : ಈ ಮಾತು "ಮೈಕೆಲ್ ಫಾರಡೆ"ಪಾಠದಲ್ಲಿ ಬಂದಿದೆ. ಒಂದು ಬಾರಿ ಫಾರಡೆ ಪ್ರಯೋಗ ನಡೆಸಿದ್ದ ವಿದ್ಯುತ್ ಸಾಕ್ಷಾತ್ಕಾರ ಮಾಡುವ ವಿದ್ಯುದ್ದರ್ಶಕದ ಸೂಜಿಯು

ಸ್ವಲ್ಪ ಅಲುಗಿತು. ಆಗ ಅವನು ಮಹಾಸತ್ಯವನ್ನು ಕಂಡವನಂತೆ ದಿಗ್ಭ್ರಮೆಯಾಗಿ ನಿಂತ. ಆಗ ಒಬ್ಬ ಮಹಿಳೆ ಇದರಿಂದ ಏನು ಹೆಚ್ಚಿನದನ್ನು ಸಾಧಿಸಿದಂತಾಯಿತು ? ಎಂದು ಪ್ರಶ್ನಿಸಿದಳು. ಅದಕ್ಕೆ ಫಾರಡೇ ಮೇಲಿನಂತೆ ಉತ್ತರ ನೀಡಿದ. ಅದೇ ಜನಿಸಿದ ಮಗುವಿನಿಂದ ಏನನ್ನೂ ಮಾಡಲು ಸಾಧ್ಯವಾಗುವದಿಲ್ಲ; ಆದರೆ ಅದೇ ಮಗು ಬೆಳೆದು ದೊಡ್ಡವನಾದಾಗ ಅನೇಕ ಅದ್ಭುತಗಳನ್ನು ಸಾಧಿಸಬಹುದು. ಇಲ್ಲಿ ಸಂಶೋಧನೆಗಳ ಪ್ರಥಮ ಘಟ್ಟಗಳನ್ನು ಅದೇ ಹುಟ್ಟಿದ ಮಗುವಿಗೆ ಹೋಲಿಸಲಾಗಿದೆ.

3) "ಮೋಸಗಾರರನ್ನು ಮೋಸದಿಂದಲೇ ಜಯಿಸಬೇಕು"

ಉತ್ತರ ; "ಊರು ಭಂಗ"ಪಾಠದಲ್ಲಿ ಕೃಷ್ಣನು ಅರ್ಜುನನಿಗೆ ಈ ರೀತಿ ಹೇಳುತ್ತಾನೆ. ದುರ್ಯೋಧನನಿಗೂ ಭೀಮನಿಗೂ ಭಯಂಕರ ಗದಾಯುದ್ಧವು ನಡೆದು ದುರ್ಯೋಧನನು ಅಜೇಯನಾಗಿದ್ದನು. ಆಗ ಈ ಮೇಲಿನಂತೆ ಹೇಳಿ ಹೇಗಾದರೂ ಅವನನ್ನು ಕೊಲ್ಲುವಂತೆ ಎಚ್ಚರಿಸಲು ಹೇಳಿದನು. ಆಗ ಅರ್ಜುನನು ತೊಡೆ ತಟ್ಟಿಕೊಂಡು ಸಂಜ್ಞೆ ಮಾಡಿದನು. ಅದರಂತೆ ಭೀಮನು ತೊಡೆಗೆ ಗದೆಯಿಂದ ಹೊಡೆದು ದುರ್ಯೋಧನನನ್ನು ಉರುಳಿಸಿದನು. ಮೋಸಗಾರನನ್ನು ಮೋಸದಿಂದ ಜಯಿಸಿದರೆ ಪಾಪವೇನಿಲ್ಲ ಎಂದರ್ಥ.

4) "ಉದಾತ್ತನೊಳ್ ಪುಟ್ಟಿದತ್ತಿ ನೀಲಿರಾಗಂ"

ಉತ್ತರ : ನಾಗಚಂದ್ರನ ಹಳಗನ್ನಡ ಕಾವ್ಯದಿಂದ ಇದನ್ನು ಆಯ್ದುಕೊಳ್ಳಲಾಗಿದೆ. ಈ ಮಾತನ್ನು ರಾವಣನನ್ನು ಕುರಿತು ಕವಿ ನುಡಿಯುತ್ತಾನೆ. ಸೀತೆಯನ್ನು ಕದ್ದು ತಂದ ರಾವಣನ ಮನಸ್ಸು ಕದಡಿದ ನೀರು ತಿಳಿಯಾಗುವಂತೆ ತಿಳಿಯಾಯಿತು. ತಾನು ಮಾಡಿದ್ದು ತಪ್ಪೆಂದು ಅರಿವಾಯಿತು. ರಾವಣನು ಉದಾತ್ತ ವ್ಯಕ್ತಿ. ಒಂದು ವಿಷಗಳಿಗೆಯಲ್ಲಿ ಅವನು ಸೀತೆಯನ್ನು ಅಪಹರಿಸುವ ಕಾರ್ಯ ಮಾಡಿದ, ಆದರೆ ತನ್ನ ತಪ್ಪು ಅವನಿಗೆ ಅರಿವಾಯಿತು. ಈ ಸಂದರ್ಭದಲ್ಲಿ ಕವಿ ಮೇಲಿನಂತೆ ಹೇಳಿದ್ದಾನೆ.

ಪ್ರಶ್ನೆ 7. ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

1) ಕೊನೆಗಾಲದಲ್ಲಿ ಕರ್ನಾಟಕದವರನ್ನು ಕಂಡು ಕಿಟೆಲ್ ಏನೆಂದು ಪ್ರಾರ್ಥಿಸಿದರು ?

ಉತ್ತರ : ಕಿಟೆಲ್‌ರವರು ತಮ್ಮ ಜೀವನದ ಕೊನೆಯುಸಿರೆಳೆಯುವ ಪೂರ್ವದಲ್ಲಿ ಕನ್ನಡವನ್ನು ಇನ್ನೊಮ್ಮೆ ಕೇಳಬೇಕೆಂದು ಅಪೇಕ್ಷೆಪಟ್ಟರು. ಯಾರೋ ಕರ್ನಾಟಕದವರು ಆ ಸಮಯದಲ್ಲಿ ಕಿಟೆಲ್ ಅವರನ್ನು ಕಂಡು ಇಂಗ್ಲೀಷಿನಲ್ಲಿ ಮಾತನಾಡಲು ಹವಣಿಸಿದಾಗ ಕನ್ನಡದಲ್ಲಿ ಮಾತನಾಡಿ ತಮ್ಮನ್ನು ಪುನೀತರನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದರು. ಕನ್ನಡದ ಬಗ್ಗೆ ಅಷ್ಟೊಂದು ಗೌರವ ಕಿಟೆಲ್ ಅವರಿಗಿತ್ತು.

2) ಬಿಜಾಪುರವನ್ನು ಪಂಜಾಬು ಎಂದು ಯಾರು, ಏಕೆ ಹೇಳಿದ್ದರು ?

ಉತ್ತರ : ಸರ್ ಸಿದ್ದಪ್ಪ ಕಂಬಳಿಯವರು ಬಿಜಾಪುರವನ್ನು ಪಂಜಾಬು ಎಂದು ಹೇಳಿದ್ದರು. ಪಂಜಾಬದಲ್ಲಿಯಂತೆ ಬಿಜಾಪುರ ಜಿಲ್ಲೆಯಲ್ಲಿಯೂ ಐದು ನದಿಗಳು ಹರಿದಿವೆ. ಅವುಗಳೆಂದರೆ- ಕೃಷ್ಣಾ, ಮಲಪ್ರಭಾ, ಘಟಪ್ರಭಾ, ಭೀಮಾ ಮತ್ತು ಡೋಣಿ ನದಿಗಳು. ಆದ್ದರಿಂದ ಅದನ್ನು ಪಂಜಾಬು ಎಂದು ಕರೆದರು.

3) ಬೆಳೆದ ಮಗಳಿಗೆ ಗರತಿಯು ಯಾವ ಸೂಚನೆಯನ್ನು ಕೊಡುತ್ತಾಳೆ?

ಉತ್ತರ : ದಿನಗಳೆದಂತೆ ಮಗಳು ಬೆಳೆದಾಗ ಒಡವೆಗಳನ್ನು ಧರಿಸುತ್ತಾಳೆ. ಕಾಲಿಗೆ ಸರಪಳಿ, ಕತ್ತಿಗೆ ಸರ, ಇತ್ಯಾದಿಗಳಿಂದ ಅಲಂಕರಿಸಿಕೊಳ್ಳುತ್ತಾಳೆ. ಸುಂದರಿಯಾದ ಅವಳು ಎಲ್ಲಿಯಾದರೂ ನಿಂತರೆ ಅವಳನ್ನು ಜನರು ನೋಡಿದರೆ ದೃಷ್ಟಿ ತಾಕೀತು ಎಂಬ ಭಯ ಗರತಿಗೆ. ಅದಕ್ಕಾಗಿ "ದಿಟ್ಟಿಸೋಂಕ್ಯಾವ ಒಳಗ್ಹೋಗ" ಎಂದು ಒಳಗೆ ಹೋಗುವಂತೆ ಸೂಚನೆ ಕೊಡುತ್ತಾಳೆ.

4) ಯಾದವರು ಒಬ್ಬರಿಗೊಬ್ಬರು ಹೊಡೆದಾಡಿ ಸತ್ತದ್ದೇಕೆ ?

ಉತ್ತರ : ಮದ್ಯಪಾನ ಮಾಡಿ ಉನ್ಮತ್ತರಾದ ಯಾದವರು ಒಬ್ಬರಿಗೊಬ್ಬರು ಬಾಯಿಗ ಬಂದಂತೆ ಮಾತನಾಡಿ ಜಗಳಾಡಿ, ತಂದೆ ಮಗ ಅಣ್ಣ-ತಮ್ಮ, ಭಾವಬೀಗ ಎನ್ನದೆ ಮದ್ಯದ ಅಮಲಿನಲ್ಲಿ ಹೊಡೆದಾಡಿ ಬೆಂಕಿಯಲ್ಲಿ ಬಿದ್ದ ಪತಂಗದ ಹುಳುಗಳಂತೆ ಸತ್ತು ಹೋದರು. ಈ ಕಥೆಯು ಮಹಾಭಾರತದಲ್ಲಿನ ಒಂದು ಘಟನೆ, ಮದ್ಯಪಾನದಿಂದಾಗುವ ಅನಾಹುತವನ್ನು ಇದು ನಮಗೆ ಬೋಧಿಸುತ್ತದೆ.

5) ಹರಿಹರನು ಬದುಕಿನಲ್ಲಿ ಎದುರಿಸಿದ ಕಷ್ಟಗಳಾವವು ?

ಉತ್ತರ : ಹರಿಹರನು ಮಹಾಕವಿಯಾದರೂ ಜೀವನದಲ್ಲಿ ಅನೇಕ ಕಷ್ಟಗಳನ್ನು ಎದುರಿಸಿದ್ದಾನೆ. ಆತನು ತನ್ನ

ಸಂಸಾರಕ್ಕೆ, ಮಕ್ಕಳಿಗೆ ಹೊಟ್ಟೆಗೆ ಹಾಕಲು ಅಸಮರ್ಥನಾಗಿ ನೊಂದಿದ್ದಾನೆ. ವ್ಯವಸಾಯ ಮಾಡಲು ಹೋಗಿ ಅಲ್ಲಿಯೂ ಜಯಶಾಲಿಯಾಗಲಿಲ್ಲ, ವ್ಯಾಪಾರವನ್ನಾರಂಭಿಸಿ ವಿಫಲನಾಗುತ್ತಾನೆ, ಸೇವಾವೃತ್ತಿ ಮಾಡಿಯೂ ಸೋತಿದ್ದಾನೆ. ಯಾವ ಉಪಾಯ ಕೈಕೊಂಡರೂ ಬಡತನ ಆತನ ಬೆನ್ನು ಬಿಡುವದಿಲ್ಲ. ಆದರೂ ಶಿವಭಕ್ತಿಯನ್ನು ಬಿಡದೆ ಸಮಾಧಾನ ಪಡೆದಿದ್ದಾನೆ.

ಪ್ರಶ್ನೆ 8. ಕುಂತಿಯು ಕರ್ಣನನ್ನುಕಂಡು ಚಿಂತಾ ಸಮುದ್ರದಲ್ಲಿ ಮುಳುಗಿ ಹೋದಳು. ಇಲ್ಲಿ ಕಂಡು ಬರುವ ಅಲಂಕಾರವನ್ನು ಹೆಸರಿಸಿ ಸಮನ್ವಯಗೊಳಿಸಿರಿ.

ಉತ್ತರ : ಇದು ರೂಪಕ ಅಲಂಕಾರವಾಗಿದೆ, ಚಿಂತಾ ಸಮುದ್ರದಲ್ಲಿ ಎನ್ನುವಾಗ ಚಿಂತೆಎಂಬ ಸಮುದ್ರದಲ್ಲಿ ಎಂದರ್ಥ. ಚಿಂತೆಯೂ ಸಮುದ್ರವೂ ಒಂದೇ ಆಗಿದೆ. ಉಪಮೇಯವಾದಂತೆಯು ಉಪಮಾನವಾದ ಸಮುದ್ರರೂಪವನ್ನು ಪಡೆದಿದೆ. ಉಪಮೇಯ ಮತ್ತು ಉಪಮಾನಗಳಿಗೆ ಅಭೇದಕಲ್ಪನೆ ಮಾಡಿ ವರ್ಣಿಸಲಾಗಿದೆ.

ಪ್ರಶ್ನೆ 9. ಹೋದ ಬಾಣವ ಮರಳಿ ತೊಡದಿರು
ಮಾದುಕಳಿ ವೈರವನೆನಲ್ಕೆಹ
ಸಾದವೆಂದನು ಬೀಳುಕೊಂಡನು ಬಂದನರ
ಮನೆಗೆ ॥

ಮೇಲಿನ ಪದ್ಯ ಭಾಗಕ್ಕೆ ಪ್ರಸ್ತಾರ ಹಾಕಿ ಗಣವನ್ನು ವಿಂಗಡಿಸಿ ಛಂದಸ್ಸಿನ ಹೆಸರನ್ನು ಹೇಳಿರಿ.

ಉತ್ತರ :
—U | —UU | UUU | UUUU
ಹೋದ | ಬಾಣವ | ಮರಳಿ | ತೊಡದಿರು
೩ ೪ ೩ ೪

—U | U—U | UUU | —UU
ಮಾದು | ಕಳಿವೈ | ರವನೆ | ನಲ್ಕೆಹ |
೩ ೪ ೩ ೪

—U | —UU | —U | —UU |
ಸಾದ | ವೆಂದನು | ಬೀಳು | ಕೊಂಡನು |
೩ ೪ ೩ ೪

—U | UUUU | —
ಬಂದ | ನರಮನೆ | ಗೆ.
೩ ೪ ಗು.

ಇದು ಭಾಮಿನಿ ಷಟ್ಪದಿಯಾಗಿದೆ.

ಪ್ರಶ್ನೆ 10. ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬರೆಯಿರಿ.

1) ಸಮಸ್ಯೆಗಳು ಉಲ್ಬಣಗೊಳ್ಳು—

ಉತ್ತರ : ಶ್ರೀಲಂಕಾದಲ್ಲಿ ತಮಿಳರ ಸಮಸ್ಯೆ ಉಲ್ಬಣಗೊಂಡಿದೆ.

2) ಅವಿಭಾಜ್ಯ ಅಂಗವಾಗಿರು—

ಪಂಜಾಬವು ಭಾರತದ ಅವಿಭಾಜ್ಯ ಅಂಗವಾಗಿದೆ.

3) ಮನೆಯ ಮಾತಾಗು—

ಅವನು ತೋರಿದ ಸಾಹಸ, ಶೌರ್ಯಗಳು ಎಲ್ಲರ ಮನೆಯ ಮಾತಾಗಿವೆ.

ಪ್ರಶ್ನೆ 11. (ಅ) ವಿಗ್ರಹವಾಕ್ಯ ಬರೆದು ಸಮಾಸದ ಹೆಸರನ್ನು ತಿಳಿಸಿರಿ.

1) ಭೃಂಗ ಕೋಗಿಲೆಗಳು, 2) ಸಿಹಿನೀರು,
3) ರವಿಕಿರಣ

ಉತ್ತರ : 1) ಭೃಂಗ+ಕೋಗಿಲೆ=ಭೃಂಗ ಕೋಗಿಲೆಗಳು, ದ್ವಂದ್ವ ಸಮಾಸ.
2) ಸಿಹಿಯಾದ+ನೀರು=ಸಿಹಿನೀರು; ಕರ್ಮಧಾರಯ ಸಮಾಸ.
3) ರವಿಯ+ಕಿರಣ=ರವಿಕಿರಣ; ಷಷ್ಠಿ ತತ್ಪುರುಷ ಸಮಾಸ.

(ಬ) ಸಂಧಿ ವಿಂಗಡಿಸಿ ಹೆಸರಿಸಿರಿ.

1) ಕರುಣೇಂದು 2) ತಲೆದೋರು
3) ದೇಶಾಂತರ

ಉತ್ತರ : 1) ಕರುಣ+ಇಂದು=ಕರುಣೇಂದು; ಗುಣಸಂಧಿ
2) ತಲೆ+ತೋರು=ತಲೆದೋರು; ಗದಬಾದೇಶ ಸಂಧಿ
3) ದೇಶ+ಅಂತರ=ದೇಶಾಂತರ; ಸವರ್ಣದೀರ್ಘಸಂಧಿ.

(ಕ) ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

1) ಪ್ರಬಲ 2) ನೈತಿಕ 3) ಕುಗ್ಗು

ಉತ್ತರ : 1) ದುರ್ಬಲ 2) ಅನೈತಿಕ 3) ಹಿಗ್ಗು

ಪ್ರಶ್ನೆ 12. (ಅ) ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

1) ಗರತಿಯು ತ್ತಹಾಲುಂಡ ತನ್ನ ಮನೆಗೆ ಏನೆಂದು ಹರಕೆ ಕೊಡುವಳು?

ಉತ್ತರ : ತವರಿನ ಬಳ್ಳಿಯು ಕೆರೆಯ ದಂಡೆಯಲ್ಲಿಯ ಕರಕಿಯಂತೆ ಹಬ್ಬಲಿ ಎಂದು ಗರತಿಯು ತನ್ನ ಹಾಲುಂಡ ಮನೆಗೆ ಹರಕೆ ಕೊಡುವಳು.

2) ಚೆನ್ನಮ್ಮಾಜಿ ನಡೆಸಿದ ಪ್ರಜಾಹಿತ ಕಾರ್ಯಗಳಾವವು ?

ಉತ್ತರ : ಚೆನ್ನಮ್ಮಾಜಿಯು ಅಗ್ರಹಾರಗಳನ್ನು ಸ್ಥಾಪಿಸಿದಳು, ದೇವಮಂದಿರಗಳನ್ನು ಭದ್ರಗೊಳಿಸಿದಳು, ಉತ್ಸವಗಳನ್ನು ಸಾಂಗಗೊಳಿಸಿದಳು. ಮಠಗಳನ್ನು ಕಟ್ಟಿಸಿದಳು, ಜಾತಿ ಮತಗಳ ಭೇದವನ್ನು ಎಣಿಸದೆ ಅನೇಕ ಶಾಶ್ವತ ದಾನಗಳನ್ನು ನೀಡಿದಳು. ಹೀಗೆ ಹಲವಾರು ಜನಹಿತ ಕಾರ್ಯಗಳನ್ನು ಚೆನ್ನಮ್ಮಾಜಿ ಮಾಡಿದಳು.

3) ಕೈಲಾಸಂ ಹಾಸ್ಯವು ಎಂಥಹದು ?

ಉತ್ತರ : ಕೊನೆಯಲ್ಲಿ ಉಳಿಯುವದು ಶೋಕದ ಹನಿ, ಅಂತಃಕರಣದ ಅನುಕಂಪದ ಭಾವ ಹೀಗೆ ಕೈಲಾಸಂ ಹಾಸ್ಯ ಕೊನೆಗೆ ನಗೆಯಲ್ಲೇ ಲೀನವಾಗುವದಿಲ್ಲ, ಗಾಳಿಯಲ್ಲಿ ತೇಲಿ ಹೋಗುವದೂ ಇಲ್ಲ.

4) ಮೈಸೂರಿನ ರಮ್ಯ ಇತಿಹಾಸದಲ್ಲಿ ವೀರಣ್ಣನವರಿಗೆ ಶಾಶ್ವತಸ್ಥಾನವು ಏಕಾಗಿ ಸಿಕ್ಕಿತು ?

ಉತ್ತರ : ವೀರಣ್ಣನವರು ಸ್ವಾತಂತ್ರಯೋಧ, ಪತ್ರಿಕೋದ್ಯಮಿ, ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷ, ಮಂತ್ರಿಯಾಗಿಯೂ ಇದ್ದುದರಿಂದ ಅವರ ಹೆಸರು ಶಾಶ್ವತವಾಗಿ ನಿಂತಿದೆ.

5. ಇತರ ಪ್ರಾಣಿಗಳು ಕೋಣನ ತಂಟೆಗೆ ಹೋಗದಿರಲು ಕಾರಣವೇನು ?

ಉತ್ತರ : ಅದರ ಶಾಂತ ಸ್ವಭಾವವನ್ನು ನೋಡಿ ಇತರ ಪ್ರಾಣಿಗಳು ಕೋಣನ ತಂಟೆಗೆ ಹೋಗುತ್ತಿರಲಿಲ್ಲ.

(ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿಮಾಡಿರಿ.

ಉತ್ತರ : 1) ದುರ್ಗಸಿಂಹನ ಹಳಗನ್ನಡ ಗ್ರಂಥ.... (ಪಂಚತಂತ್ರ)

2) ವಡ್ಡಾರಾಧನೆ ಎಂಬುದರ ಅರ್ಥ... (ವೃದ್ಧರ ಆರಾಧನೆ)

3) ಇಂಗ್ಲೀಷ ಗೀತೆಗಳು-ಕವನ ಸಂಕಲನವನ್ನು ಬರೆದ ಕವಿ.......... (ಬಿ. ಎಂ. ಶ್ರೀ)

4) ಸಿಂಹವನ್ನು ಉಪಾಯದಿಂದ ಕೊಂದ ಮೊಲದ ಹೆಸರು....... (ದೀರ್ಘಕರ್ಣ)

5) ಶಾಂತಿನಿಕೇತನ, ಶ್ರೀನಿಕೇತನಗಳ ಸಂಸ್ಥಾಪಕರು....... (ರವೀಂದ್ರನಾಥ ಠಾಕೂರರು)

ಪ್ರಶ್ನೆ. 13 ಮೊದಲು ಎರಡು ಪದಗಳಿಗೆ ಇರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದಗಳನ್ನು ಬರೆಯಿರಿ.

ಉತ್ತರ : 1) ರಾಮಚಂದ್ರ ಚರಿತ ಪುರಾಣ—ನಾಗಚಂದ್ರ; ವಡ್ಡಾರಾಧನೆ- (ಶಿವಕೋಟ್ಯಾಚಾರ್ಯ)

2) ನಿವಾರ್ಯ—ಅನಿವಾರ್ಯ; ಗೋಚರ-(ಅಗೋಚರ)

3) ವಿಕ್ರಮಂ–ರಗಣ; ಪೊಕ್ಕಂತೆ—(ತಗಣ)

4) ಶಿಲಾ–ಶಿಲೆ; ಸಪತ್ನಿ-(ಪತ್ನಿ ಸಹಿತ)

5) ಕೈಯಿಡು-ಆಗಮ; ಮತ್ತೊಂದು—(ಲೋಪ)

ಪ್ರಶ್ನೆ 14. ಆಯಾ ಗುಂಪಿಗೆ ಸೇರದ ಪದವನ್ನು ಆಯ್ದು ಬರೆಯಿರಿ.

ಉತ್ತರ : 1) ಪಾರಸಿಕರು, ಯವನರು, ಅಶ್ವತ್ಥಾಮನ್, ಗದಾಯುದ್ಧ (ಯವನರು)

2) ಗುಣವಂತ, ಪ್ರಳಯಾಂತ, ಸಿರಿವಂತ, ಹಣವಂತ (ಪ್ರಳಯಾಂತ)

3) ಗದುಗು ಭಾರತ, ನವಭಾರತ, ಕುಮಾರವ್ಯಾಸ ಭಾರತ, ಕನ್ನಡ ಭಾರತ (ನವಭಾರತ)

4) ಹೊತ್ತಗೆ, ಮೆತ್ತಗೆ, ಸತ್ತಗೆ, ಪಯಣ (ಪಯಣ)

5) ಕಲೋಪಾಸಕ, ಮನೋವೇಗ, ಗ್ರಾಮೋದ್ಧಾರ, ಮಹೋನ್ನತ (ಮನೋವೇಗ)

ಪ್ರಶ್ನೆ 15. "ಅ" ಗುಂಪಿನಪದಗಳಿಗೆ "ಬ" ಗುಂಪಿನ ಪದಗಳಲ್ಲಿ ಸರಿಯಾದುದನ್ನು ಜೋಡಿಸಿ ಬರೆಯಿರಿ.

| 'ಅ' | 'ಬ' |
|---|---|
| 1) ಕಿಟೆಲ್ ಪರಮೋಚ್ಚ ಕೃತಿ | 1) ಶಬ್ದಮಣಿ ದರ್ಪಣ |
| 2) ಗಾವಸಿಂಗ | 2) ಪ್ರಪಂಚ-ವಿಶ್ವವಾಣಿ |
| 3) ಪಾಟೀಲ ಪುಟ್ಟಪ್ಪ | 3) ನರಸಿಂಗ |

| | |
|---|---|
| 4) ಕೊಟ್ಟೂರಿನ ಸಿದ್ದಪ್ಪಶೆಟ್ಟಿ | 4) ನಾಯಿ |
| 5) ಹಿಪ್ಪರಗಿ | 5) ಪ್ರಾಚೀನ ಪಿಪ್ಪಲಿ |
| | 6) ಚನ್ನಮ್ಮಾಜಿ |
| | 7) ಕನ್ನಡ-ಇಂಗ್ಲೀಷ್ |

ಉತ್ತರ : 1-7, 2-4, 3-2, 4-6 5-5.

—●—

## ಕನ್ನಡ

ಏಪ್ರೀಲ್–೧೯೮೫ ದ್ವಿತೀಯ ಪತ್ರಿಕೆ

ಅವಧಿ : 2 ಘಂಟೆ ಅಂಕಗಳು : 50

ಪ್ರಶ್ನೆ 1. ಈ ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡನ್ನು ಆರಿಸಿಕೊಂಡು ಒಂದೊಂದು ಪುಟಕ್ಕೆ ಮೀರದಂತೆ ಉತ್ತರ ಬರೆಯಿರಿ.

1. ತೇನಸಿಂಗನ ಕೇದಾರನಾಥ ಶಿಖರಾರೋಹಣದ ಅನುಭವ

ಉತ್ತರ : 1947 ನೇ ವರ್ಷ ಗರ್ವಾಲಿನ ಕೇದಾರನಾಥ ಶಿಖರಾರೋಹಣ ಮಾಡಲು ಒಂದು ತಂಡ ಬಂದಿತು. ಆ ತಂಡದಲ್ಲಿ ತೇನಸಿಂಗ ಸೇರಿಕೊಂಡ. ಅದರಲ್ಲಿ ಓರ್ವ ಸ್ತ್ರೀಯೂ ಇದ್ದಳು. ಸ್ವಲ್ಪ ಮೇಲೆ ಹೋದ ಬಳಿಕ ಆ ಸ್ತ್ರೀ ಪರ್ವತಾರೋಹಿ ಮುಂದುವರಿಯಲುಇಚ್ಛಿಸಲಿಲ್ಲ. ತೇನಸಿಂಗ ಅವಳ ಸೇವೆಗಾಗಿ ಅಲ್ಲಿಯೇ ಉಳಿಯ ಬೇಕಾಯಿತು. ಮುಂದುವರಿದ ತಂಡವು, ಆ ಎತ್ತರವಾದ-ಇಡಿದಾದ ಪ್ರದೇಶದಲ್ಲಿ ಹಗ್ಗಕಟ್ಟಿಕೊಂಡು ಶ್ರಮಿಸುತ್ತಿತ್ತು. ಆದರೆ ಅವರಲ್ಲಿಯ ಒಬ್ಬ ಆರೋಹಿ ಮತ್ತು ಷರ್ಪಾ ಸರದಾರ ಜಾರಿ ಬಿದ್ದರು. ಆರೋಹಿಗೆ ಹೆಚ್ಚು ಗಾಯವಾಗಿರಲಿಲ್ಲ. ಆದರೆ ಷರ್ಪಾ ಸರದಾರನ ಕಾಲು ಮುರಿದಿತ್ತು.

ಈ ಘಟನೆಯಿಂದಾಗಿ, ಈಗ ತೇನಸಿಂಗ ಷರ್ಪಾ ಸರದಾರನಾದ. ಆತ ಈ ಗೌರವದಿಂದ ಸಂತೋಷಗೊಂಡ ಮತ್ತೆ ಆರೋಹಣ ಮುಂದುವರಿಯಿತು. ತೇನಸಿಂಗ ತನ್ನ ಕಾರ್ಯದ ಜವಾಬ್ದಾರಿ ನಿರ್ವಹಿಸ ತೊಡಗಿದ. ನಾಲ್ಕೈರು ಜನಸ್ವಿಸ್ ಆರೋಹಿಗಳೂ, ತೇನಸಿಂಗ್ ಮುನ್ನಡೆದರು. ದೀರ್ಘವಾಗಿದ್ದರಿಂದ ಹಿಮದ ಇಳುಕಲನ್ನು ಹತ್ತಿ, ಹಿಮದ ಏಣನ್ನೂ ಎಚ್ಚರವಾಗಿ ದಾಟಿ 33.000 ಅಡಿ ಎತ್ತರದ ಮೇಲಿರುವ ಚಪ್ಪಟೆಯಾದ ವೇದಿಕೆ ತಲುಪಿದರು. ಬಿಳಿಯ ಜಗುಲಿಯಂತಿದ್ದ ಕೇದಾರನಾಥ ಶಿಖರವನ್ನು ಅವರು ಏರಿದ್ದರು. ಈ ವಿಜಯದಿಂದ ಇಡೀ ತಂಡವೇ ಸಂತೋಷದಿಂದ ನಲಿದಾಡಿತು. ತೇನಸಿಂಗನಿಗೆ ವಿಶೇಷ ಸಂತೋಷವಾಗಿತ್ತು. ಏಕೆಂದರೆ ಆತ ಇದುವರೆಗೆ ಎಷ್ಟೆಷ್ಟೋ ಎತ್ತರಗಳಿಗೆ ಹೋಗಿದ್ದನಾದರೂ ಶಿಖರಾಗ್ರಕ್ಕೆ ಹೋಗಿರಲಿಲ್ಲ. ಶಿಖರಾಗ್ರದ ಮೇಲೆ ಏರಿ ನಿಂತುದು ಇದೇ ಮೊದಲು. ಇದು ಅವನ ಪ್ರಥಮ ವಿಜಯವಾದ್ದರಿಂದ ಅವನ ಆನಂದಕ್ಕೆ ಪಾರವೇ ಇರಲಿಲ್ಲ.

3. ಅರವಿಂದರ ವಿದೇಶೀ ವಿದ್ಯಾಭ್ಯಾಸದಲ್ಲಿ ಅವರ ತಂದೆಯ ಪ್ರಭಾವ

ಉತ್ತರ : ಅರವಿಂದರ ತಂದೆ ಇಂಗ್ಲೀಷ ನಾಗರಿಕತೆಯ ಪ್ರಭಾವಕ್ಕೆ ಒಳಗಾದವರು. ತಮ್ಮ ಮಕ್ಕಳನ್ನು ಆಂಗ್ಲ ನಾಗರಿಕತೆಯಲ್ಲಿಯೇ ಬೆಳೆಸುವ ಉದ್ದೇಶ ಹೊಂದಿದ್ದರು. ಆದ್ದರಿಂದ ಅರವಿಂದರನ್ನು ಬಾಲ್ಯದಲ್ಲಿಯೇ ದಾರ್ಜಿಲಿಂಗದ ಕಾನ್ವೆಂಟ ಶಾಲೆಗೂ, ನಂತರ ಇಂಗ್ಲೆಂಡಿಗೂ ಕಳುಹಿಸಿದರು. ಅರವಿಂದರು ಇಂಗ್ಲಂಡದಲ್ಲಿ ಡ್ರೂವೆಟ್ ದಂಪತಿಗಳಲ್ಲಿದ್ದರು. ಅರವಿಂದರ ತಂದೆ ಕೃಷ್ಣಧನ ಘೋಷರು ಪಾಶ್ಚಾತ್ಯ ಸಂಸ್ಕೃತಿಗಳ ವ್ಯಾಮೋಹಕ್ಕೆ ಒಳಗಾಗಿದ್ದವರು, ಸಂಪೂರ್ಣವಾಗಿ ಆಂಗ್ಲ ವಾತಾವರಣದಲ್ಲಿಯೇ ಮಕ್ಕಳನ್ನು ಬೆಳೆಸಬೇಕೆಂಬುದು ಅವರ ಹಟವಾಗಿತ್ತು. ಅಂತೆಯೇ ಅವರು ತಮ್ಮ ಮಗ ಅರವಿಂದರನ್ನು ಐದು ವರುಷದವನಿದ್ದಾಗಲೇ ಕಾನ್ವೆಂಟ ಶಾಲೆಗೆ ಕಳಿಸಿದರು. ಭಾರತೀಯ ಸಂಸ್ಕೃತಿಯಿಂದ ದೂರವಿಡುವ ಉದ್ದೇಶದಿಂದಲೂ ಏಳು ವರುಷದ ಅರವಿಂದರನ್ನು ನಂತರ ವಿದ್ಯಾಭ್ಯಾಸಕ್ಕಾಗಿ ಇಂಗ್ಲಂಡಿಗೆ ಕಳುಹಿಸಿಕೊಟ್ಟರು. ಹೀಗೆ ಅರವಿಂದರ ಬಾಲ್ಯ ವಿದ್ಯಾಭ್ಯಾಸ ಭಾರತೀಯ ಸಂಸ್ಕೃತಿಯಲ್ಲಿ ಸಾಗದೆ ಪಾಶ್ಚಾತ್ಯ ರೀತಿಯಲ್ಲಿ ಸಾಗಿತು. ಅರವಿಂದರು ಇಂಗ್ಲೀಷ, ಲ್ಯಾಟಿನ್, ಫ್ರೆಂಚ ಭಾಷೆಗಳನ್ನು ಕಲಿತು ಪಾಂಡಿತ್ಯ ಸಂಪಾದಿಸಿದರು.

3. ವಿಜ್ಞಾನಿ ಬೋಸರ ಪ್ರಥಮ ವಿದೇಶಿಯಾತ್ರೆ

ಉತ್ತರ : (1984 ನೇ ಏಪ್ರೀಲ ದ್ವಿತೀಯ ಪತ್ರಿಕೆ 1 ನೆಯ ಪ್ರಶ್ನೆಯ 3 ನೇ ಉಪಪ್ರಶ್ನೆ ಉತ್ತರ ನೋಡಿ)

ಪ್ರಶ್ನೆ 2. ಕೆಳಗಿನ ಮಾತುಗಳನ್ನು ಐದಾರು ವಾಕ್ಯಗಳಲ್ಲಿ ವಿವರಿಸಿ.

ಉತ್ತರ : 1) ಬೋಸ ವಿಜ್ಞಾನ ಮಂದಿರ : 1917 ರಲ್ಲಿ ಭಾರತದ ಕೀರ್ತಿಯನ್ನು ಬೆಳಗುವ "ಬೋಸ ರಿಸರ್ಚ ಇನ್‌ಸ್ಟಿಟ್ಯೂಟ್" ಎಂಬ ಸಂಶೋಧನಾ ಮಂದಿರ, ಬೋಸರ ಅವಿರತ ಪ್ರಯತ್ನದಿಂದ ಕಲ್ಕತ್ತ ನಗರದಲ್ಲಿ ತಲೆ ಎತ್ತಿ ನಿಂತಿತು. ಬೋಸರು ಅದರ ಉದ್ಘಾಟನಾ ಸಮಾರಂಭದಲ್ಲಿ ಮಾತನಾಡುತ್ತ, ಅದೊಂದು ದೇವಾಲಯವೆಂದು ಬಣ್ಣಿಸಿದರು. 20 ವರ್ಷಗಳ ಕಾಲ ಬೋಸರೇ ಅದನ್ನು ನಿರ್ವಹಿಸಿದರು. ಭೌತಶಾಸ್ತ್ರ ಮತ್ತು ಸಸ್ಯ ಶಾಸ್ತ್ರಗಳ ಬಗೆಗೆ ಸಂಶೋ

ಧನೆಗೆ ಬೇಕಾದುದನ್ನು ವ್ಯವಸ್ಥೆ ಮಾಡಿದರು. ಜಗತ್ತಿನ ಪ್ರಖ್ಯಾತ ವಿಜ್ಞಾನಿಗಳು ಅದರ ಸದಸ್ಯರಾದರು. ಇಂದಿಗೂ ಇದು ಭಾರತದ ಕೀರ್ತಿಯ ಒಂದು ಸಂಕೇತವಾಗಿ ಬೆಳಗುತ್ತಿದೆ.

2) ಷರ್ಪಾಜನರ ಮುಖ್ಯ ವೃತ್ತಿ : ಮೂಲತಃ ಕಷ್ಟ ಜೀವಿಗಳಾದ ಷರ್ಪಾಗಳು, ಪರ್ವತಾರೋಹಿಗಳಿಗೆ ಸಹಾಯಕರಾಗಿ ಕೆಲಸ ಮಾಡುತ್ತಾರೆ. ಆರೋಹಿಗಳ ಭಾರವಾದ ಹೊರೆಯನ್ನು ಹೊರುವದು, ಮಾರ್ಗ ಹುಡುಕುವದು, ಮೆಟ್ಟಿಲು ಕಡಿಯುವದು, ಶಿಬಿರ ಸ್ಥಾಪಿಸುವದು ಮುಂತಾದ ಕೆಲಸಗಳನ್ನು ಇವರು ಮಾಡುತ್ತಾರೆ. ಪರ್ವತಾರೋಹಿಗಳ ಯೋಗಕ್ಷೇಮವನ್ನೂ ನೋಡಿಕೊಳ್ಳುವರು ಚಮರಿ ಮೃಗಗಳನ್ನು ಸಾಕುವದು, ಆಲೂಗಡ್ಡೆ ಬೆಳೆಯುವದು ಇವರ ಉದ್ಯೋಗ.

3) ಅರವಿಂದರು ನಿರ್ಮಿಸಿದ ಶಾಂತಿಧಾಮ : ಪಾಂಡಿಚೆರಿಯಲ್ಲಿ ನೆಲೆನಿಂತ ಅರವಿಂದರು ಯೋಗಾಭ್ಯಾಸದಲ್ಲಿ ನಿರತರಾದರು. ಅವರ ಆಧ್ಯಾತ್ಮಿಕ ಸಾಧನೆಗಳಿಗೆ ಉಚಿತವಾದ ವ್ಯವಸ್ಥೆಯಾಗಿರಲಿಲ್ಲ. ಇದೆಲ್ಲವನ್ನು ಗಮನಿಸಿದ ಫ್ರೆಂಚ್ ಮಹಿಳೆ ಮೀರಾರಿಚರ್ಡರವರು ಅರವಿಂದರ ಯೋಗಕ್ಷೇಮವನ್ನೆಲ್ಲ ತಾನೇ ನೋಡಿಕೊಳ್ಳಹತ್ತಿದರು. ಆಶ್ರಮದ ಎಲ್ಲ ಕೆಲಸಗಳ ಉಸ್ತುವಾರಿಯನ್ನೂ ಕೈಕೊಂಡು ಅರವಿಂದರ ಸಾಧನೆಗೆ ಸಹಾಯ ಮಾಡಿದರು. ಅವರ ಆಶ್ರಮ "ಶಾಂತಿ ಧಾಮ" ಆಗಿ, ಜಗತ್ತಿನ ಜನರನ್ನು ಆಕರ್ಷಿಸಿತು.

4) ಬೋಸರ ಮೇಲೆ ವೃತ್ತಿ ಶಿಕ್ಷಣ ಶಾಲೆಯ ಪ್ರಭಾವ : ಜಗದೀಶ ಚಂದ್ರ ಬೋಸರ ತಂದೆ ಭಗವಾನ್‌ಚಂದ್ರ ಬೋಸರು ಬಡವರ ಮಕ್ಕಳಿಗಾಗಿ ಬಂಗಾಳಿ ಶಾಲೆಯನ್ನೂ ವೃತ್ತಿ ಶಿಕ್ಷಣ ಶಾಲೆಯನ್ನೂ ಆರಂಭಿಸಿದರು. ಅವರು ತಮ್ಮ ಮಗನನ್ನು ಅಲ್ಲಿಯೇ ವಿದ್ಯಾಭ್ಯಾಸಕ್ಕೆ ಬಿಟ್ಟರು. ಇದರಿಂದ ಬೋಸರಿಗೆ ಬಂಗಾಳಿ ಭಾಷೆಯ ಮೇಲೂ, ಬಡಜನರ ಮೇಲೂ ಸಮಾನ ಪ್ರೇಮ ಬೆಳೆಯಿತು. ಅವರು ದೊಡ್ಡವರಾದ ಮೇಲೆ ತಮ್ಮ ಪ್ರಯೋಗಗಳಿಗೆ ಬೇಕಾದ ಉಪಕರಣಗಳನ್ನು ತಮ್ಮ ವೃತ್ತಿ ಶಿಕ್ಷಣ ಶಾಲೆಯಲ್ಲಿಯೇ ತಯಾರಿಸಿಕೊಂಡರು. ಇದೆಲ್ಲದರ ಪ್ರಭಾವದಿಂದ ಬೋಸರು ಜನಪ್ರಿಯ ಮತ್ತು ಜಗದ್ವಿಖ್ಯಾತ ವ್ಯಕ್ತಿಯಾದರು.

5) ಮೇಜರ್ ವೈಟ್ ತೇನಸಿಂಗನಿಗೆ ಮಾಡಿದ ಸಹಾಯ : ಎರಡನೇ ಮಹಾಯುದ್ಧದ ಕಾಲದಲ್ಲಿ ಜಗತ್ತು ಯುದ್ಧದಲ್ಲಿ ಆಸಕ್ತವಾಗಿತ್ತು. ಆಗ ಪರ್ವತಾರೋಹಣ ಸಂಭವವಿಲ್ಲದ್ದರಿಂದ ತೇನಸಿಂಗ ತನ್ನ ಹೆಂಡತಿ–ಮಕ್ಕಳೊಡನೆ ಚಿತ್ರಾಲಕ್ಕೆ ಬಂದ. ಅಲ್ಲಿ ಮೇಜರ್ ವೈಟ್ ಅವನನ್ನು ಆತ್ಮೀಯವಾಗಿ ಬರಮಾಡಿಕೊಂಡು ತನ್ನ ಸೇವಕನಾಗಿ ನೇಮಿಸಿಕೊಂಡ. ನಂತರ ಚಿತ್ರಾಲ್ ಸ್ಕೌಟಿನ ಅಧಿಕಾರಿಗಳ ಊಟದ ತಂಡದಲ್ಲಿ ಸೇರಿಸಿದ. ನಂತರ ತೇನಸಿಂಗ್ ಅಲ್ಲಿನ ಮುಖ್ಯಸ್ಥನೂ ಆದ, ತನ್ನ ಆರ್ಥಿಕ ಸ್ಥಿತಿಯನ್ನೂ ಸುಧಾರಿಸಿಕೊಂಡ. ಹೀಗೆ ಮೇಜರ್ ವೈಟ್ ತೇನಸಿಂಗನಿಗೆ ಕಷ್ಟ ಕಾಲದಲ್ಲಿ ಸಹಾಯ ಮಾಡಿದ.

ಪ್ರಶ್ನೆ 3. ಈ ವಿಷಯಗಳಲ್ಲಿ ಒಂದನ್ನು ಕುರಿತು ಪ್ರಬಂಧ ಬರೆಯಿರಿ.

( ಉತ್ತರ ಎರಡು ಪುಟಗಳಿಗೆ ಮೀರದಿರಲಿ )

1) ವಿದ್ಯಾರ್ಥಿಗಳಲ್ಲಿ ಶಿಸ್ತು. 2) ನಗರ ಜೀವನದ ಸುಖದುಃಖಗಳು. 3) ನಾನು ಬಯಸುವ ಉದ್ಯೋಗ. 4) ಆರೋಗ್ಯವೇ ಭಾಗ್ಯ.

ಉತ್ತರ : 1) ವಿದ್ಯಾರ್ಥಿಗಳಲ್ಲಿ ಶಿಸ್ತು.

ಶಿಸ್ತು ಎಂದರೆ ಒಂದು ಕ್ರಮಬದ್ಧವಾದ ನಡವಳಿಕೆ, ನಿಯಮಬದ್ಧವಾದ ಆಚರಣೆ. ನಾವು ಮಾಡಬೇಕಾದ ಕಾರ್ಯ ಇಲ್ಲವೆ ಸಾಧನೆಯನ್ನು ಸರಿಯಾದ ರೀತಿಯಲ್ಲಿ, ಅಚ್ಚುಕಟ್ಟುತನದಿಂದ, ಸಮಯಕ್ಕೆ ಸರಿಯಾಗಿ ಮಾಡಿ ಮುಗಿಸುವದು ಶಿಸ್ತಿನ ವಿಧಾನವಾಗಿದೆ. ನಮ್ಮ ಜೀವನಕ್ಕೆ ಶಿಸ್ತು ಅತ್ಯಗತ್ಯ ಇಲ್ಲವಾದರೆ ಎಲ್ಲವೂ ಅಸ್ತವ್ಯಸ್ತ; ಹಲವಾರು ತೊಂದರೆಗಳಿಗೂ ಈಡಾಗಬಹುದು.

ವಿದ್ಯಾರ್ಥಿಗಳಿಗೆ ಶಿಸ್ತು ತುಂಬ ಮುಖ್ಯ ಇಂದಿನ ವಿದ್ಯಾರ್ಥಿಗಳೇ ನಾಳಿನ ನಾಗರಿಕರು. ರಾಷ್ಟ್ರದ ಪ್ರಜೆಗಳು ನಾಡು ಹಾಗೂ ರಾಷ್ಟ್ರದ ಭವಿತವ್ಯ ಇವರಿಂದಲೇ ನಿರೂಪಿಸಲ್ಪಡಲಿದೆ. ಆದ್ದರಿಂದ ವಿದ್ಯಾರ್ಥಿಗಳು ಶಿಸ್ತಿಗೆ ಒಳಪಟ್ಟು ಜ್ಞಾನಾರ್ಜನೆ ಮಾಡಿಕೊಳ್ಳಬೇಕು, ಸಕಲ ರೀತಿಯಲ್ಲೂ ಅವರು ಆದರ್ಶಪ್ರಾಯರಾಗಬೇಕು, ಸರಿಯಾದ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಹಾಗೂತಮ್ಮ ಜೀವನದ ಗುರಿಯನ್ನು ಮುಟ್ಟಲು ಶಿಸ್ತನ್ನು ಜೀವನದಲ್ಲಿ ಅಳವಡಿಸಿಕೊಳ್ಳಲೇಬೇಕು.

ವಿದ್ಯಾರ್ಥಿಯಾದವನು ಜ್ಞಾನಾರ್ಜನೆಯ ಜೊತೆಗೆ ವಿನಯ, ಶೀಲ, ಸದ್ವರ್ತನೆ, ಸಹಾಯ, ಸಹಕಾರ, ಸೌಜನ್ಯ ಈ ಮೊದಲಾದ ಮಾನವೀಯ ಗುಣಗಳನ್ನು ಅಳವಡಿಸಿಕೊಳ್ಳಬೇಕು. ಅದರ ಸಾಧನೆಗೆ ಶಿಸ್ತು ಅತನಿಗೆ ಸಹಾಯಕವಾಗುವದು. ಓದು ಕಲಿಯುವಾಗ, ಅಭ್ಯಾಸ ಮಾಡುವಾಗ ಗುರುಗಳೊಡನೆ, ಸಹಪಾಠಿಗಳೊಡನೆ ನಡೆದುಕೊಳ್ಳುವಾಗ, ಬರೆಯುವಾಗ, ಆಟವಾಡುವಾಗ, ಬಟ್ಟೆಗಳನ್ನು ಧರಿಸುವಾಗ, ಊಟ–

ಉಪಹಾರ ಸೇವನೆ ಮಾಡುವಾಗ ಪ್ರತಿಯೊಂದರಲ್ಲೂ ಶಿಸ್ತು ಅತ್ಯಗತ್ಯವಾಗಿದೆ. ವಿದ್ಯಾರ್ಥಿ ಶಿಸ್ತಿನ ಸಿಪಾಯಿಯಾಗಿರಬೇಕು. ಶಿಸ್ತು ಎಂದರೆ ಕೇವಲ ಕಾಟಾಚಾರಕ್ಕಾಗಿ ಅನುಸರಿಸುವ ಕೆಲವೊಂದು ನಿಯಮಗಳಲ್ಲ. ಬಾಹ್ಯ ಹಾಗೂ ಆಂತರಿಕವಾಗಿ ಮನಃಪೂರ್ವಕ ಕೈಕೊಳ್ಳುವ ಕ್ರಮಬದ್ಧವಾದ ನಡವಳಿಕೆ ಎಂಬುದನ್ನು ಅರಿಯಬೇಕು.

ಇಂದು ವಿದ್ಯಾರ್ಥಿಗಳಲ್ಲಿ ಅಶಿಸ್ತು ಹೆಚ್ಚಾಗುತ್ತಲಿದೆ. ಇದಕ್ಕೆ ಅವರ ಸುತ್ತಲಿನ ಪರಿಸರವೇ ಬಹುಮಟ್ಟಿಗೆ ಕಾರಣವಾಗಿದೆ. ಇಂದಿನ ಸಮಾಜ ಕಲುಷಿತವಾಗಿದೆ, ಅಗ್ಗದ ಪ್ರಚಾರ, ನೀತಿಬೋಧಕವಲ್ಲದ ಮನರಂಜನೆಗಳು, ಅಶ್ಲೀಲ ಚಿತ್ರ ದೃಶ್ಯಗಳು, ಮಾನಭಂಗ ಸನ್ನಿವೇಶಗಳು, ಹೊಡೆದಾಟ, ತುಂಡು ಬಟ್ಟೆಗಳ ಹಾಗೂ ಅತಿಮೋಹಕ ವೇಷಭೂಷಣಗಳು ಮುಂತಾದವು ವಿದ್ಯಾರ್ಥಿಗಳ ಮೇಲೆ ಅನಿಷ್ಟ ಪರಿಣಾಮವನ್ನುಂಟು ಮಾಡಿ ಅಶಿಸ್ತಿನತ್ತ ಎಳೆದೊಯ್ಯುತ್ತವೆ. ಇಂದಿನ ರಾಜಕಾರಣಿಗಳು ವಿದ್ಯಾರ್ಥಿಗಳನ್ನು ದುರುಪಯೋಗಪಡಿಸಿಕೊಂಡು ಅವರ ಜೀವನವನ್ನು ಹದಗೆಡಿಸುತ್ತಿದ್ದಾರೆ. ಇಂದು ವಿದ್ಯಾ ಕೇಂದ್ರಗಳು ವ್ಯಾಪಾರಿ ಕೇಂದ್ರಗಳಾಗಿವೆ. ಗುರುಗಳಲ್ಲಿಯೂ ಪ್ರತಿಭೆಯ ಅಭಾವವಿದೆ. ಗುರು ಶಿಷ್ಯ ಸಂಬಂಧ ಸೌಹಾರ್ದತೆಯಿಂದ ದೂರವಾಗುತ್ತಿದೆ, ಕರ್ತವ್ಯ ವಿಮುಖರಾಗಿ ವಿದ್ಯಾರ್ಥಿಗಳು ಅಶಿಸ್ತಿನವರಾಗುತ್ತಿದ್ದಾರೆ, ಇದೆಲ್ಲ ದೂರಾಗಬೇಕು. ಸರಿಯಾದ ತಿಳುವಳಿಕೆ ಜಾಗ್ರತವಾಗಬೇಕು.

ಆದ್ದರಿಂದ ವಿದ್ಯಾರ್ಥಿಗಳಲ್ಲಿ ಶಿಸ್ತು ಅತ್ಯಂತ ಅವಶ್ಯವಾಗಿದೆ. ಶಿಸ್ತಿನ ಜೀವನ ಅಭಿವೃದ್ಧಿಗೆ ಸಾಧನ. ದೇಶದ ಅತ್ಯಂತ ಅಮೂಲ್ಯ ಸಂಪತ್ತಾಗಬಲ್ಲ ವಿದ್ಯಾರ್ಥಿಗಳು ಶಿಸ್ತನ್ನು ಅಳವಡಿಸಿಕೊಳ್ಳಲೇಬೇಕು.

2. ನಗರ ಜೀವನದ ಸುಖದುಃಖಗಳು :

ಉತ್ತರ : ( ಮುಖ್ಯಾಂಶಗಳು—ಸಾಮಾನ್ಯತಃ ನಗರಗಳು ಹಳ್ಳಿಗಳಿಗಿಂತ ವಿಸ್ತಾರ, ಜನಸಂಖ್ಯೆ, ಸಂಪರ್ಕಸಾಧನ, ಮನರಂಜನೆ, ಇತರ ಅನುಕೂಲತೆಗಳನ್ನು ಒಳಗೊಂಡಿರುತ್ತವೆ. ಸೌಂದರ್ಯಯುತವಾಗಿರುತ್ತವೆ- ನಗರ ಜೀವನ ಕೇವಲ ಹೂವಿನ ಹಾಸಿಗೆಯಲ್ಲ- ನಗರದಲ್ಲಿ ಸುಖ-ದುಃಖ ಎರಡೂ ಉಂಟು-ನಗರಗಳು ವಿದ್ಯಾ ಕೇಂದ್ರ ಹಾಗೂ ಔದ್ಯೋಗಿಕ ಕೇಂದ್ರಗಳಾಗಿರುತ್ತವೆ- ಸಾರಿಗೆ ಸಂಪರ್ಕ ವ್ಯವಸ್ಥೆ ಇರುತ್ತದೆ- ಪೇಟೆ ಇತರ ಸೌಕರ್ಯಗಳಿರುತ್ತವೆ- ಸರಿಯಾದ ಮಾರ್ಗ, ದೀಪದ ವ್ಯವಸ್ಥೆ, ನೀರಿನ ವ್ಯವಸ್ಥೆ ಇರುತ್ತವೆ- ನಗರಗಳು ನಾಗರಿಕತೆಯ ತೊಟ್ಟಿಲಗಳಾಗಿವೆ- ನಗರಗಳಲ್ಲಿ ವಿಪರೀತ ಜನಸಂದಣಿ-ವಾಯು ಮಾಲಿನ್ಯ-ಪರಿಸರ ಮಾಲಿನ್ಯ ಸಹಜ. ವಾಹನ ಅಪಘಾತಗಳು—ಕಳವು, ದರೋಡೆಗಳಾಗುವದು ಹೆಚ್ಚು—ನೆಮ್ಮದಿಯ ಜೀವನ ದುಸ್ತರ—ಒಟ್ಟಿನಲ್ಲಿ ಸುಖಕ್ಕಿಂತ ದುಃಖವೇ ಹೆಚ್ಚು. )

3) ನಾನು ಬಯಸುವ ಉದ್ಯೋಗ :

ಉತ್ತರ : ( ಮುಖ್ಯಾಂಶಗಳು : ಪ್ರತಿಯೊಬ್ಬನಿಗೂ ಜೀವಿಸಲಿಕ್ಕೆ ಒಂದು ಉದ್ಯೋಗಬೇಕೆಬೇಕು—ನಾನು ಬಯಸುವ ಒಂದು ಉದ್ಯೋಗ—ಅದನ್ನೇ ಬಯಸಲು ಇರುವ ಕಾರಣಗಳು—ಆ ಒಂದು ಉದ್ಯೋಗದಿಂದ ಏನನ್ನು ಸಾಧಿಸಬೇಕಾಗಿದೆ ಆ ಉದ್ಯೋಗ ಮಾಡುವದರಿಂದ ಆಗುವ ಲಾಭ—ಹಾನಿಗಳು ಜನತೆಯ ಮೇಲಾಗುವ ಪರಿಣಾಮ—ನಾಡು ಹಾಗೂ ರಾಷ್ಟ್ರಕ್ಕೆ ನಾನು ಸಲ್ಲಿಸಬೇಕಾದ ಕರ್ತವ್ಯ—ನನ್ನ ಬಾಳಿನ ಗುರಿಸಾಧನೆ— ಶ್ರದ್ಧೆಯಿಂದ ದುಡಿದು ಬಾಳುವದನ್ನು ಕಲಿಯಬೇಕು—ಜನ್ಮ ಸಾರ್ಥಕತೆ ಪಡೆಯಬೇಕು.

4) ಆರೋಗ್ಯವೇ ಭಾಗ್ಯ :

ಉತ್ತರ : (ಮುಖ್ಯಾಂಶಗಳು : "Healthy mind in a healthy body" ಆರೋಗ್ಯವಂತನು ಮಾತ್ರ ಸುಖಿಯಾಗಿ ಜೀವಿಸಬಲ್ಲ—ವಿದ್ಯಾರ್ಥಿಗಳು ಆರೋಗ್ಯ ಕಾಪಾಡಿಕೊಳ್ಳಬೇಕು—ಆರೋಗ್ಯ ಶಿಕ್ಷಣ ಅವಶ್ಯವಿರಬೇಕು—ಆಟಪಾಠಗಳಲ್ಲಿ ಭಾಗವಹಿಸುವದು-ಸಮರ್ಪಕ ಆಹಾರ ಸೇವನೆ—ನಿಯಮಿತತನ-ವಿಶ್ರಾಂತಿ ಸ್ವಚ್ಛತೆ ಕಾಪಾಡಿಕೊಳ್ಳುವದು, ದುಶ್ಚಟಗಳಿಂದ ದೂರವಾಗಿರುವದು. )

ಪ್ರಶ್ನೆ 4. ನಿಮ್ಮ ಶಾಲೆಯಲ್ಲಿ ನಡೆಯುವ ಸಮಾರಂಭವೊಂದಕ್ಕೆ ನಿಮ್ಮ ಹಳೆಯ ಶಾಲೆಯ ಮುಖ್ಯೋಪಾಧ್ಯಾಯರಿಗೆ ಕರೆಯೋಲೆಯೊಂದನ್ನು ಬರೆಯಿರಿ.

ಅಥವಾ

ನಿಮ್ಮ ಓಣಿಯ ಜನರಿಗೆ ಅನುಕೂಲವಾಗುವಂತೆ ಬೀದಿ ದೀಪವನ್ನು ಹಾಕಿ ಕೊಡಬೇಕಾಗಿ ವಿದ್ಯುಚ್ಛಕ್ತಿ ಮಂಡಲಿಯ ಅಧ್ಯಕ್ಷರಿಗೆ ಒಂದು ಮನವಿ ಪತ್ರ ಬರೆಯಿರಿ.

ಉತ್ತರ : ಮುಖ್ಯೋಪಾಧ್ಯಾಯರಿಗೆ ಕರೆಯೋಲೆ

ಹೆಸರು............

ವಿಳಾಸ............

ಊರು............

ದಿನಾಂಕ............

ಪೂಜ್ಯ ಗುರುಗಳಿಗೆ—

ತಮ್ಮ ಶಿಷ್ಯನಾದ.........ಮಾಡುವ ವಿನಯಪೂರ್ವಕ ಸಾಷ್ಟಾಂಗ ನಮಸ್ಕಾರಗಳು. ನಾನು ತಮ್ಮ ಶಾಲೆಯನ್ನು ಬಿಟ್ಟು ಇಲ್ಲಿಗೆ ಬಂದಿದ್ದರೂ ತಮ್ಮೆಲ್ಲ ಗುರುಗಳ ಹಾಗೂ ಶಾಲೆಯ ಸವಿನೆನಪು ಆಗಾಗ್ಗೆ ಉಂಟಾಗುತ್ತದೆ. ನಾನು ಅಲ್ಲಿ ಕಲಿಯುವಾಗ ತಮ್ಮ ವಾತ್ಸಲ್ಯಪೂರ್ಣ ಕೃಪಾದೃಷ್ಟಿ, ತಾವು ಹೇಳಿಕೊಟ್ಟ ಪಾಠಗಳು ಹಾಗೂ ತಿಳಿಹೇಳಿದ ಬುದ್ಧಿವಾದಕ್ಕೆ ನಾನೆಂದೂ ಮರೆಯಲಾರೆ, ತಮ್ಮ ಕೃಪಾಶೀರ್ವಾದ ಸದಾ ಇರುತ್ತಿರಲೆಂದು ಪ್ರಾರ್ಥಿಸುವೆ.

ಪ್ರಸ್ತುತ ಈ ಪತ್ರದ ಮೂಲಕ ತಮ್ಮಲ್ಲಿ ವಿಜ್ಞಾಪಿಸಿಕೊಳ್ಳುವದೇನಂದರೆ— ಇದೇ ತಿಂಗಳು 22 ನೇ ದಿನಾಂಕ ಭಾನುವಾರ ಅಪರಾಹ್ನ ನಮ್ಮ ಶಾಲೆಯ ರಜತ ಮಹೋತ್ಸವದ ಕೊನೆಯ ದಿನದ ಸಮಾರಂಭ ಬಹು ವೈಭವದಿಂದ ಜರುಗಲಿದೆ. ಸಾಂಸ್ಕೃತಿಕ ಕಾರ್ಯಕ್ರಮಗಳು ಬಹಳ ತಯಾರಿಯಿಂದ ಪ್ರದರ್ಶಿತವಾಗಲಿವೆ. ತಾವು ಅವಶ್ಯವಾಗಿ ಆಗಮಿಸಿ ನಮಗೆಲ್ಲ ಸಂತೋಷಪಡಿಸಬೇಕೆಂದು ಬೇಡುತ್ತೇನೆ. ತಾವು ಅವಶ್ಯ ಬರುವಿರಾಗಿ ನಂಬಿರುತ್ತೇನೆ. ಇತಿ ಅನಂತ ನಮಸ್ಕಾರಗಳು.

ತಮ್ಮ ಪ್ರೀತಿಯ ಶಿಷ್ಯ
...................

ಅಥವಾ

ವಿದ್ಯುಚ್ಛಕ್ತಿ ಮಂಡಲಿಯ ಅಧ್ಯಕ್ಷರಿಗೆ ಮನವಿ ಪತ್ರ

ಉತ್ತರ : (1984 ಎಪ್ರೀಲ ಕನ್ನಡ ದ್ವಿತೀಯ ಪತ್ರಿಕೆಯ 4 ನೇ ಪ್ರಶ್ನೆಯ ಉತ್ತರ ನೋಡಿರಿ).

ಪ್ರಶ್ನೆ 5. ಇಲ್ಲಿ ಬಿಟ್ಟಿರುವ ಸ್ಥಳವನ್ನು ಸಮಂಜಸವಾದ ಪದದಿಂದ ತುಂಬಿರಿ.

ಉತ್ತರ :
1) "ಇಂದು ಪ್ರಕಾಶ"ಎಂಬುದು......ಯ......ಕೆ (ದ್ವಿಭಾಷೆಯ–ಪತ್ರಿಕೆ)
2) "ಕುಣಿತ" ಎಂಬುದರ ಧಾತುರೂಪ.......ಎಂದು (ಕುಣಿ).
3) ಉಪಮಾನ ಮತ್ತು ಉಪಮೇಯಗಳಿಗೆ....... ತೋರಿದರೆ ........ ಅಲಂಕಾರವಾಗುವದು. (ಸಾದೃಶ್ಯ-ರೂಪಕ)
4) ದೇವರು ದೊಡ್ಡವನು ಆತನು ಕೆಡುಕನ್ನೇನೂ ಮಾಡನು. ಇಲ್ಲಿರಬೇಕಾದ ಲೇಖನ ಚಿಹ್ನೆಗಳು (ದೇವರು ದೊಡ್ಡವನು! ಆತನು ಕೆಡಕನ್ನೇನೂ ಮಾಡನು.)
5) .......ದೇವಿಯವರು ಅರವಿಂದರ ಕೈಹಿಡಿದರು. (ಮೃಣಾಲಿನಿ)

ಪ್ರಶ್ನೆ 6. ಈ ಪದ್ಯವನ್ನು ಓದಿಕೊಂಡು ಅದರ ಸಾರಾಂಶವನ್ನು ತಿಳಿಗನ್ನಡದಲ್ಲಿ ಬರೆಯಿರಿ.

ಹಸುರಿನ ಪಸೆಯಲಿ ಹೂ ಬಿಸಿಲಾಡಿಸಿ
ಹೊಸ ವರುಷವು ಕಾಲೂರುತಿದೆ ।
ತುಂತುರು ಹನಿಗಳ ಮಂತ್ರಾಕ್ಷತೆಯಲ್ಲಿ
ಅಂತರಂಗಗಳ ಕೆಣಕುತಿದೆ ।
ಮನೆಮನೆಯಂಗಣ ಮಾವಿನ ತೋರಣ
ಬೇವೂ ಆಗಿದೆ ಆಭರಣ ।
ಮಾಗಿಯ ಯೋಗಿಗೆ ಮೋಹವ ಪುಟ್ಟಿಸಿ
ನಡೆಸಿದೆ ಅಭ್ಯಂಜನ ಸ್ನಾನ ।
ತಳಿರಿನ ಬೆರಳಲಿ ಕಚಗುಳಿಯಿಕ್ಕುತ
ಮಂದಾನಿಲನದೊ ಸುಳಿಯುತ್ತಿದೆ ।
ಬೃಂದಾವನ ಗೋವಿಂದನ ಹೃದಯದಿ
ರಾಧೆಯ ನೆನಪನು ತುಂಬುತಿದೆ ।
ಹೂ ಹೂ ಚುಂಬನ ತೆರೆ–ಬಾನ್ ಬಂಧನ
ಕೇಳದೋ ಮುರಳಿಯ ನವಕೇಳಿ ।
ಯುಗ ಯುಗದಾದಿಯು ಈ ಶುಭ ನಾಂದಿಯು
ಮುಪ್ಪನೆ ಮರೆಸಿದೆ ಮೋದದಲಿ ।

ಉತ್ತರ : ಯುಗಾದಿ

ಭೂಮಿಯೆಲ್ಲ ಹಚ್ಚ ಹಸುರಾಗಿ ಬೆಳೆಗಳಿಂದ, ಸಸ್ಯಗಳಿಂದ ಶೋಭಿಸುತ್ತಿದೆ. ಯುಗಾದಿಯೊಂದಿಗೆ ಹೊಸ ವರ್ಷವು ಕಾಲಿಡುತ್ತಿದೆ. ಮಂತ್ರಾಕ್ಷತೆಗಳಂತೆ ಬೀಳುತ್ತಿರುವ ತುಂತುರು ಮಳೆ ಹನಿಗಳು ಜನರ ಅಂತರಂಗವನ್ನು ಕೆಣಕಿ ಅವರನ್ನು ಹರ್ಷಪುಲಕಿತರನ್ನಾಗಿ ಮಾಡುತ್ತದೆ. ಮನೆಮನೆಗಳ ಬಾಗಿಲುಗಳು ಮಾವಿನ ತಳಿರುಗಳೊಂದಿಗೆ ಬೇವಿನ ಹೂಗಳ ಜೊತೆಗೂಡಿ ಅಲಂಕೃತವಾಗಿವೆ.ಯೋಗಿಯಂತಿದ್ದ ಮಾಗಿಯ ಕಾಲಕ್ಕೆ ಮಳೆ ಅಭ್ಯಂಜನ ಸ್ನಾನವನ್ನು ಮಾಡಿಸುತ್ತಿದೆ. ಯೋಗಿಯ ಮನದಲ್ಲಿಯೂ ಭೋಗದ ಆಕಾಂಕ್ಷೆಯನ್ನು ಹುಟ್ಟಿಸುತ್ತದೆ. ಚಿಗುರುಗಳನ್ನು ಅಲುಗಿಸುತ್ತಿರುವ ಮಿತವಾದ ಗಾಳಿ ಅವುಗಳಿಗೆ ಕಚಕುಳಿ ಇಟ್ಟು ನಗಿಸುವಂತೆ ತೋರುತ್ತದೆ. ಈ ಸುಂದರ ಸನ್ನಿವೇಶ ಇನಿಯನ ಮನಸ್ಸಿನಲ್ಲಿ, ಹೃದಯದಲ್ಲಿ ಇನಿಯಳ ನೆನಪನ್ನು ಮೂಡಿಸುತ್ತದೆ. ಬಳ್ಳಿಗಳಲ್ಲಿ ಅರಳಿದ ಹೂಗಳು ಗಾಳಿಯಿಂದ ಒಂದ

ಕ್ಕೊಂದು ತಾಗಿ ಚುಂಬಿಸುವಂತೆ ಕಾಣುತ್ತದೆ. ಭೂಮಿ-ಆಕಾಶಗಳು ಮಳೆಯಿಂದ ತಮ್ಮ ಅಂತರವನ್ನು ತೊರೆದು ಪರಸ್ಪರ ಆಲಿಂಗನದಲ್ಲಿ ಮೈಮರತಿವೆ. ಇದು ಕೃಷ್ಣನ ಬೃಂದಾವನದ ರಾಸಕ್ರೀಡೆಯನ್ನು ನೆನಪಿಗೆ. ತರುತ್ತದೆ ಯುಗಯುಗಗಳಿಂದ ನಿರಂತರವಾಗಿ ಬರುತ್ತಿರುವ ಯುಗಾದಿ ಹಬ್ಬವು ಶುಭಕ್ಕೆ ನಾಂದಿಯಾಗಿದೆ. ಸಂತೋಷದಲ್ಲಿದ್ದ ಜನ, ಪ್ರಕೃತಿ ಹೊಸ ಯೌವನ, ಹೊಸ ಹುರುಪನ್ನು ಯುಗಾದಿಯಿಂದ ಪಡೆದಿದ್ದಾರೆ.

ಪ್ರಶ್ನೆ 7. ಈ ಮಾತುಗಳಲ್ಲಿ ಒಂದನ್ನು ಆರಿಸಿಕೊಂಡು ವಿವರಿಸಿರಿ.

1) "ಉಪ್ಪಿಗಿಂತ ರುಚಿಯು ಇಲ್ಲ-ತಾಯಿಗಿಂತ ಬಂಧುವಿಲ್ಲ"

2) "ನೀನೊಲಿದರೆ ಕೊರಡು ಕೊನರುವುದು"

3) "ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ!"

ಉತ್ತರ : 1) ರುಚಿಗಳಲ್ಲಿ ಹಲವು ವಿಧ, ಸಿಹಿ, ಖಾರ, ಒಗರು, ಕಹಿ, ಉಪ್ಪು, ಇವೆಲ್ಲವುಗಳಲ್ಲಿ ಉಪ್ಪಿಗೇ ಪ್ರಾಶಸ್ತ್ಯ. ಯಾವುದೇ ಅಡಿಗೆಗೂ ಉಪ್ಪು ಬೇಕೇ ಬೇಕು. ಉಪ್ಪಿಲ್ಲದ ಊಟ ರುಚಿಯೆನಿಸುವದಿಲ್ಲ. ಈ ಉಪ್ಪು ಹೆಚ್ಚಾದರೂ, ಕಡಿಮೆಯಾದರೂ ರುಚಿ ಸರಿಯಾಗಿ ಇರಲಾರದು. ಆದುದರಿಂದ ಸರಿಯಾದ ಪ್ರಮಾಣದಲ್ಲಿ ಉಪ್ಪು ಬೆರೆತಿರಬೇಕು. ಅದಕ್ಕಾಗಿಯೇ ಉಪ್ಪಿಗಿಂತ ರುಚಿಯಿಲ್ಲ ಎಂದು ಹೇಳಿದೆ. ಹಾಗೆಯೇ ತಾಯಿಗಿಂತ ಬಂಧುವಿಲ್ಲ. ಯಾವ ಬಂಧು-ಬಳಗ ಕೈ ಬಿಟ್ಟರೂ ತಾಯಿ ಮಾತ್ರ ಮಗನನ್ನು ಎಂದೂ ಬಿಡುವದಿಲ್ಲ. ಎಂಥ ಕಷ್ಟ-ಕಾರ್ಪಣ್ಯಗಳು ಬಂದರೂ ಮಕ್ಕಳ ರಕ್ಷಣೆ ಮಾಡುವಳು.

2) ನೀನೊಲಿದರೆ ಕೊರಡು ಕೊನರುವುದು : ಶಿವನನ್ನು ಕುರಿತು ಬಸವಣ್ಣನವರು ಹೇಳಿದ ಮಾತು. ಪ್ರಾಪಂಚಿಕ ಸುಖ-ದುಃಖಗಳಲ್ಲಿ ತೊಳಲುತ್ತಿರುವ ಮಾನವರಿಗೆ ದೇವರು, ದೈವ ಎಂಬುದರಲ್ಲಿ ವಿಶ್ವಾಸ. ಆ ದೈವ ಬಯಸಿದ ಬೇಡಿಕೆಗಳನ್ನು ಈಡೇರಿಸುತ್ತಾನೆ ಎಂಬುದು ಅವರ ನಂಬಿಕೆ. ದೈವ ದೇವರು ಎಂಬುದು ಅಗಾಧವಾದ ಅದ್ಭುತ ಶಕ್ತಿ. ಆ ಶಕ್ತಿಗೆ ಯಾವುದೂ ಎದುರಾದುದಿಲ್ಲ, ಅನುಗ್ರಹವಾದರೆ ಒಣಗಿದ ಮರವೂ ಚಿಗುರುತ್ತದೆ;ಬರಡಾದ ಹಸುವೂ ಹಾಲುಕರೆಯುತ್ತದೆ, ಅದಕ್ಕಾಗಿಯೇ ಶಿವಭಕ್ತನು, ನೀನೊಲಿದರೆ ಕೊರಡು ಕೊನರುವುದು ಎಂದು ದೃಢ ವಿಶ್ವಾಸದಿಂದ ಹೇಳುತ್ತಾನೆ.

3) ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ ? ಇದೊಂದು ನಾಣ್ಣುಡಿ. ಯಾವುದೇ ಸಸ್ಯ ಎಳೆಯದಿರುವಾಗ ಹೇಗೆ ಬೇಕೋ ಹಾಗೆ ಮಣಿಯಬಲ್ಲದು, ಬಾಗಬಲ್ಲದು,ಅದನ್ನು ಇಚ್ಛಿತ ರೀತಿಯಲ್ಲಿ ಬಗ್ಗಿಸಬಹುದು. ಆದರೆ ಅದೇ ಸಸ್ಯ ಬೆಳೆದು ದೊಡ್ಡ ಮರವಾದಾಗ ಅದನ್ನು ಬಗ್ಗಿಸುವದು ಸಾಧ್ಯವಾಗಲಾರದು. ಇದು ಹೇಗೋ ಮನುಷ್ಯನಿಗೆ ಚಿಕ್ಕ ವಯಸ್ಸಿನಲ್ಲಿ ಕೊಡುವ ಸಂಸ್ಕಾರ ಸರಿಯಾಗಿ ರೂಪುಗೊಳ್ಳುವದು. ಆದರೆ ದೊಡ್ಡವರಾದ ಮೇಲೆ ತಿದ್ದುಪದು ಕಠಿಣ. ಆದ್ದರಿಂದ ಎಳೆತನದಲ್ಲಿಯೇ ಒಳ್ಳೆಯ ಗುಣ-ಶೀಲಗಳನ್ನು ರೂಢಿಸುವದು ಸೂಕ್ತವಾದುದು.

# ಕನ್ನಡ

## ಅಕ್ಟೋಬರ ೧೯೮೪ ಪ್ರಥಮ ಪತ್ರಿಕೆ

ಅವಧಿ : 2½ ಗಂಟೆ ಅಂಕಗಳು : 100

ಪ್ರಶ್ನೆ 1. ಕೆಳಗಿನ ಪ್ರಶ್ನೆಗಳಲ್ಲಿ ಒಂದೊಂದು ಪುಟಕ್ಕೆ ಮೀರದಂತೆ ಯಾವುವಾದರೂ ಮೂರು ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

1) ಮಾದೇವರಾಯನಿಗೆ ಭಾಗೀರಥಿಯ ಮೇಲಿದ್ದ ಅವ್ಯಾಜ್ಯ ಪತ್ನೀ ಪ್ರೇಮ.

ಉತ್ತರ : ಭಾಗೀರಥಿಯ ಗಂಡ ಮಾದೇವರಾಯ ದಂಡಿನಲ್ಲಿದ್ದ. ಇತ್ತ ಆತನ ಮಡದಿ ಕೆರೆಗೆ ಹಾರವಾದಾಗ, ಅಲ್ಲಿ ಅವನಿಗೊಂದು ಕೆಟ್ಟ ಕನಸು ಬಿದ್ದಿತು. ಕನಸಿನಲ್ಲಿ ಸೆಲ್ಲೆ ಸುಟ್ಟಂಗಾತು. ಕೋಲು ಮುರಿದ್ಹಂಗಾತು, ಕಟ್ಟಿಸಿದ ಮಹಲು ತಟ್ಟನೆ ಬಿದ್ದ ಹಾಗಾಯಿತು. ಇದೆಲ್ಲ ಅಶುಭ ಚಿಹ್ನೆಯೆಂದು ಭಾವಿಸಿ, ಕಳವಳಗೊಂಡು ಅವನು ಲಗುಬಗೆಯಿಂದ ಬತ್ತಲೆ ಕುದುರೆಯನ್ನೇರಿ ಮನೆಗೆ ಬಂದ. ಮನೆಯಲ್ಲಿ ಮಡದಿಯ ಸುಳಿವಿಲ್ಲ. ಆಕೆ ಏನಾದಳೆಂದು ನಿಜ ಹೇಳುವ ಧೈರ್ಯ ಅವನ ತಂದೆ ತಾಯಿಗಳಿಗಿರಲಿಲ್ಲ. ತವರಿಗೆ ಹೋಗಿದ್ದಾಳೆಂದು ಸುಳ್ಳು ಹೇಳಿದರು. ತವರಿಗೆ ಹೋಗಿ ಕೇಳಿದರೆ ಗೆಳತಿ ಮನೆಗೆ ಹೋಗಿದ್ದಾಳೆಂದು ಉತ್ತರ ಬಂದಿತು. ಅಲ್ಲಿ ಹೋಗಿ ವಿಚಾರಿಸಿದರೆ ತನ್ನ ತಂದೆ-ತಾಯಿಗಳು ಆಕೆಯನ್ನು ಕೆರೆಗೆ ಹಾರ ಕೊಟ್ಟ ಸಂಗತಿ ತಿಳಿಯಿತು.

ಇದನ್ನು ಕೇಳಿ ಮಾದೇವರಾಯನಿಗೆ ಎದೆಗೆ ಬೆಂಕಿ ಬಿದ್ದಂತಾಯಿತು. ನೇರವಾಗಿ ಕೆರೆಗೆ ಬಂದ. ಹೆಂಡತಿಯ ಗುಣಗಳನ್ನು ನೆನೆನೆನೆದು ಅತ್ತ. ಸಾವಿರ ವರಹಕೊಟ್ಟು ಮುತ್ತಿನೋಲೆ ಮಾಡಿಸಿದ್ದು ನೆನೆದು ಕಣ್ಣೀರು ಸುರಿಸಿದ. ಆ ವಿಯೋಗವನ್ನು ತಾಳದೆ ತಾನೂ ಕೆರೆಗೆ ಹಾರಿ ಪ್ರಾಣ ತೆತ್ತ. ಮಡದಿಯ ಬಗೆಗೆ ಇದ್ದ ತನ್ನ ಪ್ರೀತಿಯ ಪರಾಕಾಷ್ಠತೆಯನ್ನು ತೋರಿಸಿದ.

**2. ಕೋಣವನ್ನು ಪೀಡಿಸಿ ಕಪಿಯು ಪಡೆದ ದುರ್ಗತಿ :**

**ಉತ್ತರ :** ಕಪಿಯು ಸಾಧು ಸ್ವಭಾವದ ಕಾಡುಕೋಣವನ್ನು ಅನೇಕ ರೀತಿಯಿಂದ ಪೀಡಿಸುತ್ತಿತ್ತು. ಕಪಿಯು ಕೊಡುತ್ತಿದ್ದ ಈ ಪೀಡೆಯನ್ನು ಕಂಡು ಇತರ ಪ್ರಾಣಿಗಳಿಗೆ ರೋಸಿ ಹೋಗಿತ್ತು. ಅವು ಕಪಿಯ ಮೇಲೆ ಹಲ್ಲು ಮಸೆಯುತ್ತಿದ್ದವು. ಕಪಿಯ ತುಂಟಾಟವನ್ನೂ, ಕೋಣನ ಸೈರಣೆಯನ್ನೂ ಕಂಡ ವೃಕ್ಷದೇವತೆಯು ಒಂದು ದಿನ ತಡೆಯಲಾರದೆ ಕೋಣವನ್ನು ಕುರಿತು ಆ ಕಪಿಯನ್ನು ಕೊಂದು ಹಾಕಲು ಸಲಹೆ ನೀಡಿತು. ಆದರೆ ಕಾಡುಕೋಣ ತನ್ನಿಂದ ಆದಷ್ಟು ಮಟ್ಟಿಗೆ ಕ್ಷಮಾಗುಣವನ್ನು ಆಚರಿಸುವದಾಗಿ ಪ್ರತಿಜ್ಞೆ ಮಾಡಿಕೊಂಡಿತ್ತು. ಕಪಿಯನ್ನು ಕಂಡು ಮರುಕ ಪಟ್ಟಿತ್ತು.

ಒಂದು ಸಲ ಈ ಸಾಧು ಕೋಣ ಎಲ್ಲಿಯೋ ಸಂಚಾರಕ್ಕೆ ಹೋದಾಗ ಅದು ನಿಲ್ಲುವ ಸ್ಥಳದಲ್ಲಿ ಬೇರೊಂದು ಕೋಣ ನಿಂತಿತ್ತು. ಕಪಿಯು ಅದನ್ನು ಈ ಮೊದಲಿನ ಸಾಧುಕೋಣವೆಂದೇ ತಿಳಿದು, ಅದಕ್ಕೆ ತಾನು ಮಾಡುತ್ತಿದ್ದ ತುಂಟಾಟಗಳನ್ನು ಆ ಇನ್ನೊಂದು ಕೋಣದ ಮೇಲೂ ಪ್ರಾರಂಭಿಸಿತು. ಅದರ ಬಾಲವನ್ನು ಹಿಡಿದು ಜಗ್ಗಿತು. ಕೂಡಲೇ ಆ ಕೋಣವು ತನ್ನ ಕೆಂಗಣ್ಣುಗಳಿಂದ ಕಪಿಯನ್ನು ನೋಡಿ, ಅದರ ಮೇಲೆ ನುಗ್ಗಿ ಹೋಗಿ ತನ್ನ ಚೂಪಾದ ಕೊಂಬುಗಳಿಂದ ಅದರ ಮೈಯನ್ನು ಚುಚ್ಚಿ ಕಾಲಿನಿಂದ ಅದನ್ನು ಹೊಸಕಿ ಹಾಕಿ ಬಿಟ್ಟಿತು. ಇಲ್ಲಿಗೆ ಕಪಿಯು ದುರ್ಗತಿಯನ್ನು ಪಡೆಯಿತು. ನಂತರ ಅಲ್ಲಿಗೆ ಬಂದ ಸಾಧುಕೋಣವು ಸತ್ತ ಕಪಿಯನ್ನು ಕಂಡು ದುಃಖದಿಂದ "ಬುದ್ಧಿಯಿಲ್ಲದೆ ಅನ್ಯಾಯವಾಗಿ ತನ್ನ ಪ್ರಾಣವನ್ನು ಕಳೆದು ಕೊಂಡಿತಲ್ಲಾ!" ಎಂದಿತು. ಅದರ ದುರ್ಮರಣಕ್ಕೆ ಬಹಳ ಮರುಗಿತು.

**3. ಹುಲಿಗೂ–ಲಕ್ಕುವಿಗೂ ನಡೆದ ಹೋರಾಟ–ಖಾನನಿಂದ ಲಕ್ಕುವಿನ ಉಪಚಾರ.**

**ಉತ್ತರ :** (1984 ನೇ ಎಪ್ರೀಲ ಪ್ರಥಮ ಪತ್ರಿಕೆಯ 1 ನೇ ಪ್ರಶ್ನೆಯ 3 ನೆಯ ಉಪಪ್ರಶ್ನೆ ಉತ್ತರ ನೋಡಿರಿ).

**4. ಕಿಟೆಲ್ಲರ ಬಾಲ್ಯ ಮತ್ತು ವಿದ್ಯಾಭ್ಯಾಸ ಸಾಗಿದ ಬಗೆ.**

**ಉತ್ತರ :** ಜಾರ್ಜ ಫರ್ಡಿನಾಂಡ್ ಕಿಟೆಲ್ ಜರ್ಮನಿ ದೇಶದವರು. 1832 ನೆಯ ಎಪ್ರೀಲ್ 7 ರಂದು ಜನ್ಮ ತಳೆದರು. ತಮ್ಮ ತಂದೆ–ತಾಯಿಗಳ ಆರು ಜನ ಮಕ್ಕಳಲ್ಲಿ ಇವರೇ ಹಿರಿಯರು, ರೆಸ್ಟರ್ ಹಾಫ್‌ನಲ್ಲಿಯೇ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿದರು. ಮುಂದೆ 1841 ರಲ್ಲಿ ಹೈಸ್ಕೂಲ ವಿದ್ಯಾಭ್ಯಾಸಕ್ಕಾಗಿ ಅಜ್ಜನ ಊರಾದ ಔರಿಕ್ ಎಂಬಲ್ಲಿಗೆ ಬಂದು, ಅಜ್ಜನ ಮನೆಯಲ್ಲಿದ್ದುಕೊಂಡು 1849 ರ ವರೆಗೂ ವಿದ್ಯಾಭ್ಯಾಸ ಮಾಡಿದರು. ಹೀಬ್ರು, ಫ್ರೆಂಚ್, ಗ್ರೀಕ್ ಲ್ಯಾಟಿನ್ ಹಾಗೂ ಇಂಗ್ಲೀಷ ಭಾಷೆಗಳಲ್ಲಿ ಇವರು ಸಾಧನೆ ಮಾಡಿದ್ದರು. ಯಾವಾಗಲೂ ಏನನ್ನೇ ಯೋಚಿಸುತ್ತಾ ಇರುತ್ತಿದ್ದ ಇವರಿಗೆ ಆಧುನಿಕ ವಿಷಯಗಳು ಹಿಡಿಸುತ್ತಿರಲಿಲ್ಲ. ಧಾರ್ಮಿಕ ವಿಷಯಗಳು, ಧಾರ್ಮಿಕ ಶಿಕ್ಷಣದ ಕಡೆಗೆ ಇವರ ಮನಸ್ಸು ಹರಿಯಿತು. ಆದರಿಂದ ತಮ್ಮ 17 ನೆಯ ವಯಸ್ಸಿನಲ್ಲಿ ಸಾಮಾನ್ಯ ಶಾಲೆಯನ್ನು ತ್ಯಜಿಸಿ, ಸ್ವಿಜ್ಜರಲ್ಯಾಂಡಿನ ಬಾಸೆಲ್ ನಗರದ ಮಿಷನ್ ಶಾಲೆಯನ್ನು ಸೇರಿದರು. ಇವರ ಮನೋಭಾವವನ್ನು ಪರೀಕ್ಷಿಸಿ, ಅವರ ಹಂಬಲವನ್ನರಿತು ಆ ಶಾಲೆಯಲ್ಲಿ ಸೇರಿಸಿಕೊಳ್ಳಲಾಯಿತು. ಮುಂದೆ 1853 ರಲ್ಲಿ ಇವರ ಶಿಕ್ಷಣ ಮುಗಿಯಿತು. ಇದುವರೆಗೆ ಕಿಟೆಲ್‌ರವರು ತಮ್ಮ ಅಗಾಧ ಬುದ್ಧಿವಂತಿಕೆ ಹಾಗೂ ಧಾರ್ಮಿಕ ಶ್ರದ್ಧೆಯಿಂದ ಒಂದು ಹಂತಕ್ಕೆ ಬಂದಿದ್ದರು. ಆಗ ಅವರನ್ನು ಭಾರತಕ್ಕೆ ಕಳುಹಿಸಲು ನಿರ್ಧಾರವಾಯಿತು.

ಇಪ್ಪತ್ತನೆಯ ವಯಸ್ಸಿನಲ್ಲಿ ಭಾರತಕ್ಕೆ ಬಂದ ಕಿಟೆಲ್‌ರವರು ಕನ್ನಡವನ್ನು ಅಭ್ಯಾಸ ಮಾಡಿ, ಉತ್ತಮ ಪಾಂಡಿತ್ಯ ಪಡೆದರು. ಪುಸ್ತಕಗಳನ್ನೂ, ಪದ್ಯಗಳನ್ನೂ ಬರೆದರು. ಕನ್ನಡ–ಇಂಗ್ಲೀಷ ನಿಘಂಟನ್ನೂ ರಚಿಸಿದರು. ಕನ್ನಡ ನಾಡು–ನುಡಿಗಾಗಿ ಅಮೋಘ ಸೇವೆ ಸಲ್ಲಿಸಿದರು. ಅದನ್ನು ಕನ್ನಡಿಗರಾರೂ ಮರೆಯುವಂತಿಲ್ಲ.

**5. ಕೆಳದಿಯು ಗಂಡಾಂತರಕ್ಕೆ ಗುರಿಯಾದಾಗ ಚೆನ್ನಮ್ಮ ಅದನ್ನು ಪಾರು ಮಾಡಿದ್ದು :**

**ಉತ್ತರ :** ಚೆನ್ನಮ್ಮಾಜಿಯು ಕೊಟ್ಟಿಪುರದ ಸಿದ್ದಪ್ಪ ಶೆಟ್ಟರ ಮಗಳು ಕೆಳದಿಯ ಸೋಮಶೇಖರ ನಾಯಕನೊಂದಿಗೆ ಈಕೆಯ ವಿವಾಹವಾಗಿತ್ತು. ಈತನು ಕ್ಷುಲ್ಲಕರ ಸೆಳೆತಕ್ಕೆ ಸಿಕ್ಕು ವ್ಯಸನಿಯಾದನು. ಕುಹಕಿಗಳು ಇದರ ದುರುಪಯೋಗ ಪಡೆದರು. ದ್ರೋಹವನ್ನೆಸಗಲು ವಿಜಾಪುರದಿಂದ ದಂಡನ್ನು ತರಿಸಿದರು. ಈ ದಂಡಿನ ದಳಪತಿ ಜನ್ನೋಜಿ ಪಂತನು ಸೋಮಶೇಖರನನ್ನು ಕೊಲ್ಲಿಸಿದನು. ಇದರಿಂದ ಕೆಳದಿಯ ಸಂಸ್ಥಾನ ಗಂಡಾಂತರಕ್ಕೆ ಗುರಿಯಾಗಿ ರಾಜಕೀಯ ವಾತಾವರಣವು ಹದಗೆಟ್ಟಿತು. ಸಂಸ್ಥಾನ ಅರಾಜಕತೆಗೆ ತುತ್ತಾಯಿತು. ದ್ರೋಹ, ಒಳಸಂಚುಗಳ ಹಾವಳಿ ಹೆಚ್ಚಿತು.

ಪತಿಯ ಮರಣದಿಂದಲೂ, ರಾಜಕೀಯ ಗೊಂದಲ ಹಾಗೂ ಬಂದೊದಗಿದ ಗಂಡಾಂತರದಿಂದಲೂ ಚೆನ್ನಮ್ಮಾಜಿ ಎದೆಗುಂದದೆ ಬಹಳ ಜಾಣತನದಿಂದ ವರ್ತಿಸಿದಳು. ಧೈರ್ಯ

ದಿಂದ ಎದುರಿಸಿದಳು. ಆಕೆ ಇನ್ನೂ ಚಿಕ್ಕವಳಿದ್ದರೂ ಪತಿ ಇದ್ದಾಗಲೇ ಆಡಳಿತದಲ್ಲಿ ಮನಸ್ಸು ಹಾಕಿ ಅನುಭವ ಪಡೆದಿದ್ದಳು. ರಾಜನೀತಿಯ ರಹಸ್ಯವನ್ನು ತಿಳಿದುಕೊಂಡಿದ್ದಳು. ಅರಾಜಕತೆಗೆ ಔಷಧವು ದಂಡೋಪಾಯವೆಂಬುದನ್ನು ಮನಗಂಡು, ತ್ವರಿತವಾಗಿ ಕಠೋರವಾದ ಯೋಜನೆಯನ್ನು ರೂಪಿಸಿ, ದುರ್ಮಾರ್ಗಿಗಳನ್ನು ಶೋಧಿಸಿ, ಶಾಸನಕ್ಕೆ ಗುರಿಮಾಡಿದಳು. ಅನ್ಯಾಯವಾಗಿ ತನ್ನ ಪತಿಯನ್ನು ಕೊಂದು ಹಾಕಿದ ಜನ್ನೊಪಂತನನ್ನು ಸದೆ ಬಡಿದು ಸೇಡು ತೀರಿಸಿಕೊಂಡಳು.

ಕುಹಕಿಗಳು ಚೆನ್ನಮ್ಮಾಜಿಯ ಚಟುವಟಿಕೆಗಳಿಂದ ರೊಚ್ಚಿಗೆದ್ದು ಆಕೆಯ ಕೈಯಿಂದ ಆಡಳಿತ ಸೂತ್ರ ತಪ್ಪಿಸಲು ಹೊಂಚು ಹಾಕಿದರು. ಅರಮನೆಯ ಬೇರೊಬ್ಬ ಸಂಬಂಧಿಕನನ್ನು ಈಕೆಗೆ ಪ್ರತಿಸ್ಪರ್ಧಿಯಾಗಿ ಮುಂದೆ ಮಾಡಿ ಆಟ ಹೂಡಿದರು. ಚೆನ್ನಮ್ಮಾಜಿಯು ಈ ಕುಚೋದ್ಯಗಳನ್ನೆಲ್ಲ ಹೊಡೆದು ಹಾಕಿದಳು. ಹೀಗೆ ಚೆನ್ನಮ್ಮಾಜಿ ಧೈರ್ಯ, ಸಾಹಸ, ಜಾಣತನಗಳಿಂದ ಹೋರಾಡಿ ಕಳದಿಯ ಸಂಸ್ಥಾನವನ್ನು ಗಂಡಾಂತರದಿಂದ ಪಾರು ಮಾಡಿದಳು.

**ಪ್ರಶ್ನೆ 2. ಒಂದೊಂದು ಪುಟಕ್ಕೆ ಮೀರದಂತೆ ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡನ್ನು ಕುರಿತು ಬರೆಯಿರಿ.**

**1. ತರುಣ ಮಿತ್ರನಿಗೆ ನರಸಿಂಹಸ್ವಾಮಿಯವರ ಹಿತವಚನ :**

**ಉತ್ತರ :** ಕವಿಯು ತರುಣನನ್ನು ಉದ್ದೇಶಿಸಿ ಹೇಳುತ್ತಾನೆ—"ಅಯ್ಯಾ ತರುಣ ಮಿತ್ರ ನೀನು ಉಪದೇಶಕ್ಕೆ ಕಿವಿಗೊಡುವ ಜನವಲ್ಲ ಎನ್ನುವಿ. ಉಪವಾಸ ಮಾಡಿದರೆ ಹೆದರುವವರಲ್ಲ ನೀವು, ದೇವರು ಇತ್ಯಾದಿ ನಿಮಗೆ ಬೇಡ. ಜೀವನವು ಹೊಸಕಾಲದ ಉತ್ಸಾಹದಿಂದ ಹೊಸದಿಕ್ಕಿಗೆ ಓಡುತ್ತಿದೆ, ಎಂದು ಸಂತೋಷಿಸುತ್ತಿರುವೆ ನಿನಗೆ ಓಟವೇ ಗುರಿಯೇ? ಹಾಗಾದರೆ ಸದಾ ಓಡುತ್ತಿರುವ (ಚಲಿಸುತ್ತಿರುವ) ಗಡಿಯಾರವೇ ನಿನ್ನ ದೇವರಾಗಬೇಕಲ್ಲವೇ ?

ಜೀವನವೆಂಬ ಈ ಪಯಣದಲ್ಲಿ ಅಲ್ಲಲ್ಲಿಗೆ ನಿಂತುನೋಡುತ್ತ (ಯೋಚಿಸುತ್ತ) ಮುಂದೆ ಸಾಗುವ ಜನರು ಇದ್ದಾರೆ. ಅವರೆಲ್ಲ ನಿರ್ಗತಿಕರಾಗಿದ್ದಾರೆಯೇ ? ತರುಣ ಮಿತ್ರನೇ ಇತ್ತ ನೋಡು. ಎಲ್ಲವೂ ಚಲನೆಯಲ್ಲಿದೆ. ಭೂಮಿಯೂ ಸುಸ್ಥಿತಿಯಲ್ಲಿ ಸುತ್ತುತ್ತಲಿದೆ. ಆದರೆ ಇಲ್ಲಿ ಓಟವಿಲ್ಲ, ಇಲ್ಲಿ ಕಾಲವು ಚೆಲುವನ್ನು ಉಂಟು ಮಾಡಿದೆ, ದೇಶಗಳೂ ಚೆಲುವನ್ನು ಸೃಷ್ಟಿಸಿವೆ, ಇಂಥ ಈ ನೆಲದ ನೋಟ ಭಾಗ್ಯಮಯವಾದುದು ಆದ್ದರಿಂದ ಓಡುವದು (ದುಡುಕುವದು) ಬೇಡ, ಆಗಾಗ್ಗೆ ನಿಂತು ನೋಡುವ, ವಿಚಾರಿಸುವ ತಾಳ್ಮೆ ಇರಬೇಕು" ಎಂದು ಕವಿ ಹೇಳುತ್ತಾನೆ.

**2. ಸುಖ ಜೀವನದ ಮುಖ್ಯ ಲಕ್ಷಣ :**

**ಉತ್ತರ :** ಸುಖೀ ಮನುಷ್ಯನು ರಾಗ ದ್ವೇಷಾದಿಗಳಿಗೆ ಒಳಗಾಗದಂತೆ ನೋಡಿಕೊಳ್ಳುತ್ತಾನೆ. ಆತನು ಯಾವ ಆಸೆಗಳನ್ನೂ ಇಟ್ಟುಕೊಂಡಿರುವದಿಲ್ಲ. ಇತರರ ಮೆಚ್ಚಿಗೆಯನ್ನು ಬಯಸುವದಿಲ್ಲ, ಹಾಗೆಯೇ ಇತರರ ತೆಗಳಿಕೆಗಳೂ ಆತನ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಬೀರುವದಿಲ್ಲ. ಜನರ ಮಾತಿಗೆ ಕಿವಿಗೊಡದೆ, ತನ್ನ ಆತ್ಮ ಸಾಕ್ಷಿಯಂತೆ ನಡೆಯುತ್ತಾನೆ. ತನ್ನ ಧರ್ಮವೇ ತನಗೆ ರಕ್ಷಾ ಕವಚ ಎಂದುಕೊಂಡು ಧರ್ಮಮಾರ್ಗದಲ್ಲಿಯೇ ನಡೆಯುತ್ತಾನೆ. ಧರ್ಮವೇ ಸುಖಿಜೀವಿಯ ಸೂತ್ರವಾಗಿರುತ್ತದೆ. ಆತನು ಯಾರಿಗೂ ಕೆಡುಕು ಮಾಡುವದಿಲ್ಲ. ಇತರರ ಐಶ್ವರ್ಯ ಉನ್ನತಿಗಳಿಗೆ ಆತನು ಅಸೂಯೆ ಪಡುವದೂ ಇಲ್ಲ. ತನಗೆ ಪ್ರೇಮವಾದ ಓದಿನಲ್ಲಿ, ಸ್ನೇಹದಲ್ಲಿ ಕಾಲ ಕಳೆಯುತ್ತಾನೆ. ಆತ ಯಾವುದಕ್ಕೂ ದಾಸನಾಗಿರುವದಿಲ್ಲ. ತನ್ನ ಆತ್ಮಕ್ಕೆ ಸತ್ಯವೆಂದು ತೋರಿದ್ದನ್ನು ಮಾಡುತ್ತಾನೆ. ಬೇರೆ ತತ್ವಗಳಾವವೂ ಅವನಿಗೆ ಬೇಕಿಲ್ಲ. ಧರ್ಮವೊಂದೇ ಆತನ ಬಾಳ ಸೂತ್ರ. ದೇವರಲ್ಲಿ ಯಾವ ಐಶ್ವರ್ಯವನ್ನೂ ಬೇಡದೇ ಆತನ ಕೃಪೆಯನ್ನು ಮಾತ್ರ ಬೇಡುತ್ತಾನೆ. ಇನ್ನೊಬ್ಬರಿಗೆ ಒಳ್ಳೆಯದನ್ನು ಮಾಡುತ್ತ ಸ್ಥಿತ ಪ್ರಜ್ಞನಂತೆ ತನ್ನ ಬಾಳನ್ನು ಸಾಗಿಸುತ್ತಾನೆ. ಇಂಥವನೇ ನಿಜವಾದ ಸುಖೀಮಾನವ ಎಂದು ಬಿ.ಎಂ. ಶ್ರೀಯವರು ತಮ್ಮ ಕವನದಲ್ಲಿ ಹೇಳಿದ್ದಾರೆ.

**3. ನಂಜುಂಡ ಕವಿಯ ವರ್ಣನೆಯಂತೆ ಕನ್ನಡ ಜನಪದ ಸೊಬಗು :**

**ಉತ್ತರ :** ನಂಜುಂಡ ಕವಿಯು ಕನ್ನಡನಾಡಿನ ಸೊಬಗನ್ನು ಸೊಗಸಾಗಿ ವರ್ಣಿಸಿದ್ದಾನೆ. ಆತನ ಅಭಿಪ್ರಾಯದಂತೆ— ಕಾವೇರಿಯಿಂದ ಗೋದಾವರಿವರೆಗೂ ಇರುವ ಈ ಕರ್ನಾಟಕ ಭೂಭಾಗವನ್ನು ವರ್ಣಿಸಲು ಯಾರಿಂದಲೂ ಸಾಧ್ಯವಿಲ್ಲ. ಗ್ರಾಮ, ನಗರ, ಖೇಡ, ಖರ್ವಟ, ದುರ್ಗ, ದ್ರೋಣಮುಖ ಹೀಗೆ ನಾನಾರೀತಿ ಇರುವ ಈ ನಾಡು ಕಾಮನ ಆಡುಂಬೊಲ (ಮನ್ಮಥನ ಕ್ರೀಡಾರಂಗ) ಎನ್ನುವಂತೆ ಶೋಭಿಸುತ್ತದೆ. ಭೂಮಿ ಎಂಬ ಲಕ್ಷ್ಮಿಯು ಉಟ್ಟು ಬಿಚ್ಚಿದ ರೇಶಿಮೆಯ ಸೀರೆಗಳ ಹಾಗೆ ನದಿಗಳು ಹರಿಯುತ್ತಿರುವದು ಕಂಗೊಳಿಸುತ್ತದೆ. ನದಿಗಳೆಂಬ ಹೆಣ್ಣುಗಳು ಆ ಸಮುದ್ರನೆಂಬ ಪ್ರಿಯತಮನನ್ನು ಅಪ್ಪಿಕೊಳ್ಳಲು ನೀಡಿದ ಕೈಗಳ ಹಾಗೆ ಕಾಲುವೆಗಳು ರಮ್ಯವಾಗಿ ಕಾಣುತ್ತವೆ.

ಇಂತಹ ಸುಂದರ ಭೂಮಿಯನ್ನು ಹೇಗೆ ವರ್ಣಿಸಲಿ ? ಕನ್ನಡ ನಾಡಿನ ಪ್ರಕೃತಿ ಸೌಂದರ್ಯ ಅದ್ಭುತವಾದದು. ರಾಜ್ಯದ ಅರ್ಧದಷ್ಟಿರುವ ಮಲೆನಾಡು ಪ್ರಕೃತಿ ಸೌಂದರ್ಯದ ತವರಾಗಿದೆ.

ಕನ್ನಡನಾಡು ನೃಪತುಂಗನ ಕಾಲಕ್ಕೆ ಕಾವೇರಿಯಿಂದ ಗೋದಾವರಿವರೆಗೂ, ಪೂರ್ವಸಮುದ್ರದಿಂದ ಪಶ್ಚಿಮ ಸಮುದ್ರದವರೆಗೂ ವ್ಯಾಪಿಸಿತ್ತು. ಅನೇಕ ನದಿಗಳು, ಗುಡ್ಡ ಬೆಟ್ಟಗಳು, ರಮ್ಯ ವನಸಿರಿಯಿಂದ ಮೆರೆಯುತ್ತಿತ್ತು. ಕಾಲಕ್ರಮದಲ್ಲಿ ಪೂರ್ವ ಭಾಗವು ಆಂಧ್ರಕ್ಕೂ, ಉತ್ತರದ ಸ್ವಲ್ಪ ಭಾಗ ಮಹಾರಾಷ್ಟ್ರಕ್ಕೂ ಸೇರಿಹೋಯಿತು. ಆದರೆ ಕನ್ನಡನಾಡಿನ ಸೊಬಗು, ಪ್ರಕೃತಿ ಸೌಂದರ್ಯ ಕುಗ್ಗಲಿಲ್ಲ. ಅಂದಿನ ಆ ಕನ್ನಡ ಜನಪದ ಸೊಬಗನ್ನು ಕವಿ ರಮ್ಯವಾಗಿ ಹೋಲಿಕೆಗಳಿಂದ ವರ್ಣಿಸಿದ್ದಾನೆ.

4. ಸರ್ವಜ್ಞನ ವಚನಗಳಿಂದ ತಿಳಿದು ಬರುವ ಬದುಕಿನ ಪಾಠ :

ಉತ್ತರ : ಸರ್ವಜ್ಞನು ಕನ್ನಡದ ಅನುಪಮ ಕವಿ. ಚಿಕ್ಕಂದಿನಲ್ಲಿಯೇ ಎಲ್ಲವನ್ನೂ ತೊರೆದು ಲೋಕಾನುಭವಗಳಿಸಿದ ಮಹಾಜ್ಞಾನಿ. ತನ್ನ ಅನುಭವ, ಅನುಭಾವಗಳನ್ನೆಲ್ಲ ತ್ರಿಪದಿಗಳಲ್ಲಿ ಹರಿ ಬಿಟ್ಟಿದ್ದಾನೆ. ಇವನ ವಚನಗಳು ಕನ್ನಡದ ಅಮೂಲ್ಯ ಸಂಪತ್ತು, ಆತನ ಉಪದೇಶದ ಹಲವು ಮಾತುಗಳು—

ಮನುಷ್ಯನಲ್ಲಿ ಗರ್ವ ಇರಬಾರದು, ಅಹಂಕಾರ ಪತನಕ್ಕೆ ಕಾರಣ, ಜ್ಞಾನವನ್ನರುಹಿದ ಗುರು ಸರ್ವಶ್ರೇಷ್ಠ, ಆತನನ್ನು ನಿಂದಿಸಬಾರದು, ಅದು ನಮ್ಮ ವಿನಾಶಕ್ಕೆ ಕಾರಣವಾಗುತ್ತದೆ. ಬರೆಯುವವರ ಕೂಡ ಹಗೆತನ ಬೇಡ, ಅವರು ತಮ್ಮ ಲೇಖನಿಯಿಂದ ಅಳಿಯಲಾಗದ ನಷ್ಟ ಉಂಟು ಮಾಡಲು ಸಾಧ್ಯವಿದೆ. ಬಂಗಾರದ ಎರವು ತರವಲ್ಲ. ಅದು ಅನೇಕ ತೊಂದರೆಗಳಿಗೆ ಮೂಲ: ಆದುದರಿಂದ ಇವೆಲ್ಲ ಬೇಡವೆಂದು ಕವಿ ಹೇಳುತ್ತಾನೆ.

ದೇವರ ಅದ್ಭುತವಾದ ಸೃಷ್ಟಿಯನ್ನು ಮಾಡಿದ್ದಾನೆ. ಇಂಗಿನಲ್ಲಿ ಸುವಾಸನೆ, ತೆಂಗಿನಲ್ಲಿ ಎಳನೀರು, ದುಂಬಿ–ಕೋಗಿಲೆಗಳ ಧ್ವನಿಯಲ್ಲಿ ಇಂಪು ಇತ್ಯಾದಿಗಳನ್ನು ಕೊಟ್ಟಿದ್ದಾನೆ. ಇವೆಲ್ಲ ದೈವನಿರ್ಮಿತವಾದವುಗಳು. ಅವನ ಮಹಿಮೆ ಅಗಾಧವಾದುದು.

ಚಿತ್ತವಿಲ್ಲದೆ ಗುಡಿಗೆ ಪ್ರದಕ್ಷಿಣೆ ಹಾಕುವದು, ಗಾಣ ಹೊತ್ತ ಎತ್ತು ಪ್ರದಕ್ಷಿಣೆ ಹಾಕಿದಂತೆ ವ್ಯರ್ಥ ಎಂದು ಹೇಳುವವರ ಮೂಲಕ ಆಡಂಬರದ ಭಕ್ತಿ ವ್ಯರ್ಥವೆಂದು ಕವಿ ಬಣ್ಣಿಸಿದ್ದಾನೆ.

ಎಲ್ಲರೂ ನಡೆಯುವ ಭೂಮಿ ಒಂದೇ. ಎಲ್ಲರೂ ಕುಡಿಯುವ ನೀರು ಒಂದೇ ಎಲ್ಲರೂ ಹೊತ್ತಿಸುವ ಅಗ್ನಿ ಒಂದೇ. ಹೀಗಿರುವಾಗ ಮನುಷ್ಯ–ಮನುಷ್ಯರಲ್ಲಿ ಜಾತಿಭೇದ ಸಲ್ಲದೆಂದು ಕವಿ ಖಂಡಿಸಿದ್ದಾನೆ. ಎಲ್ಲ ಮಾನವರೂ ಒಂದೇ ಎಂಬ ಭಾವನೆ ಇರಬೇಕು.

ಒಳ್ಳೆಯವರು ಇರದ ಊರು, ಕಳ್ಳರ ಒಡನಾಟ, ಸುಳ್ಳಿನ ಮಾತು ಈ ಮೂರು ಕೆಸರೊಳಗೆ ಮುಳ್ಳು ತುಳಿದಂತೆ. ಇವು ಸದಾಕಾಲ ಅಪಾಯಕಾರಿಗಳು.

ಪ್ರಶ್ನೆ 3. (ಅ) ಕೆಳಗಿನ ಪದ್ಯದ ಸಾರಾಂಶವನ್ನು ಬರೆಯಿರಿ.

ಮುಕ್ಕಳೈವ.................ತನೆಗೆಂಡ

ಉತ್ತರ : ಕುಂತಿಯು ಕರ್ಣನನ್ನು ಭೆಟ್ಟಿಯಾಗಿ ಪಾಂಡವರು ಅವನ ಸಹೋದರರೆಂದು ಹೇಳಿ, ಅವರ ಕಡೆ ಬಂದು ಪಟ್ಟಾಭಿಷಿಕ್ತನಾಗು ಎಂದು ಹೇಳಿದಳು. ಆ ಸಂದರ್ಭದಲ್ಲಿ ಕರ್ಣನು ತಾಯಿಗೆ ಹೇಳಿದ— "ಅಮ್ಮ, ನಾನು ನಿನ್ನ ಮಕ್ಕಳಲ್ಲಿ ಹಿರಿಯನೆಂಬುದು ನಿಜ. ನಿನ್ನ ಮಾತಿನಲ್ಲಿ ನನಗೆ ಸಂದೇಹವಿಲ್ಲ. ನಾನು ರಾಜನಾಗಲು ಬಯಸಿ ಪಾಂಡವರ ಕಡೆಗೆ ಬರುವುದು ಸರಿಯೇ ? ಭೂಮಿಯು ತನ್ನ ಪ್ರಭುವಾದ ದುರ್ಯೋಧನನ ಪತ್ನಿ. ಆಶೆಯನ್ನು ನಾನು ಬಯಸಿದಂತೆ ಆಗುವುದಿಲ್ಲವೇ ? ಇದನ್ನು ಯಾರು ತಾನೇ ಮೆಚ್ಚುವರು ? ನನ್ನಂಥ ನೀಚನನ್ನು ಜಯಲಕ್ಷ್ಮಿ ತಿರಸ್ಕರಿಸಲಾರಳೇ ? ಹೇಳು ತಾಯಿ, ಇದು ನ್ಯಾಯವೇ ? ಧರ್ಮವೇ ? ಎನ್ನುತ್ತಾನೆ.

(ಬ) ಕೆಳಗಿನ ಹಳಗನ್ನಡ ಪದ್ಯ ಭಾಗವನ್ನು ಹೊಸ ಗನ್ನಡಕ್ಕೆ ಅನುವಾದಿಸಿರಿ.

( ನಂದಿ ಮಿತ್ರನ ಕಥೆ–ಪಾಠದ ಪ್ರಥಮ ಪರಿಚ್ಛೇದ ನೋಡಿರಿ.)

ಉತ್ತರ : ಈ ಜಂಬೂದ್ವೀಪದ ಭರತಖಂಡದಲ್ಲಿ ಅವಂತಿ ಎಂಬುದೊಂದು ನಾಡು. ಆ ನಾಡಿನಲ್ಲಿ ವೈದಿಶ ಎಂಬ ಒಂದು ನಗರವಿತ್ತು. ಅದನ್ನು ಜಯವರ್ಮ ಎಂಬ ಅರಸನು ಆಳುತ್ತಿದ್ದನು. ಅವನಿಗೆ ಧಾರಣೆ ಎಂಬ ಮಹಾರಾಣಿ ಇದ್ದಳು. ಅವರೀರ್ವರೂ ತಮಗೆ ಪ್ರಿಯವಾದ ಸುಖೋಪಭೋಗಗಳಲ್ಲಿ ಕಾಲ ಕಳೆಯುತ್ತಿದ್ದರು ಆ ಊರಿನ ಪಕ್ಕದಲ್ಲಿ ಪರಾಳಕೂಟ ಎಂಬ ಊರಿದ್ದಿತು. ಅಲ್ಲಿ ದೇವಿಲ ಎಂಬ ಒಬ್ಬ ವ್ಯಾಪಾರಿ ಇದ್ದನು. ಅವನು ತನ್ನ ಸರಕುಗಳನ್ನು ಬಂಡಿಯಲ್ಲಿ ಸಾಗಿಸಿ ವ್ಯಾಪಾರ ಮಾಡುತ್ತಿದ್ದನು. ಅವನಿಗೆ ಪೃಥ್ವಿಶ್ರೀ ಎಂಬ ಹೆಂಡತಿ ಇದ್ದಳು. ಆಕೆಯ ಗರ್ಭದಲ್ಲಿ ಪಾಪಕರ್ಮ ಜೀವವು

ನೆಲೆಸಿತು. ಇದರಿಂದಾಗಿ ಯಾವ ಕಾರಣವೂ ಇಲ್ಲದೇ ಬಂಗಾರ ವೆಲ್ಲ ನಾಶವಾಯಿತು. ಮತ್ತೊಂದು ದಿವಸ ಹಲವು ಬಂಡಿ ವ್ಯಾಪಾರಿಗಳೊಡನೆ ಕೂಡಿಕೊಂಡು ದೇವಿಲನು ಬಂಡಿಗಳಲ್ಲಿ ಧಾನ್ಯಗಳ ಮೂಟೆಗಳನ್ನು ಹೇರಿಕೊಂಡು ಅವುಗಳನ್ನು ಮಾರಲು ಪೇಟೆಗೆ ಹೊರಟ್ಟಿದ್ದನು. ಆಗ ಅಡವಿಯಲ್ಲಿ ಕಳ್ಳರು ದಾರಿಗಡ್ಡವಾಗಿ ಇವರ ಮೇಲೆ ಬಿದ್ದು ದೇವಿಲ ಮತ್ತು ಇತರ ಕೆಲವು ವ್ಯಾಪಾರಿಗಳನ್ನು ಕೊಂದರು. ಉಳಿದವರು ಓಡಿ ಹೋದರು.

ಪ್ರಶ್ನೆ 4. ಕೆಳಗಿನ ಪದ್ಯ ಭಾಗಗಳನ್ನು ಪೂರ್ಣ ಗೊಳಿಸಿರಿ.

1) ತಾಯಹುದು...............ಗತಿಯೆಂದ ॥

2) ನಡವುದೊಂದೇ ಭೂಮಿ...............ಸರ್ವಜ್ಞ ॥

ಉತ್ತರ : [ನಿಮ್ಮ ಪಠ್ಯಪುಸ್ತಕದ ಪದ್ಯಭಾಗವನ್ನು ನೋಡಿರಿ].

ಪ್ರಶ್ನೆ 5. ಇವರಲ್ಲಿ ಇಬ್ಬರ ಸ್ಥಳ, ಕಾಲ, ಕೃತಿ ಗಳನ್ನು ತಿಳಿಸಿರಿ.

1. ಕುಮಾರವ್ಯಾಸ. 2. ರಾಘವಾಂಕ.
3. ಬಿ. ಎಂ. ಶ್ರೀ.

ಉತ್ತರ : 1 ಕುಮಾರವ್ಯಾಸ : ಕನ್ನಡದ ಮಹಾ ಕವಿಗಳಲ್ಲಿ ಕುಮಾರವ್ಯಾಸನೂ ಒಬ್ಬ. ಇವನ ಹೆಸರು ನಾರಾಣಪ್ಪ ಗದುಗಿನ ನಾರಾಣಪ್ಪ ಎಂದು ಕರೆಯಲ್ಪಟ್ಟಿದ್ದಾನೆ. ಇವನು ಗದುಗಿನ ಶ್ರೀ ವೀರನಾರಾಯಣನ ಕಿಂಕರ. ಈತನ ಜನ್ಮಸ್ಥಳ ಕೋಳಿವಾಡ. ಕಾಲ ಹದಿನೈದನೆಯ ಶತಮಾನ.

ಕೃತಿಗಳು : "ಕರ್ನಾಟಕ ಭಾರತ ಕಥಾಮಂಜರಿ" ಇದು "ಗದುಗಿನ ಭಾರತ" ಎಂತಲೂ ಪ್ರಸಿದ್ಧವಾಗಿದೆ. ಕುಮಾರ ವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವದು, ಎಂದು ರಾಷ್ಟ್ರಕವಿ ಕುವೆಂಪುರವರು ಈ ಕಾವ್ಯದ ಸತ್ವವನ್ನು ಕುರಿತು ಹೇಳಿದ್ದಾರೆ. ರೂಪಕಗಳನ್ನು ಇವನು ಅತ್ಯಂತ ಸಮರ್ಥ ವಾಗಿ ಬಳಸಿದ್ದಾನೆ. ಆದ್ದರಿಂದ ಇವನನ್ನು "ರೂಪಕ ಚಕ್ರವರ್ತಿ" ಎಂತಲೂ ಕರೆಯುತ್ತಾರೆ

2. ರಾಘವಾಂಕ. 3. ಬಿ. ಎಂ. ಶ್ರೀ [1984 ನೇ ಏಪ್ರೀಲ ಪ್ರಥಮ ಪತ್ರಿಕೆ 5ನೇ ಪ್ರಶ್ನೆಯ ಉತ್ತರ ನೋಡಿರಿ.]

ಪ್ರಶ್ನೆ 6. ಈ ವಾಕ್ಯಗಳ ಸಂದರ್ಭ ಮತ್ತು ಸ್ವಾರಸ್ಯವನ್ನು ತಿಳಿಸಿರಿ. ( ನಾಲ್ಕು ಮಾತ್ರ )

(1) ವಿಕ್ರಮಂ ಕ್ರಮಂ ಆಂ ವಿಕ್ರಮುದಾತನ್ ಎ..

ಉತ್ತರ : ಚಕ್ರವ್ಯೂಹ ಭೇದನಕ್ಕೆ ಅಭಿಮನ್ಯುವು ಉತ್ಸಾಹ ತೋರಿದಾಗ, ಧರ್ಮರಾಜನು ಅವನನ್ನು ಕಳು ಹಿಸಲು ಹಿಂಜರಿದನು. ಆಗ ಅಭಿಮನ್ಯುವು ತಾನು ಯುದ್ಧಕ್ಕೆ ಹೊರಡಲೇಬೇಕು ಎಂಬುದನ್ನು ಈ ರೀತಿ ಸಮರ್ಥಿಸಿ ಕೊಂಡನು.

"ತಾನು ಕ್ಷತ್ರಿಯನಾಗಿ ಹುಟ್ಟಿರುವದರಿಂದ ಹೋರಾಡು ವದೇ ನನ್ನ ಧರ್ಮ. ಸಾವಿಗೆ ಅಂಜಿ ಹಿಂಜರಿದರೆ ಅದು ಅಕ್ರಮವೆನಿಸುವದು. ಯುದ್ಧದಲ್ಲಿಯೂ ಮೊದಲು ದೊಡ್ಡ ವರು ನಂತರ ಸಣ್ಣವರು ಎಂಬ ಕ್ರಮವನ್ನು ನಾನು ಒಪ್ಪುವದಿಲ್ಲ. ವಿಕ್ರಮ ವಿದ್ದವರಾಯಿತು. ಅದೇ ಸರಿಯಾದ ಕ್ರಮ ನಾನು ಪರಾ ಕ್ರಮಿ ಇದ್ದೇನೆ. ಆದ್ದರಿಂದ ನಾನು ಯಾವ ಕಾರಣದಿಂದಲೂ ಯುದ್ಧಕ್ಕೆ ಹೋಗುವದನ್ನು ಬಿಡಲಾಗದು."

(2) ಇನ್ನೊನ್ಮೆ ಕರೆವೆನು, ಅಲ್ಲಿಂ ನೋಲೆ ತನು ವನೀ ಕಮ್ಮರಿಗೆ ಕೊಡುವೆನು.

ಉತ್ತರ : ರಾಘವಾಂಕನ ಸಿದ್ಧರಾಮ ಚಾರಿತ್ರದಲ್ಲಿ, ಸಿದ್ಧರಾಮನು ತನ್ನ ಮಲ್ಲಯ್ಯನನ್ನು ಎಲ್ಲ ಕಡೆಗಳಲ್ಲಿಯೂ ಹುಡುಕಿ, ಕಾಣದೆ ಬೇಸತ್ತು ಮೇಲಿನಂತೆ– ಹೇಳುತ್ತಾನೆ. ಆತನು ಶ್ರೀಶೈಲಕ್ಕೆ ಬಂದು ಅಲ್ಲಿಯೂ ತನ್ನ ಮಲ್ಲಯ್ಯನನ್ನು ಕಾಣದಾಗಲು, ಆ ಪರ್ವತದ ಒಂದು ಕಮ್ಮರಿಯ ಬಳಿ ನಿಂತು ಮಲ್ಲಯ್ಯನನ್ನು ಕುರಿತು– "ಇನ್ನೊಮ್ಮೆ ಕರೆಯುತ್ತೇನೆ, ಬಾರ ದಿದ್ದರೆ ಈ ಕಮ್ಮರಿಯಲ್ಲಿ ಬಿದ್ದು ಪ್ರಾಣ ಬಿಡುತ್ತೇನೆ" ಎಂದ. ಅನ್ನುವಾಗ ಸಿದ್ಧರಾಮನು ಅತ್ಯಂತ ಪರವಶನಾದನು.

(3) ನೀರಿಲ್ಲದ ಬರಿಯ ಮೋಡ ಗುಡುಗುವಂತೆ ಗುಡುಗಾಡಬೇಡ :

ಉತ್ತರ : ಗದಾಯುದ್ಧದ ಸಮಯದಲ್ಲಿ ದುರ್ಯೋಧ ನನು ಭೀಮನನ್ನು ಕುರಿತು ಹೀಗೆ ಹೇಳಿದನು, "ವೃಕೋದರ, ಸುಮ್ಮನೆ ಹೊಗಳಿಕೊಳ್ಳಬೇಡ. ನಿನ್ನ ಯುದ್ಧದ ತೀಟೆಯನ್ನು ತೀರಿಸಿ ಬಿಡುತ್ತೇನೆ, ನೀರಿಲ್ಲದ ಮೋಡ ಗುಡುಗುವಂತೆ ಗುಡುಗ ಬೇಡ, ಯುದ ದಲ್ಲಿ ನಿನ್ನ ಬಲವನ್ನು ತೋರಿಸು" ಎನ್ನುತ್ತಾನೆ.

(4) ಸಂಚಾರದ ವೇಗದಲ್ಲಿ ನಾವು ಆನೆಯೊದರೆ ಅವರು ಜಿಂಕೆ:

ಉತ್ತರ : ಈ ವಾಕ್ಯವು "ಗೋಲ್ಡನ್‌ಗೇಟ ಪಾರ್ಕಿನಲ್ಲಿ" ಎಂಬ ಪಾಠದಲ್ಲಿ ಹಾರಾಡುವ ಪಟ್ಟಿಗಳ ವಿಷಯವಾಗಿ ಹೇಳಲ್ಪ ಟ್ಟಿದೆ, ವಿಜ್ಞಾನಿಗಳು ಇವುಗಳ ಬಗೆಗೆ ವಿವರಣೆ ನೀಡುತ್ತ "ನಮಗಿಂತ ಸಾವಿರಾರು ಪಾಲು ವಿಜ್ಞಾನದಲ್ಲಿ ಮುಂದುವರಿದ

ಒಂದು ವರ್ಗ ನಮಗೆ ತಿಳಿಯದ ಯಾವುದೇ ನೆಲೆಯಲ್ಲಿರ ಬೇಕು,..." ಇತ್ಯಾದಿಯಾಗಿ ಹೇಳುತ್ತಾ ಅವರು ನಮಗಿಂತ ಹೆಚ್ಚು ವೇಗವಾಗಿ ಹೋಗಬಲ್ಲರು ಎಂದಿದ್ದಾರೆ.

5) ಇನ್ನೂ ಹುಡುಗ, ಚಿಕ್ಕವ, ಮುಂದಕ್ಕೆ ಓದಿಸಬಹುದಲ್ಲ.

ಉತ್ತರ ; ಶ್ರೀ ಜವರೇಗೌಡರು ಬಾಲ್ಯದಲ್ಲಿ ಕುರಿ, ಮೇಕೆಗಳನ್ನು ಮೇಯಿಸುತ್ತಿದ್ದು, ಹೆಚ್. ಕೆ. ವೀರಣ್ಣಗೌಡರ ಸಹಾಯದಿಂದ ಶಾಲೆಗೆ ಸೇರಿ, ಕನ್ನಡ ಲೋಯರ ಸೆಕೆಂಡರಿ ಪರೀಕ್ಷೆಯಲ್ಲಿ ಪಾಸಾದರು. ಆಗ ಹಲವರು ಉಪಾಧ್ಯಾಯರು ಅವರ ತಂದೆಯ ಬಳಿಗೆ ಬಂದು—"ಇನ್ನೂ ಹುಡುಗ, ಚಿಕ್ಕವ, ಮುಂದಕ್ಕೆ ಓದಿಸಬಹುದಲ್ಲ" ಎಂದು ಹೇಳಿ ಅವರ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹಿಸಿದರು.

ಪ್ರಶ್ನೆ 7. ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರವನ್ನು ಬರೆಯಿರಿ.

1) ಗಿರಿಜನರಾದ ಸಾವೋರಾಗಳ ಜೀವನ ಕ್ರಮ ಎಂತಹದು ?

ಉತ್ತರ : ಓರಿಸ್ಸಾದ ಬೋಂಡೋ ಪ್ರದೇಶದ ಗಿರಿಜನರು ಸಾವೋರಾಗಳು. ನೂರಾರು ವರ್ಷಗಳಿಂದ ಹಿಂದುಳಿದವರು. ಇವರಿಗೆ ಪಿಕ್ ಎಂಬ ಚುಟ್ಟ ಹಾಗೂ ಟೀ ತುಂಬಾ ಪ್ರೀತಿ. ಹೊರಗಿನವರನ್ನು ಕಂಡು ಹೆದರುತ್ತಾರೆ. ಹೆದರಿಕೆಯಿಂದ ಶಾಂತಿ ಮಾಡುತ್ತಾರೆ. ಪ್ರಾಣಿಗಳನ್ನು ಬಲಿ ಕೊಡುತ್ತಾರೆ. ಮೂಢನಂಬಿಕೆ, ಮಾಟ-ಮಂತ್ರಗಳಲ್ಲಿ ನಂಬಿಕೆಯುಳ್ಳವರು. ಉತ್ತಮ ಸಹಕಾರಿಗಳು.

(2) ಕಿಟೆಲ್ ಕನ್ನಡ-ಇಂಗ್ಲೀಷ ನಿಘಂಟುವಿನ ವೈಶಿಷ್ಟ್ಯವೇನು ?

ಉತ್ತರ : ಕಿಟೆಲ್‌ರವರು ಕ್ರಿ. ಶ. 1882 ರಿಂದ 1894ರ ವರೆಗೆ ಅವ್ಯಾಹತ ಪರಿಶ್ರಮ ಮಾಡಿ ಕನ್ನಡಿಗರಿಗೆ ಅಪೂರ್ವವಾದ ಕನ್ನಡ-ಇಂಗ್ಲೀಷ ನಿಘಂಟುವಿನ ಕಾಣಿಕೆಯನ್ನಿತ್ತಿದ್ದಾರೆ. ಇದು ಅವರ ತಪಸ್ಸಿನ ಫಲ. ಸುಮಾರು 70,000 ಶಬ್ದ ಸಂಗ್ರಹವುಳ್ಳ ಗ್ರಂಥವಿದಾಗಿದೆ. ಇದರಿಂದ ಕನ್ನಡಿಗರು ಬಹಳ ಉಪಕೃತರಾಗಿದ್ದಾರೆಂದು ಹೇಳಬೇಕಾಗಿದ್ದಿಲ್ಲ.

(3) ಹಳ್ಳಿಯ ಗರತಿಯ ಬೆಳಗಿನ ಕಾರ್ಯಗಳಾವುವು ?

ಉತ್ತರ : ಬೆಳಗಾಗುತ್ತಲೇ ಗರತಿಯು ಎದ್ದು ಕಸ ಗೂಡಿಸಿ, ದನದ ಸಗಣಿ ಮೊದಲಾದುದನ್ನು ತೆಗೆದು ಸ್ಥಳವನ್ನು ಶುಚಿ ಮಾಡುತ್ತಾಳೆ. ಅವಳಿಗೆ ಸಗಣಿಯ ವಾಸನೆ, ಯಾಲಕ್ಕಿ ವಾಸನೆಯಂತೆ. "ಜನರನ್ನು ನಂಬಿದರೆ ಜನ ಕೈ ಬಿಟ್ಟರು, ನೀನಂತೂ ಕೈಬಿಡಬೇಡ" ಎಂದು ಶಿವನನ್ನು ಬೇಡುತ್ತಾಳೆ, ದೇವರು ಒಲಿದರೆ ತನ್ನ ಬಡತನವೆಲ್ಲ ದೂರಾಗುವದೆಂಬ ವಿಶ್ವಾಸ, ಶ್ರದ್ಧೆ ಆಕೆಯಲ್ಲಿದೆ.

(4) ರವೀಂದ್ರರು ಸ್ಥಾಪಿಸಿದ ಸಂಸ್ಥೆಗಳು ಮತ್ತು ಅವುಗಳ ಚಟುವಟಿಕೆಗಳು :

ಉತ್ತರ : ರವೀಂದ್ರರು ಸ್ಥಾಪಿಸಿದ ಸಂಸ್ಥೆಗಳು ಶಾಂತಿ ನಿಕೇತನ, ಶ್ರೀನಿಕೇತನ ಮತ್ತು ವಿಶ್ವಭಾರತಿ. ಪ್ರಾಚೀನ ವಿದ್ಯೆ ಮತ್ತು ಸಂಸ್ಕೃತಿ ಹಾಗೂ ನವೀನ ವಿದ್ಯೆ ಮತ್ತು ಸಂಸ್ಕೃತಿ ಇವುಗಳ ಸಮನ್ವಯವನ್ನು ಸಾಧಿಸುವದು ಅವರ ಗುರಿಯಾಗಿತ್ತು. ಈ ಸಂಸ್ಥೆಗಳಿಗೆ ತಮ್ಮ ಬದುಕನ್ನೇ ವಿನಿಯೋಗಿಸಿದ್ದಾರೆ.

(5) ಕಣ್ವರು ಶಾರ್ಙ್ಗರವನ ಮೂಲಕ ದುಷ್ಯಂತನಿಗೆ ಕಳಿಸಿದ ಸಂದೇಶ.

ಉತ್ತರ : ಕಣ್ವರು ಶಕುಂತಲೆಯನ್ನು ದುಷ್ಯಂತನ ಮನೆಗೆ ಕಳುಹಿಸುತ್ತಿರುವ ಸಂದರ್ಭದಲ್ಲಿ ತಮ್ಮ ಸಂದೇಶವನ್ನು ರಾಜನಿಗೆ ತಿಳಿಸಬೇಕೆಂದು ತಮ್ಮ ಶಿಷ್ಯನಿಗೆ ಈ ರೀತಿ ಹೇಳುತ್ತಾರೆ— "ಮಹಾರಾಜ, ನಾವು ಸಂಯಮಿಗಳೆಂಬುದನ್ನೂ, ನಿನ್ನ ವಂಶವು ತುಂಬ ಗೌರವಾರ್ಹವಾದುದೆಂಬುದನ್ನೂ ಚೆನ್ನಾಗಿ ಗಮನಿಸು. ಈ ಶಕುಂತಲೆಯು ತಾನಾಗಿಯೇ ನಿನ್ನಲ್ಲಿ ಮೋಹಗೊಂಡಳು ಎಂಬುದನ್ನು ಯೋಚಿಸು. ಈಕೆಯನ್ನು ನಿನ್ನ ಇತರ ಪತ್ನಿಯರಿಗೆ ಸರಿಸಮನಾಗಿ ಕಾಣುತ್ತ ಈಕೆಯನ್ನೂ ಕಾಪಾಡು. ಉಳಿದುದೆಲ್ಲ ಅವಳ ಭಾಗ್ಯಾಧೀನ, ಅದನ್ನು ವಧು ಪಕ್ಷದ ಬಂಧುಗಳಾದ ನಾವು ಹೇಳುವದಿಲ್ಲ" ಎಂಬುದು ಕಣ್ವರ ಸಂದೇಶ.

ಪ್ರಶ್ನೆ 8. ಗುಹೆಯ ಬಾಗಿಲಲ್ಲಿ ಸಿಂಹವು ಇರುವಂತೆ—ಚಕ್ರವ್ಯೂಹದ ಬಾಗಿಲಲ್ಲಿ ದ್ರೋಣನು ನಿಂತಿದ್ದನು. ಇಲ್ಲಿ ಕಂಡುಬರುವ ಅಲಂಕಾರವನ್ನು ತಿಳಿಸಿ ಸಮನ್ವಯಗೊಳಿಸಿರಿ.

ಉತ್ತರ : ಗುಹೆಯ ಬಾಗಿಲಲ್ಲಿ ಸಿಂಹವು ಇರುವಂತೆ— ಇದು ಉಪಮಾನ, ಚಕ್ರವ್ಯೂಹದ ಬಾಗಿಲಲ್ಲಿ ದ್ರೋಣನು ನಿಂತಿದ್ದನು—ಇದು ಉಪಮೇಯ. ಇವೆರಡರಲ್ಲಿ ಪರಸ್ಪರ ಹೋಲಿಕೆ ಇರುವುದರಿಂದ ಇದು ಉಪಮಾಲಂಕಾರ. ಗುಹೆ-ಚಕ್ರವ್ಯೂಹ ಹಾಗೂ ಸಿಂಹ-ದ್ರೋಣ ಇವುಗಳಲ್ಲಿ ಹೋಲಿಕೆ ಮಾಡಲಾಗಿದೆ.

ಪ್ರಶ್ನೆ 9. ಕೆಳಗಿನ ಪದ್ಯ ಭಾಗವನ್ನು ಪ್ರಸ್ತರಿಸಿ ಗಣವನ್ನು ವಿಂಗಡಿಸಿ ಛಂದಸ್ಸಿನ ಹೆಸರನ್ನು ತಿಳಿಸಿರಿ.

ರಾಮನನಗಲ್ಚಿ ತಂದಾ
ನೀ ಮಾನಿನಿಗಿನಿತು ದುಃಖಮಂ ಪುಟ್ಟಿಸಿದೆಂ |

ಉತ್ತರ : ರಾಮನ | ನಗಲ್ಚಿ | ತಂದಾ |
—UU | UU— | ——
ಳ ಳ ಳ
ನೀಮಾ | ನಿನಿಗಿನಿ | ತುದುಃಖ | ಮಂಪು
—— | UUUU | U—U | ——
ಳ ಳ ಳ ಳ
| ಟ್ಟಿಸಿದಂ |
| UU— |
ಳ

ಮೊದಲನೆಯ ಮತ್ತು ಮೂರನೆಯ ಪಾದಗಳಲ್ಲಿ 4 ಮಾತ್ರೆಯ 3 ಗಣಗಳೂ ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ 4 ಮಾತ್ರೆಯ 5 ಗಣಗಳೂ, ಬರುವುದರಿಂದ ಇದು ಕಂದ ಪದ್ಯ.

ಪ್ರಶ್ನೆ 10. ಕೆಳಗಿನ ನುಡಿಕಟ್ಟುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿರಿ.

1) ಹಾಸುಗೆ ಹಿಡಿ 2) ಕಂಟಕ ಪ್ರಾಯ
3) ಕಲ್ಪಾಂತಸ್ಥಾಯಿಯಾಗು.

ಉತ್ತರ : 1) ರಾಮನು ಒಂದು ತಿಂಗಳಿನಿಂದಲೂ ಹಾಸುಗೆ ಹಿಡಿದಿದ್ದಾನೆ.
2) ಕೃತಘ್ನರು ಯಾವಾಗಲೂ ಕಂಟಕ ಪ್ರಾಯರಾಗಿರುತ್ತಾರೆ.
3) ಕಲ್ಪಾಂತಸ್ಥಾಯಿಯಾಗು – ಎಂದು ಗುರುಗಳು ಶಿಷ್ಯನಿಗೆ ಹರಸಿದರು.

ಪ್ರಶ್ನೆ 11. (ಅ) ವಿಗ್ರಹ ವಾಕ್ಯವನ್ನು ಬರೆದು ಸಮಾಸದ ಹೆಸರು ತಿಳಿಸಿರಿ.

1) ನಟ್ಟಿರುಳು 2) ವೃಕೋದರ 3) ಇತ್ತಂಡ

ಉತ್ತರ : 1) ನಡು+ಇರುಳು—ನಟ್ಟಿರುಳು; ಕರ್ಮಧಾರಯ ಸಮಾಸ.
2) ವೃಕದ ಉದರದಂತೆ, ಉದರವು ಯಾರಿಗೋ ಅವನು ವೃಕೋದರ; ಬಹುವ್ರೀಹಿ.
3) ಎರಡು+ತಂಡ—ಇತ್ತಂಡ; ದ್ವಿಗು ಸಮಾಸ.

(ಬ) ಪದಗಳನ್ನು ವಿಂಗಡಿಸಿ ಸಂಧಿಯ ಹೆಸರನ್ನು ತಿಳಿಸಿ.

1) ದೇವೇಂದ್ರ 2) ಒಲಿದತ್ತ, 3) ಅತ್ಯಾರ್ತ

ಉತ್ತರ : 1) ದೇವ+ಇಂದ್ರ=ದೇವೇಂದ್ರ; ಗುಣ ಸಂಧಿ.
2) ಒಲಿದು+ಇತ್ತ=ಒಲಿದಿತ್ತ; ಉಕಾರ ಲೋಪಸಂಧಿ.
3) ಅತಿ+ಆರ್ತ=ಅತ್ಯಾರ್ತ; ಯಣ್ ಸಂಧಿ.

(ಕ) ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.

1) ಅಪಕಾರ 2) ತೃಗಳು 3) ವ್ಯವಸ್ಥೆ.

ಉತ್ತರ : 1) ಉಪಕಾರ, 2) ಹೊಗಳು,
3) ಅವ್ಯವಸ್ಥೆ.

ಪ್ರಶ್ನೆ 12. (ಅ) ಒಂದೊಂದು ವಾಕ್ಯದಲ್ಲಿ ಉತ್ತರವನ್ನು ಬರೆಯಿರಿ.

1) ಚಾರ್ಲಿ ಚಾಪ್ಲಿನ್ ಯಾವ ಕಾರಣಕ್ಕಾಗಿ ಅಮೇರಿಕಾದ ಪ್ರಜೆತನಕ್ಕೆ ಅರ್ಜಿ ಹಾಕಲಿಲ್ಲ ?

ತಾನು ರಾಷ್ಟ್ರೀಯವಾದಿಯಲ್ಲವೆಂದು ಚಾಪ್ಲಿನ್ ಅಮೇರಿಕಾದ ಪ್ರಜೆತನಕ್ಕೆ ಅರ್ಜಿ ಹಾಕಲಿಲ್ಲ.

2) ರವೀಂದ್ರನಾಥರ ಯಾವ ಕೃತಿಗೆ ನೋಬೆಲ್ ಬಹುಹೂನ ಬಂದಿತು ?

ರವೀಂದ್ರನಾಥರ ಗೀತಾಂಜಲಿಗೆ ನೋಬೆಲ್ ಬಹುಮಾನ ಬಂದಿತು.

3) ಕ್ರಿಮಿಯ ಯುದ್ಧದಲ್ಲಿ ಗಾಯಾಳುಗಳ ಸೇವೆ ಕೈಕೊಂಡವರು ಯಾರು ?

ಕ್ರಿಮಿಯ ಯುದ್ಧದಲ್ಲಿ ಗಾಯಾಳುಗಳ ಸೇವೆ ಕೈಕೊಂಡವಳು ಫ್ಲಾರೆನ್ಸ್ ನೈಟಿಂಗೇಲ್.

4) ಮೊಗಲರ ಕೈಗೆ ಸಿಕ್ಕದಿರಲು ರಾಮರಾಜನು ಏನು ಮಾಡಿದನು ?

ಮೊಗಲರ ಕೈಗೆ ಸಿಕ್ಕದಿರಲು ರಾಮರಾಜನು ಕೆಳದಿಗೆ ಓಡಿಹೋದನು.

5) ಬಸವಣ್ಣನವರು ವಿಜಾಪುರ ಜಿಲ್ಲೆಯ ಅಪ್ರತಿಮರು, ಹೇಗೆ ?

ಬಸವಣ್ಣನವರು ಜಾತಿ, ಮತ ಭೇದವಿಲ್ಲದೆ, ಮೇಲು—ಕೀಳುಗಳೆನ್ನದೆ, ಶಿವ ಭಕ್ತರೆಲ್ಲ ಸಮಾನರು ಎಂದು ಸಾರಿ, ವೀರಶೈವ ಮತಕ್ಕೆ ವಿಶೇಷ ಚೈತನ್ಯ ನೀಡಿದ್ದರಿಂದ ಅವರು ವಿಜಾಪುರ ಜಿಲ್ಲೆಯ ಅಪ್ರತಿಮರು.

(ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿಮಾಡಿರಿ.

ಉತ್ತರ : 1) ಖೇಚರ ಚಕ್ರವರ್ತಿ ಎಂದು ರಾವಣನನ್ನು, ವರ್ಣಿಸಿರುವ ಗ್ರಂಥ...... (ನಾಗಚಂದ್ರನ ರಾಮಚಂದ್ರಚರಿತ ಪುರಾಣ)

2) ಶಿವಗುಪ್ತಾಚಾರ್ಯರನ್ನು ಹಿಂಬಾಲಿಸಿ ಬ್ರಹ್ಮಮ್ಯನಾದವನು....(ನಂದಿಮಿತ್ರ)

3) ಮುದ್ದಣನ ಅದ್ಭುತ ರಾಮಾಯಣದಿಂದ ನಿಮಗೆ ಆಯ್ದ ಪಾಠ.......... (ಶ್ರೀಮತಿಯ ಸ್ವಯಂವರ)

4) ಮಹಾಕವಿ ಕಾಳಿದಾಸನ ಜಗದ್ವಿಖ್ಯಾತ ಸಂಸ್ಕೃತ ನಾಟಕ....... (ಅಭಿಜ್ಞಾನ ಶಾಕುಂತಲ)

5) ಚಂದ್ರಾಪೀಡನ ಕುದುರೆಯ ಹೆಸರು .......(ಇಂದ್ರಾಯುಧ)

ಪ್ರಶ್ನೆ 13. ಮೊದಲಿನ ಎರಡು ಪದಗಳಿಗೆ ಇರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದಗಳನ್ನು ಬರೆಯಿರಿ.

ಉತ್ತರ : ಅಂಬಿಕಾತನಯದತ್ತ : ದ. ರಾ. ಬೇಂದ್ರೆ– ಆನಂದಕಂದಃ (ಬೆಟಗೇರಿ ಕೃಷ್ಣಶರ್ಮ)

2) ಹೀನಕೃತ್ಯ; ಕರ್ಮಧಾರಯ– ಮಾತಾಪಿತರುಃ (ದ್ವಂದ್ವ)

3) ಪುಸ್ತಕ: ಹೊತ್ತಗೆ–ಪ್ರಯಾಣ : (ಪಯಣ)

4) ಪರಿದುಂ: ಸಗಣ– ಪೆರತು : (ನಗಣ)

5) ಸತ್ಯಾನ್ವೇಷಣೆ:ಸವರ್ಣದೀರ್ಘ–ರವೀಂದ್ರ: (ಸವರ್ಣದೀರ್ಘ)

ಪ್ರಶ್ನೆ 14. ಆಯಾಯ ಗುಂಪಿಗೆ ಸೇರದ ಪದಗಳನ್ನು ಆಯ್ದು ಬರೆಯಿರಿ.

1) ವಾಚಕಪದ, ಜನಪದ, ಉಪಮೇಯ, ಉಪಮಾನ, ಸಮಾನಧರ್ಮ (ಜನಪದ)

2) ಪ್ರಥಮ ಪುರುಷ, ದ್ವಿತೀಯ ಪುರುಷ, ಉತ್ತಮ ಪುರುಷ, ಮಧ್ಯಮ ಪುರುಷ (ದ್ವಿತೀಯ ಪುರುಷ)

3) ಕುವೆಂಪು, ದ. ರಾ. ಬೇಂದ್ರೆ, ಅ. ನ.ಕೃ.ಕಾರಂತ, ಮಾಸ್ತಿ (ಅ. ನ. ಕೃ.)

4) ಆರ್ಯ ಸಮಾಜ, ಮಹಿಳಾ ಸಮಾಜ, ಪ್ರಾರ್ಥನಾ ಸಮಾಜ, (ಮಹಿಳಾ ಸಮಾಜ)

5) ಉಪಮಾ, ರೂಪಕ, ಯಮಕ, ಉತ್ಪ್ರೇಕ್ಷೆ, ಅತಿಶಯೋಕ್ತಿ (ಯಮಕ)

ಪ್ರಶ್ನೆ 15. "ಅ" ಗುಂಪಿನ ಪದಗಳಿಗೆ "ಬ" ಗುಂಪಿನ ಪದಗಳಲ್ಲಿ ಸರಿಯಾದವುಗಳನ್ನು ಜೋಡಿಸಿ ಬರೆಯಿರಿ.

| "ಅ" | "ಬ" |
|---|---|
| 1) ಗಜಬೇಂಟೆಕಾರ | 1) ಕಾಕಮಾನಿ |
| 2) ಸುಕನಾಸಿ | 2) ದುರ್ಗಸಿಂಹ |
| 3) ಬಿ. ಡಿ. ಸುಬ್ಬಯ್ಯ | 3) ವಿಶ್ವೇಶ್ವರಯ್ಯ ಮ್ಯೂಸಿಯಂ |
| 4) ಸಹ್ಯಾಡಿ ಅಗ್ರಹಾರ | 4) ಬ್ರಾಹ್ಮಣರ ಕೇರಿ |
| 5) ಪ್ರಾಗೈತಿ ಹಾಸಿಕ ವಸ್ತು ಸಂಗ್ರಹಾಲಯ | 5) ಗರ್ಭಗುಡಿಯ ಮುಂದಿನ ಅಂಕಣ |
| | 6) ಗೊಂಬಿಗುಡ್ಡ |
| | 7) ಚಾಮರಾಜ, |

ಉತ್ತರ : 1–7, 2–5, 3–1, 4–2, 5–6,

—●—

# ಕನ್ನಡ

## ಅಕ್ಟೋಬರ–೧೯೮೫ ದ್ವಿತೀಯ ಪತ್ರಿಕೆ

ಅವಧಿ : 2 ಗಂಟೆ ಅಂಕಗಳು : 50

ಪ್ರಶ್ನೆ 1. ಈ ಕೆಳಗಿನ ಪ್ರಶ್ನೆಗಳಲ್ಲಿ ಎರಡನ್ನು ಆರಿಸಿಕೊಂಡು ಒಂದೊಂದು ಪುಟಕ್ಕೆ ಮೀರದಂತೆ ಉತ್ತರ ಬರೆಯಿರಿ.

1) ಪ್ರೊ ಗ್ಯುಸೆಪ್ಪೆ ತುಚ್ಚಿಯೊಡನೆ ಪರ್ವತಾರೋಹಣ ಕಾಲದಲ್ಲಿ ತೇನಸಿಂಗ ಪಡೆದ ಅನುಭವವನ್ನು ವರ್ಣಿಸಿರಿ.

ಉತ್ತರ : ಪ್ರೊ.ಗುಸಪ್ಪೆ ತುಚ್ಚಿ ಇಟಲಿ ದೇಶದ ಪ್ರಸಿದ್ಧ ವಿದ್ವಾಂಸ, ಬಹು ಭಾಷಾ ಪಂಡಿತ ಈತನಿಗೆ ಪ್ರಾಚ್ಯ ವಸ್ತು, ಕಲಾ-ಸಾಹಿತ್ಯಗಳಲ್ಲಿ ಅಪಾರ ಆಸಕ್ತಿ. ತನ್ನ ಕೆಲಸದಲ್ಲಿ ದಕ್ಷತೆ ಹಾಗೂ ನಿಷ್ಠೆಯುಳ್ಳವ, ತನ್ನ ಮಾತಿನಂತೆಯೇ ಕೆಲಸ ನಡೆಯಬೇಕು ಎಂಬ ವಿಶಿಷ್ಟ ಮನೋಭಾವನೆಯುಳ್ಳವನು, ಪ್ರಯಾಣ ಮಾಡುವಾಗ ಅವನ ನಡವಳಿಕೆ ಅನಿಶ್ಚಿತವಾಗಿರುತ್ತಿತ್ತು.

ತುಚ್ಚಿ ಮನೋಭಾವಕ್ಕೆ ತಕ್ಕಂತೆ ತೇನಸಿಂಗ್ ಕೆಲಸ ಮಾಡುತ್ತಿದ್ದುದರಿಂದ ಆತನನ್ನು ಮೆಚ್ಚಿಕೊಂಡ. ಬೇಟೆಗೆ

ಹೊರಟ ಪ್ರೊ ತುಚ್ಚಿ ನೇತೃತ್ವದ ಯಾತ್ರಾ ತಂಡ ಗಾಂಗ ಪಾಕ್‌ನಿಂದ ಉತ್ತರಕ್ಕೆ ಕುದುರೆ ಸವಾರಿ ಮಾಡುತ್ತ ಹೊರಟಿತು ತೇನಸಿಂಗನಿಗೆ ಕುದುರೆ ಸವಾರಿಯ ರೂಢಿ ಇರದ್ದರಿಂದ ಆತ ವಿಪರೀತ ಬೆನ್ನು ನೋವಿನಿಂದ ನರಳುತ್ತಿದ್ದ. ಜೊತೆಗೆ ಪ್ರೊ. ತುಚ್ಚಿ ತನ್ನ ಅನಿಶ್ಚಿತ ಪ್ರಯಾಣದ ನಿಲುವಿನಿಂದ ತಂಡದವರನ್ನು ತೊಂದರೆಗೀಡು ಮಾಡುತ್ತಿದ್ದ. ಟಿಬೇಟಿನಲ್ಲಿ ತನಗೆ ಸಂಶೋಧನೆಗೆ ಬೇಕಾದ ಸಾಮಗ್ರಿಗಳನ್ನೆಲ್ಲ ಸಂಗ್ರಹಿಸಿದ.

ಗಾಂಗಚೌಕಿನಿಂದ ಸುಮಾರು ಇಪ್ಪತ್ತು ದಿನಗಳ ನಂತರ; ಲಾಸಾ ಸಮೀಪಕ್ಕೆ ಬಂದರು. ತೇನಸಿಂಗನಿಗೆ ತನ್ನ ಪ್ರಿಯ ಪರ್ವತ ಚೋಮೊಲುಂಗ್ಮಾದ ಪಾದದ ಬಳಿ ಹೋಗುತ್ತಿದ್ದೇನೆ ಎಂದುಕೊಂಡು ರೋಮಾಂಚಿತನಾದ. ದೂರದಲ್ಲಿ ಬೀದಿಗಳೂ, ದೇವಾಲಯಗಳೂ, ಚೌಕಗಳೂ, ಜೊತೆಗೆ ಲಾಮಾರ ನಿವಾಸಸ್ಥಾನ ಕಂಡಕೂಡಲೇ ಆತ "ಓಂ ಮಣೀ ಪದ್ಮೆ ಓಂ" ಎಂಬ ಬೌದ್ಧರ ಪವಿತ್ರ ಮಂತ್ರವನ್ನು ಜಪಿಸಿದನು. ಅವನು ತನ್ನ ತಾಯಿ, ತಂದೆ, ಅತ್ತೆಯರ ಪರವಾಗಿ ವಿಶೇಷ ಪ್ರಾರ್ಥನೆಗಳನ್ನು ಮಾಡಿದನು, ದೇವಾಲಯಗಳಲ್ಲಿ ದೀಪಗಳನ್ನು ಹೊತ್ತಿಸಿದನು ಮನಸ್ಸಿನಲ್ಲಿ ಹರ್ಷ ಪುಳಕಿತನಾದನು.

ಯಾತ್ರಾ–ತಂಡವು ಲಾಸಾ ನಗರದಲ್ಲಿ ಒಂದು ತಿಂಗಳು ಇದ್ದು, ನಂತರ ಏಳು ತಿಂಗಳು ಕಾಲ ಟಿಬೆಟ್ಟಿನಲ್ಲಿ ಸಂಚರಿಸಿದರು. ಪವಿತ್ರ ಭೂಮಿಯಾದ ಟಿಬೆಟ್ಟಿನಲ್ಲಿ ಅನೇಕ ಬೌದ್ಧ ಮಠಗಳ ಮತ್ತು ಪಟ್ಟಣಗಳ ಭೇಟಿಯಿಂದ ತೇನಸಿಂಗನಿಗೆ ತುಂಬ ಸಂತೋಷವಾಯಿತು. ಪ್ರೊ. ತುಚ್ಚಿ ಬಹಳಷ್ಟು ವಸ್ತುಗಳನ್ನು ಸಂಗ್ರಹಿಸಿದನು. ತೇನಸಿಂಗನೂ ಕೆಲವನ್ನು ಸಂಗ್ರಹಿಸಿದನು. ದಲೈ ಲಾಮಾರವರು ತೇನಸಿಂಗನಿಗೆ ತಮ್ಮ ಬಳಿ ಇದ್ದ ಎರಡು ಜೂಲ ನಾಯಿಗಳನ್ನು ಬಹುಮಾನವಾಗಿ ಕೊಟ್ಟರು. ಹೀಗೆ ಒಂಬತ್ತು ತಿಂಗಳು ಯಾತ್ರೆಯನ್ನು ಮುಗಿಸಿ ಅವರು ಭಾರತಕ್ಕೆ ಹಿಂದಿರುಗಿದರು.

**2. ಬೋಸರು ಪ್ರೆಸಿಡೆನ್ಸಿ ಕಾಲೇಜಿನ ಅಧ್ಯಾಪಕರಾಗಿ ಹೋದಾಗ ಅಲ್ಲಿನ ಪ್ರಯೋಗಾಲಯದ ಪರಿಸ್ಥಿತಿ, ಅದನ್ನು ಸರಿಪಡಿಸಿದ ಬಗೆ ತಿಳಿಸಿ.**

**ಉತ್ತರ :** ಜಗದೀಶಚಂದ್ರ ಬೋಸರಿಗೆ ಮೊದಲಿನಿಂದಲೂ ಸಂಶೋಧನೆಗಳಲ್ಲಿ ವಿಶೇಷ ಆಸಕ್ತಿ ಇತ್ತು. ಹೆಚ್ಚಿನ ಸಂಶೋಧನೆಗಳನ್ನು ಮಾಡಬೇಕೆಂಬುದು ಅವರ ಪ್ರಬಲ ಇಚ್ಛೆಯಾಗಿತ್ತು. ಆದರೆ ಅವರು ಅಧ್ಯಾಪಕರಾಗಿ ಸೇರಿದ ಕಾಲೇಜಿನಲ್ಲಿ ಅದಕ್ಕೆ ಬೇಕಾದ ಆಧುನಿಕ ಉಪಕರಣಗಳಾಗಲಿ, ತಾಂತ್ರಿಕ ಇತರ ಸೌಲಭ್ಯಗಳಾಗಲಿ ಇರಲಿಲ್ಲ. ಆಂಗ್ಲರ ಆಡಳಿತದಲ್ಲಿ ಭಾರತೀಯರು ಏನು ತಾನೆ ಸಂಶೋಧನೆಗಳನ್ನು ಮಾಡಬಲ್ಲರು ಎಂಬ ತಾತ್ಸಾರ ಭಾವವಿತ್ತು. ಹೀಗಾಗಿ ಯಾವುದೋ ಕಾಲದ ಹಳೆಯ ಉಪಕರಣಗಳು ಮಾತ್ರ ದೊರೆಯುತ್ತಿದ್ದವು. ಇತರರು ಯಾರೂ ಆ ಬಗೆಗೆ ಆಸಕ್ತಿಯನ್ನು ಹೊಂದದೇ ಇದ್ದುದರಿಂದ ಎಲ್ಲ ಕಾಲೇಜುಗಳಲ್ಲಿಯೂ ಅಂತಹದೇ– ಪರಿಸ್ಥಿತಿ ಇತ್ತು. ಕಾಲೇಜಿನ ಆಡಳಿತ ವರ್ಗದವರ ಮೂಲಕ ಪಡೆಯುವದು ಕೂಡಾ ಅಷ್ಟೊಂದು ಸುಲಭವಾಗಿರಲಿಲ್ಲ. ವಿಧಿಯಿಲ್ಲದೆ ಅವರು ತಮ್ಮದೇ ಆದ ವ್ಯವಸ್ಥೆಯನ್ನು ಮಾಡಿಕೊಳ್ಳಲು ಮುಂದಾದರು. ತಮಗೆ ಬೇಕಾದ ಉಪಕರಣಗಳನ್ನು ತಾವೇ ತಮ್ಮ ಸ್ವಂತ ಖರ್ಚಿನಲ್ಲಿಯೇ ಸಿದ್ಧಪಡಿಸಿಕೊಂಡರು. ಸ್ವದೇಶಿಯ ಕೆಲಸಗಾರರನ್ನು ಬಳಸಿಕೊಂಡು ಅಗತ್ಯವೆನಿಸಿದ ಉಪಕರಣಗಳನ್ನ ಅವರಿಂದ ಮಾಡಿಸಿದರು. ತಮ್ಮ ಪ್ರಯೋಗಗಳನ್ನು ಮುನ್ನಡೆಸಿದರು. ಅವರ ಮೊದಲ ಸಂಶೋಧನೆ "ವಿದ್ಯುಚ್ಛಕ್ತಿಯಿಂದಾಗುವ ಪ್ರಸರಣಗಳು" ಎಂಬುದು ಅವರಿಗೆ ಒಳ್ಳೆಯ ಗೌರವವನ್ನು ತಂದಿತು. ತಮ್ಮ ಮುಂದಿನ ಸಂಶೋಧನೆಗಳನ್ನು ಲಂಡನ್ನಿನ ರಾಯಲ್ ಸೊಸಾಯಿಟಿಗೆ ಕಳುಹಿಸಿ ಮನ್ನಣೆ ಪಡೆದರು. ಅವರ ಆಸಕ್ತಿ, ಧೈರ್ಯ, ಸಾಹಸಗಳು ಪ್ರಶಂಸನೀಯ.

**3) "ಬಾಂದರ್ ಪೂಂಚ್" ಪರ್ವತಾರೋಹಣದ ಅನುಭವ, ಬರುವ ದಾರಿಯಲ್ಲಿ ತೇನಸಿಂಗನಿಗಾದ ರೋಮಾಂಚಕಾರಿ ಘಟನೆಯನ್ನು ವಿವರಿಸಿ.**

**ಉತ್ತರ :** 1950 ರ ವಸಂತ ಕಾಲದಲ್ಲಿ ಗಿಬ್ಸನ್‌ನಿಂದ ತೇನಸಿಂಗನಿಗೆ ಗರ್ವಾಲಿನ್ ಬಾಂದರಪೂಂಚಿ. ಪರ್ವತವನ್ನು ಏರುವದಕ್ಕಾಗಿ ಕರೆ ಬಂದಿತು. ಅವರು ಗರ್ವಾಲಿನ ಕಾಡು, ಹೊಳೆಗಳನ್ನೂ ದಾಟಿ, ಎತ್ತರದ ಕಣಿವೆ ಮಾರ್ಗಗಳನ್ನೇರಿ ಬಾಂದರ ಪೂಂಚಿ ಶಿಖರದ ಅಡಿಯನ್ನು ತಲುಪಿ ಅಲ್ಲಿಯ ಶಿಖರಕ್ಕೆ ಹೋದರ. ನಂತರ ಸುಮಾರು 1800 ಅಡಿ ಎತ್ತರದಲ್ಲಿ ಮೂರನೆಯ ಶಿಬಿರವನ್ನು ಕೂಡಿದರು. ಈಗಾಗಲೇ ಅವರು ಶಿಖರದ ತುದಿಗೆ ಸಾಕಷ್ಟು ಸಮೀಪದಲ್ಲಿಯೇ ಇದ್ದರು. ಇನ್ನೇನು ಸ್ವಲ್ಪ ದೂರ ಹತ್ತಿದರೆ ಸಾಕು, ಶಿಖರವನ್ನೂ ಸೇರಬಹುದು ಎನ್ನುವಾಗಲೇ ಆ ತಂಡದಲ್ಲಿದ್ದ ಒಬ್ಬನಿಗೆ ಕಾಯಿಲೆ ಬಂದಿತು. ಬಳಲುತ್ತಿದ್ದ ಅವನನ್ನು ಬಿಟ್ಟು ಹೋಗಲು ನಾಯಕ ಗಿಬ್ಸನ್‌ಗೆ ಮನಸ್ಸು ಬರಲಿಲ್ಲ. ಆತನ ಸೇವೆಗೆ ಸ್ವತಃ ತಾನೇ ನಿಂತುಕೊಂಡನು. ಅನೇಕ ವರ್ಷಗಳಿಂದ ಶಿಖರವನ್ನೇರಲು ಪ್ರಯತ್ನಿಸುತ್ತಿದ್ದ ಗಿಬ್ಸನ್ ತನ್ನ ಗುರಿಯಿಂದ ವಂಚಿತನಾಗಬೇಕಾಯಿತೆಂದು ತೇನಸಿಂಗ ವ್ಯಥೆಪಟ್ಟನು.

ಮರುದಿನ ತೇನಸಿಂಗನು ತನ್ನ ಇತರ ಸಂಗಡಿಗರೊಂದಿಗೆ ಪರ್ವತ ಏರುವದನ್ನು ಮುಂದವರಿಸಿದನು. ಅವರು

ಪರ್ವತವನ್ನು ಏರುವ ಪ್ರಯತ್ನದಲ್ಲಿ ಅನೇಕ ತಾಸುಗಳನ್ನು ಕಳೆದರು. ಅಂತೂ ಕೊನೆಗೊಮ್ಮೆ 20720 ಅಡಿ ಎತ್ತರದ ಆ ಶಿಖರವನ್ನು ಹತ್ತಿ ವಿಜಯಗಳಿಸಿದರು. ಈಮೊದಲು ಅನೇಕರ ಸಾಹಸಕ್ಕೆ ವಿಫಲಗೊಳಿಸಿದ್ದ ಈ ಶಿಖರ ಈಗ ತೇನಸಿಂಗ. ಹಾಗೂ ಆತನ ಸಹ ಆರೋಹಿಗಳಿಗೆ ಜಯತಂದು ಕೊಟ್ಟಿತು. ತೇನಸಿಂಗನಿಗೂ ಇದೊಂದು ಅದ್ಭುತ ಸಾಹಸದ ಕೀರ್ತಿ ಲಭಿಸಿತು.

ಇಳಿದು ಬರುವಾಗ ದೂತಿಪಲ್ ಎಂಬ ಸರೋವರದ ಬಳಿಯಲ್ಲಿ ಶಿಬಿರ ಹೂಡಿ ವಿಶ್ರಮಿಸಿದರು. ತೇನಸಿಂಗ ಬಿಸಿಲಲ್ಲಿ ಹ್ಯಾಟನ್ನು ಮರೆಮಾಡಿಕೊಂಡು ಮಲಗಿದ್ದ. ಎಚ್ಚೆತ್ತಾಗ ಅವನ ಹ್ಯಾಟಿನ ಮೇಲೆ ಹಾವೊಂದು ಸುತ್ತಿಕೊಂಡಿರುವದು ಕಂಡಿತು, ಅವನು ಜೋರಾಗಿ ಚೀರಿ ಅದನ್ನು ಬಿಸಾಡಿದನು. ಉಳಿದವರು ಅದನ್ನು ಕೊಂದು ಹಾಕಿದರು. ಈ ರೀತಿ ಹಾವು ತಲೆಯ ಮೇಲೆ ಬಂದರೆ ಶ್ರೇಯಸ್ಕರ ಎಂಬುದು ಜನರಲ್ಲಿಯ ನಂಬಿಗೆ. ಅಂತೂ ತೇನಸಿಂಗ ಪರ್ವತ ಸಾಮ್ರಾಜ್ಯ ಚಕ್ರವರ್ತಿ ಎನಿಸಿದ.

4) "ತಾನೊಂದು ಬಗೆದರೆ ದೈವವೊಂದು ಬಗೆಯಿತು" ಈ ಮಾತನ್ನು ಅರವಿಂದರ ವಿದ್ಯಾಭ್ಯಾಸಕ್ಕೆ ಅನ್ವಯಿಸಿ ಬರೆಯಿರಿ.

ಉತ್ತರ : ಅರವಿಂದರು ಅಣ್ಣನ ಬಲಾತ್ಕಾರಕ್ಕಾಗಿ "ಇಂಡಿಯನ್ ಸರ್ವಿಸ್" ಪರೀಕ್ಷೆಗೆ ಕುಳಿತರು. ಸ್ವತಃ ಕಷ್ಟಪಟ್ಟು ಓದಿದರು. ಐ. ಸಿ. ಎಸ್. ಪರೀಕ್ಷೆಯಲ್ಲಿ ತೇರ್ಗಡೆಯಾದರು. ಆ ಪರೀಕ್ಷೆಯಲ್ಲಿ ಪಾಸಾದರೂ ಅದರ ಫಲ ಮಾತ್ರ ಅವರಿಗೆ ದೊರಕಲಿಲ್ಲ. ಸರ್ಟಿಫಿಕೇಟ ಪಡೆಯಲು ಕುದುರೆ ಸವಾರಿಯಲ್ಲಿ ತೇರ್ಗಡೆಯಾಗಬೇಕಿತ್ತು . ಇದು ಅಲ್ಲಿದ್ದ ನಿಯಮ ಅರವಿಂದರು ಅದನ್ನು ಪಾಲಿಸಲಿಲ್ಲ, ಕುದುರೆ ಸವಾರಿ ಪರೀಕ್ಷೆಗೂ ಹೋಗಲಿಲ್ಲ. ಅವರಿಗೆ ಕುದುರೆ ಸವಾರಿ ಬರುತ್ತಿರಲಿಲ್ಲವೆಂದಲ್ಲ, ಅವರ ಉದ್ದೇಶವೇ ಬೇರೆಯಾಗಿತ್ತು. ಆ ಸಮಯಕ್ಕೆ ತಂದೆಯವರು ಕಳುಹಿಸಿದ ಒಂದು ಪತ್ರಿಕೆಯಿಂದ ಬ್ರಿಟಿಷರು ಭಾರತದಲ್ಲಿ ಮಾಡುತ್ತಿದ್ದ ಅನ್ಯಾಯಗಳ ಪರಿಚಯವಾಗಿ, ಬ್ರಿಟಿಷರ ಸೇವಕರಾಗದೆ, ಭಾರತದ ಸ್ವಾತಂತ್ರ್ಯಕ್ಕಾಗಿ ಶ್ರಮಿಸಬೇಕೆಂದು ಪಣತೊಟ್ಟರು, ಬ್ರಿಟಿಷರ ಆಡಳಿತದಿಂದ ಬಿಡುಗಡೆಯನ್ನು ಪಡೆದು, ಭಾರತ ಸ್ವತಂತ್ರವಾಗದ ಹೊರತು ಅದರ ಉದ್ಧಾರ ಸಾಧ್ಯವಿಲ್ಲವೆಂಬುದನ್ನು ಮನಗಂಡರು. ದಿಟ್ಟತನದ ಹೋರಾಟದಿಂದ ಸ್ವಾತಂತ್ರ್ಯಗಳಿಸಬೇಕೆಂದು ನಂಬಿದ್ದರು. ಸ್ವತಂತ್ರ ಭಾರತವೇ ಅವರ ಕನಸಾಗಿತ್ತು.

ಅರವಿಂದರು ಅಧಿಕಾರದ ಆಸೆಯಿಂದ ದೂರಸರಿದು ಮಾತೃಭೂಮಿಯ ಸ್ವತಂತ್ರದ ಹಂಬಲ ಹೊಂದಿ ಪ್ರೇರಣೆ ಪಡೆದವರಾಗಿ ಕುದುರೆ ಸವಾರಿ ಪರೀಕ್ಷೆಯನ್ನು ತಪ್ಪಿಸಿದರು. ಬ್ರಿಟಿಷ್ ಸರಕಾರ ಈ ಕಾರಣಕ್ಕಾಗಿ ಅವರನ್ನು ಐ. ಸಿ. ಎಸ್. ಪರೀಕ್ಷೆ ಪೂರ್ಣಗೊಳಿಸಲಿಲ್ಲವೆಂದು ಪಾಸು ಮಾಡಲಿಲ್ಲ. ಅರವಿಂದರಿಗೆ ಭಾರತಕ್ಕೆ ಹಿಂದಿರುಗಬೇಕೆಂಬ ಬಲವಾದ ಇಚ್ಛೆ ಇದ್ದಿತು. ಅದೇ ವೇಳೆಗೆ ಬರೋಡಾದ ಗಾಯಕವಾಡ ಮಹಾರಾಜರ ಆಗಮನದಿಂದ ಅವರ ಪರಿಚಯವಾಯಿತು. ಅವರು ಅರವಿಂದರನ್ನು ತಮ್ಮ ಸಂಸ್ಥಾನಕ್ಕೆ ಆಹ್ವಾನಿಸಿದರು. ಇದರಿಂದ ಸಂತೋಷ ಹೊಂದಿ ಅವರು ಭಾರತಕ್ಕೆ ಬರಲು ಸಿದ್ಧರಾದರು. ಅಂತೂ "ತಾನೊಂದು ಬಗೆದರೆ ದೈವವೊಂದು ಬಗೆಯಿತು" ಎಂಬ ಮಾತು ಅರವಿಂದರ ವಿದ್ಯಾಭ್ಯಾಸದಲ್ಲಿ ಕಾಣಬಹುದು.

ಪ್ರಶ್ನೆ 2. ಈ ಪ್ರಶ್ನೆಗಳಿಗೆ ಏಳೆಂಟು ವಾಕ್ಯಗಳಲ್ಲಿ ಉತ್ತರ ಬರೆಯಿರಿ

1. ಷರ್ಪಾಜನರಿಂದ ಪರ್ವತಾರೋಹಿಗಳು ಪಡೆಯುವ ಸಹಾಯ.

ಉತ್ತರ : ಷರ್ಪಾಗಳು ಪರ್ವತಾರೋಹಿಗಳಿಗೆ ಪೋರ್ಟರುಗಳಂತೆ ಕಾರ್ಯಮಾಡುತ್ತಾರೆ. ಹಿಮಗಿರಿಯ ಚಳಿಯಲ್ಲಿ ಹುಟ್ಟಿ ಬೆಳೆದ ಇವರು ದೃಢಕಾಯರೂ, ಕಷ್ಟ ಸಹಿಷ್ಣುಗಳೂ ಆಗಿರುತ್ತಾರೆ. ಇವರು ಪರ್ವತಾರೋಹಿಗಳ ಕಾರ್ಯಕ್ಕೆ ನೆರವು ನೀಡುವರು. ಅವರ ಯೋಗಕ್ಷೇಮ ನೋಡಿಕೊಳ್ಳುವರು ಪರ್ವತಾರೋಹಿಗಳ ಸಾಮಾನು ಸರಂಜಾಮುಗಳನ್ನು ಹೊತ್ತೊಯ್ಯುವದು. ಹಿಮದಲ್ಲಿ ಮೆಟ್ಟಲುಗಳನ್ನು ಕಡಿಯುವದು, ಹಗ್ಗಗಳನ್ನು ಕಟ್ಟುವದು, ಶಿಬಿರಗಳನ್ನು ಏರ್ಪಡಿಸುವದು ಹಾಗೂ ಅಡಿಗೆ ಮಾಡುವದು ಈ ಮುಂತಾದ ಕಾರ್ಯಗಳನ್ನು ಮಾಡುತ್ತ ಪರ್ವತಾರೋಹಿಗಳಿಗೆ ಸಹಾಯಕರಾಗಿರುತ್ತಾರೆ.

2. ತ್ಸಚು ಗ್ರಾಮದ ವೈಶಿಷ್ಟ್ಯ

ಉತ್ತರ : (1984 ನೇ ಅಕ್ಟೋಬರ ದ್ವಿತೀಯ ಪತ್ರಿಕೆ 2ನೇ ಪ್ರಶ್ನೆಯ 3ನೇ ಉಪ ಪ್ರಶ್ನೆ ನೋಡಿರಿ)

3) ವೈಸರಾಯ್ "ವಂಗಭಂಗ" ಶಾಸನವನ್ನು ಏಕೆ ಜಾರಿಗೆ ತಂದರು ?

ಉತ್ತರ : ಅರವಿಂದ ಘೋಷರ ನೇತೃತ್ವದಲ್ಲಿ ಅನೇಕ ಕ್ರಾಂತಿಕಾರರು ಸಂಘಟಿತರಾಗಿ ಬ್ರಿಟಿಷರನ್ನು ಭಾರತದಿಂದ ಓಡಿಸಿ ದೇಶವನ್ನು ಸ್ವತಂತ್ರಗೊಳಿಸಲು ಪ್ರಯತ್ನಿಸುತ್ತಿದ್ದರು. ಇಡೀ ಬಂಗಾಳದಲ್ಲಿ ಕ್ರಾಂತಿ ಸಿಡಿದೇಳುವ ಹಾಗಿತ್ತು. ಈ ಮಹಾವಿಪತ್ತನ್ನು ಗಮನಿಸಿದ ವೈಸರಾಯ್ ಲಾರ್ಡ್ ಕರ್ಝನ್ ಬಂಗಾಳದ ಜನರ ಒಕ್ಕಟ್ಟನ್ನು ಒಡೆಯಲು ಹವ

ಣೆಸಿ, ಮುಸ್ಲಿಮರೇ ಹೆಚ್ಚಾಗಿದ್ದ ಪೂರ್ವ ಬಂಗಾಳವನ್ನು ಪ್ರತ್ಯೇಕ ಭಾಗವಾಗಿ ಮಾಡಲು "ವಂಗಭಂಗ" ಶಾಸನವನ್ನು ತಂದನು. ಇದುವೇ ಕಾರಣವಾಗಿ ಉಗ್ರಗಾಮಿಗಳು ಹೋರಾಟ ಕ್ಕಿಳಿದರು.

4) ಅರವಿಂದರು ನೆನಪಿಸಿಕೊಳ್ಳುವ ಅವರ ಅಜ್ಜಿಯ ಬಗೆಗಿನ ಒಂದು ಸ್ವಾರಸ್ಯಕಾರಿ ಘಟನೆ.

ಉತ್ತರ : ಅರವಿಂದರು ಡಾರ್ಜಲಿಂಗಿನಲ್ಲಿ ಓದುತ್ತಿದ್ದಾಗ ಆಗಾಗ್ಗೆ ಅಜ್ಜಿಯ ಮನೆಗೆ ಹೋಗುತ್ತಿದ್ದರು. ಅವರ ಆ ಮನೆ ದೇವಘಡದಲ್ಲಿತ್ತು. ಅರವಿಂದರ ಅಜ್ಜಿ ಧರ್ಮಾತ್ಮಳು. ಖಂಡಿತವಾದಿಯಾಗಿದ್ದಳು. ಆಕೆಯ ದೇವರು ಪಾಪಮಯವಾದ ಜಗತ್ತನ್ನೂ ಸೃಷ್ಟಿಸಿರುವನೆಂದು, ಅವನು ಕಂಡರೆ ಅವನು ಸೃಷ್ಟಿಯ ಈ ರೀತಿಯನ್ನು ಖಂಡಿಸುವದಾಗಿ ಹೇಳಿದಳು. ಆಗ ಅವಳ ಪತಿ (ಅಂದರೆ ಅರವಿಂದರ ಅಜ್ಜ) ರಾಜನಾರಾಯಣ ಬೋಸ "ಎಲ್ಲಿಯವರೆಗೆ ನಿನ್ನಲ್ಲಿ ಈ ಭಾವನೆ ಇರುತ್ತದೆಯೋ ಅಲ್ಲಿಯವರೆಗೂ ಆ ದೇವರು ಅಪ್ಪಿತಪ್ಪಿ ಕೂಡಾ ನಿನ್ನ ಎದುರಿಗೆ ಬರುವದಿಲ್ಲ" ಎಂದು ನಕ್ಕರು. ಅರವಿಂದರು ಈ ಸ್ವಾರಸ್ಯಕರ ಘಟನೆಯನ್ನು ಆಗಾಗ ನೆನಪಿಸಿಕೊಳ್ಳುತ್ತಿದ್ದರಂತೆ.

5) ಬೋಸರು ಉತ್ತಮ ಸಾಹಿತಿಯೂ ಆಗಿದ್ದರು.

ಉತ್ತರ : ( 1984 ನೇ ಎಪ್ರೀಲ ಕನ್ನಡ ದ್ವಿತೀಯ ಪತ್ರಿಕೆಯ 2ನೇ ಪ್ರಶ್ನೆಯ 3 ನೆಯ ಉಪಪ್ರಶ್ನೆ ಉತ್ತರ ನೋಡಿರಿ ).

ಪ್ರಶ್ನೆ 3. ಈ ಕೆಳಗಿನ ವಿಷಯಗಳಲ್ಲಿ ಒಂದನ್ನು ಆರಿಸಿಕೊಂಡು, ಎರಡು ಪುಟಕ್ಕೆ ಮೀರದಂತೆ ಒಂದು ಪ್ರಬಂಧವನ್ನು ಬರೆಯಿರಿ.

1) ಪರಿಸರ ಮಾಲಿನ್ಯ ಮತ್ತು ವಿದ್ಯಾರ್ಥಿಗಳ ಕರ್ತವ್ಯ.

ಉತ್ತರ : ( ಮುಖ್ಯಾಂಶಗಳು- ಪರಿಸರವೆಂಬುದರ ಕಲ್ಪನೆ-ಹಳ್ಳಿಗಳಲ್ಲಿಯ ಪರಿಸರ-ಅಲ್ಲಿಯ ಮಾಲಿನ್ಯ-ಅದನ್ನು ತಡೆಗಟ್ಟುವ ಬಗೆಗೆ ಕ್ರಮಗಳು-ಶಹರಗಳಲ್ಲಿಯ ಪರಿಸರ-ಅಲ್ಲಿ ಮಾಲಿನ್ಯ ಉಂಟಾಗುವ ಬಗೆ-ಅದನ್ನು ತಡೆಗಟ್ಟಲು ಕೈಕೊಳ್ಳಬಹುದಾದ ಕ್ರಮಗಳು-ವಿದ್ಯಾರ್ಥಿಗಳ ಹೊಣೆಗಾರಿಕೆ ಹಾಗೂ ಕರ್ತವ್ಯ.)

2. ನೀವು ಮೆಚ್ಚುವ ಪುಸ್ತಕ

ಉತ್ತರ : ಅ) ನಾನು ಮೆಚ್ಚಿದ ಪುಸ್ತಕ

ಮಾನವನು ತನ್ನ ವಿರಾಮ ಕಾಲವನ್ನು ಹಲವಾರು ಬಗೆಯಲ್ಲಿ ವಿನಿಯೋಗಿಸಬಲ್ಲನು. ಅದು ಅವನ ಮನಸ್ಸಿನ ಅಭಿಲಾಷೆಯಂತೆ ನಡೆಯುವದು. ಕಥೆ-ಕಾದಂಬರಿ ಚರಿತ್ರೆಗಳನ್ನೋ, ಇನ್ನಾವುದೋ ಪುಸ್ತಕವನ್ನು ಓದುವದು ಕೂಡಾ ಒಂದು ಒಳ್ಳೆಯ ಹವ್ಯಾಸ. ನಮ್ಮ ಜೊತೆಗೆ ಒಂದು ಪುಸ್ತಕ ವಿದ್ದರೆ ಅದು ಒಬ್ಬ ಗೆಳೆಯನಿದ್ದ ಹಾಗೆ ಎಂದು ಹೇಳಿದೆ. ಈ ಪುಸ್ತಕಗಳನ್ನು ಓದುವದರಿಂದ ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆ, ಇತಿಹಾಸ ತಿಳಿದುಕೊಳ್ಳಬಹುದು. ಧಾರ್ಮಿಕ ಸಾಮಾಜಿಕ ರೀತಿ ನೀತಿಗಳನ್ನು ಅರಿತುಕೊಳ್ಳಬಹುದು. ನಮ್ಮ ಜ್ಞಾನ ಭಾಂಡಾರವನ್ನು ಹೆಚ್ಚಿಸಲೂಬಹುದು. ವಿರಾಮ ಕಾಲದಲ್ಲಿ ಇಂಥ ಪುಸ್ತಕಗಳ ಓದು ಮನಸ್ಸಿಗೆ ಆಹ್ಲಾದವನ್ನುಂಟು ಮಾಡಬಹುದಲ್ಲದೆ, ಜ್ಞಾನಾರ್ಜನೆಗೆ ಸಹಾಯಕವೂ ಆಗುವದು.

"ಹಳ್ಳಿಯ ಸೊಗಸು" ಇದು ನಾನು ಮೆಚ್ಚಿದ ಪುಸ್ತಕ. ಇದೊಂದು ಕಾವ್ಯ ಸಂಕಲನ. "ಗ್ರಾಮ ಜೀವಿ" ಎಂಬುದು ಬರೆದವರ ಕಾವ್ಯನಾಮ. ಇಲ್ಲಿ ನಿಸರ್ಗದ ಚಲುವು-ಸೌಂದರ್ಯಗಳನ್ನು ಸೆರೆ ಹಿಡಿದು ಚಿತ್ರಿಸುವ ಕಲೆ ಬಹು ಸುಂದರವಾಗಿ ವರ್ಣಿತವಾಗಿದೆ. ಮನೋಹರವಾದ ದೃಶ್ಯ ನಮ್ಮ ಕಣ್ಣೆದುರಿಗೇ ಕಾಣುತ್ತಿರುವದೇನೋ ಎಂಬಂತೆ ಕವಿಯ ವರ್ಣನಾವಿಲಾಸವನ್ನಿಲ್ಲಿ ಕಾಣುವೆವು. ನಿರ್ಜೀವತೆಯಲ್ಲಿಯೂ ಸಜೀವತ್ವವನ್ನು ತಂದುಕೊಡುವ ಕವಿಯ ಕಲ್ಪನಾ ಸಾಮರ್ಥ್ಯ ಮೆಚ್ಚಿಕೊಳ್ಳುವಂಥದು. ನಿಸರ್ಗ ರಮಣೀಯತೆಗೆ ಮಾರು ಹೋಗುವಂತೆ ತೋರಿರುವ ಪ್ರತಿಭೆ ಅಗಾಧವಾದುದು. ಎಂಥವರನ್ನೂ ಮುಗ್ಧಗೊಳಿಸುವ ಮೋಹಕ ಕಲೆಯನ್ನಿಲ್ಲಿ ಕಾಣಬಹುದು.

ಹಳ್ಳಿಯ ಜೀವನವನ್ನೇ ತೆರೆತೆರೆಯಾಗಿ ವಾಚಕರ ಎದುರಿಗೆ ತಂದು ನಿಲ್ಲಿಸಿ, ಗ್ರಾಮ ಜೀವನದ ಪರಿಚಯವನ್ನು ಮಾಡಿಕೊಡುತ್ತಿರುವದು ಇಲ್ಲಿಯ ಇನ್ನೊಂದು ವಿಶೇಷತೆಯಾಗಿದೆ. ಗ್ರಾಮ ಜೀವನದ ವಾಸ್ತವ ಚಿತ್ರಣ ಯಥಾವತ್ತಾಗಿ ಚಿತ್ರಿತವಾಗಿದೆ. ನಿತ್ಯ ಜೀವನದ ಅದೆಷ್ಟೋ ಘಟನೆಗಳನ್ನು ಎತ್ತಿ ತೋರಲಾಗಿದೆ ಬದುಕಿನ ಹೋರಾಟದಲ್ಲಿ ನಡೆಯುವದೆಲ್ಲ ಪ್ರತಿಬಿಂಬಿತವಾಗಿದೆ ಎಂದರೆ ಆಶ್ಚರ್ಯವಿಲ್ಲ. ಗ್ರಾಮ ಜೀವನ ಸಜೀವವಾಗಿ ಮೂಡಿಬಂದಿದೆ. ಗ್ರಾಮದ ಜನತೆಯ ದುಡಿಮೆ, ಬಿಡುವಿನ ವೇಳೆಯ ಉಪಯೋಗ, ಮನರಂಜನೆ, ನಡೆ-ನುಡಿಗಳು, ಹಬ್ಬ, ಹರಿದಿನಗಳು, ಉತ್ಸವಗಳು ಎಲ್ಲವೂ ಸರಳ ಸಹಜತೆಯಲ್ಲಿ ತೋರಲಾಗಿದೆ. ಅದರಲ್ಲಿಯೂ ಸೊಗಸು ರಸಿಕರ ಮನವನ್ನಾಕರ್ಷಿಸುತ್ತದೆ. ಪುಸ್ತಕವನ್ನು ಓದುತ್ತಿರುವಂತೆ ಭಾವನಾ ತರಂಗಗಳು ಮೇಲೆದ್ದು ಮೈಮನಗಳನ್ನು ಪುಲಕಿತಗೊಳಿಸುತ್ತವೆ. ರೋಮಾಂಚನವನ್ನುಂಟು ಮಾಡುತ್ತವೆ.

ಇದೊಂದು ಉತ್ತಮ ಕೃತಿ ರಚನೆಯೆಂದು ನಾನು ಮೆಚ್ಚಿಕೊಂಡಿರುವೆನಷ್ಟೆ.

3) ರಾಷ್ಟ್ರೀಯ ಉತ್ಸವ :

(ಮುಖ್ಯಾಂಶಗಳು :— ನಾವು ಸಮಯಾನುಸಾರ ಆಚರಿಸುತ್ತಿರುವ ರಾಷ್ಟ್ರೀಯ ಉತ್ಸವಗಳು—ಸ್ವಾತಂತ್ರೋತ್ಸವ, ಪ್ರಜಾರಾಜ್ಯ ದಿನೋತ್ಸವ,ಗಾಂಧಿ ಜಯಂತಿ,ಮಕ್ಕಳ ದಿನಾಚರಣೆ ಮುಂತಾದವು— (ಇವುಗಳಲ್ಲಿ ಒಂದನ್ನು ಆಯ್ದುಕೊಂಡು,) ಉತ್ಸವವನ್ನು ಎಂದು ಹೇಗೆ ಆಚರಿಸುತ್ತೇವೆ— ಆಚರಿಸುವುದರ ಮಹತ್ವ— ನಮ್ಮ ಕರ್ತವ್ಯ.)

4) ನೆರೆಯ ಹಾವಳಿ :

ಮುಖ್ಯಾಂಶಗಳು :— ನೆರೆಹಾವಳಿ ಉಂಟಾಗಲು ಕಾರಣ- ಆದರಿಂದಾಗುವ ಅನಾಹುತಗಳು—ಪ್ರಾಣ ಹಾನಿ, ಆಸ್ತಿ—ಪಾಸ್ತಿಗಳ ಹಾನಿ, ಬೆಳೆನಾಶ ಇತ್ಯಾದಿ—ನೆರೆಹಾವಳಿ ತಡೆಯಲು ಕೈಕೊಳ್ಳಬಹುದಾದ ಕ್ರಮಗಳು – ನೆರೆಹಾವಳಿಯ ಒಂದು ಪ್ರಸಂಗದ ವಿವರಣೆ)

ಪ್ರಶ್ನೆ 14. ನೀವು ವಾಸವಾಗಿರುವ ಓಣಿಯಲ್ಲಿ ನಡೆಯುವ ಕಳ್ಳತನವನ್ನು ತಡೆಗಟ್ಟಲು ಆರಕ್ಷಕರ ಸಹಾಯವನ್ನು ಕೋರಿ, ನಿಮ್ಮೂರಿನ ಆರಕ್ಷಕ ಠಾಣೆಯ (ಪೋಲೀಸ್) ಮುಖ್ಯಾಧಿಕಾರಿಗೆ ಒಂದು ಪತ್ರ ಬರೆಯಿರಿ.

ಉತ್ತರ : ಊರು.............

ದಿನಾಂಕ............

ಮಾನ್ಯ ಪೋಲೀಸ ಸಬ್ ಇನಸ್ಪೆಕ್ಟರ್ ಸಾಹೇಬರು.

............ಪೋಲೀಸ ಸ್ಟೇಶನ್.

ಮಾನ್ಯರೇ,

ಇತ್ತೀಚಿಗೆ ಊರಹೊರ ಅಂಚಿನಲ್ಲಿರುವ ನಮ್ಮ ಓಣಿಯಲ್ಲಿ ಕಳ್ಳರ ಹಾವಳಿ ಹೆಚ್ಚಾಗಿದೆ. ಕಳೆದ ತಿಂಗಳು ಒಂದರಲ್ಲಿಯೇ ನಾಲ್ಕು ಮನೆಗಳಲ್ಲಿ ಕಳವು ಮಾಡಲಾಗಿದೆ. ಒಡವೆಗಳು ನಗದು ಹಣ, ಇನ್ನಿತರ ಸುಮಾರು ಹತ್ತು ಸಾವಿರ ರೂಪಾಯಿಗಳಷ್ಟು ಮಾಲು ದೋಚಲಾಗಿದೆ. ಕಳ್ಳರು ಮನೆಗಳಲ್ಲಿ ನುಗ್ಗಿ ದರೋಡೆ ಮಾಡುವಾಗ ಅನೇಕರಿಗೆ ಗಾಯಗಳಾಗಿವೆ. ಜೀವಕ್ಕೆ ಗಂಡಾಂತರ ಪ್ರಸಂಗಗಳುಂಟು. ಜನರಲ್ಲಿ ತುಂಬ ಭೀತಿಯುಂಟಾಗಿದೆ. ಆದುದರಿಂದ ತಾವು ರಾತ್ರಿಯ ಸಮಯದಲ್ಲಿ ಈ ನಮ್ಮ ಭಾಗದಲ್ಲಿ ಹೆಚ್ಚಿನ ಪೋಲೀಸಗಸ್ತಿ ಇರುವಂತೆ ವ್ಯವಸ್ಥೆ ಮಾಡಲು ಹಾಗೂ ಕಳ್ಳರಿಂದ ನಮಗೆ ರಕ್ಷಣೆ ದೊರಕಿಸಿಕೊಡಲು ನಮ್ರ ವಿನಂತಿ.

ಇತಿ ಧನ್ಯವಾದಗಳೊಂದಿಗೆ,

ತಮ್ಮ ವಿಶ್ವಾಸಿ.

............

ವಿಳಾಸ............

ಪ್ರಶ್ನೆ 5. ಇಲ್ಲಿ ಬಿಟ್ಟಿರುವ ಸ್ಥಳಗಳನ್ನು ಸರಿಯಾದ ಮಾತುಗಳಿಂದ ತುಂಬಿರಿ.

1) ಲಂಡನ್ನಿನಲ್ಲಿ ಭಾರತೀಯ ವಿದ್ಯಾರ್ಥಿಗಳು ಸ್ಥಾಪಿಸಿದ ಸಂಘದ ಹೆಸರು......

2) ಏಳನೆಯ ಸ್ವಿಸ್ ತಂಡದ ನಾಯಕ.......

3) ಮೂರು ಸಾಲಿನ ಪದ್ಯಕ್ಕೆ.......ಎಂದು ಹೆಸರು.

4) ಹುರಿದ........ಎಂಬ ಪದಗಳನ್ನು ಸೇರಿಸಿದರೆ ಹುರಿಗಡಲೆ ಎಂದಾಗುತ್ತದೆ.

5) ಬೋಸರ ವಿವಾಹವು......ದೇವಿಯೊಡನೆ ನೆರವೇರಿತು.

ಉತ್ತರ : 1) ಕಮಲ ಮತ್ತು, ಕಠಾರಿ, 2) ಡಾ. ವೈಸ್‌ಡುನಾಂಟ, 3) ತ್ರಿಪದಿ, 4) ಕಡಲೆ, 5) ಅಬಲಾದೇವಿ.

ಪ್ರಶ್ನೆ 6. ಕೆಳಗಿನ ಪದ್ಯವನ್ನು ಓದಿಕೊಂಡು ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.

ಧರ್ರೆಂದು ಡುರ್‍ರೆಂದು ಹೊಡೆದು ಕಾಲು ಕೆದರಿ
ಟಣ್ಣನೆ ಪುಟ ನೆಗೆದು; ಮೈಮೇಲೆ ಹಾರಿ
ಸಿಕ್ಕು ಸಿಕ್ಕಿದನೆಲ್ಲಾ ಸಿಗಿದು ಹಾಕುವೆನೆಂದು
ಭರಭರಾಟಿನಲಿ ಹೊರಟ ತುಂಟ ಗೂಳಿ
ಈ ಕಡಲ ಗಾಳಿ !
ಅದ ಕಂಡು ಬಲು ಬೆದರಿ
ಮೈಯ ಮುದುರಿ
ಬಿದ್ದುಕೊಂಡಿರಲತ್ತ ಬಡಪಾಯಿ ಭೂಮಿ !
ತನಗಿನ್ನು ಗತಿಯಾರು ? ಎಂದು ಹೌಹಾರಿ !
ಮೈದೋರಿದುದು ಮಧ್ಯೆ ಈ ವೃಕ್ಷ ವೀರ,
ಅಭಯಂಕರ !
ಬೀಸು ಗಾಳಿಯ ಹೊಳೆಗೆ ಒಡ್ಡ ಕಟ್ಟಲು ಬಯಸಿ,
ಸಹಸ್ರ ಬಾಹುವದೆನಿಸಿ ತೋಳ ಬೀಸಿ,
ಧೃತಿಗೆಡದೆ ನಿಂತಿಹುದು ಏಕಾಂಗ ವೀರ !
ಅದಕೆಂದರೆ ಜನ ಕರೆದಿತೇನೋ ಇದನು,
ಗಾಳಿ ಮರ !
ಅಥವಾ ಬಗೆದಿತೋ ತಾನು
ಬಡಿದಿದೆ ಎಂದು ಗಾಳಿ–ಗರ ?
ಅಂತು ಏನೇ ಇರಲಿ

ಇದು ಖಚಿತ ನೆನಪಿರಲಿ;
ಹತ್ತರೊಳಗೊಂದಾಣೆ ಮುತ್ತೂ; ಈ ಕಡಲ ತೀರದ ಮರ!
ಮರವಲ್ಲ, ಆ–ಮರ
ಅಮರ !

1) ಕಡಲ ಗಾಳಿ ಹೇಗೆ ಬೀಸಿತು ?

ಉತ್ತರ : ಥರ್‍ರೆಂದು ಡುರ್‍ರೆಂದು ಹೊಡೆದು ಕಾಲು ಕೆದರಿ ಟಣ್ಣನೆ ಪುಟ ನೆಗೆದು ಮೈಮೇಲೆ ಹಾರಿ, ಸಿಕ್ಕಿ ಸಿಕ್ಕಿದ ದೆಲ್ಲ ಸಿಗಿದು ಹಾಕುವೆನೆಂದು ಭರಭರಾಟಿನಲಿ ಹೊರಟ ತುಂಟ ಗಾಳಿ ಈ ಕಡಲಗಾಳಿ ! ಹೀಗೆ ಕಡಲಗಾಳಿ ಭೀಕರವಾಗಿ ಬೀಸಿತು.

2) ವೃಕ್ಷವೀರನು ಮೈದೋರಲು ಕಾರಣವೇನು ?

ಉತ್ತರ : ಬಡಪಾಯಿ ಭೂಮಿ ತನಗಿನ್ನು ಗತಿಯಾರು-ಎಂದು ಹೌಹಾರಿತ್ತು. ಆಗ ಅದಕ್ಕೆ ಧೈರ್ಯ ಹೇಳುವಂತೆ, ಅಭಯ ನೀಡುವಂತೆ ಮರವು ಮೈದೋರಿತು.

3) ಜನರು ವೃಕ್ಷವನ್ನು "ಗಾಳಿಮರ" ಎಂದು ಯಾಕೆ ಕರೆದರು ?

ಉತ್ತರ : ಗಾಳಿ ಬೀಸುತ್ತಿದ್ದರೂ ಅದಕ್ಕೆದುರಾಗಿ ಧೃತಿಗೆಡದೆ, ಏಕಾಂಗವೀರನಾಗಿ ಮರವು ನಿಂತುದಕ್ಕಾಗಿ ಅದನ್ನು ಜನರು "ಗಾಳಿ ಮರ" ಎಂದು ಕರೆದರು.

4) ಯಾವುದನ್ನು ನೆನಪಿನಲ್ಲಿಡಬೇಕು ?

ಉತ್ತರ : ಹತ್ತರೊಳಗೊಂದು ಅಣೆ ಮುತ್ತು ಆ ಮರ, ಅದು ಬರಿ ಮರವಲ್ಲ, ಅಮರವೆಂಬುದನ್ನು ನೆನಪಿನಲ್ಲಿಡಬೇಕು.

ಪ್ರಶ್ನೆ 7. ಕೆಳಗಿನ ಗದ್ಯಭಾಗವನ್ನು ಓದಿಕೊಂಡು ಅದರ ಸಾರಾಂಶವನ್ನು ಐದಾರು ವಾಕ್ಯಗಳಲ್ಲಿ ಅಡಗಿಸಿ ಬರೆಯಿರಿ.

ಸತ್ಯವನ್ನು ಬಿಟ್ಟು ಬೇರೊಂದು ದೇವರಿಲ್ಲ ಎಂಬುದು ನನ್ನ ಸತತಾನುಭವ. ನನಗಿಂದು ಸತ್ಯದ ಕೇವಲ ಕ್ಷಣಿಕ ಮುಸುಕು ದರ್ಶನ. ಆದರೆ ನಾವು ನಿತ್ಯ ಪ್ರತ್ಯಕ್ಷ ಕಾಣುವ ಸೂರ್ಯನ ಕೋಟಿ ಪ್ರಭೆಯುಳ್ಳ ಅವರ್ಣನೀಯ ಸತ್ಯದ ಕೇಳಿದ ಕಲ್ಪನೆ, ಆ ದರುಶನದಿಂದ ಸಹ ಬಾರದು. ನಿಜವಾಗಿ ನೋಡಿದರೆ ಅದು ಪ್ರಚಂಡ ತೇಜಃಪುಂಜದ ತೀರ ಕಿಂಚಿತ್ ಸುಳುವು ಮಾತ್ರ. ಆದರೆ ನೀನು ಮಾಡಿದ ಎಲ್ಲ ಪ್ರಯತ್ನಗಳ ಫಲವಾಗಿ ಪೂರ್ಣ ಸಾಕ್ಷಾತ್ಕಾರದಿಂದಲೇ ಸತ್ಯದ ಸರ್ವಸ್ವದ ದರ್ಶನವಾಗಬಲ್ಲದು ಎಂದು ಖಂಡಿತವಾಗಿ ಹೇಳಬಲ್ಲೆ. ಸರ್ವತ್ರವ್ಯಾಪ್ತಿ ಇರುವ ಸರ್ವ ವ್ಯಾಪಿ ಸತ್ಯದ ಪ್ರತ್ಯಕ್ಷ ದರ್ಶನವಾಗಬೇಕಾದರೆ ನಾವು ಸೃಷ್ಟಿ ಯಲ್ಲಿರುವ ಅತ್ಯಂತ ಕೀಳು ಪ್ರಾಣಿಯನ್ನು ಕೂಡ ನಮ್ಮಷ್ಟೇ ಪ್ರೀತಿಸಲಿಕ್ಕೆಬೇಕು.

ಉತ್ತರ : ನನಗಾದುದು ದೇವರ ಸ್ವರೂಪದಿಂದ ಸತ್ಯದ ಕೇವಲ ಮುಸುಕು ದರ್ಶನ. ಆ ದರ್ಶನವು ಕೋಟಿ ಸೂರ್ಯ ಪ್ರಭೆಯುಳ್ಳ ಸತ್ಯದ ನಿಜವಾದ ಕಲ್ಪನೆಯನ್ನು ಕೊಡ ಲಾರದು. ಅದು ಒಂದು ಅಲ್ಪ ಭಾಗ ಮಾತ್ರ. ಅಹಿಂಸೆಯ ಪೂರ್ಣ ಸಾಕ್ಷಾತ್ಕಾರದಿಂದಲೇ ಸತ್ಯದ ದರ್ಶನವಾಗಬಲ್ಲದು. ಅದಕ್ಕೆ ನಾವು ಪ್ರತಿಯೊಂದು ಪ್ರಾಣಿಯನ್ನೂ ಆತ್ಮೀಯವಾಗಿ ಪ್ರೀತಿಸಬೇಕು.

—●—

# ಕನ್ನಡ

**ಮಾರ್ಚ–೧೯೬೭ ಪ್ರಥಮ ಪತ್ರಿಕೆ**

ಅವಧಿ : 2½ ಘಂಟೆ ಅಂಕಗಳು : 100

ಪ್ರಶ್ನೆ 1. ಈ ಕೆಳಗಿನ ಪ್ರಶ್ನೆಗಳಲ್ಲಿ ಮೂರನ್ನು ಆರಿಸಿಕೊಂಡು ಉತ್ತರ ಬರೆಯಿರಿ.

ಉತ್ತರ ಒಂದು ಪುಟಕ್ಕೆ ಮೀರದಿರಲಿ

1) ಮದ್ಯಪಾನದ ಬಗೆಗೆ ದೇಶವಿದೇಶದ ಜನರ ಅಭಿಪ್ರಾಯಗಳು ಯಾವುವು ?

ಉತ್ತರ : ಗಾಂಧೀಜಿಯವರನ್ನೊಳಗೊಂಡು ದೇಶ ವಿದೇಶಗಳ ನಾಯಕರೆಲ್ಲ ಮದ್ಯಪಾನದಿಂದಾಗುವ ದುಷ್ಪರಿಣಾಮ ಗಳನ್ನು ಹೇಳುತ್ತಲೇ ಬಂದಿದ್ದಾರೆ. ಇಂಗ್ಲಂಡಿನ ಸರ್ ವಿಲಿಯಂ ಆಸ್ಲರ್ ಹೀಗೆ ಹೇಳಿದ್ದಾನೆ—"ಬೀರನ್ನು ಮತ್ತಿತರ ಎಲ್ಲ ಮದ್ಯಗಳನ್ನು ಐರಿಷ್ ಕಡಲ್ಗಾಲುವೆಗೂ, ಇಂಗ್ಲೀಷ ಕಡಲ್ಗಾಲುವೆಗೂ ಮತ್ತು ಉತ್ತರ ಸಮುದ್ರಕ್ಕೂ ಒಂದು ವರ್ಷ ಪರ್ಯಂತ ಸುರಿದು ಬಿಟ್ಟರೆ, ಇಂಗ್ಲಂಡ ದೇಶದ ಜನರು ಬಹು ಮಟ್ಟಿಗೆ ಉತ್ತಮಗೊಳ್ಳುತ್ತಾರೆ. ಧರ್ಮಿಷ್ಠರ, ವೈದ್ಯರ ಹಾಗೂ ರಾಜಕಾರಿಣಿಗಳ ಮುಂದಿರುವ ಎಲ್ಲಾ ಸಮಸ್ಯೆಗಳು ಇದರಿಂದ ಪರಿಹಾರವಾಗುತ್ತವೆ."

ಜಪಾನ್ ದೇಶದ ಸುಭಾಷಿತವು—"ಮೊದಲು ಮನುಷ್ಯ ಮದ್ಯವನ್ನು ತೆಗೆದು ಕೊಳ್ಳುತ್ತಾನೆ. ಆ ಮೇಲೆ ಮದ್ಯವೇ ಮನುಷ್ಯನನ್ನು ತೆಗೆದುಕೊಳ್ಳುತ್ತದೆ" ಎಂದು ಹೇಳುತ್ತದೆ. ಕನ್ನಡ ನಾಡಿನ ಪ್ರಸಿದ್ಧ ಕವಿಯಾದ ಸರ್ವಜ್ಞನು ಮದ್ಯಪಾನ ವನ್ನುಮಾಡಿ ಇರುವುದನ್ನೆಲ್ಲ ನೀಡಿ, ಅಮಲಿನಿಂದ ಬಿದ್ದು ಬರುವಾತನ ಸದ್ದು ಅಡಗಿ ಸಂತಾನವೇ ಎದ್ದು ಹೋಗುತ್ತದೆ ಎಂದು ಹೇಳಿದ್ದಾನೆ.

ಹೀಗೆ ದೇಶವಿದೇಶದ ಜನರು ಮದ್ಯಪಾನದ ಬಗ್ಗೆ ವಿವಿಧ ಅಭಿಪ್ರಾಯಗಳನ್ನು ಹೊಂದಿದ್ದಾರೆ. ಎಲ್ಲರೂ ಇದರಿಂದ ಕೆಟ್ಟ ಪರಿಣಾಮಗಳಾಗುವದನ್ನೇ ಎತ್ತಿ ಹೇಳಿದ್ದಾರೆ.

2) ಹುಲಿಗೂ ಲಕ್ಕುವಿಗೂ ನಡೆದ ಹೋರಾಟವನ್ನೂ, ಖಾನನಿಂದ ಲಕ್ಕುವಿನ ಉಪಚಾರವನ್ನೂ ತಿಳಿಸಿ.

ಉತ್ತರ : (1984 ನೇ ಎಪ್ರೀಲ ಪ್ರಥಮ ಪತ್ರಿಕೆ 1ನೇ ಪ್ರಶ್ನೆಯ 2 ನೆಯ ಉಪಪ್ರಶ್ನೆ ಉತ್ತರ ನೋಡಿ).

3) ಕೆಳದಿಯು ಗಂಡಾಂತರಕ್ಕೆ ಗುರಿಯಾದಾಗ ಚೆನ್ನಮ್ಮ ಅದನ್ನು ಪಾರು ಮಾಡಿದ್ದು.

ಉತ್ತರ : (1985 ನೇ ಅಕ್ಟೋಬರ ಪ್ರಥಮ ಪತ್ರಿಕೆ 1 ನೇ ಪ್ರಶ್ನೆಯ 5 ನೆಯ ಉಪಪ್ರಶ್ನೆ ಉತ್ತರ ನೋಡಿರಿ).

4) ರವೀಂದ್ರರು ಯಾವ ಯಾವ ಸಂಸ್ಥೆಗಳನ್ನು ಸ್ಥಾಪಿಸಿದರು ? ಅವುಗಳ ಕಾರ್ಯ ಚಟುವಟಿಕೆಗಳನ್ನು ತಿಳಿಸಿ.

ಉತ್ತರ : ರವೀಂದ್ರರು 1) ಶಾಂತಿ ನಿಕೇತನ, 2) ಶ್ರೀ ನಿಕೇತನ, 3) ವಿಶ್ವಭಾರತಿ ಎಂಬ ಮೂರು ಮಹಾಸಂಸ್ಥೆಗಳನ್ನು ಸ್ಥಾಪಿಸಿದರು. ಈ ಸಂಸ್ಥೆಗಳಲ್ಲಿ ಪ್ರಾಚೀನ ಭಾರತದ ಸಂಸ್ಕೃತಿ ಹಾಗೂ ವಿಶ್ವದ ಎಲ್ಲ ಸಂಸ್ಕೃತಿಗಳ ಬಗೆಗಿನ ಅಧ್ಯಯನ ನಡೆಯುತ್ತದೆ.

1902 ರಲ್ಲಿ ಶಾಂತಿನಿಕೇತನ ಎಂಬ ಸ್ಥಳದಲ್ಲಿ ವಿದ್ಯಾ ಸಂಸ್ಥೆಯೊಂದನ್ನು ಪ್ರಾರಂಭಿಸಿದರು. ಇಲ್ಲಿಯ ಅಧ್ಯಯನ ಶಾಲೆಯ ನಾಲ್ಕು ಗೋಡೆಗಳ ಮಧ್ಯದಲ್ಲಿ ನಡೆಯದೆ ಹೊರಗಿನ ಪ್ರಶಾಂತ ಪ್ರಕೃತಿಯಲ್ಲಿ ನಡೆಯುತ್ತದೆ. ಇಲ್ಲಿ ಚಿತ್ರಕಲೆ, ಸಂಗೀತ, ನೃತ್ಯ ಮೊದಲಾದ ಲಲಿತ ಕಲೆಗಳೂ, ಆಧುನಿಕ ವಿದ್ಯೆಗಳೂ ಬೋಧಿಸಲ್ಪಡುತ್ತವೆ. ಜ್ಞಾನ–ವಿಜ್ಞಾನಗಳ, ಪೂರ್ವ-ಪಶ್ಚಿಮ ಸಂಸ್ಕೃತಿಗಳ ಸಮ್ಮಿಲನ ನಡೆಯುತ್ತಿದೆ. ಇದು ಜಗತ್ತಿನಲ್ಲಿ ಹೆಸರಾಂತ ವಿದ್ಯಾಮಂದಿರವಾಗಿದೆ.

1921 ರಲ್ಲಿ ರವೀಂದ್ರರು 'ವಿಶ್ವಭಾರತಿ'ಯನ್ನು ಸ್ಥಾಪಿಸಿದರು. ಇತರ ದೇಶಗಳ ಸಂಸ್ಕೃತಿ ಮತ್ತು ವಿಜ್ಞಾನಗಳನ್ನು ಭಾರತೀಯ ಸಂಸ್ಕೃತಿ ಮತ್ತು ವಿಜ್ಞಾನಗಳೊಂದಿಗೆ ರೂಪಿಸುವದೇ ಇದರ ಮುಖ್ಯ ಉದ್ದೇಶ. ಸರ್ವಧರ್ಮ ತತ್ವಗಳ ಚಿಂತನೆ, ವಿಶ್ವಮಾನವತೆ, ವಿಶ್ವಜ್ಞಾನಗಳಿಗೆ ಇಲ್ಲಿ ಬೋಧನೆ ನಡೆಯುತ್ತದೆ. ಇದೊಂದು ಗುರುಕುಲವೆಂದೇ ಹೇಳಬಹುದು. ಇಲ್ಲಿ ಎಲ್ಲರಿಗೂ ಪ್ರವೇಶವುಂಟು. ಇನ್ನು ಮೂರನೆಯದಾದ ಸಂಸ್ಥೆ ಶ್ರೀನಿಕೇತನ. ಗ್ರಾಮೋದ್ಧಾರಕ್ಕಾಗಿ ರವೀಂದ್ರರು ಇದನ್ನು ಸ್ಥಾಪಿಸಿದ್ದಾರೆ. ಇಲ್ಲಿ ಜೇನುಸಾಕಣೆ, ಕೋಳಿಸಾಕಣೆ, ದನ ಕುರಿಗಳ ಪಾಲನೆ ಪೋಷಣೆ ಮುಂತಾದ ವಿಷಯಗಳನ್ನು ಬೋಧಿಸಲಾಗುತ್ತದೆ. ಹಾಗೂ ತರಬೇತಿಯನ್ನೀಯಲಾಗುತ್ತದೆ. ಹಳ್ಳಿಗರ ಉದ್ಧಾರವಾದಾಗಲೇ ಭಾರತದ ಏಳಿಗೆ ಸಾಧ್ಯವೆಂದು ಠಾಕೂರರು ನಂಬಿದ್ದರು. ಈ ಸಂಸ್ಥೆಯನ್ನು ಸುರುಲ್ ಎಂಬಲ್ಲಿ ಸ್ಥಾಪಿಸಿದರು.

5) ಅಚ್ಛೋದ ಸರೋವರದ ನೈರ್ಮಲ್ಯ, ಸೌಂದರ್ಯ ಮತ್ತು ಪವಿತ್ರತೆಯನ್ನು ವರ್ಣಿಸಿರಿ.

ಉತ್ತರ : ಆಯಾಸಗೊಂಡ ಚಂದ್ರಾಪೀಡನು ಅಚ್ಛೋದ ಸರೋವರದ ಬಳಿಗೆ ಬಂದನು. ಅದರ ಸೌಂದರ್ಯ ಆತನನ್ನು ಬೆರಗುಗೊಳಿಸಿತು. ಸರೋವರದಲ್ಲಿ ಅರಳಿದ್ದ ತಾವರೆಗಳ ಮೇಲೆ ಬೀಸಿಕೊಂಡು ಬಂದ ಗಾಳಿಯು ಆಯಾಸವನ್ನು ಪರಿಹರಿಸಿ ಆನಂದವನ್ನುಂಟುಮಾಡಿತು. ಹಂಸಗಳ ಧ್ವನಿ ಕಿವಿಗೆ ಇಂಪಾಗಿದ್ದಿತು. ಆ ವಿಶಾಲ ಸರೋವರವು ತ್ರೈಲೋಕ್ಯ ಲಕ್ಷ್ಮಿಯು ತನ್ನ ಮುಖವನ್ನು ನೋಡಿಕೊಳ್ಳಲು ಮಾಡಿದ ಕನ್ನಡಿಯೋ, ಭೂದೇವಿಯ ಕ್ರೀಡೆಯ ಸ್ಫಟಿಕದ ನೆಲಮನೆಯೋ, ಮಹಾಸಾಗರದ ಉಗಮ ಸ್ಥಾನವೋ, ನೆಲಕ್ಕಿಳಿದ ಜಲರೂಪದ ಆಕಾಶವೊ, ಹಿಮಗಿರಿಯೇ ಕರಗಿ ನೀರಾಗಿದೆಯೋ,ಸರೋವರ ರೂಪತಾಳಿದ ತ್ರಿಭುವನದ ಪುಣ್ಯರಾಶಿಯೋ ಎನ್ನುವಂತಿತ್ತು.

ಹೆಸರಿಗೆ ತಕ್ಕಂತೆ ಅದರ ನೀರು ತಿಳಿಯಾಗಿತ್ತು. ಗಾಳಿಯಿಂದೇಳುವ ತೆರೆಗಳ ಹನಿಗಳಲ್ಲಿ ಪ್ರತಿಬಿಂಬಿಸಿದ ಸೂರ್ಯ ಕಿರಣಗಳಿಂದ ಕಾಮನ ಬಿಲ್ಲು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿತ್ತು. ದಡದಲ್ಲಿದ್ದ ಹೊಂಗೆಯ ಮರಗಳ ಕಪ್ಪು ನೆರಳು ರಾತ್ರಿಯ ಭ್ರಾಂತಿಯನ್ನುಂಟು ಮಾಡಿದುದರಿಂದ ಚಕ್ರವಾಕ ಪಕ್ಷಿದಂಪತಿಗಳು ಹಗಲಿನಲ್ಲಿಯೇ ವಿಯೋಗ ದುಃಖವನ್ನು ಅನುಭವಿಸುತ್ತಿದ್ದವು. ವಾಲಖಿಲ್ಯ ಮಹರ್ಷಿಗಳು ಅದರಲ್ಲಿ ಎಷ್ಟೋಸಲ ಸಂಧ್ಯೋಪಾಸನೆ ಮಾಡಿದ್ದರು. ಸಾವಿತ್ರಿಯು ಅದರ ಕಮಲಗಳನ್ನು ದೇವತಾರ್ಚನೆಗೆಂದು ತೆಗೆದುಕೊಂಡು ಹೋಗಿದ್ದಳು. ಪಾರ್ವತೀ ಪರಮೇಶ್ವರರೂ, ಸಪ್ತರ್ಷಿಗಳೂ ಆ ಸರೋವರದಲ್ಲಿ ಸ್ನಾನ ಮಾಡಿದ್ದುದರಿಂದ ಅದು ಪವಿತ್ರಜಲವಾಗಿತ್ತು. ಇಂದ್ರನ ಐರಾವತವೂ, ಯಮನ ಮಹಿಷವೂ ಆ ಸರೋವರದ ದಡದಲ್ಲಿ ಎಷ್ಟೋಸಲ ವಿಹರಿಸಿದ್ದವು. ಆ ಸರೋವರದ ತುಂಬ ಬಿಳಿದಾವರೆಗಳೂ,ಕೆಂದಾವರೆಗಳೂ ತುಂಬಿ ಅರಳಿದ್ದವು. ಅವುಗಳ ಶೋಭೆ ಅವರ್ಣನೀಯ. ಆ ಪುಷ್ಪಗಳ ಮಕರಂದವನ್ನು ಹೀರಿ ದುಂಬಿಗಳು ಝೇಂಕರಿಸುತ್ತಿದ್ದವು. ಜಲಚರಗಳಾದ ಮೀನು, ಮೊಸಳೆ, ಆಮೆಗಳು ಆನಂದವಾಗಿ ಚಲಿಸಾಡುತ್ತಿದ್ದವು. ತೀರದ ಮೇಲಿನ ಮರಗಳು ಹೂಗೊಂಚಲು

ಗಳಿಂದ ರಮ್ಯವಾಗಿದ್ದವು. ಆ ತಾಣದ ಪಕ್ಷಿಗಳ ಕಲರವ, ನವಿಲುಗಳ ರಮ್ಯ ನರ್ತನ, ಮಂಗಗಳ ಕುಣಿದಾಟ, ವನ್ಯ ಮೃಗಗಳ ಗರ್ಜನೆ ಎಲ್ಲವೂ ನೋಡುವವರ ಕಣ್ಣಿಗೆ ಹಬ್ಬವನ್ನುಂಟುಮಾಡಿ ಮನಸ್ಸಿಗೆ ಆನಂದವನ್ನುಂಟು ಮಾಡುತ್ತಿದ್ದವು.

ಪ್ರಶ್ನೆ 2. ಒಂದೊಂದು ಪುಟಕ್ಕೆ ಮೀರದಂತೆ ಈ ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡಕ್ಕೆ ಉತ್ತರವನ್ನು ಬರೆಯಿರಿ.

1) ಮಾನವನಿಗೆ ಒಂದು ಗುರಿಯು ಅವಶ್ಯಕವೆಂಬುದನ್ನು ಕವಿ ಅಡಿಗರು ಹೇಗೆ ಪ್ರತಿಪಾದಿಸಿದ್ದಾರೆ!

ಉತ್ತರ : ಮಾನವನ ಜೀವನ ಸಫಲವಾಗಬೇಕಾದರೆ, ಸಾರ್ಥಕವಾಗಬೇಕಾದರೆ ಅವನಿಗೊಂದು ಗುರಿ ಇರಲೇಬೇಕು, ಎಂಬುದು ನವ್ಯ ಕವನಗಳ ಕರ್ತಾರ ಗೋಪಾಲಕೃಷ್ಣ ಅಡಿಗರ ಅಭಿಪ್ರಾಯ. ಮನುಷ್ಯನಿಗೆ ಆಶೆಗಳು ಹೆಚ್ಚು. ಆದರೆ ಅಳಿಯಾಸೆಗಳಿಗೆ ಬಲಿಯಾಗಬಾರದು. ಉತ್ತಮವಾಗಿ ಬಾಳಬೇಕೆಂಬುದೇ ಅವನ ಆಶೆಯಾಗಿರಬೇಕು ಅದಕ್ಕಾಗಿ ದುಡಿಯಬೇಕು. ಆ ದುಡಿಮೆ ಫಲಕಾರಿಯಾಗಲು ಮನುಷ್ಯ ಜೀವನಕ್ಕೆ ಒಂದು ನಿರ್ದಿಷ್ಟವಾದ ಗುರಿ ಇರಬೇಕು. ಯಾವದೇ ನೆಲೆಯಿಲ್ಲದೆ ವ್ಯರ್ಥವಾಗಿ ತೊಳಲುವದು ಉಚಿತವಲ್ಲ. ಗಿಡಕ್ಕೆ ಚಿಗುರು ಮೊಗ್ಗು, ಹೂ-ಹಣ್ಣುಗಳು ಫಲಿಸುವಂತೆ ಮಾನವನ ಜೀವನದಲ್ಲೂ ಅಂತಹ ಸಫಲತೆ ಇರಬೇಕು. ದುಡಿತಕ್ಕೆ ತಕ್ಕ ಫಲವು ದೊರೆತಾಗಲಲ್ಲವೇ ಮನುಷ್ಯನಿಗೆ ಸಂತೋಷವಾಗುವದು ಇದಕ್ಕೆ ಕವಿಯು ಕೆಲವು ಉಚಿತವಾದ ಹೋಲಿಕೆಗಳನ್ನು ಕೊಟ್ಟಿದ್ದಾರೆ. ಕಮಲವು ಹುಟ್ಟುವದು ಕೆಸರಿನಲ್ಲಿ. ಸೂರ್ಯನ ಕಿರಣಗಳು ಬೀಳುತ್ತಲೇ ಮುದಗೊಂಡು ಅರಳುವಂತೆ ಮಾನವನು ತನ್ನ ಜೀವನದ ಸಾರ್ಥಕತೆ ಪಡೆಯಲು ಎಷ್ಟೇ ಕಷ್ಟಗಳಿದ್ದರೂ, ಕಮಲದಂತೆ ಗುರಿಯೆಡೆಗೆ ಮುಖಮಾಡಿ ನಿಲ್ಲಬೇಕು. ಒಳ್ಳೆಯ ದಾರಿಯನ್ನು ಹಿಡಿದು ಗುರಿ ಸಾಧಿಸಬೇಕು. ಒಂದು ಬಾಣಕ್ಕೆ ಒಂದೇ ಗುರಿ ಇರುವಂತೆ ಮನುಷ್ಯನ ಜೀವನದಲ್ಲಿಯೂ ಹಿರಿದಾದ ಒಂದು ಗುರಿ ಇರಬೇಕು. ಹಗಲಿರುಳೆನ್ನದೆ ಆ ಗುರಿಯನ್ನು ಸಾಧಿಸಲು ಪ್ರಯತ್ನಿಸಬೇಕು ಎಂದು ಕವಿ ಮಾನವನಿಗೆ ಒಂದು ಗುರಿಯು ಅವಶ್ಯಕವೆಂದು ಪ್ರತಿಪಾದಿಸಿದ್ದಾರೆ.

2) ಕುವೆಂಪು ಅವರು ವರ್ಣಿಸಿರುವ ಭಾದ್ರಪದ ಸುಪ್ರಭಾತದ ಸೊಬಗನ್ನು ವರ್ಣಿಸಿರಿ.

ಉತ್ತರ : (1985 ನೇ ಎಪ್ರೀಲ ಪ್ರಥಮ ಪತ್ರಿಕೆಯ 2ನೇ ಪ್ರಶ್ನೆಯ ಉತ್ತರ ನೋಡಿರಿ.)

3) ಮನುಷ್ಯರಿಗಿಂತ ಪ್ರಾಣಿಗಳೇ 'ಸುಖಿ' ಈ ವಿಷಯವನ್ನು ಕವಿ ಹೇಗೆ ಸ್ಪಷ್ಟಪಡಿಸಿದ್ದಾರೆ ?

ಉತ್ತರ : ಕವಿ ಶ್ರೀ ಜಿ. ಎಸ್. ಸಿದ್ಧಲಿಂಗಯ್ಯನವರು ಪ್ರಾಣಿಗಳ ಜೀವನವೇ ಸುಖಿ ಎಂದು ಸಮರ್ಥಿಸಿದ್ದಾರೆ. ಅದಕ್ಕೆ ಅವರು ಕೊಡುವ ಕಾರಣಗಳೆಂದರೆ— ಅವುಗಳದು ಸಂತೃಪ್ತ ಜೀವನ. ಅವು ತಮ್ಮ ಸ್ಥಿತಿ-ಗತಿಗಳ ಬಗೆಗೆ ಎಂದೂ ಯೋಚಿಸುತ್ತಿರುವದಿಲ್ಲ, ಗೊಣಗುವದಿಲ್ಲ, ಪಾಪಕಾರ್ಯಗಳನ್ನು ಮಾಡುವದಿಲ್ಲ. ಸದಾಕಾಲ ತೃಪ್ತಿಯಿಂದ ಇರುತ್ತವೆ; ಸುಖವಾಗಿರುತ್ತವೆ. ದೇವರು, ಧರ್ಮಗಳ ಬಗೆಗೆ ಚರ್ಚಿಸಿ ಬೇಸರ ಪಡೆಯುವದಿಲ್ಲ. ಯಾವುದನ್ನೂ ಯೋಚಿಸುತ್ತ ರಾತ್ರಿ ನಿದ್ದೆಗೆಡುವ ಪ್ರಸಂಗವೂ ಅವುಗಳಿಗೆ ಬರುವದಿಲ್ಲ. ವ್ಯರ್ಥ ಮಾತುಗಳನ್ನಾಡುವದಿಲ್ಲ. ಕರ್ತವ್ಯಗಳ ಬಗೆಗೆ ಭಾಷಣ ಮಾಡುವದಿಲ್ಲ.

ಪ್ರಾಣಿಗಳಿಗೆ ಅತೃಪ್ತಿ ಇಲ್ಲ. ಅವು ಸಂಚು ಹೂಡುವದಿಲ್ಲ, ಹೊಂಚು ಹಾಕುವದಿಲ್ಲ. ಆಸ್ತಿ ಮಾಡುವ ಅತಿಯಾಸೆ ಅವುಗಳಿಗಿಲ್ಲ. ಹುಚ್ಚರಂತೆ ಆಗುವದಿಲ್ಲ. ಬೇರೊಂದು ಪ್ರಾಣಿಯ ದೇಹಕ್ಕೆ ಡೊಗ್ಗಾಲೂರಿ ನಮಸ್ಕಾರ ಮಾಡುವದೂ ಇಲ್ಲ. ಸಾವಿರಾರು ವರ್ಷಗಳ ಹಿಂದೆ ಬದುಕಿದ್ದ ತನ್ನಂಥದೇ ಒಂದು ಪ್ರಾಣಿಯ ಗೋರಿಗೆ ಪೂಜೆ ಸಲ್ಲಿಸುವದಿಲ್ಲ. ಅವುಗಳಿಗೆ ಸ್ಥಾನಮಾನ, ಪದವಿಗಳ ಚಿಂತೆ ಇಲ್ಲ; ಗರ್ವವೂ ಇಲ್ಲ. ಅವುಗಳ ಜೀವನ ಯಾಂತ್ರಿಕವಾಗಿಲ್ಲ. ಈ ಎಲ್ಲ ಉತ್ತಮ ಗುಣಗಳಿಂದ ಜೀವಿಸುವ ಪ್ರಾಣಿಗಳು ಮನುಷ್ಯರಿಗಿಂತ ಎಷ್ಟೋ ಸುಖಿಗಳು. ಆದ್ದರಿಂದ ಕವಿಗೆ ಪ್ರಾಣಿಗಳ ಜೊತೆಗೆಯೇ ಬದುಕಿ ಸುಖಿಜೀವನ ಪಡೆಯಬೇಕೆಂಬುದೇ ಆಸೆ.

4) ಪರಮೇಶ್ವರ ಭಟ್ಟರು ನುಡಿಮುತ್ತುಗಳನ್ನು ನಮ್ಮ ಬದುಕಿಗೆ ದಾರಿ ದೀಪಗಳಾಗಿ ಹೋಲಿಸಿರುವರು. ಹೇಗೆ ?

ಉತ್ತರ : (1984 ನೇ ಆಕ್ಟೋಬರ ಪ್ರಥಮ ಪತ್ರಿಕೆ 2ನೇ ಪ್ರಶ್ನೆಯ ಉಪಪ್ರಶ್ನೆ 2 ನ್ನು ನೋಡಿರಿ.)

ಪ್ರಶ್ನೆ 3. (ಅ) ಈ ಕೆಳಗಿನ ಪದ್ಯದ ಸಾರಾಂಶವನ್ನು ಬರೆಯಿರಿ.

ಮಗನೆ ತಮ್ಮಂದಿರನು ಪಾಲಿಸು
.........ವಚನವನೆಂದಳಾ ಕುಂತಿ ॥

ಉತ್ತರ : (1984 ನೇ ಆಕ್ಟೋಬರ ಪ್ರಥಮ ಪತ್ರಿಕೆ 3ನೇ (ಅ) ಪ್ರಶ್ನೆಯ ಉತ್ತರ ನೋಡಿರಿ.)

(ಬ) ಕೆಳಗಿನ ಹಳಗನ್ನಡ ಗದ್ಯಭಾಗವನ್ನು ಹೊಸಗನ್ನಡಕ್ಕೆ ಅನುವಾದಿಸಿರಿ.

ಬುದ್ಧಿವಂತಗಳ ಕೇಡಿಲ್ಲವೆಂದು ನಿಶ್ಚೈಸಿಕೊಂಡು ದಿನಾಂತಂ ಬರೆಗುಂ ತಡೆದು ಬಳಿಕ್ಕೆಲ್ಲಿಯುಂ ನಿಲ್ಲದೆ ಪೆರಗಂ ನೋಡುತ್ತುಂ ಭಯಾತುರನೆಂಬಂತೆ ಬಂದುಂ ಮರಣಭ್ರಾಂತಿಯಂ ಚಿಂತಿಸಿ ಬರುತ್ತುಂ ತೊಟ್ಟನೆ ಮುಂದಿರ್ದ ಪುರಾಣ ಕೂಪಮಂ ಕಂಡು, ತೃಷೆಯಿಂ ನೀರ್ಗುಡಿಯವೇಳ್ಕೆಂದು ನೋಡಿ.

ಉತ್ತರ : ಬುದ್ಧಿವಂತರಿಗೆ ಕೇಡಿಲ್ಲವೆಂದು ನಿಶ್ಚಯಿಸಿಕೊಂಡು ಸಂಜೆಯವರೆಗೂ ತಡಮಾಡಿ ಅನಂತರ ಎಲ್ಲಿಯೂ ನಿಲ್ಲದೆ ಹಿಂದಕ್ಕೆ ನೋಡುತ್ತಾ ಹೆದರಿಕೊಂಡವನಂತೆ ಬರುತ್ತ, ಸಾಯಬೇಕಲ್ಲಾ ಎಂದು ಚಿಂತಿಸುತ್ತ ಬರುತ್ತಿದ್ದು, ಕೂಡಲೇ ಎದುರಿಗಿದ್ದ ಒಂದು ಹಳೆಯ ಬಾವಿಯನ್ನು ನೋಡಿ, ಬಾಯಾರಿಕೆಯಿಂದ ನೀರು ಕುಡಿಯಬೇಕೆಂದು ನೋಡಿ.

ಪ್ರಶ್ನೆ 4. ಕೆಳಗಿನ ಪದ್ಯ ಭಾಗಗಳನ್ನು ಪೂರ್ಣಗೊಳಿಸಿ.

1) ಚಿತ್ತವಿಲ್ಲದೆ........ಸರ್ವಜ್ಞ.

2) ಕುಟಿಲನ.........ಯೇನು ಫಲ ?

ಉತ್ತರ : (ನಿಮ್ಮ ಪಠ್ಯಪುಸ್ತಕದ ಪದ್ಯ ಭಾಗವನ್ನು ನೋಡಿರಿ)

ಪ್ರಶ್ನೆ 5. ಇವರಲ್ಲಿ ಇಬ್ಬರ ಸ್ಥಳ, ಕಾಲ ಮತ್ತು ಕೃತಿಗಳನ್ನು ತಿಳಿಸಿ.

1) ರಾಘವಾಂಕ 2) ಬಿ. ಎಂ. ಶ್ರೀ

3) ಜಿ. ಎಸ್. ಶಿವರುದ್ರಪ್ಪನವರು

ಉತ್ತರ : 1) ರಾಘವಾಂಕ 2) ಬಿ. ಎಂ. ಶ್ರೀ ಇವರ ಬಗೆಗೆ 1984 ನೇ ಪ್ರಥಮ ಪತ್ರಿಕೆ ಪ್ರಶ್ನೆ 5 ರ ಉತ್ತರ ನೋಡಿರಿ.)

3) ಜಿ. ಎಸ್. ಶಿವರುದ್ರಪ್ಪನವರು :– ಇವರು ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರು. ಉತ್ತಮ ಕವಿಗಳು ಮತ್ತು ವಿಮರ್ಶಕರು ಇವರ ಜನನ 1926 ರಲ್ಲಿ.

ಸಾಮಗಾನ, ಚೆಲುವು–ಒಲವು, ದೀಪದ ಹೆಜ್ಜೆ, ದೇವಶಿಲ್ಪ, ಕಾರ್ತಿಕ, ಅನಾವರಣ, ಸೌಂದರ್ಯ ಸಮೀಕ್ಷೆ, ವಿಮರ್ಶೆಯ ಪೂರ್ವ–ಪಶ್ಚಿಮ ಇತ್ಯಾದಿಗಳು ಇವರ ಕೃತಿಗಳು.

ಪ್ರಶ್ನೆ 6. ಕೆಳಗಿನ ವಾಕ್ಯಗಳ ಸಂದರ್ಭ ಮತ್ತು ಸ್ವಾರಸ್ಯವನ್ನು ತಿಳಿಸಿ.

1) ಹೋದ ಬಾಣವ ಮರಳಿ ತೊಡದಿರು.

ಉತ್ತರ : ಕೃಷ್ಣನ ಸಲಹೆಯಂತೆ ಕುಂತಿಯು ಕರ್ಣನಲ್ಲಿಗೆ ಒಂದು ಆತನಿಗೆ ಹೇಳಿದ ಮಾತು. ಪಾಂಡವರ ಪಕ್ಷಕ್ಕೆ ಬಂದು ರಾಜನಾಗುವಂತೆ ಕೇಳಿದಾಗ ಕರ್ಣನು ನ್ಯಾಯವಾದುದನ್ನು ನುಡಿದು ಅದಕ್ಕೆ ಸಮ್ಮತಿಸಲಿಲ್ಲ. ಆಗ ಕುಂತಿಯು–ಒಂದು ಸಲ ಪ್ರಯೋಗಿಸಿದ ಬಾಣವನ್ನು ಮತ್ತೊಮ್ಮೆ ಬಿಡಬಾರದು ಎಂಬ ಮಾತನ್ನಾದರೂ ನಡೆಯಿಸಿಕೊಡುವಂತೆ ಕೇಳಿಕೊಂಡಳು.

2) ಕನ್ನಡದಲ್ಲಿ ಮಾತಾಡಿ ನನ್ನನ್ನು ಪುನೀತನನ್ನಾಗಿ ಮಾಡಿ

ಉತ್ತರ : ಕನ್ನಡಕ್ಕಾಗಿ ತಮ್ಮ ಜೀವನವನ್ನೇ ಸವಿಸಿದ ಜೀವಿ ಜಾರ್ಜ್ ಫರ್ಡಿನಾಂಡ್ ಕಿಟೆಲ್‌ರವರು. ಅವರು ತಮ್ಮ ಶೇಷಾ ಯುಷ್ಯವನ್ನು ಜರ್ಮನಿಯಲ್ಲಿ ಕಳೆಯುತ್ತಿದ್ದರು. ಜೀವನದ ಕೊನೆಗಾಲದಲ್ಲಿ ಕನ್ನಡವನ್ನು ಇನ್ನೊಮ್ಮೆ ಕೇಳಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ಆಗ ಯಾರೋ ಕರ್ನಾಟಕದವರು ಆ ಸಮಯದಲ್ಲಿ ಭೇಟಿಯಾದರು. ಅವರು ಇಂಗ್ಲೀಷಿನಲ್ಲಿ ಮಾತನಾಡಲು ಹವಣಿಸಿದ ಸಂದರ್ಭದಲ್ಲಿ ಕಿಟೆಲ್‌ರು ಅವರಿಗೆ "ಕನ್ನಡದಲ್ಲಿ ಮಾತನಾಡಿ ನನ್ನನ್ನು ಪುನೀತರನ್ನಾಗಿ ಮಾಡಿ" ಎಂದು ಕೇಳಿಕೊಂಡದ್ದನ್ನು ಲೇಖಕರು ಅಭಿಮಾನದಿಂದ ಉಲ್ಲೇಖಿಸಿದ್ದಾರೆ. ಈ ಮಾತಿನಲ್ಲಿ ಕಿಟೆಲ್‌ರ ಉತ್ಕಟ ಕನ್ನಡಾಭಿಮಾನ ವ್ಯಕ್ತವಾಗಿದೆ.

3) ಹಾವಿಗೆ ಹಾಲೆರೆದರೇನು ಫಲ ?

ಉತ್ತರ : ಪುರಂದರದಾಸರು ದುಷ್ಟರ ಸ್ವಭಾವವನ್ನು ಈ ರೀತಿ ವರ್ಣಿಸಿದ್ದಾರೆ. ಹಾವಿನಂತ ಘಾತುಕ ಜೀವಿಗೆ ಹಾಲುಣಿಸಿ ಬೆಳೆಸಿದರೆ ಅದು ಹಾಲು ಕೊಟ್ಟವರನ್ನೇ ಕಚ್ಚುವದು ಅದರ ದುಷ್ಟ ಸ್ವಭಾವ. ಅದಕ್ಕೆಲ್ಲಿದ ಕೃತಜ್ಞತೆ ? ಅದರಂತೆ ದುಷ್ಟಜನರು ತಮಗೆ ಸಹಾಯ ಮಾಡಿದವರಿಗೇನೇ ಅಪಾಯ ತರುತ್ತಾರೆ. ಕಾರಣ ದುಷ್ಟರಿಗೆ ಸಹಾಯ ಮಾಡುವದು ನಮಗೇ ಅಪಾಯಕಾರಿ.

4) ಹಾವಿನಂತಹ ದುಷ್ಟ ಜಂತು ಕೆಣಕದೆ ಯಾರನ್ನು ಹಿಂಸಿಸದು.

ಉತ್ತರ : ಈ ಮಾತು "ಕಳ್ಳರ ಗುರು" ಎಂಬ ಪಾಠದಲ್ಲಿ ಬಂದಿದೆ. ಭೀಮನಾಯಕನ ಜನ ಬಂದು ವೈದ್ಯರನ್ನು ಕರೆದುಕೊಂಡು ಹೋಗುತ್ತಿದ್ದಾಗ ದಾರಿಯಲ್ಲಿ ನಾಗರ ಹಾವು ಎದುರಾಯಿತು. ಎಲ್ಲರೂ ಕ್ಷಣಕಾಲ ನಿಂತರು. ಅದು ತನ್ನ ಪಾಡಿಗೆ ತಾನು ಹರಿದು ಹೋಯಿತು. ಯಾವ ಅಪಾಯವನ್ನೂ ಮಾಡಲಿಲ್ಲ. ಆ ಸಂದರ್ಭದಲ್ಲಿ ವೈದ್ಯರು "ಹಾವಿನಂತ ದುಷ್ಟ ಜಂತು ಕೆಣಕದೆ ಯಾರನ್ನೂ ಹಿಂಸಿಸದು" ಎಂದುಕೊಂಡರು.

ಪ್ರಶ್ನೆ 7. ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

1) ವೃಕ್ಷದೇವತೆ ಕಾಡುಕೋಣಕ್ಕೆ ಯಾವ ಸಲಹೆಯನ್ನು ನೀಡಿತು ?

ಉತ್ತರ : ಕಪಿಯು ಶಾಂತ ಸ್ವಭಾವದ ಕಾಡುಕೋಣವನ್ನು ತುಂಬ ಹಿಂಸೆಯಿಂದ ಪೀಡಿಸುತ್ತಿತ್ತು. ಅದನ್ನು ನೋಡಿ ಸಹಿಸಲಾಗದೆ ವೃಕ್ಷದೇವತೆಯು ಕಾಡುಕೋಣಕ್ಕೆ ಈ ರೀತಿ ಸಲಹೆ ಮಾಡಿತು. "ಅಯ್ಯಾ ಕೋಣ, ಅದರ ಅಪರಾಧಗಳನ್ನು ನೀನೇಕೆ ಸಹಿಸಿಕೊಂಡಿದ್ದೀಯೇ ? ಒಂದು ಸಲ ಕೊಂಬಿನಿಂದ ಝಾಡಿಸಿ ಒಗೆದು, ಕಾಲಿನ ಗೊರಸಿನಿಂದ ಒರಸಿ ಬಿಡು" ಎಂದು ಸಲಹೆ ನೀಡಿತು.

2) ಬಂಕಾಪುರಕ್ಕೆ "ಪಂಡಿತಪುರಿ" ಎಂದು ಹೆಸರು ಬರಲು ಕಾರಣ

ಉತ್ತರ : (1984 ನೇ ಎಪ್ರೀಲ ಪ್ರಥಮ ಪತ್ರಿಕೆ 7 ನೇ ಪ್ರಶ್ನೆ 1 ರ ಉತ್ತರ ನೋಡಿರಿ.)

3) ಗೌಡರು ಮಗನನ್ನು ಶಾಲೆಗೆ ಕಳುಹಿಸಲು ಹೇಗೆ ಒಪ್ಪಿದರು ?

ಉತ್ತರ : ಜವರೇಗೌಡರು ತಮ್ಮ ಬಾಲ್ಯದಲ್ಲಿ ಹಳ್ಳಿಯಲ್ಲಿ ದನ–ಕುರಿ ಕಾಯುತ್ತಿದ್ದರು. ಆದರೆ ವಿದ್ಯೆಯನ್ನು ಕಲಿಯಲು ಅವರಿಗೆ ತುಂಬಾ ಆಸಕ್ತಿ ಇತ್ತು. ಒಂದು ದಿನ ಶಾಲೆಯಲ್ಲಿರುವಾಗ ಅವರ ಮೇಕೆಗಳು ಬೇರೊಬ್ಬರ ಜಮೀನಿನಲ್ಲಿ ನುಗ್ಗಿ ಬೆಳೆಯನ್ನು ತಿನ್ನಲು ಸಂಬಂಧಿಸಿದ ಜಮೀನಿನವರು ದೂರು ಒಯ್ದರು. ಜವರೇಗೌಡರ ತಂದೆ ಹುಡುಗನನ್ನು ಚೆನ್ನಾಗಿ ಹೊಡೆದರು. ಆಗ ಮುಖ್ಯೋಪಾಧ್ಯಾಯರಾಗಿದ್ದ ವೀರಣ್ಣಗೌಡರು ಆ ಹುಡುಗನ ವಿದ್ಯಾಭ್ಯಾಸಕ್ಕೆ ಬೇಕಾದ ಸಹಾಯ ತಾವು ಮಾಡುವದಾಗಿ ಹೇಳಿ ಅವರ ತಂದೆಯನ್ನು ಒಪ್ಪಿಸಿದರು. ಇಲ್ಲವಾದರೆ ಶಿಕ್ಷೆ ಮಾಡಿಸುವದಾಗಿ ಹೆದರಿಸಿದರು. ಆಗ ಗೌಡರು ಮಗನನ್ನು ಶಾಲೆಗೆ ಕಳಿಸಲು ಒಪ್ಪಿದರು.

4) ಮಗಳನ್ನು ಒಪ್ಪಿಸುವಾಗ ಯಾರು, ಯಾವ ಬಗೆಯ ವ್ಯಥೆ ಪಡುತ್ತಾರೆ ಗರತಿಯ ಅಭಿಪ್ರಾಯದಲ್ಲಿ ?

ಉತ್ತರ : ಮಗಳನ್ನು ಅತ್ತೆಯ ಮನೆಗೆ ಕಳುಹಿಸಿಕೊಡುವಾಗ, ಹತ್ತು ತಿಂಗಳು ಹೊತ್ತು, ಹೆತ್ತು, ಮುದ್ದಾಗಿ ಸಾಕಿ ಸಲುಹಿರುವ ಮಗಳ ಅಗಲುವಿಕೆಗಾಗಿ ತುಂಬಾ ದುಃಖಿಪಡುತ್ತಾಳೆ. ತಾಯಿಯಾದವಳು ತನ್ನ ಮಗಳು ಅತ್ತೆಯ ಮನೆಯಲ್ಲಿ ಎಂತಹ ಕಷ್ಟಗಳಿಗೆ ಗುರಿಯಾಗುತ್ತಾಳೋ ಎಂದು ಮರುಗುತ್ತಾಳೆ ಅವಳಿಗಾಗಿ ವ್ಯಥೆ ಪಡುತ್ತಾಳೆ. ಇದುವೇ ಗರತಿಯ ಅಭಿಪ್ರಾಯ.

5. ಗಾಂಧೀಜಿಯವರ ಕಾರ್ಯದ ಅವಿಭಾಜ್ಯ ಅಂಗ ಯಾವುದು ?

ಉತ್ತರ : ಗಾಂಧೀಜಿಯವರ ಕಾರ್ಯಗಳಲ್ಲಿ ಸಮಾಜ ಕಲ್ಯಾಣವೂ ಒಂದು. ಸರ್ವೋದಯ ಸಮಾಜದ ಕಲ್ಪನೆ ಅವರದಾಗಿತ್ತು. ಸಮಾಜ ಕಲ್ಯಾಣ ಮಾನವನ ಜೀವನದ ಅವಿಭಾಜ್ಯ ಅಂಗ ಎಂಬುದು ಅವರ ಮನೋ ನಿಶ್ಚಯವಾಗಿತ್ತು. ಅಂತೆಯೇ ಹರಿಜನೋದ್ಧಾರ, ಬಡಜನರ ರಕ್ಷಣೆ, ಸ್ತ್ರೀಯರ ಏಳ್ಗೆ ಇತ್ಯಾದಿಗಳು ಅವರ ಕಾರ್ಯದ ವಿಶೇಷ ಅಂಶಗಳಾಗಿದ್ದವು.

ಪ್ರಶ್ನೆ 8. ಬೆಳ್ಳಿಯೊಂದೇ ಬೆಳಗುವಂದದಿ ಗಿಡದೊಳೊಂದೇ ಹೂವಿದೆ. ಇಲ್ಲಿ ಕಂಡು ಬರುವ ಅಲಂಕಾರವನ್ನು ಹೆಸರಿಸಿ ಸಮನ್ವಯಗೊಳಿಸಿರಿ.

ಉತ್ತರ : ಬೆಳ್ಳಿಯೆಂದರೆ ಶುಕ್ರ ನಕ್ಷತ್ರ ಒಂದೇ ಬೆಳಗುವ ಹಾಗೆ ಗಿಡದಲ್ಲಿ ಒಂದೇ ಹೂವು ಇದೆ ಎಂದು ಹೇಳಿದ ಈ ಮಾತಿನಲ್ಲಿ ಉಪಮಾಲಂಕಾರವಿದೆ. ಬೆಳ್ಳಿಗೂ, ಹೂವಿಗೂ ಹೋಲಿಕೆ ಮಾಡಿದೆ, ಎರಡರಲ್ಲಿಯೂ ಸಾಮಾನ್ಯ ಧರ್ಮವನ್ನು ಹೇಳಿದೆ. ಹೀಗೆ ಎರಡು ವಸ್ತುಗಳಿಗೆ ಸಾದೃಶ್ಯವಿರುವದರಿಂದ ಇದು ಉಪಮಾಲಂಕಾರ.

ಪ್ರಶ್ನೆ 9. "ಕ್ರಿದವೀಗಳ್ ವನ್ಯಗಂಧದ್ವಿರದಮೆ ಕೊಳನಂ ಪೊಕ್ಕವೋಲ್ ಕಾದಿತೋರ್ಪೆಂ" ಈ ಪದ್ಯ ಭಾಗವನ್ನು ಪ್ರಸ್ತರಿಸಿ, ಗಣ ವಿಂಗಡಿಸಿ ಛಂದಸ್ಸಿನ ಹೆಸರು ತಿಳಿಸಿ.

ಉತ್ತರ :

ಕ್ರಿದವೀ | ಗಳವನ್ಯ | ಗಂಧದ್ವಿ | ರದಮೆ | ಕೊಳನಂ।
UU— | ——U | ——U | UUU | UU— |
ಸ ತ ತ ನ ಸ

ಪೊಕ್ಕವೋಲ್ | ಕಾದಿತೋ | ರ್ಪೆಂ
—U— | —U— | —
ರ ರ ಗುರು

ಇದು ಮಹಾಸ್ರಗ್ಧರಾ ವೃತ್ತ.

ಪ್ರಶ್ನೆ 10. ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬರೆಯಿರಿ.

1) ರಕ್ತ ಸಿಂಚಿತ. 2) ಸ್ವಪ್ನಜೀವಿ. 3) ಹೊಂಚು ಹಾಕು

ಉತ್ತರ : 1) ರಕ್ತ ಸಿಂಚಿತ ಕಣ್ಣುಗಳಿಂದಾಗಿ ಹುಲಿಯು ಭಯಂಕರವಾಗಿ ಕಂಡಿತು.

2) ಅವನೊಬ್ಬ ಸ್ವಪ್ನ ಜೀವಿ.

3) ನರಿಯು ತನ್ನ ಆಹಾರಕ್ಕಾಗಿ ಹೊಂಚು ಹಾಕಿ ಕುಳಿತಿದ್ದಿತು.

ಪ್ರಶ್ನೆ 11. (ಅ) ವಿಗ್ರಹ ವಾಕ್ಯ ಬರೆದು ಸಮಾಸದ ಹೆಸರನ್ನು ತಿಳಿಸಿ.

1) ನಿಟ್ಟುಸಿರು, 2) ನಟ್ಟಿರುಳು, 3) ದೇವದಾನವ ಗಂಧರ್ವರು.

ಉತ್ತರ : 1) ನಿಡಿದಾದ ಉಸಿರು—ನಿಟ್ಟುಸಿರು, ಕರ್ಮಧಾರಯ ಸಮಾಸ.

2) ಇರುಳಿನ ನಡು—ನಟ್ಟಿರುಳು, ಅಂಶಿ ಸಮಾಸ.

3) ದೇವರುಗಳು, ದಾನವರುಗಳು, ಗಂಧರ್ವರು—ದೇವದಾನವ ಗಂಧರ್ವರು, ದ್ವಂದ್ವಸಮಾಸ.

(ಬ) ಸಂಧಿಯನ್ನು ವಿಂಗಡಿಸಿ ಹೆಸರಿಸಿರಿ

1) ದೇವೇಂದ್ರ 2) ಅತ್ಯುತ್ತಮ 3) ಲೋಕೈಕವೀರ

ಉತ್ತರ : 1) ದೇವ+ಇಂದ್ರ=ದೇವೇಂದ್ರ, ಗುಣಸಂಧಿ

2) ಅತಿ+ಉತ್ತಮ=ಅತ್ಯುತ್ತಮ, ಯಣ್‌ಸಂಧಿ

3) ಲೋಕ+ಏಕವೀರ=ಲೋಕೈಕವೀರ, ವೃದ್ಧಿಸಂಧಿ,

(ಕ) ಕೆಳಗಿನ ಶಬ್ದಗಳಿಗೆ ತತ್ಸಮಕ್ಕೆ ತದ್ಭವ, ತದ್ಭವಕ್ಕೆ ತತ್ಸಮ ಬರೆಯಿರಿ.

1) ಕ್ರೌಂಚ 2) ಮಿತ್ತು 3) ಮಿಗ

ಉತ್ತರ : 1) ಕೊಂಚ. 2) ಮೃತ್ಯು. 3) ಮೃಗ.

ಪ್ರಶ್ನೆ 12. (ಅ) ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

ಉತ್ತರ : 1) ನಂಜುಂಡ ಕವಿಯು ಕನ್ನಡ ಜನಪದ ನಮಗೆ ಏನನ್ನು ಸಾರುವುದು ?

ಕನ್ನಡನಾಡು ವಿಶಾಲವೂ, ಜನಸಮೂಹದಿಂದ ಕೂಡಿದುದೂ, ಪ್ರಕೃತಿ ಸೌಂದರ್ಯದ ಸಿರಿಯೂ, ಜಲಸಮೃದ್ಧಿ ಪಡೆದುದೂ ಎನ್ನುವದನ್ನು ಸಾರುವುದು.

2) ಕಿಟೆಲ್ಲರು ಧಾರವಾಡ, ಹುಬ್ಬಳ್ಳಿಗಳ ಬೀದಿಗಳಲ್ಲಿ ಸಂಚರಿಸಿದರು, ಏಕೆ ?

ಕಿಟೆಲ್ಲರು ಹಲವಾರು ಪದಾರ್ಥಗಳನ್ನು ಕಿಸೆಯಲ್ಲಿಟ್ಟುಕೊಂಡು ಧಾರವಾಡ, ಹುಬ್ಬಳ್ಳಿಗಳ ಬೀದಿಗಳಲ್ಲಿ ಸಂಚರಿಸಿ ಹಳ್ಳಿಗರಿಂದ ಅರ್ಥ ಸಂಗ್ರಹ ಮಾಡುತ್ತಿದ್ದರು.

3) ನೂಗಿನ ತುದಿಯ ಬಗ್ಗೆ ಪಂಪನು ಏನು ಹೇಳಿದ್ದಾನೆ ?

"ಮುಳಿವೊಂದಂ ಎಯ್ದೆ ಕೇಳ್ದು ಮುಳಿ" ಅಂದರೆ ಚನ್ನಾಗಿ ಕೇಳಿ, ತಿಳಿದು, ನಂತರ ಕೋಪ ಮಾಡಿಕೋ ಎನ್ನುತ್ತಾನೆ ಪಂಪ.

4) ಗರತಿಯು ಬೆಳಗಿನ ಕಾರ್ಯಕ್ರಮಗಳಾವವು ?

ಗರತಿಯು ದನಕರುಗಳ ಸೇವೆ ಮಾಡಿ ಬೀಸಲು ಕೊಡುತ್ತಾಳೆ. ಇವು ಆಕೆಯ ಬೆಳಗಿನ ಕಾರ್ಯಗಳು.

5) ರಾಜಾರಾಮ್ ಮೋಹನರಾಯ್ ಚಳುವಳಿಯನ್ನು ಏಕೆ ಆರಂಭಿಸಿದರು ?

ಬಾಲ್ಯ ವಿವಾಹ, ಬಾಲ ವಿಧವೆಯರ ಗೋಳು, ಸಹಗಮನ, ಅಸ್ಪೃಶ್ಯತೆ ಮುಂತಾದ ಸಾಮಾಜಿಕ ಸಮಸ್ಯೆಗಳ ಸುಧಾರಣೆಗಾಗಿ ಚಳುವಳಿ ಆರಂಭಿಸಿದರು.

(ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿಮಾಡಿ

ಉತ್ತರ : 1) ಮೂರು ಪಾದಗಳನ್ನುಳ್ಳ ಪದ್ಯಗಳಿಗೆ .........ಎಂದು ಹೆಸರು (ತ್ರಿಪದಿ)

2). ಕರ್ನಾಟಕದಲ್ಲಿ ನವಂಬರ್ ಒಂದನೆಯ ತಾರೀಖು..........ಉತ್ಸವ (ರಾಜ್ಯೋತ್ಸವ)

3) ಷಟ್ಪದಿಯ ಬ್ರಹ್ಮನೆಂದು ಖ್ಯಾತಿಗಳಿಸಿದ ಕವಿ........ (ರಾಘವಾಂಕ)

4) ಕಾರ, ಇಗ, ವಂತ ಇತ್ಯಾದಿ ತದ್ಧಿತ ಪ್ರತ್ಯಯಗಳು ಸೇರಿದರೆ.........ಗಳಾಗುತ್ತವೆ. (ತದ್ಧಿತಾಂತನಾಮಪದ)

5) ಕೈಲಾಸಂ ಎಂದೊಡನೆಯೆ ನಗೆಯ ......ಎಂದು ಕನ್ನಡಿಗರು ಭಾವಿಸಿಕೊಳ್ಳುವದಿಲ್ಲವೇ ? (ಜಾದೂಗಾರ)

ಪ್ರಶ್ನೆ 13. ಮೊದಲೆರಡು ಪದಗಳಿಗೆ ಇರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದಗಳನ್ನು ಬರೆಯಿರಿ.

ಉತ್ತರ : 1) ವೃಕ್ಷ—ಮರ; ವಕ್ಷ—(ಎದೆ)

2) ದಾತಾರ—ದಾತ್ರು; ಪ್ರಸಾದ—(ಹಸಾದ)
3) ರಾಗ – ವಿರಾಗ; ಯೋಗ–(ವಿಯೋಗ)
4) ಗುಣ—ಗುಣಿ; ಚಕ್ರ—(ಚಕ್ರಿ)
5) ಶಶಕ—ಮೊಲ; ಶಶಿ—(ಚಂದ್ರ)

ಪ್ರಶ್ನೆ 14. ಆಯಾಯ ಗುಂಪಿಗೆ ಸೇರದ ಪದವನ್ನು ಆಯ್ದು ಬರೆಯಿರಿ.

ಉತ್ತರ : 1) ನವರಂಗ, ರಂಗಮಂಟಪ, ನವರಂಗು ರಂಗಸಜ್ಜಿಕೆ (ನವರಂಗ)
2) ಮಂಚ, ಕೆಂಚ, ಕರಿಯ, ಕುಳ್ಳ (ಮಂಚ)
3) ಶಿಕ್ಷಣ, ಶಿಕ್ಷಕ, ಶಿಕ್ಷೆ, ಶಿಕ್ಷೆಗಾರ್ಥ (ಶಿಕ್ಷೆ)
4) ಹಿರಿಮೆ, ಗ್ರೈಮೆ, ಜಾಣ್ಮೆ, ಬಲ್ಮೆ (ಗ್ರೈಮೆ)
5) ರಾಮಾನುಜ, ಶಂಕರ, ತೀರ್ಥಂಕರ, ಮಧ್ವ (ತೀರ್ಥಂಕರ)

ಪ್ರಶ್ನೆ 15. "ಅ" ಗುಂಪಿನ ಪದಗಳಿಗೆ "ಬ" ಗುಂಪಿನ ಪದಗಳಲ್ಲಿ ಸರಿ ಹೊಂದುವವದನ್ನು ಜೋಡಿಸಿ ಬರೆಯಿರಿ.

| "ಅ" | "ಬ" |
|---|---|
| 1) ಮ್ಯಾಕ್ಸ್ ಮುಲ್ಲರ್ | 1) ನೇತ್ರದಾನಿ |
| 2) ರಾವ್ ಬಹಾದ್ದೂರ್ | 2) ಹರಿಜನ ಪತ್ರಿಕೆ ಹೊರಡಿಸಿದರು. |
| 3) ಗಾಂಧಿ | 3) ವೇದಾಧ್ಯಯನ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದರು. |
| 4) ಮೋದಿ | 4) ತಮಿಳುನುಡಿಗೆ ಸೇವೆ ಸಲ್ಲಿಸಿದರು. |
| 5) ಮೃಣಾಲಿನಿದೇವಿ | 5) ಹರಟೆಗಾರ ಕವಿ |
| | 6) ಠಾಕೂರರ ಹೆಂಡತಿ |
| | 7) ಹೃದಯದಾನಿ |

ಉತ್ತರ : 1–3, 2–5, 3–2, 4–1, 5–6.

— ● —

# ಕನ್ನಡ

## ಮಾರ್ಚ್— ೧೯೮೬ ದ್ವಿತೀಯ ಪತ್ರಿಕೆ

ಅವಧಿ : 2 ಗಂಟೆ ಅಂಕಗಳು : 50

ಪ್ರಶ್ನೆ 1. ಕೆಳಗಿನ ಪ್ರಶ್ನೆಗಳಿಗೆ ಎರಡನ್ನು ಆರಿಸಿಕೊಂಡು ಒಂದೊಂದು ಪುಟಕ್ಕೆ ಮೀರದಂತೆ ಉತ್ತರವನ್ನು ಬರೆಯಿರಿ.

1) ತೇನಸಿಂಗನ ವಿಜಯಯಾತ್ರೆಯನ್ನು ವಿವರಿಸಿರಿ.

ಉತ್ತರ : ( 1984 ನೇ ಅಕ್ಟೋಬರ ದ್ವಿತೀಯ ಪತ್ರಿಕೆ 1 ನೇ ಪ್ರಶ್ನೆ 2 ರ ಉತ್ತರ ನೋಡಿ )

2) ಜಗದೀಶರು ಸಸ್ಯ ಶಾಸ್ತ್ರದಲ್ಲಿ ಮಾಡಿದ ಸಂಶೋಧನೆಯನ್ನು ವಿವರಿಸಿರಿ.

ಉತ್ತರ : ಪ್ರಾಣಿಗಳಂತೆಯೇ ಹಾಗೂ ನಿರ್ಜೀವ ವಸ್ತುಗಳೆನಿಸಿದ ಖನಿಜ ಲೋಹಗಳಂತೆಯೇ ಸಸ್ಯಗಳು ಕೂಡಾ ಉತ್ತೇಜನಕಾರಿ ವಸ್ತುಗಳ ಸ್ಪರ್ಶದಿಂದ ಪ್ರಚೋದನೆಗೆ ಒಳಗಾಗುತ್ತವೆ ಹಾಗೂ ಪ್ರತಿಕ್ರಿಯೆ ತೋರುತ್ತವೆ. ಎಂಬುದನ್ನು ಹಲವು ಪ್ರಯೋಗಗಳ ಮೂಲಕ ಜಗದೀಶಚಂದ್ರಬೋಸರು ತೋರಿಸಿಕೊಟ್ಟರು. ಪ್ರಾಣಿಗಳಂತೆಯೇ ಸಸ್ಯಗಳು ಕೂಡಾ ಜೀವವುಳ್ಳವು, ಕ್ರಿಯೆಯುಳ್ಳವು ಅವುಗಳು ಸಹ ಸ್ಪರ್ಶಾನುಭವ ಪಡೆಯಬಲ್ಲವು.

ಈ ಸಂಶೋಧನೆ ವಿಜ್ಞಾನ ಪ್ರಪಂಚದಲ್ಲಿ ದೊಡ್ಡ ಕ್ರಾಂತಿಯನ್ನೇ ಉಂಟು ಮಾಡಿತು. ಅಂದಿನ ಶ್ರೇಷ್ಠ ಸಸ್ಯಶಾಸ್ತ್ರಜ್ಞರು ಯಾರೂ ಇದನ್ನು ನಂಬಲಿಲ್ಲ. ಅನೇಕರು ಖಂಡಿಸಿದರು, ಟೀಕೆ ಮಾಡಿದರು. ಆದರೆ ಸ್ವಾಭಿಮಾನಿಗಳಾದ ಬೋಸರು ಯಾವ ಟೀಕೆಗೂ ಜಗ್ಗಲಿಲ್ಲ. ಪ್ರಯೋಗಗಳಿಂದ ಕಂಡು ಹಿಡಿದ ಸತ್ಯವನ್ನು ಬಿಡಲು ಅವರು ಸಿದ್ಧರಾಗಲಿಲ್ಲ. ತಮ್ಮ ವಾದವನ್ನು ಅವರು ಬದಲಿಸಲಿಲ್ಲ. ಇದರಿಂದ ಅಸಂತೋಷಗೊಂಡ ಸ್ಯಾಂಡರ್ ಸನ್ ಎಂಬ ವಿಜ್ಞಾನಿ ಪ್ರತಿಭಟನಾರ್ಥ ಭಾರತ ಸರಕಾರಕ್ಕೆ ಪತ್ರ ಬರೆದ. ಬೋಸರಿಗೂ ಎಚ್ಚರಿಕೆಯ ಪತ್ರ ಬಂದಿತು. ಬೋಸರು ಮಾತ್ರ ಅದನ್ನು ಲೆಕ್ಕಿಸದೆ ತಮ್ಮ ವಾದವನ್ನು ಸಮರ್ಥಿಸಿಯೇ ಪತ್ರ ಬರೆದರು. ಅವರಿಗೆ ತಮ್ಮ ಸಂಶೋಧನೆಯ ಬಗೆಗೆ ದೃಢನಿರ್ಧಾರವಿತ್ತು. ಯಾರ ಎದುರಿನಲ್ಲಾದರೂ ಪ್ರದರ್ಶಿಸಿ, ಸಮರ್ಥಿಸಿಕೊಳ್ಳುವ ಸಾಮರ್ಥ್ಯವೂ ಅವರಲ್ಲಿತ್ತು. ಕೊನೆಗೂ ತಮ್ಮ ಸಂಶೋಧನೆಯ ಬಗೆಗೆ ಮಾನ್ಯತೆ ಪಡೆದರು.

3 ಅರವಿಂದರು ಸೆರೆಮನೆಯನ್ನು ಸೇರಿದ್ದು ಸ್ವಾತಂತ್ರ್ಯಯೋಧನಾಗಿ, ಹೊರಗೆ ಬಂದದ್ದು ಆಧ್ಯಾತ್ಮಿಕ ಯೋಗಿಯಾಗಿ.

ಉತ್ತರ : ( 1984 ನೇ ಕನ್ನಡ ದ್ವಿತೀಯ ಪತ್ರಿಕೆ 1 ನೇ ಪ್ರಶ್ನೆ 1 ರ ಉತ್ತರ ನೋಡಿರಿ ).

4) ಷೆರ್ಪಾ ಜನರ ಪರಿಚಯ ಕೊಡಿರಿ.

ಉತ್ತರ : ಷೆರ್ಪಾಗಳು ಧೈರ್ಯ–ಸ್ಥೈರ್ಯ, ಗಟ್ಟಿಗತನಗಳಿಗೆ ಹೆಸರಾದ ಜನಾಂಗ ಇವರು ಹಿಮಗಿರಿಯ ಮೇಲೂ,

ತಪ್ಪಲು ಪ್ರದೇಶಗಳಲ್ಲೂ ವಾಸಿಸುವರು. ಇವರು ಮಂಗೋಲಿಯನ್ ಬುಡಕಟ್ಟಿನವರು. ಸಂಘ ಜೀವಿಗಳಾದ ಇವರು, ಅನೇಕ ವಸ್ತುಗಳನ್ನು ಸಾಮೂಹಿಕವಾಗಿ ಉಪಯೋಗಿಸುತ್ತಾರೆ. ಹಲಗೆಯ ಮನೆಗಳಲ್ಲಿ ವಾಸಿಸುವ ಇವರು ಆರ್ಥಿಕವಾಗಿ ಕಷ್ಟದಲ್ಲಿದ್ದರೂ ಆನಂದ ವಿನೋದಗಳಿಂದ ಜೀವಿಸುತ್ತಾರೆ. ಸಾಮಾನ್ಯವಾಗಿ ಕುಳ್ಳಾಗಿರುವ ಇವರು ಯುರೋಪಿನವರಂತೆ ಉಡುಪು ಧರಿಸುತ್ತಾರೆ. ಹೆಂಗಸರು ದುಂಡಾಗಿ ಲಂಗದಂತೆ ಇರುವ ಉಡುಪನ್ನು ಧರಿಸುತ್ತಾರೆ. ಎಲ್ಲರೂ ಕೋಟನ್ನು ತೊಟ್ಟುಕೊಳ್ಳುವರು.

ಷರ್ಪಾಗಳು ಬೌದ್ಧ ಧರ್ಮಕ್ಕೆ ಸೇರಿದವರು. ಹಿಮಾಲಯ ಮತ್ತು ತಿಬೇಟಗಳಲ್ಲಿ ಅವರ ಯಾತ್ರಾಸ್ಥಳಗಳಿವೆ. ಲಾಮಾ ಇವರ ಗುರುಗಳು. ಆಲೂಗಡ್ಡೆ, ತರಕಾರಿ, ಗೋಧಿ ಮತ್ತು ಮಾಂಸ ಇವರ ಆಹಾರ. ಮೋಮೋ ಅವರ ಪ್ರಿಯವಾದ ತಿಂಡಿ. ಚಹಾ ದಿನದ ಪೇಯ ಹಾಗೂ ಚಾಂಗ್ ಅವರ ಇಷ್ಟವಾದ ಮದ್ಯ. ಚಮರೀ ಮೃಗಗಳು ಇವರ ಮುಖ್ಯ ಜೀವನಾಧಾರವಾಗಿವೆ.

ಮೂಲತಃ ಕಷ್ಟ ಜೀವಿಗಳಾದ ಷರ್ಪಾಗಳು, ಪರ್ವತಾರೋಹಿಗಳಿಗೆ ಸಹಾಯಕರಾಗಿ ಕೆಲಸ ಮಾಡುತ್ತಾರೆ. ಆರೋಹಿಗಳ ಭಾರವಾದಸಾಮಾನುಗಳನ್ನುಹೊರುವದು, ಮಾರ್ಗ ಹುಡುಕುವದು, ಮೆಟ್ಟಲು ಕಡಿಯುವದು, ಶಿಬಿರ ಸ್ಥಾಪಿಸುವದು ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಅವರ ಯೋಗಕ್ಷೇಮವನ್ನೂ ನೋಡಿಕೊಳುತ್ತಾರೆ. ಅತಿಥಿಗಳನ್ನು ಕಂಡರೆ ಪ್ರೀತಿಯಿಂದ ಸತ್ಕರಿಸುತ್ತಾರೆ. ಎಲ್ಲ ಜನರಂತೆ ಇವರಿಗೂ ಸಂಪ್ರದಾಯ ನಂಬಿಕೆಗಳುಂಟು. ತ್ಸಚು ಎಂಬಲ್ಲಿಯ ಬುದ್ಧನ ತಲೆಯಂತಿದ್ದ ಬಂಡೆಯ ಬಗೆಗೆ ಹಾಗೂ ಯೇತಿ ಎಂಬ ಹಿಮಮಾನವನ ಬಗೆಗೆ ತಮ್ಮದೇ ಆದ ಹಲವು ನಂಬಿಕೆಗಳುಂಟು. ತೇನಸಿಂಗ ಷರ್ಪಾ ಜನಾಂಗದಲ್ಲಿ ಪ್ರಖ್ಯಾತ ಪುರುಷ.

ಪ್ರಶ್ನೆ 2. ಈ ಪ್ರಶ್ನೆಗಳಿಗೆ ಏಳೆಂಟು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

1) ನಂಗ ಪರ್ವತದಲ್ಲಿ ನಡೆದ ದುರಂತ.

ಉತ್ತರ : 1950 ರಲ್ಲಿ ನಂಗಪರ್ವತವನ್ನೇರಲು ತಂಡವೊಂದು ಹೊರಟಿತು. ತೇನಸಿಂಗ ಸರದಾರನಾದ ಆ ತಂಡದಲ್ಲಿ ಥಾರ್ನ್ನಾಲಿ, ತ್ರೇಸ್ ಮತ್ತು ಮಾರ್ಷ್ ಹೀಗೆ ಮೂರು ಜನ ರಿದ್ದರು. ನವ್ಹೆಂಬರ ಚಳಿಯನ್ನು ಸಹಿಸುತ್ತ ಮೇಲೇರಿ ಮೊದಲನೇ ಶಿಬಿರ ಸ್ಥಾಪಿಸಿದರು. ಆದರೆ ನಿಸರ್ಗದ ಪ್ರತಿಕೂಲ ಪರಿಸ್ಥಿತಿಯ ಕಾರಣ ತೇನಸಿಂಗ್ ಸಹಿತ ಇತರ ಷರ್ಪಾಗಳು ಮುಂದೆ ಹೋಗಲು ಒಪ್ಪಲಿಲ್ಲ. ಆದರೆ ಉಳಿದ ಮೂವರೂ ಪ್ರಯಾಣ ಮುಂದುವರಿಸಿದರು ಆರು ದಿನಗಳ ನಂತರ ಮಾರ್ಷ ಇಳಿದು ಬಂದ. ಆತನ ಕಾಲುಗಳು ಮಂಜುಗಟ್ಟಿದ್ದವು. ಉಳಿದಿಬ್ಬರು 18,000 ಅಡಿ ಎತ್ತರದಲ್ಲಿ ಡೇರೆ ಹಾಕುವದನ್ನು ಕೆಳಗಿನಿಂದ ನೋಡಿದರು. ಆದರೆ ಮರುದಿನ ಅಲ್ಲಿ ಡೇರೆ ಇರಲಿಲ್ಲ. ಅವರಿಗಾಗಿ ಹುಡುಕುವ ಪ್ರಯತ್ನ ಸಾಧ್ಯವಾಗಲಿಲ್ಲ. ಥಾರ್ನ್ನಾಲಿ ಮತ್ತು ತ್ರೇಸರು ಮಂಜಿನ ಗೋರಿಗಳಲ್ಲಿ ಸೇರಿ ಹೋಗಿದ್ದರು.

2) ಜಗದೀಶರು ಉದ್ಯೋಗಕ್ಕೆ ಸೇರಿದಾಗ ಎದುರಿಸಿದ ಸಮಸ್ಯೆ :

ಉತ್ತರ : ಜಗದೀಶಚಂದ್ರ ಬೋಸರು ವಿದ್ಯಾಭ್ಯಾಸವನ್ನು ಮುಗಿಸಿ ಉದ್ಯೋಗಕ್ಕಾಗಿ ಕಲಕತ್ತಾ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಭೌತಶಾಸ್ತ್ರದ ಉಪಾಧ್ಯಾಯರಾಗಿ ಸೇರಿದರು. ಅಲ್ಲಿನ ಸಂಶೋಧನಾಲಯದಲ್ಲಿ ಸರಿಯಾದ ಉಪಕರಣಗಳಿರಲಿಲ್ಲ. ಬೋಸರು ತಮ್ಮ ಸ್ವಂತ ಖರ್ಚಿನಿಂದ ಉಪಕರಣಗಳನ್ನು ತಯಾರಿಸಿಕೊಂಡು ಸಂಶೋಧನೆ ಮಾಡುತ್ತಿದ್ದರು. ಭಾರತೀಯ ಅಧ್ಯಾಪಕರಿಗೆ ಹೀನಾಯವಾಗಿ ಕಾಣಲಾಗುತ್ತಿತ್ತು. ಅಲ್ಲದೆ ಆಂಗ್ಲ ಅಧ್ಯಾಪಕರಿಗಿಂತ ಕಡಿಮೆ ಸಂಬಳ ಕೊಡುತ್ತಿದ್ದರು. ಈ ಅನ್ಯಾಯದ ವಿರುದ್ಧ ಸಂಬಳವನ್ನು ತೆಗೆದುಕೊಳ್ಳದೇ ಕೆಲಸ ಮಾಡಿದರು. ಕೊನೆಗೆ ನ್ಯಾಯಯುತವಾದ ತಮ್ಮ ಹೋರಾಟದಲ್ಲಿ ಜಯವನ್ನು ಪಡೆದರು.

3. ಪರ್ವತವ್ಯಾಘ್ರ – ಬಿರುದು ಯಾರಿಗೆ, ಹೇಗೆ ಬಂತು ?

ಉತ್ತರ : ತೇನಸಿಂಗನಿಗೆ 'ಪರ್ವತವ್ಯಾಘ್ರ' ಎಂಬ ಬಿರುದು ಬಂದಿತು. 1938 ರಲ್ಲಿ ಟಿಲ್ಮನ್ ನಾಯಕತ್ವದಲ್ಲಿ ಬ್ರಿಟಿಷ್ ತಂಡ ಎವರೆಸ್ಟ್ ಶಿಖರವನ್ನೇರಲು ಹೊರಟಿತು. ಹಿಮದಲ್ಲಿ ಮೇಲಕ್ಕೆ ಹತ್ತಿ ಹೋಗುತ್ತಿರುವದು ತೀರ ದುಸ್ತರವಾದದ್ದು. ಒಂದು ಸಲ ಹಿಮವು ಕರಗಿ ತೇನಸಿಂಗ್ ಹಾಗೂ ಉಳಿದವರೂ ಜಾರಿ ಬಿದ್ದರು. ಸಾವಿಗೀಡಾಗುವ ಸ್ಥಿತಿಯಲ್ಲಿದ್ದ ತೇನಸಿಂಗ್ ಸುದೈವದಿಂದ ಪಾರಾದ. ಅದೇ ಪ್ರಕಾರ ಪುನಃ ಒಂದಾವರ್ತಿ ತೇನಸಿಂಗ್ ಜಾರಿಬಿದ್ದು ಭಯಂಕರ ಹಿಮಪ್ರಪಾತಕ್ಕೆ ಬೀಳಲಿದ್ದ ಅವನು ಕಷ್ಟಪಟ್ಟು ಉಳಿದುಕೊಂಡ. ಅದು ಅವನ ಸುದೈವ. ಆಗ ಆರನೆಯ ಶಿಬಿರವನ್ನೇರಿದ ತೇನಸಿಂಗ್‌ನಿಗೆ ವ್ಯಾಘ್ರ ಬಿರುದು ಬಂದಿತು.

4) ಅರವಿಂದರು ಚಂದ್ರನಾಗರನ್ನು ಬಿಟ್ಟು ಪಾಂಡಿಚೇರಿಗೆ ಏಕೆ ಬಂದರು ?

ಉತ್ತರ : ( 1984 ನೇ ಎಪ್ರೀಲ್ ದ್ವಿತೀಯ ಪತ್ರಿಕೆ 2 ನೇ ಪ್ರಶ್ನೆ 2 ರ ಉತ್ತರ ನೋಡಿರಿ )

**5) ಪಾಂಡಿಚೇರಿಯಲ್ಲಿ ಶಾಂತಿಧಾಮ ನಿರ್ಮಿತವಾದ ರೀತಿಯನ್ನು ತಿಳಿಸಿರಿ.**

ಉತ್ತರ : ( 1985 ನೇ ಎಪ್ರೀಲ್ ದ್ವಿತೀಯ ಪತ್ರಿಕೆ 2ನೇ ಪ್ರಶ್ನೆ 3 ರ ಉತ್ತರ ನೋಡಿರಿ ).

**ಪ್ರಶ್ನೆ 3. ಕೆಳಗಿನ ವಿಷಯುಗಳಲ್ಲಿ ಒಂದನ್ನು ಆರಿಸಿಕೊಂಡು ಎರಡು ಪುಟಕ್ಕೆ ಮೀರದಂತೆ ಒಂದು ಪ್ರಬಂಧವನ್ನು ಬರೆಯಿರಿ.**

**1) ವಿದ್ಯಾರ್ಥಿಗಳು ಮಾಡಬಹುದಾದ ಸಮಾಜ ಸೇವೆ :**

ಉತ್ತರ : ವಿದ್ಯಾ ಸಂಪಾದನೆ ಮಾಡುವವನೇ ವಿದ್ಯಾರ್ಥಿ. ಇದು ಆತನ ಮೊದಲ ಕರ್ತವ್ಯವೂ ಹೌದು. ಉತ್ತಮವಾದ ಗುಣಗಳನ್ನು ಪಡೆದಿರುವವನು ಆದರ್ಶ ವಿದ್ಯಾರ್ಥಿ ಎನಿಸುವನು ಕೇವಲ ಪುಸ್ತಕೀಯ ಜ್ಞಾನವನ್ನು ಪಡೆಯುವುದಲ್ಲದೆ ಸಾಮಾಜಿಕ ಸಾಮಾನ್ಯ ಜ್ಞಾನವನ್ನು ಪಡೆಯಬೇಕು. ಸಮಾಜ, ನಾಡು, ದೇಶಗಳ ಬಗೆಗಿನ ಕಲ್ಪನೆಯನ್ನು ಹೊಂದಿ ಅವುಗಳ ಪ್ರಗತಿಯ ಬಗೆಗೂ ತಿಳಿದುಕೊಂಡು, ತನ್ನ ಪಾಲಿನ ಕರ್ತವ್ಯವನ್ನು ಮಾಡಬೇಕು. ಯಾಕಂದರೆ ನಾಳಿನ ನಾಗರಿಕರಾಗುವ ಇವರಿಗೆ ಇವೆಲ್ಲವುಗಳ ಬಗೆಗಿನ ವಿಚಾರವಿರಬೇಕಾದುದು ಅವಶ್ಯ.

ವಿದ್ಯಾರ್ಥಿ ದೆಸೆಯಲ್ಲಿ ಕೂಡಾ ಮನುಷ್ಯನು ಸಮಾಜಕ್ಕೆ ಸೇವೆ ಸಲ್ಲಿಸಬಹುದು. ಸಮಾಜದ ಸೇವೆಗೆ ಇತಿ-ಮಿತಿಗಳೆಂಬುದೇನೂ ಇಲ್ಲ. ಸಾಧ್ಯವಾದ ರೀತಿಯಲ್ಲಿ ಸೇವೆ ಸಲ್ಲಿಸಬಹುದು. ನಮ್ಮ ಸುತ್ತಲಿನ ಜನರ ಸಮೂಹವೇ ನಮ್ಮ ಸಮಾಜ. ಸಮಾಜವನ್ನು ಬಿಟ್ಟು ವ್ಯಕ್ತಿ ಇಲ್ಲ; ವ್ಯಕ್ತಿ ವಿನಃ ಸಮಾಜವಿಲ್ಲ. ಕಾರಣ ಪ್ರತಿಯೊಬ್ಬನೂ ಸಮಾಜದ ಉನ್ನತಿಗಾಗಿ ಸೇವೆ ಮಾಡಿದರೆ ಅದರಲ್ಲಿ ತನ್ನ ವೈಯಕ್ತಿಕ ಹಿತವೂ ಅಡಕವಾಗಿರುತ್ತದೆ. ಕಾರಣ ಅವಕಾಶ ದೊರಕಿಸಿಕೊಂಡು ಸಮಾಜ ಸೇವೆಗೆ ವಿದ್ಯಾರ್ಥಿಗಳು ಮುಂದಾಗಬೇಕು. ಕೈಕೊಳ್ಳಬಹುದಾದ ಕೆಲವೊಂದು ಕಾರ್ಯ ಚಟುವಟಿಕೆಗಳನ್ನು ಇಲ್ಲಿ ಉದಾಹರಿಸಬಹುದು.

ಬಿಡುವಿನ ಸಮಯದಲ್ಲಿ ವಿದ್ಯಾರ್ಥಿಗಳು ವಯಸ್ಕರಾದ ನಿರಕ್ಷರಿಗಳಿಗೆ ವಿದ್ಯೆಯನ್ನು ಕಲಿಸುವ ಕಾರ್ಯದಲ್ಲಿ ನೆರವಾಗಬಹುದು. ನಮ್ಮ ದೇಶದಲ್ಲಿ ಇಂಥ ನಿರಕ್ಷರಿಗಳ ಸಂಖ್ಯೆ ಅಪಾರವಾಗಿದ್ದು, ಸರಕಾರವು ಈ ದಿಶೆಯಲ್ಲಿ ಸಾಕಷ್ಟು ಕಾರ್ಯ ಮಾಡುತ್ತಿದೆ. ಸಮಾಜ ವಿಕಾಸ ಯೋಜನೆಗಳಲ್ಲಿ ಸಹಕರಿಸಿ ಕಾರ್ಯ ಮಾಡುವದು. ವಿದ್ಯಾರ್ಥಿಗಳು ತಮ್ಮ ಶಾಲೆ, ಮನೆ, ಪರಿಸರ, ಗ್ರಾಮ, ಊರುಗಳನ್ನು ಶುದ್ಧವಾಗಿ ನೈರ್ಮಲ್ಯವಾಗಿ ಇಡುವಂತೆ ಕೈಕೊಳ್ಳಬಹುದಾದ ಕಾರ್ಯಗಳಲ್ಲಿ ಸಹಾಯ-ಸಹಕಾರ ನೀಡುವದು. ಗ್ರಾಮೀಣ ಜನರಿಗೆ ಸ್ವಚ್ಛತೆ, ಆರೋಗ್ಯ-ವಿಶ್ರಾಂತಿಗಳ ಬಗೆಗೆ, ಅವುಗಳ ಮಹತ್ವದ ಬಗ್ಗೆ ತಿಳಿಸಿಕೊಟ್ಟು ಕಾರ್ಯ ಮಾಡಿಸುವದು. ಗ್ರಾಮೀಣ ಜನತೆ ಕೈಕೊಳ್ಳುವ ಉದ್ಯೋಗಗಳು ಆರೋಗ್ಯಕರ ಜೀವನಕ್ಕೆ ಸಹಾಯಕವಾಗಿರುವಂತೆ ತಿಳುವಳಿಕೆ ಮಾಡಿಕೊಡುವದು. ಅವರಲ್ಲಿ ಸಾಮಾನ್ಯವಾಗಿ ಕಂಡು ಬರುವ ಕೆಲವೊಂದು ದುಶ್ಚಟಗಳ ಕೆಟ್ಟ ಪರಿಣಾಮಗಳನ್ನು ವಿವರಿಸಿ ಅವುಗಳಿಂದ ದೂರವಾಗಿರಲು ಸಲಹೆ ನೀಡುವದು.

ವಿದ್ಯಾರ್ಥಿಗಳು ಸ್ಕೌಟ್ಸ್, ಗೈಡ್ಸ್, ಎನ್.ಸಿ.ಸಿ. ಹಾಗೂ ಸಮಾಜ ಸೇವಾ ಸಂಸ್ಥೆಗಳಲ್ಲಿ ಭಾಗವಹಿಸಿ ಕಾರ್ಯಮಾಡುವದು. ಸಹಕಾರ, ಐಕ್ಯತೆ, ಸೌಹಾರ್ದ ಹಾಗೂ ಸೇವಾ ಮನೋಭಾವನೆಯನ್ನು ಬೆಳೆಸಿಕೊಳ್ಳಬೇಕು. ಇವುಗಳಿಂದ ಸಮಾಜದಲ್ಲಿ ಉತ್ತಮ ಪರಿಣಾಮವಾಗುವದರಲ್ಲಿ ಸಂದೇಹವಿಲ್ಲ. ಹೀಗೆ ಬಹುಮುಖವಾದ ಸಮಾಜ ಸೇವೆಯಲ್ಲಿ ವಿದ್ಯಾರ್ಥಿಗಳು ತಮ್ಮ ಸಾಮರ್ಥ್ಯ, ಅನುಕೂಲತೆಗಳನ್ನನುಸರಿಸಿ ಯಥಾಶಕ್ತಿ ಕಾರ್ಯ ಮಾಡಬಹುದಾಗಿದೆ.

**2) ವಾಚನಾಲಯಗಳು :**

**ಉತ್ತರ :** (ಮುಖ್ಯಾಂಶಗಳು:- ಸರ್ವರಿಗೂ ಜ್ಞಾನ ಸಂಪಾದನೆಗೆ ಮುಖ್ಯ ಸ್ಥಾನಗಳಾಗಿವೆ-ವರ್ತಮಾನ ಪತ್ರಗಳು, ನಿಯತಕಾಲಿಕಗಳು, ಪ್ರಕಟನೆಗಳು, ವಿವಿಧ ವಿಷಯ ಪುಸ್ತಕಗಳೂ ಇಲ್ಲಿ ಲಭ್ಯವಿರುತ್ತವೆ-ಸುಲಭರೀತಿಯಲ್ಲಿ ಓದುವ ಹವ್ಯಾಸವನ್ನುಂಟುಮಾಡುತ್ತವೆ-ಜಾತಿ ಭೇದವಿಲ್ಲದೆ ಎಲ್ಲರಿಗೂ ಸ್ವಾಗತವಿರುವದು-ಪರಸ್ಪರರಲ್ಲಿ ಪರಿಚಯ, ಸ್ನೇಹಭಾವ ಹೆಚ್ಚುತ್ತದೆ-ವಿದ್ಯಾರ್ಥಿಗಳಿಗೂ ಹೆಚ್ಚಿನ ಜ್ಞಾನಾರ್ಜನೆಗೆ ಸಹಾಯಕ-).

**3) ನಗರ ಜೀವನದ ಸಮಸ್ಯೆಗಳು :**

**ಉತ್ತರ :** (ಮುಖ್ಯಾಂಸಗಳು:- ಹಳ್ಳಿಯ ಜೀವನಕ್ಕೆ ವಿರುದ್ಧವಾದುದು ನಗರ ಜೀವನ-ನಗರಗಳಲ್ಲಿ ಅನೇಕ ಸೌಲಭ್ಯಗಳಿದ್ದರೂ, ಸಮಸ್ಯೆಗಳಿಗೇನೂ ಕೊರತೆಯಿಲ್ಲ-ಗಡಿಬಿಡಿಯ ಯಾಂತ್ರಿಕ ಜೀವನ-ಪರಾವಲಂಬನೆಯ ಅಧಿಕವಾದ ಜೀವನ ವೆಚ್ಚ ಶಾಂತಿ ಸಮಾಧಾನಗಳಿಲ್ಲದ ವಾತಾವರಣ-ಗಲಿಬಿಲಿ-ವಾಹನಗಳ ಕಿರುಚಾಟ ಅಪಘಾತಗಳಾಗುವ ಸಂಭವ ಹೆಚ್ಚು-ಕೃತಕತೆ-ಪರಿಸರದ ಮಾಲಿನ್ಯ ಉಂಟಾಗುವದು-ನೀರು, ವಿದ್ಯುತ್ತು ಇವುಗಳ ಅಭಾವ ತಲೆದೋರುವದು-ವಾಸಿಸುವ ಮನೆಗಳ ಅಭಾವ-ಅನ್ಯೋನ್ಯ ಪ್ರೇಮ, ಸೌಹಾರ್ದ,ಸಹಕಾರಗಳು ತಕ್ಕ ಮಟ್ಟಿಗೆ-ರಾಜಕೀಯ ವಾತಾವರಣ-ಒಟ್ಟನಲ್ಲಿ ಅಶಾಂತ ಜೀವನ)

**4) ಕಾಯಕವೇ ಕೈಲಾಸ :**

**ಉತ್ತರ :** (ಮುಖ್ಯಾಂಶಗಳು:- ಉದ್ಯೋಗಂ ಪುರುಷ ಲಕ್ಷಣಂ-ಕಾಯಕದ ಅರ್ಥ-ನಿಷ್ಠೆ ಹಾಗೂ ಮನಃಪೂರ್ವಕ

ಕಾಯಕ ಮಾಡಿದರೆ ಯಶಸ್ಸು–ಕೈಲಾಸ ಸಾಧನೆ–ಕಾಯಕದ ಸ್ವರೂಪ–ಸಮಾನತೆ, ಸೌಹಾರ್ದತೆ ಹಾಗೂ ಸಹಕಾರ ಅವಶ್ಯಕ- ಬಸವಣ್ಣನವರ ವಿಚಾರದಲ್ಲಿ ಕಾಯಕದ ಮಹತ್ವ–ಸರ್ವಜ್ಞ ಕವಿಯ ಅಭಿಪ್ರಾಯ–"ಕೈಕೆಸರಾದರೆ ಬಾಯಿ ಮೊಸರು"— ದಿ. ಮಹಾತ್ಮಾ ಗಾಂಧಿಯವರು ಕಾಯಕದ ಬಗ್ಗೆ ಹೇಳಿದ ಮಾತು ಗಳು. ನುಡಿದಂತೆ ನಡೆದರೆ ಇದೇ ಜನ್ಮ ಕಡೆ–ಆಗ ಮಾತ್ರ ಕೈಲಾಸ ಸುಖ ಸಾಧ್ಯ.)

**ಪ್ರಶ್ನೆ 4. ಕುಡಿಯುವ ನೀರಿಗೆ ಸರಿಯಾದ ವ್ಯವಸ್ಥೆ ಮಾಡಬೇಕೆಂದು ವಿಜ್ಞಾಪಿಸಿ ನಗರಸಭೆಯ ಮುಖ್ಯಾಧಿ ಕಾರಿಗಳಿಗೆ ಒಂದು ಪತ್ರ ಬರೆಯಿರಿ.**

**ಉತ್ತರ :** ನಂ. 85 ವಿದ್ಯಾನಗರ
ಹೊಸದುರ್ಗ
20 ನೇ ಮಾರ್ಚ 1988

ಮಾನ್ಯ ನಗರಸಭಾ ಆಡಳಿತಾಧಿಕಾರಿಗಳು
ಹೊಸದುರ್ಗ, ನಗರಸಭೆ
ಹೊಸದುರ್ಗ.

ವಿಷಯ– ವಿದ್ಯಾನಗರ ಭಾಗದಲ್ಲಿ ಸರಿಯಾಗಿ ಕುಡಿಯುವ ನೀರಿನ ವ್ಯವಸ್ಥೆ ಮಾಡಲು—

ಮಾನ್ಯರೇ,

ಶಹರದ ವಿದ್ಯಾನಗರ ಭಾಗದಲ್ಲಿ ಕಳೆದ ಐದಾರು ತಿಂಗಳು ಗಳಿಂದ ನೀರಿನ ಪೂರೈಕೆ ಸರಿಯಾಗಿ ಆಗುತ್ತಿರುವದಿಲ್ಲ. 2-3 ದಿನ ಗಳಿಗೊಮ್ಮೆ ನೀರು ಬಿಡಲಾಗುವದು. ಅಲ್ಲದೆ ಇಂಥದೇ ನಿಶ್ಚಿತ ವೇಳೆಗೆ ಎಂದು ಬರುವದಿಲ್ಲ. ರಾತ್ರಿ 2 ಗಂಟೆಯ/ ನಂತರವೂ ನೀರು ಪಡೆಯುತ್ತಿರುವದು ತುಂಬಾ ತೊಂದರೆಯಾಗಿದೆ. ಆ ಸಮಯದಲ್ಲಿ ನೀರು ಹಿಡಿದಿಟ್ಟುಕೊಳ್ಳದೇ ಹೋದರೆ ಇಡೀ ದಿನ ನೀರಿಲ್ಲದೆ ತೊಂದರೆ ಅನುಭವಿಸಬೇಕಾಗುತ್ತದೆ. ರಾತ್ರಿ ನಿದ್ದೆ ಗೇಡು ಹಾಗೂ ಆರೋಗ್ಯದ ಮೇಲೂ ದುಷ್ಪರಿಣಾಮವಾಗುವ ದೆಂದು ಬೇರೆ ಹೇಳಬೇಕಾಗಿಲ್ಲ. ಇದೆಲ್ಲವನ್ನು ಸಹಿಸಿಕೊಂಡು ಶಪಿಸುವದೊಂದೇ ದಿನನಿತ್ಯದ ಮಾತಾಗಿದೆ. ಕಾರಣ ತಾವು ಈ ಅವ್ಯವಸ್ಥೆಯನ್ನು ಸರಿಪಡಿಸಿ, ಪ್ರತಿದಿನ ಮುಂಜಾನೆ ನಿಶ್ಚಿತ ವೇಳೆಗೆ ನೀರು ಬರುವಂತೆ ಮಾಡಿ ಈ ಭಾಗದ ಜನರಿಗೆ ಅನು ಕೂಲ ಮಾಡಿಕೊಡಬೇಕೆಂದು ವಿನಂತಿಸಿದೆ. ಇತಿ.

ತಮ್ಮ ವಿಶ್ವಾಸಿ.
.....................
(ಪೂರ್ಣ ಹೆಸರು.......)

**ಪ್ರಶ್ನೆ 5. ಬಿಟ್ಟಿರುವ ಸ್ಥಳಗಳನ್ನು ಸರಿಯಾದ ಮಾತು ಗಳಿಂದ ತುಂಬಿರಿ.**

**ಉತ್ತರ :** 1) ಬ್ರಿಟಿಷರನ್ನು ಭಾರತದಿಂದ ಓಡಿಸಬೇಕೆಂಬ ನಿರ್ಧಾರದಿಂದ ಗುಪ್ತವಾಗಿ ಸ್ಥಾಪಿತವಾದ ಸಂಸ್ಥೆ .......(ಕಮಲ ಮತ್ತು ಕಠಾರಿ)

2) ಬೋಸರಿಗೆ ಬರೆದ ಪತ್ರದಲ್ಲಿ ರವೀಂದ್ರನಾಥರು ......ಎಂದೇ ರುಜು ಮಾಡುತ್ತಿದ್ದರು.(ರಾಖಿ)

3) ಜಗದೀಶರ ಮೊತ್ತಮೊದಲನೆಯ ಸಂಶೋಧನೆ ...(ವಿದ್ಯುಚ್ಛಕ್ತಿಯಿಂದಾಗುವ ಪ್ರಸರಣಗಳು)

4) ಜಗದೀಶರು....ಎಂಬ ಗ್ರಾಮದಲ್ಲಿ ಜನಿಸಿದರು. (ರಾರಿಖಿಲ್)

5) ತಂದೆಗೆ ಪತ್ರ ಬರೆಯುವಾಗ ಆರಂಭದಲ್ಲಿ... ....(ತೀರ್ಥರೂಪರವರ)

**ಪ್ರಶ್ನೆ 6. ಕೆಳಗಿನ ಪದ್ಯವನ್ನು ಓದಿ ಸಾರಾಂಶ ವನ್ನು ಬರೆಯಿರಿ.**

ಬಹುದಿವಸ ಬಾರದಿಹ ಮಳೆರಾಯ ಬಂದಿಹನು
ಬನ್ನಿರೈ ನನ್ನವರೆ ಸ್ವಾಗತವ ನೀಡಿ
ಕೇರಿ ಕೇರಿಗಳಿಂದ ಹಾರಿ ಬನ್ನಿರಿ ಬೇಗ,
ಮಳೆರಾಯ ಬಂದಿಹನು ಮಾರಾಯ ನೋಡಿ.
ಧಗಧಗಿಸಿ ದಹಿಸಿದ್ದ ಬಿರು ಬಿಸಿಲ ಸದೆ ಬಡಿದು
ಕಣ್ಣು ಮನ ಮೈಗಳಿಗೆ ತಣ್ಣ ತೂರಿಹನು.
ಭೀತಿಯನು ಬಿಡಿರಿನ್ನು, ಬಿತ್ತನೆಗೆ ಹಸಿಮಣ್ಣು!
ಹದವಾಯ್ತು ಹೊಲಗಳಲಿ ಎಂದು ಸಾರಿಹನು.
ಹಳ್ಳಕೊಳ್ಳಗಳಲ್ಲಿ ಕೊಚ್ಚೆ ನಾರುತಲಿತ್ತು
ಇಲ್ಲದಿರೆ ಬಹುಭಾಗ ಬಣಗಿಹೋಗಿತ್ತು;
ಇಂದಿರುವುದೆಲ್ಲೆಲ್ಲು ಹೊಸ ನೀರು ನರ್ತನವು!
ಹೋಗಿ ನೋಡಿರಿ ಈಗ! ನಿನ್ನೆ ಹೇಗಿತ್ತು!

**ಉತ್ತರ :** ಬಹುದಿನಗಳಿಂದ ಬರದೇ ಇದ್ದ ಮಳೆ–ಈ ದಿನ ಬಂದಿದೆ. ನನ್ನ ಬಾಂಧವರೆ ಬನ್ನಿ, ಸ್ವಾಗತವ ನೀಡಿ, ಕೇರಿ ಕೇರಿಗಳ ಜನರೆಲ್ಲ ಬೇಗ ಬನ್ನಿರಿ. ಮಳೆರಾಯುನನ್ನು ನೋಡಿರಿ. ಸುಡುತ್ತಿದ್ದ ಬಿಸಿಲ ಬೇಗೆಯನ್ನು ಹೊಡೆದೋಡಿಸಿ, ಕಣ್ಣು, ಮನಸ್ಸು ಮೈಗಳಿಗೆ ತಂಪನ್ನು ತಂದಿದ್ದಾನೆ. "ಭಯವನ್ನು ಬಿಡಿರಿ; ಹೊಲಗಳಲ್ಲಿ ಬಿತ್ತನೆಗೆ ಹಸಿ ಮಣ್ಣು ಸಿದ್ಧವಾಗಿದೆ" ಎಂದು ಹೇಳಿದ್ದಾನೆ. ಇದುವರೆಗೂ ಹಳ್ಳ–ಕೊಳ್ಳಗಳಲ್ಲಿ ಕೊಳಚೆ ನಾರುತಲಿತ್ತು, ಕೆಲವು ಕಡೆ ಜಲವಿಲ್ಲದೆ ಬಣಗಿಯೂ ಹೋಗಿತ್ತು.

ಆದರೆ ಈ ದಿನ ಎಲ್ಲೆಲ್ಲೂ ಹೊಸ ನೀರು ನರ್ತನ ಮಾಡುತ್ತಿದೆ. ನಿನ್ನೆಗೂ ಇಂದಿಗೂ ಹೋಲಿಸಿ ನೋಡಿ ಆನಂದಿಸಿರಿ.

**ಪ್ರಶ್ನೆ 7. ಈ ಗದ್ಯಭಾಗವನ್ನು ಓದಿಕೊಂಡು ಐದಾರು ವಾಕ್ಯಗಳಲ್ಲಿ ಸಾರಾಂಶವನ್ನು ಬರೆಯಿರಿ.**

ನಿಮ್ಮ ಭಾವನೆಗಳಲ್ಲಿ ಮತ್ತು ಕ್ರಿಯೆಗಳಲ್ಲಿ ಸತ್ಯ ಸಂಧರಾಗಿರಿ. ಪೂರೈಸಲು ಸಾಧ್ಯವಾಗದ ಮಾತುಗಳನ್ನು ಕೊಡಬೇಡಿರಿ. ತನ್ನ ಮೇಲಿನವರ, ಸಮಾನರ, ಕೆಳಗಿನವರ ಮತ್ತು ಸ್ನೇಹಿತರ ವಿಶ್ವಾಸವನ್ನು ಗಳಿಸುವದಕ್ಕಿಂತ ಹೆಚ್ಚಿನ ಸಂತೋಷ ಜೀವನದಲ್ಲಿ ಬೇರೆ ಇಲ್ಲ. ವಸ್ತುಸ್ಥಿತಿಗಳ ಸರಿಯಾದ ಜ್ಞಾನವಿಲ್ಲದ ಹೊರತು ಇತರರನ್ನು ಕುರಿತು ಎಂದೂ ಕೆಟ್ಟದ್ದನ್ನಾಡಬೇಡಿರಿ. ಹಾಗೆ ಮಾಡಿದರೆ ನೀವು ಸ್ನೇಹಿತರನ್ನು ಇಟ್ಟುಕೊಳ್ಳಲು ಸಾಧ್ಯ. ಇಂತಹ ಒಳ್ಳೆಯ ಕಾರ್ಯ ಮಾಡಲು ಅಗತ್ಯವಾದ ಸಂಘಬುದ್ಧಿಯನ್ನು ಬೆಳೆಸಲು ಸಾಧ್ಯವಾಗುವಂತೆ ನಿಮ್ಮ ಶಾಲಾ ಕಾಲೇಜುಗಳನ್ನು ಗೌರವಿಸಿರಿ.

**ಉತ್ತರ :** ನಿಮ್ಮ ಭಾವನೆ ಮತ್ತು ಕ್ರಿಯೆಗಳಲ್ಲಿ ಸತ್ಯಸಂಧರಾಗಿರಿ. ಪೊಳ್ಳು ಆಶ್ವಾಸನ ಕೊಡಬೇಡಿರಿ. ಎಲ್ಲರ ವಿಶ್ವಾಸವನ್ನು ಗಳಿಸಿರಿ. ಸತ್ಯವನ್ನು ತಿಳಿದುಕೊಳ್ಳದೆ ಇತರರನ್ನು ದೂಷಿಸದಿರಿ. ಒಳ್ಳೆಯ ಸ್ನೇಹಿತರನ್ನು ಹೊಂದಲು, ಸಾಂಘಿಕ ಬುದ್ಧಿಯನ್ನು ಬೆಳೆಸಿಕೊಳ್ಳಲು ನಿಮ್ಮ ವಿದ್ಯಾ ಮಂದಿರಗಳನ್ನು ಗೌರವಿಸಿರಿ.

—●—

# ಕನ್ನಡ

**ಅಕ್ಟೋಬರ–೧೯೮೩ ಪ್ರಥಮ ಪತ್ರಿಕೆ**

**ಅವಧಿ : 2½ ಗಂಟೆ ಅಂಕಗಳು : 100**

**ಪ್ರಶ್ನೆ 1. ಕೆಳಗಿನ ಪ್ರಶ್ನೆಗಳಲ್ಲಿ ಒಂದೊಂದು ಪುಟಕ್ಕೆ ಮೀರದಂತೆ ಯಾವುದಾದರೂ ಮೂರು ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

**1) ಹುಟ್ಟೂರಿನಲ್ಲಿ ವಿದ್ಯಾಭ್ಯಾಸಕ್ಕಾಗಿ ರನ್ನನು ನಡೆಸಿದ ಪ್ರಯತ್ನ ಮತ್ತು ಅದರಲ್ಲಿ ಉಂಟಾದ ವೈಫಲ್ಯ.**

**ಉತ್ತರ :** ಬಳೆ ವ್ಯಾಪಾರ ರನ್ನನ ಮನೆಯ ಆನುವಂಶಿಕ ಉದ್ಯೋಗ. ಅವನ ತಂದೆ–ತಾಯಿಗಳು ಅವನಿಗೆ ಆ ವ್ಯಾಪಾರದಲ್ಲಿ ತೊಡಗಲು ಹೇಳಿದರು. ಆದರೆ ರನ್ನನಿಗೆ ಅದು ಹಿಡಿಸಲಿಲ್ಲ. ಅವನ ಒಲವು ಬಾಲ್ಯದಿಂದಲೂ ಸಾಹಿತ್ಯ ಪ್ರಪಂಚದ ಕಡೆಗೆ ಇದ್ದಿತು. ಕಾವ್ಯ ರಚನೆಗೆ ಅಗತ್ಯವಾದ ಸಂಸ್ಕೃತ, ವ್ಯಾಕರಣ, ಅಲಂಕಾರ ಶಾಸ್ತ್ರಗಳ ಅಭ್ಯಾಸ ಮಾಡಬೇಕು; ರಾಜಮನ್ನಣೆ ಗಳಿಸುವಂಥ ಕಾವ್ಯ ರಚನೆ ಮಾಡಬೇಕು ಎಂಬುದು ರನ್ನನ ಮನದ ಬಯಕೆಯಾಗಿತ್ತು.

ರನ್ನನ ಬಯಕೆ ಆತನ ಹುಟ್ಟೂರಾದ ಮುದವೊಳಲಿನಲ್ಲಿ ಈಡೇರಲಿಲ್ಲ. ಏಕೆಂದರೆ ಪಂಡಿತರಲ್ಲಿ "ನನಗೆ ಶಾಸ್ತ್ರಾಭ್ಯಾಸ ಮಾಡಿಸಿ" ಎಂದು ಅವನು ಕೇಳಿದರೆ, ಅವರು–"ಕೊಂಡು ತಂದು ಹೊತ್ತು ಮಾರಿ ಲಾಭಗಳಿಸಲು ಸಾಹಿತ್ಯವೇನು ಬಳೆಯ ಮಲಾರವೇ?" ಎಂದು ಹಾಸ್ಯ ಮಾಡಿದರು. ನೆರೆಹೊರೆಯವರು "ಮಹಾಕವಿರತ್ನ" ಎಂದು ಅಣಕಿಸಿದರು. ಅವನ ತಂದೆ–ತಾಯಿಗಳು ಸಹ "ನೆಲದಲ್ಲಿ ತೆವಳಲು ಹುಟ್ಟಿದ ಬಸವನಹುಳು, ಗರುಡನಂತೆ ಆಕಾಶದಲ್ಲಿ ಹಾರಲು ಯತ್ನಿಸಬಾರದು ಮಗು" ಎಂದು ಹೇಳಿ ಅವನನ್ನು ತಿದ್ದಲು ಪ್ರಯತ್ನಿಸಿದರು. ಅವನ ಉತ್ಸಾಹದ ಮೇಲೆ ತಣ್ಣೀರೆರಚುವ ಈ ಕಾರಣಗಳಿಂದಾಗಿ ಮುದವೊಳಲಿನಲ್ಲಿ ರನ್ನನ ಬಯಕೆ ಈಡೇರಲಿಲ್ಲ. ಅಲ್ಲಿ ಅವನು ವಿಫಲನಾದ. ಜಾತಿ ಹಾಗೂ ಬಡತನಗಳ ತೊಡಕಿನಿಂದ ರನ್ನಮಯ್ಯನ ಪ್ರಯತ್ನಕ್ಕೆ ಪ್ರೋತ್ಸಾಹ ದೊರೆಯಲಿಲ್ಲ.

**2) ಬಾನ್‌ಕಮ್ಮಟ ಅಥವಾ ಸ್ಕೈಲ್ಯಾಬಿನ ವಿವರಣೆ :**

**ಉತ್ತರ :** ಆಕಾಶದಲ್ಲಿ ಭೂಮಿಯನ್ನು ಪರಿಭ್ರಮಿಸುತ್ತಿದ್ದು ಅಲ್ಲಿಯ ನಿರ್ವಾತದಲ್ಲಿ ವಿವಿಧ ವೈಜ್ಞಾನಿಕ ಪ್ರಯೋಗಗಳನ್ನು ಮಾಡಲು ನಿಯೋಜಿತವಾದ ಕೃತಕ ಉಪಗ್ರಹಕ್ಕೆ ಬಾನ್‌ಕಮ್ಮಟ ಅಥವಾ ಸ್ಕೈಲ್ಯಾಬ್ ಎಂದು ಹೆಸರು. ಇದನ್ನು 1973 ರಲ್ಲಿ ಮೊಟ್ಟಮೊದಲನೆಯದಾಗಿ ಹಾರಿಸಲಾಯಿತು. ಈ ಬಾನ್‌ಕಮ್ಮಟದಲ್ಲಿನ ಮೂವರು ಗಗನಯಾತ್ರಿಗಳು ಎಂಭತ್ನಾಲ್ಕು ದಿನಗಳ ಕಾಲ ಇದ್ದರು. ಎರಡನೆಯದನ್ನು 1978 ರಲ್ಲಿ ಹಾರಿಸಲಾಯಿತು. ಇದರಲ್ಲಿಯೂ ಮೂವರು ಗಗನಯಾತ್ರಿಗಳು ತೊಂಭತ್ತೈದು ದಿನಗಳ ಕಾಲ ಇದ್ದರು. ಇವರು ಅಲ್ಲಿ ಹಲವಾರು ವೈಜ್ಞಾನಿಕ ಪ್ರಯೋಗಗಳನ್ನು ಮಾಡಿದರು. ಅಲ್ಲದೆ ಸ್ವತಃ ತಾವೇ ಹಲವಾರು ಪ್ರಯೋಗಗಳಿಗೆ ಒಳಗಾದರು. ಮನುಷ್ಯನ ದೇಹ ಮತ್ತು ಮನಸ್ಸು ಆಕಾಶದ ಪ್ರತಿಕೂಲ ಸನ್ನಿವೇಶದಲ್ಲೂ ಚೆನ್ನಾಗಿ ಕೆಲಸ ಮಾಡಬಲ್ಲವು ಎಂಬುದು ಇದರಿಂದ ಸಿದ್ಧವಾಯಿತು.

ಬಾನ್‌ಕಮ್ಮಟ ಅಥವಾ ಸ್ಕೈಲ್ಯಾಬ್‌ಗಳಲ್ಲಿ ತಿಂಗಳುಗಟ್ಟಲೆ ವಾಸಿಸುತ್ತ, ಭೂಮಿಯ ಸುತ್ತಲೂ ಸುತ್ತುತ್ತ, ಅನೇಕ ವೈಜ್ಞಾನಿಕ ಪ್ರಯೋಗಗಳನ್ನು ನಡೆಸುತ್ತಿರುವದು ಬಿಸಿ ಬಿಸಿ ಸುದ್ದಿಯಾಗಿತ್ತು. ಈಗ ಅದು ಹಳೆಯದಾಯಿತು. ಈಗ ಹೆಚ್ಚಿನ ಮಾಹಿತಿ ಸಂಗ್ರಹಿಸಲು ಗುರು, ಶನಿ, ಮಂಗಳ, ಶುಕ್ರ, ಬುಧ ಸೂರ್ಯ ಗ್ರಹಗಳ ಕಡೆಗೂ ರಾಕೆಟ್‌ಗಳನ್ನು ಪ್ರಯೋಗಿಸುತ್ತಿ

ದ್ದಾರೆ. ಅಲ್ಲಿನ ವಾತಾವರಣ, ಜೀವಿಗಳು ಇವುಗಳ ಬಗ್ಗೆ ಮಾಹಿತಿಯನ್ನು ಗ್ರಹಿಸುತ್ತಿದ್ದಾರೆ. ಭವಿಷ್ಯದಲ್ಲಿ ಮನುಷ್ಯನು ಆಕಾಶದಲ್ಲಿ ವಸಾಹತುಗಳನ್ನು ಸ್ಥಾಪಿಸುವದೂ ಸಾಧ್ಯವಾಗ ಬಹುದು.

2) ಫ್ಯಾರಡೇ ಸಂಸಾರವು ಪಟ್ಟ ಸಂಕಷ್ಟ–ಅವನ ವಿದ್ಯಾಭ್ಯಾಸವು ಸಾಗಿದ ಬಗೆ :

ಉತ್ತರ : ಫ್ಯಾರಡೇ ಜನಿಸಿದ್ದು 1791ಸಪ್ಟಂಬರ 22 ರಂದು. ಇವನ ತಂದೆ ಒಬ್ಬ ಒಕ್ಕಲಿಗ, ತಾಯಿ ಕೂಡ ನಿರಕ್ಷರಿ, ಅತ್ಯಂತ ಬಡತನ ಜೀವನ ಇವರ ಪಾಲಿಗೆ. ಕುದುರೆಲಾಯ, ಲಂಡನ್ನಿನ ಬೀದಿಗಳಲ್ಲೇ ವಾಸಮಾಡಬೇಕಾದ ಸ್ಥಿತಿ ಈ ದಂಪತಿಗಳಿಗೆ ನಾಲ್ಕು ಜನ ಮಕ್ಕಳು. ಫ್ಯಾರಡೇ ಒಂಭತ್ತು ವರ್ಷದವನಿದ್ದಾಗ ಅವನ ತಂದೆಯ ಆರೋಗ್ಯ ಕೆಟ್ಟಿತು. ದೇಶದ ಆರ್ಥಿಕ ಸ್ಥಿತಿಯಲ್ಲಿ ಮುಗ್ಗಟ್ಟುಂಟಾಯಿತು. ಇದರ ಪರಿಣಾಮವಾಗಿ ಫ್ಯಾರಡೆಯ ಸಂಸಾರ ಸಾಗುವದು ಕಷ್ಟವಾಯಿತು. ಡಾ. ಬೆನ್‌ಜೋನ್ಸ್ ಅವನ ಸಂಸಾರದವರು ಪಟ್ಟ ಕಷ್ಟವನ್ನು ವಿವರಿಸುತ್ತ "ಒಂದು ಕ್ವಾರ್ಟರ್ ಅಳತೆ ಕಾಳಿಗೆ ಒಂಭತ್ತು ಪೌಂಡು ಬೆಲೆ ಆಗ. ಅವರು ಸಾರ್ವಜನಿಕ ಪಾಡಿಗಾಗಿ ಕೈಚಾಚ ಬೇಕಾಯಿತು." ಎಂದು ಹೇಳುವ ಸಂದರ್ಭದಲ್ಲಿಯೇ ಮೈಕೇ–ಲ್‌ನು ತನಗೆ ಬರುತ್ತಿದ್ದ "ಒಂದೇ ಒಂದು ರೊಟ್ಟಿಯನ್ನು ಒಂದು ವಾರ ಮಾಡಿಕೊಳ್ಳಬೇಕಿತ್ತು" ಎಂದು ಹೇಳಿದ್ದಾರೆ.

ಮೈಕೇಲ್ ಫ್ಯಾರಡೆ ತನ್ನ ವಿದ್ಯಾಭ್ಯಾಸದ ಬಗೆಗೆ ಹೀಗೆ ವಿವರಿಸಿದ್ದಾನೆ– "ನನಗೆ ಶಾಲೆಯಲ್ಲಿ ಆದ ಶಿಕ್ಷಣ ಬಹು ಅಲ್ಪ. ನಾಲ್ಕಕ್ಷರ ಓದುವದು, ಬರೆಯುವದು, ಲೆಕ್ಕ ಇಷ್ಟೇ; ಅದೂ ಸಣ್ಣ ಶಾಲೆಯೊಂದರಲ್ಲಿ. ಶಾಲೆ ಮುಗಿದ ಮೇಲೆ ಕಾಲವೆಲ್ಲ ಮನೆ, ತಪ್ಪಿದರೆ ಬೀದಿ ಇಷ್ಟರಲ್ಲೇ ಮುಗಿಯುತ್ತಿತ್ತು" ಎಂದು ವಿವರಿಸಿದ್ದಾನೆ. ಹೀಗೆ ಶಾಲೆಯಲ್ಲಿ ಆತನು ಕಲಿತದ್ದು ಅತೀ ಸ್ವಲ್ಪ. ಮುಂದೆ ಬುಕ್ ಬೈಂಡಿಂಗ ಕೆಲಸ ಕಲಿತು ಅಪ್ರೆಂಟಿಸ್ ಆಗಿ ಕೆಲಸಕ್ಕೆ ಸೇರಿದ, ಅಲ್ಲಿ ಪುಸ್ತಕ ಓದುವ ಅವಕಾಶ ದೊರೆಯಿತು. ವಾಟ್ ಎಂಬವನ ಮಾನಸಿಕ ಬೆಳವಣಿಗೆ, ಮಾರ್ಸೆಟ್ ಎಂಬ ಮಹಿಳೆಯ "ರಾಸಾಯನ ಶಾಸ್ತ್ರದಲ್ಲಿ ಸಂಭಾಷಣೆ" "ಎನ್ ಸೈಕ್ಲೋ ಪಿಡಿಯಾ ಬ್ರಿಟಾನಿಕ್"ದ ವಿದ್ಯುಚ್ಛಕ್ತಿ ವಿಷಯಕ ಲೇಖನ ಇತ್ಯಾದಿಗಳನ್ನು ಓದಿದನು. ವೈಜ್ಞಾನಿಕ ಶಿಕ್ಷಣ ಅವನಿಗಿರಲಿಲ್ಲ. ಕಲಿಯಬೇಕೆಂದರೆ ಆಗ ರಾತ್ರಿ ಶಾಲೆಗಳೂ ಇರಲಿಲ್ಲ. ಅಪ್ರೆಂಟಿಸ್ ಅವಧಿ ಮುಗಿದ ಬಳಿಕ ತನ್ನ ಜೀವನವನ್ನು ವಿಜ್ಞಾನಕ್ಕಾಗಿ ಮುಡಿಪಿಡಲು ನಿರ್ಧರಿಸಿದ. ಹೀಗೆ ಕಡುಬಡತನದಲ್ಲಿ ಬೆಳೆದು ಮಹಾಮೇಧಾವಿ ವಿಜ್ಞಾನಿ ಎನಿಸಿದ್ದಾನೆ.

4) ಮನಸ್ಸಿನ ಏರಿಳಿತಗಳನ್ನು ಹದಗೊಳಿಸುವುದರಲ್ಲಿ ಮೂಗಿನ ತುದಿಯ ಪಾತ್ರ :

ಉತ್ತರ : ಮೂಗಿನ ತುದಿ ಬಹಳ ತೀಕ್ಷ್ಣ, ತೀವ್ರ ಕಂಪನಕಾರಿ. ಇದಕ್ಕೆ ವಾಸನಾಗ್ರಹಣ ಶಕ್ತಿ ಹೆಚ್ಚು. ಮೂಗಿನ ತುದಿಯಲ್ಲಿ ಕೋಪ ಇರುತ್ತದೆ. ಈ ಮೂಗಿನ ತುದಿಯ ದೇವತೆ ಬಹಳ ಉಗ್ರ ದೇವತೆ. ಇದು ಆವಾಹನೆಯಾದಾಗ ಮುಖ ಕೆಂಪಾಗಿ ದೇಹವೆಲ್ಲ ಕಂಪಿಸುತ್ತದೆ. ಕೋಪಕ್ಕೆ ಹೊರಗಿನ ಪ್ರಚೋದನೆಗಳೇ ಕಾರಣ. ಕೆಲವರಿಗೆ ಸಕಾರಣವಾಗಿ ಕೋಪ ಬರುತ್ತದೆ. ಇನ್ನು ಕೆಲವರಿಗೆ ಸ್ವಲ್ಪ ಕಾರಣ ಸಿಕ್ಕಿದರೆ ಸಾಕು, ಅಷ್ಟಕ್ಕೆ ಸಿಡಿ ಮಿಡಿಗೊಳ್ಳುತ್ತಾರೆ ಉಗ್ರರೂಪ ತಾಳುತ್ತಾರೆ. ಹೀಗೆ ಹಲವಾರು ಪ್ರಚೋದನೆಗಳಿಂದ ಕೋಪ ಕೆರಳುತ್ತದೆ. ಕೆಲವರು ಎಲ್ಲೋ ತೋರಿಸಬೇಕಾದ ಕೋಪವನ್ನು ಮತ್ತೆ ಬೇರೆಲ್ಲಿಯೋ ತೋರಿಸುತ್ತಾರೆ. ಇಂಥವರನ್ನು ಮುಂಗೋಪಿಗಳೆಂದು ಕರೆಯುತ್ತಾರೆ. ಕೋಪ ಬಂದರೆ ತಾವು ಮನುಷ್ಯರೇ ಅಲ್ಲವೆಂದೂ ತಮ್ಮ ತಂಟೆಗೆ ಬರಬಾರದೆಂದೂ ಎಚ್ಚರಿಕೆ ನೀಡುತ್ತಾರೆ.

ಮನಸ್ಸನ್ನು ಒಂದು ಹದದಲ್ಲಿ ನಿಲ್ಲಿಸಲು ಮೂಗಿನ ತುದಿಯು ಹೆಚ್ಚಿನ ಪ್ರಭಾವವನ್ನು ಬೀರುತ್ತದೆ. "ಮುನಿಗಳಿಗೆ ಮುನಿಸು ಮೂಗಿನ ತುದಿಯೊಳಗ" ಎಂದು ಮುದ್ದಣ ವರ್ಣಿಸಿದ್ದಾನೆ. ಆದ್ದರಿಂದಲೇ ತಪಸ್ವಿಗಳು ತಪಸ್ಸನ್ನಾಚರಿಸುವಾಗ ಮೂಗಿನ ತುದಿಯನ್ನೇ ನೋಡುತ್ತಾರಂತೆ. ಋಷಿಗಳು ಬಹು ಬೇಗ ಕೋಪಗೊಂಡು ಶಾಪಕೊಡುತ್ತಿದ್ದುದು ಇದಕ್ಕಾಗಿಯೇ ಇರಬೇಕು. "ಕ್ಷಣ ಚಿತ್ತ ಕ್ಷಣ ಪಿತ್ತ" ಎಂಬಂತೆ ಶಾಪಕೊಟ್ಟ ನಂತರವೂ ಋಷಿಗಳು ತಮ್ಮ ತಪ್ಪನ್ನರಿತುಕೊಂಡು, ಪ್ರಪಂಚದ ಮೇಲೆ ಬೇಸರಪಟ್ಟು, ಮತ್ತೆ ತಪಸ್ಸಿಗೆ ಕೂಡುತ್ತಿದ್ದರು. ಆಗ ಮತ್ತೆ ಶಾಂತವಾಗುತ್ತಿದ್ದರು. ಕೋಪದ ಉಗಮಸ್ಥಾನವಾದ ಮೂಗಿನ ತುದಿಯನ್ನು ತಮ್ಮ ಹತೋಟಿಯಲ್ಲಿಡಲು, ಅರೆ ಮುಚ್ಚಿದ ಕಣ್ಣಿನಿಂದ ಮೂಗಿನ ತುದಿಯನ್ನು ನೋಡುತ್ತ ತಪಸ್ಸು ಮಾಡುತ್ತಿದ್ದರು.

ಲೌಕಿಕರಾದ ನಮಗೆ ಋಷಿಗಳ ಹಾಗೆ ಸಹನೆ, ತಪಸ್ಸನ್ನಾಚರಿಸುವದು ಕಠಿಣವಾದುದು. ಸಣ್ಣ ಪುಟ್ಟದ್ದಕ್ಕೆಲ್ಲ ರೇಗುತ್ತೇವೆ. "ಮುಳಿವೊಡಂ ಎಯ್ದೆ ಕೇಳು ಮುಳಿ" ಎಂದು ಪಂಪ ಹೇಳುತ್ತಾನೆ. ಅಂದ ಹಾಗೆ ನಮಗೆ ಸಹನೆ ಇಲ್ಲ. ಹಾಗಾದರೆ ಕೋಪ ತಡೆಯುವದು ಹೇಗೆ, ಎಂದಾಗ ಮೂಗಿನ ತುದಿಯನ್ನೇ ಆಪರೇಶನ್ ಮಾಡಿಸಿದರಾಯಿತು ಎಂದರೆ ಅದೂ ಸಾಧ್ಯವಿಲ್ಲದಮಾತು.

ಅಂತೂ ಮೂಗಿನ ತುದಿ ಇರುವವರೆಗೂ ಕೋಪ ಹೋಗುವ ದಿಲ್ಲ.

5) ಗರತಿಯು ಸರಸ ಸಾಹಿತ್ಯದಲ್ಲಿ ಹೊರ ಹೊಮ್ಮಿದ ಅನುಭವಗಳು :

ಉತ್ತರ : ಗರತಿಯು ತನ್ನ ನಿತ್ಯ ಜೀವನದಲ್ಲಿ ಅರಿತು ಅನುಭವಿಸಿದ ಸಂಗತಿಗಳನ್ನು ಸರಸ ಸಾಹಿತ್ಯ ರೂಪದಲ್ಲಿ ಹೊರ ಹೊಮ್ಮಿಸಿದ್ದಾಳೆ. ದೇವರಲ್ಲಿಯ ಭಕ್ತಿ, ಗಂಡನಿಗಾಗಿ ಪ್ರೀತಿ, ಮಗುವಿನ ಬಗೆಗೆ ವಾತ್ಸಲ್ಯ, ತವರು ಮನೆಯ ಅಕ್ಕರೆ, ಅತ್ತೆಯ ಮನೆಯ ವಿರಸ ಇತ್ಯಾದಿ ಅನುಭವಗಳೆಲ್ಲ ಗರತಿಯ ಸಾಹಿತ್ಯದಲ್ಲಿ ಹೊರಹೊಮ್ಮಿವೆ.

ಗರತಿ ಪ್ರಾತಃಸಮಯದಲ್ಲಿ ತನ್ನ ನಿತ್ಯದ ಕೆಲಸ ಪ್ರಾರಂಭಿಸುವ ಮುನ್ನ ದೇವರ ಪ್ರಾರ್ಥನೆ ಮಾಡುತ್ತಾಳೆ. ತಾನು ಜೀವನದಲ್ಲಿ ಪಡೆದ ಅನುಭವದಿಂದ ನಂಬಿದ ಮಂದಿ ತನ್ನನ್ನು ನಡು ನೀರಿನಲ್ಲಿ ಕೈಬಿಟ್ಟರೆಂದು—"ಮಲ್ಲಯ್ಯ ತಂದಿ ನನಕೈಯ ಬಿಡ ಬ್ಯಾಡ" ಎಂದು ಸ್ಮರಿಸುತ್ತಾಳೆ. ದೇವರು ಒಲಿದರೆ ತನ್ನ ಬಡತನವೆಲ್ಲ ದೂರಾಗುವದೆಂಬುದು ಅವಳ ದೃಢವಾದ ಶ್ರದ್ಧೆ, ವಿಶ್ವಾಸ.

ತಾನು ಮಾಡುವ ಕೆಲಸ ಕೀಳೆಂದು ಆಕೆ ಭಾವಿಸಿದವಳಲ್ಲ. ಮನೆಮಂದಿ ಸುಖಕ್ಕಾಗಿ ತನ್ನ ದೇಹವನ್ನು ಸವಿಸುವವಳು. ಪತಿಯು ಎಂತಹವನೇ ಇರಲಿ, ಆತನೇ ಸರ್ವ ಸೌಭಾಗ್ಯವೆಂದು ಕಾಣುವದು ಇವಳ ಹಿರಿಮೆ. ಪತಿಭಕ್ತಿ ಪರಾಯಣೆ ಇವಳು. ಗರತಿಗೆ ತನ್ನ ಮುದ್ದು ಮಗು ಅದು ಹೆಣ್ಣಾದರೇನು, ಗಂಡಾದರೇನು ಯಾವುದಕ್ಕೂ ಅಸಮಾಧಾನವಿಲ್ಲ. ಮಗು ಹೊನ್ನ ತಾವರೆಯಂತೆ. ಮಗುವಿನಿಂದಲೇ ಸ್ವರ್ಗ ಸೌಖ್ಯ ಕಾಣುವವಳು, ತನ್ನ ಮಗು ಬಳಗಕ್ಕೆ ಚಂದ ಎಂದು ಹೆಮ್ಮೆ ಪಡುತ್ತಾಳೆ.

ಗರತಿ ತನ್ನನ್ನು ಸಾಕಿ ಸಲುಹಿದ ತವರಿನ ಬಗೆಗೂ ಅಪಾರ ಆದರ ಅಭಿಮಾನ ಹೊಂದಿರುವಳು. ತವರಿನ ಋಣವನ್ನು ನೆನೆದು ತನ್ನ ಹೃದಯಾಂತರಾಳದಿಂದ ಅವರ ಉತ್ಕರ್ಷವನ್ನು ಹಾರೈಸುವಳು. ತವರವರ ವಂಶಬಳ್ಳಿ ಬೆಳೆಯಲಿ ಎಂದು ಹರಸುವಳು ಹೆತ್ತ ಕರುಳನ್ನು ಹೆರವರ ಮನೆಗೆ ಕಳಿಸುವಾಗ ಅವಳ ಮನಸ್ಸು ದುಃಖ ತುಂಬಿ ಭಾರವಾಗುತ್ತದೆ. ತಂದೆಗೂ, ಅಣ್ಣನಿಗೂ ಅಪಾರವಾದ ಅಗಲಿಕೆಯ ನೋವನ್ನು ಉಂಟು ಮಾಡುತ್ತದೆ. ಇಡಿಯ ಬಳಗವೇ ಕಣ್ಣೀರು ಕರೆಯುತ್ತದೆ. ಆದಾಗ್ಯೂ "ಕೊಟ್ಟ ಹೆಣ್ಣು ಕುಲಕ್ಕೆ ಹೊರತಲ್ಲವೇ" ಎಂದು ನೋವನ್ನು ಸಹಿಸಿ ದೈವದ ಸಾಕ್ಷಿಯಾಗಿ ಮಗಳನ್ನು ಒಪ್ಪಿಸುವಳು. "ನನ್ನ ಮಗಳಲ್ಲ, ನಿನ್ನ ಮಗಳು ಎಂದು ಭಾವಿಸು" ಎಂದು ಕೇಳಿಕೊಳ್ಳುತ್ತಾಳೆ.

ಹೀಗೆ ಗರತಿಯ ಜೀವನ ರಸಮಯವಾಗಿ ಸಾಗುತ್ತದೆ. ಈ ಎಲ್ಲ ಜೀವನಾನುಭವಗಳು ಗರತಿಯ ಸರಸ ಸಾಹಿತ್ಯದಲ್ಲಿ ಹೊರಹೊಮ್ಮಿವೆ.

ಪ್ರಶ್ನೆ 2. ಒಂದೊಂದು ಪುಟಕ್ಕೆ ಮೀರದಂತೆ ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡನ್ನು ಕುರಿತು ಬರೆಯಿರಿ.

1) ಬೇಂದ್ರೆಯವರು ಹೇಳುವಂತೆ ಸ್ವಾತಂತ್ರ್ಯ ವರ್ಧಂತಿಯ ಸಂದೇಶ.

ಉತ್ತರ : (1984 ನೇ ಅಕ್ಟೋಬರ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 1 ರ ಉತ್ತರ ನೋಡಿರಿ.)

2) ಬದುಕಿಗೆ ಒಂದು ನಿರ್ದಿಷ್ಟ ಗುರಿಯು ಬೇಕು ಎಂದು ಅಡಿಗರು ಸಮರ್ಥಿಸುವ ಬಗೆ :

ಉತ್ತರ : (1986 ನೇ ಮಾರ್ಚ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 1 ರ ಉತ್ತರ ನೋಡಿರಿ.)

3) ನುಡಿ ಮುತ್ತುಗಳ ಮುಖ್ಯ ಸಾರಾಂಶ :

ಉತ್ತರ : (1984 ನೇ ಅಕ್ಟೋಬರ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 2 ರ ಉತ್ತರ ನೋಡಿರಿ.)

4) ಚಕ್ರವ್ಯೂಹವನ್ನು ಭೇದಿಸಬಲ್ಲೆಯಾ ಎಂದ ಧರ್ಮರಾಯನಿಗೆ ಅಭಿಮನ್ಯು ಹೇಳಿದುದೇನು ?

ಉತ್ತರ : ಧರ್ಮರಾಯನು ಅಭಿಮನ್ಯುವನ್ನು ಕುರಿತು—"ಮಗುವೇ, ಇದು ಚಕ್ರವ್ಯೂಹ, ಇದನ್ನು ಭೇದಿಸುವ ಶೌರ್ಯ ಪಾರ್ಥನಿಗೆ ಮಾತ್ರ ಇದೆ. ಆದರೆ ಆತನು ಈಗ ದೂರದಲ್ಲಿದ್ದಾನೆ. ನಾವು ನಾಲ್ವರೂ ಇದನ್ನು ಭೇದಿಸಲು ತಿಳಿಯಲಾರದವರಾಗಿದ್ದೇವೆ, ನಿನಗೆ ಗೊತ್ತಿದ್ದರೆ ಹೇಳು." ಎಂದನು. ಆಗ ಅಭಿಮನ್ಯುವು—"ನಾನು ನನ್ನ ತಂದೆಯಿಂದ ಕೇಳಿ ತಿಳಿದಿದ್ದೇನೆ. ಇದಕ್ಕೆ ಹೆಚ್ಚಾಗಿ ಚಿಂತಿಸಬಾರದು. ಮದ್ದಾನೆಯು ಕೊಳವನ್ನು ಹೋಗುವ ಹಾಗೆ ನಾನು ಈಗಲೇ ಚಕ್ರವ್ಯೂಹಕ್ಕೆ ನುಗ್ಗಿ 'ಯುದ್ಧ ಮಾಡುವೆನು. ಈ ಶೂರರನ್ನು ನಾ ಬಲ್ಲೆ. ಅವರ ರಕ್ತ ಪ್ರವಾಹ ಚಿಮ್ಮುವಂತೆಯೂ ಮಾಂಸ ಖಂಡಗಳನ್ನು ಕಡಿಕಡಿದೂ ಸೂರೆ ಮಾಡದಿದ್ದರೆ ನಾನು ಅರ್ಜುನನ ಮಗನೇ?" ಎಂದು ಅಭಿಮನ್ಯು ನುಡಿದನು.

ಈ ನುಡಿಗಳನ್ನು ಕೇಳಿ ಧರ್ಮರಾಯನು–"ಯುದ್ಧದಲ್ಲಿ ಶತ್ರುಗಳನ್ನು ನೀನು ಪೂರ್ಣವಾಗಿ ಸಂಹರಿಸಬಹುದು. ಎದು

ರಾದ ಶತ್ರು ಸೈನ್ಯದಿಂದ ನೀನೇ ನಾಶವಾಗಲೂಬಹುದು. ನನ್ನ ವಂಶದ ಕುಡಿಯಾಗಿರುವ ನಿನ್ನನ್ನು ಮದ್ದಾನೆಗಳ ಹೊಡೆತಕ್ಕೋ, ದಂತವೆಂಬ ಆಯುಧದ ಹೊಡೆತಕ್ಕೋ, ಖಡ್ಗದ ಹೊಡೆತಕ್ಕೋ, ಬಾಣಗಳ ಆಘಾತಕ್ಕೋ, ಮಹಾರಥದ ಸಮೂಹಕ್ಕೆ ತುತ್ತಾಗುವ ದಕ್ಕೋ ಹೇಗೆ ನೂಂಕಲಿ ?" ಎಂದು ಹೇಳುವನು.

ಅಭಿಮನ್ಯುವು ಮತ್ತೆ ಉತ್ತರವಾಗಿ ಹೋರಾಡಲೆಂದೇ ಕ್ಷತ್ರಿಯನಾಗಿ ಹುಟ್ಟಿ, "ಯುದ್ಧದಲ್ಲಿ ಸಾವು ಬರಬಹುದೆಂದು ಹಿಂಜರಿದರೆ ಅದು ಅನುಚಿತವಾಗುವದು. ಹಿರಿಯರ ನಂತರ ಕಿರಿಯರು ಎಂಬ ಕ್ರಮವನ್ನು ನಾನು ಲೆಕ್ಕಿಸುವದಿಲ್ಲ. ವಿಕ್ರಮವೇ ಸರಿಯಾದ ಕ್ರಮ. ನಾನು ಪರಾಕ್ರಮಿಯಾಗಿದ್ದೇನೆ. ಹಿರಿಯ ರಾದ ತಮ್ಮ ಮಾತು ಹಾಗಿರಲಿ, ನಾನು ತಮ್ಮ ಸೇವೆಗಾಗಿಯೇ ಇರುವುದು. ತಾವು ಅಪ್ಪಣೆ ಕೊಟ್ಟರೂ ಸರಿ, ಕೊಡದಿದ್ದರೂ ಸರಿ, ನಾನು ಯುದ್ಧಕ್ಕೆ ಹೋಗುವದನ್ನು ನಿಲ್ಲಿಸಲಾರೆ" ಎಂದು ಹೇಳಿ ಅಭಿಮನ್ಯುವು ರಣರಂಗದತ್ತ ರಥವನ್ನು ಸಾಗಿಸುವಂತೆ ಸಾರಥಿಗೆ ಹೇಳುತ್ತಾನೆ.

**ಪ್ರಶ್ನೆ 3. (ಅ) ಈ ಕೆಳಗಿನ ಪದ್ಯದ ಸಾರಾಂಶ ವನ್ನು ಬರೆಯಿರಿ.**

ಆ ಸಮಯದಲಿ ಗಂಗೆ......
......ಕೊಟ್ಟಳಾತ್ಮಜನ ॥

ಉತ್ತರ : ಕೃಷ್ಣನ ಸಲಹೆಯಂತೆ ಕುಂತಿಯು ಕರ್ಣ ನಲ್ಲಿ ಬಂದು ಕಂಡ ಸಮಯದಲ್ಲಿ ಗಂಗಾದೇವಿಯು ಸ್ತ್ರೀರೂಪ ದಲ್ಲಿ ಕಾಣಿಸಿಕೊಂಡು ಕುಂತಿಗೆ—"ಎಲೆ ಕುಂತಿ-ದೇವಿಯೇ,ನೀನು ನಿನ್ನ ಮಗನನ್ನು ಸ್ವೀಕರಿಸು. ಇಷ್ಟು ದಿನಗಳವರೆಗೆ ಇವನ ಆಗು–ಹೋಗುಗಳ ಕಷ್ಟಗಳನ್ನು ನೋಡಿಕೊಂಡೆನು. ನನ್ನ ಮಾತನ್ನು ನಡೆಸಿದ್ದೇನೆ" ಎಂದು ಹೇಳಿ ಕರ್ಣನನ್ನು ಒಪ್ಪಿಸಿ ದಳು.

**(ಬ) ಕೆಳಗಿನ ಹಳಗನ್ನಡ ಗದ್ಯಭಾಗವನ್ನು ಹೊಸ ಗನ್ನಡಕ್ಕೆ ಅನುವಾದಿಸಿರಿ.**

ರಾಯಂ- "ಸಂದೆಯಮಣಯಿಲ್ಲದೆ ಇವರೊಳ್ ಮನಂ ಬಂದವನ ನೊಲಿಸಿಕೊಳ್ವದು" ಎಂದುರಿಸಲಾಬಾಲೆ ಬೆದರ್ದು ಪಿತಂಗೆ—"ಬೊಪ್ಪ : ನೀನೊರವಂತೆರಿಸಿಗಳಾರುಂ ತನಗೆ ಕಾಣಿಸರ್. ಮಂಗ ಕೋಡುಗ ಮುಸುಕಿನವರಾರೋ ಇರ್ವರ್ ತನ್ನಿದಿರ್ಗೆ ನಿಂದಂತೆ ತೋರ್ಪುದು. ಅದೊಡಿವರ ನಡುವೆ ಸರ್ವಾಭರಣ ಸಂಯುಕ್ತಮಂ. ವಿಶಾಲವಕ್ಷನು ಮಾಜಾನು ಬಾಹುಮಂ, ತುಂಗೋರುಸ್ಥಲನುಮಪ್ಪ ಷೋಡಶ ವರ್ಷದ ವರನೋರ್ವನಂ ಕಾಣ್ಬೆಂ. ಅಂತಿರ್ಪನ ಪಿತಾಂಬರಮೇಂ, ಶ್ಯಾಮಾಂಗಮಂ, ಶುಭ್ರ ಗಾತ್ರಮುಂ ಮನಂಗೊಳ್ವುದು. ಪದ್ಮ ಲೋಚನಂಗಳ್ ನೆನ್ನನೆ ದಿಟ್ಟಿಪಂ, ಮೇಣ್ ನಗುವಂ ಕುಂದ ಕುಟ್ಮಲ ದಂತರ್ಪ ಸಲ್ಲಳ್ ಸ್ಪಷ್ಟಂ ತೋರ್ಪುದು. ಮತ್ತೆ ಮಾ ಪುರುಷಂ ಬಲಗೆಯ್ಯನೆನ್ನಕರಮಂ ಪಿಡಿಯಲೆಂಬೋಲ್ ಮುಂದೆ ನೀಡಿರ್ಪಂ" ಎಂದು ಮಾರ್ನುಡಿದಳ್.

ಉತ್ತರ : ರಾಜನು–"ಸಂದೇಹವು ಸ್ವಲ್ಪವೂ ಇಲ್ಲದೆ ಇವರಲ್ಲಿ ಮನಸ್ಸಿಗೆ ಬಂದವರನ್ನು ಒಲಿಸಿಕೊಳ್ಳುವದು" ಎಂದು ಹೇಳಲು ಆ ಬಾಲೆಯು ಹೆದರಿ ತಂದೆಗೆ–"ಅಪ್ಪಾ, ನೀನು ಹೇಳು ವಂತೆ ಋಷಿಗಳು ಯಾರೂ ನನಗೆ ಕಾಣಿಸುತ್ತಿಲ್ಲ. ಮಂಗ ಕೋಡಗ ಮುಖದವರಾರೋ ಇಬ್ಬರು ನನ್ನೆದುರಿಗೆ ಇರುವಂತೆ ಕಾಣುವದು. ಆದರೆ ಅವರೀರ್ವರ ನಡುವೆ ಸರ್ವಾಭರಣಗಳಿಂದ ಭೂಷಿತನೂ, ವಿಶಾಲವಾದ ಎದೆಯುಳ್ಳವನೂ, ಅಜಾನು ಬಾಹುವೂ, ಎತ್ತರವಾದ ಎದೆ ಭಾಗ ಉಳ್ಳವನೂ ಆದ ಹದಿ ನಾರು ವರ್ಷದ ವರನೊಬ್ಬನು ಕಾಣಿಸುತ್ತಿದ್ದಾನೆ. ಅವನ ಪೀತಾಂಬರವೂ, ನಿಲುವಾದ ನಿರ್ಮಲದೇಹವೂ ಮನಸ್ಸಿಗೆ ಮೆಚ್ಚುವಂತಿದೆ. ತನ್ನ ತಾವರೆ ಕಣ್ಣುಗಳಿಂದ ನನ್ನನ್ನೇ ನೋಡುತ್ತಿದ್ದಾನೆ; ಮತ್ತು ನಗುತ್ತಿದ್ದಾನೆ; ಮಲ್ಲಿಗೆಯ ಮೊಗ್ಗುಗಳಂತಿರುವ ಅವನ ಹಲ್ಲುಗಳ ಸ್ಪಷ್ಟವಾಗಿ ಕಾಣುತ್ತವೆ. ಮತ್ತು ಆ ಪುರುಷನು ತನ್ನ ಬಲಗೈಯನ್ನು ನನ್ನ ಕೈಯನ್ನು ಹಿಡಿಯಲೋ ಎಂದು ಮುಂದೆ ಚಾಚಿದ್ದಾನೆ" ಎಂದು ಉತ್ತರಿ ಸಿದಳು.

**ಪ್ರಶ್ನೆ 4. ಈ ಕೆಳಗಿನ ಪದ್ಯಭಾಗವನ್ನು ಪೂರ್ಣ ಗೊಳಿಸಿರಿ.**

"ಓಟವೇ ಗುರಿಯೇ,......
........ನೋಡುವ ತಾಳ್ಮೆ ನಿನಗೆ ಬರಲಿ."

ಉತ್ತರ : (ನಿಮ್ಮ ಪಠ್ಯಪುಸ್ತಕದ ಪದ್ಯಭಾಗದಲ್ಲಿ ನೋಡಿರಿ.)

**ಪ್ರಶ್ನೆ 5. ಇವರಲ್ಲಿ ಇಬ್ಬರ ಸ್ಥಳ, ಕಾಲ, ಮತ್ತು ಕೃತಿಗಳನ್ನು ತಿಳಿಸಿರಿ. 1) ನಾಗಚಂದ್ರ. 2) ಪುರಂದರ ದಾಸ. 3) ಕುವೆಂಪು.**

ಉತ್ತರ : 1) 1) ನಾಗಚಂದ್ರ :– ಹನ್ನೊಂದನೆ ಶತಮಾನದ ಹಳಗನ್ನಡದಲ್ಲಿ ಪ್ರಸಿದ್ಧನಾದ ಕವಿ. ಜೈನ ಮತ ದವನಾದ ಈತನಿಗೆ "ಅಭಿನವ ಪಂಪ" ಎಂಬ ಬಿರುದು ಇದ್ದಿತು. ಈತನು "ರಾಮಚಂದ್ರ ಚರಿತ ಪುರಾಣ" ಮತ್ತು "ಮಲ್ಲಿನಾಥ ಪುರಾಣಂ" ಎಂಬ ಶ್ರೇಷ್ಠ ಕೃತಿಗಳನ್ನು ರಚಿಸಿ ದ್ದಾನೆ.

2) ಪುರಂದರದಾಸ :— ಕನ್ನಡದಲ್ಲಿ ಆಗಿಹೋದ ದಾಸ ಶ್ರೇಷ್ಠರಲ್ಲಿ ಪುರಂದರದಾಸರು ಒಬ್ಬರು. ಇವರ ಕಾಲ ಕ್ರಿ. ಶ. 1541 ಇವರು ವ್ಯಾಸರಾಯರ ಶಿಷ್ಯರು. ಭಕ್ತಿ, ಜ್ಞಾನ, ವೈರಾಗ್ಯ ಮೊದಲಾದವುಗಳ ಬಗೆಗೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಕರ್ನಾಟಕ ಸಂಗೀತಕ್ಕೆ ಇವರ ಕೊಡುಗೆ ಅಪಾರ ವಾದುದು. "ಪುರಂದರ ವಿಠ್ಠಲ" ಎಂಬುದು ಇವರ ಅಂಕಿತ.

3) ಕುವೆಂಪು :– (1984 ನೇ ಎಪ್ರೀಲ ಪ್ರಶ್ನೆಯ 5 ರ ಉತ್ತರ ನೋಡಿರಿ.)

ಪ್ರಶ್ನೆ 6. ಕೆಳಗಿನ ವಾಕ್ಯಗಳ ಸಂದರ್ಭ ಮುತ್ತು ಸ್ವಾರಸ್ಯವನ್ನು ತಿಳಿಸಿರಿ.

1) ಜೀವನ್ ಭದ್ರಾಣಿ ಪಶ್ಯತಿ :

ಉತ್ತರ : ಪಂಚತಂತ್ರ ಕಥೆಗೆ ಸಂಬಂಧಿಸಿ "ಮೊಲಂ ಸಿಂಹಮಂ ಕೊಂದ ಕಥೆ" ಪಾಠದಲ್ಲಿ ಈ ಮಾತು ಬಂದಿದೆ. ಮೊಲವು ಸಿಂಹದ ಬಳಿಗೆ ಬರುವಾಗ ಉಪಾಯವೊಂದನ್ನು ಯೋಚಿಸಿತ್ತು. ತಾನು ತಡವಾಗಿ ಬರಲು ತನ್ನನ್ನು ಬೇರೊಂದು ಸಿಂಹವು ತಡೆದಿದ್ದಿತು, ಅದು ತುಂಬಾ ಬಲಶಾಲಿಯಾಗಿತ್ತು. ಅದರಿಂದ ಅದನ್ನು ಎದುರಿಸುವದಾಗದೆ ತನ್ನನ್ನು ತಿಂದು ಸುಖಿ ವಾಗಿರಲು ಹೇಳುತ್ತ ಈ ಮಾತನ್ನು ಹೇಳಿತು. "ಬದುಕಿದ್ದರೆ ಎಂದಾದರೂ ಒಳ್ಳೆಯದನ್ನು ನೋಡಬಹುದು". ಆದುದರಿಂದ ಸಾಯದೆ, ಉಳಿದಿರುವಂತೆ ಆ ಸಿಂಹಕ್ಕೆ ಹೇಳಿತು. ಆ ಸಿಂಹವನ್ನು ರೇಗಿಸಲು ಮೊಲವು ಮಾಡಿದ ತಂತ್ರ ಇದಾಗಿತ್ತು.

2) ಉದಾತ್ತನೊಳ್ ಪುಟ್ಟಿದಲ್ತೆ ನೀಲಿರಾಗಂ :

ಉತ್ತರ : (1985 ಎಪ್ರೀಲ ಪ್ರಥಮ ಪತ್ರಿಕೆ 6 ನೇ ಪ್ರಶ್ನೆ 4 ರ ಉತ್ತರ ನೋಡಿರಿ.)

3) ಪಕ್ಷ ಪಕ್ಷ ಕಟ್ಟಿದರೂ ಬೇಕು ಶೀಲ ರಕ್ಷಣಾ:

ಉತ್ತರ : ಈ ಮಾತು "ಸ್ವಾತಂತ್ರ ವರ್ಧಂತಿ" ಕವನದಲ್ಲಿ ಬಂದಿದೆ. ಸ್ವಾತಂತ್ರ್ಯ ನಂತರದ ಜವಾಬ್ದಾರಿಯನ್ನು ಕವಿ ಹೇಳುತ್ತ ಜನತೆಯಲ್ಲಿ ಸುವ್ಯವಸ್ಥೆ ಬೇಕು. ಶಿಕ್ಷಣ ಬೇಕು, ರಾಜ ಕೀಯ ಪಕ್ಷಗಳಲ್ಲಿ ಶೀಲ ಬೇಕು ಎಂದು ಹೇಳುವಾಗ ಈ ಮಾತನ್ನು ಹೇಳಿದ್ದಾರೆ, ಪ್ರಜಾಪ್ರಭುತ್ವ ಪಡೆದ ನಮ್ಮ ಆಡಳಿತದಲ್ಲಿ ರಾಜಕೀಯ ಪಕ್ಷಗಳ ಪಾತ್ರ ಬಹು ದೊಡ್ಡದು. ಅದು ವ್ಯವಸ್ಥೆಯಲ್ಲಿ ನಡೆಯಬೇಕು.

4) ಬುದ್ಧಿ ಇಲ್ಲದೆ ಅನ್ಯಾಯವಾಗಿ ತನ್ನ ಪ್ರಾಣ ವನ್ನು ಕಳೆದುಕೊಂಡಿತಲ್ಲಾ!

ಉತ್ತರ : "ಕಾಡುಕೋಣ" ಎಂಬ ಪಾಠದಲ್ಲಿ ಈ ಮಾತು ಬಂದಿದೆ. ಕಾಡುಕೋಣವು ನಿಲ್ಲುತ್ತಿದ್ದ ಸ್ಥಳದಲ್ಲಿ ಅದು ಬೇರಡೆ ಹೋದಾಗ್ಗೆ ಇನ್ನೊಂದು ಕೋಣವು ಬಂದು ಅಲ್ಲಿ ನಿಂತಿದ್ದಿತು. ಸಾಧು ಕಾಡುಕೋಣವನ್ನು ಪೀಡಿಸುತ್ತಿದ್ದ ಮಂಗವು ಇಂದೂ ಸಹ ಅದೇ ಕೋಣವಿರಬೇಕೆಂದು ತಿಳಿದು ತನ್ನ ಕಪಿಚೇಷ್ಟೆ ಪ್ರಾರಂಭಿಸಿತು. ಇದನ್ನು ಸಹಿಸದ ಆ ಕೋಣವು ಕೋಪದಿಂದ ಅದನ್ನು ಇರಿದು ಕೊಂದು ಹಾಕಿತು. ನಂತರ ಅಲ್ಲಿಗೆ ಬಂದ ಸಾಧು ಕೋಣವು ಸತ್ತ ಕಪಿಯನ್ನು ನೋಡಿ ದುಃಖದಿಂದ "ಬುದ್ಧಿ ಇಲ್ಲದೆ ಅನ್ಯಾಯವಾಗಿ ತನ್ನ ಪ್ರಾಣವನ್ನು ಕಳೆದುಕೊಂಡಿ ತಲ್ಲಾ!" ಎಂದಿತು ಹಾಗೂ ಮರುಕಪಟ್ಟಿತು.

5) ಮಗನೆಂದರೆ ಆತನಿಗೆ ಜೀವ, ಪ್ರಾಣ, ಬುದ್ಧಿ:

ಉತ್ತರ : ಈ ಮಾತು "ಕಳ್ಳರ ಗುರು" ಪಾಠದಲ್ಲಿ ಬಂದಿದೆ. ವೈದ್ಯರು ತಮ್ಮ ಮನೆ ಕಳುವಾಗಿ ಕೆಲದಿನಗಳಾದ ಬಳಿಕ ಒಂದು ರಾತ್ರಿ ತಮ್ಮ ಪತ್ನಿಯೊಡನೆ ಮಾತನಾಡುತ್ತ ಕುಳಿತಾಗ ಯಾರೋ ಕೂಗಿದರು. ಇವರು ಬಾಗಿಲು ತೆರೆದು ನೋಡಿದಾಗ ಅವರು ಕಳುವಿಗೆ ಬಂದರೆಂದು ಭಾವಿಸಿ "ಇವತ್ತು ನಿಮಗೇನೂ ಸಿಗುವದಿಲ್ಲ" ಎಂದರು. ಆಗ ಬಂದವರು ತಾವು ಕಳುವು ಮಾಡುವುದಕ್ಕೆ ಬಂದಿಲ್ಲವೆಂದೂ, ತಮ್ಮ ಒಡೆಯನ ಮಗನಿಗೆ ಕಾಯಿಲೆ ಎಂದೂ ಅದಕ್ಕಾಗಿ ಔಷಧಿಗೆ ಬಂದಿದ್ದೇವೆ ಎಂದೂ ಹೇಳಿದರು. ಆ ಸಂದರ್ಭದಲ್ಲಿ ಅವರು ತಮ್ಮ ಒಡೆಯ ನಿಗೆ ಒಬ್ಬನೇ ಮಗನೆಂದು ಹೇಳಿ "ಮಗನೆಂದರ ಆತನಿಗೆ ಜೀವ, ಪ್ರಾಣ, ಬುದ್ಧಿ" ಎಂದರು.

ಪ್ರಶ್ನೆ 7. ಈ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರವನ್ನು ಬರೆಯಿರಿ.

1) ಗರತಿಯು ತವರು ಮನೆಗೆ ಏನೆಂದು ಹಾರೈಸು ವಳು ?

ಉತ್ತರ : ಎಷ್ಟಾದರೂ ಹೆಣ್ಣುಮಕ್ಕಳಿಗೆ ತವರು ಮನೆ ಯೆಂದರೆ ಪ್ರಾಣ. ಅದರ ಅಭಿವೃದ್ಧಿಯನ್ನೇ ಯಾವಾಗಲೂ ಬಯಸುವವರು. ತಾನು ಹಾಲುಂಡು ಬೆಳೆದ ಆ ಮನೆಯು ಹೊಳೆ ದಂಡೆಯ ಮೇಲಿನ ಕರಕಿಯ ಬಳ್ಳಿಯ ಹಾಗೆ ಚಿಗುರಿ ಹರಡಲಿ, ಫಲನೀಡುತ್ತ ಬೆಳೆಯಲಿ ಎಂದು ಆಶಿಸುತ್ತಾಳೆ. ಆ ಮನೆ, ವಂಶ ಕುಡಿಯೊಡೆದು ಹರಡಿ ಹಬ್ಬಲಿ. ಸೊಗಸಾಗಿ ಬಾಳಿ ಬೆಳಗಲಿ ಎಂಬುದೇ ಅವಳ ಹಾರೈಕೆ.

2) ಕಾಷ್ಠಕೂಟನು ಜಯಘಂಟೆಗೆ ಕಲ್ಪಿಸಿದ ನಿಯಮವೇನು?

ಉತ್ತರ : ಕಾಷ್ಠಕೂಟನು ತನ್ನ ಹೆಂಡತಿ ಜಯಘಂಟೆಗೆ ಹೀಗೆ ಹೀಗೆ ಹೇಳಿದ್ದನು. "ನೀನು ಇವನಿಗೆ (ನಂದಿ ಮಿತ್ರನಿಗೆ) ಹೊಟ್ಟೆ ತುಂಬ ಊಟ ಹಾಕಬೇಡ, ಎಣ್ಣೆಯನ್ನು ಬಹಳ ಹಾಕ

ಬೇಡ, ಸ್ನಾನಕ್ಕೆ ನೀರು ಕೇಳಿದರೂ ಕೊಡಬೇಡ" ಎಂದು ಅಪ್ಪಣೆ ಮಾಡಿದ್ದನು.

3) ಗೊಂಬಿಗುಡ್ಡದ ವೈಶಿಷ್ಟ್ಯವೇನು ?

ಉತ್ತರ :- ಗೊಂಬಿಗುಡ್ಡ ಇದೊಂದು ಹೆಸರಾದ ಗುಡ್ಡ. ಬಿಜಾಪುರ ಜಿಲ್ಲೆಯಲ್ಲಿ ಆಸಂಗಿ ಹಾಗೂ ಕುಲಹಳ್ಳಿಗಳ ನಡುವೆ ಸುಮಾರು ಒಂದು ಮೈಲು ಸುತ್ತಳತೆಯಲ್ಲಿ ವ್ಯಾಪಿಸಿದೆ. ಇದರ ಬಂಡೆಗಳ ಮೇಲೆ ಅನೇಕ ಚಿತ್ರಗಳನ್ನು ಕೆತ್ತಲಾಗಿದೆ. ಅವುಗಳು ಹೋರಿಗಳ ಕಾದಾಟ, ಒಂಟಿ ಸವಾರಿ, ಪಲ್ಲಕ್ಕಿ, ಆನೆ, ಜಿಂಕೆ, ಸಾರಂಗ ಮೊದಲಾದ ಪ್ರಾಣಿಗಳ ಚಿತ್ರಗಳಿವೆ. ಐತಿಹಾಸಿಕ ಸಂಗ್ರಹಾಲಯದಂತಿದ್ದು ಹೆಸರಿಗೆ ತಕ್ಕ ಗೊಂಬಿಗುಡ್ಡವೇ ಆಗಿದೆ.

4) ಚಾರ್ಲಿಚಾಪ್ಲಿನ್ ಅಮೇರಿಕಾದಲ್ಲಿ ಕಷ್ಟಕ್ಕೆ ಒಳಗಾದುದೇಕೆ?

ಉತ್ತರ : ಚಾಪ್ಲಿನ್ ಜನತಾ ಕಲಾ ಸೇವೆ ಮಾಡಲು ಇಚ್ಛಿಸಿದ ಕಲಾವಿದರಲ್ಲಿ ಒಬ್ಬರು. ಇಂತಹ ಕಲಾವಿದರೆಲ್ಲ ಅಮೇರಿಕಾ ವಿರೋಧಿಗಳೆಂದು ಪರಿಗಣಿಸಲ್ಪಟ್ಟು ಕಷ್ಟ ಕೋಟಲೆಗಳಿಗೆ ಒಳಗಾಗಬೇಕಾಯಿತು. ಅಲ್ಲದೆ ಅಮೇರಿಕಾ ವಿರುದ್ಧ ಚಟುವಟಿಕೆಗಳ ಪರಿಶೀಲನಾ ಸಮಿತಿಯ ಸಂಶಯಗ್ರಸ್ಥ ನೋಟಕ್ಕೆ ಒಳಗಾಗಬೇಕಾಯಿತು. ಅವರು ಇಂಗ್ಲೆಂಡಿಗೆ ಮತ್ತೆ ಹಿಂತಿರುಗಿದರು. ಅವರ ಮೇಲೆ ನಿಷೇಧಾಜ್ಞೆ ಜಾರಿ ಮಾಡಿದರು. ಅಲ್ಲದೇ ತಮ್ಮ ಮೇಲಿನ ಆರೋಪ ನಿಕಾಲೆ ಆಗುವವರೆಗೆ ಅಮೇರಿಕಾಕ್ಕೆ ಮರಳ ಬಾರದೆಂಬ ಕಟ್ಟಾಜ್ಞೆಯನ್ನು ವಿಧಿಸಲಾಗಿತ್ತು.

5) ಚಂದ್ರಾಪೀಡನು ದಂಡುಬಿಟ್ಟು ದಟ್ಟಡವಿಯನ್ನು ಏಕೆ ಸೇರುವಂತಾಯಿತು ?

ಉತ್ತರ : ಬೇಟೆಗಾಗಿ ಬಂದು ಅರಣ್ಯದಲ್ಲಿ ನಿರ್ಮಿಸಲಾದ ಶಿಬಿರದಲ್ಲಿ ಚಂದ್ರಾಪೀಡನು ಮಲಗಿದ್ದಾಗ, ನಡುರಾತ್ರಿಯಲ್ಲಿ ಯಾರೋ ಅಶ್ವಮುಖರಿಬ್ಬರು ಮಾತನಾಡಿಕೊಂಡು ಬರುತ್ತಿದ್ದುದನ್ನು ನೋಡಿದನು. ಕೂಡಲೇ ಅವರನ್ನು ಹಿಡಿಯಲು ತನ್ನ ಕುದುರೆ ಇಂದ್ರಾಯುಧವನ್ನೇರಿ ಆ ಕಿನ್ನರರನ್ನು ಹಿಂಬಾಲಿಸಿ ಹೊರಟನು. ದೂರ ದಟ್ಟಡವಿಯಲ್ಲಿ ಹೇಮಕೂಟ ಪರ್ವತದ ಬಳಿ ಅವರು ಕಣ್ಮರೆಯಾದರು. ಹೀಗೆ ಚಂದ್ರಾಪೀಡನು ದಂಡು ಬಿಟ್ಟು ಅಡವಿಯನ್ನು ಸೇರಬೇಕಾಯಿತು.

ಪ್ರಶ್ನೆ 8. ಕದಡಿದ ನೀರು ತಿಳಿಯಾಗುವಂತೆ; ರಾವಣನ ಮನಸ್ಸು ತಾನಾಗಿ ತಿಳಿಗೊಂಡಿತು.

ಉದಾತ್ತನಲ್ಲಿ ನೀಲಿರಾಗವು ಹುಟ್ಟಿದು ಅಲ್ಲವೇ ? ಇಲ್ಲಿ ಕಂಡುಬರುವ ಅಲಂಕಾರವನ್ನು ಹೆಸರಿಸಿ ಸಮನ್ವಯಗೊಳಿಸಿರಿ.

ಉತ್ತರ : ಇಲ್ಲಿ ಅರ್ಥಾಂತರನ್ಯಾಸ ಅಲಂಕಾರವಿದೆ. ರಾವಣನ ಮನಸ್ಸು ಮತ್ತೆ ತಿಳಿಗೊಂಡಿತು ಎನ್ನುವುದನ್ನು ಲೋಕೋಕ್ತಿಯಿಂದ ಸಮರ್ಥಿಸಲಾಗಿದೆ.

ಪ್ರಶ್ನೆ 9. ಕೆಳಗಿನ ಪದ್ಯಭಾಗವನ್ನು ಪ್ರಸ್ತರಿಸಿ ಗಣವನ್ನು ವಿಂಗಡಿಸಿ, ಛಂದಸ್ಸಿನ ಹೆಸರನ್ನು ತಿಳಿಸಿರಿ.

ಉತ್ತರ :

∪∪—∪ | ∪∪—∪ | ——∪ | ∪∪—∪ |
ಘನಸತ್ಯ | ಮಯನಪ್ಪ | ನೀಂಪರ್ವ | ತದಲಿಪ್ಪೆ |
೫ ೫ ೫ ೫

∪∪—∪ | ∪∪∪— | ∪∪∪∪∪ | —∪∪ |
ಡನಿಮಿತ್ತ | ಮುನಿದನಂ | ತಡಗುವರೆ | ಹಿಂದೆ ಕೈ |
೫ ೫ ೫ ೫

∪∪∪— | ∪∪∪∪∪ | —
ಯೊಳಗೆತೋ | ರಿದನಿಜವ | ನು
೫ ೫ ೨

ಇದು ವಾರ್ಧಿಕ ಷಟ್ಪದಿ.

1,2,3,4,5, ಸಾಲುಗಳಲ್ಲಿ 5 ಮಾತ್ರೆಯ 4 ಗಣಗಳೂ, 3 ಮತ್ತು 6 ನೇ ಸಾಲುಗಳಲ್ಲಿ 5 ಮಾತ್ರೆಯ 2 ಗಣ ಮತ್ತು ಒಂದು ಗುರು ಇದ್ದರೆ ಅದು ವಾರ್ಧಿಕ ಷಟ್ಪದಿ.

ಪ್ರಶ್ನೆ 10. ಕೆಳಗಿನ ನುಡಿಗುಟ್ಟುಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿರಿ.

1) ನಗೆಗೆ ಈಡಾಗು. 2) ಋಣವನ್ನು ತೀರಿಸು.
3) ಕೋಡು ಮೂಡಿಸು.

ಉತ್ತರ : 1) ಹಿಂದುಮುಂದಿನ ವಿಚಾರ ತಿಳಿಯದೆ ಮಾತನಾಡಿದರೆ ಜನರಲ್ಲಿ ನಗೆಗೆ ಈಡಾಗಬೇಕಾಗುವದು.

2) ತಾಯಿ ತಂದೆಗಳ ಋಣವನ್ನು ತೀರಿಸುವವನಾಗು.

3) ಓಟದ ಸ್ಪರ್ಧೆಯಲ್ಲಿ ವಿಜಯ ಪಡೆದ ಇವನಿಗೆ ಕೋಡು ಮೂಡಿತು.

ಪ್ರಶ್ನೆ 11. (ಅ) ವಿಗ್ರಹ ವಾಕ್ಯವನ್ನು ಬರೆದು ಸಮಾಸದ ಹೆಸರನ್ನು ತಿಳಿಸಿರಿ.

1) ಈರೈದು. 2) ತರುಗುಲ್ಮಲತೆಗಳು.
3) ಕ್ರೋಧಾಗ್ನಿ.

ಉತ್ತರ : 1) ಎರಡು+ಐದು—ಈರೈದು; ದ್ವಿಗು ಸಮಾಸ.

2) ತರುಗಳೂ+ಗುಲ್ಮಗಳೂ+ಲತೆಗಳೂ— ತರುಗುಲ್ಮಲತೆಗಳು; ದಂದ್ವಸಮಾಸ.

3) ಕ್ರೋಧವೆಂಬ+ಅಗ್ನಿ—ಕ್ರೋಧಾಗ್ನಿ ಕರ್ಮಧಾರಯಸಮಾಸ

(ಬ) ಈ ಪದಗಳನ್ನು ಬಿಂಗಡಿಸಿ ಸಂಧಿಯ ಹೆಸರನ್ನು ತಿಳಿಸಿರಿ.

1) ದಿವ್ಯಾಹಾರ. 2) ಗಂಧೋದಕ. 3) ಎಣಿಕೆಯಿಲ್ಲದೆ.

ಉತ್ತರ : 1) ದಿವ್ಯ+ಆಹಾರ = ದಿವ್ಯಾಹಾರ; ಸವರ್ಣದೀರ್ಘಸಂಧಿ.

2) ಗಂಧ+ಉದಕ = ಗಂಧೋದಕ; ಗುಣಸಂಧಿ.

3) ಎಣಿಕೆ+ಇಲ್ಲದೆ = ಎಣಿಕೆಯಿಲ್ಲದೆ; ಯಕಾರಾಗಮಸಂಧಿ.

(ಕ) ವಿರುದ್ಧಾರ್ಥಕ ಪದವನ್ನು ಬರೆಯಿರಿ.

1) ಮೃದು. 2) ನಾಗರಿಕ. 3) ಸಾರ್ಥಕ.

ಉತ್ತರ: 1) ಕಠಿಣ. 2) ಅನಾಗರಿಕ. 3) ವ್ಯರ್ಥ.

ಪ್ರಶ್ನೆ 12. (ಅ) ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

1) ಮರಣೋನ್ಮುಖನಾಗಿದ್ದಾಗ ಫಾರಡೆಯು ಸಮಾಧಾನ ಮನಸ್ಸಿನಿಂದಲೇ ಸ್ನೇಹಿತ ಟೆಂಡಲ್‌ಗೆ ಹೇಳಿದ್ದೇನು?

ಉತ್ತರ : "ಪ್ರಪಂಚದ ನಾನಾಭಾಗದವರು ತೋರಿರುವ ಜನಾನುರಾಗ, ಕರುಣೆ ಇವೇ ತನ್ನ ಕೆಲಸಕ್ಕೆ ಸಾಕಷ್ಟು ಪ್ರತಿಫಲ" ಎಂದು ಫಾರಡೆ ಸಮಾಧಾನದಿಂದ ತನ್ನ ಸ್ನೇಹಿತ ಟೆಂಡಲ್‌ನಿಗೆ ಹೇಳಿದ್ದನು.

2) ಉಳಿದ ಕಳುವಿನ ವಸ್ತುಗಳೊಡನೆ ಸೇರಿಸದ ಹಾಸುಗೆಯನ್ನು ಮಾತ್ರ ಭೀಮನಾಯಕನು ಉಳಿಸಿಕೊಳ್ಳಲು ಕಾರಣವೇನು ?

ಉತ್ತರ : ಭೀಮನಾಯಕನು ತನ್ನ ಮಗನಿಗೆ ಹಾಸಿದ್ದ ವೈದ್ಯರ ಹಾಸಿಗೆಯನ್ನು ಮಾತ್ರ ಅವರ ಹರಕೆಯಾಗಿ ಇರಲೆಂದು ಉಳಿಸಿಕೊಂಡಿದ್ದ.

3) ಅಂತಹ ಜಪಾನೀ ತೋಟವನ್ನು ಹಾರುವ ತಟ್ಟೆಯ ನಾಗರಿಕತೆಯವರೂ ಕೂಡ ಮಾಡಿರಲಾರರು ಏಕೆ ?

ಉತ್ತರ: ಅಲ್ಲಿನ ಜಪಾನೀ ಟೀ ತೋಟ ಸಂಪೂರ್ಣವಾಗಿ ಜಪಾನಿನ ಶೈಲಿಯಲ್ಲಿ ರಚಿತವಾಗಿದ್ದು ಜಪಾನಿನ ಯಾವುದೋ ಒಂದು ಊರಿನ ಬಡಾವಣೆಯಲ್ಲಿ ಸುತ್ತುತ್ತಿರುವ ಭಾವನೆ ಬರುವಂತೆ ಸುಂದರವಿದ್ದುದರಿಂದ– ಇತರ ಯಾರಿಂದಲೂ ಅಂತಹ ತೋಟದ ರಚನೆ ಸಾಧ್ಯವಿಲ್ಲ ಎನ್ನಿಸಿತ್ತು.

4) ಯುಧಿಷ್ಠಿರನ ಮಾತಿನಿಂದ ಕೃಷ್ಣನು ಕುಪಿತನಾಗಲು ಕಾರಣವೇನು?

ಉತ್ತರ: ಯುಧಿಷ್ಠಿರನು ದುರ್ಯೋಧನನಿಗೆ ತಮ್ಮೊಡನೆ ಯಾರೊಡನಾದರೂ ಗದಾಯುದ್ಧ ಮಾಡಬಹುದೆಂದು ಹೇಳಿದಾಗ, ಭೀಮನ ಹೊರತು ಯಾರೂ ಅವನೊಡನೆ ಹೋರಾಡಲಾರರೆಂದು ತಿಳಿದು ಕೃಷ್ಣನು ಆತನ ಮೇಲೆ ಕೋಪಗೊಂಡನು.

5) ನಿಮ್ಮ ಬಯಕೆಯು ಕರವಾಳವೋ ಮರವಾಳವೋ ಎಂದು ಕೇಳಿದ ಅಜಿತಸೇನನ ಆಶಯವೇನಾಗಿತ್ತು?

ಉತ್ತರ : ವಿದ್ಯೆ ಕಲಿಯಲು ಬಂದ ರನ್ನನನ್ನು ಗುರು ಅಜಿತಸೇನಾಚಾರ್ಯರು ಅವನ ಮನೋನಿರ್ಧಾರವನ್ನು ಪರೀಕ್ಷಿಸಲು ಈ ರೀತಿ ಪ್ರಶ್ನೆ ಮಾಡಿದರು.

(ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿ ಮಾಡಿರಿ.

ಉತ್ತರ : 1) ಪಿಕ ಎಂಬುದು ಸಾವೋರಾಗಳ ಮೆಚ್ಚುಗೆಯ.......(ಚುಟ್ಟ)

2) ಖ್ಯಾತ ಸಾಹಿತಿ ದಿ. ತ್ರಿವೇಣಿ ಅವರ ತಂಗಿ...(ಆರ್ಯಾಂಬಾ ಪಟ್ಟಾಭಿ)

3) "ವ್ಯಕ್ತಿಗಳು ಕ್ರೂರವಾಗಿರಬಹುದು; ಆದರೆ ಮಾನವ ಮಾತ್ರ ಕರುಣಾಮಯಿ" ಎಂದು ಹೇಳಿದವರು....... (ರವೀಂದ್ರನಾಥ ಠಾಕೂರ)

4) ಎಚ್ಚೆಸ್ಕೆ ಎಂದು ಖ್ಯಾತರಾದ ಸಾಹಿತಿಯ ಹೆಸರು....... (ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್)

5) ಪರಸ್ತ್ರೀ ವ್ಯಾಮೋಹನಿಮಿತ್ತವಾಗಿ ಮರಣವಾಗಲಿ ಎಂದು ರಾವಣನಿಗೆ ಶಾಪ ಕೊಟ್ಟವಳು...(ವೇದವತಿ).

ಪ್ರಶ್ನೆ 13. ಮೊದಲಿನ ಎರಡು ಪದಗಳಿಗೆ ಇರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದಗಳನ್ನು ಬರೆಯಿರಿ.

ಉತ್ತರ : 1) ರವಿಕ್ಷೇಣ–ಪದ್ಮಪುರಾಣ; ಬಾಣಭಟ್ಟ-(ಕಾದಂಬರಿ)

2) ಸಂಪಾದಕರು–ಮೊಹರೆ ಹಣಮಂತರಾಯರು; ನೇತ್ರದಾನಿ-(ಡಾ.ಮೋದಿ)

3) ಮುಖ–ಮೊಗ; ಆಶ್ಚರ್ಯ-(ಅಚ್ಚರಿ)
4) ಲಿಪಿಯಲ್ಲಿ– ಆಗಮ; ಸಾಕೆಂದ— (ಲೋಪ)
5) ಗಂಗೆಯ–ಭಗಣ; ಸೀತೆಯಂ— (ರಗಣ)

ಪ್ರಶ್ನೆ 14. ಆಯಾಯ ಗುಂಪಿಗೆ ಸೇರದ ಪದಗಳನ್ನು ಆಯ್ದು ಬರೆಯಿರಿ.

ಉತ್ತರ : 1) ಗಣ, ಮಾತ್ರೆ, ಪ್ರಾಸ, ತ್ರಾಸ, ಯತಿ (ತ್ರಾಸ)
2) ಏಕವಚನ, ಮೃದುವಚನ, ಬಹುವಚನ, ದ್ವಿವಚನ (ಮೃದುವಚನ)
3) ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಶತಕ, ಸೋಮೇಶ್ವರ ಶತಕ (ಸೋಮೇಶ್ವರ ಶತಕ)
4) ದೊಡ್ಡತನ, ಪತನ, ಜಾಣತನ, ಸೋಮಾರಿತನ, ಒಡೆತನ (ಪತನ)
5) ಜಳ, ಒಳ, ಕುಳ, ಕ್ಷಳ (ಒಳ)

ಪ್ರಶ್ನೆ 15. "ಅ" ಗುಂಪಿನ ಪದಗಳಿಗೆ "ಬ" ಗುಂಪಿನ ಪದಗಳಲ್ಲಿ ಸರಿಯಾದವುಗಳನ್ನು ಜೋಡಿಸಿ ಬರೆಯಿರಿ.

| "ಅ" | "ಬ" |
|---|---|
| 1) ಸೇವಾ ಮೂರ್ತಿ | 1) ಲೋಕಾದಿತ್ಯ |
| 2) ಅಗ್ರಹಾರ | 2) ಮೊದಲ ತುತ್ತು |
| 3) ಅಚ್ಚದೇವಿ | 3) ಇಂದ್ರ |
| 4) ವಿಜ್ಞಾನಿ ಟೆಂಡಲ್ | 4) ಫ್ಯಾರಡೆಯ ಮಿತ್ರ |
| 5) ಜೈನ ಪೂಜಾರಿ | 5) ಗರತಿಯ ಹಾಡು |
| | 6) ಬ್ರಾಹ್ಮಣರ ಕೇರಿ |
| | 7) ಫ್ಲಾರೆನ್ಸ್ ನೈಟಿಂಗೇಲ್ |

ಉತ್ತರ : 1–7, 2–6, 3-5, 4-4, 5–3.

—●—

## ಕನ್ನಡ

ಅಕ್ಟೋಬರ–೧೯೮೬ ದ್ವಿತೀಯ ಪತ್ರಿಕೆ

ಅವಧಿ : 2॥ ಘಂಟೆ ಅಂಕಗಳು : 50

ಪ್ರಶ್ನೆ 1. ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡನ್ನು ಆರಿಸಿಕೊಂಡು ಒಂದು ಪುಟಕ್ಕೆ ಮೀರದಂತೆ ಉತ್ತರ ಬರೆಯಿರಿ.

1. ಬರೋಡಾದಲ್ಲಿ ಆರಂಭವಾದ ಅರವಿಂದರ ವೃತ್ತಿ ಜೀವನ.

ಉತ್ತರ : ಅರವಿಂದರು ಬರೋಡಾದ ಮಹಾರಾಜರ ಬಳಿಯಲ್ಲಿ ಕೆಲಸಕ್ಕೆ ಹಾಜರಾದರು. ಇವರನ್ನು ಮೊದಲು ತಿಂಗಳಿಗೆ ಇನ್ನೂರು ರೂಪಾಯಿ ಸಂಬಳದ ಮೇಲೆ ಸರ್ವೆಸೆಟ್ಲ್ಮೆಂಟ ಇಲಾಖೆಯಲ್ಲಿ ಕೆಲಸಕ್ಕೆ ನಿಯಮಿಸಲಾಯಿತು. ಪ್ರಾರಂಭದಲ್ಲಿ ಬೇರೆ ಬೇರೆ ಇಲಾಖೆಗಳಲ್ಲಿ ಕೆಲಸವನ್ನು ಮಾಡಿ ಅನುಭವ ಪಡೆಯಬೇಕಾಗಿದ್ದರಿಂದ ವಿವಿಧ ಆಡಳಿತ ವಿಭಾಗಗಳ ಮುಖ್ಯಸ್ಥರ ಬಳಿ ಕುಳಿತು ಸಮಸ್ಯೆಗಳನ್ನು ಪ್ರತ್ಯಕ್ಷವಾಗಿ ಕಂಡು ಅನುಭವ ಪಡೆಯುತ್ತಿದ್ದರು. ಅವರಿಗೆ ಇದನ್ನು ಬಿಟ್ಟು ವಿಶಿಷ್ಟವಾದ ಕೆಲಸವೇನೂ ಇರಲಿಲ್ಲ. ಹೀಗಾಗಿ ಅವರಿಗೆ ಓದಲು ಸಾಕಷ್ಟು ಸಮಯ ಸಿಗುತ್ತಿತ್ತು. ಅವರು ಸಂಸ್ಕೃತ ಕಲಿತರು. ವೇದ, ಗೀತೆ, ಉಪನಿಷತ್ತು ಗ್ರಂಥಗಳನ್ನು ಓದಿದರು ಭಾರತೀಯ ಸಂಸ್ಕೃತಿಯ ಪರಿಚಯ ಪಡೆದರು. ಈ ಅವಧಿಯಲ್ಲಿ ಅವರಿಗೆ ಅಧಿಕಾರವೂ ಹಂತಹಂತವಾಗಿ ಏರುತ್ತ ಹೋಯಿತು. ಅವರಿಗೆ ಅಧ್ಯಯನದ ಕಡೆಗೆ ವಿಶೇಷವಾದ ಒಲವು ಇದ್ದುದರಿಂದ ಕಾಲೇಜಿನಲ್ಲಿ ಪಾಠ ಹೇಳುವ ಕೆಲಸ ಕೊಡಲಾಯಿತು. ಫ್ರೆಂಚ ಅಧ್ಯಾಪಕರಾದರು, ಇಂಗ್ಲೀಷ ಪ್ರಾಧ್ಯಾಪಕರಾದರು. ಕಾಲೇಜಿನ ಉಪಪ್ರಿನ್ಸಿಪಾಲ, ನಂತರ ಪ್ರಿನ್ಸಿಪಾಲರಾಗಿ ಕೆಲಸ ಮಾಡಿದರು.

ತಮ್ಮ ಸೇವಾವೃತ್ತಿಯ ಜೊತೆಗೆ ಅರವಿಂದರಿಗೆ ಸಂಸ್ಥಾನದ ಅತೀ ಪ್ರಮುಖವಾದ ರಹಸ್ಯ ದಾಖಲೆ ಪತ್ರಗಳನ್ನು ಬರೆಯುವ ಕೆಲಸ ಇವರಿಗೆ ಬೀಳುತ್ತಿತ್ತು. ಗಾಯಕವಾಡ ಮಹಾರಾಜರಿಗೆ ಇವರ ಮೇಲೆ ಅಪಾರ ವಿಶ್ವಾಸವಿತ್ತು. ಅವರ ಮುಖಾಂತರ ಜರುಗಿದ ವ್ಯವಹಾರಗಳಿಗೆಲ್ಲ ಮಹಾರಾಜರಿಗೆ ತೃಪ್ತಿಯಾಗುತ್ತಿತ್ತು. ಅವರನ್ನು ಭಾವಿ ದಿವಾನರೆಂದೂ ಭಾವಿಸುತ್ತಿದ್ದರು. ಆದರೆ ಅರವಿಂದರಿಗೆ ಆ ಕಡೆ ಒಲವು ಇರಲಿಲ್ಲ. ಲೌಕಿಕ ಜೀವನದಲ್ಲಿ ರಾಷ್ಟ್ರ ಪ್ರೇಮ ಇವರ ಜೀವನದ ಉಸಿರಾಗಿತ್ತು. ಅಂತೆಯೇ ಭಾರತ ಮಾತೆಯ ಬಂಧ ವಿಮೋಚನೆಗೆ ಪ್ರಯತ್ನಿಸುತ್ತಿದ್ದರು. ಹೀಗೆ ಬರೋಡಾದಲ್ಲಿ ಅರವಿಂದರ ವೃತ್ತಿ ಜೀವನ ಪ್ರಾರಂಭವಾಯಿತು.

2. ಸಸ್ಯ ಶಾಸ್ತ್ರದಲ್ಲಿ ಬೋಸರು ನಡೆಸಿದ ಪ್ರಥಮ ಸಂಶೋಧನೆ, ವಿಜ್ಞಾನ ಪ್ರಪಂಚದಲ್ಲಿ ಅದರಿಂದಾದ ಕೋಲಾಹಲ.

ಉತ್ತರ : (1986 ಮಾರ್ಚ ದ್ವಿತೀಯ ಪತ್ರಿಕೆ ಪ್ರಶ್ನೆ 1 ನೇ 2 ರ ಉತ್ತರ ನೋಡಿರಿ.)

3. ತೇನಸಿಂಗನ 1935 ರ ಎವರೆಸ್ಟ್ ಆರೋಹಣದ ಅನುಭವವನ್ನು ಬರೆಯಿರಿ.

ಉತ್ತರ : (1984 ನೇ ಎಪ್ರಿಲ್ ದ್ವಿತೀಯ ಪತ್ರಿಕೆ ಪ್ರಶ್ನೆ 1 ನೇ-1 ರ ಉತ್ತರ ನೋಡಿರಿ.)

4) ಪ್ರಪಂಚವು ಮಾನವ ಲೋಕಕ್ಕೆ ಒಡ್ಡಿದ ಆಹ್ವಾನಗಳಾವುವು ? ಅದನ್ನು ಸ್ವೀಕರಿಸಿದ ಮಾನವ ಸಾಧಿಸಿದ ಸಾಧನೆಗಳಾವುವು ?

ಉತ್ತರ : ಮಾನವನಿಗೆ ಪ್ರಪಂಚವು ನಾನಾರೀತಿಯಿಂದ ಆಹ್ವಾನಗಳನ್ನು ಒಡ್ಡಿದೆ. ಮಾನವನಾದರೂ ತನ್ನ ಬುದ್ಧಿ ಮತ್ತ, ಕೌಶಲ್ಯಗಳಿಂದ ಸವಾಲನ್ನೆದುರಿಸುವ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡು ರಹಸ್ಯಗಳನ್ನು ಅರಿತುಕೊಳ್ಳಲು ಸದಾ ಪ್ರಯತ್ನ ಮಾಡುತ್ತಲೇ ಬಂದಿದ್ದಾನೆ. ಅತ್ಯದ್ಭುತ ಸಂಶೋಧನೆಗಳನ್ನು ಕಂಡು ಹಿಡಿದು ಮುಂದುವರಿಯುವದರ ಜೊತೆಗೆ ಅಪಾರ ಲಾಭವನ್ನು ಪಡೆಯುತ್ತಿದ್ದಾನೆ.

ವಿಶ್ವವು ಮಾನವನಿಗೆ ಪಕ್ಷಿಯಂತೆ ಹಾರುವದನ್ನು ಕಲಿಸಲಿಲ್ಲ. ಮೀನಿನಂತೆ ಈಜುವದನ್ನೂ ಕಲಿಸಲಿಲ್ಲ ಆದರೂ ಮಾನವ ವಿಮಾನ ಮೂಲಕ ಹಾರುವದನ್ನು ಕಲಿತ. ಹಡಗಿನಲ್ಲಿ ತೇಲುವದನ್ನೂ, ಜಲಾಂತರ್ಗಾಮಿಗಳ ಮೂಲಕ ನೀರಲ್ಲಿ ಈಜುವದನ್ನೂ ಕಲಿತ. ಆಕಾಶದಲ್ಲಿ ಬಹುದೂರ ಎತ್ತರಕ್ಕೆ ರಾಕೆಟ್‌ಗಳಲ್ಲಿ ಜಿಗಿದು ಬಾಹ್ಯಾಕಾಶದಲ್ಲಿ ನಿಂತು, ಭೂಮಿಯನ್ನೂ, ಇತರ ಗ್ರಹಮಂಡಲಗಳನ್ನೂ ನೋಡಬಲ್ಲವನಾಗಿದ್ದಾನೆ. ಭೂಮಿಯ ಮೇಲೂ ವೇಗವಾಗಿ ಚಲಿಸಲು ರೈಲು, ಮೋಟಾರು ಮೊದಲಾದ ವಾಹನಗಳನ್ನು ಬಳಸುತ್ತಿದ್ದಾನೆ, ಎತ್ತರವಾದ ಪರ್ವತಾಗ್ರಗಳನ್ನು ಮೆಟ್ಟಿನಿಂತಿದ್ದಾನೆ. ಕುಳಿತ ಸ್ಥಳದಿಂದಲೇ ದೂರ ಸಂಪರ್ಕಸಾಧನೆ, ದೂರವಾಣಿ ದೂರದರ್ಶನಗಳನ್ನು ಉಪಯೋಗಿಸಿಕೊಳ್ಳುತ್ತಿದ್ದಾನೆ; ಅವುಗಳಿಂದ ಹೆಚ್ಚಿನ ಅನುಕೂಲತೆಗಳನ್ನು ದೊರಕಿಸಿಕೊಂಡಿದ್ದಾನೆ, ಕಂಪ್ಯೂಟರಗಳ ಬಳಕೆಯಿಂದ ತನ್ನೆಲ್ಲ ಕೆಲಸಗಳನ್ನು ಹಲವಾರು ರೀತಿಯಲ್ಲಿ ಹಗುರು ಮಾಡಿಕೊಂಡಿದ್ದಾನೆ.

ಮಾನವನು ಬಾಹ್ಯಾಕಾಶದಲ್ಲಿಯೂ ಅದ್ಭುತ ಸಾಧನೆ ಮಾಡಿದ್ದಾನೆ, ಇನ್ನೂ ಸಾಧಿಸುತ್ತಲೇ ಇದ್ದಾನೆ. ಚಂದ್ರಮಂಡಲದ ಮೇಲೆ ಇಳಿದು ಬಂದಿದ್ದಾನೆ, ಮಂಗಳ, ಗುರು, ಶುಕ್ರ ಗ್ರಹಗಳ ಕಡೆಗೂ ಈಗ ತನ್ನ ಗಮನವನ್ನು ಹರಿಸಿದ್ದಾನೆ, ಅಂತರಿಕ್ಷ ವಸಾಹತು ಸ್ಥಾಪನೆಗಾಗಿ ಪ್ರಯತ್ನಿಸುತ್ತಿದ್ದಾನೆ, ಇದೂ ಸಹ ಸ್ವಲ್ಪ ಕಾಲದಲ್ಲಿಯೇ ಸಾಧ್ಯವಾಗುವ ನಿರೀಕ್ಷೆಯಿದೆ. ಇದುವರೆಗಿನ ಸಂಶೋಧನೆಗಳಲ್ಲಿ ಅನೇಕ ವಿಜ್ಞಾನಿಗಳು ಶ್ರಮಿಸಿದ್ದಾರೆ, ಅವರೆಲ್ಲರ ಕೊಡುಗೆ ಅತ್ಯದ್ಭುತವಾದುದು. ಹೀಗೆ ಪ್ರಪಂಚವು ಒಡ್ಡಿದ ಅದೆಷ್ಟೋ ಆಹ್ವಾನಗಳನ್ನು ಎದುರಿಸಿ ಅವುಗಳಲ್ಲಿ ಮಾನವನು ಜಯಪಡೆದಿದ್ದಾನೆ. ಅದು ಇನ್ನೂ ಮುಂದುವರಿಯುತ್ತಲೇ ಇದೆ, ತಡೆಯೆಂಬುದು ಇಲ್ಲ.

ಪ್ರಶ್ನೆ 2- ಈ ಪ್ರಶ್ನೆಗಳಿಗೆ ಏಳೆಂಟು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

1) "ಯೇತಿ"ಯ ಬಗ್ಗೆ ತೇನಸಿಂಗನ ಅಭಿಪ್ರಾಯ.

ಉತ್ತರ : "ಯೇತಿ" ಒಂದು ಬಗೆಯ ಪ್ರಾಣಿಯೇ ಹೊರತು ಅದು ಮನುಷ್ಯನಲ್ಲವೆಂದು ತೇನಸಿಂಗ್‌ನ ಅಭಿಪ್ರಾಯ. ಅದು ರಾತ್ರಿ ಸಂಚಾರಿಯಾಗಿದ್ದು ಪರ್ವತದ ಉನ್ನತ ಪ್ರದೇಶಗಳಲ್ಲಿನ ಗಿಡ ಗಂಟೆಗಳನ್ನು ತಿಂದು, ಸಣ್ಣ ಪುಟ್ಟ ಪ್ರಾಣಿಗಳನ್ನು ಕೊಂದು ಜೀವಿಸುತ್ತದೆ ಎಂಬುದು ಅವನ ನಂಬಿಕೆ ಅದು ಆಶ್ಚರ್ಯಕರವಾದ ಅದ್ಭುತ ಪ್ರಾಣಿ ಏನೂ ಅಲ್ಲ ಎನ್ನುವದು ಅವನ ಖಚಿತ ಅಭಿಪ್ರಾಯ. ಅದರ ಬಗ್ಗೆ ಇರುವ ಅನೇಕ ದಂತ ಕಥೆಗಳನ್ನೂ ಆತ ನಂಬುವದಿಲ್ಲ.

2. ಪೌರಿಯ ಮನೆಯಲ್ಲಿ ತೇನಸಿಂಗ್ ಕಳೆದ ದಿನಗಳು.

ಉತ್ತರ : ತೇನಸಿಂಗ್ ಪೌರಿಯ ಮನೆಯಲ್ಲಿ ಇದ್ದಾಗ ಆತನ ಮುಖ್ಯ ಕೆಲಸವೆಂದರೆ ಪೌರಿಯ ದನಗಳ ಸೇವೆ ಮಾಡುವದು. ಪೌರಿ ಹದಿನೈದು ಹಸುಗಳನ್ನು ಸಾಕಿದ್ದಳು. ಅವುಗಳನ್ನು ಸಾಕುವದು. ಮನೆಗೆಲಸ ಮಾಡುವದು, ದನಗಳ ಹಾಲನ್ನು ದಾರ್ಜಿಲಿಂಗಿಗೆ ತೆಗೆದುಕೊಂಡು ಹೋಗಿ ಮಾರುವದು ನಿತ್ಯದ ಕೆಲಸಗಳಾಗಿದ್ದವು. ತೇನಸಿಂಗನಿಗೆ ಪರ್ವತಾರೋಹಣ ತಂಡದವರ ಜೊತೆಯಲ್ಲಿ ಹೋಗಬೇಕೆಂಬ ಆಸೆಯಿತ್ತು. ಆ ಅವಕಾಶ ಸಿಕ್ಕುವವರೆಗೆ ದಿನಗಳನ್ನು ನಿರೀಕ್ಷಿಸುತ್ತ ಪೌರಿಯ ಮನೆಯಲ್ಲಿದ್ದ.

3) ಅರವಿಂದರು ಐ. ಸಿ. ಎಸ್. ಆಕರ್ಷಣೆಯಿಂದ ತಪ್ಪಿಸಿಕೊಂಡದ್ದು

ಉತ್ತರ : (1984 ನೇ ಎಪ್ರೀಲ ದ್ವಿತೀಯ ಪತ್ರಿಕೆ 2 ನೇ ಪ್ರಶ್ನೆ 4 ರ ಉತ್ತರ ನೋಡಿರಿ.)

4) ಭೌತಶಾಸ್ತ್ರದಲ್ಲಿ ಬೋಸರು ನಡೆಸಿದ ಒಂದು ಸಂಶೋಧನೆ.

ಉತ್ತರ : ಭೌತಶಾಸ್ತ್ರದಲ್ಲಿ ಜಗದೀಶಚಂದ್ರರ ಮೊಟ್ಟಮೊದಲ ಸಂಶೋಧನೆ "ವಿದ್ಯುಚ್ಛಕ್ತಿಯಿಂದಾಗುವ ಪ್ರಸರಣಗಳು." ವಿದ್ಯುತ್ತು ತಂತಿಯ ಸಹಾಯವಿಲ್ಲದೆ ಒಂದೆಡೆಯಿಂದ ಇನ್ನೊಂದೆಡೆಗೆ ಹಾಯಬಲ್ಲುದು ಎಂಬುದನ್ನು ಪ್ರಯೋಗ ಮೂಲಕ ತೋರಿಸಿಕೊಟ್ಟರು. ತಾವೇ ಸ್ವತಃ ನಿರ್ಮಿಸಿದ್ದ

ಒಂದು ಯಂತ್ರದ ಮೂಲಕ ಕಲ್ಕತ್ತಾ ನಗರದ ಬಹಿರಂಗ ಸಭೆಯೊಂದರಲ್ಲಿ ಇದನ್ನು ವಿವರಿಸಿದರು. 80 ಅಡಿಗಳಷ್ಟು ದೂರದಲ್ಲಿ ಒಂದು ಗಂಟೆಯನ್ನಿಟ್ಟು ಒಂದು ಕಡೆಯಲ್ಲಿ ಹೊರಟ ವಿದ್ಯುಚ್ಛಕ್ತಿಯಿಂದ, ತಂತಿ ಇಲ್ಲದೆಯೇ ಆ ಗಂಟೆ ಬಾರಿಸುವದನ್ನು ತೋರಿಸಿದರು. ಅದು ಎಲ್ಲರನ್ನೂ ಅಚ್ಚರಿಗೊಳಿಸಿತು.

5) ಅದು ಅರವಿಂದರನ್ನು ಹಿಂದೂ ಧರ್ಮಕ್ಕೆ ಉಳಿಸಿಕೊಟ್ಟಿತು. ಈ ಮಾತನ್ನು ಸಂದರ್ಭ ಸಹಿತ ವಿವರಿಸಿರಿ.

**ಉತ್ತರ :** ಅರವಿಂದರನ್ನು ಡ್ರೂವೆಟ್ ದಂಪತಿಗಳ ಮನೆಯಲ್ಲಿ ಬಿಡಲಾಗಿತ್ತು. ಡ್ರೂವೆಟ್‌ರ ಪತ್ನಿ ಅವನನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸಲು ಸಲಹೆ ಮಾಡಿದಳು. ಆದರೆ ಅವಳ ಪತಿ ಅದಕ್ಕೊಪ್ಪಲಿಲ್ಲ. ದೊಡ್ಡವರಾದ ಮೇಲೆ ಯಾವ ಧರ್ಮಕ್ಕೆ ಬೇಕಾದರೂ ತನ್ನ ಮಕ್ಕಳು ಸೇರಿಕೊಳ್ಳಬಹುದು ಎಂದು ಅರವಿಂದರ ತಂದೆ ಹೇಳಿದ್ದುದರಿಂದ, ಅವರ ಈ ಅಭಿಪ್ರಾಯಕ್ಕೆ ವಿರುದ್ಧವಾಗಿ ವರ್ತಿಸಲು ಡ್ರೂವೆಟ್‌ರಿಗೆ ಇಷ್ಟವಾಗಲಿಲ್ಲ. ಹೀಗೆ ಅವರು ಅರವಿಂದರನ್ನು ಹಿಂದೂ ಧರ್ಮಕ್ಕೆ ಉಳಿಸಿಕೊಟ್ಟರು.

**ಪ್ರಶ್ನೆ 3.** ಈ ಕೆಳಗಿನ ವಿಷಯಗಳಲ್ಲಿ ಯಾವುದಾದರೂ ಒಂದನ್ನು ಕುರಿತು ಪ್ರಬಂಧ ಬರೆಯಿರಿ.

(ಉತ್ತರ ಎರಡು ಪುಟಕ್ಕೆ ಮೀರದಿರಲಿ)

1) ನಿಮ್ಮ ಶಾಲಾ ಪ್ರವಾಸ.

**ಉತ್ತರ :** (1984 ಎಪ್ರೀಲ ದ್ವಿತೀಯ ಪತ್ರಿಕೆ 3 ನೇ ಪ್ರಶ್ನೆ 3 ರ ಉತ್ತರ ನೋಡಿರಿ.)

2) ಶಾಲಾ ವಿದ್ಯಾರ್ಥಿ ಸಂಘದ ಚುನಾವಣೆ :

**ಉತ್ತರ :** (ಮುಖ್ಯಾಂಶಗಳು :– ಶಾಲಾ ವಿದ್ಯಾರ್ಥಿ ಸಂಘ ಸ್ಥಾಪನೆಯ ಉದ್ದೇಶಗಳು— ವಿವಿಧ ಕಾರ್ಯ ವಿಭಾಗಗಳು–ಸಂಘದ ರಚನೆ–ಕಾರ್ಯಚಟುವಟಿಕೆಗಳ ವ್ಯವಸ್ಥೆ-ಸಾಂಸ್ಕೃತಿಕ, ಕ್ರೀಡಾ, ಪ್ರವಾಸ ಸಂಬಂಧದ ಚಟುವಟಿಕೆಗಳು— ವಿದ್ಯಾರ್ಥಿಗಳಲ್ಲಿ ಶಿಸ್ತು, ಸಂಘಟನೆ, ಸಹಕಾರ, ನಾಯಕತ್ವ ಹಾಗೂ ಹೊಣೆಗಾರಿಕೆಯ ಅರಿವು ಬೆಳೆದು ಬರುವದು.ವಿದ್ಯಾರ್ಥಿಗಳ ಜ್ಞಾನಾರ್ಜನೆಗೂ ಸಹಾಯಕವಾಗುವದು. ಶಾಲೆಗೆ ಕೀರ್ತಿ ಹಾಗೂ ಅಭಿಮಾನ.)

3) ವನ್ಯಮೃಗ ರಕ್ಷಣೆ :

**ಉತ್ತರ :** (ಮುಖ್ಯಾಂಶಗಳು :— ಕಾಡಿನಲ್ಲಿ ವಾಸಿಸುವ ಪ್ರಾಣಿಗಳು, ಕೆಲವೊಂದು ವನ್ಯಜೀವಿಗಳನ್ನು ಹೆಸರಿಸುವದು– ವನ್ಯ ಮೃಗಗಳಿಂದ ಜನರಿಗೆ ಉಪಯೋಗ- ಈ ಜೀವಿಗಳನ್ನು ರಕ್ಷಿಸಿಕೊಳ್ಳಬೇಕಾದ ಅವಶ್ಯಕತೆ- ಅದಕ್ಕಾಗಿ ಜನತೆ ಹಾಗೂ ಸರಕಾರದ ಕರ್ತವ್ಯಗಳು–ವನ್ಯಜೀವಿ ರಕ್ಷಣಾ ಕೇಂದ್ರಗಳು ಎಲ್ಲೆಲ್ಲಿ ಇವೆ. ಮಕ್ಕಳಿಗೆ ವಿಶೇಷ ಆಕರ್ಷಣೆ-ವನ್ಯಜೀವಿಗಳ ಬಗೆಗಿನ ಅಭ್ಯಾಸಕ್ಕೆ ಸಹಾಯ.)

4) ನಿಮ್ಮ ಮೆಚ್ಚಿನ ವಿಜ್ಞಾನಿ

**ಉತ್ತರ :** ನನ್ನ ಮೆಚ್ಚಿನ ವಿಜ್ಞಾನಿ–ಡಾ. ಸಿ.ವ್ಹಿ. ರಾಮನ್

ಜಗತ್ತಿನ ಅತ್ಯಂತ ಶ್ರೇಷ್ಠ, ಹಿರಿದಾದ "ನೋಬೆಲ್ ಪಾರಿತೋಷಕ"ವನ್ನು ಪಡೆದಿರುವ ಕೆಲವೇ ಭಾರತೀಯರಲ್ಲಿ ದಿ. ಡಾ. ಸಿ. ವ್ಹಿ. ರಾಮನ್ ಒಬ್ಬರು. ಡಾ. ಚಂದ್ರಶೇಖರ ವೆಂಕಟರಾಮ ನ್‌ರವರು 1888 ನೇ ಇಸ್ವಿಯಲ್ಲಿ ತಿರುಚನಾಪಳ್ಳಿಯಲ್ಲಿ ಜನ್ಮ ತಳೆದರು. ತಂದೆ ವಿಜ್ಞಾನ ಶಿಕ್ಷಕರು ಮತ್ತು ಗಣಿತ ಶಾಸ್ತ್ರ ಪ್ರೇಮಿಗಳು. ರಾಮನ್‌ರವರು ಬಾಲ್ಯದಿಂದಲೂ ಪ್ರತಿಭಾವಂತರು. ಕೇವಲ ಹದಿನಾರನೇ ವಯಸ್ಸಿನಲ್ಲಿ ಬಿ. ಎಸ್ಸಿ ಪರೀಕ್ಷೆಯಲ್ಲಿ ಪ್ರಥಮಸ್ಥಾನ ಪಡೆದರು. ಅನಂತರ ಎಂ. ಎಸ್ಸಿ. ಪದವಿಯಲ್ಲೂ ಪ್ರಥಮಸ್ಥಾನ ಗಳಿಸಿದರು. ತಮ್ಮ ಹದಿನೆಂಟನೇ ವಯಸ್ಸಿನಲ್ಲಿ ತಮ್ಮ ಮೊದಲ ವೈಜ್ಞಾನಿಕ ಸಂಶೋಧನೆಯನ್ನೂ ಪ್ರಕಟಿಸಿದರು.

ರಾಮನ್ನರು ಮೊದಲು ಕೆಲಸಕ್ಕೆ ಸೇರಿದುದು ಭಾರತ ಸರಕಾರದ ಹಣಕಾಸಿನ ಇಲಾಖೆಯಲ್ಲಿ, ವಿಜ್ಞಾನವೇ ಸರ್ವಸ್ವವಾಗಿದ್ದ ಅವರಿಗೆ ಈ ಕೆಲಸದಲ್ಲಿ ಬಹಳ ಕಾಲ ಉಳಿಯಲಾಗಲಿಲ್ಲ. ಕಲಕತ್ತಾ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇರಿಕೊಂಡರು. ಅವರಿಗೆ ಆಗ ಮೂವತ್ತು ವರ್ಷ ವಯಸ್ಸು. ಇಲ್ಲಿ ಅವರು ಹಲವಾರು ವರ್ಷಗಳ ಕಾಲ ತಮ್ಮ ಸಂಶೋಧನೆಗಳನ್ನು ಮುಂದುವರಿಸಿದರು.

1930ರಲ್ಲಿ ಬೆಳಕಿನ ವಿಷಯ ಸಂಬಂಧಿಸಿ ಅವರು ಮಾಡಿದ ಸಂಶೋಧನೆಗೆ "ರಾಮನ್ ಬೆಳಕಿನ ಪರಿಣಾಮ"ಕ್ಕೆ ನೋಬೆಲ್ ಪಾರಿತೋಷಕ ದೊರೆಯಿತು. ಇವರು 1933 ರಲ್ಲಿ ಬೆಂಗಳೂರಿನ ಟಾಟಾ ವಿಜ್ಞಾನ ಮಂದಿರವನ್ನು ಸೇರಿ ಆ ಸಂಸ್ಥೆ ಪ್ರಸಿದ್ಧವಾಗಲು ಕಾರಣರಾದರು. ಅದೇ ಮೇರೆಗೆ ತಮ್ಮದೇ ಆದ ರಾಮನ್ ಇನ್‌ಸ್ಟಿಟ್ಯೂಟನ್ನು ಬೆಂಗಳೂರಲ್ಲಿ ಸ್ಥಾಪಿಸಿದರು. ಅಲ್ಲಿ ತಮ್ಮ ಮರಣದವರೆಗೂ ಅನೇಕ ಸಂಶೋಧನೆಗಳನ್ನು ಮಾಡಿ ವೈಜ್ಞಾನಿಕ ಜಗತ್ತಿಗೆ ವಿಶೇಷ ಕೊಡುಗೆಯನ್ನಿತ್ತಿದ್ದಾರೆ. ಇತ್ತೀಚೆಗೆ ಲೆನಿನ್ ಪಾರಿತೋಷಕವೂ ಅವರಿಗೆ ದೊರೆತಿದ್ದಿತು.

ಭಾರತೀಯ ವಿಜ್ಞಾನಕ್ಕೆ ರಾಮನ್‌ರವರು ಮಾಡಿದ ಸೇವೆ ಗಣನೀಯವಾದುದು. ಉತ್ತಮ ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸಲು ವಿಶೇಷ ನೆರವನ್ನಿತ್ತು ದೇಶವು ವೈಜ್ಞಾನಿಕವಾಗಿ ಮುಂದುವರಿಯಲು ಕಾರಣರಾದರು. ಇತರ ರಾಷ್ಟ್ರಗಳಿಗೆ ಸರಿಸಮಾನವಾಗಿ ಭಾರತವೂ ನಿಲ್ಲಬಲ್ಲದು ಎಂದು ತೋರಿಸಿಕೊಟ್ಟರು. ಇವರ ಮಾರ್ಗದರ್ಶನದಲ್ಲಿ ಕೆಲಸ ಮಾಡಿದ ಅನೇಕ ವಿದ್ಯಾರ್ಥಿಗಳು ಇಂದು ಶ್ರೇಷ್ಠ ವಿಜ್ಞಾನಿಗಳಾಗಿದ್ದಾರೆ.

ವಿಜ್ಞಾನ ಮಾನವನ ಸುಖ ಸೌಲಭ್ಯಗಳನ್ನು ಹೆಚ್ಚಿಸಲಿ ಎಂಬುದು ರಾಮನ್‌ರವರ ಬಯಕೆಯಾಗಿತ್ತು. ಇಂಥ ಜಗದ್ವಿಖ್ಯಾತ ಶ್ರೇಷ್ಠ ವಿಜ್ಞಾನಿ ದೇಶಕ್ಕೆ ಗೌರವವನ್ನು ತಂದುಕೊಟ್ಟು, ಅಮರರಾಗಿದ್ದಾರೆ. ಇವರು ನನ್ನ ಮೆಚ್ಚಿನ ವಿಜ್ಞಾನಿ ಎಂದು ಹೇಳಲು ನನಗೆ ಬಹು ಹೆಮ್ಮೆ.

**ಪ್ರಶ್ನೆ 4. ನಿಮ್ಮ ಹಳ್ಳಿಯಲ್ಲಿ ಸಾರ್ವಜನಿಕ ಉಪಯೋಗಕ್ಕಾಗಿ ದೂರದರ್ಶನವೊಂದನ್ನು ಒದಗಿಸುವಂತೆ ಗ್ರಾಮಪಂಚಾಯತಿಯ ಮುಖ್ಯಸ್ಥರಿಗೆ ಒಂದು ಪತ್ರ ಬರೆಯಿರಿ.**

**ಉತ್ತರ :** ಊರು............

ದಿನಾಂಕ : ............

ಮಾನ್ಯ ಚೇರಮನ್‌ರವರು,
............ಗ್ರಾಮ ಪಂಚಾಯಿತಿ
............(ಊರು).

ಮಾನ್ಯರೇ,

ವಿಷಯ :– ನಮ್ಮ ಗ್ರಾಮದ ಸಾರ್ವಜನಿಕರ ಉಪಯೋಗಕ್ಕಾಗಿ ದೂರದರ್ಶನ ವ್ಯವಸ್ಥೆ ಮಾಡಿಕೊಡುವದು.

ಇತ್ತೀಚಿನ ದಿನಗಳಲ್ಲಿ ದೂರದರ್ಶನವು ಬಹು ಮುಖ್ಯವಾದ ಸಮಾಚಾರ ಮಾಧ್ಯಮವಾಗಿದೆ ಎಂಬುದನ್ನು ಹೇಳಬೇಕಾದದಿಲ್ಲ. ಪ್ರಪಂಚದ ಸರ್ವ ವಿದ್ಯಮಾನಗಳನ್ನು ನೋಡಿ, ಕೇಳಿ ತಿಳಿದುಕೊಳ್ಳುವದರ ಜೊತೆಗೆ ಆನಂದ, ಉಲ್ಲಾಸಗಳನ್ನು ಪಡೆಯಬಹುದಾಗಿದೆ ಇಂಥ ಬಹು ಉಪಯುಕ್ತ ಹಾಗೂ ಮನೋರಂಜಕ ಮಾಧ್ಯಮ ಗ್ರಾಮದ ಬಡಜನತೆಗೆ ಅತ್ಯಂತ ಅವಶ್ಯಕ. ದಿನವಿಡೀ ದುಡಿದು ಬೇಸತ್ತು ಬಂದ ಗ್ರಾಮೀಣರಿಗೆ ಮನೋರಂಜನೆ ಮನೋಲ್ಲಾಸ ನೀಡುವದಲ್ಲದೆ ಹೊಸ ಹೊಸ ಸಂಗತಿಗಳ ಬಗೆಗೆ ಜ್ಞಾನ ಪಡೆಯಲು ಹಾಗೂ ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳಲು ಹೆಚ್ಚು ಸಹಾಯಕವಾಗಿದೆ. ಕಾರಣ ನಮ್ಮ ಗ್ರಾಮಪಂಚಾಯಿತಿ ವತಿಯಿಂದ ಗ್ರಾಮದ ಸಾರ್ವಜನಿಕರ ಉಪಯೋಗಕ್ಕಾಗಿ ಒಂದು ದೂರದರ್ಶನದ ವ್ಯವಸ್ಥೆ ಮಾಡಿಕೊಡಬೇಕೆಂದು ಸಮಸ್ತ ಜನತೆಯ ಪರವಾಗಿ ವಿಜ್ಞಾಪಿಸಿಕೊಳ್ಳುತ್ತೇನೆ. ಈ ಬೇಡಿಕೆಯನ್ನು ಮಾನ್ಯ ಮಾಡಿ ಈಡೇರಿಸಿಕೊಡುವಿರಾಗಿ ನಂಬಿರುವೆ.

ಇತಿ ಧನ್ಯವಾದಗಳೊಂದಿಗೆ—

ತಮ್ಮ ವಿಶ್ವಾಸಿ.

............

(ಹೆಸರು ಹಾಗೂ ವಿಳಾಸ)

**ಅಥವಾ**

**ನಿಮ್ಮ ಊರಿನಲ್ಲಿ ಜ್ಯೂನಿಯರ್ ಕಾಲೇಜ ಆರಂಭಿಸಬೇಕು ಪಿ. ಯು. ಇ. ಬೋರ್ಡಿನವರಿಗೆ ಒಂದು ಅರ್ಜಿ ಬರೆಯಿರಿ.**

**ಉತ್ತರ :** ಊರು........

ದಿನಾಂಕ........

ಮಾನ್ಯ ಪಿ. ಯು. ಇ. ಬೋರ್ಡಿನ ಡೈರೆಕ್ಟರರವರು,
ಬೆಂಗಳೂರು—

ಮಾನ್ಯರೇ,

ವಿಷಯ :– ನಮ್ಮ ಊರಿನಲ್ಲಿ ಒಂದು ಜ್ಯೂನಿಯರ್ ಕಾಲೇಜನ್ನು ಪ್ರಾರಂಭಿಸಲು......

ನಮ್ಮ ಊರಿನಲ್ಲಿ ಈಗಾಗಲೇ ಎರಡು ಪ್ರೌಢಶಾಲೆಗಳು ಇದ್ದು ಪ್ರತಿವರ್ಷ ನೂರಾರು ವಿದ್ಯಾರ್ಥಿ–ವಿದ್ಯಾರ್ಥಿನಿಯರು ಎಸ್. ಎಸ್. ಎಲ್. ಸಿ ಪರೀಕ್ಷೆಗೆ ಹಾಜರ ಆಗುತ್ತಿದ್ದಾರೆ. ಬಹುಸಂಖ್ಯೆಯಲ್ಲಿ ಪಾಸಾಗುವರು. ಮುಂದೆ ಹೆಚ್ಚಿನ ಓದುಕಲಿಯಲು ಇಲ್ಲಿ ಯಾವುದೇ ವ್ಯವಸ್ಥೆ ಇಲ್ಲದ್ದರಿಂದ ಹಾಗೆ ಕಲಿಯಬೇಕೆನ್ನುವವರು ಬೇರೆ ಊರುಗಳಿಗೆ ಹೋಗುತ್ತಿದ್ದಾರೆ. ಅಲ್ಲಿ ಅವರ ಊಟ-ವಸತಿ, ಮುಂತಾದವುಗಳ ಬಗ್ಗೆ ಪಾಲಕರು ಹೆಚ್ಚಿನ ತೊಂದರೆಪಡಬೇಕಾಗಿದೆ. ಇನ್ನು ಆರ್ಥಿಕ ಸ್ಥಿತಿ ಸರಿಯಾಗಿಲ್ಲದ ಅನೇಕ ಪಾಲಕರ ಮಕ್ಕಳು ತಮ್ಮ ಶಿಕ್ಷಣವನ್ನು ಅಲ್ಲಿಗೇ ನಿಲ್ಲಿಸಬೇಕಾದ ಪ್ರಸಂಗವೂ ಉಂಟು. ಇದರಿಂದ ಎಷ್ಟೋ ಜನ ಪ್ರತಿಭಾವಂತ ವಿದ್ಯಾರ್ಥಿಗಳು ಅನುಕೂಲತೆ ಇಲ್ಲದ್ದರಿಂದ ತಮ್ಮ ಜೀವನವನ್ನೇ ಹಾಳುಮಾಡಿಕೊಳ್ಳುವಂತಾಗಿದೆ.

ಕಾರಣ ಕೃಪೆಮಾಡಿ ನಮ್ಮ ಊರಿನಲ್ಲಿ ಒಂದು ಸರಕಾರಿ ಜ್ಯೂನಿಯರ್ ಕಾಲೇಜನ್ನು ಪ್ರಾರಂಭಿಸಲು ತಮ್ಮಲ್ಲಿ ವಿಜ್ಞಾಪಿಸಿಕೊಳ್ಳುತ್ತೇನೆ. ಹಾಗೆ ಮಾಡುವುದರಿಂದ ಅದೆಷ್ಟೋ

ವಿದ್ಯಾರ್ಥಿಗಳಿಗೆ ಹೆಚ್ಚಿನ ಸಹಾಯ ದೊರೆತು ಅವರು ತಮ್ಮ ಮುಂದಿನ ವಿದ್ಯಾಭ್ಯಾಸ ಪೂರೈಸಲು ಸಾಧ್ಯವಾಗುವದು. ಸಾವಿರಾರು ಜನರ ಹಿತದೃಷ್ಟಿಯಿಂದ ಈ ಬೇಡಿಕೆಯುನ್ನು ಮಾನ್ಯ ಮಾಡಿ ಕಾರ್ಯರೂಪಕ್ಕೆ ತರುವಿರಾಗಿ ಪೂರ್ಣ ಭರವಸೆ ಇದೆ. ಈ ಬಗೆಗೆ ತಮಗೆ ಋಣಿಯಾಗಿರುವೆವು.

ಇತಿ, ಧನ್ಯವಾದಗಳೊಂದಿಗೆ—

ತಮ್ಮ ವಿಶ್ವಾಸಿಕ

............

(ಹೆಸರು, ವಿಳಾಸ)

ಪ್ರಶ್ನೆ 5. ಇಲ್ಲಿ ಬಿಟ್ಟಿರುವ ಸ್ಥಳವನ್ನು ಸರಿಯಾದ ಪದಗಳಿಂದ ತುಂಬಿರಿ.

ಉತ್ತರ : 1) ನರಭಕ್ಷಕ ಯೋತಿಗೆ............ಎಂದು ಹೆಸರು. (ವೈತ್ರಿ)

2) ಆಹಾ ಆ ನವಿಲಿನ ಜಾಗರವನ್ನು ನೋಡು......ಇಲ್ಲಿರಬೇಕಾದ ವಾಕ್ಯ ಚಿಹ್ನೆಗಳು (!!)

3) ತಂದೆಗೆ ಪತ್ರ ಬರೆಯುವಾಗಿನ ಆರಂಭದ ಸಂಬೋಧನೆ...(ತೀರ್ಥರೂಪರವರಿಗೆ)

4) ಷರ್ಪಾ ಸ್ತ್ರೀಯರನ್ನು......ಎನ್ನುತ್ತಾರೆ. (ಷರ್ಪಾಣಿ)

5) ಊರಿಗೆ ಬಂದವಳು ನೀರಿಗೆ ಬಾರಳೆ ? ಎಂಬುದೊಂದು... ....(ಗಾದೆ)

ಪ್ರಶ್ನೆ 6. ಈ ಪದ್ಯವನ್ನು ಓದಿಕೊಂಡು, ಕೆಳಗೆ ಕೊಟ್ಟ ಪ್ರಶ್ನೆಗಳಿಗೆ ಉತ್ತರಿಸಿ.

ಕಾಣದ ಕಡಲಿಗೆ ಹಂಬಲಿಸಿದೆ ಮನ
ಕಾಣ ಬಲ್ಲನೇ ಒಂದು ದಿನ ?
ಕಡಲನು ಕೂಡಬಲ್ಲನೇ ? ಒಂದು ದಿನ
ಕಾಣದ ಕಡಲಿನ ಮೊರೆತದ ಜೋಗುಳ—
ಒಳಗಿವಿಗೇಗಳು ಕೇಳುತಿದೆ.
ನನ್ನ ಕಲ್ಪನೆಯು ತನ್ನ ಕಡಲನೇ
ಚಿತ್ರಿಸಿ ಚಿಂತಿಸಿ ಸುಯ್ಯುತಿದೆ
ಎಲ್ಲಿರುವುದೋ ಅದು !
ಎಂತಿರುವುದೋ ಅದು !
ಕಡಲನು ಕೂಡಬಲ್ಲೆನೇ ಒಂದು ದಿನ ॥
ಸಾವಿರ ಹೊಳೆಗಳು ತುಂಬಿ ಹರಿದರೂ
ಒಂದೇ ಸಮನಾಗಿಹುದಂತೆ
ಸುನೀಲ ವಿಸ್ತರ ತರಂಗ ಶೋಭಿತ
ಗಂಭೀರಾಂಬುಧಿ ತಾನಂತೆ !
ಮುನ್ನೀರಂತೆ !
ಅಪಾರವಂತೆ !
ಕಡಲನು ಕಾಣಬಲ್ಲೆನೇ ? ಒಂದು ದಿನ
ಅದರೊಳು ಕರಗಲಾರೆನೇ ಒಂದು ದಿನ ?
ಜಟಿಲ ಕಾನನ ಕುಟಿಲ ಪಥಗಳಲಿ
ಹರಿವ ತೊರೆಯು ನಾನು
ಎಂದಿಗಾದರೂ ಕಾಣದ ಕಡಲಿಗೆ
ಸೇರಬಲ್ಲೆನೇನು ?
ಆ ಪುಣ್ಯವೆಂದಿಗೋ ?
ಆ ಕಾಲವೆಂದಿಗೋ ?
ಕಡಲಿನ ರತ್ನ ಗರ್ಭದಲಿ ಸೇರಬಹುದೇ ನಾನು?
ಕಡಲ ನೀಲಿಯಲಿ ಕರಗಬಹುದೇ ನಾನು ?

1) ತೊರೆಯು ಕಲ್ಪಿಸಿಕೊಂಡ ಕಡಲು ಹೇಗಿದೆ?

ಉತ್ತರ : ಕಡಲಿನ ಮೊರೆತದ ಜೋಗುಳ ಒಳಗಿವಿಗೆ ಕೇಳುತ್ತಿದೆ. ಮನಸ್ಸು ಕಡಲನ್ನೇ ಚಿಂತಿಸುತ್ತಿದೆ. ಸಾವಿರಾರು ಹೊಳೆಗಳು ತುಂಬಿ ಹರಿದರೂ ಆ ಕಡಲು ಒಂದೇ ಸಮನಾಗಿರುವಂತಿದೆ. ಅದರಲ್ಲಿ ನೀಲವರ್ಣದ ತರಂಗಗಳು ಏಳುತ್ತಿರುವದು ಸುಂದರ. ಗಂಭೀರವಾಗಿಹುದು. ಅದನ್ನು "ಮನ್ನೀರ್" ಎಂದು ಕರೆಯುವರಂತೆ; ಅಪಾರವಾಗಿದೆಯಂತೆ, ಇದೆಲ್ಲ ತೊರೆಯು ಕಲ್ಪಿಸಿಕೊಂಡ ಕಡಲಿನ ಚಿತ್ರಣ.

2) ತೊರೆಯು ಏನನ್ನು ಬಯಸುತ್ತದೆ?

ಉತ್ತರ : ಕಡಲನ್ನು ಕಾಣಬೇಕು. ತಾನು ಅದರಲ್ಲಿ ಕೂಡಬೇಕು, ಕರಗಬೇಕು, ಕಡಲಿನ ರತ್ನಗರ್ಭದಲ್ಲಿ ಸೇರಬೇಕು, ಕಡಲ ನೀರಿನಲ್ಲಿ ತಾನೂ ಒಂದಾಗಬೇಕು ಎಂದು ತೊರೆಯು ಬಯಸುತ್ತದೆ.

3) ತೊರೆಯು ತನ್ನ ಪರಿಚಯವನ್ನು ಹೇಗೆ ಮಾಡಿಕೊಂಡಿದೆ?

ಉತ್ತರ : ಜಟಿಲವಾದ ಕಾಡಿನ ದಾರಿಗಳಲ್ಲಿ ಹರಿಯುತ್ತಿರುವ ತೊರೆಯು ತಾನೆಂದು ತನ್ನ ಪರಿಚಯ ಮಾಡಿಕೊಡುತ್ತಿದೆ, ಕಡಲನ್ನು ಕಾಣುವ ಹಂಬಲ, ಆ ಕಾಲ, ಆ ಪುಣ್ಯ ಎಂದು ಬಂದಿತೋ ಎಂದು ಚಿಂತಿಸುತ್ತಿರುವ ತೊರೆ.

4) ಈ ಪದ್ಯದ ತಲೆಬರಹ ಸೂಚಿಸಿ :

ಉತ್ತರ: "ತೊರೆಯ ಹಂಬಲ" ಈ ಪದ್ಯದ ತಲೆ ಬರಹ.

ಪ್ರಶ್ನೆ : 7. ಈ ಮಾತುಗಳಲ್ಲಿ ಒಂದನ್ನು ವಿಸ್ತರಿಸಿ ಬರೆಯಿರಿ.

1) ಶಕ್ತಿಗಿಂತ ಯುಕ್ತಿ ಮೇಲು.

ಉತ್ತರ: ಮನುಷ್ಯನಿಗೆ ಯಾವುದೊಂದು ಕೆಲಸ ಮಾಡಲು ದೇಹಬಲವಿರಬೇಕು, ಶಕ್ತಿ ಇರಬೇಕು, ಶಕ್ತಿಯ ಉಪಯೋಗದಿಂದ ಕಾರ್ಯಸಿದ್ಧಿಯನ್ನು ಪಡೆಯಬಹುದು. ಕೆಲವೊಂದು ಸಂದರ್ಭಗಳಲ್ಲಿ ಮಾನವಶಕ್ತಿ ಉಪಯೋಗ ಬೀಳಲಿಕ್ಕಿಲ್ಲ. ಅಲ್ಲಿ ಯಂತ್ರಗಳ ಉಪಯೋಗ ಮಾಡುವದು ಅನಿವಾರ್ಯವಾಗಬಹುದು. ಅವುಗಳ ಬಳಕೆಗೆ ಯುಕ್ತಿ ಇರಬೇಕು. ಇಂದಿನ ವೈಜ್ಞಾನಿಕ ಯುಗದಲ್ಲಿ ಈ ಮಾತಿನ ಸತ್ಯತೆಯನ್ನು ನಾವು ಕಾಣುತ್ತಿದ್ದೇವೆ. ಮಾನವನು ತನ್ನ ಯುಕ್ತಿ ಹಾಗೂ ಬುದ್ಧಿ ಕುಶಲತೆಯಿಂದ ಮಹಾನ್ ಸಾಧನೆಗಳನ್ನು ಪಡೆದಿದ್ದಾನೆ. ಇದರಿಂದ ಶಕ್ತಿಗಿಂತ ಯುಕ್ತಿಮೇಲು ಎಂದು ಹೇಳಬಹುದು.

ಯುಕ್ತಿ ಅಂದರೆ ಸಾಮಾನ್ಯ ಅರ್ಥದಲ್ಲಿ ಉಪಾಯ ಎಂದಾಗುತ್ತದೆ. ಇದು ಬುದ್ಧಿಶಕ್ತಿಯ ಒಂದು ಹಂತ. ಎಲ್ಲಲ್ಲಿಯೂ ಇರುವದಿಲ್ಲ. ಮನುಷ್ಯನು ತನ್ನ ಶಕ್ತಿಯಿಂದ ಮಾಡಲಾಗದ್ದನ್ನು ಯುಕ್ತಿಯಿಂದ ಸಾಧಿಸಬಹುದು. ಶಕ್ತಿಗಿಂತ ಯುಕ್ತಿ ಮೇಲು ಎಂಬುದನ್ನು ಅನೇಕ ಕಥೆಗಳ ಮೂಲಕ ವಿವರಿಸಿದ್ದನ್ನು ನಾವು ಕೇಳುತ್ತೇವೆ. ಪಂಚತಂತ್ರದ ಕಥೆಗಳಲ್ಲಿ ಇಸೋಪನ ನೀತಿ ಕತೆಗಳಲ್ಲಿ, ಇಂಥ ಅನೇಕ ಕಥೆಗಳನ್ನು ಕಾಣಬಹುದು.

2) ಆಪತ್ತಿಗಾದವನೇ ನೆಂಟ; ದಂಡಿಗಾದವನೇ ಬಂಟ.

ಉತ್ತರ: ಮಾನವ ಜೀವನದಲ್ಲಿ ಪ್ರತಿಯೊಬ್ಬನಿಗೂ ಸುಖ–ದುಃಖಗಳು ಬರುವದು ಸಹಜವೇ. ಆದರಂತೆ ಮಾನವ ಸಂಘ ಜೀವಿಯಾದುದರಿಂದ ಇತರರ ಸಹಾಯ, ಸಹಕಾರಗಳನ್ನು ಪ್ರೀತಿ–ವಿಶ್ವಾಸಗಳನ್ನು ಗಳಿಸಿಕೊಳ್ಳಬೇಕಾಗುವದು.

ಆದರೆ ಬಹುತೇಕವಾಗಿ ಹಣವಿದ್ದಾಗ ಎಲ್ಲರೂ ಹತ್ತಿರ ಹಾಯುವರು: ಅದೇ ಕೈಯಲ್ಲಿ ಹಣವಿಲ್ಲದಾಗ ಹತ್ತಿರ ಸುಳಿಯಲಾರರು. ಬಂಧುಗಳಾದವರು ಕೂಡ ಈ ಮಾತಿಗೆ ಹೊರತಾಗಿಲ್ಲ. ಸುಖವಿದ್ದಾಗ ಸುಳಿದು ದುಃಖ ಬಂದಾಗ ದೂರ ಹಾಯುವದರಿಂದ ಪ್ರಯೋಜನವಿಲ್ಲ. ಯಾವಾತನು ನಿಜವಾಗಿಯೂ ದುಃಖದಲ್ಲಿ ಸಹಭಾಗಿಯಾಗಿ ಸಹಕರಿಸಿ ಸಹಾಯ ನೀಡುವನೋ ಅವನೇ ನಿಜವಾದ ನೆಂಟ. ಆದ್ದರಿಂದ ಆಪತ್ತಿಗಾದವನೇ ನೆಂಟ ಎಂಬ ಮಾತು ಯೋಗ್ಯವಾದುದು.

ಅದರಂತೆ ಯುದ್ಧ ಪ್ರಸಂಗ ಬಂದಾಗ. ಯೋಧವೆನಿಸುವವನು ಧೈರ್ಯದಿಂದ ಮುನ್ನುಗ್ಗಿ ತನ್ನ ಸಾಹಸವನ್ನು ಮೆರೆದರೆ ಮಾತ್ರ ಯೋಧನ ಕರ್ತವ್ಯ ಮಾಡಿದಂತಾಗುತ್ತದೆ, ಅದಿಲ್ಲದೆ ಯುದ್ಧಕ್ಕೆ ಹೆದರುವವನು ಅದೆಂಥ ಯೋಧನು? ದಂಡಿನಲ್ಲಿದ್ದು ನಿಜ ಕರ್ತವ್ಯವನ್ನು ಮಾಡಿದಾಗಲೇ ಅವನು ಬಂಟನೆನಿಸುವನು. ಅದಕ್ಕಾಗಿಯೇ ದಂಡಿಗಾದವನೇ ಬಂಟ ಎಂಬ ಮಾತು ಸತ್ಯವಾದುದು.

3) ಕಷ್ಟಪಟ್ಟರೆ ಫಲವುಂಟು.

ಉತ್ತರ: ನಾವು ದಿನನಿತ್ಯದ ವ್ಯವಹಾರಗಳಲ್ಲಿ ನಮ್ಮ ಜೀವನ ನಿರ್ವಹಣೆಗಾಗಿ ಒಂದಿಲ್ಲೊಂದು ಕೆಲಸ ಮಾಡಲೇಬೇಕಾಗುತ್ತದೆ, ಕೆಲಸ ಮಾಡದೆ ನಾವು ಹಣವನ್ನು ಗಳಿಸುವದಾಗಲಿ, ಅದರಿಂದ ಉಪಜೀವಿಸುವದಾಗಲಿ ಸಾಧ್ಯವಾಗಲಿಕ್ಕಿಲ್ಲ. ಹೀಗೆ ನಾವು ಮಾಡುವ ಕೆಲಸ ನಿಷ್ಠೆಯಿಂದ ಕೂಡಿರಬೇಕು, ಪ್ರಾಮಾಣಿಕವಾಗಿರಬೇಕು. ಮೋಸ–ವಂಚನೆ ತರವಲ್ಲ. ನಾವು ಕಷ್ಟಪಟ್ಟು ದುಡಿದರೆ ಮಾತ್ರ ನಿಶ್ಚಿತವಾಗಿಯೂ ಫಲ ದೊರೆಯುವದು. "ಕೈಕೆಸರಾದರೆ ಬಾಯಿ ಮೊಸರು", "ದುಡಿತವೇ ದುಡ್ಡಿನ ತಾಯಿ". "ಕಾಯಕವೇ ಕೈಲಾಸ" ಈ ಮುಂತಾಗಿ ಹೇಳುವ ಮಾತಿನ ಅರ್ಥವಾದರೂ ನಾವು ಶ್ರಮವಹಿಸಿ ದುಡಿದಾಗ ಮಾತ್ರ ತಕ್ಕ ಫಲವನ್ನು ಪಡೆಯುತ್ತೇವೆ ಎಂಬುದಾಗಿದೆ. "ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು" ಎಂಬಂತೆ ದುಡಿಯದೆ ಹತ್ತಿರವಿದ್ದುದನ್ನು ಉಪಭೋಗ ಮಾಡುತ್ತಿದ್ದರೆ ಅದೆಷ್ಟು ದಿನ ನಮಗೆ ಸಾಲುವದು? ಅದೆಲ್ಲ ತೀರಿದ ಬಳಿಕ ಕೆಲಸ ಮಾಡಲೇಬೇಕು, ಬೆವರು ಸುರಿಸಿ ದುಡಿಯಬೇಕು. ಇದು ಅನಿವಾರ್ಯ.

"ನಹಿ ಸುಪ್ತಸ್ಯ ಸಿಂಹಸ್ಯ ಮುಖೇ ಪ್ರವಿಶಂತಿ ಮೃಗಾಃ" ಮಲಗಿದ ಸಿಂಹದ ಬಾಯಲ್ಲಿ ಮೃಗಗಳು ತಾವಾಗಿ ಹೋಗಿ ಬೀಳುವದಿಲ್ಲ. ಸಿಂಹವು ತಿರುಗಾಡಿ ತನ್ನ ಬೇಟೆಗಾಗಿ ಅಲೆದು ಅದನ್ನು ಕೊಂದು ತಿಂದು ತನ್ನ ಹಸಿವನ್ನು ತೀರಿಸಿಕೊಳ್ಳಬೇಕಾಗುವದು. ಹೀಗೆ ನಾವುಗಳು ಕಷ್ಟಪಟ್ಟು ದುಡಿದಾಗಲೇ ಯಶಸ್ಸನ್ನು ಪಡೆಯಬಹುದು. ಅದಕ್ಕಾಗಿಯೇ ಕಷ್ಟಪಟ್ಟರೆ ಸುಖವುಂಟು

—❁—

# ಕನ್ನಡ

**ಎಪ್ರೀಲ್–೧೯೮೭ ಪ್ರಥಮ ಪತ್ರಿಕೆ**

ಅವಧಿ: 2 ॥ ಗಂಟೆ ಅಂಕಗಳು: 100

ಪ್ರಶ್ನೆ 1. ಒಂದೊಂದು ಪುಟಕ್ಕೆ ಮೀರದಂತೆ ಮೂರು ಪ್ರಶ್ನೆಗಳಿಗೆ ಉತ್ತರಿಸಿರಿ.

1. ವಿದ್ಯಾರ್ಥಿಗಳಿಗೆ ಆದರ್ಶವಾಗಬಲ್ಲಂತಹ ಬಾಲಕರನ್ನನಲ್ಲಿದ್ದ ಸದ್ಗುಣಗಳು.

ಉತ್ತರ : ಬಳೆ ವ್ಯಾಪಾರ ರನ್ನನ ಮನೆಗೆ ಆನುವಂಶಿಕ ಉದ್ಯೋಗವಾಗಿತ್ತು. ಅದನ್ನೇ ಮುಂದುವರೆಸಿಕೊಂಡು ಹೋಗಲು ಅವನ ತಂದೆತಾಯಿಗಳ ಇಚ್ಛೆಯಾಗಿತ್ತು. ಆದರೆ ರನ್ನಮಯ್ಯನಿಗೆ ಅದು ಹಿಡಿಸಲಿಲ್ಲ. ಅವನಲ್ಲಿ ವಿಲಕ್ಷಣವಾದ ಸಾಹಸ ಬುದ್ಧಿ ಇದ್ದಿತು. ಸಾಹಿತ್ಯ ಪ್ರಪಂಚ ಇವನನ್ನು ವಿಶೇಷವಾಗಿ ಆಕರ್ಷಿಸಿತು. ರಾಜಮನ್ನಣೆ ಗಳಿಸಬಹುದಾದ ಕಾವ್ಯ ರಚನೆ ಇವನ ಗುರಿಯಾಯಿತು. ಸಂಸ್ಕೃತಭಾಷೆ, ವ್ಯಾಕರಣ ಇವುಗಳ ಅಭ್ಯಾಸ ಮಾಡುವ ಇಚ್ಛೆ ಅವನಿಗಾಯಿತು.

ಮನೆಯಲ್ಲಾಗಲಿ, ಊರಲ್ಲಾಗಲಿ ಅವನ ಅಭ್ಯಾಸಕ್ಕೆ ಪ್ರೋತ್ಸಾಹ ದೊರೆಯಲಿಲ್ಲ. ಬದಲಾಗಿ ಜನರಿಂದ ಅಪಹಾಸ್ಯಕ್ಕೆ ಒಳಗಾದ. ಆದರೆ ಇದರಿಂದ ಅವನು ನಿರಾಶೆ ಹೊಂದಲಿಲ್ಲ. ಊರನ್ನು ಬಿಟ್ಟು ಹೊರಟು ಬಂಕಾಪುರ (ಪಂಡಿತಪುರಿ) ಎಂಬಲ್ಲಿಗೆ ಬಂದು ಪ್ರಯತ್ನ ಮುಂದುವರೆಸಿದ ಛತ್ರದಲ್ಲಿದ್ದುಕೊಂಡು ಅಜಿತಸೇನಾಚಾರ್ಯರನ್ನು ಕಂಡು ತನ್ನ ಮನದ ಇಂಗಿತವನ್ನು ತಿಳಿಯಪಡಿಸಿದ. ಕಲಿಯಬೇಕೆಂಬ ತನ್ನ ಹಂಬಲವನ್ನು ನಿವೇದಿಸಿದ ಕೊನೆಯಲ್ಲಿ ಗುರುಗಳ ಕೃಪೆಪಡೆದು ಅವರಿತ್ತ ಆಶ್ರಯದಲ್ಲಿ ವಿದ್ಯಾಭ್ಯಾಸ ಪಡೆದುಕೊಂಡ.

ವಿದ್ಯಾಸಾಧನೆಗೆ ಸತತ ಅಭ್ಯಾಸ, ಶ್ರದ್ಧೆ ಹಾಗೂ ಪ್ರಯತ್ನ ಇರಬೇಕು. ವಿದ್ಯೆಯು ಒಂದು ತಪಸ್ಸು. ದೃಢತೆಯಿಂದ, ಕಷ್ಟಪಟ್ಟು ದುಡಿದಾಗಲೇ ಅದು ಸಿದ್ಧಿಸುವದು ಗುರಿ ಸಾಧಿಸಲು ಮಹತ್ವಾಕಾಂಕ್ಷೆಯುಳ್ಳವರಾಗಿರಬೇಕು ಎಂಥ ಅಡತಡೆಗಳು ಬಂದರೂ ಅವುಗಳನ್ನು ಲೆಕ್ಕಿಸದೆ ಮುನ್ನಡೆಯುವ ಪ್ರಯತ್ನವಿರಬೇಕು ಹೊಗಳಿಕೆ-ತೆಗಳಿಕೆಗಳಿಗೆ ಕಿವಿಗೊಡದೆ ಗುರಿಯತ್ತ ಸಾಧನೆಯಿರಬೇಕು ಸರಿಯಾದ ಗುರುವನ್ನು ಪಡೆದು ಅವರಲ್ಲಿ ನಿಷ್ಠೆ, ಭಕ್ತಿಯಿಂದ ಕಂಕರಭಾವ ಹೊಂದಿ. ಸೇವಾನಿಷ್ಠರಾಗಿ ಅಭ್ಯಾಸ ಮಾಡಿದಾಗಲೇ ಸಿದ್ಧಿ ಪಡೆಯಬಹುದು. ಇಂಥ ಆದರ್ಶವಾಗಬಲ್ಲ ಗುಣಗಳು ಬಾಲಕ ರನ್ನಮಯ್ಯನಲ್ಲಿದ್ದವು ಅವುಗಳಿಂದಲೇ ಅವನ ಸಾಹಸ ನಿಶ್ಚಿತ ಗುರಿ ಸಾಧನೆಯಲ್ಲಿ ಸಫಲವಾಯಿತು

ಅಥವಾ

ಶಾರ್ಙ್ಗರವನ ಮೂಲಕ ಕಣ್ವರು ದುಷ್ಯಂತನಿಗೆ ಕಳುಹಿಸಿದ ಸಂದೇಶ

ಉತ್ತರ : ಕಣ್ವರು ಶಕುಂತಲೆಯನ್ನು ದುಷ್ಯಂತನ ಮನೆಗೆ ಕಳುಹಿಸಿ ಕೊಡುವ ಸಂದರ್ಭದಲ್ಲಿ ಚಕ್ರವರ್ತಿಗೆ ತಮ್ಮ ಸಂದೇಶವನ್ನು ಶಾರ್ಙ್ಗರವನ ಮೂಲಕ ತಿಳಿಸುವಂತೆ ಹೇಳಿದರು. ಅವರ ಸಂದೇಶದ ಸಾರಾಂಶ ಇಂತಿದೆ—

"ರಾಜ, ನಾವು ಜಿತೇಂದ್ರಿಯರೆಂಬುದನ್ನೂ ಶಾಂತಿಧನರೆನ್ನುವದನ್ನೂ ಮೊದಲು ಅರ್ಥ ಮಾಡಿಕೋ. ನೀನು ಎಂತಹ ಶ್ರೇಷ್ಠ ವಂಶದಲ್ಲಿ ಹುಟ್ಟಿದ್ದೀಯೆ ಎನ್ನುವದನ್ನು, ಆ ವಂಶದ ಕೀರ್ತಿಯನ್ನು ತಿಳಿದುಕೊಂಡು ಆ ಸ್ಥಾನಕ್ಕೆ ತಕ್ಕಂತೆ ನಡೆದುಕೋ. ನೀನು ಆಶ್ರಮಕ್ಕೆ ಬಂದಿದ್ದಾಗ ಈಕೆಯನ್ನು ಪ್ರೇಮಿಸಿದ್ದೀಯೆ. ಈಕೆಯೂ ತನ್ನ ಸಂಪೂರ್ಣ ಪ್ರೇಮವನ್ನು ನಿನ್ನಲ್ಲಿಟ್ಟು ನಿನ್ನನ್ನು ವರಿಸಿದ್ದಾಳೆ. ಸ್ವಲ್ಪವೂ ಕಪಟವಿಲ್ಲದ ಶುದ್ಧ ಚರಿತ್ರೆ ಈಕೆ, ನಿನ್ನ ಮಾತನ್ನು ನಂಬಿ ನಿನ್ನನ್ನು ವರಿಸಿದ್ದಾಳೆ. ನೀನು ಈಕೆಯನ್ನು ವಿಶೇಷ ಪ್ರೇಮದಿಂದ ಕಂಡಿದ್ದರೂ ನಿನ್ನ ಉಳಿದ ಪತ್ನಿಯರಿಗೆ ಸಮನಾಗಿಯೆ ಈಕೆಯನ್ನು ಕಾಣು. ನಿನ್ನನ್ನೇ ಸರ್ವಸ್ವವೆಂದು ನಂಬಿರುವ ಈಕೆಯನ್ನು ಬಾಳಿಸು, ರಕ್ಷಿಸು. ಉಳಿದದ್ದು ಆಕೆಯ ಭಾಗ್ಯಾಧೀನ ಆಕೆಯ ಅದೃಷ್ಟವಿದ್ದಂತೆ ಆಗಲಿ. ಹೆಣ್ಣಿನ ಕಡೆಯವರಾದ ನಾವು ನಿಮ್ಮಿಬ್ಬರ ಶ್ರೇಯಸ್ಸನ್ನು ಹೊರತು ಉಳಿದೇನನ್ನೂ ಹೇಳಬಾರದು."

ಪ್ರಸ್ತುತ ಸಂದರ್ಭದಲ್ಲಿ ಜ್ಞಾನಿಗಳಾದ ಕಣ್ವರು ಶಕುಂತಲೆಯ ನಿಷ್ಕಲಂಕ ಪ್ರೇಮವನ್ನೂ, ಚಕ್ರವರ್ತಿಯ ವಂಶದ ಅಭ್ಯುದಯವನ್ನೂ ಹಾಗೂ ತಮ್ಮ ಯೋಗ್ಯತೆಯನ್ನೂ ಅರಿತುಕೊಂಡು ಸೂಕ್ತ ರೀತಿಯಲ್ಲಿ ತಮ್ಮ ಸಂದೇಶವನ್ನು ಕಳಿಸಿದ್ದಾರೆ. ಅವರ ಪ್ರತಿಯೊಂದು ನುಡಿಯೂ ಅರ್ಥ ಗರ್ಭಿತ ಹಾಗೂ ಭಾವಪೂರ್ಣವಾಗಿದೆ.

2) ಭೀಮ-ದುರ್ಯೋಧನರು ನಡೆಸಿದ ಗದಾಯುದ್ಧದ ವರ್ಣನೆ

ಅಥವಾ

ಭೀಮನಾಯಕನ ಮನಸ್ಸು ಪರಿವರ್ತನೆಗೊಂಡ ಬಗೆ.

ಉತ್ತರ : (1984 ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 1 ನೇ ಪ್ರಶ್ನೆ 2, ರ ಉತ್ತರ ನೋಡಿರಿ.)

3) ಭಾಗೀರಥಿಯ ಉನ್ನತ ಮಟ್ಟದ ಧೈರ್ಯ ಸಾಹಸಗಳು ಮತ್ತು ತ್ಯಾಗ.

ಉತ್ತರ : (1985 ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 1 ನೇ ಪ್ರಶ್ನೆ 4 ರ ಉತ್ತರ ನೋಡಿರಿ.)

ಭಾಗೀರಥಿಯು ತನ್ನ ಗೆಳತಿಯ ಮಾತಿನಿಂದ ಧೈರ್ಯಗೊಂಡು ಹಿರಿಯರಲ್ಲಿಯ ಭಕ್ತಿ,ಶ್ರದ್ಧೆ ಹಾಗೂ ಲೋಕ ಕಲ್ಯಾಣಕ್ಕಾಗಿ ತನ್ನ ಪ್ರಾಣವನ್ನೇ ಬಲಿಕೊಡುವ ಅವಶ್ಯಕತೆಯನ್ನು ಮನಗಂಡು ಸಂತೋಷದಿಂದ ಕೆರೆಗೆ ಹಾರವಾದಳು. ಅವಳು ಮಾಡಿದ ತ್ಯಾಗ ಅವಳನ್ನು ಅಮರಳನ್ನಾಗಿ ಮಾಡಿತು. ಊರಿನ ಜನತೆಯಿಂದ "ದೇವತೆ" ಎಂದು ಗೌರವ ಪಡೆದಳು.

ಅಥವಾ

ಮದ್ಯಪಾನದ ಬಗೆಗೆ ದೇಶ ವಿದೇಶಗಳ ಗಣ್ಯವ್ಯಕ್ತಿಗಳ ಅಭಿಪ್ರಾಯಗಳು

ಉತ್ತರ : (1986 ಮಾರ್ಚ ಕನ್ನಡ ಪ್ರಥಮ ಪತ್ರಿಕೆ 1 ನೇ ಪ್ರಶ್ನೆ 1 ರ ಉತ್ತರ ನೋಡಿರಿ.)

ಪ್ರಶ್ನೆ 2. ಒಂದು ಪುಟಕ್ಕೆ ಮೀರದಂತೆ ಎರಡು ಪ್ರಶ್ನೆಗಳನ್ನು ಉತ್ತರಿಸಿರಿ.

1) ವಿಶ್ವಭಾರತಿಗೆ ಪದ್ಯ ವಿವರಣೆಯಂತೆ ಕನ್ನಡ ಮಂಗಲ ಜಯಭೇರಿಯು ಹೇಗೆ ಮೊಳಗಬೇಕು.

ಉತ್ತರ : (1984 ಎಪ್ರೀಲ್ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 1 ರ ಉತ್ತರ ನೋಡಿರಿ.)

ಅಥವಾ

ಸಿದ್ಧರಾಮನು ತಿಳಿಸಿದ ಮಲ್ಲಯ್ಯನ ಕುರುಹುಗಳಾವುವು !

ಉತ್ತರ : (1985 ಎಪ್ರೀಲ್ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆಯ 4 ರ ಉತ್ತರ ನೋಡಿರಿ)

2) ಪುಣ್ಯದಂಪತಿಗಳು ಯಾರು ? ಅವರು ಕಂಡು ಏನು ? ಬೆರಗಾದ ಬಗೆ ಹೇಗೆ ?

ಉತ್ತರ : ಮಲ್ಲಯ್ಯನನ್ನು ಕಾಣುವ ಹಂಬಲದಿಂದ ಹೊರಟ ಸಿದ್ಧರಾಮನು ಎಲ್ಲ ಕಡೆಗಳಲ್ಲಿಯೂ ಹುಡುಕಿ ಕಾಣದಾಗಲು ಪರಿತಪಿಸುತ್ತ ರುದ್ರಗಮ್ಮರಿಗೆ ಬರುವನು. ಅಲ್ಲಿ ತನ್ನ ಮನಸ್ಸನ್ನು ದೃಢ ನಿರ್ಧಾರಮಾಡಿ, ಹೊಲದ ಬಳಿ ತನಗೆ ತೋರಿಸಿದ ನಿಜರೂಪವನ್ನು ತೋರಿಸಬೇಕೆಂದು ಬೇಡುತ್ತ, ತೋರದಿರ್ದರೆ ಅದೇ-ಕಮ್ಮರಿಗೆ ಬಿದ್ದು ಸಾಯುವದಾಗಿ ಹೇಳುತ್ತಿರುವಷ್ಟರಲ್ಲಿ ಅತ್ಯಂತ ಪರವಶತೆ ಉಂಟಾಯಿತು ಕೊರಳೆತ್ತಿ, ಕೈಮುಗಿದು, ಕಣ್ಣುಮುಚ್ಚಿ "ಕರುಣಾಬ್ಧಿ ಮಲ್ಲಿನಾಥಾ" ಎಂದು ಕೂಗಿದನು. ಭಕ್ತನ ಆ ದೀನ ಸ್ಥಿತಿಯನ್ನು ಕಂಡು ಕರುಣಾಮಯಿಯಾದ ಶಿವನು ಪಾರ್ವತಿಸಹಿತವಾಗಿ ಪ್ರತ್ಯಕ್ಷ ದರ್ಶನ ನೀಡುವನು. ಅತ್ಯಂತ ಮಮತೆಯಿಂದ ಮೈದಡವಿ ಮುದ್ದಾಡಿದನು, ಆತನಿಗೆ ಸಮಾಧಾನಪಡಿಸಿದನು. ಆಗ ಸಿದ್ಧರಾಮನಿಗೆ ಭಾಲಚಂದ್ರನನ್ನು, ಗಂಗೆಯನ್ನು ಧರಿಸಿ ಜಟಾಕಿರೀಟವುಳ್ಳವನಾಗಿ, ತ್ರಿನೇತ್ರಗಳಿಂದ ಕೂಡಿ, ನಾಗಭೂಷಣನಾಗಿ, ಪಂಚಮುಖಗಳನ್ನು ಹತ್ತು ಕೈಗಳನ್ನು ಹೊಂದಿ ವಿಷಕಂಠನಾಗಿ, ಗಜಚರ್ಮಾಂಬರನಾಗಿ, ಪಾರ್ವತಿ ಸಹಿತನಾಗಿ ಶಿವನು ಪ್ರತ್ಯಕ್ಷ ಕಂಡು ಬಂದನು ಆ ದಿವ್ಯ ಮೂರ್ತಿಯನ್ನು ಕಂಡು ಸಂತೋಷಗೊಂಡು ಉದ್ವಿಗ್ನನಾಗಿ ಕುಣಿದು, ಕೇಕೆ ಹಾಕಿ, ಚಪ್ಪಾಳೆ ತಟ್ಟುತ್ತ ಕಾಲಿಗೆ ಎರಗಿದ ಬಾಲಕನ ತೊದಲು ನುಡಿಗಳನ್ನು ಸುರಿಯುವ ಆನಂದ ಬಾಷ್ಪದ ಪ್ರವಾಹವನ್ನು, ಒಸರುತ್ತಿರುವ ಬೆವರನ್ನು, ಪರವಶತೆಯನ್ನು ಹಾಗೂ ಗದ್ಗದ ಭಾವವನ್ನು, ಮೈಮೇಲಿನ ರೋಮಾಂಚನಗಳನ್ನು ಕಂಡು ಆ ಪುಣ್ಯ ದಂಪತಿಗಳಾದ ಶಿವ-ಪಾರ್ವತಿಯರು ಬೆರಗಾದರು. ಆತನ ಭಕ್ತಿಗೆ ಮೆಚ್ಚಿದರು.

ಅಥವಾ

ಕನ್ನಡ ಲಿಪಿಲತೆಯ ಸೊಬಗು ಎಂತಹುದು ?

ಉತ್ತರ : ಕವಿಯ ಅಭಿಪ್ರಾಯದಲ್ಲಿ ಕನ್ನಡದ ಲಿಪಿ ಬಹು ಸುಂದರವಾಗಿದೆ. ಬಳ್ಳಿಯಂತೆ ಮೋಹಕವಾಗಿ ಹಬ್ಬಿದೆ. ಕನ್ನಡದ ಕಲೆಯಲ್ಲವೂ ಅಲ್ಲಿ ತೋರ್ಪಡಿಸಿದಂತಿದೆ. ನಾಡಿನ ಸೌಂದರ್ಯವೇ ಪುನಃ ಜನರ ಹೃದಯಕ್ಕೆ ಸೇರಿ ಅವರ ಕೈಯಿಂದಲೇ ಅಕ್ಷರ ರೂಪದಲ್ಲಿ ಬಂದಿರಬಹುದೇ ? ಅಥವಾ ಆ ಸೌಂದರ್ಯ ಹೂ ಬಳ್ಳಿಯ ಹಾಗೆ ಸುಳಿದು ಸುಂದರವಾದ ಲಿಪಿಯ ರೂಪ ಧರಿಸಿ ನಿಂತಿರುವದೇ ! ಎಂದು ಪ್ರಶ್ನಿಸಿಕೊಂಡಿದ್ದಾರೆ. ಈ ಲಿಪಿಯ ಕೆಲವು ಅಕ್ಷರಗಳು ಮೊಗ್ಗಿನಂತಿವೆ. ಕೆಲವು ಹೂ, ಕುಡಿ, ಹೀಚು, ಮಿಡಿ ಕಾಯಿಗಳಂತೆ ಕಾಣುತ್ತವೆ. ಈ ಅಕ್ಷರಗಳ ಚೆಲುವಿಕೆ ನೋಡುವವರ ಮನಸ್ಸನ್ನು ಸೆಳೆಯುತ್ತದೆ.

ಈ ವರ್ಣ—ಬಳ್ಳಿ ಕಲ್ಲಿನಲ್ಲಿ, ಕಾವ್ಯದಲ್ಲಿ, ಪತ್ರದಲ್ಲಿ, ತಾಮ್ರಪಟದಲ್ಲಿ, ಗೋಡೆಗಳಲ್ಲಿ ಹಬ್ಬಿರುವದನ್ನು ಕಾಣುತ್ತೇವೆ. ಈ ಕನ್ನಡ ಚಾಲುಕ್ಯ, ಕಲಚೂರ್ಯ, ಹೊಯ್ಸಳ ಮೊದಲಾದ ಅರಸರ ಕಾಲದಲ್ಲಿ ಕಾಂತಿಯುತವಾಗಿ ಮೆರೆದಿದೆ. ಈ ಸುಂದರ ಬಳ್ಳಿಯು ಕನ್ನಡಿಗರ ಹೃದಯಾಂತರಾಳದಿಂದಲೇ ಹುಟ್ಟಿದೆ. ಅದು ಚಿಗುರು ಮೊಗ್ಗು, ಮಿಡಿಗಳನ್ನು ಹೊಂದಿದೆ. ಅದು ಕನ್ನಡಮ್ಮನ ಕೊರಳ ಹಾರಕ್ಕೆ ಮಲ್ಲಿಗೆಯ ಹೂಗಳನ್ನು ನೀಡುತ್ತಿದೆ. ಅವಳ ಅಡಿಯಲ್ಲಿ, ಬಳಿಯಲ್ಲಿ ಸುಳಿದಾಡುತ್ತಿದೆ ಗೌರವ ಸಲ್ಲಿಸುತ್ತಿದೆ.

ಪ್ರಶ್ನೆ 3. (ಅ) ಕೆಳಗಿನ ಪದ್ಯದ ಸಾರಾಂಶವನ್ನು ಬರೆಯಿರಿ.

ಮಗನೆ ತಮ್ಮಂದಿರನು..........

..............ಸಲಿಸೆನ್ನ ವಚನವನೆಂದಳಾ ಕುಂತಿ ॥

ಉತ್ತರ : ಕುಂತಿಯು ಕರ್ಣನನ್ನು ಕಂಡಾಗ ಹೇಳಿದ ಮಾತಿದು— "ಮಗನೆ ನಿನ್ನ ತಮ್ಮಂದಿರಾದ ಪಾಂಡವರನ್ನು ರಕ್ಷಿಸು. ದುಸ್ಸಾಹಸವನ್ನು ಬಿಟ್ಟು ಬಿಡು. ನೀನು ಪರರ ಸೇವೆ ಮಾಡುವದು ಸರಿಯಲ್ಲ. ನಿನಗೆ ಕೌರವ-ಪಾಂಡವರು ಇಬ್ಬರೂ

ತಮ್ಮಂದಿರು. ಅವರು ಪರಸ್ಪರ ಹೊಡೆದಾಡಿ ಸಾಯುವದು ಹಿತವೇ? ನಾನು ಹೇಳಿದ ಮಾತು ಹಿತವೆಂದು ತಿಳಿ, ಚಾಡಿಕೋರರ ದ್ವೇಷದ ಮಾತಿಗೆ ಕಿವಿ ಕೊಡಬೇಡ ಪಾಂಡವರ ಕಡೆಗೆ ಬಂದು ಪಟ್ಟಾಭಿಷಿಕ್ತನಾಗು. ನನ್ನ ಮಾತನ್ನು ನಡೆಸಿಕೊಡು, ಎಂದು ಕೇಳಿಕೊಂಡಳು.

(ಬ) ಕೆಳಗಿನ ಹಳಗನ್ನಡ ಗದ್ಯಭಾಗವನ್ನು ಹೊಸಗನ್ನಡಕ್ಕೆ ಅನುವಾದಿಸಿ

"ದೇವಾ ನೀಂ ಪಿರಿಯಂ............."

ಉತ್ತರ : "ದೇವಾ, ನೀನು ದೊಡ್ಡವನು. ಯಾರಿಗೆ ಏನು ಇಚ್ಛೆಯಾಗುವದೋ ಅದನ್ನು ಪೂರೈಸುವವನು. ನಾಳಿನ ಸ್ವಯಂವರದಲ್ಲಿ ಆ ಬಾಲೆಗೆ ನಾರದನಲ್ಲಿ ಬೇಸರ ಹುಟ್ಟುವ ಹಾಗೆ ಅವನ ಮುಖವನ್ನು ಕೋಡಗನ ಮುಖವನ್ನಾಗಿ ಮಾಡು. ಆದರೆ ಇದು ಬೇರೆಯವರಿಗೆ ಗೊತ್ತಾಗಬಾರದು. ಇಷ್ಟೊಂದು ದಯೆತೋರಿದರೆ ನಾನು ಗೆದ್ದಂತೆಯೇ" ಎಂದನು. ಆಗ ಆ ಹರಿಯು ಆ ಇಬ್ಬರಿಗೂ ಮನಸ್ಸು ಮತ್ತು ಗುಣಗಳೂ ಒಂದೇ ಇದೆ; ತಕ್ಕುದನ್ನು ಭೋಗಿಸಲಿ ಎಂದು ತನ್ನಲ್ಲಿ ಅಂದುಕೊಂಡು "ತಥಾಸ್ತು ಎಂದು ಹೇಳಿ ಈ ಸಂಗತಿಯನ್ನು ನಾರದನಿಗೆ ಹೇಳಬೇಡ" ಎಂದು ಅಪ್ಪಣೆಮಾಡಿ ಕಳುಹಿಸಿ ಕೊಟ್ಟನು.

ಪ್ರಶ್ನೆ 4. ಈ ಪದ್ಯಭಾಗವನ್ನು ಪೂರ್ಣಗೊಳಿಸಿರಿ

1) ಒರಲು ತಾಯ್ಗಿದಿರಾಗಿ.......ಕುಂತಿ ॥

2) ಕುಟಿಲವ ಬಿಡದಿಹ......ಫಲ ?

ಉತ್ತರ : ನಿಮ್ಮ ಪಠ್ಯಪುಸ್ತಕದ ಪದ್ಯ ಭಾಗದಲ್ಲಿ ನೋಡಿರಿ.

ಪ್ರಶ್ನೆ 5. ಇವರಲ್ಲಿ ಇಬ್ಬರ ಸ್ಥಳ, ಕಾಲ, ಕೃತಿ: ವೈಶಿಷ್ಟ್ಯಗಳನ್ನು ತಿಳಿಸಿರಿ.

1) ಗೋಪಾಲಕೃಷ್ಣ ಅಡಿಗ. 2) ರಾಘವಾಂಕ.
3) ಕುಮಾರವ್ಯಾಸ.

ಉತ್ತರ : 1) ಗೋಪಾಲಕೃಷ್ಣ ಅಡಿಗ :— ಇವರು ದಕ್ಷಿಣ ಕನ್ನಡ ಜಿಲ್ಲೆಯ ಮೋಗೇರಿಯಲ್ಲಿ 1918 ರಲ್ಲಿ ಹುಟ್ಟಿದರು. ಇಂಗ್ಲೀಷ ಭಾಷಾ ಪಂಡಿತರೂ ಆದ ಇವರು ಪ್ರಾಧ್ಯಾಪಕರು, ಪ್ರಿನ್ಸಿಪಾಲರೂ ಆಗಿ ನಿವೃತ್ತರಾದರು. ಇವರು ನವ್ಯಕಾವ್ಯ ಪಂಥದ ನೇತಾರರು.

ಚಂಡಮದ್ದಳೆ, ಭಾವತರಂಗ, ಭೂಮಿಗೀತ, ವರ್ಧಮಾನ ಇತ್ಯಾದಿ ಇವರ ಕವನ ಸಂಕಲನಗಳು. ಅನಾಥೆ, ಆಕಾಶದೀಪ ಇವರ ಕಾದಂಬರಿಗಳು. ಸಮಗ್ರ ಗದ್ಯ ಇವರ ವೈಚಾರಿಕ ಲೇಖನಗಳ ಸಂಗ್ರಹ. ಇವರು 51 ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಇವರಿಗೆ ಇತ್ತೀಚೆಗೆ ಮಧ್ಯ ಪ್ರದೇಶದ "ಕಾಳಿದಾಸ" ಸನ್ಮಾನವೂ ದೊರೆತಿದೆ.

2) ರಾಘವಾಂಕ : ( 1984 ಎಪ್ರೀಲ ಪ್ರಥಮ ಪತ್ರಿಕೆ 5 ನೇ ಪ್ರಶ್ನೆ 2ರ ಉತ್ತರ ನೋಡಿರಿ. )

3) ಕುಮಾರವ್ಯಾಸ: (1985 ಅಕ್ಟೋಬರ ಪ್ರಥಮ ಪತ್ರಿಕೆ 5 ನೇ ಪ್ರಶ್ನೆ 1 ರ ಉತ್ತರ ನೋಡಿರಿ. )

ಪ್ರಶ್ನೆ 6. ಕೆಳಗಿನ ವಾಕ್ಯಗಳ ಸಂದರ್ಭ ಮತ್ತು ಸ್ವಾರಸ್ಯವನ್ನು ತಿಳಿಸಿ ( ನಾಲ್ಕು ಮಾತ್ರ )

1) ಇಲ್ಲ, ನಾನು ಮೊದಲು ಅದಕ್ಕಿಂತ ದೊಡ್ಡ ಗುಮ್ಮಟ ನೋಡಬೇಕಾಗಿದೆ.

ಉತ್ತರ : ಪ್ರೊ. ಬಿ. ಎಂ. ಶ್ರೀಯವರು ಬಿಜಾಪುರಕ್ಕೆ ಮೊದಲ ಸಲ ಭೇಟಿ ಕೊಟ್ಟಾಗ ಅವರನ್ನು ಆಮಂತ್ರಿಸಿದವರು ಅವರಿಗೆ ಗೋಳಗುಮ್ಮಟ ತೋರಿಸಲು ಕರೆದೊಯ್ಯಬೇಕೆಂದರು. ಆಗ ಶ್ರೀಕಂಠಯ್ಯನವರು "ಇಲ್ಲ, ನಾನು ಅದಕ್ಕಿಂತ ದೊಡ್ಡ ಗುಮ್ಮಟ ನೋಡಬೇಕಾಗಿದೆ" ಎಂದರು. ಈ ಮಾತನ್ನು ಅವರ ವಚನ ಪಿತಾಮಹ ಶ್ರೀ ಫ. ಗು. ಹಳಕಟ್ಟಿಯವರನ್ನು ಕುರಿತು ಹೇಳಿದಂಥದು. ಶ್ರೀ ಹಳಕಟ್ಟಿಯವರ ವಚನ ಸಂಗ್ರಹದ ಕಾರ್ಯದ ಬೆಲೆ ತಿಳಿದ ಬಿ. ಎಂ. ಶ್ರೀಯವರು ಅವರನ್ನು ಗೋಳಗುಮ್ಮಟಕ್ಕಿಂತ ದೊಡ್ಡ ಗುಮ್ಮಟವೆಂದು ಬಿಜಾಪುರದ ಜನತೆಗೆ ಅವರ ವ್ಯಕ್ತಿತ್ವದ ಪರಿಚಯ ಮಾಡಿಕೊಟ್ಟರು.

2) ನಿಮಗೆ ಬೇಕಾದರೆ ಇನ್ನೂ ಉತ್ತಮನಾದವನನ್ನು ತೋರಿಸಬಲ್ಲೆ

ಉತ್ತರ : ಲೇಖಕರು ಬೋಂಡೋ ಗಿರಿಜನರ ಮಧ್ಯೆ ಸಂಚರಿಸುತ್ತ ಅವರ ಫೋಟೋ ತೆಗೆಯುವಾಗ ವಿಶಿಷ್ಟ ಅನುಭವವನ್ನು ಪಡೆದರು. ಆದಿವಾಸಿಗಳಿಗೆ ಕ್ಯಾಮರಾ ಗೊತ್ತಿಲ್ಲ. ಅದು ಆ ಜನರಲ್ಲಿ ಅಚ್ಚರಿಯನ್ನೂ, ಭೀತಿಯನ್ನೂ ಉಂಟು ಮಾಡಿತು ಒಂದಾವರ್ತಿ ಒಬ್ಬ ಕಮ್ಮಾರನ ಫೋಟೋ ತೆಗೆಯಲು ಯತ್ನಿಸಿದಾಗ ಜನರೆಲ್ಲ ಓಡಿ ಹೋದರಂತೆ ಆಗ ಒಬ್ಬ ಪೋಲೀಸಪೇದೆ ಮುಂದೆ ಬಂದು ಈ ಮಾತನ್ನು ಹೇಳಿದ. ಆ ಫೋಟೋ ತೆಗೆದು ಜನರನ್ನು ಮಿಲಿಟರಿಗೆ ಒಯ್ಯುವರು ಎಂದು ಅವರು ಭಾವಿಸಿದ್ದರು. ತಮ್ಮ ಶಕ್ತಿಯನ್ನೆಲ್ಲ ಎಳೆದು ಆ ಸಣ್ಣ ಪೆಟ್ಟಿಗೆಯಲ್ಲಿ ಹಾಕಿಕೊಂಡು ಹೋಗುತ್ತಾರೆ ಎಂದು ಅವರು ನಂಬುತ್ತಿದ್ದರು. ಪೋಲೀಸನು ಮಿಲಿಟರಿಗೆ ಇನ್ನೂ ಉತ್ತಮನಾದವನನ್ನು ತೋರಿಸಬಲ್ಲೆ ಎಂದು ಹೇಳಿದಾಗ, ಅವನೂ ಹಾಗೆಯೇ ತಿಳಿದುಕೊಂಡಿದ್ದನು.

3) ಪೋಗು, ಆ ಸಿಂಗಂ ತಾಂ ಗಾವಸಿಂಗ ಮೆಂದುದು ನಿನ್ನಂ

ಉತ್ತರ : ಮೊಲವು ಸಿಂಹನಲ್ಲಿಗೆ ತಡವಾಗಿ ಬಂದುದಕ್ಕೆ ಕೋಪಗೊಂಡು ಆ ಸಿಂಹವು ಕಾರಣ ಕೇಳಿತು. ಆಗ ಮೊಲವು ತನ್ನ ಮಾರ್ಗದಲ್ಲಿ ಬೇರೊಂದು ಸಿಂಹವು ತಡೆಗಟ್ಟಿತೆಂದೂ, ತಾನು ಹೊರಟ ಸಮಾಚಾರ ಕೇಳಿ ಗಜಗಳಿಗೆ ಅಂಜಿ ಕ್ಷುದ್ರ ಪ್ರಾಣಿ (ಮೊಲ)ಗಳನ್ನು ತಿನ್ನುವ "ಆ ಸಿಂಗಂ ತಾಂಗಾವ ಸಿಂಗಮಂ" ಎಂದು ಜರೆಯಿತೆಂದೂ ಹೇಳಿತು.

ಸಿಂಹವನ್ನು ಗ್ರಾಮಸಿಂಹ ಅಥವಾ ನಾಯಿಯೆಂದು ಜರೆದು ಅದರ ಪರಾಕ್ರಮಕ್ಕೆ ಚುಚ್ಚಿ ಮಾತನಾಡಿದ ಈ ಮಾತು ಉದ್ದೇಶಿತ ಪರಿಣಾಮವನ್ನುಂಟುಮಾಡಿತು. ಕೋಪಾಂಧನಾಗಿ ಮೊಲದ ಮೋಸದ ಜಾಲಕ್ಕೆ ಸಹಜವಾಗಿ ಬಲಿಬಿದ್ದಿತು.

4) ಕೋಪಾತುರನಪ್ಪನಾವನುಂ ಬಳ್ದಪನೇ :

ಉತ್ತರ : ಮೊಲವು ತನ್ನ ಉಪಾಯದಂತೆ ಆಳದ ಬಾವಿಯ ನೀರಿನಲ್ಲಿ ಸಿಂಹದ ನೆರಳನ್ನು ತೋರಿಸುತ್ತ, ಅದೇ ವೈರಿಯಾದ ಸಿಂಹವೆನ್ನಲು, ಮೋಸ ಹೋದ ಸಿಂಹವು ಕೋಪ ಗೊಂಡು (ನೀರಿನಲ್ಲಿ ಕಾಣುವ) ಸಿಂಹವನ್ನು ಕೊಲ್ಲಲು ಬಾವಿ ಯಲ್ಲಿ ನೆಗೆಯಿತು. ಮೇಲಕ್ಕೆ ಬರಲಾಗದೆ ಸತ್ತುಹೋಯಿತು. ತಾತ್ಪರ್ಯವೇನಂದರೆ ಕೋಪಾತುರರಿಗೆ ಇಂತಹುದೇ ಗತಿ ಯಾಗುವದು: ಕೋಪವುಳ್ಳವನಿಗೆ ವಿವೇಚನಾ ಶಕ್ತಿಯಿಲ್ಲದೆ ಹೋಗುವದರಿಂದ ಅನರ್ಥಗಳು ಸಂಭವಿಸುತ್ತವೆ.

5) ಮನಸ್ಸಿನ ಸ್ವಾಸ್ಥ್ಯವನ್ನು ಬಯಸುವವನು ಇಂಥದಕ್ಕೆಲ್ಲಾ ತನ್ನ ಸೈರಣೆಯನ್ನು ಕಳೆದುಕೊಳ್ಳ ಬಾರದು.

ಉತ್ತರ : ಕಪಿಯು ಕಾಡುಕೋಣಕ್ಕೆ ನಾನಾರೀತಿಯಾಗಿ ಹಿಂಸಿಸುತ್ತಿತ್ತು, ಇದನ್ನು ನೋಡಿ ಬೇಸರಗೊಂಡ ವೃಕ್ಷದೇವ ತೆಯು ಅದನ್ನು ಶಿಕ್ಷಿಸುವಂತೆ ಕೋಣಕ್ಕೆ ಸಲಹೆ ನೀಡಿತು. ಆಗ ಕೋಣವು ಈ ರೀತಿ ಉತ್ತರ ಕೊಟ್ಟಿತು. ಶಾಂತಿಯನ್ನು ಬಯಸುವವರೂ, ಕ್ಷಮಾಗುಣವನ್ನು ಅಭ್ಯಾಸ ಮಾಡುವವರೂ, ಮನಸ್ಸಿನ ಸ್ವಾಸ್ಥ್ಯವನ್ನು ಕಳೆದುಕೊಳ್ಳಬಾರದು; ತನ್ನ ಹಿಂದಿನ ಜನ್ಮಗಳ ಪಾಪದ ಫಲವಾಗಿ ಕೋಣನಾಗಿ ಹುಟ್ಟಿದುದಾಗಿಯೂ ಹೇಳಿತು ಕ್ಷಮಾಗುಣವನ್ನು ಆಚರಿಸುವ ತನ್ನ ಪ್ರತಿಜ್ಞೆ ಯನ್ನು ತಾನೇ ಭಂಗತರಬಾರದೆಂದು ಹೇಳಿತು. ಸೈರಣೆ ಕಾಯ್ದುಕೊಳ್ಳಬೇಕೆಂದಿತು.

ಪ್ರಶ್ನೆ 7. ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯ ಗಳಲ್ಲಿ ಉತ್ತರಿಸಿರಿ.

ಉತ್ತರ : 1) ಬಂಕಾಪುರದ ಹೆಗ್ಗಳಿಕೆ.

ಹತ್ತನೆಯ ಶತಮಾನದಲ್ಲಿ ಬಂಕಾಪುರ ಒಂದು ಸುಪ್ರ ಸಿದ್ಧ ನಗರವೆನಿಸಿತ್ತು. ಇದು ಜೈನಧರ್ಮ ಸಂಸ್ಕೃತಿಯ ಕೇಂದ್ರವಾಗಿತ್ತು. ರಾಷ್ಟ್ರಕೂಟದ ಕಾಲದಲ್ಲಿ ಗುಣಭದ್ರಾ ಚಾರ್ಯರು ಆ ನಗರಕ್ಕೆ ಪುಣ್ಯ ಕ್ಷೇತ್ರವೆನಿಸುವಂತೆ ಮಾಡಿದರು. ಇದು ಕೇವಲ ಧರ್ಮಕೇಂದ್ರವಾಗಿರದೆ ಪಂಡಿತರ ವಾಸಸ್ಥಾನವೂ ಆಗಿತ್ತು. ದೂರದ ದೇಶಗಳಿಂದ ಅನೇಕ ಪಂಡಿತರೂ, ವಿಜ್ಞಾನಿಗಳೂ ಬಂದು ಅಲ್ಲಿ ನೆಲೆಸಿದ್ದರು. ಆದ್ದರಿಂದ ಇದು ಪಂಡಿತಪುರಿ ಎಂದು ಪ್ರಖ್ಯಾತವಾಯಿತು. ರನ್ನನು ತನ್ನ ವಿದ್ಯಾಭ್ಯಾಸಕ್ಕೆ ಇಲ್ಲಿಗೆ ಬಂದಿದ್ದನು. ಈಗ ಇದು ಒಂದು ಸಾಮಾನ್ಯ ಊರು.

2) ಎಲ್ಲೋರಾದ ಪೌರಾಣಿಕ ಗವಿಗಳು :

ಉತ್ತರ : ಎಲ್ಲೋರಾದಲ್ಲಿ ಬೌದ್ಧಮತದ ಚೈತ್ಯಗಳು, ಸ್ತೂಪಗಳು. ಬುದ್ಧ ವಿಗ್ರಹಗಳು ಇವೆ, ಜೈನಧರ್ಮದ ಜಿನಾಲಯಗಳಲ್ಲಿ ಜೈನ ತೀರ್ಥಂಕರರ ವಿಗ್ರಹಗಳಿವೆ. ಶೈವ ಗುಹೆಗಳಲ್ಲಿ ಶಿವನ ಕಥೆಗಳಿಗೆ ಸಂಬಂಧಿಸಿದ ಕೆತ್ತನಗಳಿವೆ. ಶೈವ ಮತ್ತು ವೈಷ್ಣವ ಕಥೆಗಳಿಗೆ ಸಂಬಂಧಪಟ್ಟ ಹೇರಳವಾದ ಚಿತ್ರ ಗಳನ್ನು ಇಲ್ಲಿ ಕಾಣಬಹುದು. ಒಟ್ಟಿಗೆ ಇಲ್ಲಿ ಹದಿನೈದು ಬೌದ್ಧ ಗವಿಗಳಿವೆ. ಇಲ್ಲಿಯ ಪೌರಾಣಿಕ ಗವಿಗಳು ಸುಮಾರು ಕ್ರಿ. ಶ. 560 ರಿಂದ 735 ರ ಒಳಗೆ ಕೆತ್ತಲ್ಪಟ್ಟಂಥವು. ಇವುಗಳಲ್ಲಿ ರಾವಣನ ಗವಿ ಮುಖ್ಯವಾದುದು.

3) ಮಾನವತೆಯ ಮುಖ್ಯ ಲಕ್ಷಣಗಳು :

ಉತ್ತರ : ಯಾರಲ್ಲಿ ದಯೆ. ಕರುಣೆ, ಪರೋಪಕಾರ ಗುಣಗಳು ಇರುತ್ತವೆಯೋ ಅವನು ಉತ್ತಮ ಮಾನವನೆನಿಸು ವನು. ಆಪತ್ತಿನಲ್ಲಿರುವವರಿಗೆ ಸಹಾಯ ಮಾಡುವದು, ಜಗತ್ತಿನ ಶಾಂತಿಗೆ ತನ್ನ ಕೈಲಾದಷ್ಟುಗೆ ನೆರವಾಗುವದು.— "ಪರೋಪಕಾರಾರ್ಥಮಿದಂ ಶರೀರಂ" ಎಂಬಂತೆ ತನ್ನ ಜೀವನ ವನ್ನೇ ಇತರರ ಸೇವೆಗಾಗಿ ಸಲ್ಲಿಸುವದು, ಸದಾ ಶಾಂತಿಯಿಂದಿರು ವದು ಇವೆಲ್ಲ ಮಾನವತೆಯ ಮುಖ್ಯ ಲಕ್ಷಣಗಳು.

4) ಮಲ್ಲಿನಾಥನು ಸಿದ್ಧರಾಮನಿಗೆ ತೋರಿದ ನಿಜರೂಪ.

ಉತ್ತರ : ಮಲ್ಲಿನಾಥನು ಸಿದ್ಧರಾಮನ ಭಕ್ತಿ ಕರೆಗೆ ಓಗೊಟ್ಟು ಪ್ರತ್ಯಕ್ಷನಾದನು. ಅವನು ತಲೆಯಲ್ಲಿ ಚಂದ್ರನನ್ನೂ, ಗಂಗೆಯನ್ನೂ ಧರಿಸಿದ್ದನು. ಜಟಾ ಕಿರೀಟವುಳ್ಳವನಾಗಿದ್ದನು. ಮೂರು ಕಣ್ಣುಳ್ಳವನೂ, ನಾಗಾಭರಣ ಧರಿಸಿದವನೂ, ಪಂಚ ಮುಖಗಳುಳ್ಳವನೂ, ದಶಭುಜ ಹೊಂದಿದವನೂ ಆಗಿದ್ದನು. ಗಜ ಚರ್ಮಾಂಬರ ಧರಿಸಿದ್ದು ಪಾರ್ವತಿ ಸಮೇತನಾಗಿ ಸಿದ್ಧ ರಾಮನಿಗೆ ತನ್ನ ನಿಜರೂಪ ದರ್ಶನವಿತ್ತನು.

5) ನುಡಿಮುತ್ತುಗಳು ಕವಿತೆಯ ಸಾಂರಾಶ :

ಉತ್ತರ : ಇಂದಿನ ಪ್ರಪಂಚದಲ್ಲಿ ಹಣಕ್ಕೇನೇ ಪ್ರಾಧಾನ್ಯ ಹಣವಿದ್ದರೆ ಜನರೆಲ್ಲ ಅವನನ್ನು ಗೌರವಿಸುವರು, ಆಶ್ರಯಿಸುವರು. ಮನುಷ್ಯನು ಉದ್ಯೋಗಿ ಎಂದು ಗುರುತಿಸಲ್ಪಡಬೇಕಾದರೆ ಅದರ ಎಲ್ಲ ಅಂಶಗಳನ್ನು ಅವನು ತಿಳಿದಿರಬೇಕು. ಈ ಪ್ರಪಂಚದಲ್ಲಿ ಯಾರೋ ತಿಂದು ಬೀಸಿ ಒಗೆದ ಬಾಳೆ ಹಣ್ಣಿನ ಸಿಪ್ಪೆಯನ್ನು ಮತ್ತೊಬ್ಬರು ತುಳಿದು ಜಾರಿ ಬಿದ್ದು ಕೈ ಕಾಲು ಮುರಿದುಕೊಳ್ಳುವ ಹಾಗೆ ತೊಂದರೆ ಕೊಡುವವರು ಕೆಲವರಾದರೆ, ಅನ್ಯಾಯವಾಗಿ ತೊಂದರೆಗೆ ಗುರಿಯಾಗುವವರು ಕೆಲವರಾಗುವರು. ಅದರಂತೆ ಮನುಷ್ಯನು ಕೇವಲ ತನ್ನ ಸ್ವಾರ್ಥಕ್ಕಾಗಿ ದುಡಿಯದೆ ಎಲ್ಲರ ಕ್ಷೇಮಕ್ಕೆ ದುಡಿದು ಜನ್ಮ ಸಾರ್ಥಕ ಪಡೆದುಕೊಳ್ಳಬೇಕು.

ಪ್ರಶ್ನೆ 8. ಹಿಮಾಲಯ ಪ್ರಾಂತದಲ್ಲಿ ಕಾಡು ಕೋಣವು ಬೆಳೆಯುತ್ತಾ ಬೆಟ್ಟದಷ್ಟು ಎತ್ತರವಾಯಿತು. ಇಲ್ಲಿ ಕಂಡು ಬರುವ ಅಲಂಕಾರವನ್ನು ತಿಳಿಸಿ ಸಮನ್ವಯಗೊಳಿಸಿರಿ.

ಉತ್ತರ : ಇಲ್ಲಿರುವದು ಉಪಮಾಲಂಕಾರ.

ಕಾಡುಕೋಣವು ಬೆಟ್ಟದಷ್ಟು ಎತ್ತರವಾಯಿತು—ಈ ಮಾತಿನಲ್ಲಿ ಕಾಡು ಕೋಣವು ಉಪಮೇಯ; ಬೆಟ್ಟವು ಉಪಮಾನ ಹಾಗೂ ಅಷ್ಟು—ಉಪಮಾವಾಚಕ ಶಬ್ದ; ಎತ್ತರ ಉಪಮಾನ ಧರ್ಮ. ಹೀಗೆ ಈ ನಾಲ್ಕು ಅಂಶಗಳಿರುವದರಿಂದ ಇದು ಉಪಮಾಲಂಕಾರ.

ಪ್ರಶ್ನೆ 9. ಕೆಳಗಿನ ಪದ್ಯಭಾಗವನ್ನು ಪ್ರಸ್ತರಿಸಿ, ಗಣವನ್ನು ವಿಂಗಡಿಸಿ, ಛಂದಸ್ಸನ್ನು ಹೆಸರಿಸಿರಿ.

ರಾಮನ ನಗಲ್ಪಿ ತಂದಾ
ನೀ ಮಾನಿನಿಗಿನಿತು ದುಃಖಮಂ ಪುಟ್ಟಿಸಿದೆಂ

ಉತ್ತರ : ರಾಮನ | ನಗಲ್ಪಿ | ತಂದಾ |
— ∪∪ | ∪—∪ | —— |
ಳ | ಳ | ಳ

ನೀಮಾ | ನಿನಿಗಿನಿ | ತುದುಃಖ |
—— | ∪∪∪∪ | ∪—∪ |
ಳ ಳ ಳ

ಮಂಪು | ಟ್ಟಿಸಿ ದೆಂ |
—— | ∪∪— |
ಳ ಳ

1ನೇ ಪಾದದಲ್ಲಿ ನಾಲ್ಕು ಮಾತ್ರೆಯ ಮೂರು ಗಣಗಳು, 2 ನೇ ಪಾದದಲ್ಲಿ ನಾಲ್ಕು ಮಾತ್ರೆಯ ಐದು ಗಣಗಳೂ ಇವೆ. ವಿಷಮಸ್ಥಾನ ಗಣಗಳಲ್ಲಿ ಜಗಣವಿಲ್ಲ. ಆರನೆಯದು ಜಗಣವಾಗಿದೆಯಲ್ಲದೆ 2 ನೇ ಪಾದದ ಕೊನೆಯಲ್ಲಿ ಗುರುವಿದೆ, ಆದ್ದರಿಂದ ಇದು ಕಂದ ಪದ್ಯ.

ಪ್ರಶ್ನೆ 10. (ಅ) ಕೆಳಗಿನ ನುಡಿಕಟ್ಟುಗಳನ್ನು ಸ್ವಂತವಾಕ್ಯಗಳಲ್ಲಿ ಬಳಸಿರಿ.

1) ಕಾಳ್ಗಿಚ್ಚಿನಂತೆ ಆವರಿಸು.

ಉತ್ತರ : ಅವರ ಕೊಲೆಯ ಸುದ್ದಿಯು ಕಾಳ್ಗಿಚ್ಚಿನಂತೆ ಇಡೀ ಊರನ್ನೆಲ್ಲ ವ್ಯಾಪಿಸಿತು.

2) ಊರಿಗೋಲಾಗಿ ಹಿಡಿಯು :

ಆ ಅನಾಥ ಬಾಲಕನು ತನ್ನ ಮಾವನನ್ನೇ ಊರುಗೋಲಾಗಿ ಹಿಡಿದಿದ್ದನು

(ಆ) ಅವಯವಾರ್ಥ ಕೊಡಿರಿ :

ಉತ್ತರ : 1) ಬಿಸಜ ಬಂಧು = ಬಿಸಜ—ತಾವರೆ, ಬಂಧು–ನೆಂಟ = ಸೂರ್ಯ.

2) ಪುಟ್ಟಮಣೆ = ಪುಟ್ಟ–ಚಿಕ್ಕ, ಮಣೆ–ಪೀಠ = ಚಿಕ್ಕದಾದ ಪೀಠ.

ಪ್ರಶ್ನೆ 11. (ಕ) ವಿಗ್ರಹ ವಾಕ್ಯ ಬರೆದು ಸಮಾಸದ ಹೆಸರನ್ನು ತಿಳಿಸಿರಿ.

ಉತ್ತರ : 1) ರವಿಸುತ : ರವಿಯಸುತ. ಷಷ್ಠೀ ತತ್ಪುರುಷ ಸಮಾಸ.

2) ಮುಕ್ಕಣ್ಣ : ಮೂರು ಕಣ್ಣುಗಳು ಯಾರಿಗೋ ಅವನು ಮುಕ್ಕಣ್ಣ, ಬಹುವ್ರೀಹಿ ಸಮಾಸ.

(ಖ) ಸಮಾನಾರ್ಥಕ (ಪರ್ಯಾಯ) ಪದಗಳನ್ನು ಕೊಡಿರಿ.

1) ವಿರಹ, 2) ಸುರನದಿ

ಉತ್ತರ : 1) ಅಗಲಿಕೆಯ ದುಃಖ, ವಿಯೋಗ,

2) ಗಂಗೆ, ಜಾಹ್ನವಿ, ಭಾಗೀರಥಿ,

(ಗ) ಪದಗಳನ್ನು ವಿಂಗಡಿಸಿ ಸಂಧಿಯ ಹೆಸರನ್ನು ತಿಳಿಸಿರಿ.

1) ಚಿಂತೆಯಿಲ್ಲ 2) ಸುಡುಗಾಡು 3) ಒಮ್ಮೊಮ್ಮೆ

ಉತ್ತರ : 1) ಚಿಂತೆ+ಇಲ್ಲ = ಚಿಂತೆಯಿಲ್ಲ, ಯಕಾರಾಗಮ ಸಂಧಿ

2) ಸುಡು+ಕಾಡು = ಸುಡುಗಾಡು, ಗಕಾದೇಶ ಸಂಧಿ

3) ಒಮ್ಮೆ+ಒಮ್ಮೆ=ಒಮ್ಮೊಮ್ಮೆ, ಎ ಕಾರಲೋಪಸಂಧಿ

(ಘ) ಅ) ವಿರುದ್ಧಾರ್ಥಕ ಪದಗಳನ್ನು ಕೊಡಿರಿ.

1) ಕೃತಕ. 2) ಆಸಕ್ತಿ.

ಉತ್ತರ : 1) ಸಹಜ. 2) ಅನಾಸಕ್ತಿ (ನಿರಾಸಕ್ತಿ)

ಆ) ಸಂಸ್ಕೃತಕ್ಕೆ ತದ್ಭವ, ತದ್ಭವಕ್ಕೆ ಸಂಸ್ಕೃತ ಪದಗಳನ್ನು ಕೊಡಿರಿ.

1) ಸಿಂಹ 2) ಗೃಹಿಣಿ

ಉತ್ತರ : 1) ಸಿಂಗ. 2) ಗರತಿ.

ಪ್ರಶ್ನೆ 12. (ಅ) ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

1) ನಂದಿ ಮಿತ್ರನನ್ನು ಸಾಕಿದವರಿಗೆ ಕುಲಕ್ಷಯ ವಾಗಲು ಊರವರೆಲ್ಲರೂ ಅಂದುದು—

ಉತ್ತರ : 1) ಈ ತರುವಲಿ ನಮ್ಮೂರೊಳಿರೆ ನಮಗೆ ಸಾವುಂ ಕೇಡು ಮನೋಘಮಕ್ಕುಂ, ಇವನಚ್ಚಿ ಕಳೆಯಿರಿ.

2) ನಾರೀ ವೇಷದಲ್ಲಿ ಬಂದ ಗಂಗೆ ಕುಂತಿಯೊಡನೆ ಅಂದದ್ದು—

"ಎಲೆ ಕುಂತೀ ಸತಿಯೆ, ಕೈಯೆಡೆಯು ಕಂದನ ನೊಪ್ಪು ಗೊಳು ನೀನು. ಈಸುದಿನ ಇವನಾಗು ಹೋಗಿನ ಗಾಸಿಯನು ತಲೆ ಗಾಯ್ವನು, ಎನ್ನಯ ಭಾಷೆ ಸಂದುದು"

3. ಮನುಷ್ಯನ ಅಂತರಾಳದಲ್ಲಿ ಸದ್ಗುಣಗಳು ಹುದುಗಿಕೊಂಡು ಇದ್ದೇ ಇರುತ್ತವೆ—ಎಂಬ ಅರ್ಥದಲ್ಲಿ ರವೀಂದ್ರರು ಹೇಳಿದ ಉಕ್ತಿ—

"ವ್ಯಕ್ತಿಗಳು ಕ್ರೂರರಾಗಿರಬಹುದು ಆದರೆ ಮಾನವ ಮಾತ್ರ ಕರುಣಾಮಯಿ"

4) ತನ್ನ ಪತಿಯು ಬಡವನೆಂದು ಕೊರಗದ ಕನ್ನಡ ಗರತಿಯು ತಾಳಿರುವ ಹಿರಿಯ ಭಾವನೆ—

"ಕೂಲಿ ಮಾಡಿದರೇನು, ಕೋರಿ ಉಟ್ಟರೇನು, ನನ್ನ ಪತಿ ನನಗೆ ಬಡವನೆ ? ಅವನು ನನ್ನ ಮನೆಯ ಬಂಗಾರದ ಮಾಲೆ ಇದ್ದ ಹಾಗೆ."

5) ಡೋಣಿ ಬೆಳೆದರೆ ಓಣಿಯಲ್ಲಾ ಕಾಳು— ಎಂಬರ್ಥದ ಜಾನಪದ ನುಡಿ.

"ಡೋಣಿ ಪೀಕೆ ಕೋಣ್ ಖಾಯೇಗಾ; ಡೋಣ್ ನಾಪೀಕೆ ಕೋನ್ ಖಾಯೇಗಾ ?"

ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿಮಾಡಿರಿ.

ಉತ್ತರ : 1) ಕೊರಪುಟ ಬೆಟ್ಟಗಳ ಗಿರಿಜನರಿಗಿರುವ ಹೆಸರು......... (ಸವೋರಾ)

2) ಶಿವರುದ್ರಪ್ಪನವರಿಗೆ ಡಾಕ್ಟರೇಟ ಪದವಿ ಯನ್ನು ಒದಗಿಸಿದ ಮಹಾ ಪ್ರಬಂಧ ....... (ಸೌಂದರ್ಯ ಸಮೀಕ್ಷೆ)

3) ಅಕ್ಕ ಮಹಾದೇವಿಯ ವಚನಗಳ ಅಂಕಿತ .......(ಚೆನ್ನಮಲ್ಲಿಕಾರ್ಜುನ)

4) ಅಭಿಮನ್ಯುವಿನ ಸಾರಥಿಯ ಹೆಸರು... ........(ಜಯ)

5) ನಗೆಯ ಜಾದುಗಾರ ಎಂಬ ಭಾವನೆ ಯನ್ನು ಕನ್ನಡಿಗರಲ್ಲಿ ಉಂಟು ಮಾಡುವ ನಾಟಕಕಾರ.......(ಟಿ. ಪಿ. ಕೈಲಾಸಂ)

ಪ್ರಶ್ನೆ 13. ಮೊದಲಿನ ಎರಡು ಪದಗಳಿಗೆ ಇರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದ ಗಳನ್ನು ಬರೆಯಿರಿ.

ಉತ್ತರ : 1) ಪ್ರವೀಣ—ಪ್ರಾವಿಣ್ಯ; ನಿಪುಣ— (ನೈಪುಣ್ಯ)

2) ಬಿ ಡಿ.ಸುಬ್ಬಯ್ಯ-ಶಾಕೆಮಾನಿ; ಬೆಟಗೇರಿ ಕೃಷ್ಣ ಶರ್ಮ (ಆನಂದಕಂದ)

3) ಗೀತಾಂಜಲಿ–ನೋಬೆಲ್ ಪುರಸ್ಕಾರ; ಶ್ರೀರಾಮಾಯಣ ದರ್ಶನಂ–(ಜ್ಞಾನ ಪೀಠ ಪುರಸ್ಕಾರ)

4) ಸಂಸ್ಕೃತ ಕಾದಂಬರಿ—ಬಾಣಭಟ್ಟ; ಸಂಸ್ಕೃತ ಶಾಕುಂತ—(ಕಾಳಿದಾಸ)

5) ಚಾಲುಕ್ಯ ದೊರೆ ಜಗದೇಕಮಲ್ಲ— ದುರ್ಗಸಿಂಹ; ಚಾಲುಕ್ಯ ಅರಿಕೇಸರಿ— (ಪಂಪ)

ಪ್ರಶ್ನೆ 14. ಆಯಾಯ ಗುಂಪಿಗೆ ಸೇರದ ಪದ ಗಳನ್ನು ಆಯ್ದು ಬರೆಯಿರಿ.

ಉತ್ತರ : 1) ಕರ್ತೃಪದ, ಏಕಪದ, ಕರ್ಮಪದ, ಕ್ರಿಯಾ ಪದ (ಏಕಪದ)

2) ಪೂರ್ಣವಿರಾಮ, ಮಧ್ಯವಿರಾಮ, ಅಲ್ಪ ವಿರಾಮ, ಅರ್ಧವಿರಾಮ (ಮಧ್ಯ ವಿರಾಮ)

3) ದೈನಿಕ, ವಾಚಿಕ, ಸಾಪ್ತಾಹಿಕ, ಮಾಸಿಕ (ವಾಚಿಕ)

4) ಭಾಷಾಭೂಷಣ, ಕವಿಭೂಷಣ, ಶಬ್ದ ಮಣಿದರ್ಪಣ, ಶಬ್ದಾನು ಶಾಸನ (ಕವಿ ಭೂಷಣ)

5) ಸವರ್ಣದೀರ್ಘ, ಆದೇಶ, ಗುಣ, ವೃದ್ಧಿ, ಯಣ್ (ಆದೇಶ)

ಪ್ರಶ್ನೆ 15. "ಅ" ಗುಂಪಿನ ಪದಗಳಿಗೆ "ಬ" ಗುಂಪಿನ ಪದಗಳಲ್ಲಿ ಸರಿಯಾದವುಗಳನ್ನು ಜೋಡಿಸಿ ಬರೆಯಿರಿ.

| "ಅ" | "ಬ" |
|---|---|
| 1) ಕೊಟ್ಟೂರ ಸಿದ್ದಪ್ಪ ಶೆಟ್ಟಿ | 1) ನೇತ್ರದಾನಿ |
| 2) ಮೃಣಾಲಿನೀದೇವಿ | 2) ಸಹ ಪ್ರವಾಸಿ |
| 3) ಡಾ॥ ಮೋದಿ | 3) ನಾಕು ತಂತಿ– |
| 4) ಸ್ಪೂಟ್ನಿಕ್ | 4) ರವೀಂದ್ರನಾಥ ಠಾಕೂರ್ |
| 5) ಜ್ಞಾನಪೀಠ ಪ್ರಶಸ್ತಿ | 5) ಸೌಂದರ್ಯ ದೇವತೆ |
| | 6) ಚೆನ್ನಮ್ಮಾಜಿ |
| | 7) ರನ್ನ ಕವಿ ಪ್ರಶಸ್ತಿ. |

ಉತ್ತರ : 1–6, 2–4, 3–1, 4–2, 5–3.

—●—

# ಕನ್ನಡ

## ಏಪ್ರೀಲ್–೧೯೮೭ ದ್ವಿತೀಯ ಪತ್ರಿಕೆ

ಅವಧಿ : 2 ಗಂಟೆ ಅಂಕಗಳು : 50

ಪ್ರಶ್ನೆ 1. ಈ ಕೆಳಗಿನ ಪ್ರಶ್ನೆಗಳಲ್ಲಿ ಎರಡನ್ನು ಆರಿಸಿಕೊಂಡು ಪ್ರತಿಯೊಂದಕ್ಕೆ ಒಂದು ಪುಟದಷ್ಟಿರುವಂತೆ ಉತ್ತರಿಸಿರಿ.

1) ತೇನಸಿಂಗ್‌ನ ಬಾಲ್ಯ ಜೀವನವನ್ನು ವಿವರಿಸಿರಿ.

ಉತ್ತರ : ತೇನಸಿಂಗ್ 1914 ರಲ್ಲಿ ತ್ಸಚು ಗ್ರಾಮದಲ್ಲಿ ಜನಿಸಿದ. ಪುಣ್ಯ ಕ್ಷೇತ್ರದಲ್ಲಿ ಜನಿಸಿದ ತೇನಸಿಂಗ್‌ನಿಗೆ, ಧರ್ಮ ಗುರುಗಳ ಅಪ್ಪಣೆಯಂತೆ "ತೇನಸಿಂಗ್ ನೋರ್ಗೆ" ಅಂದರೆ "ಧರ್ಮರಕ್ಷಕ, ಅದೃಷ್ಟವಂತ" ಎಂದು ಹೆಸರಿಟ್ಟರು. ಬಾಲ್ಯ ದಿಂದಲೂ ತೇನಸಿಂಗ್‌ನಿಗೆ ಚಮರೀ ಮೃಗಗಳನ್ನು ಅಟ್ಟಿಕೊಂಡು ಹೋಗುವದು, ಗಿರಿ ಪ್ರದೇಶಗಳಲ್ಲಿ ಅಲೆದಾಡುವದು ಇಷ್ಟ ವಾಗಿತ್ತು. ಹಿಮಗಿರಿಗಳಲ್ಲಿ ಸಾಕಷ್ಟು ಎತ್ತರಕ್ಕೆ ಮೇಲೇರಿ ಹೋಗಿ ಬರುತ್ತಿದ್ದ. ಹೀಗೆ ಬಾಲ್ಯದಿಂದಲೇ ತೇನಸಿಂಗ್‌ನ ಚಟುವಟಿಕೆಗಳು ಸಾಹಸ ಪೂರ್ಣವಾಗಿದ್ದವು.

ಪುಣ್ಯ ಸ್ಥಳದಲ್ಲಿ ಜನಿಸಿದ ತೇನಸಿಂಗ್ ಅದೃಷ್ಟವಂತ ನೆಂದೂ, ಆತನು ಲಾಮಾ ಆಗಬೇಕೆಂದು ಅವನ ತಂದೆ-ತಾಯಿ ಗಳು ಇಚ್ಛಿಸಿದರು. ಅದಕ್ಕಾಗಿ ತೇನಸಿಂಗ್‌ನನ್ನು ಬೌದ್ಧ ಮಠಕ್ಕೆ ಸೇರಿಸಿದರು. ಅಲ್ಲಿ ಅವನ ಮುಂಡನ ಮಾಡಿಸಿ, ಕಾವಿಯ ನಿಲುವಂಗಿಯನ್ನು ತೊಡಿಸಿ ಶಿಷ್ಯನನ್ನಾಗಿ ಮಾಡಿದರು. ಸ್ವಲ್ಪ ಕಾಲ ಕಳೆಯಿತು.

ಒಂದು ದಿನ, ಲಾಮಾ ಕಟ್ಟಿಗೆಯೊಂದರಿಂದ ತೇನ–ಸಿಂಗ್‌ನ ಬೋಳು ತಲೆಯ ಮೇಲೆ ಹೊಡೆದಿದ್ದರಿಂದ ಓಡಿ ಹೋದ ತೇನಸಿಂಗ್ ಮತ್ತೆ ಮಠಕ್ಕೆ ಮರಳಿ ಬರಲಿಲ್ಲ. ವಾತ್ಸಲ್ಯದಿಂದಾಗಿ ಪಾಲಕರೂ ಆತನನ್ನು ಬಲಾತ್ಕರಿಸಲಿಲ್ಲ. ತೇನಸಿಂಗ್ ಮನೆಯಲ್ಲಿದ್ದುಕೊಂಡು ತಂದೆ–ತಾಯಿಗಳ ಕಾರ್ಯಕ್ಕೆ ನೆರವಾಗುತ್ತಿದ್ದನು. ಚಮರೀ ಮೃಗಗಳನ್ನು ಮೇಯಿಸುವದು ಅವನ ಮುಖ್ಯ ಕೆಲಸವಾಗಿತ್ತು. ಅದಕ್ಕಾಗಿ ಒಬ್ಬನೇ ಸಾವಿರಾರು ಅಡಿ ಎತ್ತರಕ್ಕೆ ಹೋಗುತ್ತಿದ್ದ. ಇಳುಕಲು ಪ್ರದೇಶದಲ್ಲಿ ನಿಂತು, ಪರ್ವತದೆತ್ತರವನ್ನು ನೋಡುತ್ತಿದ್ದ. ಉತ್ತರದಲ್ಲಿ ಆಕಾಶದತ್ತ ಮುಖ ಮಾಡಿ ಗಂಭೀರವಾಗಿ ನಿಂತ ಪರ್ವತವನ್ನು ಆತ ದಿನವೂ ನೋಡುತ್ತಿದ್ದ. ಅದೇ ಚೋಮೊ ಲುಂಗ್ಮಾ, ಅದು ಯಾವ ಹಕ್ಕಿಯೂ ಹಾರದ ಪರ್ವತ ಎಂಬು ದನ್ನು ಆತ ತಿಳಿದಿದ್ದ. ಆದರೆ ಅದು ಜಗತ್ತಿನ ಅತಿ ಎತ್ತರದ ಪರ್ವತ ಎಂಬುದನ್ನು ತಿಳಿದಾಗ, ಅದನ್ನು ಏರಬೇಕೆಂಬ ಬಲ ವಾದ ಆಶೆ ಅವನಲ್ಲಿ ಚಿಗುರಿತು. ಪರ್ವತಾರೋಹಿಯಾಗಲೂ ಬಯಸಿದ.

2) ನಂಗ ಪರ್ವತಕ್ಕೆ ನಡೆದ ಆರೋಹಣವನ್ನು ವಿವರಿಸಿ.

ಉತ್ತರ : ನಂಗ ಪರ್ವತವು ಪಾಕಿಸ್ತಾನ—ಕಾಶ್ಮೀರಗಳ ಗಡಿ ಪ್ರದೇಶದಲ್ಲಿದೆ. ಅಲ್ಲಿ ಸಂಭವಿಸಿದ ಸಾವುಗಳಿಂದಾಗಿ ಅದು ಮೃತ್ಯುಕೂಪವೆಂದೇ ಹೆಸರು ಪಡೆದಿದೆ. ಇಂಥ ದುರ್ಗಮ ಪರ್ವತವನ್ನೇರಲು 1950ರಲ್ಲಿ ತಂಡವೊಂದು ಹೊರಟಿತು. ತೇನಸಿಂಗ ಸರದಾರನಾದ ಈ ತಂಡದಲ್ಲಿ ಥಾರ್ನ್ಲಿ, ತ್ರೇಸ್ ಮತ್ತು ಮಾರ್ಷ ಹೀಗೆ ಈ ಮೂವರಲ್ಲದೆ ಅಂಗ್‌ಟೆಂಪ್ ಅಜಿಬಿ ಮತ್ತು ಪುಥರ್ಕಿ ಎಂಬ ಷರ್ಪಾಗಳೂ ಇತರರೂ ಇದ್ದರು.

ಪರ್ವತಾ ರೋಹಿಗಳು ನವ್ಹೆಂಬರ ಚಳಿಯನ್ನು ಸಹಿಸುತ್ತ ಮೇಲೇರಿ ಮೊದಲನೆಯ ಶಿಬಿರ ಸ್ಥಾಪಿಸಿದರು. ಆದರೆ ನಿಸರ್ಗದ ಪ್ರತಿಕೂಲ ಪರಿಸ್ಥಿತಿಯಿಂದಾಗಿ ಷರ್ಪಾಗಳು ಮುಂದುವರಿಯ ದಿರಲು ನಿರ್ಧರಿಸಿದರು. ತೇನಸಿಂಗ್ ಕೂಡ ಅದಕ್ಕೆ ಒಪ್ಪಿದ. ಆದರೆ ಮೂವರು ಆರೋಹಿಗಳು ಇದಕ್ಕೆ ಒಪ್ಪದೆ ಪ್ರಯಾಣ ಮುಂದುವರಿಸಿದರು.

ತೇನಸಿಂಗ್ ಮತ್ತು ಉಳಿದ ಇತರರು ಅವರಿಗಾಗಿ ಕಾದು ಕುಳಿತರು. ಆರು ದಿನಗಳ ನಂತರ ಮಾರ್ಷ ಇಳಿದುಬಂದ. ಆತನ ಕಾಲುಗಳು ಮಂಜುಗಟ್ಟಿದ್ದವು. ಉಳಿದಿಬ್ಬರು 18,000 ಅಡಿ ಎತ್ತರದಲ್ಲಿ ಡೇರೆ ಹಾಕುವದನ್ನು ಕೆಳಗಿನಿಂದ ನೋಡಿದರು. ಆದರೆ ಮರುದಿನ ಅಲ್ಲಿ ಡೇರೆ ಇಲ್ಲದಿರುವದನ್ನು ಕಂಡು ಏನೋ ಅನಾಹುತ ಸಂಭವಿಸಿದೆ ಎಂದು ತರ್ಕಿಸಿದರು. ತೇನಸಿಂಗ್, ಮಾರ್ಷ ಹಾಗೂ ಒಬ್ಬ ಷರ್ಪಾ ಅವರಿಗಾಗಿ ಹುಡುಕುತ್ತ ಹೊರಟರು.

ಭೀಕರ ಚಳಿ, ಹಿಮಪಾತ, ಆಳವಾದ ಮಂಜುಗಡ್ಡೆ ಗಳಿಂದ ಕೇವಲ 150 ಅಡಿ ಎತ್ತರ ಏರುವದು ಮಾತ್ರ ಸಾಧ್ಯ ವಾಯಿತು. ಮೇಲಾಗಿ ಮಾರ್ಷ್‌ನ ಕಾಲುಗಳು ಚಿಂತಾಜನಕ ಸ್ಥಿತಿಯಲ್ಲಿದ್ದವು. ಇನ್ನೂ ಮುಂದುವರಿಯುವದು ಮೂರ್ಖತನ ವೆಂದು, ಭಾರವಾದ ಹೃದಯಗಳಿಂದ ಕೆಳಗಿಳಿದರು. ಥಾರ್ನ್ಲಿ ಮತ್ತು ಕ್ರೇಸರ ದೇಹ ಸುಳಿವು ಸಿಕ್ಕಲಿಲ್ಲ. ಅವರು ಹಿಂದಿನವ ರಂತೆ ಮಂಜಿನಲ್ಲಿಯೇ ಹೂತುಹೋಗಿದ್ದರು.

3) ಜಗದೀಶಚಂದ್ರ ಬೋಸರ ವಿದೇಶೀ ವಿದ್ಯಾ ಭ್ಯಾಸವನ್ನು ವಿವರಿಸಿ.

**ಉತ್ತರ :** ಜಗದೀಶಚಂದ್ರರು ಬಿ.ಎ. ಪದವಿಯನ್ನು ಪಡೆದ ನಂತರ ಹೆಚ್ಚಿನ ವಿದ್ಯಾಭ್ಯಾಸ ಮುಂದುವರೆಸಲು ಅವರಲ್ಲಿ ಹಂಬಲವುಂಟಾಯಿತು. ಆ ವೇಳೆಯಲ್ಲಿ ಅವರ ತಂದೆ ಭಗವಾನ್ ಚಂದ್ರಬೋಸರು ಕಾಯಿಲೆಯಿಂದ ರಜೆಯಲ್ಲಿದ್ದರು. ಐ.ಸಿ.ಎಸ್. ಪರೀಕ್ಷೆ ಸಲುವಾಗಿ ಕೆಲವರು ಸೂಚಿಸಿದ್ದರೂ ಭಗವಾನ್ ಚಂದ್ರರು ಇದಕ್ಕೆ ವಿರೋಧವಾಗಿದ್ದರು. ಯಾಕೆಂದರೆ ತಮ್ಮ ಮಗನು ಅಧಿಕಾರಿಯಾದರೂ ಬೇರೆಯವರ ಅಧೀನದಲ್ಲಿ ಇರು ವದು ಬೇಕಿರಲಿಲ್ಲ.

ನೇರವಾಗಿ ಜನಸೇವೆಯನ್ನು ಮಾಡಬಹುದೆಂಬ ಭಾವನೆ ಯನ್ನು ತಾಳಿದ್ದ ಜಗದೀಶರಿಗೆ, ವೈದ್ಯಶಾಸ್ತ್ರ ಅಭ್ಯಾಸ ಮಾಡುವ ಇಷ್ಟವಿತ್ತು. ಮಗನು ಹೆಚ್ಚಿನ ಓದು ಮಾಡಲು ತಂದೆ–ತಾಯಿಗಳಿಬ್ಬರಿಗೂ ಇಚ್ಛೆ ಇದ್ದರೂ, ದೂರದ ಸ್ಥಳ ಇಂಗ್ಲಂಡಿಗೆ ಇವರನ್ನು ಕಳಿಸಿಕೊಡುವದು ಹೇಗೆ ಎಂಬ ಚಿಂತೆ ಅವರಿಗೆ ಇದ್ದಿತು. ಆದರೂ ಮಗನ ಉತ್ಸಾಹಕ್ಕೆ ಅಡ್ಡಿಮಾಡದೆ ಮುಂದಿನ ಅಭ್ಯಾಸ ಕೈಕೊಳ್ಳಲು ಸಮ್ಮತಿಸಿದರು. ಆದರೆ ಭಗವಾನ್ ಚಂದ್ರರ ಬಳಿ ಅಷ್ಟೊಂದು ಹಣವಿರಲಿಲ್ಲ. ಆಗ ಜಗದೀಶಚಂದ್ರರ ತಾಯಿಯೇ ಮುಂದೆ ಬಂದು, ತಮ್ಮ ಬಳಿ ಇದ್ದ ಅಲ್ಪಸ್ವಲ್ಪ ಹಣವನ್ನೂ ತಮ್ಮ ಎಲ್ಲ ಆಭರಣಗಳನ್ನೂ ಮಗನ ವಿದೇಶೀ ಅಭ್ಯಾಸಕ್ಕಾಗಿ ಕೊಡಲು ಮುಂದಾದರು. ಜಗದೀಶಚಂದ್ರರು ತಂದೆ–ತಾಯಿಗಳ ಆಶೀರ್ವಾದ ಪಡೆದು, ಅಕ್ಕತಂಗಿಯರ ಪ್ರೀತಿಯನ್ನು ಹೊತ್ತು 1880ರಲ್ಲಿ ವಿದ್ಯಾಭ್ಯಾಸ ಕ್ಕಾಗಿ ಇಂಗ್ಲಂಡಿಗೆ ಪ್ರಯಾಣ ಬೆಳೆಸಿದರು.

4) ಅರವಿಂದರು ಮಹಾಯೋಗಿ ಮಾತ್ರವಲ್ಲ, ಮಹಾವ್ಯಕ್ತಿ. ಈ ಮಾತನ್ನು ಸಮರ್ಥಿಸಿರಿ.

**ಉತ್ತರ :** ಅರವಿಂದರು ಮಹಾಯೋಗಿ ಮಾತ್ರವಲ್ಲ, ಮಹಾವ್ಯಕ್ತಿ. ನಮ್ಮ ದೇಶದ ಸಂದಿಗ್ಧ ಕಾಲದಲ್ಲಿ ಅವರ ಆಗಮನವಾಯಿತು. ಎಲ್ಲ ದೃಷ್ಟಿಯಿಂದಲೂ ಸತ್ವವನ್ನು ಕಳೆದು ಕೊಂಡಿದ್ದ ಭಾರತಕ್ಕೆ ಪುನಃ ಅದರ ಆತ್ಮಶಕ್ತಿ ಜಾಗೃತಗೊಳಿಸು ವಲ್ಲಿ ಪ್ರಮುಖ ಪಾತ್ರ ವಹಿಸಿದರು. ಬಾಲ್ಯದಿಂದಲೂ ಪರಕೀಯ ಪರಿಸರ ಮತ್ತು ಪರದೇಶದಲ್ಲಿಯೇ ಬೆಳೆದರೂ, ಅವರಲ್ಲಿದ್ದ ಭಾರತೀಯತೆ ತಾನಾಗಿಯೇ ಅರಳಿತು. ಸ್ವಾತಂತ್ರ್ಯ ಹೋರಾಟ ದಲ್ಲಿ ಪ್ರಮುಖ ಪಾತ್ರ ವಹಿಸಿತು. ಮುಂದೆ ಗಾಂಧೀಜಿಯವರ ನಿರ್ದೇಶನಕ್ಕೆ ತಕ್ಕ ಪೂರ್ವಸಿದ್ಧತೆಯನ್ನು ನಿರ್ಮಿಸಿತು.

ಪಾಂಡಿಚೇರಿಯಲ್ಲಿ ಗೆಳೆಯರೊಡನೆ ಮಾತನಾಡುವಾಗ– ಭಾರತಕ್ಕೆ ಸ್ವಾತಂತ್ರ್ಯ ಬಂದೇ ಬರುತ್ತದೆ. ಅದಕ್ಕೆ ಅಗತ್ಯವಾದ ಹೋರಾಟ ನಡೆದು ಅದು ಯಶಸ್ವಿಯಾಗಿಯೇ ತೀರುತ್ತದೆ ಎಂದು ಖಚಿತವಾಗಿ ಹೇಳುತ್ತ–"ಇದರಲ್ಲಿ ನನ್ನ ಪಾತ್ರ ಬೇರೆ ಎಂಬುದನ್ನು ಕಂಡುಕೊಂಡೆ, ಸ್ವಾತಂತ್ರ್ಯದ ನಂತರ ನಮ್ಮ ಬದುಕಿನ ಗುರಿಯೇನು ಎಂಬುದನ್ನು ನಾನು ರೂಪಿಸುತ್ತಿದ್ದೇನೆ." ಎಂಬುದಕ್ಕೆ ತಮ್ಮ ಗುರಿಯನ್ನು ವಿವರಿಸಿದ್ದಾರೆ.

ಮೊದಲಿನಿಂದಲೂ ಅರವಿಂದರು ಅಂತರ್ಮುಖಿ ದೃಷ್ಟಿ, ಕವಿ ಮನೋಧರ್ಮ ಉಳ್ಳವರು. ಬಾಲ್ಯದಿಂದಲೂ ಪ್ರತಿಕೂಲ ಪರಿಸ್ಥಿತಿಯಲ್ಲಿಯೇ ಅವರು ಬೆಳೆದು ಬರಬೇಕಾಯಿತು. ವಿದ್ಯಾ ಭ್ಯಾಸದಲ್ಲಿ ಅನೇಕ ತೊಡಕುಗಳನ್ನು ಧೈರ್ಯವಾಗಿ ಎದುರಿಸ ಬೇಕಾಯಿತು. ಐ.ಸಿ.ಎಸ್. ಪರೀಕ್ಷೆ ಪಾಸುಮಾಡಿ ದೊಡ್ಡ ಅಧಿಕಾರಿಯಾಗಿ, ಭೋಗ ಜೀವನ ನಡೆಯಿಸಬೇಕಾದವರು ಅದನ್ನು ತುಚ್ಛೀಕರಿಸಿ ಹೋರಾಟದ ಜೀವನದ ಕ್ರಾಂತಿಕಾರಿ ಯಾದರು. ಸ್ವಾತಂತ್ರ್ಯದ ಹೋರಾಟದಲ್ಲಿ ಧುಮುಕಿದರು. ಇಲ್ಲಿ ಅವರು ದೇಶದ ಮಹಾನಾಯಕನಾಗಬಹುದಿತ್ತು. ಆದರೆ ದೈವೀ

ಸಂಕಲ್ಪ ಬೇರೆಯಾಗಿತ್ತು. ಮಹಾಯೋಗಿಯಾಗಬೇಕು. ಅಧ್ಯಾತ್ಮಿಕ ಸಾಧನೆಯಿಂದ ಯುಗ ಪ್ರವರ್ತಕ ಶಕ್ತಿಯಾಗಬೇಕೆಂಬುದು ಇವರ ಇಚ್ಛೆಯಾಗಿತ್ತು. ಅವರನ್ನು ಅಂತರ್ವಾಣಿ ಪಾಂಡಿಚೇರಿಯ ಕಡೆ ಕರೆದೊಯ್ದಿತು. ಅಲ್ಲಿ ಯೋಗಸಾಧನೆಯಿಂದ ಸಿದ್ಧಿ ಪಡೆದರು. ಇಡೀ ಜಗತ್ತನ್ನೇ ತಟ್ಟುವ ಬೆಳಕಿನ ಬೆಟ್ಟವಾಗಿ ಬೆಳೆದರು. ಅಧ್ಯಾತ್ಮ ಯೋಗಿಗಳೆನಿಸಿದರು. ತಾವು ಸಿದ್ಧಿಯ ಶಿಖರದಲ್ಲಿ ನಿಂತರೂ ಜಗತ್ತಿನ ಉದ್ಧಾರಕ್ಕಾಗಿ ತೀವ್ರ ತಪಸ್ಸನ್ನು ಮುಂದುವರೆಸಿದರು. ಲೋಕಹಿತವೇ ಅವರ ಮಂತ್ರವಾಯಿತು. ಆದರೆ ಹೊರನೋಟಕ್ಕೆ ಅರವಿಂದರು ಲೌಕಿಕದಿಂದ ವಿಮುಖರಾದಂತೆ ಕಂಡುಬಂದರು. ಅವರ ಸರ್ವಸಮರ್ಪಣಾಭಾವ, ಲೋಕಹಿತ ಭಾವನೆಯೊಳು ನೆಲೆಗೊಂಡು ದೈವೀ ಗುಣಗಳ ಸಾಕಾರ ಮೂರ್ತಿ ಎನಿಸಿದರು. ಕಾರಣ ಅರವಿಂದರು ಮಹಾಯೋಗಿ ಮಾತ್ರವಲ್ಲ ಮಹಾವ್ಯಕ್ತಿ ಎನಿಸಿ ಜಗತ್ತಿಗೆ ಮಾರ್ಗದರ್ಶಕರಾದರು.

**ಪ್ರಶ್ನೆ II. ಈ ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೆ ಏಳೆಂಟು ವಾಕ್ಯಗಳಷ್ಟಿರುವಂತೆ ಉತ್ತರಿಸಿರಿ.**

**1) ಅರವಿಂದರ ಗೀತಾ ಪ್ರಬಂಧಗಳು :**

**ಉತ್ತರ :** ಗೀತಾ ಪ್ರಬಂಧಗಳೆಲ್ಲವೂ ಆರ್ಯ ಪತ್ರಿಕೆಯಲ್ಲಿ 1918 ರ ವರೆಗೆ ಧಾರವಾಹಿಯಾಗಿ ಪ್ರಕಟವಾದವು. ಅನಂತರ ಅವುಗಳನ್ನು ಎರಡು ಗ್ರಂಥಗಳ ರೂಪದಲ್ಲಿ ಪ್ರಕಟಿಸಲಾಯಿತು. ಒಂದೊಂದು ಭಾಗದಲ್ಲಿ 24 ಪ್ರಬಂಧಗಳಿವೆ. ಮೊದಲನೇ ಭಾಗದಲ್ಲಿ ಆಧುನಿಕ ಯುಗದ ಸವಾಲು ಮತ್ತು ಅವುಗಳನ್ನು ಎದುರಿಸುವಲ್ಲಿ ಗೀತೆಯ ಅವಶ್ಯಕತೆ ಇವುಗಳ ಪ್ರಸ್ತಾಪವಿದೆ. ಕರ್ಮಯೋಗದ ರಹಸ್ಯವನ್ನು ವಿವೇಚಿಸಲಾಗಿದೆ. ಎರಡನೇ ಭಾಗದಲ್ಲಿ ಭಕ್ತಿ ಜ್ಞಾನಗಳ ಸಮನ್ವಯ ಸಾಧಿಸಲಾಗಿದೆ. ಭಗವದ್ಗೀತೆಯಲ್ಲಿ ಯೋಗ ವಿದ್ಯೆ ಹಂತ ಹಂತವಾಗಿ ಬೆಳೆದು ಬಂದಿರುವ ಬಗೆಯನ್ನು ಚಿತ್ರಿಸಲಾಗಿದೆ.

**2) ಬೋಸ್ ವಿಜ್ಞಾನ ಮಂದಿರದ ವಿಶೇಷತೆಗಳ ಕುರಿತು ಬರೆಯಿರಿ.**

**ಉತ್ತರ:** ಬೋಸರು ಭಾರತದ ಭವಿಷ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಅಪಾರ ಶ್ರಮ ಹಾಗೂ ಸಹಾಯದಿಂದ ವಿಜ್ಞಾನ ಮಂದಿರವನ್ನು ಕಲಕತ್ತಾ ನಗರದಲ್ಲಿ ನೆಲೆಗೊಳಿಸಿದರು. ಬೋಸರೇ ಸ್ವತಃ ನಿಂತು ತಮ್ಮ ಅಭಿಪ್ರಾಯದಂತೆ ಎಲ್ಲವನ್ನೂ ಸಿದ್ಧಗೊಳಿಸಿದರು. ಅವರೇ ಸ್ವತಃ ನಿರ್ಮಿಸಿದ ಉಪಕರಣಗಳನ್ನು ಅಲ್ಲಿ ಕಾಣಬಹುದಾಗಿದೆ. ಭವ್ಯವಾದ ಉಪನ್ಯಾಸ ಮಂದಿರ, ಸುಸಜ್ಜಿತ ಗ್ರಂಥಾಲಯ, ಪ್ರಯೋಗಾಲಯ, ವಿದ್ಯಾರ್ಥಿನಿಲಯ ಇವೆಲ್ಲ ಆಕರ್ಷಕವಾಗಿವೆ. ದೇಶ ವಿದೇಶಗಳ ವಿಜ್ಞಾನಾಸಕ್ತರೆಲ್ಲರೂ ಇದರಿಂದ ಪ್ರಯೋಜನ ಪಡೆದುಕೊಳ್ಳುವಂತಾಗಬೇಕು ಎಂಬುದು ಬೋಸರ ಆಸೆಯಾಗಿತ್ತು. ಇಂದಿಗೂ ಇದು ಭಾರತದ ಕೀರ್ತಿಯ ಸಂಕೇತವಾಗಿ ಬೆಳಗುತ್ತಿದೆ. ಅನೇಕ ತರುಣ ವಿಜ್ಞಾನಿಗಳ ಭವಿಷ್ಯವನ್ನು ಬೆಳಗಿಸಿದೆ. ಭೌತಶಾಸ್ತ್ರ ಮತ್ತು ಸಸ್ಯಶಾಸ್ತ್ರಗಳಲ್ಲಿ ಉನ್ನತ ಸಂಶೋಧನೆಗೆ ಈ ವಿಜ್ಞಾನ ಮಂದಿರ ಉಪಯುಕ್ತವಾಗಿದೆ.

**3) ಜಗದೀಶಚಂದ್ರ ಬೋಸರ ಸಾಹಿತ್ಯ ಪ್ರೇಮದ ಕುರಿತು ಬರೆಯಿರಿ.**

**ಉತ್ತರ :** ವಿಜ್ಞಾನ ಕ್ಷೇತ್ರದಲ್ಲಿ ಮಹಾವ್ಯಕ್ತಿ ಎನಿಸಿದ ಬೋಸರು ಸಾಹಿತ್ಯ ಕ್ಷೇತ್ರದಲ್ಲಿಯೂ ಅಪಾರ ಆಸಕ್ತಿಯನ್ನು ಹೊಂದಿದ್ದು ಬಂಗಾಳಿ ಭಾಷಾಭಿವೃದ್ಧಿಗೆ ಶ್ರಮಿಸಿದರು. ಅವರು ರವೀಂದ್ರನಾಥ ಠಾಕೂರ್, ಜಾರ್ಜ್ ಬರ್ನಾರ್ಡ್‌ಷಾ, ಸ್ವಾಮಿ ವಿವೇಕಾನಂದ ಮೊದಲಾದ ಮಹಾವ್ಯಕ್ತಿಗಳೊಡನೆ ನಿಕಟ ಸಂಬಂಧವನ್ನು ಇಟ್ಟುಕೊಂಡಿದ್ದರು. ಠಾಕೂರರ ಯಾವದೇ ಕೃತಿ ಹೊರಗೆ ಬಂದರೂ, ಕೂಡಲೇ ಅದನ್ನು ಬೋಸರು ಓದಿ ಅದರ ಬಗ್ಗೆ ತಮ್ಮ ಅಭಿಪ್ರಾಯ ಸೂಚಿಸುತ್ತಿದ್ದರು. ಠಾಕೂರರ ಪ್ರಸಿದ್ಧ ಕಥೆ "ಕಾಬೂಲಿವಾಲಾ"ವನ್ನು ವಿದೇಶಕ್ಕೆ ಹೋಗುವಾಗ ಇಂಗ್ಲೀಷಿಗೆ ಭಾಷಾಂತರಿಸಿಕೊಂಡು ಹೋದರು. ಬೋಸರು ಬಂಗಾಳಿ ಸಾಹಿತ್ಯ ಪರಿಷನ್ಮಂದಿರದ ಅಧ್ಯಕ್ಷರಾಗಿ ಅಪಾರ ಸೇವೆ ಸಲ್ಲಿಸಿದರು. ರಾಮ ಮೋಹನ ಪುಸ್ತಕ ಭಂಡಾರದ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿದರು. ವಿಜ್ಞಾನ ಲೋಕದ ಉಜ್ವಲ ತಾರೆಯೆನಿಸಿದ ಬೋಸರು ಸಾಹಿತ್ಯ ಲೋಕದ ಉಜ್ವಲ ತಾರೆಯಾಗಿಯೂ ಬೆಳಗಿದರು.

**4) ಷರ್ಪಾಜನರ ಸಾಹಸ, ತ್ಯಾಗ ಬುದ್ಧಿಗಳನ್ನು ತಿಳಿಸಿರಿ.**

**ಉತ್ತರ :** ಷರ್ಪಾಗಳು ಧೈರ್ಯ, ಸ್ಥೈರ್ಯ, ಗಟ್ಟಿತನಗಳಿಗೆ ಹೆಸರಾದ ಜನಾಂಗದವರಾಗಿದ್ದಾರೆ. ಆರೋಹಿಗಳ ಯೋಗಕ್ಷೇಮಕ್ಕಾಗಿ ತಮ್ಮ ಪ್ರಾಣವನ್ನೇ ಅರ್ಪಿಸಿದ ಉದಾಹರಣೆಗಳಿವೆ. ಅವರ ತ್ಯಾಗಬುದ್ಧಿ ಮೆಚ್ಚುವಂತಹದು. ಪಾಸಂಗೆ ಕಿಕುಲಿಯ ಪ್ರಾಣಾರ್ಪಣದ ಪ್ರಸಂಗವನ್ನು ಯಾರೂ ಮರೆಯುವ ಹಾಗಿಲ್ಲ. 1939 ರಲ್ಲಿ ಅಮೇರಿಕನ್ ಪರ್ವತಾರೋಹಿಗಳಲ್ಲಿ ಒಬ್ಬನಾದ ಡಡ್ಲಿವುಲ್ಫ್ ಎಂಬಾತನನ್ನು ಪ್ರತಿಕೂಲ ವಾತಾವರಣದಲ್ಲಿಯೂ ಪರ್ವತದ ಮೇಲಿನಿಂದ ಇಳಿಸಿಕೊಂಡು ಬರಲು ಕಿಕುಲಿ ಎಂಬ ಷರ್ಪಾ ಬಿರುಗಾಳಿಯಲ್ಲಿ ಸಿಕ್ಕು ಪ್ರಾಣ ತೆತ್ತನು. ತೇನಸಿಂಗ್ ಎವರೆಸ್ಟ ಶಿಖರವನ್ನು ಹತ್ತುವಾಗ ಹಿಲರಿಯ ಸಂಗಡಿಗನಾಗಿ ಅಪಾರ ನೆರವು ನೀಡಿದ್ದಾನೆ. ಹೀಗೆ ಷರ್ಪಾಗಳು ನಿಷ್ಠೆಯಿಂದ, ನಿರ್ವ್ಯಾಜ ಸ್ನೇಹಭಾವದಿಂದ ಕೆಲಸ ಮಾಡುತ್ತಾರ.

5) ತೇನಸಿಂಗ್‌ನಿಗೆ "ಪರ್ವತವ್ಯಾಘ್ರ" ಬಿರುದು ಸಿಕ್ಕಿದುದು ಹೇಗೆ ?

ಉತ್ತರ : (1986 ರ ಮಾರ್ಚ ಕನ್ನಡ ದ್ವಿತೀಯ ಪತ್ರಿಕೆ 2 ನೇ ಪ್ರಶ್ನೆ 3 ರ ಉತ್ತರ ನೋಡಿರಿ.)

ಪ್ರಶ್ನೆ III. ಈ ಕೆಳಗಿನ ವಿಷಯಗಳಲ್ಲಿ ಒಂದನ್ನು ಆರಿಸಿ, ಎರಡು ಪುಟದಷ್ಟಿರುವಂತೆ ಒಂದು ಪ್ರಬಂಧ ಬರೆಯಿರಿ.

1) ನೀನು ಮೆಚ್ಚುವ ಉದ್ಯೋಗ :

ಉತ್ತರ : (1985 ಎಪ್ರಿಲ ಕನ್ನಡ ದ್ವಿತೀಯ ಪತ್ರಿಕೆ 3 ನೇ ಪ್ರಶ್ನೆ 3 ರ ಉತ್ತರ ನೋಡಿರಿ.)

2) ಶಾಲೆಗಳಲ್ಲಿ ಕೈಗೊಂಡ ಸಣ್ಣ ಉಳಿತಾಯ ಯೋಜನೆ-ಅದರ ಪ್ರಯೋಜನ.

ಉತ್ತರ : ಸರಕಾರವು ಜನತೆಯ ಕಲ್ಯಾಣಕ್ಕೋಸ್ಕರ ಹಲವಾರು ಕಾರ್ಯಗಳನ್ನು ಕೈಕೊಂಡು ನಿರ್ವಹಿಸಬೇಕಾಗುತ್ತದೆ. ಇವುಗಳನ್ನು ರಾಷ್ಟ್ರಾಭಿವೃದ್ಧಿ ಕಾರ್ಯಗಳೆಂದೂ ಹೇಳುತ್ತೇವೆ. ಆದರೆ ಯಾವುದೊಂದು ಯೋಜನೆ ಯಶಸ್ವಿಯಾಗಲು ಅಥವಾ ಅದು ಕಾರ್ಯಗತವಾಗಲು ಅದಕ್ಕೆ ಹಣದ ವಿನಿಯೋಗ ಮಾಡದ ಹೊರತು ಸಾಧ್ಯವೇ ಇಲ್ಲ. ಮೇಲಾಗಿ ಬೃಹತ್ ಪ್ರಮಾಣದ ಯೋಜನೆಗಳಿಗೆ ಕೋಟ್ಯಂತರ ರೂಪಾಯಿ ಖರ್ಚು ಮಾಡಬೇಕಾಗುತ್ತದೆ. ಹಾಗಾದರೆ ಬೇಕಾಗುವ ಈ ಅಪಾರ ಹಣವನ್ನು ತರುವದಾದರೂ ಎಲ್ಲಿಂದ ? ಎಲ್ಲಿ ಹಣ ಎದೆ ಎಂಬ ಪ್ರಶ್ನೆ ಎದುರಾಗುತ್ತದೆ.

ಸರಕಾರವು ಚಿಕ್ಕ ಉಳಿತಾಯ ಯೋಜನಾ ಸರ್ಟಿಫಿಕೇಟುಗಳನ್ನು ಒದಗಿಸಿ ಜನರಿಂದ ಹಣವನ್ನು ಸಂಗ್ರಹಿಸುತ್ತದೆ. ಇಂಥ ಸರ್ಟಿಫಿಕೇಟುಗಳು ಕಾಲಕಾಲಕ್ಕೆ ಸರಕಾರದಿಂದ ಬಿಡುಗಡೆಯಾಗುತ್ತವೆ. ಅವುಗಳಿಗೆ ಭದ್ರತೆ. ಅಧಿಕ ಲಾಭ ಬಹುಮಾನ ಮೊದಲಾದ ಆಕರ್ಷಕ ಕೊಡುಗೆಗಳನ್ನೂ ನೀಡಲಾಗುತ್ತದೆ.

ಚಿಕ್ಕ ಉಳಿತಾಯ ಯೋಜನೆಯಲ್ಲಿ ಶಾಲಾ ಮಕ್ಕಳು ಸಹ ಭಾಗವಹಿಸಿ ಸದುಪಯೋಗ ಪಡೆಯಲು ಕೂಡ ಅವಕಾಶ ಕಲ್ಪಿಸಲಾಗಿದೆ, ಅದುವೇ "ಶಾಲಾ ಸಂಚಯಿಕಾ" "ಹನಿ ಹನಿ ಕೂಡಿದರೆ ಹಳ್ಳ, ತೆನಿ ತೆನಿ ಕೂಡಿದರೆ ರಾಶಿ" ಎಂಬಂತೆ ಶಾಲಾ ಮಕ್ಕಳು ತಮ್ಮಿಂದ ಸಾಧ್ಯವಾಗಬಹುದಾದ ಅಲ್ಪ ಮೊತ್ತದ ಹಣವನ್ನು ಈ ಯೋಜನೆಯಲ್ಲಿ ತೊಡಗಿಸುವದರಿಂದ ಅದುವೇ ಗಣನೀಯ ಪ್ರಮಾಣದ ದೊಡ್ಡ ಮೊತ್ತವಾಗಬಹುದು. ಕೈಕೊಂಡ ಯೋಜನೆಗೆ ನೆರವೂ ನೀಡಬಲ್ಲದು. ಈ ಶಾಲಾ ಸಂಚಯಿಕಾ ಯೋಜನೆಯಿಂದ ಕೇವಲ ಹಣವನ್ನು ಶೇಖರಿಸಿಡುವದಷ್ಟೇ ಉದ್ದೇಶವಲ್ಲ, ಜೊತೆಗೆ ಹಲವಾರು ಉಪಯುಕ್ತತೆಗಳೂ ಉಂಟು. ಅವುಗಳನ್ನು ಈ ರೀತಿ ವಿವರಿಸಬಹುದು. ಪ್ರಥಮವಾಗಿ ಮಕ್ಕಳಲ್ಲಿ ಉಳಿತಾಯ ಪ್ರವೃತ್ತಿ ಜಾಗೃತವಾಗುವದು. ತಮಗೆ ಆಗಾಗ ದೊರೆಯುತ್ತಿರುವ ಅಲ್ಪ ಪ್ರಮಾಣದ ಹಣವನ್ನು ವ್ಯರ್ಥವಾಗಿ ತಿಂಡಿ-ತಿನಿಸುಗಳಿಗಾಗಿ ಖರ್ಚು ಮಾಡದೆ ಅದನ್ನೇ ಉಳಿತಾಯ ಮಾಡುವದರಿಂದ ಅದು ಉಪಯುಕ್ತ ಕೆಲಸಕ್ಕೆ ಅವರಿಗೆ ಸಹಾಯಕವಾಗುತ್ತದೆ. ಇದೊಂದು ಒಳ್ಳೆಯ ಹವ್ಯಾಸವಾಗುವದು. ತಾವು ಸಂಗ್ರಹಿಸಿದ ಈ ಹಣವು ರಾಷ್ಟ್ರ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗವಾಗುತ್ತಿದೆ ಎಂದು ತಿಳಿದಾಗ ಮಕ್ಕಳಲ್ಲಿ ರಾಷ್ಟ್ರೀಯ ಭಾವನೆ ಸರ್ವರ ಕಲ್ಯಾಣದ ಚಿಂತನೆ, ಸೇವಾ ಭಾವನೆಗಳು ಬೆಳೆದು ಬರುವಲ್ಲಿ ಸಹಾಯಕವಾಗುವದು. ಯೋಜನೆ ಹಾಗೂ ಕಾರ್ಯಾಚರಣೆಗಳ ಬಗೆಗೂ ಕಲ್ಪನೆಯುಂಟಾಗುವದು. ಅಲ್ಲದೆ ಶಾಲಾ ಸಂಚಯಿಕಾ ಒಂದು ಬ್ಯಾಂಕಿನಂತೆ ಕಾರ್ಯ ಮಾಡುತ್ತಿದ್ದು ಅದೆಲ್ಲ ಕಾರ್ಯವನ್ನು ಶಿಕ್ಷಕರ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳೇ ನಿರ್ವಹಿಸಬೇಕಾಗುವದು. ಇದರಿಂದ ಬ್ಯಾಂಕಿನ ವ್ಯವಹಾರಿಕ ಕಾರ್ಯಾಚರಣೆಯ ಬಗೆಗಿನ ಪ್ರತ್ಯಕ್ಷ ಜ್ಞಾನ, ಅನುಭವ ಪಡೆಯಲು ಇದೊಂದು ಉತ್ತಮ ಅವಕಾಶವಾಗಿದೆ. ಹೀಗೆ ಹಲವಾರು ಪ್ರಯೋಜನಗಳನ್ನು ಪಡೆಯಬಹುದು. ಇಂಥ ಸಣ್ಣ ಉಳಿತಾಯ ಯೋಜನೆಗಳು ಇನ್ನೂ ಹೆಚ್ಚು ಹೆಚ್ಚಾಗಿ ಪ್ರತಿಯೊಂದು ಶಾಲೆಯಲ್ಲಿ ಏರ್ಪಡುವಂತಾದರೆ ಹೆಚ್ಚು ಉಪಯುಕ್ತವಾಗುವದರಲ್ಲಿ ಸಂದೇಹವಿಲ್ಲ. ಹೀಗೆ ಚಿಕ್ಕಮಕ್ಕಳು ಸಹ ದೇಶದ ಅಭಿವೃದ್ಧಿ ಕಾರ್ಯಗಳಲ್ಲಿ ಭಾಗವಹಿಸಿ ತಮ್ಮ ಪಾಲಿನ ನೆರವು ನೀಡಬಲ್ಲರು.

3) ಹಳ್ಳಿಗಳ ಉದ್ಧಾರವೇ ದೇಶೋದ್ಧಾರ

ಉತ್ತರ : (1984 ಅಕ್ಟೋಬರ ಕನ್ನಡ ದ್ವಿತೀಯ ಪತ್ರಿಕೆ 3 ನೇ ಪ್ರಶ್ನೆ 3 ರ ಉತ್ತರ ನೋಡಿರಿ.)

4) ರಾಷ್ಟ್ರೀಯ ಭಾವೈಕ್ಯದಲ್ಲಿ ವಿದ್ಯಾರ್ಥಿಗಳ ಪಾತ್ರ :

ಉತ್ತರ : (ಮುಖ್ಯಾಂಶಗಳು :- ರಾಷ್ಟ್ರೀಯ ಭಾವನೆ ಎಲ್ಲರಲ್ಲಿ ಜಾಗ್ರತವಾಗಿರಬೇಕು-ರಾಷ್ಟ್ರದ ಹಿತದ ಬಗ್ಗೆ ಶ್ರಮಿಸುವದು-ರಾಷ್ಟ್ರದ ಜನತೆಯ ಅಭಿವೃದ್ಧಿಯಾದಾಗಲೇ ದೇಶದ ಅಭಿವೃದ್ಧಿ-ಐಕ್ಯತೆ ಇರಬೇಕು-ಜಾತಿ-ಮತ ಪಂಥ ಭಾಷೆಯ ಬಗೆಗೆ ದ್ವೇಷ, ಅಸೂಯೆಗಳು ಇರಕೂಡದು-ಬಾಹ್ಯ ರಾಷ್ಟ್ರಗಳೊಡನೆ ಎಚ್ಚರದಿಂದಿರಬೇಕು-ಈ ಎಲ್ಲ ವಿಚಾರಗಳನ್ನು

ವಿದ್ಯಾರ್ಥಿಗಳು ತಿಳಿದಿರಬೇಕು—ಇಂದಿನ ವಿದ್ಯಾರ್ಥಿಗಳೇ ನಾಳಿನ ನಾಗರಿಕರು, ದೇಶದ ಪ್ರಜೆಗಳು—ನಾವೆಲ್ಲ ಭಾರತೀಯರು ಎಂಬ ಭಾವನೆ ಬೆಳೆದು ಬರಬೇಕು. ರಾಷ್ಟ್ರೀಯ ಹಬ್ಬಗಳು, ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿರಬೇಕು. ಅವುಗಳ ಮಹತ್ವ ತಿಳಿದುಕೊಳ್ಳಬೇಕು—ರಾಷ್ಟ್ರಾಭಿಮಾನ, ರಾಷ್ಟ್ರ ಗೌರವ ಕಾಯ್ದುಕೊಳ್ಳಬೇಕು–ರಾಷ್ಟ್ರಕ್ಕಾಗಿ ಎಂತಹ ತ್ಯಾಗಕ್ಕಾದರೂ ಸಿದ್ಧರಾಗಿರಬೇಕು.)

ಪ್ರಶ್ನೆ IV. ನಿಮ್ಮ ಶಾಲಾ ವಾರ್ಷಿಕೋತ್ಸವದ ವರದಿಯನ್ನು ಪ್ರಕಟಿಸುವಂತೆ ಕನ್ನಡ ದಿನಪತ್ರಿಕೆಯ ಸಂಪಾದಕರಿಗೆ ಪತ್ರವನ್ನು ಬರೆಯಿರಿ.

ಉತ್ತರ : ಊರು.........

ದಿನಾಂಕ..........

ಮಾನ್ಯ ಸಂಪಾದಕರು,
"ಸಂಯುಕ್ತ ಕರ್ನಾಟಕ" ದಿನಪತ್ರಿಕೆ
ಹುಬ್ಬಳ್ಳಿ.

ಮಾನ್ಯರೇ,

ನಮ್ಮ ಶಾಲೆಯ ಈ ಸಲದ ವಾರ್ಷಿಕೋತ್ಸವವು ದಿ...... ರಂದು ಅಪರಾಹ್ನ ಬಹು ವೈಭವದಿಂದ ನೆರವೇರಿತು. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾದ ಹಾಗೂ ಸಾಹಿತಿಗಳಾದ......ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ನಮ್ಮ ಸಂಸ್ಥೆಯ ಸಂಚಾಲಕರು ಅಧ್ಯಕ್ಷತೆ ವಹಿಸಿದ್ದರು. ಈ ಕಾರ್ಯಕ್ರಮದ ಸಂಕ್ಷಿಪ್ತ ವರದಿಯನ್ನು ಈ ಮೂಲಕ ಕಳಿಸಿರುತ್ತೇನೆ. ದಯಮಾಡಿ ಅದನ್ನು ತಮ್ಮ ಜನಪ್ರಿಯ ದಿನಪತ್ರಿಕೆಯಲ್ಲಿ ಪ್ರಕಟಿಸಬೇಕಾಗಿ ವಿನಂತಿಸುತ್ತೇನೆ. ಇತಿ.

ಧನ್ಯವಾದಗಳೊಂದಿಗೆ –

ತಮ್ಮವ
.............
(ವಿದ್ಯಾರ್ಥಿ ಪ್ರತಿನಿಧಿ)

ಅಥವಾ

ನಿಮ್ಮ ಶಾಲಾ ಪುಸ್ತಕ ಭಂಡಾರಕ್ಕೆ ಪ್ರಸಿದ್ಧ ಸಾಹಿತಿಗಳ ಕಾದಂಬರಿಗಳನ್ನು ಕಳುಹಿಸಿಕೊಡುವಂತೆ "ಗೀತಾ ಬುಕ್ ಏಜೆನ್ಸೀಸ್, ಮೈಸೂರು" ಇಲ್ಲಿಗೆ ಪತ್ರ ಬರೆಯಿರಿ.

ಉತ್ತರ : ಊರು.........

ದಿನಾಂಕ.........

ಮಾನ್ಯ ನಿರ್ವಾಹಕರು,
"ಗೀತಾ ಬುಕ್ ಏಜೆನ್ಸೀಸ್,
ಮೈಸೂರು.

ಮಾನ್ಯರೇ,

ನಮ್ಮ ಶಾಲೆಯ ಪುಸ್ತಕ ಭಂಡಾರಕ್ಕೆ ಪ್ರಸ್ತುತ ವರ್ಷ ಕನ್ನಡನಾಡಿನ ಪ್ರಸಿದ್ಧ ಸಾಹಿತಿಗಳ ಇತ್ತೀಚಿನ ಕಾದಂಬರಿಗಳನ್ನು ದೊರಕಿಸಿಕೊಳ್ಳಬೇಕೆಂದು ನಿರ್ಧರಿಸಿದೆ. ಸುಮಾರು ನಾಲ್ಕು ಸಾವಿರ ರೂಪಾಯಿಗಳನ್ನು ಇದಕ್ಕಾಗಿ ಖರ್ಚು ಮಾಡಲು ವ್ಯವಸ್ಥೆ ಮಾಡಿದೆ. ಕಾರಣ ತಾವು ಈ ಮೊತ್ತಕ್ಕೆ ಸಮನಾಗುವಂತೆ ಉತ್ತಮ ಕೃತಿಗಳನ್ನು ಎಲ್ಲ ಪ್ರಸಿದ್ಧ ಸಾಹಿತಿಗಳಿಂದ ರಚಿತವಾದವುಗಳನ್ನು ಕಳುಹಿಸಿಕೊಡಬೇಕೆಂದು ವಿನಂತಿಸಿದೆ. ಯಾವುದೊಂದು ಆಯ್ದ ಪುಸ್ತಕದ ಪ್ರತಿಗಳು ಐಯ್ದಕ್ಕೆ ಸೀಮಿತವಾಗಿರಲಿ. ಪುಸ್ತಕಗಳ ಜೊತೆಗೆ ವಿವರಗಳುಳ್ಳ ಪಟ್ಟಿ ಹಾಗೂ ಬಿಲ್ ಕಳುಹಿಸಿಕೊಡಿರಿ. ಕೂಡಲೇ ತಮಗೆ ಸದರ ಹಣವನ್ನು ಬ್ಯಾಂಕ್ ಡ್ರಾಫ್ಟ ಮೂಲಕ ಕಳುಹಿಸಿಕೊಡುತ್ತೇವೆ ಇತಿ.

ಧನ್ಯವಾದಗಳೊಂದಿಗೆ—

ವಿಳಾಸ : ತಮ್ಮ ವಿಶ್ವಾಸಿ
ಶಾಲೆಯ ಹೆಸರು......... ..............
ಊರು.........

ಪ್ರಶ್ನೆ V. ಇಲ್ಲಿ ಬಿಟ್ಟಿರುವ ಸ್ಥಳವನ್ನು ಸರಿಯಾದ ಪದಗಳಿಂದ ತುಂಬಿಸಿ.

ಉತ್ತರ :
1) "ತುಜಿ ಘೀ ಚೋಮೋ ಲುಂಗ್ಮಾ" ಇದರ ಅರ್ಥ............. (ದೇವಿ ಜಗನ್ಮಾತೆ, ನಿನಗೆ ನಮಸ್ಕಾರ)
2) ತೇನಸಿಂಗ್‌ನು ವಿಜಯಶ್ರೀಯ ಶಿಲ್ಪಿ ...........(ಕರ್ನಲ್ ಹಂಟ)
3) ಬ್ರಿಟಿಷರನ್ನು ಭಾರತದಿಂದ ಓಡಿಸಬೇಕೆಂಬ ನಿರ್ಧಾರವನ್ನು ಪ್ರಚಾರ ಪಡಿಸುವದಕ್ಕಾಗಿ ಸ್ಥಾಪಿತವಾದ ಗುಪ್ತ ಸಂಸ್ಥೆ.......(ಕಮಲ ಮತ್ತು ಕಠಾರಿ)
4) ಅಧಿಕಾರಿಗಳಿಗೆ ಪತ್ರ ಬರೆದು ಕೊನೆಗೊಳಿಸುವಾಗ ಬರೆಯುವ ಒಕ್ಕಣೆ......... (ತಮ್ಮ ವಿಶ್ವಾಸಿ)
5) ತೇನಸಿಂಗ್‌ನು ಮನದಲ್ಲಿಯೇ ಪ್ರಾರ್ಥಿಸಿದ: ತಂದೆ–ತಾಯಿಯರ ಆರಾಧ್ಯ ದೇವನೇ ದಯೆ ತೋರಿಂದು

ನನ್ನ ಮೇಲೆ——ಈ ವಾಕ್ಯದಲ್ಲಿರಬೇಕಾದ ಲೇಖನ ಚಿಹ್ನೆ.... .......(" ")

ಪ್ರಶ್ನೆ VI. ಈ ಪದ್ಯವನ್ನು ಓದಿಕೊಂಡು ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿರಿ.

ಶಕ್ತಿಯ ಕೊಡು ಶಕ್ತಿಯ ಕೊಡು
ಶಕ್ತಿಯ ಕೊಡು ಹೇ ಪ್ರಭೂ
ಸತ್ಯಕಾಗಿ ನಿಲುವ ಛಲವ
ದೀಪ್ತಗೊಳಿಸು ನನ್ನೊಳು ॥1॥
ಎಡರ ಕಡಲ ತೆರೆ ಹಡೆಗಳು
ಭೋರ್ಗರೆಯುತ ಬಂದರೂ
ತಡೆದು ನಿಲುವ ಮಳಲ ತುಡಿಯ
ಬಲವ ನೀಡು ಶ್ರೀ ಗುರೂ ॥2॥
ನೂರುಲ್ಕೆಯ ರಭಸಮತಿಯ
ಅಬ್ಬರಗಳ ನಡುವೆಯೂ
ನಿಯತಗತಿಯ ತಾರೆಗಳೊಲು
ನೇರವಿರಿಸು ನನ್ನನು ॥3॥
ಗುಡುಗು ಸಿಡಿಲ ಗರುಡ ಗತಿಯ
ಅಚಂಚಲದ ನೀರಿಗೆ
ಸದಾ ತುಡಿವ ಗರುಡ ಗತಿಯ
ತುಂಬು ನನ್ನ ಹೃದಯಕೆ ॥4॥

1) ಎಂತಹ ಛಲವನ್ನು ದೀಪ್ತ ಗೊಳಿಸಬೇಕೆಂದು ಕವಿಯು ಹೇಳಿರುವನು ?

ಉತ್ತರ : ಸತ್ಯಕ್ಕಾಗಿ ನಿಲ್ಲುವ ಛಲವನ್ನು ದೀಪ್ತ ಗೊಳಿಸಬೇಕೆಂದು ಕವಿಯು ಹೇಳಿರುವನು.

2) ಭರುವ ಕಷ್ಟಗಳನ್ನು ಮತ್ತು ಅವುಗಳನ್ನು ತಡೆಯುವ ಶಕ್ತಿಯನ್ನು ಕವಿಯು ಹೇಗೆ ವರ್ಣಿಸಿದ್ದಾನೆ?

ಉತ್ತರ : ಸಮುದ್ರ ತೆರೆಗಳು ಭೋರ್ಗರೆಯುತ ಬರುತ್ತಿದ್ದರೂ ಅವುಗಳನ್ನು ತಡೆಯುವ ಶಕ್ತಿಯುಳ್ಳ ಮಳಲ ತಡಿಯ ಹಾಗೆ, ಮೇಲಿಂದ ಮೇಲೆ ಬರುವ ಕಷ್ಟಗಳನ್ನು ಎದುರಿಸುವ ಬಲವನ್ನು ನೀಡೆಂದು ಶ್ರೀಗುರುವನ್ನು ಪ್ರಾರ್ಥಿಸಿದ್ದಾನೆ.

3) ತನ್ನನ್ನು ಹೇಗೆ ಸ್ಥಿರವಾಗಿ ನಿಲ್ಲಿಸೆಂದು ಹೇಳಿದ್ದಾನೆ !

ಉತ್ತರ : ನೂರಾರು ಉಲ್ಕೆಗಳು ರಭಸದಿಂದ ಅಬ್ಬರಿಸಿದರೂ, ಅವುಗಳನ್ನು ಲೆಕ್ಕಿಸದೆ ನಕ್ಷತ್ರ ಮಾತ್ರ ತನ್ನ ಗತಿಯಲ್ಲಿಯೇ ಮುಂದುವರಿಯುತ್ತಿರುವ ಹಾಗೆ ಎಂತಹ ವಿಪತ್ತುಗಳು ಬಂದರೂ ಅವುಗಳಿಂದ ವಿಚಲಿತನಾಗದೆ ಸ್ಥಿರವಾಗಿ ಹೋಗುವಂತೆ ಮಾಡಬೇಕೆಂದು ಹೇಳಿದ್ದಾನೆ.

4) ತನ್ನ ಹೃದಯದಲ್ಲಿ ಎಂತಹ ಗತಿಯನ್ನು ತುಂಬು ಎಂದು ಹೇಳಿರುವನು ?

ಉತ್ತರ : ಗುಡುಗು ಸಿಡಿಲುಗಳು ಬಂದರೂ ಲೆಕ್ಕಿಸದೆ, ಅಚಂಚಲದ ನೀರಿಗಾಗಿ ಸದಾ ಹಾರುವ ಗರುಡ ಗತಿಯನ್ನು ತನ್ನ ಹೃದಯಕ್ಕೆ ತುಂಬುವಂತ ಹೇಳಿರುವನು.

ಪ್ರಶ್ನೆ VII. ಈ ಮಾತುಗಳಲ್ಲಿ ಒಂದನ್ನು ಹತ್ತು ವಾಕ್ಯಗಳಷ್ಟಿರುವಂತೆ ವಿಸ್ತರಿಸಿ.

ಉತ್ತರ : 1) ತಾಳಿದವ ಬಾಳಿಯಾನು.

ಮನುಷ್ಯನಲ್ಲಿ ತಾಳ್ಮೆ ಗುಣವಿರಬೇಕು. ಎಂಥಹ ಕಠಿಣ ಪ್ರಸಂಗ ಬಂದರೂ ಧೃತಿಗೆಡದೆ ಶಾಂತ ಸಮಾಧಾನಿಯಾಗಿರಬೇಕು, ಕೋಪದಿಂದ ಉದ್ವೇಗಗೊಳ್ಳಬಾರದು ತಾಳ್ಮೆ ಕಳೆದುಕೊಂಡು ಕೋಪಾವೇಶಕ್ಕೆ ಈಡಾಗಿ ಕಾರ್ಯಮಾಡಿದ್ದೇ ಆದರೆ ಪರಿಣಾಮ ಅನರ್ಥಕಾರಿಯಾಗುವದು. ಸಹನೆಯಿಂದ ಇದ್ದು ಪರೀಕ್ಷಿಸಿ, ಆಲೋಚಿಸಿ ಕೈಕೊಂಡ ಕಾರ್ಯ ಒಳ್ಳೆಯ ಫಲವನ್ನು ನೀಡುವದು. ಎಲ್ಲರಿಗೂ ಶಾಂತಿ ಸಮಾಧಾನ ನೀಡುವದು. ಆದುದರಿಂದ ಸಹನೆಯನ್ನು ರೂಢಿ ಮಾಡಿಕೊಳ್ಳಬೇಕು ನಮ್ಮ ದಿನನಿತ್ಯದ ವ್ಯವಹಾರಗಳಲ್ಲಿ ಎಷ್ಟೋ ತೊಂದರೆಗಳು ಎದುರಾಗುವದು ಸಹಜ. ಅವುಗಳನ್ನು ಗೆಲ್ಲುವದಕ್ಕೆ ಶಾಂತಿ ಅಥವಾ ಸಹನೆಯೇ ಸರಿಯಾದ ಮಾರ್ಗ, ತಾಳಿದವನು ಬಾಳಿಯಾನು ಎಂಬ ಮಾತಿನ ಅರ್ಥವಾದರೂ ಇದೇ ಆಗಿದೆ. ದಿ. ಮಹಾತ್ಮಾಗಾಂಧಿಯುವರು ಶಾಂತಿ ತಾಳ್ಮೆಗಳನ್ನೇ ಜನರಿಗೆ ಬೋಧಿಸಿ ಜನರ ಕಲ್ಯಾಣವನ್ನು ಬಯಸಿದರು.

2) ಬೆಳ್ಳಗಿರುವದೆಲ್ಲ ಹಾಲಲ್ಲ :

ಉತ್ತರ : ಇಂದಿನ ಜನಜೀವನ ಬಹಳೇ ವಿಷಮವಾಗಿದೆ. ಎಲ್ಲೆಲ್ಲಿಯೂ ಸ್ವಾರ್ಥ, ಮೋಸ ವಂಚನೆ, ಭ್ರಷ್ಟಾಚಾರಗಳು ಹೆಚ್ಚುತ್ತಲಿವೆ. ಸ್ವಾರ್ಥಸಾಧನೆಗಾಗಿ ಏನೆಲ್ಲವನ್ನೂ ಉಪಾಯದಿಂದ ಸಾಧಿಸುವದು ಕಂಡುಬರುತ್ತದೆ. ಹೊರಗೆ ಮಿತ್ರರಂತೆ ನಟಿಸಿ ಒಳಗೆ ಶತ್ರುವಿನ ಕಾರಸ್ಥಾನ ನಡೆಸುವವರಿಗೇನೂ ಕೊರತೆಯಿಲ್ಲ. ಎದುರಿನಲ್ಲಿ ಹಿತನುಡಿಗಳನ್ನು ಹೇಳುತ್ತ ಹಿಂದಿನಿಂದ ಕತ್ತು ಕೊಯ್ಯುವವರಿಗೇನೂ ಕಡಿಮೆಯಿಲ್ಲ. ಬಾಯಲ್ಲಿ ಜೇನು ಸುರಿಯುವಂತ ಮಾತು, ಒಳಗೆ ಮಾತ್ರ ಕಾಳಕೂಟ ವಿಷ ಇಂಥವರೇನೂ ಅಪರೂಪವಲ್ಲ. ಮೇಲು ನೋಟಕ್ಕೆ ಎಲ್ಲವೂ ಅಂದ, ಚಂದ, ಒಳಿತು ಕಂಡು ಬಂದರೂ ಒಳಹೊಕ್ಕು ನೋಡಿದಾಗ ಅಪಾಯ ತುಂಬಿತುತ್ತದೆ. ಹಾಲು

ಬೆಳ್ಳಗಿರುವ ಕಾರಣ, ಬೆಳ್ಳಗಿರುವ ಎಲ್ಲ ವಸ್ತುವೂ ಹಾಲು ಆಗ ಲಾರದು. ಇದು ಹೇಗೋ ಒಳಿತಾಗಿ ಕಾಣುವದೆಲ್ಲ ಒಳಿತನ್ನೇ ಮಾಡುತ್ತದೆಂದು ನಂಬುವದು ಸರಿಯಲ್ಲ.

3) ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ :

ಉತ್ತರ : ದೂರದಲ್ಲಿರುವ ಯಾವುದೇ ಬೆಟ್ಟವನ್ನು ನೋಡಿದರೂ ಅದು ನುಣ್ಣಗೆ ಕಾಣುತ್ತದೆ. ಚಂದವಾಗಿ ಕಂಡು ಬರುತ್ತದೆ. ಆದರೆ ಅದರ ಹತ್ತಿರಕ್ಕೆ ಹೋಗಿ ನೋಡಿ ದಾಗ ಅದರಲ್ಲಿ ಕಲ್ಲು ಮುಳ್ಳು ಗಿಡಗಂಟಿಗಳು-ವಿಷಜಂತುಗಳು ಅಪಾಯಕಾರಿ ಪ್ರಾಣಿಗಳು ಕಂಡುಬರುತ್ತವೆ. ಅದರ ಸಮೀ ಪಕ್ಕೆ ಹೋಗುವದು ಕೂಡಾ ಸಾಧ್ಯವಾಗುತ್ತಿರುವದಿಲ್ಲ. ಹಾಗೆ ಮಾಡಿದಲ್ಲಿ ಹಲವಾರು ತೊಂದರೆಗಳನ್ನು ಅನುಭವಿಸಬೇಕಾಗು ತ್ತದೆ ? ಅದಕ್ಕಾಗಿ ನಮ್ಮ ನಿತ್ಯದ ಬದುಕಿನಲ್ಲಿ ಸಹ ಅನೇಕ ಕೆಲಸ ಕಾರ್ಯಗಳು ಮೇಲು ನೋಟಕ್ಕೆ ಚೆನ್ನಾಗಿ ಕಂಡು ಬಂದರೂ ಅವುಗಳಲ್ಲಿ ಅಪಾಯ ಸಂಭವಿಸುವದೂ ಅಷ್ಟೇ ಸತ್ಯ ವಾಗಿರುವದು. ನಾವು ಒಡನಾಡುವ ಅದೆಷ್ಟೋ ಜನರಲ್ಲಿಯೂ ಈ ರೀತಿ ಗುಣ ವಿಶೇಷಗಳನ್ನು ಕಾಣಬಹುದು ಎಲ್ಲರಿಂದಲೂ ನಮಗೆ ಒಳಿತೇ ಆಗುವದೆಂದು ನಂಬಲಾಗದು. ಮೇಲು ನೋಟಕ್ಕೆ ಎಲ್ಲರೂ ಒಳ್ಳೆಯವರೇ, ಆದ್ದರಿಂದ ಒಳ್ಳೆಯದಾಗಿ ಕಾಣುವದೆಲ್ಲವೂ ಒಳ್ಳೆಯದೇ ಎಂದು ಭಾವಿಸಲಾಗದು.

—❁—

## ಕನ್ನಡ

**ಅಕ್ಟೋಬರ-೧೯೮೭ ಪ್ರಥಮ ಪತ್ರಿಕೆ**

ಅವಧಿ : 2 ॥ ಗಂಟೆ ಅಂಕಗಳು : 100

ಪ್ರಶ್ನೆ 1. ಕೆಳಗಿನ ಪ್ರಶ್ನೆಗಳಲ್ಲಿ ಮೂರನ್ನು ಆರಿಸಿ ಕೊಂಡು ಉತ್ತರ ಬರೆಯಿರಿ.

ಉತ್ತರ: ಒಂದು ಪುಟಕ್ಕೆ ಮೀರದಿರಲಿ. 15

1) ಬಸವಣ್ಣನವರು ಎಸಗಿದ ಸಾಮಾಜಿಕ ಕ್ರಾಂತಿ ಯಾವುದು ? ತಿಳಿಸಿ

ಉತ್ತರ : ಬಹುಕಾಲದಿಂದ ಭಾರತೀಯರಲ್ಲಿ ಬೆಳೆದು ಬಂದಿದ್ದ ಜಾತಿ, ಮತ, ಪಂಥಗಳ ಕಟ್ಟುಗಳನ್ನು ಕಿತ್ತಿ ಹಾಕಿ ಶಿವಭಕ್ತರೆಲ್ಲ ಒಂದೇ ಎಂಬ ಸಾಮಾಜಿಕ ಕ್ರಾಂತಿಯನ್ನು ಬಸವಣ್ಣನವರು ಮಾಡಿದರು. ಅದಕ್ಕಾಗಿ "ಅನುಭವ ಮಂಟಪ" ಎಂಬ ವಿಚಾರ ವೇದಿಕೆಯನ್ನು ನಿರ್ಮಿಸಿ ವೈಚಾರಿಕ ಕ್ರಾಂತಿಗೆ ನಾಂದಿ ಹಾಕಿದರು. ದೈವಭಕ್ತರಾದವರೆಲ್ಲರೂ ಕುಲಜರೆಂದು ಸಾರಿದರು. ಶಿವಭಕ್ತರಾಗುವವರಿಗೆ ಲಿಂಗಧಾರಣೆ ಮಾಡುತ್ತಿ ದ್ದರು. ಜಾತಿ ಭೇದವಿಲ್ಲದೆ ವ್ಯವಹಾರ ನಡೆಸಲು ಆರಂಭಿಸಿ ಜನರಲ್ಲಿ ಐಕ್ಯ ಭಾವನೆಯನ್ನು ತಂದರು. ಅಸ್ಪೃಶ್ಯತೆಯನ್ನು ತೊಲಗಿಸಲು ಪ್ರಯತ್ನಿಸಿದರು. ಸರ್ವ ಸಮಾನತೆ ಮತ್ತು ಕಾಯಕದ ಮಹತ್ವವನ್ನು ಬಿಂಬಿಸಿ ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳನ್ನು ತಮ್ಮ ವಚನಗಳ ಮೂಲಕ ಪ್ರಚಾರ ಮಾಡಿದರು. ಈ ವಚನ ಸಾಹಿತ್ಯದಿಂದ ನೂತನ ವಿಚಾರ ಕ್ರಾಂತಿಯನ್ನುಂಟುಮಾಡಿದರು. ಶರಣರ ಮೇಲಿನ ಗೌರವ, ಭಕ್ತನ ನಿಷ್ಠೆ ಮತ್ತು ದೇವನ ಪರ ಇವುಗಳ ಬಗೆಗೆ ನೂತನ ವಿಚಾರಗಳನ್ನೇ ಹರಿಸಿದರು. ಜನಜಾಗ್ರತಿಯನ್ನುಂಟು ಮಾಡಿದರು.

ಬಸವಣ್ಣನವರು ವರ್ಗರಹಿತ, ವರ್ಣಭೇದವಿಲ್ಲದ, ಅಸಮಾನತೆಗಳಿಲ್ಲದ ಕ್ರಾಂತಿಕಾರಕ ಸಮಾಜ ರಚನೆಗೆ ಕೈ ಹಾಕಿ ದರು. ಪುರುಷ-ಸ್ತ್ರೀ ಭೇದವಿಲ್ಲದ, ಹಾರುವ ಅಂತ್ಯಜ ವ್ಯತ್ಯಾಸವಿಲ್ಲದ, ವೃತ್ತಿ ಸಮಾನತೆಯ, ಶೋಷಣೆ ರಹಿತ ಸಮಾಜ ಸ್ಥಾಪನೆಗೆ ಯತ್ನಿಸಿದರು. ಇದು ಬಸವಣ್ಣನವರು ಎಸಗಿದ ಸಾಮಾಜಿಕ ಕ್ರಾಂತಿ.

2) ಅಜಿತ ಸೇನಾಚಾರ್ಯರು ರನ್ನಮಯ್ಯನ ಆಸಕ್ತಿಯನ್ನು ಗುರುತಿಸಿದುದು ಹೇಗೆ ?

ಉತ್ತರ : ವಿದ್ಯಾಪೇಕ್ಷೆಯಿಂದ ಬಂಕಾಪುರಕ್ಕೆ ಬಂದ ರನ್ನಮಯ್ಯನು ಒಂದು ದಿನ ಚೌವ್ವೀಸ ತೀರ್ಥಂಕರರ ಬಸದಿ ಯಲ್ಲಿ ಪ್ರವಚನ ಕೇಳುತ್ತ ಕುಳಿತಿದ್ದನು. ಅಜಿತ ಸೇನಾ ಚಾರ್ಯರು ಪ್ರವಚನ ಹೇಳುತ್ತಿದ್ದರು. ರನ್ನಮಯ್ಯನು ತದೇಕ ಚಿತ್ತದಿಂದ ಆ ಪ್ರವಚನವನ್ನು ಆಲಿಸುತ್ತಿದ್ದನು. ಅವನ ಕಣ್ಣುಗಳು ಅರ್ಧ ಮುಚ್ಚಿಕೊಂಡಿದ್ದವು. ಲಕ್ಷವೆಲ್ಲ ಪ್ರವಚನದಲ್ಲಿ ಕೇಂದ್ರೀಕೃತವಾಗಿತ್ತು. ಜ್ಞಾನಾಮೃತಪಾನಾ ಸಕ್ತಿ ಅವನ ಮುಖದ ಗೆರೆಗೆರೆಯಲ್ಲಿ ಎದ್ದು ಕಾಣುತ್ತಿತ್ತು. ಆಕಸ್ಮಿಕವಾಗಿ ರನ್ನಮಯ್ಯನನ್ನು ಗಮನಿಸಿದ ಅಜಿತಸೇನಾ ಚಾರ್ಯರು ಅವನ ಆಸಕ್ತಿಯನ್ನು ಮೇಲೆ ಹೇಳಿದ ಲಕ್ಷಣ ಗಳಲ್ಲಿ ಗುರುತಿಸಿದರು. ಅವನು ಯಾರು ಎಂದು ತಿಳಿಯಬಯಸಿ ಪ್ರವಚನಾನಂತರ ಶಿಷ್ಯನ ಮೂಲಕ ಕರೆ ಕಳುಹಿದರು.

ಗುರುಗಳಲ್ಲಿ ಆಗಮಿಸಿದ ರನ್ನನ ಮುಖವನ್ನು ಅಜಿತ ಸೇನಾಚಾರ್ಯರು ಸೂಕ್ಷ್ಮವಾಗಿ ನೋಡಿದರು. ವಿಶಾಲ ಹಣೆ, ನೀಳ ಮೂಗು, ತೇಜಸ್ವಿಯಾದ ಕಣ್ಣುಗಳು, ಆತ್ಮ ತೇಜಸ್ಸನ್ನು ಹೊರಸೂಸುವ ಮುಖ ಇವುಗಳನ್ನು ಕಂಡ ಅವರು ತಮ್ಮ ಮನಸ್ಸಿನಲ್ಲಿಯೇ "ಇದು ಮಹತ್ಕಾರ್ಯ

ಸಾಧಿಸುವ ಲಕ್ಷಣವುಳ್ಳ ಮುಖ" ಎಂದುಕೊಂಡರು. ಗುರುಗಳು ನಂತರ ಹಲವಾರು ಪ್ರಶ್ನೆಗಳನ್ನು ಕೇಳಿದರು. ಅವೆಲ್ಲವುಗಳಿಗೆ ರನ್ನನು ಸಮರ್ಪಕವಾಗಿ ಉತ್ತರಕೊಟ್ಟನು. ತನ್ನ ಮನದ ಬಯಕೆಯನ್ನು ಸ್ಪಷ್ಟಪಡಿಸಿದನು. ಹೀಗೆ ಅಜಿತಸೇನಾ ಚಾರ್ಯರು ರನ್ನಯ್ಯನ ಆಸಕ್ತಿಯನ್ನು ಗುರುತಿಸಿದ್ದಲ್ಲದೆ ಸೂಕ್ತ ವ್ಯವಸ್ಥೆ ಸಹ ಮಾಡಿಕೊಟ್ಟರು.

3) ರಾತ್ರಿ ಕಳ್ಳರ ಜೊತೆಯಲ್ಲಿ ವೈದ್ಯರು ನಡೆವಾಗ ಅವರ ಮನದಲ್ಲಿ ಮೂಡಿದ ಭಾವನೆಗಳಾವವು? ವಿವರಿಸಿ.

ಉತ್ತರ : ಯಮದೂತರಂತಹ ಪೇಡರೊಡನೆ ಆ ರಾತ್ರಿ ವೈದ್ಯರು ನಡೆದಾಗ ಅವರ ಮನಸ್ಸಿನಲ್ಲಿ ವಿಧವಿಧವಾದ ಭಾವನೆಗಳು ಮೂಡಿದವು–"ಇವರು ನನ್ನನ್ನು ಕರದೊಯ್ಯುವದರಲ್ಲಿ ಮೋಸವೇನೂ ಇಲ್ಲವಷ್ಟೇ ? ನನ್ನ ಒಡವೆ ವಸ್ತುಗಳೊಂದಿಗೆ ನನ್ನನ್ನೂ ಇಲ್ಲದಂತೆ ಮಾಡಬೇಕೆಂದು ಇದರ ವಿಚಾರವಿದೆಯೋ ಏನೋ! ಹಾಗಾದರೆ ರತ್ನಳ ಗತಿಯೇನು ? ಎಂದು ಯೋಚಿಸುತ್ತ ನಡೆದಿದ್ದರು. ತಮ್ಮ ಮನೆಯಲ್ಲಿ ಕಳುವಾದ್ದರಿಂದ ಪೊಲೀಸರ ಸಂಶೋಧನೆಯಿಂದ ಇವರು ತಮ್ಮನ್ನು ಹೀಗೆ ಪೀಡಿಸುತ್ತಿರಬಹುದೇ? ಸೇಡು ತೀರಿಸಿಕೊಳ್ಳುವ ಉಪಾಯವೇ? ಎಂದು ಅನೇಕ ರೀತಿಯಾಗಿ ಮನಸ್ಸಿನಲ್ಲಿ ವಿಚಾರಿಸುತ್ತ ವೈದ್ಯರು ಆ ಕಳ್ಳರ ಜೊತೆ ನಡೆದಿದ್ದರು.

4) ಪತಿಯ ಬಗೆಗೆ ಗರತಿಯಲ್ಲಿ ಯಾವ ಅಭಿಮಾನಗಳು ಎದ್ದು ಕಾಣುತ್ತವೆ ?

ಉತ್ತರ : ಪತಿಯ ಬಗೆಗೆ ಗರತಿಯಲ್ಲಿ ಉದಾತ್ತ ಭಾವನೆಗಳಿವೆ. ತನ್ನ ಪತಿ ಬಡವನೆಂದು ಕೊರಗುವದಿಲ್ಲ. "ಕೂಲಿ ಮಾಡಿದರೇನ, ಕೋರಿ ಹೊತ್ತರೇನ ನಮಗ ನಮರಾಯನ ಬಡವೇನ" ಎನ್ನುತ್ತಾಳೆ. ಗರತಿಗೆ ಬಡತನ ಗೌಣ. ಪತಿಯೇ ಬಂಗಾರ ಅವಳಿಗೆ, ಪ್ರೇಮವೇ ದೇವತೆ. ಪತಿಯಲ್ಲಿ ಸರ್ವ ಭಾಗ್ಯವನ್ನು ಕಾಣುತ್ತಾಳೆ. ಪತಿಯೇ ಸರ್ವಸ್ವ ಎಂದು ಅಭಿಮಾನಪಡುತ್ತಾಳೆ. ಆಳವಾದ ಪತಿಭಕ್ತಿ ಗರತಿಯದು.

5) ಹರಿಹರನು ಶಿವಪೂಜೆಗಾಗಿ ಬೇಕಾದ ಪತ್ರಿ–ಪುಷ್ಪಗಳನ್ನು ಬಯಸಿ ಮರಗಿಡ ಬಳ್ಳಿಗಳನ್ನು ಹೇಗೆ ಬೇಡಿದನು?

ಉತ್ತರ: ಹರಿಹರನು ಒಂದೊಂದು ಬಳ್ಳಿಯ ಹತ್ತಿರ ನಿಂತ–"ತಾಯಿ ಶಿವನ ಅರ್ಚನೆಗೆ ಹೂವನ್ನು ಕೊಡು" ಎಂದು ಕೈ ಚಾಚುತ್ತಾನೆ. ಸಂಪಿಗೆಯ ಮರಕ್ಕೆ ಬಂದು "ಏನವ್ವ ಸಂಪಿಗೆಯೆ, ಶಿವನ ಶ್ರೀಮುಡಿಗೆ ನೀನು ಒಂದು ಹೊಸ ಹೂವನ್ನು ನೀಡು,. ಹೀನ ಮನದವನೆಂದು ತಿಳಿಯಬೇಡ ನವ ಪುಷ್ಪಗಳನ್ನು ನೀಡವ್ವ ನೀಡು" ಎಂದು ಕೇಳಿಕೊಂಡು ಹೂಗಳನ್ನು ಆಯ್ದುಕೊಂಡು ಮುಂದೆ ಮಲ್ಲಿಗೆ, ಮಾಧವಿ ಇತ್ಯಾದಿ ಹೂಗಳನ್ನು ಆಯ್ದುಕೊಳ್ಳುತ್ತಾನೆ. ಕೇದಿಗೆಯ ಹತ್ತಿರ ಬಂದು– ಹೊರಗೆ ಮುಳ್ಳು ಒಳಗೆ ಕಂಪು ಇದು ನಿನ್ನ ರೀತಿ,ನೀನು ಶಿವನ ಗುಪ್ತ ಭಕ್ತನಂತಿದ್ದು ದಿಕ್ಕುದಿಕ್ಕಿಗೆ ಬೀರುವ ಸುಗಂಧದ ಪರಿಮಳವೇ ಗರಿ ರೂಪವನ್ನು ತಾಳಿದಂತಿರುವೆ, ಎಂದು ಅಚ್ಚರಿಪಡುತ್ತ ಅದನ್ನು ಕೊಯ್ದುಕೊಳ್ಳುತ್ತಾನೆ. ನಂತರ ದವನದ ಬಳಿ ಬಂದು ಅದನ್ನು ಶಿವನ ಪರಿಮಳದ ಹಬ್ಬವೆಂದೂ, ಲೋಕದಲ್ಲಿ ಸರಿಸಾಟಿಯಿಲ್ಲದ ಸೌರಭಸಾರವುಳ್ಳದ್ದೆಂದೂ ಬಣ್ಣಿಸಿ ಅದನ್ನು ಪಡೆದುಕೊಂಡು ಹೂಗೊಳಕ್ಕೆ ಬಂದು ಕಮಲನನ್ನೂ ನೈದಿಲೆಯನ್ನೂ ತೆಗೆದುಕೊಳ್ಳುತ್ತಾನೆ. ಹೀಗೆ ಹರಿಹರನು ಪ್ರತಿಯೊಂದು ಮರದ ಗಿಡ ಬಳ್ಳಿಯೆಡೆಗೆ ಹೋಗಿ, ನಿಂತು ಕೂಗಿ ಕರೆದು ಬೇಡಿ, ತಾಯೆ ಶಿವನ ಅರ್ಚನೆಗೆ ಪತ್ರಿ–ಪುಷ್ಪಗಳನ್ನು ಕೊಡು ಎಂದು ಬೇಡುತ್ತಾನೆ.

ಪ್ರಶ್ನೆ 2. ಒಂದೊಂದು ಪುಟಕ್ಕೆ ಮೀರದಂತೆ ಈ ಕೆಳಗಿನ ಪ್ರಶ್ನೆಗಳಲ್ಲಿ ಯಾವುದಾದರೂ ಎರಡಕ್ಕೆ ಉತ್ತರ ಬರೆಯಿರಿ. 10

1) ವಚನಾಮೃತದಲ್ಲಿ ಒಡಮೂಡಿರುವ ಬಸವಣ್ಣನವರ ನೀತಿ ತತ್ವ ಭಕ್ತಿಗಳನ್ನು ತಿಳಿಸಿ.

ಉತ್ತರ : (1985 ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆಯ 3 ರ ಉತ್ತರ ನೋಡಿರಿ.)

2) ಕವಿ ವರ್ಣಿಸಿರುವಂತೆ ಸುಖ ಜೀವನದ ಲಕ್ಷಣಗಳೇನು ?

ಉತ್ತರ : (1985 ಅಕ್ಟೋಬರ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆಯ 2 ರ ಉತ್ತರ ನೋಡಿರಿ.)

3) ಕನ್ನಡ ಲಿಪಿಯ ಸೌಂದರ್ಯವನ್ನು ವಿವರಿಸಿರಿ.

ಉತ್ತರ : (1987 ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆಯ 3 ರ ಉತ್ತರ ನೋಡಿರಿ.)

4) ಕರ್ಣನು ಕುಂತಿಯ ಮಾತಿಗೆ ಕೊಟ್ಟ ಉತ್ತರವನ್ನು ಸಂಗ್ರಹವಾಗಿ ನಿಮ್ಮ ಸ್ವಂತ ಮಾತಿನಲ್ಲಿ ಬರೆಯಿರಿ.

ಉತ್ತರ: (1984 ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 3 ರ ಉತ್ತರ ನೋಡಿರಿ.)

ಪ್ರಶ್ನೆ 3. ಅ) ಕೆಳಗಿನ ಪದ್ಯದ ಸಾರಾಂಶವನ್ನು ಬರೆಯಿರಿ.

ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿ ನೀರನೆರೆದವ
ರಾರಯ್ಯ

ಕಬ್ಬು ಬಾಳೆ ಹಲಸು ನಾರಿವಾಳಕ್ಕೆ ಸಿಹಿ ನೀರ ನೆರೆದವ
ರಾರಯ್ಯ
ಕಳವೆ ಶಾಲಿಗೆ ಓಗರದ ಉದಕವ ನೆರೆದವರಾರಯ್ಯ
ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ ಪರಿಮಳದುದಕವ
ನೆರೆದವರಾರಯ್ಯ
ಇಂತೀ ಜಲವು ಒಂದೇ, ನೆಲವು ಒಂದೇ, ಆಕಾಶವು
ಒಂದೆ.

ಉತ್ತರ : ಕಿತ್ತಳೆ, ನಿಂಬೆ, ಮಾವು, ಮಾದ ಇವುಗಳಿಗೆಲ್ಲ ಹುಳಿ ನೀರನ್ನು ಹಣಿಸುವವರು ಯಾರು? ಕಬ್ಬು, ಬಾಳೆ, ಹಲಸು, ತೆಂಗು ಇವುಗಳಿಗೆ ಸಿಹಿ ನೀರನ್ನು ಯಾರು ಎರೆದರು? ಭತ್ತಕ್ಕೆ ಅನ್ನವಾಗುವಂಥ ನೀರನ್ನು ಹಾಕಿದವರು ಯಾರು? ಮರುಗ, ಮಲ್ಲಿಗೆ, ಪಚ್ಚೆ, ಮುಡಿವಾಳ (ಒಂದು ಜಾತಿಯ ಸುಗಂಧ ಸಸ್ಯ) ಮೊದಲಾದ ಸುಗಂಧ ಬೀರುವ ಸಸ್ಯಗಳಿಗೆ ಪರಿಮಳದ ನೀರನ್ನು ಹಾಕಿದವರು ಯಾರು? ಹೀಗೆ ಇವೆಲ್ಲವು ಗಳಿಗಿದ್ದ ನೀರು ಒಂದೇ, ನೆಲ ಒಂದೇ, ಆಕಾಶವೂ ಒಂದೇ.

(ಬ) ಕೆಳಗಿನ ಹಳಗನ್ನಡ ಗದ್ಯ ಭಾಗವನ್ನು ಹೊಸ ಗನ್ನಡಕ್ಕೆ ಅನುವಾದಿಸಿರಿ.

ಅನ್ನೆಗಮೊರ್ಮೆ ರಾಯನೊಡ್ಡೋಲಗಂಗೊಟ್ಟು ಅಣುಗಿ
ವೆರಸಿರ್ಪಿನಂ;
ಪೊಗೆಯುಲುದಗ್ಗಿಯ ಪೊಳೊಂದೆಡೆಯೊಳ್,
ಕಣ್ಬುಗೊಂಡ
ನೇಸರುವೋಲ್ ವೆಲುತೊಂದೆಡೆಯೊಳ್, ಬೆಳಗುವ
ನಾರದ ಪರ್ವತರೆಂಬಿರ್ವರ್ ಮುನಿಗಳ್ ಏಕಕಾಲದೊ
ಳಾಗಸ
ದತ್ತಣಿಂ ನಂಬರೀಷನರಮನಗೆಯ್ತಂದರ್.

ಉತ್ತರ : (1985 ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 3 ನೇ ಪ್ರಶ್ನೆ (ಬ) ಉತ್ತರವನ್ನು ನೋಡಿರಿ). 3

ಪ್ರಶ್ನೆ 4. ಕೆಳಗಿನ ಪದ್ಯಗಳನ್ನು ಪೂರ್ಣಗೊಳಿಸಿರಿ.

1) ನಡೆವುದೊಂದೆ................ 4
................ಗೋತ್ರ.
........................ಣದು? ಸರ್ವಜ್ಞ.

2) ಕಪಟ....................
................
................ನಿತ್ಯದಿ
ಉಪವಾಸ............ಫಲ.

ಉತ್ತರ : (ನಿಮ್ಮ ಪಠ್ಯಪುಸ್ತಕ ಪದ್ಯಭಾಗ 15ನೇ ಪಾಠ ದಲ್ಲಿ ನೋಡಿರಿ). 5

ಪ್ರಶ್ನೆ : 5. ಇವರಲ್ಲಿ ಇಬ್ಬರ ಕಾಲ, ಸ್ಥಳ ಮತ್ತು ಕೃತಿಗಳನ್ನು ತಿಳಿಸಿ.

1) ಕುಮಾರವ್ಯಾಸ. 2) ಪಂಪ. 3) ದುರ್ಗಸಿಂಹ.

ಉತ್ತರ : (1 ಕುಮಾರವ್ಯಾಸ:– 1985 ಆಕ್ಟೋಬರ ಪ್ರಶ್ನೆ ಪತ್ರಿಕೆ 5ನೇ ಪ್ರಶ್ನೆ 1 ರ ಉತ್ತರ ನೋಡಿರಿ.)

2) ಪಂಪ:–

ಉತ್ತರ : ಇವನು ಕನ್ನಡದ ಆದಿಕವಿಯೆಂದು ಖ್ಯಾತ ನಾಗಿದ್ದಾನೆ. ಇವನ ಕಾಲ 10ನೇ ಶತಮಾನ. ವೆಂಗಿ ಮಂಡಳ ದಲ್ಲಿರುವ ವೆಂಗಿದಳು ಇವನ ಊರು. ಇವನು ಚಾಲುಕ್ಯ ದೊರೆ ಅರಿಕೇಸರಿಯ ಆಸ್ಥಾನಕವಿಯೂ, ದಂಡನಾಯಕನೂ ಆಗಿದ್ದನು. ಕವಿಚಕ್ರವರ್ತಿ ಎಂಬ ಬಿರುದನ್ನು ಪಡೆದಿದ್ದ. "ಕವಿತಾ ಗುಣಾರ್ಣವ" "ಸಂಸಾರ ಸಾರೋದಯ" ಇವೂ ಇವನ ಬಿರುದು ಗಳು "ವಿಕ್ರಮಾರ್ಜುನ ವಿಜಯ" "ಆದಿಪುರಾಣ" ಇವು ಅವನ ಎರಡು ಅಮರ ಕೃತಿಗಳು.

ದುರ್ಗಸಿಂಹ:– ಇವನು ಸೈಮಡಿ (ಸವಡಿ) ಗ್ರಾಮದ ವನು. ಈತನ ಕಾಲ 11 ನೇ ಶತಮಾನ. ವಸುಭಾಗಭಟ್ಟನ ಪಂಚತಂತ್ರ ಕಥೆಯನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ಇದು ಚಂಪೂ ಶೈಲಿಯಲ್ಲಿದೆ. ಇವನು ಚಾಲುಕ್ಯ ದೊರೆಯಾಗಿದ್ದ ಜಗದೇಕಮಲ್ಲನಲ್ಲಿ ಸಂಧಿ ವಿಗ್ರಹಿಯಾಗಿದ್ದನು.

ಪ್ರಶ್ನೆ 6. ಕೆಳಗಿನ ವಾಕ್ಯಗಳ ಸಂದರ್ಭ ಮತ್ತು ಸ್ವಾರಸ್ಯವನ್ನು ತಿಳಿಸಿ.

1) "ಕೃಷ್ಣನ ಆಟವು ಆ ಮದೋನ್ಮತ್ತರ ಎದುರಿನಲ್ಲಿ ನಡೆಯಲಿಲ್ಲ" 8

ಉತ್ತರ: ಈ ಮಾತನ್ನು "ಕುಡಿತದ ಕೆಡಕುಗಳು" ಎಂಬ ಪಾಠದಿಂದ ಆಯ್ದುಕೊಂಡಿದೆ. ಮಹಾಭಾರತದಲ್ಲಿ ಯಾದವರು ಮದ್ಯಪಾನದಿಂದ ಉನ್ಮತ್ತರಾಗಿ, ಬಾಯಿಗೆ ಬಂದಂತೆ ಮಾತ ನಾಡಿ, ತನ್ನ ತಂದೆ ತಾಯಿ ಒಡಹುಟ್ಟಿದವರೆನ್ನದೆ ಒಬ್ಬರಿಗೊಬ್ಬರು ಜಗಳಾಡಿ, ಮದ್ಯದ ಅಮಲಿನಲ್ಲಿ ಹೊಡೆದಾಡಿ ಬೆಂಕಿಯಲ್ಲಿ ಬಿದ್ದ ಪತಂಗಗಳಂತೆ ಸತ್ತರು. ಆಗ ಅವರ ಎದುರಿನಲ್ಲಿ ಕೃಷ್ಣನ ಆಟವೂ ಸಹ ನಡೆಯಲಿಲ್ಲವೆಂದು ಲೇಖಕರು ಹೇಳುತ್ತಾರೆ. ಮದ್ಯಪಾನದಿಂದ ಕೆಡಕುಗಳಾಗುತ್ತವೆಂಬುದು ಅಭಿಪ್ರಾಯ.

2) "ಎಷ್ಟು ಸುಖಿ ಅವು; ಎಷ್ಟೊಂದು ಸಂತೃಪ್ತವು"

ಉತ್ತರ: ಈ ಮಾತು ಕವಿ ಶ್ರೀ ಜಿ. ಎಸ್. ಸಿದ್ಧಲಿಂಗಯ್ಯನವರ "ಪ್ರಾಣಿಗಳು" ಎಂಬ ಕವನದಲ್ಲಿ ಬಂದಿದೆ. ಕವಿಯು ಮನುಷ್ಯರ ಅಸಹಜ ಬದುಕಿಗೆ ಸ್ವಾರ್ಥತೆಗೆ ಬೇಸತ್ತು

ಪ್ರಾಣಿಗಳ ಜೊತೆಯಲ್ಲಿ ಇದ್ದು ಜೀವಿಸಲು ಇಚ್ಛಿಸುತ್ತಾನೆ. ಆ ಸಂದರ್ಭದಲ್ಲಿ ಕವಿ–"ಎಷ್ಟು ಸುಖಿ ಅವು; ಎಷ್ಟೊಂದು ಸಂತೃಪ್ತವು" ಎಂದು ಉದ್ಗಾರ ತೆಗೆದಿದ್ದಾನೆ. ಪ್ರಾಣಿ ಜೀವನ ಹಾಗೂ ಮನುಷ್ಯ ಜೀವನದ ವ್ಯತ್ಯಾಸವನ್ನು ಕವಿ ಗುರುತಿಸಿದ್ದಾನೆ. ಮನುಷ್ಯ ಏನೆಲ್ಲ ಸೌಕರ್ಯಗಳನ್ನು ಪಡೆದು ಪ್ರಗತಿ ಸಾಧಿಸಿದ್ದಾನೆ. ಆದರೆ ಆತನಿಗೆ ಸುಖ, ಸಂತೃಪ್ತಿ ಎಂಬುದಿಲ್ಲ. ಆದರೆ ಅದೇ ಪ್ರಾಣಿಗಳಿಗೆ ಇರದಿದ್ದಾಗಲೂಅವು ಸುಖಿಗಳಾಗಿವೆ, ಸಂತೃಪ್ತವಾಗಿವೆ ಎಂಬುದೇ ಇಲ್ಲಿಯ ಕವಿಯ ಅಭಿಪ್ರಾಯ.

3) "ಸರಿ ನಿನ್ನಂತಹ ಸಾಧುಕೋಣ ಸಿಕ್ಕಿರುವುದು ಆ ಕಪಿಯ ಪುಣ್ಯ"

ಉತ್ತರ : ಈ ವಾಕ್ಯವನ್ನು "ಕಾಡುಕೋಣ" ಎಂಬ ಗದ್ಯ ಪಾಠದಿಂದ ಆಯ್ದುಕೊಳ್ಳಲಾಗಿದೆ. ಕಪಿಯು ಕಾಡು ಕೋಣವನ್ನು ಪೀಡಿಸುವದನ್ನು ಕಂಡು ವೃಕ್ಷದೇವತೆಗೆ ಬೇಜಾರು ಬಂದಿತು. ಅದು ಆ ಕಪಿಯನ್ನು ಕೊಂದು ಹಾಕುವಂತೆ ಸಲಹೆ ಮಾಡಿತು, ಆದರೆ ಕೋಣವು ಅನೇಕ ಜನ್ಮಾಂತರಗಳಲ್ಲಿ ಮಾಡಿದ ಹಿಂಸೆಗಳಿಗೆ ಹೋಲಿಸಿದಾಗ ಕಪಿಯು ಮಾಡುವ ಹಿಂಸೆ ಮರಳು ಕಣದಷ್ಟು; ಅಲ್ಲದೆ ತಾನು ಕ್ಷಮಾಗುಣವನ್ನು ಆಚರಿಸುವ ಪ್ರತಿಜ್ಞೆ ಮಾಡಿರುವದಾಗಿ ಹೇಳಿತು. ಆಗ ವೃಕ್ಷ ದೇವತೆಯು "ಸರಿ ನಿನ್ನಂತಹ ಸಾಧುಕೋಣ ಸಿಕ್ಕಿರುವುದು ಆ ಕಪಿಯ ಪುಣ್ಯ" ಎಂದಿತು.

4) "ಬಸವನಾ ಹುಳುವಾಗಿ ಬೆಳ್ಳಿ ದಾರಿಯಕೊರೆದೆ"

ಉತ್ತರ : ಈ ವಾಕ್ಯವನ್ನು "ಹಳಕಟ್ಟಿಯವರನ್ನು ನೆನೆದು" ಎಂಬ ಕವನದಿಂದ ಆಯ್ದುಕೊಳ್ಳಲಾಗಿದೆ. ವಚನ ಪಿತಾಮಹರೆನಿಸಿದ ಹಳಕಟ್ಟಿಯವರು ಯಾವ ಸದ್ದುಗದ್ದಲವಿಲ್ಲದೆ ವಚನಗಳನ್ನು ಸಂಗ್ರಹಿಸುವ ಅಮೂಲ್ಯ ಕಾರ್ಯ ಮಾಡಿದರು. ಬಸವನ ಹುಳು ನಿಧಾನವಾಗಿ ತನ್ನ ಗುರಿಯತ್ತ ಸಾಗುವಂತೆ ಇವರು ತಮ್ಮ ಕಾರ್ಯದಲ್ಲಿ ತತ್ಪರರಾಗಿದ್ದರು. ಬಸವ ಭಕ್ತರಾಗಿದ್ದುಕೊಂಡು ತಮ್ಮ ಕಾರ್ಯದಲ್ಲಿ ಅತ್ಯಂತ ನಿಷ್ಠೆ ಹೊಂದಿ ಬೆಳಕು ಬೀರುವ ಹಾಗೆ ಬಾಳಿದರು. ಬೆಳ್ಳಿ ದಾರಿ ಕೊರೆದರು.

ಪ್ರಶ್ನೆ 7. ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

1) ಕೈಲಾಸ ದೇವಾಲಯದ ಹಿರಿಮೆಯನ್ನು ತಿಳಿಸಿ.

ಉತ್ತರ : ಎಲ್ಲೋರಾದ ದೇವಾಲಯಗಳಲ್ಲೆಲ್ಲಾ ಕೈಲಾಸ ದೇವಾಲಯ ತುಂಬ ವಿಶಿಷ್ಟವಾದುದು. ಒಂದೇ ಬಂಡೆಯಲ್ಲಿ ಕೊರೆದ ಅದ್ಭುತ ಶಿಲ್ಪ ಕೃತಿ ಇದಾಗಿದೆ. ಇದನ್ನು ರಾಷ್ಟ್ರಕೂಟರದೊರೆ ಕೃಷ್ಣರಾಮನು ಕ್ರಿ. ಶ. 730 ರಲ್ಲಿ ಕೊರೆಯಿಸಿದ್ದನು. ಎರಡು ಅಂತಸ್ತಿನಲ್ಲಿ ಛಾವಣಿ, ಕಂಬಗಳು, ಗೋಪುರ ಮುಂತಾದುವನ್ನು ಕೊರೆದಿರುವದು ಅದ್ಭುತ ಸಾಹಸವೇ ಸರಿ. ಸುತ್ತಲ ಕೈಸಾಲೆಯಲ್ಲಿ ಶಿವ, ವಿಷ್ಣು ಮತ್ತು ಶಕ್ತಿಗಳಲೀಲೆಗಳನ್ನು ಆನೆ ಶಾರ್ದೂಲಗಳ ಸಾಲುಗಳನ್ನು ಕೆತ್ತಿದ್ದಾರೆ. ಮುಂದಿನ ನಂದಿ ಮಂಟಪದಲ್ಲಿ ರಾಮಾಯಣ, ಮಹಾಭಾರತ ಕಥೆಗಳನ್ನು ಚಿತ್ರಿಸುವ ಸುಂದರ ಚಿತ್ರಗಳನ್ನು ಕೆತ್ತಿದ್ದಾರೆ, ರಾವಣನು ಕೈಲಾಸವನ್ನು ಎತ್ತುತ್ತಿರುವ ಚಿತ್ರ ಬಹು ರಮ್ಯವಾಗಿದೆ.

2) ತಂದೆ—ತಾಯಿ ಭಾಗೀರಥಿಗೆ ಯಾವ ಭರವಸೆಯನ್ನು ಕೊಟ್ಟರು ?

ಉತ್ತರ : ಭಾಗೀರಥಿಯನ್ನು ಕೆರೆಗೆ ಹಾರಕೊಡುವ ಮಾತಾದ ಬಳಿಕ ಅವಳು ತಂದೆ—ತಾಯಿಗಳನ್ನು ಕಾಣಲು ತವರಿಗೆ ಹೋದಳು. ಅನಿರೀಕ್ಷಿತವಾಗಿ ಬಂದ ಭಾಗೀರಥಿಯನ್ನು ಕಂಡು, ಅವಳ ಕಣ್ಣಲ್ಲಿ ನೀರನ್ನು ಕಂಡು ಅವಳ ತಂದೆ—ತಾಯಿಗಳಿಗೆ ಆಶ್ಚರ್ಯವಾಯಿತು. ಅವರು ಅದಕ್ಕೆ ಕಾರಣ ಕೇಳಲು ಭಾಗೀರಥಿಯು ನಿಜ ಕಾರಣ ತಿಳಿಸದೆ ತನ್ನ ಅತ್ತೆ–ಮಾವಂದಿರು ತನ್ನನ್ನು ಬೇರೆ ಇಡುವದಾಗಿ ಸುಳ್ಳು ಹೇಳುವಳು. ಆಗ ಅವಳ ತಂದೆ ಮಗಳಿಗೆ ಧೈರ್ಯ ಕೊಡುವದಕ್ಕಾಗಿ, ಸಾಂತ್ವನಗೊಳಿಸುವದಕ್ಕಾಗಿ "ಇಟ್ಟರೆ ಇಡಲೇಳು ಹೊಲಮನಿ ಕೊಡತೇನು" ಎಂದು ಹೇಳುವರು. ತಂದೆ ಹೊಲವನ್ನೂ ತಾಯಿ ಒಲೆಯನ್ನೂ ಕೊಡುವದಾಗಿ ಧೈರ್ಯ ಹೇಳಿದರು.

3) ವೈದ್ಯರು ಚಿಕ್ಕಮಕ್ಕಳಂತೆ ಏಕೆ ಕುಣಿದಾಡಿದರು ? ತಿಳಿಸಿ.

ಉತ್ತರ : ವೈದ್ಯರು ಭೀಮನಾಯಕನ ಮಗನ ಚಿಕಿತ್ಸೆಗಾಗಿ ಯಾವುದೋ ಬೇಕಾಗಿರುವ ತೊಪ್ಪಲನ್ನು ಪಂಜಿನ ಬೆಳಕಿನಲ್ಲಿ ಆ ರಾತ್ರಿ ಕಾಡಿನಲ್ಲಿ ಹುಡುಕುತ್ತಿದ್ದರು. ಆ ಬೇಕಾದ ತೊಪ್ಪಲು ಬಹಳ ಸಮಯದ ನಂತರ ಅವರಿಗೆ ದೊರೆಯಿತು. ಅದರ ಔಷಧಿಯಿಂದ ಮಗುವು ಬದುಕುವದೆಂಬ ಸಂತೋಷ ಹೊಂದಿ ಚಿಕ್ಕಮಕ್ಕಳಂತೆ ಕುಣಿದಾಡಿದರು.

4) ಫಾರಡೆಯ ಮುಖ್ಯ ಸಂಶೋಧನೆಗಳಾವುವು?

ಉತ್ತರ : ಅಯಸ್ಕಾಂತದಿಂದ ವಿದ್ಯುತ್ ಪ್ರಚೋದನೆ, ವಿದ್ಯುತ್ ಪ್ರವಾಹದಿಂದ ವಸ್ತು ವಿಭಜನೆ ಇವು ಸಾಧ್ಯ ಎಂಬುದೇ ಫಾರಡೆಯ ಮುಖ್ಯ ಸಂಶೋಧನೆಗಳು. ಅಲ್ಲದೆ ವಿದ್ಯುದ್ದೀಪ, ವಿದ್ಯುತ್ ಮೋಟಾರು, ಡೈನಾಮೋ ಇವೆಲ್ಲವೂ ಫಾರಡೆ ಪಡೆದ ಹೊಸ ಜ್ಞಾನದ ಕೊಡುಗೆಗಳಾಗಿವೆ

5) ಚೆನ್ನಮ್ಮ ರಾಜಾರಾಮನನ್ನು ಹೇಗೆ ಕಾಪಾಡಿದಳು ?

ಉತ್ತರ : ರಾಜಾರಾಮನು ತನ್ನ ಹಗೆಯಿಂದ ತಪ್ಪಿಸಿಕೊಂಡು ಕರ್ನಾಟಕಕ್ಕೆ ಬಂದು ಕೆಳದಿಯ ರಾಣಿ ಚನ್ನಮ್ಮಾಜಿಯನ್ನು ಮೊರೆ ಹೊಕ್ಕನು. ತನ್ನನ್ನು ಗುಪ್ತವಾಗಿ ಚಂಡೀಗಡಕ್ಕೆ ತಲುಪಿಸಬೇಕೆಂದನು. ರಾಣಿಯು ತನ್ನ ಮಂತ್ರಿಗಳೊಡನೆ ಆಲೋಚಿಸಿ ಮೊರೆಹೊಕ್ಕವರನ್ನು ರಕ್ಷಿಸುವದು ರಾಜಧರ್ಮ ಎಂದಳು. ರಾಜಾರಾಮನಿಗೆ ವೇಷಾಂತರ ಮಾಡಿಸಿ, ಕಾವಲು ದಳದೊಂದಿಗೆ ಗುಟ್ಟಾಗಿ ತನ್ನ ರಾಜ್ಯದಿಂದ ಚಂಡೀಗಡಕ್ಕೆ ತಲುಪಿಸಿದಳು. ಹೀಗೆ ರಾಜಾರಾಮನನ್ನು ಚೆನ್ನಮ್ಮಾಜಿ ಕಾಪಾಡಿದಳು.

ಪ್ರಶ್ನೆ 8. "ಪೊನ್ನ ತಾಳ್ಗಳ್ ಸೊಳೊಳ್ ಬೀಳ್ವಂತೆ ಬಿಳ್ದರ್ ಮಕುಟ ಮಣಿಗಣ ದ್ಯೋತಿಸಾರರ್ ಕುಮಾರರ್" ಇಲ್ಲಿ ಕಂಡುಬರುವ ಅಲಂಕಾರವನ್ನು ಹೆಸರಿಸಿ ಸಮನ್ವಯಿಸಿರಿ." 3

ಉತ್ತರ : (1984 ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 8 ನೇ ಪ್ರಶ್ನೆ ಉತ್ತರ ನೋಡಿರಿ.)

ಪ್ರಶ್ನೆ 9. ಕೆಳಗಿನ ಪದ್ಯ ಭಾಗಕ್ಕೆ ಪ್ರಸ್ತಾರ ಹಾಕಿ ಗಣವನ್ನು ವಿಂಗಡಿಸಿ ಛಂದಸ್ಸಿನ ಹೆಸರನ್ನು ಬರೆಯಿರಿ. 3

ಘನ ಸತ್ಯ ಮಯನಪ್ಪ ನೀಂ ಪರ್ವತದಲಿಪ್ಪೆ
ನೆನೆ ನಿನ್ನ ಕಾಣಲೆಂದಾನಿಲ್ಲಿಗೈತಂದೊ
ಡ ನಿಮಿತ್ತ ಮುನಿದ ನಂತ ಡುಗುವರೆ ಹಿಂದೆ
ಕೆಯ್ಯೊಳಗೆ ತೋರಿದ ನಿಜವನು ।

ಉತ್ತರ : ( 1986 ಅಕ್ಟೋಬರ ಕನ್ನಡ ಪ್ರಥಮ ಪತ್ರಿಕೆ 9 ನೇ ಪ್ರಶ್ನೆ ಉತ್ತರ ನೋಡಿರಿ. )

ಪ್ರಶ್ನೆ 10. ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯಗಳಲ್ಲಿ ಬಳಸಿರಿ. 3

1) ಅಂತರಾಳ. 2) ಕೇಂದ್ರೀಕರಿಸು. 3) ಸರ್ವವಿದಿತ.

ಉತ್ತರ : 1) ಆತನ ಮನಸ್ಸಿನ ಅಂತರಾಳದಲ್ಲಿ ಏನಿದೆ ಎಂಬುದು ತಿಳಿಯುವಂತಿಲ್ಲ.

2) ನೀವು ನಿಮ್ಮ ಲಕ್ಷವನ್ನು ವಿಷಯದ ಕಡೆಗೆ ಕೇಂದ್ರೀಕರಿಸಿರಿ.

3) ನೀನು ಹೇಳಿದ ಮಾತಿನಲ್ಲಿ ಆಶ್ಚರ್ಯವೇನೂ ಇಲ್ಲ; ಅದು ಸರ್ವವಿದಿತ.

ಪ್ರಶ್ನೆ 11. ಅ) ವಿಗ್ರಹವಾಕ್ಯ ಬರೆದು ಸಮಾಸದ ಹೆಸರನ್ನು ತಿಳಿಸಿರಿ. 3

1) ಬಿಳಿದಾವರೆ. 2) ಮುಂಗೈ. 3) ವೃಕೋದರ.

ಉತ್ತರ : 1) ಬಿಳಿದಾವರೆ = ಬಿಳಿದಾದ + ತಾವರೆ (ಕರ್ಮಧಾರಯ ಸಮಾಸ)

2) ಮುಂಗೈ = ಕೈಯ ಮುಂದು (ಅಂಶಿ ಸಮಾಸ)

3) ವೃಕೋದರ = ವೃಕದಂತೆ ಉದರವಿದ್ದವನು ಯಾವನೋ ಅವನು. ( ಬಹುವ್ರೀಹಿ ಸಮಾಸ)

ಬ) ಸಂಧಿಯನ್ನು ವಿಂಗಡಿಸಿ ಹೆಸರಿಸಿರಿ.

1) ಒಂದರ್ಥ. 2) ಬೆಟ್ಟದಾವರೆ.

3) ಅಷ್ಟೈಶ್ವರ್ಯ.

ಉತ್ತರ : 1) ಒಂದು + ಅರ್ಥ = ಒಂದರ್ಥ (ಸ್ವರಲೋಪ ಸಂಧಿ)

2) ಬೆಟ್ಟದ + ತಾವರೆ = ಬೆಟ್ಟದಾವರೆ ( ಗದಬಾದೇಶ ಸಂಧಿ )

3) ಅಷ್ಟ + ಐಶ್ವರ್ಯ = ಅಷ್ಟೈಶ್ವರ್ಯ ( ಎಣ್ ಸಂಧಿ )

ಕ) ಕೆಳಗಿನ ಶಬ್ದಗಳಿಗೆ ತತ್ಸಮಕ್ಕೆ ತದ್ಭವ–ತದ್ಭವಕ್ಕೆ ತತ್ಸಮ ಬರೆಯಿರಿ.

1) ಸಾಸ. 2) ಸಂಸ್ಕೃತ. 3) ಭ್ರಮೆ.

ಉತ್ತರ : 1) ಸಾಹಸ. 2) ಸಕ್ಕದ. 3) ಬೆವ್ವೆ

ಪ್ರಶ್ನೆ 12. ಅ) ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ. 5

1) ಪುರಂದರದಾಸರು ತಮ್ಮ ಕೀರ್ತನೆಗಳಲ್ಲಿ ಏನನ್ನು ಹೇಳಿದ್ದಾರೆ?

ಉತ್ತರ : ಪುರಂದರದಾಸರು ಜನಸಾಮಾನ್ಯರಿಗೂ ಸುಲಭವಾಗಿ ತಿಳಿಯುವಂತೆ ಭಕ್ತಿ, ಜ್ಞಾನ, ವೈರಾಗ್ಯ ಹಾಗೂ ನೀತಿ ತತ್ವಗಳನ್ನು ತಮ್ಮ ಕೀರ್ತನೆಗಳಲ್ಲಿ ಹೇಳಿದ್ದಾರ.

2) ನಮ್ಮ ರಾಜ್ಯಾಂಗದ 47 ನೆಯ ವಿಧಿ ಮದ್ಯಪಾನದ ಬಗ್ಗೆ ಏನು ಹೇಳುತ್ತದೆ !

ಉತ್ತರ : ನಮ್ಮ ರಾಜ್ಯಾಂಗದ 47 ನೆಯ ವಿಧಿ ಮದ್ಯಪಾನದ ಬಗ್ಗೆ "ಸಂಕಾರವು ತನ್ನ ಪ್ರಜೆಗಳ ಆಹಾರದ ಮಟ್ಟವನ್ನು ಜೀವನದ ಮಟ್ಟವನ್ನು ಏರಿಸುವದು ಮತ್ತು ಸಾರ್ವಜನಿಕ ಆರೋಗ್ಯವನ್ನು ಉತ್ತಮ ಪಡಿಸುವದು ಇವುಗಳನ್ನು ತನ್ನ ಆದ್ಯ ಕರ್ತವ್ಯವೆಂದು ಭಾವಿಸಿ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುವ ವಸ್ತುಗಳನ್ನು ಅಮಲೇರಿಸುವಂತ ಪಾನೀಯಗಳನ್ನೂ, ಔಷಧಕ್ಕಾಗಿ ವಿನಾ ಬೇರೆ ಯಾವ ವಿಧ

ದಲ್ಲೂ ಉಪಯೋಗಿಸದಂತೆ ಪ್ರತಿ ಬಂಧಿಸುವ ಪ್ರಯತ್ನವನ್ನು ಮಾಡತಕ್ಕದ್ದು" ಎಂದು ಹೇಳುತ್ತದೆ

3) ಮಾನವರಲ್ಲಿ ಕುಲಜರು ಯಾರೆಂದು ಬಸವಣ್ಣ ಸಾರಿದ್ದಾರೆ ?

ಉತ್ತರ : ಸಕಲ ಜೀವಾತ್ಮರಿಗೆ ಲೇಸನೇ ಬಯಸಿದ ಶರಣರೆಲ್ಲರೂ ಕುಲಜರು ಎಂದು ಬಸವಣ್ಣ ಸಾರಿದ್ದಾರೆ.

4) ಬಾನ್ ಕಮ್ಮಟ ಎಂದರೇನು ?

ಉತ್ತರ : ಆಕಾಶದಲ್ಲಿ ಭೂಮಿಯನ್ನು ಸುತ್ತುತ್ತಿದ್ದು ಅಲ್ಲಿಯ ನಿರ್ವಾತದಲ್ಲಿ ವಿವಿಧ ವೈಜ್ಞಾನಿಕ ಪ್ರಯೋಗಗಳನ್ನು ಮಾಡಲು ನಿಯೋಜಿತವಾದ ಉಪಗ್ರಹಕ್ಕೆ ಬಾನ್ ಕಮ್ಮಟ ಎಂದು ಹೆಸರು.

5) ನಾರದನು ಶ್ರೀಮನ್ನಾರಾಯಣನಲ್ಲಿ ಏನನ್ನು ಕೇಳಿಕೊಂಡನು ?

ಉತ್ತರ : ನಾರದನು ಶ್ರೀಮನ್ನಾರಾಯಣನಲ್ಲಿಗೆ ಬಂದು ಅಂಬರೀಷನ ಮಗಳಾದ ಶ್ರೀಮತಿಯನ್ನು ತಾನು ಲಗ್ನವಾಗಲಿಕ್ಕೆ ಸಹಾಯಮಾಡಬೇಕೆಂದೂ, ಪರ್ವತನ ಮುಖವು ಆಕೆಗೆ ಕಪಿಯಂತೆ ಕಾಣಬೇಕೆಂದೂ ಕೇಳಿಕೊಂಡನು.

ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿಮಾಡಿ. 5

ಉತ್ತರ : 1) ಸುಕನಾಶಿಯ ಬಾಗಿಲಲ್ಲಿ ಬಹಳ ಸುಂದರವಾದ......ಕೆತ್ತಿದೆ. (ಮದನಿಕಾ ವಿಗ್ರಹಗಳನ್ನು)

2) ಹೆಚ್. ಎಲ್. ನಾಗೇಗೌಡರು...... ಸಾಹಿತ್ಯದಲ್ಲಿ ಹೆಸರಾಂತ ಕವಿಗಳು. ( ಜಾನಪದ )

3) ಉಭಯಕವಿ ಕಮಲರವಿ ಎಂಬುದು... ...ನ ಬಿರುದು. ( ರಾಘವಾಂಕ )

4) "ಪವಿತ್ರ" ವಿರುದ್ಧಾರ್ಥದ ಪದ........ ( ಅಪವಿತ್ರ )

5) ವಡ್ಡಾರಾಧನೆ ಎಂಬ ಗ್ರಂಥವನ್ನು ರಚಿಸಿದ ಕವಿ...... ( ಶಿವಕೋಟ್ಯಾಚಾರ್ಯ )

ಪ್ರಶ್ನೆ 13. ಮೊದಲೆರಡು ಪದಗಳಿಗೆ ಇರುವ ಸಂಬಂಧದಂತೆ ಮೂರನೆ ಪದಕ್ಕೆ ಸಂಬಂಧಿಸಿದ ಪದಗಳನ್ನು ಬರೆಯಿರಿ.

ಉತ್ತರ : 1) ಮುಕ್ಕಣ್ಣ–ಈಶ್ವರ; ಸಹಸ್ರಾಕ್ಷ– ( ಇಂದ್ರ )

2) ಅತ್ಯುಚ್ಚ-ಯಣ್ ಸಂಧಿ; ರಣಾಗ್ರ- ( ಗುಣಸಂಧಿ )

3) ನಿವಾರ್ಯ-ಅನಿವಾರ್ಯ; ಗೋಚರ– ( ಅಗೋಚರ )

4) ಠಾಕೂರರ ಜನನ–2—5—1861; ಕಿಟೆಲ್ಲರ ಜನನ–(7—4—1832).

5) ಮನೆಯ+ನಡು=ನಡುಮನೆ; ಬಗೆಯ +ಕೆಳಗು– ( ಕೀಳ್ಬಗೆ )

ಪ್ರಶ್ನೆ 14. ಆಯಾಯ ಗುಂಪಿಗೆ ಸೇರದ ಪದವನ್ನು ಆಯ್ದು ಬರೆಯಿರಿ.

ಉತ್ತರ : 1) ಅಂಗಣ, ಅಂಕಣ, ಅಂದಣ, ಚಾವಣಿ ( ಅಂದಣ )

2) ಷಣ್ಮುಖ, ವಿಮುಖ, ಚತುರ್ಮುಖ, ದಶಮುಖ (ವಿಮುಖ)

3) ದೈಹಿಕ, ಧಾರ್ಮಿಕ, ಮಾನಸಿಕ, ಬೌದ್ಧಿಕ ( ಧಾರ್ಮಿಕ )

4) ಅಂಬುಧಿ, ವಾರಿಧಿ, ಜಲಧಿ, ಬುನಾದಿ ( ಬುನಾದಿ )

5) ಈರೇಳು, ಒಳಮನೆ, ಎಣ್ದೆಸೆ, ಸಪ್ತಪದಿ ( ಒಳಮನೆ )

ಪ್ರಶ್ನೆ 15. "ಅ" ಗುಂಪಿನ ಪದಗಳಿಗೆ "ಬ" ಗುಂಪಿನ ಪದಗಳಲ್ಲಿ ಸರಿ ಹೊಂದುವುದನ್ನು ಜೋಡಿಸಿ ಬರೆಯಿರಿ.

| "ಅ" | "ಬ" |
|---|---|
| 1) ದೇವೇಂದ್ರನಾಥ | 1) ಸತ್ಯಾಗ್ರಹಿ |
| 2) ಮೂರು ಸಂಜೆ | 2) ಮುದ್ದಣ |
| 3) ಬ್ರೌನ್ | 3) ಠಾಕೂರರ ತಂದೆ |
| 4) ಲೋಕಮಾನ್ಯ ತಿಲಕ್ | 4) ತಮಿಳು ನುಡಿಗೆ ಸೇವೆ ಸಲ್ಲಿಸಿದವರು. |
| 5) ಲಕ್ಷ್ಮೀನಾರಾಯಣಪ್ಪ | 5) ತೆಲುಗು ನುಡಿಗೆ ಸೇವೆ ಸಲ್ಲಿಸಿದವರು. |
| | 6) ಉಗ್ರವಾದಿ |
| | 7) ಸೂರ್ಯ ಮುಳುಗುವ ಸಮಯ |

ಉತ್ತರ ಅ 1)– ಬ 3), ಅ 2)– –ಬ 7), ಅ 3)– ಬ 5), ಅ 4)–ಬ 6), ಅ 5)– ಬ 2).

—●—

# ಕನ್ನಡ

## ಅಕ್ಟೋಬರ–೧೯೮೭ ದ್ವಿತೀಯ ಪತ್ರಿಕೆ

ಅವಧಿ: 2 ಘಂಟೆ ಅಂಕಗಳು : 50

ಪ್ರಶ್ನೆ 1. ಕೆಳಗಿನ ಪ್ರಶ್ನೆಗಳಲ್ಲಿ ಎರಡನ್ನು ಆರಿಸಿ ಕೊಂಡು ಒಂದೊಂದು ಪುಟಕ್ಕೆ ಮೀರದಂತೆ ಬರೆಯಿರಿ.

1) ಸಾಹಸಿಯಾದ ತೇನಸಿಂಗನ ಸಾರ್ಥಕ ಬದುಕನ್ನು ವಿವರಿಸಿರಿ.

ಉತ್ತರ : ಬಾಲ್ಯದಿಂದಲೇ ತೇನಸಿಂಗ್‌ನ ಚಟುವಟಿಕೆಗಳು ಸಾಹಸಪೂರ್ಣವಾಗಿದ್ದವು. ಎವರೆಸ್ಟ್ ಪರ್ವತವನ್ನೇರಬೇಕೆಂಬ ಆತನ ಇಚ್ಛೆ ಬಾಲ್ಯದಲ್ಲಿಯೇ ಚಿಗುರೊಡೆಯಿತು. ವಯಸ್ಕನಾದಂತೆ ಪರ್ವತಾರೋಹಿ ತಂಡಗಳಲ್ಲಿ ಭಾಗವಹಿಸುತ್ತಿದ್ದ. ಹೀಗೆ ದೊರೆತ ಅವಕಾಶಗಳನ್ನು ಸದುಪಯೋಗಪಡಿಸಿಕೊಂಡ. ಅನೇಕ ಸಲ ಆರೋಹಣ ಕಾಲಕ್ಕೆ ಕಠಿಣ ರೀತಿಯ ನಿಸರ್ಗ ಪ್ರಕೋಪಗಳಿಗೆ ಒಳಗಾಗಬೇಕಾಯಿತು. ಧಾರಾಕಾರವಾಗಿ ಬೀಳುವ ಹಿಮ, ಭೀಕರವಾದ ಮಳೆ, ಗಾಳಿ ತಡೆಯಲಾರದಷ್ಟು ಶೀತ ಹವಾ ಮಾನ, ಭೀಕರ ಪ್ರವಾಹ, ಮೇಲಿನಿಂದ ಉರುಳುವ ನೀರ್ಗಲ್ಲು, ಆಳವಾದ ಬಿರುಕು, ಕಂದಕಗಳು, ಕಡಿದಾದ ಏಣಿಗಳು ಹೀಗೆ ಅದೆಷ್ಟೋ ಪ್ರಕೋಪಗಳನ್ನು ಎದುರಿಸಿದ ಧೀರೋದಾತ್ತ ಎದೆಗಾರಿಕೆ ಆತನದು. ಧೈರ್ಯ–ಸಾಹಸಗಳಿಂದ ಮುನ್ನಡೆಯುವ ಛಲಗಾರಿಕೆ ಅವನದು ಭೀಕರ ಅಪಘಾತಗಳಿಂದ ಪಾರಾದ ಅದೃಷ್ಟಶಾಲಿ ಆತ.

ತೇನ್‌ಸಿಂಗ ಪರ್ವತಾರೋಹಣವನ್ನು ಎಂದ ಯಾರಿಂದಲೂ ಕಲಿತಿರಲಿಲ್ಲ. ಸ್ವಂತ ಪರಿಶ್ರಮ, ಸತತ ಪ್ರಯತ್ನ, ಸಾಹಸ ಮನೋವೃತ್ತಿ ದೃಢಸಂಕಲ್ಪಗಳೇ ಆತನ ಸಿದ್ಧಿಗೆ ಕಾರಣ. ಮೇಲಾಗಿ ರಕ್ತಗತವಾಗಿ ಬಂದ ಆಸಕ್ತಿ ಹೀಗೆ ಪರ್ವತಾರೋಹಣ ಅನುಭವವನ್ನು ಪಡೆದು ಅನುಭವದ ಪರ್ವತವೇ ಆದ ಧೀಮಂತ. ಆತನ ಸಾಹಸಮಯ ಕಾರ್ಯ ಚಟುವಟಿಕೆಗಳು ಅವರ್ಣನೀಯ.

ತನ್ನ ಹೆಂಡತಿ, ಮಗನ ವಿಯೋಗ, ಇತರ ಸಾಂಸಾರಿಕ ತಾಪತ್ರಯಗಳಿಂದ ತೊಂದರೆಗೊಳಗಾಗಿದ್ದರೂ, ಸ್ವತಃ ಆರೋಗ್ಯ ಸರಿ ಇಲ್ಲದಿದ್ದಾಗಲೂ ಯಾವುದನ್ನೂ ಲೆಕ್ಕಿಸದೆ ಕರ್ತವ್ಯದ ಕರೆಗೆ ಓಗೊಟ್ಟು ಮುಂದೆ ಸಾಗಿದ ಧೀರನೀತ. "ನನ್ನ ಉಸಿರು ಇರುವುದೇ ಪರ್ವತಗಳಲ್ಲಿ" ಪರ್ವತಾರೋಹಣದಲ್ಲಿ ಆಹುತಿಯಾದರೂ ಚಿಂತೆಯಿಲ್ಲ ಎಂಬ ಮನೋ ನಿರ್ಧಾರ ಅವನದು. ಪರ್ವತಗಳಿಗಾಗಿಯೇ ಅವನು ಹುಟ್ಟಿದವ.

ಪರ್ವತಾರೋಹಣದಂತೆ ಪ್ರವಾಸವೂ ತೇನ್‌ಸಿಂಗನಿಗೆ ಇಷ್ಟ. ಎವರೆಸ್ಟ್ ವಿಜಯದ ನಂತರ ಅನೇಕ ಭಾಗಗಳಿಗೆ, ದೇಶಗಳಿಗೆ ಭೇಟಿ ನೀಡಿದ್ದಾನೆ. ತನ್ನ ಪ್ರವಾಸ ಕಾಲದಲ್ಲಿ ಅಪಾರ ಅನುಭವ ಪಡೆದ ವಿಶ್ವವಿದ್ಯಾಲಯವೇ ಅವನಾಗಿದ್ದಾನೆ. ತೇನ್‌ಸಿಂಗ ಸೌಜನ್ಯ, ಸೌಶೀಲ್ಯಗಳ ಸಾಕಾರ ಮೂರ್ತಿ, ಉತ್ತಮ ಸ್ನೇಹ ಜೀವಿ ಹಾಗೂ ಸರಳಜೀವಿ; ಮೇಲಾಗಿ ಧರ್ಮ ಶ್ರದ್ಧೆಯುಳ್ಳವ. ಸಾರ್ಥಕ ಬದುಕನ್ನು ಬಾಳಿ ಬೆಳಗಿದ ಮಹಾನ್ ವ್ಯಕ್ತಿ.

2) ಜಗದೀಶರು ಭೌತಶಾಸ್ತ್ರದಲ್ಲಿ ಮಾಡಿದ ಸಂಶೋಧನೆಯನ್ನು ವಿವರಿಸಿರಿ.

ಉತ್ತರ : (1986 ಅಕ್ಟೋಬರ ಕನ್ನಡ ದ್ವಿತೀಯ ಪತ್ರಿಕೆ 2 ನೇ ಪ್ರಶ್ನೆ 4 ರ ಉತ್ತರ ನೋಡಿರಿ.)

3) ಅರವಿಂದರ ಆದರ್ಶ ವಿದ್ಯಾರ್ಥಿ ಜೀವನವನ್ನು ವಿವರಿಸಿರಿ.

ಉತ್ತರ : (1984 ಎಪ್ರೇಲ ಕನ್ನಡ ದ್ವಿತೀಯ ಪತ್ರಿಕೆ 1 ನೇ ಪ್ರಶ್ನೆ 2 ರ ಉತ್ತರ ನೋಡಿರಿ.)

4) ಅರವಿಂದರು ಲೌಕಿಕ ಹೋರಾಟದಿಂದ ಹಿಂದೆ ಸರಿದುದೇಕೆ ? ವಿವರಿಸಿರಿ.

ಉತ್ತರ : ಅರವಿಂದರು ಭಾರತದ ಸ್ವಾತಂತ್ರ್ಯಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ಹೋರಾಡಿದರು. ವಂದೇ ಮಾತರಂ ಪತ್ರಿಕೆಯಲ್ಲಿ ಕ್ರಾಂತಿಕಾರಿ ವಿಚಾರಗಳ ಲೇಖನಗಳನ್ನು ಬರೆದರು. ಅದರಲ್ಲಿ ತಮ್ಮ ಹೆಸರನ್ನು ನೇರವಾಗಿ ಸೇರಿಸದೆ, ಗುಪ್ತನಾಮಗಳಿಂದ ಬರೆಯುತ್ತಿದ್ದರು. ಈ ಪತ್ರಿಕೆ ಸರಕಾರಕ್ಕೆ ತಲೆನೋವಾಗಿತ್ತು. ಇವರನ್ನು ಹಿಡಿಯಲು ಪ್ರಯತ್ನಿಸತೊಡಗಿತು. ಆದರೆ ಅದು ಸಾಧ್ಯವಾಗಲಿಲ್ಲ. ಮುಂದೆ ಕೆನಡಿ ದಂಪತಿಗಳ ಕೊಲೆಯ ಆಪಾದನೆಯಲ್ಲಿ ಸಂಶಯ ಬಂದವರನ್ನೆಲ್ಲ ಬಂಧಿಸತೊಡಗಿದರು. ಅರವಿಂದರನ್ನೊಳಗೊಂಡು ಅವರ ತಮ್ಮ ಬರೀಂದ್ರ ಕುಮಾರ ಸಹಿತ ರಾಜದ್ರೋಹದ ಆಪಾದನೆ ಮೇರೆಗೆ ಮೂವತ್ನಾಲ್ಕು ಜನರನ್ನು ಬಂಧಿಸಿ ಅಲಿಪುರದ ಸೆರೆಮನೆಯಲ್ಲಿಟ್ಟರು. ಅದರಲ್ಲಿ ಹದಿನೈದು ಜನರನ್ನು ಸೆಷನ್ಸ ವಿಚಾರಣೆಗೆ ಗುರಿಪಡಿಸಿದರು. ಅಂಥವರಲ್ಲಿ ಬರೀಂದ್ರ ಕುಮಾರ ಹಾಗೂ ಅರವಿಂದರೂ ಸೇರ್ಪಡೆಯಾಗಿದ್ದರು. ಈ ಎಲ್ಲ ರಾಜಕೀಯದ ಗೊಂದಲದಿಂದ ಬೇಸತ್ತು ಅರವಿಂದರು ಲೌಕಿಕ ಹೋರಾಟದಿಂದ ಹಿಂದೆ

ಸರಿದರು. ಸೆರೆಮನೆಯಲ್ಲಿ ಯೋಗಾಭ್ಯಾಸ ಮುಂದುವರೆಸಿದರು.

ಸೆರೆಮನೆ ಅರವಿಂದರಿಗೆ ಆಧ್ಯಾತ್ಮಿಕ ಸಾಧನೆಯ ತಪೋರಂಗವಾಯಿತು. ಭಗವದ್ಗೀತೆ, ಉಪನಿಷತ್ತು ಮೊದಲಾದ ಗ್ರಂಥಗಳನ್ನು ಓದಿದರು, ಯೋಗಸಾಧನೆ ಕೈಕೊಂಡರು.

ಸೆರೆಮನೆಯಿಂದ ಹೊರಬಂದಾಗ ಸ್ವರಾಜ್ಯ ಚಳುವಳಿ ಮುಂದುವರಿಸಿದರು. ಆದರೆ ತಮ್ಮ ಬಂಧನದ ಸುದ್ದಿ ಪುನಃ ಬಂದಾಗ ಯೋಚಿಸುತ್ತಿರಲು–ಕೂಡಲೇ ಚಂದ್ರನಾಗೂರಿಗೆ ಹೋಗು ಎಂದು ವಾಣಿಯೊಂದು ಮೊಳಗಿದಂತಾಯ್ತು. ಅದನ್ನು ಕೇಳಿ ಮುಂದಿನ ಯೋಚನೆ ಮಾಡದೆ ಇಬ್ಬರು ಸಹಾಯಕರೊಂದಿಗೆ ಚಂದ್ರನಾಗೂರಿಗೆ ಹೊರಟೇಬಿಟ್ಟರು. ರಾಜಕೀಯವನ್ನು ತೊರೆದು, ಲೌಕಿಕ ಹೋರಾಟದಿಂದ ಹಿಂದೆ ಸರಿದರು; ಹಾಗೂ ಅಲೌಕಿಕದತ್ತ ಮುನ್ನಡೆದರು.

ಪ್ರಶ್ನೆ II. ಕೆಳಗಿನ ಪ್ರಶ್ನೆಗಳಿಗೆ ಏಳೆಂಟು ವಾಕ್ಯಗಳಲ್ಲಿ ಉತ್ತರಿಸಿರಿ. $5 \times 3 = 15$

1) ನಂದಾದೇವಿ ಪರ್ವತಾರೋಹಣದಲ್ಲಿ ನಡೆದ ದುರಂತವನ್ನು ತಿಳಿಸಿರಿ.

ಉತ್ತರ : ಫ್ರೆಂಚ ಯಾತ್ರಾ ತಂಡವು ರಾಜನ್ ಡುಪ್ಲಾ ನಾಯಕತ್ವದಲ್ಲಿ ನಂದಾದೇವಿ ಪರ್ವತವನ್ನೇರುವ ಸಾಹಸ ಕೈಕೊಂಡಿತು. ಅವರೆಲ್ಲರು ಮೂರನೆಯ ಶಿಬಿರ ಸ್ಥಾಪಿಸುವವರೆಗೆ ಏರಿದರು. ಕೊನೆಯ ಹಂತದ ಆರೋಹಣಕ್ಕೆ ಡುಪ್ಲಾ ಮತ್ತು ವೀನ್ ಎಂಬಿಬ್ಬರು ಮಾತ್ರ ಹೊರಟರು. ಅವರು 23, 600 ಅಡಿ ಎತ್ತರವೇರಿ ನಾಲ್ಕನೇ ಶಿಬಿರ ಸ್ಥಾಪಿಸಿದರು. ವಿಜಯ ಸಾಧಿಸಲಿದ್ದ ಅವರನ್ನು ಸ್ವಾಗತಿಸಲು ತೇನಸಿಂಗ ಹಾಗೂ ಇನ್ನಿಬ್ಬರು ಮೇಲೇರಿ ನಡೆದರು. ಆದರೆ ಕೆಲಸವಾಯದ ನಂತರ ಡುಪ್ಲಾ ಮತ್ತು ವೀನ್ ಕಾಣೆಯಾದಾಗ ನಿರಾಶೆಗೊಂಡು ಭಾರವಾದ ಹೃದಯದಿಂದ ಕೆಳಗಿಳಿದರು. ಅವರು ಪ್ರಪಾತದಲ್ಲಿ ಬಿದ್ದಿರಬೇಕೆಂದು ಊಹಿಸಲಾಯಿತು.

2) ತೇನಸಿಂಗನಿಗೆ ಮೇಜರ್ ವೈಟನಿಂದಾದ ಉಪಕಾರವೇನು ?

ಉತ್ತರ : (1985 ಎಪ್ರೀಲ ಕನ್ನಡ ದ್ವಿತೀಯ ಪತ್ರಿಕೆ 2 ನೇ ಪ್ರಶ್ನೆ 5 ರ ಉತ್ತರ ನೋಡಿರಿ.)

3) ಬೋಸರ ಅಂತಿಮ ಯಾತ್ರೆಯನ್ನು ತಿಳಿಸಿರಿ.

ಉತ್ತರ : ಬೋಸರ ಸಾವಿನ ಸುದ್ದಿ ತಿಳಿಯುತ್ತಲೇ ಮನೆಯ ಮುಂದೆ ಜನಸಮೂಹ ಸೇರಿ ಅವರ ಕಳೇಬರವನ್ನು ಕಲ್ಕತ್ತಾಕ್ಕೆ ಒಯ್ಯುವ ವ್ಯವಸ್ಥೆ ಮಾಡಿದರು. ಅಲ್ಲಿ ಮೃತರ ಕಳೇಬರವನ್ನು ಬೋಸ ರಿಸರ್ಚ ಇನ್‌ಸ್ಟಿಟ್ಯೂಟಿನ ಮುಂಭಾಗದಲ್ಲಿ ಇಡಲಾಗಿತ್ತು. ಅನೇಕರು ತಂಡೋಪತಂಡವಾಗಿ ಬಂದು ಅಂತಿಮ ದರ್ಶನ ಪಡೆದರು. ಬೋಸರ ಗೌರವಾರ್ಥ ತ್ರಿವರ್ಣ ಧ್ವಜವನ್ನೂ ಅರ್ಧಕ್ಕೆ ಏರಿಸಲಾಯಿತು. ನಗರದ ಎಲ್ಲ ಸರಕಾರಿ ಹಾಗೂ ಸಾರ್ವಜನಿಕ ಕಚೇರಿ, ಶಾಲೆ ಕಾಲೇಜುಗಳನ್ನು ಮುಚ್ಚಲಾಗಿತ್ತು. ಇಡೀ ನಗರದಲ್ಲಿ ಕಳೇಬರವನ್ನು ಮೆರವಣಿಗೆಯಲ್ಲಿ ಕೊಂಡೊಯ್ಯಲಾಯಿತು. ಸಾಲುಗಟ್ಟಿ ನಿಂತ ಅಸಂಖ್ಯಾತ ಜನ ತಮ್ಮ ಶ್ರದ್ಧಾಂಜಲಿಯನ್ನರ್ಪಿಸಿದರು.

4) "ಭವಾನಿ ಮಂದಿರ" ವೆಂದರೇನು ? ಅದರ ಕಾರ್ಯವ್ಯಾಪ್ತಿಯನ್ನು ತಿಳಿಸಿರಿ.

ಉತ್ತರ : ಅರವಿಂದರು ಭಾರತದ ಸ್ವಾತಂತ್ರ್ಯಕ್ಕಾಗಿ, ಕ್ರಾಂತಿಕಾರಿಗಳಾಗಿ ಉಗ್ರಗಾಮಿಗಳಾಗಿ ಹೋರಾಡಲು ಸಿದ್ಧರಾಗುತ್ತಿದ್ದರು; ಅದಕ್ಕಾಗಿ ಸಿದ್ಧಗೊಳಿಸಲು ಹೆಣಗುತ್ತಿದ್ದರು. ದೇಶಕ್ಕಾಗಿ ಪ್ರಾಣ ಬಿಡಲು ಸಿದ್ಧರಾದ ತ್ಯಾಗಿಗಳ ಪಡೆಯೊಂದನ್ನು ಕಟ್ಟಲು ಹವಣಿಸಿದರು. ಈ ಹಿನ್ನೆಲೆಯಲ್ಲಿ "ಭವಾನಿ ಮಂದಿರ"ದ ಕಲ್ಪನೆ ಬೆಳೆಯಿತು. ದೇಶಕ್ಕಾಗಿ ಕ್ರಾಂತಿಕಾರಕ ಕಾರ್ಯಗಳನ್ನು ಕೈಕೊಳ್ಳುವದೇ ಇದರ ಕಾರ್ಯವಾಗಿದ್ದು, ಅಂಥ ಕ್ರಾಂತಿಕಾರರ ಸಮೂಹವೇ ಭವಾನಿ ಮಂದಿರ. ಬಂಗಾಳ, ಮಹಾರಾಷ್ಟ್ರಗಳಲ್ಲಿ ಭವಾನಿ ಮಂದಿರಗಳು ಸ್ಥಾಪಿತವಾದವು. ಬರೀಂದ್ರಕುಮಾರ, ಹರಿ ಭಾವು ಮೋಡಕ, ಕಾಕಾ ಪಾಟೀಲ, ಸೋದರಿ ನಿವೇದಿತಾ, ಜೋಗೀಂದ್ರನಾಥ ಮುಖರ್ಜಿ ಮೊದಲಾದವರೂ, ಅನೇಕ ಸರಕಾರಿ ನೌಕರರೂ ಇದರಲ್ಲಿ ಭಾಗವಹಿಸಿದ್ದರು.

5) ಪ್ರೊ. ಗುಸ್ಸೆಪ್ಪಿ ತುಚ್ಚಿ ಯಾರು ? ಆತನ ಗುಣಸ್ವಭಾವವನ್ನು ತಿಳಿಸಿರಿ.

ಉತ್ತರ : ಪ್ರೊ. ಗುಸ್ಸೆಪ್ಪಿ ತುಚ್ಚಿ ಇಟಲಿ ದೇಶದ ಪ್ರಸಿದ್ಧ ವಿದ್ವಾಂಸ. ಪ್ರಾಚ್ಯ ಕಲಾ ಸಾಹಿತ್ಯಗಳಲ್ಲಿ ಪರಿಣಿತನಾಗಿದ್ದು, ಬಹುಭಾಷಾ ಪಂಡಿತನೂ ಆಗಿದ್ದನು. ನಿಷ್ಠೆಯಿಂದ ಕಾರ್ಯ ಮಾಡುವ ಗಂಭೀರ ಪ್ರಕೃತಿಯವನು. ಹಟವಾದಿಯಾಗಿದ್ದು ತನ್ನಿಚ್ಛೆಯಂತೇ ಕೆಲಸಗಾರರು ಕಾರ್ಯ ಮಾಡಬೇಕು, ತಪ್ಪಿದರೆ ದಂಡ ತೆರಬೇಕು. ವಿಶಿಷ್ಟ ನಡವಳಿಕೆ ಸ್ವಭಾವದವನು. ಟಿಬೇಟಿಗೆ ಯಾತ್ರಾ ತಂಡದ ನೇತೃತ್ವವಹಿಸಿ ಹೊರಟಿದ್ದನು.

ಪ್ರಶ್ನೆ III. ಕೆಳಗಿನ ವಿಷಯಗಳಲ್ಲಿ ಒಂದನ್ನು ಆರಿಸಿಕೊಂಡು ಎರಡು ಪುಟದಷ್ಟಿರುವಂತೆ ಒಂದು ಪ್ರಬಂಧವನ್ನು ಬರೆಯಿರಿ.

1) ನೀವು ಕಂಡ ಒಂದು ಅಪಘಾತದ ದೃಶ್ಯ

ಉತ್ತರ : ಇತ್ತೀಚೆತ್ತಲಾಗಿ ದಿನನಿತ್ಯ ಅಲ್ಲಲ್ಲಿ ಜರುಗಿದ ಅಪಘಾತಗಳ ಬಗೆಗೆ ವರ್ತಮಾನ ಪತ್ರಿಕೆಗಳಲ್ಲಿ ಬರುವ ಸುದ್ದಿಗಳನ್ನು ಓದುತ್ತಿದ್ದೇವೆ. ವಾಹನ ಸೌಕರ್ಯ ಹೆಚ್ಚಿರುವದರಿಂದಲೂ, ಜನದಟ್ಟಣೆ ಹಾಗೂ ನಿತ್ಯದ ಕಾರ್ಯ ಚಟುವಟಿಕೆಗಳು ಭರದಿಂದ ನಡೆಯುಬೇಕೆಂಬ ಉತ್ಸುಕತೆಯಿಂದಲೂ ಯಾವುದೊಂದು ಕಾರಣದಿಂದ ಅಪಘಾತಗಳು ಮೇಲಿಂದ ಮೇಲೆ ಸಂಭವಿಸುತ್ತಲಿವೆ. ಇದಕ್ಕೆಲ್ಲ ನಮ್ಮ ಗಡಿಬಿಡಿಯ ಜೀವನ ಹಾಗೂ ಕಾರ್ಯ ದಕ್ಷತೆಯ ಅಭಾವವೇ ಕಾರಣವೆಂದು ಹೇಳಬಹುದು.

ಪ್ರವಾಸ ಇಂದು ಪ್ರತಿಯೊಬ್ಬರಿಗೂ ಅನಿವಾರ್ಯವೇ ಆಗಿದೆ, ಒಂದಿಲ್ಲೊಂದು ಕಾರಣದಿಂದ ಬಡವ,ಬಲ್ಲಿದ, ಶ್ರೀಮಂತ ಯಾರೇ ಆದರೂ ಆಗಿಂದಾಗ್ಗೆ ಪ್ರವಾಸ ಮಾಡಬೇಕಾಗುತ್ತದೆ. ಹಾಗೆ ನಾನು ಬೇಸಿಗೆಯ ರಜೆಯಲ್ಲಿ ನಮ್ಮ ಮಾವನವರ ಮನೆಗೆ ಹುಬ್ಬಳ್ಳಿಗೆ ಹೋಗಬೇಕಾಗಿತ್ತು. ನಮ್ಮ ಊರು ಸಮುದ್ರ ತೀರದ ಮೇಲಿನ ಕಾರವಾರ, ಸರಿ ಅಂದು ಬೆಳಗಿನಲ್ಲಿ ಹೊರಡುವ ಮೊದಲ ಬಸ್ಸಿನಲ್ಲಿ ಏರಿ ಕುಳಿತುಕೊಂಡು ಪ್ರಯಾಣ ಪ್ರಾರಂಭಿಸಿದೆ. ಬಸ್ಸು ಮುಂದೆ ಮುಂದೆ ಒಂದೇ ವೇಗದಿಂದ ಸಾಗಿತು. ಕಡಲ ತೀರದ ಉದ್ದಕ್ಕೂ ನೆಲೆಸಿರುವ ರಾಜಮಾರ್ಗದ ಎರಡೂ ಕಡೆಗಳಲ್ಲಿ ರಮ್ಯವಾದ ವನಸಿರಿ, ಸೌಂದರ್ಯ ಸವಿಯುತ್ತ ಮನಸ್ಸಿಗೆ ಉಲ್ಲಾಸವೆನಿಸಿತ್ತು.

ಪ್ರವಾಸಿಗರ ಇನ್ನೊಂದು ಬಸ್ಸು ನಮ್ಮ ಬಸ್ಸಿನ ಹಿಂಬದಿಯಲ್ಲಿ ಬಂದು ಸಂಧಿಸಿತು. ಎರಡೂ ಬಸ್ಸುಗಳು ಒಂದೇ ಸವನೆ ಸಾಗುತ್ತಿದ್ದವು. ಆದರೆ ಹಿಂದಿನ ಬಸ್ಸಿನ ಚಾಲಕನು ವೇಗವನ್ನು ಹೆಚ್ಚಿಸಿ ಮುಂದೆ ಸಾಗಿ ಹೋಗಲು ಆತುರಪಡಹತ್ತಿದನು. ಆ ಒಂದು ಸಮಯದಲ್ಲಿ ಮಾರ್ಗದ ತಿರುವು, ಅದಕ್ಕೆ ಸನಿಹದಲ್ಲಿಯೇ ಆಳವಾದ ಕಂದರವಿದ್ದಿತು ದುರ್ದೈವಕ್ಕೆ ಆ ಹಿಂದಿನ ಚಾಲಕನು ವೇಗವನ್ನು ಹಿಡಿತದಲ್ಲ ತರಲಾಗದೆ ಇದ್ದುದಕ್ಕೆ ಮಾರ್ಗ ತಪ್ಪಿ ಆ ಬಸ್ಸು ಕಂದರಕ್ಕಿಳಿಯಿತು. ಉರುಳುತ್ತ ಉರುಳುತ್ತ ಕಂದರವನ್ನು ಸೇರಿತು ಬಸ್ಸು ಹಲವಾರು ರೀತಿಯಲ್ಲಿ ಧಕ್ಕೆಗೊಳಗಾಯಿತು ಆ ಬಸ್ಸಿನಲ್ಲಿದ್ದ ಸುಮಾರು ಐವತ್ತು ಜನ ಪ್ರಯಾಣಿಕರ ಚೀರಾಟ, ಅಳುವಿನ ಧ್ವನಿ ಇಡೀ ಕಂದರವನ್ನೇ ಪ್ರತಿಧ್ವನಿಗೊಳಿಸಿತು. ಬಸ್ ಚಾಲಕನನ್ನೊಳಗೊಂಡು ಕೆಲಜನರು ಪ್ರಾಣಕಳಕೊಂಡರು— ಕೆಲವರಿಗೆ ತೀವ್ರ ಸ್ವರೂಪದ ಗಾಯಗಳಾದವು ಮಕ್ಕಳು, ಮುದುಕರು,ಹೆಂಗಸರು ಗೋಳೋ ಎಂದು ಅಳುತ್ತ ಹೌಹಾರಿ ಹೋಗಿದ್ದರು. ಪ್ರವಾಸಿಗರ ಸಾಮಾನುಗಳಂತೂ ಜಜ್ಜಿ ಹೋಗಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಈ ಎಲ್ಲ ಭೀಕರ ದೃಶ್ಯ ನೋಡಿದವರ ಎದೆಯೊಡೆಯುವಂತಿತ್ತು. ನಾವು ಕುಳಿತುಕೊಂಡ ಬಸ್ಸು ಆ ಒಂದು ಪ್ರಸಂಗದಲ್ಲಿ ಅಲ್ಲಿಯೇ ನಿಂತಿದ್ದರಿಂದ ಇದೆಲ್ಲವನ್ನೂ ಕಣ್ಣಾರೆ ಕಂಡು ಕೈಕಾಲು ಉಡುಗಿದಂತಾಯಿತು. ಅದೇ ದಾರಿಯ ಮೇಲೆ ಬರ ಹೋಗುವ ಇತರ ವಾಹನಗಳವರ ಮುಖಾಂತರ ಈ ಅಪಘಾತದ ವಾರ್ತೆಯನ್ನು ಸಮೀಪದ ಶಹರಕ್ಕೆ ಕಳಿಸಿಕೊಡಲಾಯಿತು. ನಮ್ಮ ಬಸ್ಸಿನಲ್ಲಿದ್ದ ಪ್ರಯಾಣಿಕರೂ ಕೂಡಲೇ ಕೆಳಗಿಳಿದು ಗಾಯಾಳುಗಳ ಸಹಾಯಕ್ಕಾಗಿ ಧಾವಿಸಿದೆವು.

ನಮ್ಮ ಮಾವನವರು ಈ ಸುದ್ದಿಯನ್ನು ಕೇಳಿ, ನಾವು ಕುಳಿತುಕೊಂಡು ಪ್ರಯಾಣಿಸುತ್ತಿದ್ದ ಬಸ್ಸು ಅಪಘಾತಕ್ಕೀಡಾಗಿದೆ ಎಂದು ತಿಳಿದು ಸ್ಮೃತಿ ತಪ್ಪಿ ಬಿದ್ದರಂತೆ. ನಮ್ಮ ಬಸ್ಸು ದಿನದ ವೇಳೆಗಿಂತ ಮೂರು ಗಂಟೆ ತಡವಾಗಿ ಊರನ್ನು ತಲುಪಿತು. ಅಂತೂ ಸುರಕ್ಷಿತವಾಗಿ ಊರನ್ನು ಸೇರಿದೆ. ನಮ್ಮ ಮಾವನವರ ಮನೆಯಲ್ಲಿ ಹಾಗೂ ನಮ್ಮ ತಂದೆ–ತಾಯಿಗಳವರೆಲ್ಲರಿಗೆ ಆಗ ನೆಮ್ಮದಿಯಾಯಿತು. ಅಬ್ಬಾ ! ಕಣ್ಣಾರೆ ಕಂಡ ಆ ಭೀಕರ ದೃಶ್ಯ ಸ್ಮರಿಸಿಕೊಂಡಾಗ ಕಣ್ಮುಂದೆ ಕಟ್ಟಿದಂತಾಗುತ್ತದೆ; ಮೈ ಜುಮ್ಮೆನ್ನುತ್ತದೆ.

ಬಸ್ಸಿನ ಚಾಲಕರು ಯಾವಾಗಲೂ ಜಾಗ್ರತೆಯಾಗಿದ್ದುಕೊಂಡು, ರಸ್ತೆಯ ನಿಯಮಗಳನುಸಾರವಾಗಿ ವಾಹನಗಳನ್ನು ನಡೆಯಿಸಬೇಕು. ತಾಳ್ಮೆಯಿಂದ ವೇಗ ನಿಯಂತ್ರಣ ಹೊಂದಿರಬೇಕು ಯಾವುದೇ ರೀತಿಯ ಪೈಪೋಟಿ, ಅವಸರ ತರವಲ್ಲ. ಇದರಿಂದ ಪ್ರಯಾಣಿಕರ ಜೀವ ಹಾಗೂ ಆಸ್ತಿ—ಪಾಸ್ತಿಗಳು ಸುರಕ್ಷಿತವಾಗುತ್ತವೆ. ಎಲ್ಲರಿಗೂ ಕ್ಷೇಮವಾಗುತ್ತದೆ

2) ಹಳ್ಳಿಗಳ ಉದ್ಧಾರವೇ ದೇಶೋದ್ಧಾರ

ಉತ್ತರ : (1984 ಅಕ್ಟೋಬರ ಕನ್ನಡ ದ್ವಿತೀಯ ಪತ್ರಿಕೆ 3 ನೇ ಪ್ರಶ್ನೆ 2 ರ ಉತ್ತರ ನೋಡಿರಿ.)

3) ನಮ್ಮ ದೇಶದಲ್ಲಿ ಈಗ ಕಂಡುಬರುವ ಸಮಸ್ಯೆಗಳು :

ಉತ್ತರ : (ಮುಖ್ಯಾಂಶಗಳು : ನಮ್ಮ ದೇಶದಲ್ಲಿ ಹಲವಾರು ಸಮಸ್ಯೆಗಳು, ಬಡತನ. ನಿರುದ್ಯೋಗ ಸಮಸ್ಯೆಗಳು-ಜಾತೀಯ ಹಾಗೂ ಮತೀಯ ಕಲಹಗಳು–ನಿರಕ್ಷರತೆ ದೋಷಪೂರಿತ ಶಿಕ್ಷಣಕ್ರಮ–ವರದಕ್ಷಿಣೆ, ಸ್ತ್ರೀಯರ ಶೋಷಣೆ, ಲಂಚಗುಳಿತನ ಭ್ರಷ್ಟಾಚಾರ, ಬೆಳೆಯುತ್ತಿರುವ ಜನಸಂಖ್ಯೆ–ಅದಕ್ಕೆ ತಕ್ಕ ರೀತಿಯಲ್ಲಿ ಆಹಾರ, ವಸತಿ, ಬಟ್ಟೆ ಇತರ ಸೌಕರ್ಯಗಳನ್ನೊದಗಿಸುವದು—ಜನನ ನಿಯಂತ್ರಣ ಸಾಧಿಸುವದು—

ಹಿಂದುಳಿದ ಜನಾಂಗದವರ ಕ್ಷೇಮಾಭಿವೃದ್ಧಿ—ಭಾಷಾ ಸಮಸ್ಯೆ ಗಡಿ, ಪ್ರಾಂತ ರಚನಾ ಸಮಸ್ಯೆ, ನೆರೆಯ ರಾಷ್ಟ್ರಗಳ ಸಂಬಂಧ–ಶಸ್ತ್ರಾಸ್ತ್ರಗಳ ಪೈಪೋಟಿ—ರಾಷ್ಟ್ರ ರಕ್ಷಣೆ ಇವೇ ಮುಂತಾದ ಸಮಸ್ಯೆಗಳು. ಸಮಸ್ಯಾ ಪರಿಹಾರದಲ್ಲಿ ಸರಕಾರ ಹಾಗೂ ಪ್ರಜೆಗಳ ಕರ್ತವ್ಯ—ಜನಸಾಮಾನ್ಯರಿಗೆ ತಿಳುವಳಿಕೆ, ಪ್ರಚಾರ, ಸೌಲಭ್ಯ ಒದಗಿಸಿಕೊಡುವದು. ಯೋಜನೆಗಳ ಮುಖಾಂತರ ಅಭಿವೃದ್ಧಿ ಕಾರ್ಯ ಕೈಕೊಳ್ಳುವದು—ಕಾನೂನು ಹಾಗೂ ಇತರ ಕ್ರಮಗಳಿಂದ ನಿಯಂತ್ರಣ ಸಾಧಿಸುವದು.)

4) "ಬೇಸಾಯದವ ಬೇಗ ತಾ ಸಾಯ"

**ಉತ್ತರ :** ( ಮುಖ್ಯಾಂಶಗಳು :— ಬೇಸಾಯದವ ನೆಂದರೆ ಒಕ್ಕಲಿಗ–ಬೇಗ ತಾ ಸಾಯ ಎಂದರೆ ಅಲ್ಪ ವಯಸ್ಸಿನಲ್ಲಿ ಸಾಯಕಾರ ಎಂಬುದು ಸಾಮಾನ್ಯ ಅರ್ಥ—ಒಕ್ಕಲಿಗ ನಿಸರ್ಗದ ಮಡಿಲಲ್ಲ ಉದ್ಯೋಗ ಮಾಡುವವ–ಆತನ ವಸತಿ–ಕಾರ್ಯ ಸ್ಥಾನ ಎಲ್ಲವೂ ವಿಶೇಷ ಬಯಲಿನಲ್ಲಿ, ಗಾಳಿ—ಬೆಳಕು—ಹವೆ ಸಾಕಷ್ಟು ಶುದ್ಧವಾಗಿರುವದು—ಸಹಜ ದುಡಿಮೆಯಿಂದಲೇ ವ್ಯಾಯಾಮ-ಇತರ ವಿಶೇಷ ಗಡಿಬಿಡಿ, ಆತುರ ಚಿಂತೆಗಳಿರುವದಿಲ್ಲ, ಮನಸ್ಸಿಗೆ ನೆಮ್ಮದಿ ಶಾಂತಿ ವಾತಾವರಣ—ಸುಖವಾದ ನಿದ್ರೆ–ವಿಶ್ರಾಂತಿಗಳು ದೊರೆಯುವವು. ಋತುಮಾನಗಳಿಗೆ ಅನುಸರಿಸಿ ಉದ್ಯೋಗ-ಧಂದೆಗಳಲ್ಲಿ ತೊಡಗುವನು. ದೃಢಕಾಯನಾಗಿ ಉತ್ತಮ ಆರೋಗ್ಯ ಪಡೆಯುವನು.)

**ಪ್ರಶ್ನೆ IV. ನಿಮ್ಮೂರಿಗೆ ಒಂದು ಸಾರ್ವಜನಿಕ ವಾಚನಾಲಯಬೇಕೆಂದು ಕೇಳಿಕೊಂಡು ಜಿಲ್ಹಾ ಅಭಿವೃದ್ಧಿ ಮಂಡಳಿ ಅಧಿಕಾರಿಯವರಿಗೆ ಒಂದು ಪತ್ರ ಬರೆಯಿರಿ.**

**ಉತ್ತರ :** ಊರು..............

ದಿನಾಂಕ..............

ಮಾನ್ಯ ಅಧ್ಯಕ್ಷರು
ಜಿಲ್ಹಾ ಅಭಿವೃದ್ಧಿ ಮಂಡಳಿ
..............ಜಿಲ್ಹೆ.

ಮಾನ್ಯರೇ,

ವಿಷಯ :– ನಮ್ಮ ಊರಿನ ಸಾರ್ವಜನಿಕರ ಉಪಯೋಗಕ್ಕಾಗಿ ಒಂದು ವಾಚನಾಲಯವನ್ನು ವ್ಯವಸ್ಥೆ ಮಾಡಿಕೊಡುವದು.

ಇಂದಿನ ದಿನಗಳಲ್ಲಿ ವಾಚನಾಲಯಗಳ ಮಹತ್ವ ವಿಶೇಷವಾಗಿದೆ. ದೇಶ–ವಿದೇಶಗಳ ಸುದ್ದಿ ಸಮಾಚಾರಗಳು, ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ವಿಷಯಗಳ ಜೊತೆಗೆ ವ್ಯಾಪಾರ ಉದ್ದಿಮೆ, ಮನರಂಜನ, ಕ್ರೀಡೆ ಉತ್ಸವ ಇತ್ಯಾದಿಗಳ ಬಗೆಗೆ ತಿಳಿದುಕೊಳ್ಳುವದು ಪ್ರತಿಯೊಬ್ಬನಿಗೂ ಅವಶ್ಯಕವಿದೆ. ಇವುಗಳನ್ನು ತಿಳಿಸಲು ವೃತ್ತ ಪತ್ರಿಕೆಗಳು, ನಿಯತಕಾಲಿಕಗಳು. ವಿಶೇಷ ಪ್ರಕಟನೆಗಳು ಮಾಧ್ಯಮಗಳಾಗಿವ ಎಂಬುದು ಸರ್ವವಿದಿತ. ರೇಡಿಯೋ ಟೆಲಿವ್ಹಿಜನ್ (ದೂರದರ್ಶನ) ಗಳಂಥ ವಿಶೇಷ ವೆಚ್ಚದ ಮಾಧ್ಯಮಗಳಿಗಿಂತ ವಾಚನಾಲಯಗಳು ಸುಲಭ ಸಾಧ್ಯವಾದವುಗಳು. ಓದುವ ಹವ್ಯಾಸವನ್ನು ಬೆಳೆಯಿಸುವದರ ಜೊತೆಗೆ ಜ್ಞಾನಾರ್ಜನೆಗೆ ಸಹಾಯಕವಾಗುವವು. ಜನತೆಗೆ ಪರೋಕ್ಷವಾಗಿ ಶಿಕ್ಷಣ ನೀಡುವ ಕೇಂದ್ರಗಳೆಂದರೂ ತಪ್ಪಾಗದು.

ನಮ್ಮ ಊರು ಸುಮಾರು ಹತ್ತು ಸಾವಿರ ಜನಸಂಖ್ಯೆಯನ್ನು ಹೊಂದಿದೆ. ಇಂಥಲ್ಲಿ ಒಂದೂ ವಾಚನಾಲಯ ಇದುವರೆಗೆ ಇಲ್ಲದಿರುವದು ವಿಷಾದನೀಯ. ಕಾರಣ ಮಾನ್ಯರವರು ಈ ಬಗೆಗೆ ಗಮನಹರಿಸಿ ಆದಷ್ಟು ಶೀಘ್ರ ನಮ್ಮೂರಿಗೆ ಸಾರ್ವಜನಿಕ ವಾಚನಾಲಯದ ವ್ಯವಸ್ಥೆ ಮಾಡಿಕೊಡಬೇಕಾಗಿ ಊರ ಜನತೆಯ ಪರವಾಗಿ ಕಳಕಳಿಯಿಂದ ವಿನಂತಿಸುತ್ತೇವೆ. ಇತಿ

ಧನ್ಯವಾದಗಳೊಂದಿಗೆ

ವಿಳಾಸ : ತಮ್ಮವ.

............... ............ (ಸಹಿ.)

...............

**ಪ್ರಶ್ನೆ V. ಬಿಟ್ಟ ಸ್ಥಳಗಳನ್ನು ಸರಿಯಾದ ಮಾತುಗಳಿಂದ ತುಂಬಿರಿ.** $1 \times 5 = 5$

**ಉತ್ತರ :** 1) ಜಗದೀಶರನ್ನು ಅವರ ಅಜ್ಜ ಪ್ರೀತಿಯಿಂದ.....ಕರೆಯುತ್ತಿದ್ದರು ('ಪೋನಿ' ಎಂದು.)

2) ಸಸ್ಯಗಳ ಒಳನಾಡಿಯ ಮಿಡಿತದಲ್ಲಿ ವ್ಯತ್ಯಾಸ ಕಂಡುಬರುವದನ್ನು ತೋರಿಸಿ ಕೊಡುವ ಯಂತ್ರ..........(ಆಪ್ಟಿಕಲ್ ಪಲ್ಸ್ ರಿಕಾರ್ಡರ್)

3) ಟಿಬೇಟಿನಿಂದ ವಲಸೆ ಹೊರಟ ಷರ್ಪಾಗಳು ನೆಲೆಸಿದ್ದು.......... (ಸೋಲೊ ಖುಂಬು)

4) ತೇನಸಿಂಗನ ತಾಯಿ ತಂದೆಯವರು.... ಗ್ರಾಮದ ನಿವಾಸಿಗಳು. (ಖುಂಬು ಜಿಲ್ಹೆ ಥಾಮಿ)

5) " "—ಈ ಚಿಹ್ನೆಯನ್ನು........ಚಿಹ್ನೆ ಎನ್ನುವರು. (ಅವತರಣಿಕೆ ಇಲ್ಲವೆ ಪ್ರತ್ಯಕ್ಷ ಮಾತಿನ ಚಿಹ್ನೆ)

ಪ್ರಶ್ನೆ VI. ಕೆಳಗಿನ ಪದ್ಯಗಳನ್ನು ಓದಿ ಸಾರಾಂಶ ವನ್ನು ಬರೆಯಿರಿ. 4

ನೋಡಲ್ಲಿ ಮೂಡಿಹುದು ಮುಗಿಲಿನಲಿ ಮಳೆ ಬಿಲ್ಲು
ಬಾನ್ದೇವಿಯಂತ ಮಣಿಹಾರದಂತೆ।
ಮೂಕ ವಿಸ್ಮಿತನಾಗಿ ನಿಲ್ಲು, ಗೆಳೆಯನೆ ನಿಲ್ಲು.
ಗುಡಿಯೆದುರು ಕೈಮುಗಿವ ಭಕ್ತನಂತೆ;
ಚೆಲುವಿಕೆಯ ಚೈತನ್ಯ ಬಿಲ್ಲಾದುದೆಂಬಂತೆ।
ಮಾಯೆ ಬರೆದಿಹ ಮಧುರ ಚಿತ್ರದಂತೆ।
ಆದಿಕವಿ ಹಾಡುತಿಹ ನಲ್ಗಬ್ಬವೆಂಬಂತೆ।
ವೈಣಿಕನು ಮಿಡಿಯುತಿಹ ವೀಣೆಯಂತೆ।
ಮಳೆ ಬಿಲ್ಲಿನಂತೆಮ್ಮ ಬಾಳು ಚಣವಾದರೇನು ?
ಮಳೆ ಬಿಲ್ಲಿನಂತೆಯದು ಮಧುರತಮವಲ್ಲವೇನು ?
ಮಹಿಮೆಮಯ ಜೀವಿತವದೊಂದು ದಿನವಾದರೇನು?
ಹೀನವಾಗಿಹ ಬಾಳು ಯುಗ ಯುಗಗಳಿದ್ದರೇನು ?

ಉತ್ತರ : (ಗೆಳೆಯನನ್ನು ಉದ್ದೇಶಿಸಿ)– ಆಗಸದೇವತೆ ಕೊರಳಲ್ಲಿ ಧರಿಸಿದ ಸುಂದರ ಮಣಿಹಾರವೆಂಬಂತೆ ಮುಗಿಲಿನಲ್ಲಿ ಮಳೆ ಬಿಲ್ಲು (ಕಾಮನ ಬಿಲ್ಲು) ಮೂಡಿದೆ ನೋಡು. ಗುಡಿಯೆದುರು ಕೈಮುಗಿದುಕೊಂಡು ಭಾವಪರವಶನಾಗಿ ನಿಲ್ಲುವ ಭಕ್ತನಂತೆ ಸ್ತಬ್ಧವಾಗಿ ನಿಂತು ನೋಡು. ಚೆಲುವಿಕೆಯೇ ಚೈತನ್ಯ ಹೊಂದಿ ಬಿಲ್ಲಾಗಿರುವಂತೆ, ಮಾಯೆ ಚಿತ್ರಿಸಿದ ಸುಂದರ ಚಿತ್ರದಂತೆ, ಮಹಾಕವಿ ಹಾಡುತ್ತಿರುವ ರಮ್ಯ ಕಾವ್ಯದಂತೆ, ವೀಣಾಕಾರನು ನುಡಿಸುತ್ತಿರುವ ವೀಣೆಯಂತೆ ಎಲ್ಲವೂ ಮನೋಲ್ಲಾಸಕರ. ಇಂಥ ಮಧುರತೆಯು ಮಳೆ ಬಿಲ್ಲು ಕೆಲವೇ ಕ್ಷಣಗಳಿದ್ದಾಗಲೂ ಅದು ಲೇಸು. ಅದರಂತೆ ಸಾರ್ಥಕವಾದ ನಮ್ಮ ಜೀವನ ಒಂದು ದಿನವಾಗಿದ್ದರೂ ಸರಿಯೆ. ಆದರೆ ಹೀನವಾದ ಬಾಳು ಅದೆಷ್ಟು ವರ್ಷಗಳಿದ್ದರೂ ಏನು ಸಾರ್ಥಕ ?

ಪ್ರಶ್ನೆ VII. ಕೆಳಗಿನ ಗದ್ಯಭಾಗವನ್ನು ಓದಿಕೊಂಡು ಅದರ ಸಾರಾಂಶವನ್ನು ಸಂಗ್ರಹಿಸಿ ಐದಾರು ವಾಕ್ಯಗಳಲ್ಲಿ ಬರೆಯಿರಿ. 4

ಉತ್ತರ : ರಾಜಮನೆತನದವರಂತೆಯೇ ಇತರರೂ ಅದ್ಭುತ ರೀತಿಯಲ್ಲಿ ಶೌರ್ಯ, ಪರಾಕ್ರಮಗಳನ್ನು ತೋರಿಸುತ್ತಿದ್ದರು. ಶತ್ರುಗಳ ಪಡೆಗಳು ಅಥವಾ ಕಳ್ಳರ ಗುಂಪುಗಳು ಗ್ರಾಮಗಳನ್ನು ಮುತ್ತಿದಾಗ ಗ್ರಾಮರಕ್ಷಣೆಗಾಗಿ ಕಾಳಗ ಮಾಡಿ ಮಡಿದ ವೀರರಿಗೆ ವೀರಗಲ್ಲುಗಳೆಂಬ ಸ್ಮಾರಕ ಶಿಲೆಗಳನ್ನು ನೆಡುತ್ತಿದ್ದರು. ವೀರಗಲ್ಲುಗಳ ಮೇಲೆ ಸಾಮಾನ್ಯವಾಗಿ "ಗೆದ್ದರೆ ಸಂಪತ್ತು; ಸತ್ತರೆ ಸ್ವರ್ಗ ಸೌಖ್ಯ. ದೇಹವು ಯಾವ ಕ್ಷಣವಲ್ಲಿ ನಾಶವಾಗುವದೆಂಬುದೇ ಗೊತ್ತಿರುವದಿಲ್ಲ. ರಣರಂಗದಲ್ಲಿ ಮರಣ ಹೊಂದಲು ಚಿಂತೆಯಾದರೂ ಏತಕ್ಕೆ?"– ಎಂಬ ಅರ್ಥದ ಶ್ಲೋಕವನ್ನು ಕೆತ್ತಿರುವದು ವಾಡಿಕೆ.

ಉತ್ತರ : ಗ್ರಾಮಗಳು ಶತ್ರು ಇಲ್ಲವೆ ದರೋಡೆಕೋರರಿಂದ ದಾಳಿಗಳೊಳಗಾದಾಗ, ರಕ್ಷಣೆಗೋಸುಗ ಶೌರ್ಯ ಪರಾಕ್ರಮಗಳಿಂದ ಹೋರಾಡಿ ಮಡಿದ ವೀರರ ಸ್ಮಾರಕ ಶಿಲೆಗಳನ್ನು ನೆಡುತ್ತಿದ್ದರು ಇವು ವೀರಗಲ್ಲುಗಳು. "ಗೆದ್ದರೆ ಸಂಪತ್ತು; ಸತ್ತರೆ ಸ್ವರ್ಗ ಸೌಖ್ಯ...." ಎಂಬ ವೀರಗಾಥೆಯನ್ನು ಅವುಗಳ ಮೇಲೆ ಕೆತ್ತಿರುವದು ವಾಡಿಕೆ.

—●—

# ಕನ್ನಡ

**ಮಾರ್ಚ–೧೯೮೮ ಪ್ರಥಮ ಪತ್ರಿಕೆ**

ಅವಧಿ : 10-30 ರಿಂದ 1-00 ಅಂಕಗಳು : 100

ಪ್ರಶ್ನೆ I. ಒಂದು ಪುಟಕ್ಕೆ ಮೀರದಂತೆ ಮೂರು ಪ್ರಶ್ನೆಗಳಿಗೆ ಉತ್ತರಿಸಿರಿ.

1) ಭಾಗೀರಥಿಯು ಅನುಭವಿಸಿದ ಸಮಸ್ಯೆಗಳು ಮತ್ತು ಪಡೆದ ಪರಿಹಾರದೊಡನೆ "ಕೆರೆಗೆ ಹಾರ"ವಾದ ರೀತಿ ತಿಳಿಸಿರಿ.

ಉತ್ತರ : (1985 ಎಪ್ರಿಲ ಪ್ರಥಮ ಪತ್ರಿಕೆ 1 ನೇ ಪ್ರಶ್ನೆ 4ರ ಉತ್ತರ ನೋಡಿರಿ.)

2) ಕಿಟೆಲ್‌ರವರು ಕನ್ನಡ ಭಾಷೆಗೆ ಸಲ್ಲಿಸಿದ ಸೇವೆಯನ್ನು ತಿಳಿಯಪಡಿಸಿರಿ.

ಉತ್ತರ : ಕಿಟೆಲ್‌ರು ಜರ್ಮನರಾದರೂ ಅವರು ಕ್ರೈಸ್ತ ಧರ್ಮ ಪ್ರಚಾರಕ್ಕೆಂದು ಭಾರತಕ್ಕೆ ಬಂದು, ಇಲ್ಲಿ ಕನ್ನಡವನ್ನು ಕಲಿತು ಕನ್ನಡಕ್ಕೆ ಅಪಾರ ಸೇವೆ ಮಾಡಿದ್ದಾರೆ. ಅವರ ಕನ್ನಡ ಸೇವೆ ಅಪ್ರತಿಮವಾದುದು.

ಕಿಟೆಲ್‌ರು 1872ರಲ್ಲಿ ಕನ್ನಡ ಕೋಶದ ರಚನೆಗೆ ಹೊಣೆ ಹೊತ್ತರು. ಧಾರವಾಡಕ್ಕೆ ಬಂದು ಪ್ರಾಚೀನ ಗ್ರಂಥಗಳ ಶಬ್ದ ಸಂಪತ್ತಿಯನ್ನು ಶೇಖರಿಸಿ ಪರಿಷ್ಕರಿಸಿದರು. ದ್ರಾವಿಡ ಜಾತಿ ಶಬ್ದಗಳನ್ನು ಸಂಗ್ರಹಿಸಿ ನಿಷ್ಪತ್ತಿಯನ್ನು ಸೂಚಿಸಿದರು. ಗ್ರಂಥದ ಉದಾಹರಣೆಗಳನ್ನು ಕೊಟ್ಟರು. ಆಡು–ನುಡಿಗಳನ್ನು, ಗೀತೆಗಳನ್ನು ಸಂಗ್ರಹಿಸಿದರು. ಹಲವಾರು ಪದಾರ್ಥಗಳನ್ನು ಕಿಸೆಯಲ್ಲಿಟ್ಟುಕೊಂಡು ಧಾರವಾಡ, ಹುಬ್ಬಳ್ಳಿಗಳ ಬೀದಿಗಳಲ್ಲಿ

ಸಂಚರಿಸಿ ಹಳ್ಳಿಗರಿಂದ ಅರ್ಥಸಂಗ್ರಹ ಮಾಡುತ್ತಿದ್ದರು. ಹುಬ್ಬಳ್ಳಿಯ ವಸ್ತ್ರದ ಶಿವಲಿಂಗಪ್ಪ ಎಂಬವರಿಂದ ಅನೇಕ ಶಬ್ದ ಸಂಗ್ರಹಿಸಿದರು.

ಹೀಗೆ 70,000 ಶಬ್ದ ಸಂಗ್ರಹವುಳ್ಳ ಹಸ್ತಪತ್ರಿಕೆಯುನ್ನು 1892 ರಲ್ಲಿಸಿದ್ಧಪಡಿಸಿದರು. 1894ರಲ್ಲಿ ಅದನ್ನು ಪ್ರಕಟಪಡಿಸಿದರು. ಅದು ಅವರ "ಕನ್ನಡ ಇಂಗ್ಲೀಷ ನಿಘಂಟು" ಇಂದಿನ ಮಹಾನ್ ಕೃತಿಯಾಗಿದೆ. ಕೇಶಿರಾಜನ ಶಬ್ದಮಣಿದರ್ಪಣವೆಂಬ ಕನ್ನಡ ವ್ಯಾಕರಣವನ್ನು ಇಂಗ್ಲೀಷಿಗೆ ಅನುವಾದಿಸಿದ್ದಾರೆ. ನಾಗವರ್ಮನ ಛಂದೋಂಬುಧಿಯನ್ನು ಶಾಸ್ತ್ರೀಯವಾಗಿ ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಭಾರತೀಯ ಸಂಗೀತವನ್ನು ಕುರಿತು ನಿಜಗುಣರ ಅಭಿಪ್ರಾಯಗಳ ಬಗೆಗೆ ಲೇಖನ ಬರೆದರು. ಅಲ್ಲದೆ ಅನೇಕ ಪ್ರಾರ್ಥನಾ ಪದ್ಯಗಳನ್ನು ರಚಿಸಿದ್ದಾರೆ. ಕ್ರಿಸ್ತ ಚರಿತ್ರೆಯನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾರೆ. ಇದೆಲ್ಲ ಅವರ ತಪಸ್ಸಿನ ಫಲ. ಹೀಗೆ ಕಿಟೆಲ್‌ರು ಕನ್ನಡಕ್ಕೆ ಬಹುಮುಖ ಸೇವೆ ಸಲ್ಲಿದ್ದಾರೆ.

**3. ಕೆಳದಿಯು ಗಂಡಾಂತರಕ್ಕೆ ಗುರಿಯಾದಾಗ ಚೆನ್ನಮ್ಮ ಅದನ್ನು ಪಾರುಮಾಡಿದ್ದನ್ನು ವಿಶದಪಡಿಸಿರಿ.**

**ಉತ್ತರ :** (1985 ನೇ ಅಕ್ಟೋಬರ ಪ್ರಥಮ ಪತ್ರಿಕೆ 1 ನೇ ಪ್ರಶ್ನೆ 5 ರ ಉತ್ತರ ನೋಡಿರಿ.)

**4. ರಾಕ್ಷಸರು ಕುಂಭಕರ್ಣನನ್ನು ಎಬ್ಬಿಸಲು ಮಾಡಿದ ಪ್ರಯತ್ನಗಳು ಯಾವವು ?**

**ಉತ್ತರ:** (1984ನೇ ಎಪ್ರೇಲ ಪ್ರಥಮ ಪತ್ರಿಕೆ 1 ನೇ ಪ್ರಶ್ನೆ 5ರ ಉತ್ತರ ನೋಡಿರಿ).

**5. ಮೊಲವು ಸಿಂಹವನ್ನು ಕೊಂದ ಬಗೆ ವಿವರಿಸಿ.**

**ಉತ್ತರ :** ಬಾವಿಯಲ್ಲಿ ತನ್ನ ಪ್ರತಿಬಿಂಬವನ್ನು ಕಂಡ ಮೊಲವು ಸಿಂಹವನ್ನು ಕೊಲ್ಲಲು ಇದೇ ತಕ್ಕ ಉಪಾಯವೆಂದು ಭಾವಿಸಿತು. ಮೊಲವು ಸಿಂಹನಲ್ಲಿಗೆ ತಡಮಾಡಿ ಬಂದಿತು. ಇದರಿಂದ ಸಿಟ್ಟಿಗೆದ್ದ ಸಿಂಹವು ತಡವಾಗಿ ಬರಲು ಕಾರಣವೇನೆಂದು ಕೇಳಿತು. ಆಗ ಮೊಲವು ತನ್ನ ಮಾರ್ಗದಲ್ಲಿ ಬೇರೊಂದು ಸಿಂಹವು ತಡೆಗಟ್ಟಿತೆಂದೂ, ತಾನು ಹೊರಟ ಸಮಾಚಾರ ಕೇಳಿ ಗಜಗಳಿಗೆ ಅಂಜಿ ಕ್ಷುದ್ರ ಪ್ರಾಣಿ (ಮೊಲ) ಗಳನ್ನು ತಿನ್ನುವ "ಆ ಸಿಂಗಂ ತಾಂಗಾನ ಸಿಂಗಮುಂ" ಎಂದು ಜರೆಯಿತೆಂದೂ ಸುಳ್ಳುಹೇಳಿತು.

ಸಿಂಹವನ್ನು ಗ್ರಾಮಸಿಂಹ ಅಥವಾ ನಾಯಿಯೆಂದು ಜರೆದು ಅದರ ಪರಾಕ್ರಮಕ್ಕೆ ಚುಚ್ಚಿ ಮಾತನಾಡಿದ ಈ ಮಾತು ಉದ್ದೇಶಿತ ಪರಿಣಾಮವನ್ನುಂಟುಮಾಡಿತು. ಕೋಪಾಂಧನಾಗಿ ಸಿಂಹವು ಮೊಲದ ಮೋಸದ ಜಾಲಕ್ಕೆ ಸಹಜವಾಗಿ ಬಲಿಬಿದ್ದಿತ್ತು. ಆಗ ಮೊಲವು ಆ ಸಿಂಹವನ್ನು ಬಾವಿಯ ಬಳಿಗೆ ಕರೆತಂದು, ಅದರ ಪ್ರತಿಬಿಂಬವನ್ನು ಬಾವಿಯ ನೀರಿಲ್ಲಿ ತೋರಿಸಿತು. ಆಗ ಬಾವಿಯಲ್ಲಿ ಕಂಡುಬಂದ ತನ್ನದೇ ಪ್ರತಿಬಿಂಬವನ್ನು ನೋಡಿ, ಅದು ಮತ್ತೊಂದು ಸಿಂಹವೆಂದು ಭಾವಿಸಿ, ಆ ಮೂರ್ಖ ಸಿಂಹವು ಅದರ ಮೇಲೆ ಎರಗಿತು. ಇದರಿಂದ ಬಾವಿಯಲ್ಲಿ ಬಿದ್ದ ಸಿಂಹವು ತನ್ನ ಪ್ರಾಣವನ್ನು ಕಳೆದುಕೊಂಡಿತು. ಹೀಗೆ ಮೊಲವು ಉಪಾಯದಿಂದ ಸಿಂಹವನ್ನು ಕೊಂದಿತು.

**6. ಲೇಖಕರು ಅಪ್ಪುರಾಯನ ಭೂತವಾದುದು ಹೇಗೆ ?**

**ಉತ್ತರ :** ಕೆಲಸಕ್ಕಾಗಿ ಹುಬ್ಬಳ್ಳಿಯಲ್ಲಿದ್ದ ಲೇಖಕರಿಗೆ ಒಮ್ಮೆ ಜ್ವರ ಬಂದು ನಿತ್ರಾಣಗೊಂಡರು. ವೈದ್ಯರ ಸಲಹೆಯಂತೆ ಅಥಣಿಯಲ್ಲಿರುವ ತನ್ನ ಅಣ್ಣನ ಮನೆಗೆ ಹೊರಟುಬಂದರು. ಆ ಮನೆ ದೆವ್ವದ ಮನೆ ಎಂದು ಜನರಾಡಿಕೊಳ್ಳುತ್ತಿದ್ದರು. ಲೇಖಕರು ಇಲ್ಲಿ ಮನೆಗೆ ಬಂದಾಗ್ಗೆ ಕೀಲಿ ಹಾಕಿದ್ದಿತು. ಅದನ್ನು ತಾನೇ ತೆಗೆದು ಒಳಗೆ ಹೋಗಿ ಮಲಗಿಕೊಂಡರು. ಆಗ ಅವರ ಮನಸ್ಸಿನಲ್ಲಿ ಕುಚೇಷ್ಟೆ ಮಾಡುವ ವಿಚಾರ ಸುಳಿಯಿತು. ತಮ್ಮ ಜನರಿಗೆ ಬುದ್ಧಿ ಕಲಿಸಬೇಕು ಎಂದುಕೊಂಡು ಹಿತ್ತಲಬಾಗಿಲ ತೆರೆದಿಟ್ಟು ಹೊರಗೆ ಬಂದು ನಡುಮನೆಯ ಬಾಗಿಲು ಮುಚ್ಚಿ ಹೊರಬಾಗಿಲಿಗೆ ಮೊದಲಿದ್ದಂತೆ ಕೀಲಿಹಾಕಿ ಪುನಃ ಹಿತ್ತಲ ಬಾಗಿಲನಿಂದ ಒಳಗೆ ಬಂದು ಅಗಳಿ ಜಡಿದು ನಡುಮನೆಯಲ್ಲಿ ಮಲಗಿದರು. ಜ್ವರ ಬಂದು ಆಯಾಸವಾಗಿದ್ದರಿಂದ ನಿದ್ರೆಯಲ್ಲಿ ನರಳುತ್ತಿದ್ದರು.

ಸ್ವಲ್ಪ ಸಮಯದ ನಂತರ ಲೇಖಕರ ಅತ್ತಿಗೆಯು ತಮ್ಮ ಮತ್ತು ಲೇಖಕರ ತಮ್ಮ ಹಾಗೂ ಸ್ವತಃ ಲೇಖಕರ ಹೆಂಡತಿ ಮನೆಗೆ ಬಂದರು. ಕೀಲಿ ತೆಗೆದು ಒಳನಡೆದರು. ಆದರೆ ನರಳುವಿಕೆಯ ಶಬ್ದ ಕೇಳಿ ಹೆದರಿಕೆ ಉಂಟಾಗಿ ಅಪ್ಪಾರಾಯನ ಭೂತವೇ ಆಗಿರಬೇಕೆಂದು ತಿಳಿದರು. ಅವರ ಪತ್ನಿಯಂತೂ ದೆವ್ವ ಎಂದು ಚಿಟ್ಟನೆ ಚೀರಿ ಬವಳಿ ಬಂದು ಬಿದ್ದಿದ್ದಳು. ಲೇಖಕರ ಅಣ್ಣನ ಗೆಳೆಯ ಗುರುನಾಥರಾಯರು ಕೂಡಾ ರಾತ್ರಿ ಮನೆಯೊಳಗೆ ಹೊಕ್ಕು ಕಂದೀಲಿನ ಬೆಳಕಿನಲ್ಲಿ 'ನೀರು ನೀರು' ಎಂದು ಕೂಗುವ ಶಬ್ದವನ್ನು ಕೇಳಿ ಥಣ್ಣಗಾದರು. ಕೊನೆಯಲ್ಲಿ ಲೇಖಕರ ಅಣ್ಣ ಮಾತ್ರ ಧೈರ್ಯವಾಗಿ ಒಳಗೆ ಹೋಗಿ ನೋಡಿ ಲೇಖಕರನ್ನು ಗುರುತಿಸಿದ. ಹೀಗೆ ಲೇಖಕರು ಅಪ್ಪಾರಾಯನ ಭೂತವಾಗಿ ಕಂಡರು.

**ಪ್ರಶ್ನೆ II. ಒಂದು ಪುಟಕ್ಕೆ ಮೀರದಂತೆ ಎರಡು ಪ್ರಶ್ನೆಗಳಿಗೆ ಉತ್ತರಿಸಿರಿ.**

1. ತರುಣ ಮಿತ್ರನಿಗೆ ಕವಿಯು ನೀಡಿರುವ ಉಪದೇಶವೇನು?

ಉತ್ತರ: (1984 ಎಪ್ರೀಲ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 2ರ ಉತ್ತರ ನೋಡಿರಿ.)

2. ಸ್ವಾತಂತ್ರ್ಯ ವರ್ಧಂತಿಯಂದು ಕವಿ ಅಂಬಿಕಾತನಯದತ್ತರು ಕೊಟ್ಟಿರುವ ಸಂದೇಶವೇನು?

ಉತ್ತರ: (1984 ನೇ ಅಕ್ಟೋಬರ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 1 ರ ಉತ್ತರ ನೋಡಿರಿ.)

3. ನಂಜುಂಡಕವಿಯ ವರ್ಣನೆಯಂತೆ ಕನ್ನಡ ಜನಪದದ ಸೊಗಸೇನು?

ಉತ್ತರ: (1985 ನೇ ಅಕ್ಟೋಬರ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 3 ರ ಉತ್ತರ ನೋಡಿರಿ.)

4. ಅಭಿಮನ್ಯುವು ಧರ್ಮರಾಜನೆದುರು ಆಡಿದ ಮಾತಿನಂತೆ ರಣರಂಗದಲ್ಲಿ ತೋರಿಸಿದ ಪರಾಕ್ರಮವನ್ನು ವರ್ಣಿಸಿರಿ.

ಉತ್ತರ: (1984 ನೇ ಎಪ್ರೀಲ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 4 ರ ಉತ್ತರ ನೋಡಿರಿ )

ಪ್ರಶ್ನೆ III ಅ) ಕೆಳಗಿನ ಪದ್ಯದ ಸಾರಾಂಶವನ್ನು ಬರೆಯಿರಿ.

ಆದಡೈವರು ಮಕ್ಕಳನು ತಲೆ
ಗಾದು ತೋಱ್ಸಿ ಕಂದ ನಿನಗೇ
ನೀ ದುರಾಗ್ರಹವೊಪ್ಪುವುದೆ ಕೌರವನ ಸೇವೆಯಲಿ
ಹೋದ ಬಾಣವ ಮರಳಿ ತೊಡದಿರು
ಮಾದುಕಳೆ ವೈರವನೆನಲ್ಕಹ
ಸಾದವೆಂದು ಬೀಳುಕೊಂಡನು ಬಂದನರಮನೆಗೆ

ಉತ್ತರ : ಹಾಗಾದರೆ ನೀನು ನನ್ನ ಐದು ಮಕ್ಕಳನ್ನೂ ಕಾಪಾಡು. ನಿನಗೆ ಈ ಹಟವು ಶೋಭಿಸುವದೇ ? ನೀನು ಕೌರವನ ಸೇವೆಯಲ್ಲಿರುವಾಗ ಹೋದ ಬಾಣವನ್ನು ಮತ್ತೆ ಹೂಡಬೇಡ. ಪಾಂಡವರೊಡನೆ ಇರುವ ನಿನ್ನ ವೈರವನ್ನು ಬಿಟ್ಟು ಬಿಡು ಎಂದು ಕುಂತಿಯು ಹೇಳಲು ಕರ್ಣನು ಹಾಗೆಯೇ ಆಗಲಿ (ತಮ್ಮ ಮಾತು ಪ್ರಸಾದ) ಎಂದು ಹೇಳಿ ತನ್ನ ತಾಯಿಯನ್ನು ಬೀಳ್ಕೊಟ್ಟು ಅರಮನೆಗೆ ಬಂದನು.

ಬ) ಕೆಳಗಿನ ಹಳಗನ್ನಡ ಗದ್ಯಭಾಗವನ್ನು ಹೊಸಗನ್ನಡಕ್ಕೆ ಅನುವಾದಿಸಿರಿ.

ಈ ತರುವಲಿ ನಮ್ಮೂರೊಳಿರೆ ನಮಗಂ ಸಾವುಂ ಕೇಡುಮ ಮೊಘಮಕ್ಕ ಮಿವನನಟಿನ ಕಳೆಯಿಮೆಂದೂರಿಂದನಿ ಬರುಮಟ್ಟಿ ಕಳಿದೊಡಾತನ್ ಕೆಲದೂರ್ಗಳುಮಂ ನಾಳ್ಗಳುಮಂ ತೊಳಲ್ದು ಬೈಕಂದಿರಿದಲ್ಲಿ ಯಾಸುಂ ಪೆತ್ತುಂ ಪೆರದೆಯುಮಿಂತು ಬಾಳುತ್ತಂ ಪದಿನೈದು ಪದಿನಾರು ವರುಷದ ಪ್ರಾಯದನಾಗಿ ವೈದಿಶಮಂಬ ಪೊಳಲ್ಗೆ ವರ್ಪೊನ್.

ಉತ್ತರ : ಈ ಬಾಲಕ ನಮ್ಮೂರಲ್ಲಿದ್ದರೆ ನನಗೆ ಸಾವು-ನೋವುಗಳು ನಿಶ್ಚಿತವೆಂದು ಇವನನ್ನು ಊರುಬಿಟ್ಟು ಓಡಿಸಿದರು. ಆತನು ಪಕ್ಕದ ಊರುಗಳಲ್ಲಿ ಭಿಕ್ಷೆಬೇಡಿ ತೊಳಲುತ್ತಿದ್ದನು. ಭಿಕ್ಷೆ ದೊರೆತರೆ ದೊರೆಯಿತು. ಇಲ್ಲದಿದ್ದರೆ ಇಲ್ಲ ಹೀಗೆಯೇ ಬಾಳುತ್ತ ಹದಿನೈದು–ಹದಿನಾರು ವರುಷದವನಾಗಿ ವೈದಿಶವೆಂಬ ಪಟ್ಟಣಕ್ಕೆ ಬಂದನು.

ಪ್ರಶ್ನೆ IV ಕೆಳಗಿನ ಪದ್ಯಭಾಗಗಳನ್ನು ಪೂರ್ಣಗೊಳಿಸಿರಿ.

1) ನಾಡ ಸೊಬಗೇ……… 2) ಕುಟಿಲವ………
…………ಬಂದಿರುವುದೇ ? ………ಫಲ ?
ಹೂಬಳ್ಳಿ……… ಸಟೆಯ………
………ನಿಂದಿರುವುದೇ ? ………ಫಲ ?

ಉತ್ತರ : (ನಿಮ್ಮ ಪಠ್ಯ ಪುಸ್ತಕದ ಪದ್ಯಭಾಗದಲ್ಲಿ ನೋಡಿರಿ)

ಪ್ರಶ್ನೆ V ಇವರಲ್ಲಿ ಇಬ್ಬರ ಸ್ಥಳ, ಕಾಲ, ಕೃತಿ ವಿಶೇಷಗಳನ್ನು ತಿಳಿಸಿರಿ.

1 ನಾಗಚಂದ್ರ 2 ಮುದ್ದಣ 3 ತ. ರಾ. ಸುಬ್ಬರಾವ್.

ಉತ್ತರ: 1. ನಾಗಚಂದ್ರ— (1986 ನೇ ಅಕ್ಟೋಬರ ಪ್ರಥಮ ಪತ್ರಿಕೆ 5ನೇ ಪ್ರಶ್ನೆ 1 ರ ಉತ್ತರ ನೋಡಿರಿ)

2 ಮುದ್ದಣ— (1984 ನೇ ಅಕ್ಟೋಬರ ಪ್ರಥಮ ಪತ್ರಿಕೆ 5ನೇ ಪ್ರಶ್ನೆ 1 ರ ಉತ್ತರ ನೋಡಿರಿ)

3. ತ. ರಾ. ಸುಬ್ಬರಾವ್— ಇವರು ನಮ್ಮ ಕಾಲದ ಪ್ರಸಿದ್ಧ ಕಾದಂಬರಿ ಕಾರರಲ್ಲಿ ಒಬ್ಬರು. ಕಥೆ, ಕಾದಂಬರಿ, ನಾಟಕ ಮತ್ತು ಜೀವನ ಚರಿತ್ರೆ ಈ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿ ಕೃತಿ ರಚನೆ ಮಾಡಿದ್ದಾರೆ. ಕನ್ನಡದ ಐತಿಹಾಸಿಕ ಕಾದಂಬರಿಕಾರರಲ್ಲಿ ತ.ರಾ.ಸು ಅವರು ಪ್ರಸಿದ್ಧರಾಗಿದ್ದಾರೆ. "ಕಂಬನಿಯ ಕುಯಿಲು" 'ರಕ್ತರಾತ್ರಿ' "ತಿರುಗುಬಾಣ" "ಹಂಸಗೀತೆ" "ಶಿಲ್ಪಶ್ರೀ" ಇವು ಇವರ ಉತ್ತಮ ಕೃತಿರಚನೆಗಳು. ಇವರ ಕೃತಿಗಳು 50ಕ್ಕೂ ಹೆಚ್ಚಿವೆ.

ಪ್ರಶ್ನೆ VI ಕೆಳಗಿನ ವಾಕ್ಯಗಳ ಸಂದರ್ಭ ಮತ್ತು ಸ್ವಾರಸ್ಯ ತಿಳಿಸಿರಿ. (4 ಕ್ಕೆ ಮಾತ್ರ).

1. ಸಂಚು ಹೂಡುವದಿಲ್ಲ ಹೊಂಚು ಹಾಕುವುದಿಲ್ಲ.

ಉತ್ತರ : ಈ ಮಾತು "ಪ್ರಾಣಿಗಳು" ಎಂಬ ಕವನದಲ್ಲಿ ಬಂದಿದೆ. ಮನುಷ್ಯನಲ್ಲಿರುವ ದೌರ್ಬಲ್ಯಗಳಲ್ಲಿ ಸಂಚು ಹೂಡುವದು, ಹೊಂಚು ಹಾಕುವದೂ ಇದೆ. ಆದರೆ ಪ್ರಾಣಿಗಳ ಜೀವನದಲ್ಲಿ ಇದಾವುದೂ ಇಲ್ಲ. ಆದ್ದರಿಂದ ಪ್ರಾಣಿ ಜೀವನ ಮೇಲು ಎಂದು ಮೆಚ್ಚಿಕೊಂಡು ಕವಿ ಈ ಮಾತನ್ನು ಹೇಳಿದ್ದಾನೆ.

2) ಪರಹಿತಕೆ ಬಳಲುತಿರಲದುವೆ ಜೀವನವು.

ಉತ್ತರ : ಈ ಮಾತು "ಗುರಿ" ಕವನದಲ್ಲಿ ಬಂದಿದೆ. ಜೀವನ ಸಾರ್ಥಕತೆ ಅಡಗಿರುವದು ಪರಹಿತ ಸಾಧನೆಯಲ್ಲಿ. ಕೇವಲ ಸ್ವಹಿತ ಸಾಧನೆಯಲ್ಲಿ ತೊಡಗುವದು ಮನುಷ್ಯ ಲಕ್ಷಣವಲ್ಲ. ಪ್ರಾಣಿಗಿಂತ ಮನುಷ್ಯ ಭಿನ್ನವೆನಿಸಿಕೊಳ್ಳುವದು ತನ್ನ ಬುದ್ಧಿಮತ್ತೆಯಿಂದ. ಆ ಬುದ್ಧಿಯನ್ನು ಇತರರ ಕಲ್ಯಾಣಕ್ಕಾಗಿ ಉಪಯೋಗಿಸಿದರೆ ಮನುಷ್ಯ ಜನ್ಮ ಪಡೆದುದಕ್ಕೂ ಸಾರ್ಥಕ ಎಂಬ ಮಾತನ್ನು ಕವಿ ಹೇಳಿದ್ದಾರ

3) ಮಹಾತ್ಮರಾದವರು ಕೊಟ್ಟ ಶಾಪವು ತಪ್ಪದು.

ಉತ್ತರ : ಈ ಮಾತು "ರಾಕ್ಷಸರು ಕುಂಭಕರ್ಣನನ್ನೆಬ್ಬಿಸಿದ್ದು" ಎಂಬ ಪಾಠದಲ್ಲಿದೆ ರಾವಣನು ತನ್ನ ರಾಕ್ಷಸರನ್ನು ಕುರಿತು– "ನನಗೆ ಬ್ರಹ್ಮನು ಮನುಷ್ಯರಿಂದ ನಿನಗೆ ಮರಣ ಭಯವಿದೆ ಎಂದು ಹೇಳಿದನು, ಅದರಂತೆ ವೇದವತಿಯೆಂಬ ಸ್ತ್ರೀಯಿಂದ ಶಾಪ ದೊರಕಿದೆ ಇದಲ್ಲದೆ ಪಾರ್ವತಿಯೂ, ನಂದೀಶ್ವರನೂ, ರಂಭೆಯೂ ಶಾಪಕೊಟ್ಟಿದ್ದಾರೆ. ಈ ಮಹಾತ್ಮರ ಶಾಪ ತಪ್ಪುವದಿಲ್ಲ. ಆದ್ದರಿಂದ ಇದನ್ನು ಪರಿಹರಿಸುವ ದಾರಿ ಕಾಣದಾಗಿದೆ........" ಎಂದು ಹೇಳುತ್ತಾನೆ.

4) ಅರಾಜಕಕ್ಕೆ ಔಷಧವು ದಂಡೋಪಾಯ.

ಉತ್ತರ : ಚನ್ನಮ್ಮಾಜಿಯು ಚಿಕ್ಕವಯಸ್ಸಿನಲ್ಲಿಯೇ ತನ್ನ ಪತಿಯ ಆಡಳಿತದಲ್ಲಿ ತಾನು ಭಾಗಿಯಾಗುತ್ತಿದ್ದಳು. ಇದರಿಂದ ಸಣ್ಣವಳಾದರೂ ಚಾಣಾಕ್ಷಳಾದ ಈಕೆ ಅಲ್ಪ ಕಾಲದಲ್ಲಿಯೇ ರಾಜನೀತಿಯ ರಹಸ್ಯವನ್ನು ಅರಿತುಕೊಂಡಿದ್ದಳು. ಅಲ್ಲದೆ ಅರಾಜಕತೆಗೆ ಔಷಧವು ದಂಡೋಪಾಯ ಎಂಬುದನ್ನು ಮನಗಂಡು ತ್ವರಿತವಾಗಿ ಕಠೋರವಾದ ಯೋಜನೆಯನ್ನು ಕೈಕೊಂಡು ಉನ್ಮಾರ್ಗಿಗಳನ್ನು ಶೋಧಿಸಿ ಶಾಸನಕ್ಕೆ ಗುರಿಮಾಡಿದಳು.

5) ಧರ್ಮ ಜನರನ್ನು ಒಡೆಯುವುದಿಲ್ಲ; ಒಂದುಗೂಡಿಸುತ್ತದೆ.

ಉತ್ತರ : ಈ ಮಾತು "ಗಾಂಧೀಜಿ ಹಾಗೂ ಸಮಾಜ ಕಲ್ಯಾಣ" ಎಂಬ ಪಾಠದಲ್ಲಿ ಬಂದಿದೆ. ಗಾಂಧೀಜಿಯವರ ಧಾರ್ಮಿಕ ವಿಚಾರವನ್ನು ಹೇಳುವ ಸಂದರ್ಭದಲ್ಲಿ ಈ ಮಾತು ಬರುತ್ತದೆ. ಗಾಂಧೀಜಿಯವರು ಯಾವ ಧರ್ಮವನ್ನು ಕಡೆಗಣಿಸಿದವರಲ್ಲ ಜಾತಿದ್ವೇಷ ಸಮಾಜದ ಅವನತಿಗೆ ಕಾರಣವಾಗುತ್ತದೆ. ಧರ್ಮ ಜನರನ್ನು ಒಡೆಯುವದಿಲ್ಲ; ಒಂದುಗೂಡಿಸುತ್ತದೆ ಎಂದು ತಮ್ಮ ಧಾರ್ಮಿಕ ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ.

6) ಎಸಳೆಯಾಲಕ್ಕಿ ಗೊನಿನಾತ

"ಕನ್ನಡ ಗರತಿ" ಎಂಬ ಪಾಠದಲ್ಲಿ ಈ ಮಾತು ಬಂದಿದೆ. ಗರತಿಯ ದೈನಂದಿನ ಚಟುವಟಿಕೆಗಳನ್ನು ವಿವರಿಸುವ ಸಂದರ್ಭದಲ್ಲಿ "ಸಗಣಿಯ ಬಳಿದ ಕೈ ಎಸಳ ಯಾಲಕ್ಕಿ ಗೊನಿನಾತ" ಎಂದು ಕಸ–ಸಗಣಿಗಳೂ, ಕಸ್ತೂರಿ–ಯಾಲಕ್ಕಿಗಳ ಕಂಪಿನ ವಾಸನೆಯನ್ನು ಕಾಣುವದು ಲೇಖಕರ ಅಭಿಪ್ರಾಯ. ಎಲ್ಲವೂ ಪವಿತ್ರವೇ ಅವಳಿಗೆ ಎಂದಿದ್ದಾರೆ.

ಪ್ರಶ್ನೆ VII ಈ ಕೆಳಗಿನವುಗಳನ್ನು ನಾಲ್ಕು ಅಥವಾ ಐದು ವಾಕ್ಯಗಳಲ್ಲಿ ಉತ್ತರಿಸಿರಿ.

1) ಬಂಕಾಪುರವು "ಪಂಡಿತಪುರಿ" ಎಂದು ಏಕೆ ಹೆಸರಾಗಿದ್ದಿತು ?

2) "ಬಿಜಾಪುರ" ಎಂಬ ಹೆಸರು ಬರಲು ಕಾರಣವೇನು ?

ಉತ್ತರ : ( 1984 ನೇ ಎಪ್ರೀಲ ಪ್ರಥಮ ಪತ್ರಿಕೆ 7ನೇ ಪ್ರಶ್ನೆ 1 ಹಾಗೂ 4 ರ ಉತ್ತರ ನೋಡಿರಿ)

3) ಮಾತೃ ಭಾಷೆಯ ಬಗ್ಗೆ ರವೀಂದ್ರರ ಅಭಿಪ್ರಾಯವೇನು ?

ಉತ್ತರ : ರವೀಂದ್ರರು ಮಾತೃಭಾಷಾ ಪ್ರೇಮಿಯಾಗಿದ್ದರು ದೇಶೀಯರಲ್ಲಿ ಪರಭಾಷೆಯನ್ನು ಕಲಿಯುವುದು ಅಸಾಧ್ಯ ಅವಶ್ಯಕವಾದ ಜ್ಞಾನಾರ್ಜನೆಯನ್ನು ಮನುಷ್ಯ ಮಾತೃಭಾಷೆಯಿಂದ ಸುಲಭವಾಗಿ ಪಡೆಯಬಹುದು ಇದು ಮಾತೃಭಾಷೆ ಬಗೆಗೆ ರವೀಂದ್ರರ ಅಭಿಪ್ರಾಯವಾಗಿದ್ದಿತು

4) ಕಣ್ವರು ಶಾರ್ಙ್ಗರವನ ಮೂಲಕ ದುಷ್ಯಂತನಿಗೆ ಕಳುಹಿಸಿದ ಸಂದೇಶವೇನು ?

ಉತ್ತರ : (1985 ನೇ ಅಕ್ಟೋಬರ ಪ್ರಥಮ ಪತ್ರಿಕೆ 7 ನೇ ಪ್ರಶ್ನೆ 5ರ ಉತ್ತರ ನೋಡಿರಿ)

5) ಕೋಣನ ಕ್ಷಮಾಗುಣವನ್ನು ಕಂಡು ವೃಕ್ಷ ದೇವತೆ ಏನೆಂದು ಹೇಳಿತು ?

ಉತ್ತರ : 1986 ನೇ ಮಾರ್ಚ ಪ್ರಥಮ ಪತ್ರಿಕೆ 7ನೇ ಪ್ರಶ್ನೆ 1 ರ ಉತ್ತರ ನೋಡಿರಿ)

ಪ್ರಶ್ನೆ VIII. ಗುಹೆಯ ಬಾಗಿಲೊಳ್ ಸಿಂಹ ಮಿರ್ಪಂದದಿಂ ಭಾರದ್ವಾಜಂ ಸಿಂಧುರಾಜಂ ಬೆರೆಸು ಚಕ್ರವ್ಯೂಹದ ಬಾಗಿಲೊಳ್ ನೆರೆದು ಮೆರೆದು ನಿಂದಿರ್ದಂ

ಇಲ್ಲಿರುವ ಅಲಂಕಾರವನ್ನು ಹೆಸರಿಸಿ ಸಮನ್ವಯ ಮಾಡಿ

ಉತ್ತರ: ಗುಹೆಯ ಬಾಗಿಲೊಳ್ ಸಿಂಹ ಮಿರ್ಪಂದದಿಂ-ಇದು ಉಪಮಾನ ಭಾರದ್ವಾಜಂ ಸಿಂಧುರಾಜಂ ಬೆರೆಸು ಚಕ್ರವ್ಯೂಹದ ಬಾಗಿಲೊಳ್ ಮೆರೆದು ನಿಂದಿರ್ದಂ—ಇದು ಉಪಮೇಯ. ಗುಹೆ— ಚಕ್ರವ್ಯೂಹ, ಸಿಂಹ-ಭಾರದ್ವಾಜಂ ಇವುಗಳಲ್ಲಿ ಹೋಲಿಕೆ ಮಾಡಲಾಗಿದೆ. ರಕ್ಷಣೆ ಮಾಡುವದು ಸಾಮಾನ್ಯ ಗುಣಧರ್ಮವಿದೆ. ಪರಸ್ಪರ ಹೋಲಿಕೆ ಇರುವುದರಿಂದ ಇದು ಉಪಮಾಲಂಕಾರ.

ಪ್ರಶ್ನೆ IX ಕೆಳಗಿನ ಪದ್ಯಾರ್ಥಕ್ಕೆ ಪ್ರಸ್ತಾರ ಹಾಕಿ ಗಣ ವಿಂಗಡಿಸಿ ಛಂದಸ್ಸಿನ ಹೆಸರನ್ನು ಬರೆಯಿರಿ.

ಬರಲು ತಾಯ್ಗಿದಿರಾಗಿ ರವಿಸುತ
ನಿರದೆ ಬಂದನು ದಂಡದಂತಿರೆ
ಚರಣದಲಿ ಮೈಯಿಕ್ಕಲಾತನ ನೊಸಲ ನೆಗಹಿದಳು.

ಉತ್ತರ:

UUU | –UU | –U | UUUU
ಬರಲು | ತಾಯ್ಗಿದಿ | ರಾಗಿ | ರವಿಸುತ
೩ ೪ ೩ ೪

UUU | –UU | –U | –UU
ನಿರದೆ | ಬಂದನು | ದಂಡ | ದಂತಿರೆ
೩ ೪ ೩ ೪

UUU | UU– | –U | –UU |
ಚರಣ | ದಲಿಮೈ | ಯಿಕ್ಕ | ಲಾತನ
೩ ೪ ೩ ೪

UUU | UUUU | –
ನೊಸಲ | ನೆಗಹಿದ | ಳು.
೩ ೪ ಗು.

ಇದು ಭಾಮಿನಿ ಷಟ್ಪದಿಯಾಗಿದೆ.

ಪ್ರಶ್ನೆ X ಕೆಳಗಿನ ಪದಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಉಪಯೋಗಿಸಿ ಬರೆಯಿರಿ.

1. ಮೂಗುಮುರಿ 2. ಕಂಟಕಪ್ರಾಯ
3. ಭವದ್ವಂಶ

ಉತ್ತರ: 1. ಸಣ್ಣಸಣ್ಣ ತಪ್ಪುಗಳಿಗೆ ಮೂಗುಮುರಿಯುವದು ಸರಿಯಲ್ಲ.
2. ಅದು ಅವನ ಪಾಲಿಗೆ ಕಂಟಕಪ್ರಾಯವಾಗಿ ಪರಿಣಮಿಸಿತು.
3. ಭವದ್ವಂಶವು ಕುಡಿಯೊಡೆದು ಬೆಳೆಯುತ್ತ ಸಾಗಲಿ.

ಪ್ರಶ್ನೆ XI ಅ) ಇವುಗಳ ವಿಗ್ರಹವಾಕ್ಯ ಬರೆದು ಸಮಾಸದ ಹೆಸರನ್ನು ಬರೆಯಿರಿ.

1. ನಿಟ್ಟುಸಿರು 2. ಮೈದೊಳೆ 3. ಇರ್ಮಡಿ

ಉತ್ತರ : 1 ನಿಡಿದಾದ+ಉಸಿರು = ನಿಟ್ಟುಸಿರು. ಕರ್ಮಧಾರಯ ಸಮಾಸ.
2 ಮೈಯಂ+ತೊಳೆ = ಮೈದೊಳೆ ಕ್ರಿಯಾ ಸಮಾಸ.
3 ಎರಡು+ಮಡಿ = ಇರ್ಮಡಿ ದ್ವಿಗು ಸಮಾಸ.

ಬ) ಸಂಧಿಗಳನ್ನು ವಿಂಗಡಿಸಿ ಹೆಸರಿಸಿ.

1. ಮೃಗೇಂದ್ರ 2. ತನಿಗಂಪು
3. ಲೋಕೈಕ ವೀರ

1. ಮೃಗ+ಇಂದ್ರ = ಮೃಗೇಂದ್ರ ಗುಣಸಂಧಿ
2. ತನಿದು+ಕಂಪು = ತನಿಗಂಪು ಕರ್ಮಧಾರಯ ಸಂಧಿ
3. ಲೋಕ+ಏಕವೀರ = ಲೋಕೈಕವೀರ ವೃದ್ಧಿಸಂಧಿ

ಕ) ಈ ಕೆಳಗಿನ ಶಬ್ದಗಳಲ್ಲಿ ತತ್ಸಮಕ್ಕೆ ತದ್ಭವವನ್ನೂ ತದ್ಭವಕ್ಕೆ ತತ್ಸಮವನ್ನೂ ಬರೆಯಿರಿ.

1. ನಿಚ್ಚ 2. ಕುಬ್ಜ 3. ವಿದ್ಯಾ

ಉತ್ತರ 1. ನಿತ್ಯ (ತ್ಸ) 2. ಕುಳ್ಳ (ದ್ಭ) 3. ಬಿಜ್ಜೆ (ದ್ಭ)

ಪ್ರಶ್ನೆ XII (ಅ) ಒಂದೊಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

1. ಶ್ರೀಮತಿ ರುತ್‌ಷೆಯೀನಿಮನ್ ಏನು ಕೆಲಸ ಮಾಡುತ್ತಿದ್ದರು?

ಉತ್ತರ: 1. ಶ್ರೀಮತಿ ರುತ್‌ಷೆಯೀನಿಮನ್ ಪುಸ್ತಕಗಳಿಗೆ ರಟ್ಟು ಕಟ್ಟುವ ಕೆಲಸ ಮಾಡುತ್ತಿದ್ದರು.

2. ರನ್ನಮಯ್ಯನ ವಿದ್ಯಾರ್ಜನೆಯ ಉದ್ದೇಶವೇನು?

ಉತ್ತರ: ರಾಜಮನ್ನಣೆ ಗಳಿಸಬಹುದಾದ ಕಾವ್ಯರಚನೆ ಮಾಡುವ ಉದ್ದೇಶವಿದ್ದಿತು.

3. ಋಷಿಗಳು ತಪಸ್ಸು ಮಾಡುವಾಗ ಮೂಗಿನ ತುದಿಯನ್ನೇ ಏಕೆ ಗಮನಿಸುತ್ತಾರೆ ?

ಉತ್ತರ : ಕೋಪವನ್ನು ಗೆಲ್ಲಲು ಋಷಿಗಳು ತಪಸ್ಸು ಮಾಡುವಾಗ ಮೂಗಿನ ತುದಿಯನ್ನೇ ಗಮನಿಸುತ್ತಾರೆ.

4. "ಕೆಸರೊಳಗೆ ಮುಳ್ಳು ತುಳಿದಂತೆ" ಯಾವುವು ಎಂದು ಸರ್ವಜ್ಞಕವಿ ತಿಳಿಸಿರುತ್ತಾನೆ ?

ಉತ್ತರ : ಒಳ್ಳೆಯ ವ್ಯಕ್ತಿಗಳಿಂದ ಊರು, ಕಳ್ಳನ ಸಹವಾಸ, ಸುಳ್ಳನ ಮಾತು ಇವು ಮೂರು ಕೆಸರಿನಲ್ಲಿ ಮುಳ್ಳು ತುಳಿದಂತೆ ಎಂದು ಸರ್ವಜ್ಞಕವಿ ತಿಳಿಸಿದ್ದಾನೆ.

5. "ಊರವರ ಹಿತ" ಯಾವುದರಲ್ಲಿದೆ ಎಂದು ಎಸ್. ವ್ಹಿ. ಪರಮೇಶ್ವರಭಟ್ಟರು ತಿಳಿಸುತ್ತಾರೆ ?

ಉತ್ತರ : ಊರವರ ಹಿತ ಎಚ್ಚರಿದ್ದು ದುಡಿಯುವದರಲ್ಲಿದೆ ಎಂದು ತಿಳಿಸುತ್ತಾರೆ.

(ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿಮಾಡಿ.

ಉತ್ತರ : 1) "ಬುದ್ಧಿ" ಎಂಬುದರ ವಿರುದ್ಧಾರ್ಥದ ಪದ......(ದುರ್ಬುದ್ಧಿ)

2) ಸ್ಯಾನ್ ಫ್ರಾನ್ಸಿಸ್ಕೋದಲ್ಲಿರುವ ಒಂದು ವಿಶಾಲವಾದ ಉದ್ಯಾನವನ......... (ಗೋಲ್ಡನ್‌ಗೇಟ ಪಾರ್ಕ)

3) ಬಲ ಕೌಶಲ್ಯಗಳಲ್ಲಿ ಕೌಶಲ್ಯವೇ...... (ಮೇವಿ)

4) "ಸಂಸಾರ ಸಾರೋದಯ" ಎಂಬುದು ............ನ ಬಿರುದುಗಳಲ್ಲೊಂದು (ಪಂಪ)

5) ಬಿ. ಡಿ. ಸುಬ್ಬಯ್ಯನವರ ಕಾವ್ಯನಾಮ ......(ಕಾಕೇಮಾನಿ)

ಪ್ರಶ್ನೆ XIII. ಮೊದಲೆರಡು ಪದಗಳಿಗೆ ಇರುವ ಸಂಬಂಧದಂತೆ ಮೂರನೇ ಪದಕ್ಕೆ ಸಂಬಂಧಿಸಿದ ಪದವನ್ನು ಬರೆಯಿರಿ.

ಉತ್ತರ : 1) ಅನಿವಾರ್ಯ : ನಿವಾರ್ಯ; ಅಸಮಂಜಸ: (ಸಮಂಜಸ)

2) ಗಜಾಸುರ : ಸ.ದೀ. ಸಂಧಿ; ಅತ್ಯಂತ (ಯಣ್ ಸಂಧಿ)

3) ತಲೆಯ+ಹಿಂದು=ಹಿಂದಲೆ; ಮೂಗಿನ +ತುದಿ=(ತುದಿಮೂಗು)

4) ಕಮಲಜ : ಬ್ರಹ್ಮ ; ಭಾರದ್ವಾಜ : (ದ್ರೋಣ)

5) ರಾಮ : ರಾವಣ; ಪಾಂಡವ : (ಕೌರವ)

ಪ್ರಶ್ನೆ XIV. ಆಯಾಯ ಗುಂಪಿಗೆ ಸೇರದಪದವನ್ನು "ಆಯ್ದು" ಬರೆಯಿರಿ.

ಉತ್ತರ : 1) ಹಣವಂತ, ಗುಣವಂತ, ಸಿರಿವಂತ, ಅಜಂತ (ಅಜಂತ)

2) ಜಾಹ್ನವಿ, ಕಾವೇರಿ, ಭಾಗೀರಥಿ, ಗಂಗಾ (ಕಾವೇರಿ)

3) ಕರಿಕೆ, ಕಾಣಿಕೆ, ಬಳಕೆ, ಗಳಿಕೆ (ಕರಿಕೆ)

4) ಚಾವಣಿ, ಅಂದಣ, ಅಂಕಣ, ಅಂಗಣ (ಅಂದಣ)

5) ಹೊಯ್ಸಳರು, ಗಂಗರು, ರವೀಂದ್ರರು, ಚಾಲುಕ್ಯರು. (ರವೀಂದ್ರರು)

ಪ್ರಶ್ನೆ XV. 'ಅ' ಗುಂಪಿನ ಪದಗಳಿಗೆ 'ಬ' ಗುಂಪಿನ ಪದಗಳಲ್ಲಿ ಸರಿ ಹೊಂದುವುದನ್ನು ಜೋಡಿಸಿ.

| 'ಅ' | 'ಬ' |
|---|---|
| 1) ಅಚ್ಛೋದ ಸರೋವರ | 1) ತತ್ಪುರುಷ ಸಮಾಸ |
| 2) ಹೆಬ್ಬುಲಿ | 2) ಅಂಬಿಕಾತನಯದತ್ತ |
| 3) ಪಂಚತಂತ್ರ | 3) ಗಂಗಾಧರ ಮಡಿವಾಳೇಶ್ವರ ತುರಮರಿ |
| 4) ಶೋಪನಹಾವರ್ | 4) ಕರ್ಮಧಾರಯ |
| 5) ದ. ರಾ. ಬೇಂದ್ರೆ | 5) ತೀ. ನಂ. ಶ್ರೀಕಂಠಯ್ಯ |
| | 6) ಉಪನಿಷತ್ ವಾಙ್ಮಯ |
| | 7) ದುರ್ಗಸಿಂಹ. |

ಉತ್ತರ : 1–3, 2–4, 3–7, 4–6, 5–2.

—•—

# ಕನ್ನಡ

ಮಾರ್ಚ– ೧೯೮೮ ದ್ವಿತೀಯ ಪತ್ರಿಕೆ

ಅವಧಿ : 3 ರಿಂದ 5 ಅಂಕಗಳು : 50

ಪ್ರಶ್ನೆ I. ಈ ಕೆಳಗಿನ ಪ್ರಶ್ನೆಗಳಲ್ಲಿ ಎರಡನ್ನು ಆರಿಸಿಕೊಂಡು ಪ್ರತಿಯೊಂದಕ್ಕೆ ಒಂದು ಪುಟದಷ್ಟಿರುವಂತೆ ಉತ್ತರಿಸಿರಿ.

1) ಷರ್ಪಾಜನರ ಸ್ವಭಾವ ಹಾಗೂ ಜೀವನ ಕ್ರಮವನ್ನು ವಿವರಿಸಿರಿ.

ಉತ್ತರ : (1986 ನೇ ಮಾರ್ಚ ದ್ವಿತೀಯ ಪತ್ರಿಕೆ 1 ನೇ ಪ್ರಶ್ನೆ 4 ರ ಉತ್ತರ ನೋಡಿರಿ)

2). ಅರವಿಂದರು ಇಂಗ್ಲಂಡಿನಲ್ಲಿ ಪಡೆದ ಶಿಕ್ಷಣವನ್ನು ಕುರಿತು ಬರೆಯಿರಿ.

**ಉತ್ತರ :** (1984 ನೇ ಎಪ್ರೀಲ್ ದ್ವಿತೀಯ ಪತ್ರಿಕೆ 1 ನೇ ಪ್ರಶ್ನೆ 2 ರ ಉತ್ತರ ನೋಡಿ)

3) ಜಗದೀಶಚಂದ್ರ ಬೋಸರು ವಿಜ್ಞಾನಿಯಾಗಿ ಕೈಕೊಂಡ ವಿದೇಶ ಪ್ರವಾಸ.

**ಉತ್ತರ :** (1984 ನೇ ಎಪ್ರೀಲ್ ದ್ವಿತೀಯ ಪತ್ರಿಕೆ 1 ನೇ ಪ್ರಶ್ನೆ 3 ರ ಉತ್ತರ ನೋಡಿ)

4) ಎವರೆಸ್ಟ ಶಿಖರಾಗ್ರದಲ್ಲಿ ತೇನಸಿಂಗ ಹಾಗೂ ಹಿಲರಿಯ ಅನುಭವಗಳು.

**ಉತ್ತರ :** (1984 ನೇ ಅಕ್ಟೋಬರ ದ್ವಿತೀಯ ಪತ್ರಿಕೆ 1 ನೇ ಪ್ರಶ್ನೆ 2 ರ ಉತ್ತರ ನೋಡಿ)

5) ಜಗದೀಶಚಂದ್ರರ ಸಾಹಿತ್ಯ ಪ್ರೇಮ.

**ಉತ್ತರ :** (1987 ನೇ ಎಪ್ರೀಲ್ ದ್ವಿತೀಯ ಪತ್ರಿಕೆ 2 ನೇ ಪ್ರಶ್ನೆ 3 ರ ಉತ್ತರ ನೋಡಿರಿ)

**ಪ್ರಶ್ನೆ II.** ಈ ಕೆಳಗಿನ ಪ್ರಶ್ನೆಗಳಿಗೆ ಪ್ರತಿಯೊಂದಕ್ಕೆ ಏಳೆಂಟು ವಾಕ್ಯಗಳಲ್ಲಿ ಉತ್ತರಿಸಿರಿ.

1) ಯೇತಿಗಳ ಬಗೆಗಿನ ತೇನಸಿಂಗನ ಅಭಿಪ್ರಾಯಗಳು.

**ಉತ್ತರ:** (1986 ನೇ ಅಕ್ಟೋಬರ ದ್ವಿ. ಪ. 2 ನೇ ಪ್ರಶ್ನೆ 1 ರ ಉತ್ತರ ನೋಡಿರಿ)

2) ಜಗದೀಶಚಂದ್ರ ಬೋಸರು ಕೈಕೊಂಡ "ಮುಟ್ಟಿದರೆ ಮುನಿ" ಸಸ್ಯದ ಶೋಧನೆ.

**ಉತ್ತರ :** ಪ್ರಾಣಿಗಳಂತೆಯೇ ಹಾಗೂ ನಿರ್ಜೀವವಸ್ತುಗಳೆನಿಸಿದ ಖನಿಜ ಲೋಹಗಳಂತೆಯೇ ಸಸ್ಯಗಳು ಕೂಡಾ ಉತ್ತೇಜನಕಾರಿ ವಸ್ತುಗಳ ಸ್ಪರ್ಶದಿಂದ ಪ್ರಚೋದನೆಗೆ ಒಳಗಾಗುತ್ತವೆ ಹಾಗೂ ಪ್ರತಿಕ್ರಿಯೆ ತೋರುತ್ತವೆ ಎಂಬುದನ್ನು ಹಲವು ಪ್ರಯೋಗಗಳ ಮೂಲಕ ಜಗದೀಶಚಂದ್ರ ಬೋಸರು ತೋರಿಸಿಕೊಟ್ಟರು. ಪ್ರಾಣಿಗಳಂತೆಯೇ ಸಸ್ಯಗಳು ಕೂಡಾ ಜೀವವುಳ್ಳವು, ಕ್ರಿಯೆಯುಳ್ಳವು. ಅವುಗಳು ಸಹ ಸ್ಪರ್ಶಾನುಭವ ಪಡೆಯಬಲ್ಲವು. "ಮುಟ್ಟಿದರೆ ಮುನಿ" ಎಂಬ ಸಸ್ಯದ ಮೂಲಕ ತಮ್ಮ ಶೋಧನೆ ಗುರುತಿಸಿದರು. ಆದರೆ ಇದು ಹೆಸರಾಂತ ಅನೇಕ ವಿಜ್ಞಾನಿಗಳಿಂದ ಪ್ರತಿಭಟಿಸಲ್ಪಟ್ಟಿತು. ಆದಾಗ್ಯೂ ಬೋಸರು ಮಾತ್ರ ತಮ್ಮ ಸಂಶೋಧನೆ ಬಗೆಗೆ ದೃಢ ನಿರ್ಧಾರ ತಾಳಿದ್ದರು. ಅಂತೆಯೇ ಕೊನೆಯಲ್ಲಿ ಜಯ ಗಳಿಸಿದರು.

3) ಅರವಿಂದರು 'ಕಮಲ ಮುತ್ತು ಕಠಾರಿ' ಸಂಘವನ್ನು ಸ್ಥಾಪಿಸಿದುದರ ಉದ್ದೇಶಗಳು.

**ಉತ್ತರ :** ಬ್ರಿಟಿಷರ ಆಡಳಿತದಿಂದ ಬಿಡುಗಡೆಯನ್ನು ಪಡೆದು ಭಾರತ ಸ್ವತಂತ್ರವಾಗದ ಹೊರತು ಅದರ ಉದ್ಧಾರ ಸಾಧ್ಯವಿಲ್ಲವೆಂಬುದನ್ನು ಅರವಿಂದರು ಮನಗಂಡರು. ದಿಟ್ಟತನದ ಹೋರಾಟದಿಂದಲೇ ನಮ್ಮ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಬೇಕು ಎಂದು ಅವರು ದೃಢವಾಗಿ ನಂಬಿದ್ದು ಹೇಗಾದರೂ ಮಾಡಿ ಬ್ರಿಟಿಷರನ್ನು ಭಾರತದಿಂದ ಓಡಿಸಬೇಕೆಂಬ ನಿರ್ಧಾರಕ್ಕೆ ಬಂದರು. ಇದೇ ಅಭಿಪ್ರಾಯಗಳನ್ನುಳ್ಳ ಭಾರತೀಯ ಯುವಕರನ್ನೆಲ್ಲಾ ಸೇರಿಸಿ ಒಂದು ಗುಪ್ತವಾದ ಸಂಸ್ಥೆಯನ್ನು ಸ್ಥಾಪಿಸಿದರು. ಅದನ್ನು "ಕಮಲ ಮತ್ತು ಕಠಾರಿ" ಎಂದು ಕರೆಯಲಾಯಿತು. ಭಾರತದ ಬಂಧವಿಮೋಚನೆಗಾಗಿ ಹೋರಾಡುವದೇ ಈ ಸಂಸ್ಥೆಯ ಉದ್ದೇಶವಾಗಿತ್ತು. ಉದ್ದೇಶ ಈಡೇರಿಕೆಗೆ ಸಂಘದ ಸದಸ್ಯರೆಲ್ಲರೂ ಪ್ರತಿಜ್ಞೆಯನ್ನು ಕೈಕೊಳ್ಳಬೇಕಾಗಿತ್ತು. ಸದಸ್ಯರಲ್ಲಿ ಮಾತ್ರ ಕ್ರಾಂತಿಕಾರಕವಾದ ವಿಚಾರಗಳನ್ನು ರಹಸ್ಯವಾಗಿ ಬೋಧಿಸಲಾಗುತ್ತಿತ್ತು.

4) ನಂಗ ಪರ್ವತವನ್ನು 'ಮಂಜಿನ ಗೋರಿ' ಎಂದು ಏಕೆ ಕರೆಯಲಾಗುತ್ತದೆ ?

**ಉತ್ತರ :** ನಂಗ ಪರ್ವತವು ಪಾಕಿಸ್ತಾನ–ಕಾಶ್ಮೀರಗಳ ಗಡಿ ಪ್ರದೇಶದಲ್ಲಿದೆ. ಅಲ್ಲಿ ಸಂಭವಿಸಿದ ಸಾವುಗಳಿಂದಾಗಿ ಅದು ಮೃತ್ಯುಕೂಪವೆಂದೂ ಮಂಜಿನಗೋರಿ ಎಂದೂ ಹೆಸರು ಪಡೆದಿದೆ. ಯಾರಿಂದಲೂ ಶಿಖರವನ್ನು ಮುಟ್ಟಲು ಸಾಧ್ಯವಿಲ್ಲವೆಂಬ ಭಯಾನಕ ಭಾವನೆಯನ್ನು ಇದು ಹುಟ್ಟಿಸುತ್ತದೆ. ರುದ್ರ ಭಯಂಕರವಾಗಿದೆ. ಪರ್ವತದ ಶಿಲೆಗಳು ಹಿಮದಿಂದಲೂ, ಮಂಜುಗಡ್ಡೆಗಳಿಂದಲೂ, ಪ್ರಪಾತಗಳಿಂದಲೂ ಮುಚ್ಚಿರುತ್ತವೆ. ನಂಗ ಪರ್ವತ ಪ್ರಪಂಚದ ಮಹಾಶಿಖರಗಳಲ್ಲಿ ಒಂಭತ್ತನೆಯದಾಗಿದೆ. ಅದೆಷ್ಟೋ ಶಿಖರಾರೋಹಿಗಳು ಇಲ್ಲಿನ ಮಂಜಿನಲ್ಲಿ ಹೂತು ಹೋಗಿದ್ದರಿಂದಲೇ ಇದನ್ನು ಮಂಜಿನ ಗೋರಿಯೆಂದು ಕರೆಯಲಾಗಿದೆ. ಇಲ್ಲಿಯ ಸಾವಿನ ಘಟನೆಗಳ ಸಂಖ್ಯೆ ವಿಶೇಷವಾಗಿದೆ.

5) ಬರದ್ವಾನದ ತಮ್ಮ ವಿದ್ಯಾರ್ಥಿ ಜೀವನದಲ್ಲಿ ಜಗದೀಶಚಂದ್ರ ಬೋಸರು ಎದುರಿಸಿದ ತೊಂದರೆಗಳು.

**ಉತ್ತರ :** ಜಗದೀಶಚಂದ್ರರಿಗೆ ಆಗ ಹತ್ತು ವರ್ಷ ವಯಸ್ಸು. ಪ್ರಾಥಮಿಕ ಶಾಲೆಯನ್ನು ಬಿಟ್ಟು ಕಾಲೆಜಿಯಟ್ ಶಾಲೆಯನ್ನು ಸೇರಿದರು. ಮನೆಯನ್ನು ಬಿಟ್ಟು ವಿದ್ಯಾರ್ಥಿ ನಿಲಯವನ್ನು ಸೇರಬೇಕಾಯಿತು. ಅಕ್ಕರೆಯ ಕೌಟುಂಬಿಕ ವಾತಾವರಣ ಇಲ್ಲದಾಗ ಹೊಸ ವಾತಾವರಣಕ್ಕೆ ಹೊಂದಿಕೊಳ್ಳಬೇಕಾಯಿತು. ಪ್ರಾರಂಭದಿಂದಲೂ ಮಾತೃಭಾಷೆ

ಯಲ್ಲಿಯೇ ಕಲಿತ ಅವರಿಗೆ ಇಂಗ್ಲೀಷ ಭಾಷೆಯ ಮೇಲೆ ಅಷ್ಟೊಂದು ಹಿಡಿತ ಬಂದಿರಲಿಲ್ಲ. ಇಂಗ್ಲೀಷಿನಲ್ಲಿ ಇತರರೊಡನೆ ಮಾತನಾಡುವದು ಒಂದು ಸಮಸ್ಯೆಯೇ ಆಯಿತು. ಇತರರಿಂದ ತಾತ್ಸಾರ ಹಾಗೂ ಹೀಯಾಳಿಕೆಗೆ ನೊಂದುಕೊಂಡರು. ಸಮಸ್ಯೆಗಳ ಹೊರೆಯನ್ನು ಹೊರಬೇಕಾದ ಪ್ರಸಂಗ ಅವರಿಗಿತ್ತು. ಆದರೂ ಧೃತಿಗೆಡದೆ, ಆತ್ಮಸ್ಥೈರ್ಯದಿಂದ, ಆತ್ಮಾಭಿಮಾನದಿಂದ ಎಲ್ಲವನ್ನೂ ಎದುರಿಸಿ ಗೆಲುವನ್ನು ಪಡೆದರು.

**ಪ್ರಶ್ನೆ III. ಈ ಕೆಳಗಿನ ವಿಷಯಗಳಲ್ಲಿ ಒಂದನ್ನು ಆರಿಸಿ ಎರಡು ಪುಟದಷ್ಟಿರುವಂತೆ ಒಂದು ಪ್ರಬಂಧ ಬರೆಯಿರಿ.**

1. ಗ್ರಾಮ ಕೈಗಾರಿಕೆಗಳು 2. ನಾನು ವೀಕ್ಷಿಸಿದ ವಿಜ್ಞಾನ ಪ್ರದರ್ಶನ 3. ಬರಗಾಲದ ಬವಣೆ 4. ಪ್ರವಾಸಿಗರ ಸ್ವರ್ಗ-ಕರ್ನಾಟಕ

**ಉತ್ತರ:** 1. ಗ್ರಾಮ ಕೈಗಾರಿಕೆಗಳು— (1984 ನೇ ಅಕ್ಟೋಬರ ದ್ವಿತೀಯ ಪತ್ರಿಕೆ 3 ನೇ ಪ್ರಶ್ನೆ 3ರ ಉತ್ತರ ನೋಡಿರಿ)

**2. ನಾನು ವೀಕ್ಷಿಸಿದ ವಿಜ್ಞಾನ ಪ್ರದರ್ಶನ**

**ಮುಖ್ಯಾಂಶಗಳು—** ಪ್ರದರ್ಶನಗಳನ್ನೇರ್ಪಡಿಸುವ ಉದ್ದೇಶ-ವಿವಿಧ ರೀತಿಯ ಪ್ರದರ್ಶನಗಳ ಏರ್ಪಾಡು-ನಾನು ಸಂದರ್ಶಿಸಿದ ವಿಜ್ಞಾನ ಪ್ರದರ್ಶನ-ಆದರ ಸ್ಥಳ ಹಾಗೂ ಕಾಲ-ಪ್ರದರ್ಶನ ಏರ್ಪಡಿಸಿದ ರೀತಿ-ಪ್ರದರ್ಶನದಲ್ಲಿ ನೋಡಿದ ವಿವಿಧ ಪ್ರಯೋಗಗಳು, ಮಾದರಿಗಳು ಇತ್ಯಾದಿ-ಅವುಗಳ ಬಗೆಗೆ ವಿವರಣೆ-ಅಭಿಪ್ರಾಯ-ಜ್ಞಾನಾರ್ಜನೆಗೆ ಸಹಾಯಕ-ವಿಜ್ಞಾನ ಪ್ರದರ್ಶನಗಳಿಂದಾಗುವ ಲಾಭಗಳು-ಮನರಂಜನೆಯ ಸನ್ನಿವೇಶಗಳು-ಉಪಯೋಗಗಳು.

**3. ಬರಗಾಲದ ಬವಣೆ**

**ಮುಖ್ಯಾಂಶಗಳು-** ಬರಗಾಲದ ಅರ್ಥ-ಬರಗಾಲ ಉಂಟಾಗಲು ಕಾರಣಗಳು-ಅತಿವೃಷ್ಟಿ, ಅನಾವೃಷ್ಟಿ-ಜನರ ಮೇಲಾಗುವ ಪರಿಣಾಮ-ದನಕರುಗಳ ಮೇಲಾಗುವ ಪರಿಣಾಮ-ಸಮಾಜದಲ್ಲಿ ತಲೆದೋರುವ ಸಮಸ್ಯೆಗಳು- ಎದುರಿಸಬೇಕಾದ ಕಷ್ಟದ ಪ್ರಸಂಗಗಳು-ಜನರ ಕರ್ತವ್ಯಗಳು-ಸರಕಾರ ಕೈಕೊಳ್ಳಬೇಕಾದ ಕಾರ್ಯಗಳು-ಮುಂಜಾಗ್ರತೆಯ ಕ್ರಮಗಳು ತಾತ್ಕಾಲಿಕ ಪರಿಹಾರ ಕಾಮಗಾರಿಗಳು-ಶಾಶ್ವತ ಯೋಜನೆಗಳು ಇತ್ಯಾದಿ

**4. ಪ್ರವಾಸಿಗರ ಸ್ವರ್ಗ-ಕರ್ನಾಟಕ**

**ಉತ್ತರ:** ಭರತಖಂಡದಲ್ಲಿ ಕರ್ನಾಟಕಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಇಲ್ಲಿಯ ಸಂಸ್ಕೃತಿ, ಪರಂಪರೆ, ಜನಜೀವನ ಇತ್ಯಾದಿ ತನ್ನದೇ ಆದ ಹಿರಿಮೆ-ಗರಿಮೆಗಳಿಂದ ನಡೆದುಬಂದುದಾಗಿದೆ. ಸಾವಿರಾರು ವರ್ಷಗಳ ಚರಿತ್ರೆ, ಸಂಸ್ಕೃತಿ, ಸಭ್ಯತೆಗಳು ಈ ನಾಡಿಗೆ ಹಿನ್ನೆಲೆಗಳಾಗಿವೆ. ಈ ಭವ್ಯ ಪರಂಪರೆಯನ್ನು ನಾವೆಲ್ಲ ತಿಳಿದಿರಲೇಬೇಕು. ಅನೇಕ ಪ್ರವಾಸಿಗಳು ಇಲ್ಲಿಗೆ ಬಂದು ಇದೊಂದು ಸಮೃದ್ಧ, ಸುಸಂಸ್ಕೃತ ನಾಡಾಗಿತ್ತೆಂದು ಹೇಳಿಹೋಗಿದ್ದಾರೆ.

ಮಾನವನಿಗೆ ಆತ್ಮವಿರುವಂತೆ ನಾಡಿಗೂ ಒಂದು ಆತ್ಮವಿದೆ. ಆ ಆತ್ಮವನ್ನೇ ನಾವು ಸಂಸ್ಕೃತಿಯೆಂದು ಕರೆಯಬಹುದು. ಈ ಸಂಸ್ಕೃತಿ ಕರ್ನಾಟಕ ಸಂಸ್ಕೃತಿ. ಅದು ವಿವಿಧ ಮುಖಗಳಲ್ಲಿ ವಿಸ್ತೃತಗೊಂಡು ಒಂದು ವಿಶ್ವರೂಪವನ್ನೇ ತಳೆದಿದೆ ಎಂದರೆ ತಪ್ಪಾಗಲಾರದು. ಈ ನಾಡಿನ ಜನರ ಆಚಾರ-ವಿಚಾರಗಳು, ಆಹಾರ-ವಿಹಾರಗಳು ತಮ್ಮವೇ ಆದ ವೈಶಿಷ್ಟ್ಯಗಳಿಂದ ಕೂಡಿವೆ. ಕರ್ನಾಟಕ ಸಂಸ್ಕೃತಿಯ ನಿರ್ಮಿತಿಗೆ ಕಾರಣೀಭೂತವಾಗಿವೆ.

ನೃಪತುಂಗನ ಕವಿರಾಜಮಾರ್ಗದಿಂದ ತಿಳಿದುಬರುವದೇನೆಂದರೆ-ಅಂದಿನ ಕರ್ನಾಟಕವು ಉತ್ತರದ ಗೋದಾವರಿಯಿಂದ ದಕ್ಷಿಣದ ಕಾವೇರಿಯವರೆಗೆ ಹಬ್ಬಿತ್ತೆಂಬುದು ಅತ್ಯಂತ ಅಭಿಮಾನದ ಸಂಗತಿ. ಗಂಗ, ಕದಂಬ, ಹೊಯ್ಸಳ, ಚಾಲುಕ್ಯ ರಾಷ್ಟ್ರಕೂಟರಾದಿಯಾಗಿ, ವಿಜಯನಗರ ರಾಜರೇ ಮುಂತಾಗಿ ಈ ನಾಡಿನಲ್ಲಿ ರಾಜಮನೆತನಗಳು ಆಗಿಹೋಗಿವೆ. ಸಾಹಿತ್ಯ, ಸಂಗೀತ, ಶಿಲ್ಪಕಲೆ, ನೃತ್ಯ ವಿವಿಧ ಲಲಿತಕಲೆಗಳನ್ನು ಪ್ರೋತ್ಸಾಹಿಸಿ, ಬೆಳೆಸಿ ಚಿರಂತನ ನೆಲೆಯಾಗಿರುವಂತೆ ತಮ್ಮ ತಮ್ಮ ಕಾಣಿಕೆಗಳನ್ನರ್ಪಿಸಿವೆ. ಜನಜೀವನ ನೆಮ್ಮದಿಯಾಗಿ ಸುಖ-ಸಂತೋಷದಿಂದ ಬಾಳಿ ಬೆಳಗುವಂತೆ ತಮ್ಮ ಆದರ್ಶಗಳನ್ನು ಮೆರೆದಿದ್ದಾರೆ.

ಇದಕ್ಕೆಲ್ಲ ನಾಡಿನ ಉದ್ದಗಲಕ್ಕೂ ತಲೆಯೆತ್ತಿ ನಿಂತಿರುವ ಕಲಾತ್ಮಕ ಗುಡಿ-ಗೋಪುರಗಳು, ಮಠ-ಮಂದಿರಗಳು, ಶಿಲಾಸ್ತಂಭಗಳು, ಅರಮನೆಗಳು, ಕಟ್ಟಡಗಳು ಇಂದಿಗೂ ಸಾಕ್ಷಿಗಳಾಗಿವೆ. ಅನೇಕ ರಾಜಮನೆತನಗಳಿಂದ ಪೋಷಿಸಲ್ಪಟ್ಟ ಕರ್ನಾಟಕದ ವಾಸ್ತುಶಿಲ್ಪ ವಿಶೇಷ ವೈವಿಧ್ಯದಿಂದ ಬೆಳೆದಿದೆ. ಭರತಖಂಡದ ಎಲ್ಲ ಉತ್ತಮಾಂಶಗಳನ್ನೂ ತನ್ನಲ್ಲಿ ಅಳವಡಿಸಿಕೊಂಡು ತನ್ನದೇ ಆದ ಮಾರ್ಗವನ್ನು ಬೆಳೆಸಿಕೊಂಡಿದೆ. ಸರ್ವಧರ್ಮಸಮನ್ವಯತೆಯನ್ನು ಕಾಯ್ದುಕೊಂಡು 'ಸರ್ವೇಜನಾಃ ಸುಖಿನೋಭವಂತು' ಎಂಬುದನ್ನೇ ನಿಜವಾದ ಧರ್ಮರೀತಿಯಲ್ಲಿ ಮುನ್ನಡೆಯಿಸಿಕೊಂಡು ಬಂದಿರುವದನ್ನು ನಾವು ಕಾಣುತ್ತೇವೆ. ಕರ್ನಾಟಕದ ಸಾಮಾಜಿಕ ಜೀವನದಲ್ಲಿ ಧರ್ಮವು ಮಹತ್ವದ ಪಾತ್ರವನ್ನಾಡಿದೆ.

ಭೌಗೋಲಿಕ ದೃಷ್ಟಿಯಿಂದಲೂ ಕನ್ನಡನಾಡಿನ ಸೊಬಗು ವರ್ಣನಾತೀತವಾದುದು. ಪಶ್ಚಿಮದ ಕಡೆಗೆ ಉದ್ದವಾದ ಕರಾವಳಿ, ಅಲ್ಲಲ್ಲಿ ಜೋಗ, ಶಿವಸಮುದ್ರ, ಘಟಪ್ರಭೆ

ಮುಂತಾದ ರಮ್ಯ ಜಲಪಾತಗಳು, ಮತ್ತೆಲ್ಲ ವನಸಿರಿ,ಮೃಗ–ಪಕ್ಷಿ ಜಲಚರ ಇತ್ಯಾದಿ ಜೀವಿಗಳಿಂದ ರಂಜಿಸುವ ತಾಣಗಳು, ಪಕ್ಷಿಧಾಮಗಳು. ಹಸಿರು ಸೊಬಗಿನಿಂದ ಮೈತುಂಬಿ ಸೊಗಯಿಸುವ ಗಿರಿ–ಕಂದರಗಳು,ದಟ್ಟವಾದ ಮಲೆನಾಡು ವನಸಿರಿ. ಪಶ್ಚಿಮ ಘಟ್ಟದ ಸಾಲುಗಳು. ನೊರೆ–ತೊರೆಗಳಿಂದಕೂಡಿ ಹರಿಯುತ್ತಿರುವ ಭೀಮಾ, ಕೃಷ್ಣಾ, ಕಾವೇರಿ, ಶರಾವತಿ, ತುಂಗಭದ್ರೆ, ಮಲಪ್ರಭೆ, ವರದಾ, ನೇತ್ರಾವತಿ. ಮೊದಲಾದ ನದಿಗಳು, ಅಲ್ಲಲ್ಲಿ ಕಟ್ಟಿರುವ ಆಣೇಕಟ್ಟುಗಳು. ನೀರಾವರಿಯ ಹಾಗೂ ವಿದ್ಯುತ್ ಶಕ್ತಿಯ ಉತ್ಪಾದನಾ ಕೇಂದ್ರಗಳು. ಫಲ–ಪುಷ್ಪಗಳಿಂದ ರಾರಾಜಿಸುವ ವಿವಿಧ ಜಾತಿಯ ಗಿಡ–ಮರಗಳು ಇವೆಲ್ಲವೂ ಯಾರೊಬ್ಬರನ್ನೂ ಮುಗ್ಧರನ್ನಾಗಿ ಮಾಡದೆ ಇರಲಾರವು.

ಶಿಲ್ಪಕಲೆಗೆ ಜಗತ್ತಿನಲ್ಲಿಯೇ ಹೆಸರಾಂತ ಹಳೇಬೀಡು ಬೇಲೂರು, ಸೋಮನಾಥಪುರ, ಬಾದಾಮಿ, ಐಹೊಳೆ, ಪಟ್ಟದ ಕಲ್ಲು, ಹಂಪೆ, ಶ್ರವಣ–ಬೆಳಗೊಳ, ಕಾರ್ಕಳ ಲಕ್ಕುಂಡಿ ಮುಂತಾದ ಸ್ಥಳಗಳಲ್ಲಿಯ ಕಲಾಕೃತಿಗಳನ್ನು ನೋಡಬೇಕು. ಅಲ್ಲಿನ ಆ ಕಲೆ ತನ್ನ ಭವ್ಯತೆಗೆ ಮೂಕಸಾಕ್ಷಿಯಾಗಿ ನಿಂತಿವೆ. ನೋಡುವವರ ಮನಸ್ಸಿಗೆ ಆಹ್ಲಾದವನ್ನೂಂಟುಮಾಡಿ ಮಂತ್ರಮುಗ್ಧರನ್ನಾಗಿ ಮಾಡುವವು. ಅದರಂತೆ ಬಿಜಾಪೂರ, ಬೀದರ, ಮೈಸೂರು.ಬೆಂಗಳೂರು ಶ್ರೀರಂಗಪಟ್ಟಣ ಮುಂತಾದ ಶಹರಗಳಲ್ಲಿಯ ಮಸೀದೆಗಳು, ಚರ್ಚ, ಅರಮನೆ, ವಸ್ತುಸಂಗ್ರಹಾಲಯ, ಪ್ರಾಣಿಸಂಗ್ರಹಾಲಯ, ಕೋಟಿ ಕೊತ್ತಲಗಳು, ಉಪವನಗಳು, ಬೃಂದಾವನದಂಥ ಸುಂದರ ರಮ್ಯತೆಯ ತಾಣಗಳು. ಕಾರಖಾನೆಗಳು, ಬೃಹತ್ ಕಟ್ಟಡಗಳು, ವಿಧಾನಸೌಧದಂಥ ಭವ್ಯ ಕಾರ್ಯಾಲಯಗಳು ಯಾರೊಬ್ಬರನ್ನೂ ಆಕರ್ಷಿಸಿ ಸಂತೋಷಪಡಿಸುವವು. ಧಾರ್ಮಿಕ ಮಹತ್ವ ಪಡೆದ ಧರ್ಮಸ್ಥಳ, ಶೃಂಗೇರಿ, ಉಡುಪಿ, ಗೋಕರ್ಣ, ಉಳುವಿ, ಇನ್ನಿತರ ಯಾತ್ರಾ ಸ್ಥಳಗಳು ವಿಶೇಷವಾಗಿ ಆಮಂತ್ರಿಸುತ್ತವೆ. ಮಂಗಳೂರ, ಕಾರವಾರ ಬಂದರುಗಳೂ, ಕೋಲಾರ, ಹಟ್ಟಿ ಚಿನ್ನದ ಗಣಿಗಳೂ ಪ್ರವಾಸಿಗರನ್ನು ಆಹ್ವಾನಿಸುತ್ತವೆ.

ಹೀಗೆ ಕರ್ನಾಟಕವು ಪ್ರವಾಸಿಗರ ಸ್ವರ್ಗವಾಗಿದೆ ಎಂದು ಅಭಿಮಾನದಿಂದ ಹೇಳಬಹುದು.

**ಪ್ರಶ್ನೆ IV ನಿಮ್ಮ ಶಾಲೆಯ ವಾರ್ಷಿಕೋತ್ಸವಕ್ಕಾಗಿ ನಿಮ್ಮ ಗೆಳೆಯ/ಗೆಳತಿಯನ್ನು ಆಹ್ವಾನಿಸಿ ಒಂದು ಪತ್ರ ಬರೆಯಿರಿ**

ಉತ್ತರ: ಗೆಳೆಯನಿಗೆ ಪತ್ರ

ಹೆಸರು.........<br>
ವಿಳಾಸ.........<br>
ಊರು.........<br>
ದಿನಾಂಕ.........

ಪ್ರಿಯ ಮಿತ್ರ.........ನಿಗೆ,

ಇಲ್ಲಿ ನಾನು ಅಭ್ಯಾಸ ಹಾಗೂ ಆರೋಗ್ಯದಿಂದ ಚನ್ನಾಗಿದ್ದೇನೆ.ನಿಮ್ಮಲ್ಲಿ ಎಲ್ಲರೂ ಕ್ಷೇಮವಿರುವದಾಗಿ ಭಾವಿಸುವೆ. ಆಗಾಗ್ಗೆ ಪತ್ರ ಬರೆಯುತ್ತಿರಬೇಕು. ಈಗ ಬರಲಿರುವ ಡಿಶಂಬರ ತಿಂಗಳು 30ನೇ ದಿನಾಂಕ ಇಲ್ಲಿ ನಮ್ಮ ಶಾಲೆಯ ವಾರ್ಷಿಕೋತ್ಸವವು ಎಂದಿನಂತೆ ಆಚರಿಸಲಾಗುವದು. ಈ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ನಮ್ಮ ರಾಜ್ಯದ ಶಿಕ್ಷಣ ಸಚಿವರಾದ ಮಾನ್ಯ ಶ್ರೀ.........ಯವರು ಆಗಮಿಸಲಿದ್ದಾರೆ.

ಉತ್ಸವದ ಅಂಗವಾಗಿ ಕಲಾ ಹಾಗೂ ವಿಜ್ಞಾನ ಪ್ರದರ್ಶನ ಏರ್ಪಡಿಸಿರುತ್ತದೆ. ಈ ಪ್ರದರ್ಶನ ಬಹುಜನರ ಆಕರ್ಷಣೆಗೆ ಪಾತ್ರವಾಗುವದರಲ್ಲಿ ಸಂದೇಹವಿಲ್ಲ. ಉತ್ಸವದ ಸಭಾಕಾರ್ಯದಲ್ಲಿ ಪಾರಿತೋಷಕ ವಿತರಣೆ ಸಹ ಜರುಗುವದು, ನಾನೂ ಕೂಡಾ ಎರಡು ಪಾರಿತೋಷಕಗಳನ್ನು ಪಡೆಯಲಿರುವೆ. ಅಲ್ಲದೆ ಮನರಂಜನಾ ಕಾರ್ಯಕ್ರಮಗಳನ್ನೂ ಹಮ್ಮಿಕೊಳ್ಳಲಾಗಿದೆ. ಎಲ್ಲವೂ ಆಕರ್ಷಕ ಹಾಗೂ ಸುಖಕರವಾಗಿ ನಡೆಯುವದಾಗಿ ನೆರೆನಂಬಲಾಗಿದೆ. ಈ ಒಳ್ಳೆಯ ಕಾರ್ಯಕ್ರಮದಲ್ಲಿ ನಮ್ಮೊಂದಿಗೆ ನೀನೂ ಭಾಗಿಯಾಗಬೇಕೆಂದು ಬಲವಾದ ಇಚ್ಛೆ. ಕಾರಣ ನೀನು ಒಂದು ದಿವಸವಾದರೂ ಮುಂಚಿತವಾಗಿ ಇಲ್ಲಿಗೆ ಬರಬೇಕು ಹಾಗೂ ನಮ್ಮ ಸಂತೋಷದ ಸಮಾರಂಭದಲ್ಲಿ ಪಾಲ್ಗೊಳ್ಳಬೇಕು ಎಂದು ಆಗ್ರಹ ಪೂರ್ವಕ ಆಹ್ವಾನಿಸುತ್ತೇನೆ.

ಇಂತಿ ನಮಸ್ಕಾರಗಳು.

ನಿನ್ನ ಆತ್ಮೀಯ ಗೆಳೆಯ.<br>
................

ಅಥವಾ

**ನಿಮ್ಮ ನಗರದ ಬೀದಿ ಇಲ್ಲವೆ/ ಗ್ರಾಮದಲ್ಲೊಂದು ಗ್ರಂಥಾಲಯವನ್ನು ಪ್ರಾರಂಭಿಸಬೇಕೆಂದು ಪ್ರಾರ್ಥಿಸಿ ನಿಮ್ಮ ಜಿಲ್ಲಾಧಿಕಾರಿಗಳಿಗೊಂದು ಪತ್ರ ಬರೆಯಿರಿ.**

ಉತ್ತರ : ಊರು.........<br>
ದಿನಾಂಕ.........

ಮಾನ್ಯ ಜಿಲ್ಲಾಧಿಕಾರಿಗಳು<br>
............ಜಿಲ್ಲೆ

ಮಾನ್ಯರೇ,

ವಿಷಯ :— ನಮ್ಮ ಊರಿನ ಸಾರ್ವಜನಿಕರ ಉಪಯೋಗಕ್ಕಾಗಿ ಒಂದು ಗ್ರಂಥಾಲಯವನ್ನು ವ್ಯವಸ್ಥೆ ಮಾಡಿಕೊಡುವದು.

ಇಂದಿನ ದಿನಗಳಲ್ಲಿ ಗ್ರಂಥಾಲಯಗಳ ಮಹತ್ವ ವಿಶೇಷವಾಗಿದೆ. ಮನುಷ್ಯನ ಜ್ಞಾನಾರ್ಜನೆಗೆ ಇತಿ-ಮಿತಿಗಳೆಂಬುದು ಇಲ್ಲ. ಭರದಿಂದ ಮುನ್ನಡೆಯುತ್ತಿರುವ ಈ ಜಗತ್ತಿನಲ್ಲಿ ಅದೆಷ್ಟೋ ಹೊಸ ಹೊಸ ಸಂಗತಿಗಳ ಬಗೆಗೆ ತಿಳಿದುಕೊಳ್ಳುವದು ಪ್ರತಿಯೊಬ್ಬನಿಗೂ ಅವಶ್ಯಕವಿದೆ. ಪುಸ್ತಕಗಳನ್ನೋದಿ ಜ್ಞಾನ ಭಾಂಡಾರವನ್ನು ಹೆಚ್ಚಿಸಿಕೊಳ್ಳಬಹುದಾಗಿದೆ. ಕಥೆ-ಕಾದಂಬರಿ-ಕವನ-ನಾಟಕ-ಪ್ರಬಂಧ ಇತಿಹಾಸ-ಚರಿತ್ರೆ-ಕಲೆ ಮೊದಲಾಗಿ ಸಾಹಿತ್ಯದ ವಿವಿಧ ವಿಷಯಾಂಶಗಳ ಬಗೆಗಿನ ಜ್ಞಾನವೂ ಅತ್ಯಗತ್ಯವೆಂದು ಹೇಳಬೇಕಾದುದಿಲ್ಲ. ಪುಸ್ತಕಗಳು ಗ್ರಂಥಗಳು ಈ ಬಗ್ಗೆ ಬಹುಪಾಲಿನ ಕಾರ್ಯ ಮಾಡಬಲ್ಲವು

ನಮ್ಮ ಊರಿನ ಜನಸಂಖ್ಯೆ ಐವತ್ತು ಸಾವಿರಕ್ಕೂ ಮೇಲ್ಪಟ್ಟು ಇರುತ್ತಿದ್ದು ಇಲ್ಲಿ ಸಾರ್ವಜನಿಕರ ಉಪಯೋಗಕ್ಕಾಗಿ ಒಂದೂ ಗ್ರಂಥಾಲಯವಿಲ್ಲದೆ ಇರುವದು ಶೋಚನೀಯ, ಸಾಮಾನ್ಯಜನತೆಯ ಶೈಕ್ಷಣಿಕ ಮಟ್ಟ ಹೆಚ್ಚಿಸಲು ಗ್ರಂಥಾಲಯದ ಪಾತ್ರ ಮಹತ್ವವಿದೆ. ಆದ್ದರಿಂದ ಮಾನ್ಯರವರು ಈ ಬಗೆಗೆ ಗಮನ ಹರಿಸಿ ಆದಷ್ಟು ತೀವ್ರ ನಮ್ಮೂರಿಗೆ ಗ್ರಂಥಾಲಯದ ವ್ಯವಸ್ಥೆ ಮಾಡಿಕೊಡಬೇಕಾಗಿ ಊರ ಜನತೆಯ ಪರವಾಗಿ ನಮ್ರವಾಗಿ ವಿನಂತಿಸುತ್ತೇನೆ, ಇತಿ.

ಧನ್ಯವಾದಗಳೊಂದಿಗೆ—

ವಿಳಾಸ : ತಮ್ಮ ವಿಶ್ವಾಸಿ.
.......... ..........(ಸಹಿ)
.........

**ಪ್ರಶ್ನೆ V.** ಇಲ್ಲಿ ಬಿಟ್ಟಿರುವ ಸ್ಥಳವನ್ನು ಸರಿಯಾದ ಪದಗಳಿಂದ ತುಂಬಿರಿ.

1) "ಶರಣರ ಬಾಳನ್ನು.......ಕಾಣು"ಎಂಬ ಮಾತಿದೆ
2) ತೇನಸಿಂಗನಿಗೆ.......ಶ್ವಾಸಕೋಶಗಳು
3) 'ಆರೋವಿಲ್' ಮಾನವ ಲೋಕದಲ್ಲಿಯ...... ಯ ಸಂಕೇತ
4) 'ಮೈತ್ರಿ' ಎಂಬುದು.......ಯೇತಿ
5) ತಂದೆಗೆ ಪತ್ರ ಬರೆಯುವಾಗ ಪ್ರಾರಂಭದಲ್ಲಿ ಇರಬೇಕಾದ ಒಕ್ಕಣೆ......

**ಉತ್ತರ :** 1) ಮರಣದಲ್ಲಿ 2) ಶಕ್ತಿಯುತವಾದ 3) ದೇವನಗರಿ 4) ನರಭಕ್ಷಕ 5) ತೀರ್ಥರೂಪರವರಿಗೆ—

**ಪ್ರಶ್ನೆ VI.** ಈ ಪದ್ಯವನ್ನು ಓದಿಕೊಂಡು ಕೆಳಗೆ ಕೊಟ್ಟಿರುವ ಪ್ರಶ್ನೆಗಳಿಗೆ ಉತ್ತರಿಸಿರಿ.

ಬೆಳೆಯ ಕಳೆಯನೆ ಕಳೆಯ ಬಂದಿಹ
ಕಳೆಯು ಕಳೆಯುವ ಬನ್ನಿರೊ !
ಬೆಳೆಯು ಹೊಸಕಳೆ ತಳೆಯ ಬೇಕಿರೆ
ಬೆವರು-ನೀರನು ತನ್ನಿರೊ !
ಇಳೆಯ ಉಸಿರೇ ಹಚ್ಚ-ಹಸಿರಾ
ಗಿರುವ ಕನಸನು ಕಾಣಿರೊ !
ಬಾಳ ಬೆಳೆ ಕಳೆ ಬೆಳೆದು ಬರುತಿದೆ
ಕೊಳಕು ಕಾಯಕ ಮಾಣಿರೊ !

1. ಕಳೆಯಿಂದಾಗುವ ಹಾನಿ ಯಾವುದು ?

**ಉತ್ತರ :** ಕಳೆಯಿಂದ ಬೆಳೆಯುತ್ತಿರುವ ಬೆಳೆಗೆ ಹಾನಿಯಾಗುವುದು.

2) ಬೆಳೆಗೆ ಹೊಸಕಳೆ ತರಲು ರೈತ ಏನು ಯತ್ನ ಮಾಡಬೇಕು ?

**ಉತ್ತರ :** ಬೆವರು ಸುರಿಯುವಂತೆ ಕಷ್ಟ ಪಟ್ಟು, ದುಡಿಯಬೇಕು.

3) ನಾವು ಕಾಣಬೇಕಾದ ಕನಸು ಯಾವುದು ?

**ಉತ್ತರ :** ಭೂಮಿತಾಯಿ ಸದಾ ಹಚ್ಚಹಸರಾಗಿರುವಂತೆ ಮಾಡುವ ಕನಸು ಕಾಣಬೇಕು.

4) ಬಾಳ ಬೆಳೆಯಲ್ಲಿ ಕಾಣುತ್ತಿರುವ ಕಳೆಯನ್ನು ತಡೆಯಲು ಕವಿಯ ಸಲಹೆ ಏನು ?

**ಉತ್ತರ :** ಕೆಟ್ಟ ಕೆಲಸ ಮಾಡುವದನ್ನು ಬಿಟ್ಟು ಬಿಡಬೇಕೆಂಬುದೇ ಕವಿಯ ಸಲಹೆ.

**ಪ್ರಶ್ನೆ VII.** ಈ ಮಾತುಗಳಲ್ಲಿ ಒಂದನ್ನು ಹತ್ತು ವಾಕ್ಯಗಳಷ್ಟಿರುವಂತೆ ವಿಸ್ತರಿಸಿರಿ.

1) ಹಾಸಿಗೆ ಇದ್ದಷ್ಟು ಕಾಲು ಚಾಚು.

**ಉತ್ತರ :** ಮನುಷ್ಯನು ತನ್ನ ಸಂಸಾರಿಕ ಜೀವನವನ್ನು ಸರಳವಾಗಿ, ಸುಗಮವಾಗಿ ಸಾಗಿಸಿಕೊಂಡು ಹೋಗಬೇಕಾಗುತ್ತದೆ. ಸುಖ-ಸಮಾಧಾನ ಹಾಗೂ ನೆಮ್ಮದಿಯ ಜೀವನ ಅದು ಆಗಿರಬೇಕೆಂದು ಬಯಸುವದು ಸ್ವಾಭಾವಿಕ ಅಂದಮೇಲೆ ಉಪಜೀವನಕ್ಕಾಗಿ ಯಾವದೊಂದು ವೃತ್ತಿಯನ್ನು ಕೈಕೊಳ್ಳಲೇಬೇಕು. ಆದರಿಂದ ಸಂಪಾದನೆ ಮಾಡಿ ಉದರಪೋಷಣೆ, ಇನ್ನಿ

ತರ ಖರ್ಚು ವೆಚ್ಚಗಳನ್ನು ಪೂರೈಸಬೇಕು. ತನ್ನ ಉತ್ಪನ್ನದಲ್ಲಿಯೇ ಇದೆಲ್ಲವನ್ನು ಸರಿದೂಗಿಸಬೇಕು. ತನ್ನಲ್ಲಿಯ ಸಾಮರ್ಥ್ಯವನ್ನರಿತುಕೊಂಡು ವ್ಯವಹರಿಸಬೇಕು. ದುಡಿಮೆಯ ಆದಾಯಕ್ಕಿಂತ ಹೆಚ್ಚಾಗಿ ವ್ಯಯಮಾಡಿದ್ದಾದರೆ ಆದರಿಂದ ಮುಂದೆ ಕಷ್ಟವನ್ನು ಅನುಭವಿಸಬೇಕಾಗಬಹುದು, ಹಾಗಾಗದಂತೆ ಮೊದಲೇ ಯೋಚನೆ ಮಾಡಿ ಯಾವದೊಂದು ಕಾರ್ಯ ಮಾಡುವದು ಮೇಲಲ್ಲವೇ ? ಅದಕ್ಕಾಗಿಯೇ ಹಾಸಿಗೆ ಇದ್ದಷ್ಟು ಕಾಲು ಚಾಚು ಎಂಬ ನಾಣ್ಣುಡಿ ಸೂಕ್ತವಾಗಿದೆ.

2) ಬಿತ್ತಿದ್ದನ್ನು ಬೆಳೆದುಕೋ

ಉತ್ತರ : 'ನಾವು ಎಂಥ ಬೀಜವನ್ನು ಬಿತ್ತುವೆಯೋ ಅದೇ ಜಾತಿಯ ಫಲ ಬೆಳೆಯುತ್ತೇವೆ. ಇದು ಸಾಮಾನ್ಯ ಸೃಷ್ಟಿಯ ನಿಯಮ, ಆದರಂತೆ ನಿತ್ಯ ಜೀವನದಲ್ಲಿ ಮನುಷ್ಯರಾದ ನಾವು ಎಂಥ ಕಾರ್ಯಗಳನ್ನು ಮಾಡುತ್ತೇವೆಯೋ ಅದಕ್ಕೆ ತಕ್ಕ ಪ್ರತಿಫಲ ನಮಗೆ ದೊರೆಯುತ್ತದೆ, ಕೆಟ್ಟ ಕೆಲಸಗಳನ್ನು ಮಾಡುವುದರಿಂದ ಕಷ್ಟವನ್ನನುಭವಿಸಬೇಕಾಗುವದು. ಅದರಂತೆ ಒಳ್ಳೆಯ ಕೆಲಸಗಳನ್ನು ಮಾಡುವುದರಿಂದ ಒಳ್ಳೆಯದಿರುವದನ್ನು, ಸುಖವನ್ನು ಪಡೆಯುವೆವು. ಮನುಷ್ಯ ಹಲವಾರು ಆಶೆಗಳಿಗೆ ದಾಸನಾಗಿ ತಿಳಿದೋ–ತಿಳಿಯದೆಯೋ ಅಲ್ಲ ಸಲ್ಲದ ಕಾರ್ಯಗಳನ್ನು ಮಾಡಿ ದುಃಖವನ್ನನುಭವಿಸುತ್ತಾನೆ, ಆದ್ದರಿಂದ ನಾವು ಒಳ್ಳೆಯದನ್ನೇ ವಿಚಾರಮಾಡಿ ಅದರಂತೆ ನಮ್ಮ ಕೆಲಸಗಳನ್ನು ನಿರ್ವಹಿಸಿದರೆ ನಮಗೆಲ್ಲ ಒಳ್ಳೆಯಫಲ ದೊರೆಯುವದು, ಅದಕ್ಕಾಗಿಯೇ 'ಬಿತ್ತಿದ್ದನ್ನು ಬೆಳೆದುಕೋ' ಎಂದು ರೂಢಿಯಾಗಿದೆ.

3) ನಾಳೆ ಎಂದವನ ಮನೆ ಹಾಳು.

ಉತ್ತರ : ಯಾವದೊಂದು ಒಳ್ಳೆಯ ಕೆಲಸ ಮಾಡುವಾಗ ಅದನ್ನು ನಾಳೆ ಮಾಡೋಣವೆಂದು ಹೇಳದೇ ಅದನ್ನು ಇಂದೇ, ಈಗಲೇ ಮಾಡೋಣ ಎಂಬುದು ಸೂಕ್ತವಾದುದು, ಕೆಟ್ಟ ಕೆಲಸ, ಕೆಟ್ಟ ವಿಚಾರವಿದ್ದರೆ ಅದನ್ನು ಮುಂದೂಡುವದೇ ಲೇಸು ಯಾವ ಕಾಲಕ್ಕೆ ಏನು ಘಟಿಸುತ್ತದೆ ಎಂಬುದು ನಮಗೆ ತಿಳಿದಿರುವದಿಲ್ಲ, ಕಾಲವು ತನ್ನದೇ ಆದ ಗತಿಯಲ್ಲಿ ಒಂದೇ ಸವನೆ ಮುಂದೆ ನಡೆದಿರುತ್ತದೆ ಉದಾ- ದಾನಕೊಡಬೇಕಾದ ಒಂದು ಪುಣ್ಯದ ಕಾರ್ಯವನ್ನು ಇದ್ದಾಗಲೇ ಪೂರೈಸುವದಾದರೆ ಸರಿ, ಆದರೆ ನಾಳೆನೋಡೋಣ ಎಂದು ಹೇಳಿ ಮುಂದಕ್ಕೆ ತಳ್ಳಿ ಎಲ್ಲವನ್ನೂ ಕಳೆದುಕೊಂಡ ನಂತರ ಹಾಗೆ ಮಾಡಲು ಸಾಧ್ಯವಾದೀತೆ ? ಇಲ್ಲ. ಅದಕ್ಕಾಗಿಯೇ ನಾಳೆ ಎಂದವನ ಮನೆ ಹಾಳು ಎಂದು ಹೇಳಲಾಗುತ್ತದೆ.

—◉—

# ಕನ್ನಡ

**ಜೂನ–೧೯೮೮** **ಪ್ರಥಮ ಪತ್ರಿಕೆ**

ಅವಧಿ : 2½ ಗಂಟೆ ಅಂಕಗಳು : 100

ಪ್ರಶ್ನೆ I. ಒಂದು ಪುಟಕ್ಕೆ ಮೀರದಂತೆ ಮೂರು ಪ್ರಶ್ನೆಗಳಿಗೆ ಉತ್ತರಿಸಿರಿ.

1) ಕಾಡುಕೋಣನು ಪರಿಪೂರ್ಣ ಗುಣಗಳನ್ನು ಬೆಳೆಸಿಕೊಂಡ ಬಗೆ.

ಉತ್ತರ : ಕಾಡುಕೋಣ ತುಂಬಾ ಬಲಿಷ್ಠವಾದ ಕೋಣವಾಗಿತ್ತು. ನೋಡಲು ಭಯಂಕರವಾಗಿದ್ದರೂ ಅದರ ಸ್ವಭಾವ ಬಹಳ ಮೃದುವಾಗಿತ್ತು. ಯಾರತಂಟೆಗೂ ಹೋಗುತ್ತಿರಲಿಲ್ಲ. ಸಾಧು ಸ್ವಭಾವದ ಕೋಣ ಅದಾಗಿತ್ತು ಇತರ ಪ್ರಾಣಿಗಳು ಅದರ ಬಗೆಗೆ ಭಕ್ತಿ ಗೌರವವನ್ನು ಹೊಂದಿದ್ದವು.

ಅದೇ ಕಾಡಿನಲ್ಲಿದ್ದ ಒಂದು ಕಪಿ ತನ್ನ ಕಪಿ ಚೇಷ್ಟೆಗಳಿಂದ ಸಾಧುಕೋಣವನ್ನು ಅನ್ಯಾಯವಾಗಿ ಪೀಡಿಸುತ್ತಿದ್ದಿತು. ಇದೆಲ್ಲವನ್ನು ಕೋಣವು ಒಳ್ಳೇ ತಾಳ್ಮೆಯಿಂದ ಸಹಿಸಿಕೊಂಡಿದ್ದಿತು. ಹಿಂದಿನ ಜನ್ಮದ ಯಾವುದೋ ತಪ್ಪಿನಿಂದಾಗಿ ಈಗ ಕೋಣವಾಗಿ ಹುಟ್ಟಬೇಕಾಯಿತು. ಮತ್ತೆ ಹಿಂಸೆ ಮಾಡಿದರೆ ಮುಂದೇನಾಗಬೇಕಾಗದೆಯೋ ಎಂದು ಹೇಳುತ್ತಿದ್ದಿತಲ್ಲದೆ ಕಪಿಯ ಚೇಷ್ಟೆಗಳು ಒಂದು ಮರಳು ಕಣವಿದ್ದಂತೆ ಎನ್ನುತ್ತ ಮನಸ್ಸಿನ ಸ್ವಾಸ್ಥ್ಯ ಕಾಪಾಡಿಕೊಂಡಿತು. ಅಲ್ಲದೆ ಕ್ಷಮಾಗುಣವನ್ನು ಆಚರಿಸುವ ಬಗೆಗೆ ಪ್ರತಿಜ್ಞೆ ಕೈಕೊಂಡಿದ್ದಿತು. ತನ್ನನ್ನು ಪೀಡಿಸುತ್ತಿದ್ದ ಕಪಿಯು ಬೇರೊಂದು ಕೋಣದಿಂದ ಸಾಯಿಸಲ್ಪಟ್ಟಾಗ ಈ ಸಾಧುಕೋಣವು ಅದರ ದುರ್ಮರಣಕ್ಕೆ ಬಹಳ ಮರುಗಿತು. ತನಗೆ ಕೇಡಾದರೂ ಎರಡನೆಯವರ ಶ್ರೇಯಸ್ಸನ್ನೇ ಬಯಸುವ ಸ್ವಭಾವ ಕೋಣನದ್ದಾಗಿತ್ತು. ಇಂಥ ಉದಾತ್ತ ಕ್ಷಮಾಗುಣ ಹೊಂದಿದ ಕೋಣ ಪ್ರಾಣಿಮಾತ್ರವಾಗಿರದೆ, ಯಾರೋ ಮಹಾಪುರುಷನೇ ಈ ವೇಷದಲ್ಲಿ ಇರಬಹುದೆಂದು ವೃಕ್ಷ ದೇವತೆ ಹೇಳಿತು. ಕೋಣನು ಇಷ್ಟೆ ಅಲ್ಲದೆ ಸತ್ಯ, ದಾನ, ಉಪೇಕ್ಷಾ ಮುಂತಾದ ಪರಿಪೂರ್ಣ ಗುಣಗಳನ್ನು ಬೆಳೆಯಿಸಿಕೊಂಡು ಜನ್ಮಜನ್ಮಗಳಲ್ಲಿಯೂ ಬುದ್ಧನಾಗುವ ಹಂಬಲವುಳ್ಳದ್ದಾಗಿತ್ತು.

2) ಚಾರ್ಲಿಚಾಪ್ಲಿನನ ಕಲಾವಂತಿಕೆಯು ಎಲ್ಲ ದೇಶಗಳ ಜನರನ್ನು ಮುಗ್ಧಗೊಳಿಸಿದ ಬಗೆ.

ಉತ್ತರ : ಚಾರ್ಲಿಚಾಪ್ಲಿನ್ ಒಬ್ಬ ಹೆಸರಾಂತ ಹಾಸ್ಯ ನಟ. ಇವರ ಚಿತ್ರಗಳು ಸಾಮಾನ್ಯ ಚಿತ್ರಗಳಿಗಿಂತ ತೀರ ಭಿನ್ನ

ವಾದವುಗಳು. ಅವು ಎಲ್ಲ ವಿಚಾರಪ್ರಿಯರ ಮಾನವತಾವಾದಿಗಳ ಪ್ರಶಂಸೆಯನ್ನು ಪಡೆದವೆ 'ಚಾರ್ಲಿಚಾಪ್ಲಿನ್ ಕೈಲಾಸಂ ರೀತಿಯ' ಹಾಸ್ಯನಟ ಎಲ್ಲರಿಗೂ ಜನಪ್ರಿಯರಾಗುವದಕ್ಕೆ ಅವರ ಮಾನವೀಯತೆಯೇ ಕಾರಣ. ಇವರ ಚಿತ್ರದಲ್ಲಿ ಅಭಿನಯವೇ ಪ್ರಧಾನ. ಸರ್ವರಿಗೂ ಹಿತಕರವಾದ ರಸದೌತಣ ನೀಡುವ ಪ್ರಸಿದ್ಧ ನಟ ಬೀದಿಯ ಜೀವನವೇ ಅವರ ಕಲೆಯ ತಿರುಳು ಮುಗ್ಧ ಜೀವಿಯ ಅಭಿನಯ ಮಾಡುವ ಚಾಪ್ಲಿನ್ ಯಂಥದೇ ರುದ್ರ ಸನ್ನಿವೇಶವನ್ನು ನಗೆಯ ಹನಿ ಚಿಮುಕಿಸಿ ಪ್ರೇಕ್ಷಕರಿಗೆ ನೀಡುತ್ತಾರೆ. ಯಾಂತ್ರಿಕವಾದ ಜೀವನ ಹೇಗೆ ಎಲ್ಲ ಮಾನವ ಸಹಜ ಪ್ರವೃತ್ತಿಗಳನ್ನೂ ತೊಡೆಯುತ್ತದೆ ಎಂಬುದನ್ನೂ ಚಿತ್ರಿಸುತ್ತಾರೆ. ಅವರ ಚಿತ್ರ ಸಬ್ದಾತಃ ಕರಣದ ರಸ ಬುಗ್ಗೆಯಂತೆ ಕಂಡು ಬರುತ್ತದೆ.

"ಚಾರ್ಲಿ ಚಾಪ್ಲಿನ್" ಕಲೆಯ ವಿಶಿಷ್ಟತೆಯನ್ನು ಕುರಿತು ಹೇಳುವಾಗ—ಇವರ ಚಿತ್ರದ ನಾಯಕ ಯಾವಾಗಲೂ ವಿಷಣ್ಣ ಮುಖಿ, ವಿರೋಧಾಭಾಸಗಳ ಗೊಂದಲವನ್ನೆಬ್ಬಿಸಿ; ನಗೆಯ ಸಮಾರಾಧನೆ ಮಾಡುವ ಪಾತ್ರ ಚಾರ್ಲಿಯದು. ಈ ನಗೆಯ ಹಿಂದೆ ಇರುವದು ವಿಷಾದ ಚಿತ್ರ. ಇವರ ಚಿತ್ರಗಳಲ್ಲಿ ನೋವು ಇದೆ, ಘರ್ಷಣೆ ಇದೆ, ಆದರೆ. ಅವುಗಳಿಗೆ ಪರಿಹಾರ ಇಲ್ಲ. ಚಾಪ್ಲಿನ್ ಸ್ವತಂತ್ರವಾಗಿ ಕಲಾಸೇವೆ ಮಾಡಲಿಚ್ಛಿಸಿದ ಕಲಾವಿದರಲ್ಲಿ ಒಬ್ಬರು. ತಮ್ಮ ಅಗಾಧ ಕಲಾವಂತಿಕೆಯಿಂದ ಎಲ್ಲ ದೇಶಗಳ ಜನರನ್ನು ಮುಗ್ಧರನ್ನಾಗಿ ಮಾಡಿದರು.

3) ಮರಾಠಾದೊರೆ ರಾಜಾರಾಮನು ಚೆನ್ನಮ್ಮಳಿಗೆ ಶರಣುಬಂದ ಸನ್ನಿವೇಶ.

ಉತ್ತರ : ಶಿವಾಜಿಯ ಎರಡನೆಯ ಮಗನಾದ ರಾಜಾರಾಮನು ಬೇತಾಳದಂತೆ ಬೆನ್ನಟ್ಟಿದ್ದ ಹಗೆಯಿಂದ ತಪ್ಪಿಸಿಕೊಂಡು ಕರ್ನಾಟಕಕ್ಕೆ ಬಂದು ಕಾಪಾಡು ಎಂದು ಕೆಳದಿಯ ರಾಣಿ ಚೆನ್ನಮ್ಮಳಿಗೆ ಶರಣು ಬಂದನು ಮೊಗಲರಿಗೆ ತಿಳಿಯದಂತೆ ನನ್ನನ್ನು ನಿಮ್ಮ ನಾಡಿನಿಂದ ದಾಟಿಸಿ ಚಂಡಿಗಡಕ್ಕೆ ತಲುಪಿಸಬೇಕು ಎಂದೂ ಬೇಡಿಕೊಂಡನು ಆಗ ಕರುಣಾಮಯಿಯಾದ ಚೆನ್ನಮ್ಮಾಜಿಯು ಆಪತ್ತು ಎಲ್ಲರಿಗೂ ಬರುತ್ತದೆ, ದೊಡ್ಡವರು ಕಷ್ಟದಲ್ಲಿದ್ದರೂ ಮನ್ನಾರ್ಹರೆ ಎಂಬುದಾಗಿ ಯೋಚಿಸಿ ರಾಜಾರಾಮನಿಗೆ ಅಭಯವಿತ್ತು ಸನ್ಮಾನಪೂರ್ವಕವಾಗಿ ತನ್ನ ರಾಜ್ಯಕ್ಕೆ ಸ್ವಾಗತಿಸುತ್ತಾಳೆ.

ರಣಮಸ್ತಖಾನನು ತನ್ನ ವೈರಿಯನ್ನು ತನಗೊಪ್ಪಿಸು ಎಂದು ಚೆನ್ನಮ್ಮಾಜಿಯನ್ನು ಕೇಳಿದಾಗ, ಚೆನ್ನಮ್ಮಾಜಿಯು ತನ್ನ ಮಂತ್ರಿಮಹೋದಮರೊಂದಿಗೆ ಕೂಡಿ ಆಲೋಚಿಸಿ ಔರಂಗಜೇಬನು ತನ್ನ ಸಂಸ್ಥಾನವನ್ನು ತೆಗೆದುಕೊಂಡರೂ ಸರಿ, ಮೊರೆ ಹೊಕ್ಕವರನ್ನು ಹಗೆಗೆ ಒಪ್ಪಿಸುವದು ರಾಜಧರ್ಮವಲ್ಲ ಎಂದು ಹೇಳಿ ರಾಜಾರಾಮನನ್ನು ವೇಷಾಂತರ ಮಾಡಿ ಚಂಡಿಗಡಕ್ಕೆ ತಲುಪಿಸಿದಳು.

4) ಮಾರಿಸನ್ ಪ್ಲಾನಿಟೋರಿಯಂನಲ್ಲಿ ಲೇಖಕರಿಗೆ ಆದ ಅನುಭವಗಳು.

ಉತ್ತರ : ಮಾರಿಸನ್ ಪ್ಲಾನಿಟೋರಿಯಂ ಒಂದು ಖಗೋಳ ವೀಕ್ಷಣಾಲಯ. ಲೇಖಕರು ಅದನ್ನು ನೋಡಲು ಹೋದರು. ಪ್ರೊಜೆಕ್ಟರ ಮುಖಾಂತರ ಅಲ್ಲಿ ರಾತ್ರಿ ಆಕಾಶ ನಕ್ಷತ್ರಗಳ ದೃಶ್ಯವನ್ನು ತೋರಿಸಿದರು; ಜೊತೆಗೆ ವೀಕ್ಷಕ ವಿವರಣೆಯನ್ನು ನೀಡುತ್ತಿದ್ದರು. ಸೂರ್ಯಾಸ್ತದ ದೃಶ್ಯ ಆಕಾಶಕ್ಕೆ ಹೊಂಬಣ್ಣ ನೀಡುವದು, ನಕ್ಷತ್ರಗಳು ಮಿನುಗುವದು ಇವು ಸತ್ಯವೋ ಎಂಬ ಭ್ರಮೆಯುಂಟಾಗುವಷ್ಟು ನೈಜವಾಗಿತ್ತು.

ಒಂದು ಬೆಳಕಿನ ಚುಕ್ಕೆ ಆಕಾಶದ ಒಂದು ತುದಿಯಿಂದ ಇನ್ನೊಂದು ತುದಿಯವರೆಗೂ ನಿಧಾನವಾಗಿ ಚಲಿಸುತ್ತದೆ. ಇದಕ್ಕೆ ಜೊತೆಯಾಗಿ ಹಿನ್ನೆಲೆಯಲ್ಲಿ ಹಾರುವ ತಟ್ಟೆಗಳ ಬಗೆಗೆ ವೀಕ್ಷಕ ವಿವರಣೆ ಮುಂದುವರಿಯುತ್ತದೆ. ಉಲ್ಕಾಪಾತಗಳು ಅಥವಾ ಕೃತ್ರಕ ಉಪಗ್ರಹಗಳ ಚಲನವಲನಗಳನ್ನು ಕಂಡು ಅವೇ ಹಾರುವ ತಟ್ಟೆಗಳು ಎಂದು ಜನ ಹೇಗೆ ಭ್ರಮಿಸುತ್ತಾರೆ ಎಂಬುದನ್ನು ಪ್ರಯೋಗ ಸಿದ್ಧವಾಗಿ ವಿವರಿಸಿದರು. ಬೇರೆ ಬೇರೆ ನಕ್ಷತ್ರ ಮಂಡಲಗಳ ಚಲನಪಥಗಳನ್ನು ನಿರ್ದೇಶಿಸಿ ವಿವರಿಸುತ್ತಾರೆ. ಅವುಗಳಿಂದ ಹೊರಟ ಬೆಳಕು ಭೂಮಿಯನ್ನು ಸೇರಲು ಎಷ್ಟು ಕಾಲ ಬೇಕು, ಈ ಮಧ್ಯೆ ಅನೇಕ ರಾಸಾಯನಿಕ ಕ್ರಿಯೆಗಳಿಂದ. ಅನಿಲ ಪ್ರಭೆಗಳಿಂದ ನಮ್ಮ ಕಣ್ಣಿಗೆ ಎಷ್ಟು ರೀತಿಯ ಭ್ರಮೆಗಳುಂಟಾಗಬಹುದು ಎಂಬುದನ್ನು ತೋರಿಸಿದರು. ಇದಲ್ಲದೆ ಇದರ ಇನ್ನೊಂದು ಮುಖವಾದ ವಿಮಾನಗಳ ರಹಸ್ಯಾತ್ಮಕ ಕಣ್ಮರೆಯಾಗುವಿಕೆಯನ್ನು ಕುರಿತು ಉದಾಹರಣೆ ಸಹಿತ. ವಿವರಿಸಿದರು. ಇದೆಲ್ಲ ಲೇಖಕರಿಗೆ ಮಾರಿಸನ್ ಪ್ಲಾನಿಟೋರಿಯಂದಲ್ಲಿ ಆದ ಅನುಭವಗಳು.

5). ಬಿಜಾಪುರದ ಪೌರಾಣಿಕ ಮತ್ತು ಐತಿಹಾಸಿಕ ಪ್ರಖ್ಯಾತಿ.

ಉತ್ತರ: ವಿಜಯನಗರದ ಮೇಲೆ ವಿಜಯಸಾಧಿಸಿದ ನಂತರ "ವಿಜಯಪುರ" ಎಂಬ ಹೆಸರು ಬಂದಿತು. ಮುಂದೆ ಆಂಗ್ಲೀಕರಣದ ಪ್ರಭಾವದಿಂದ ಬಿಜಾಪುರ ಎಂದಾಯಿತು. ಎಂದು ಕೆಲವರ ವಾದ. ಅದರಂತೆ "ಬಿಜ್ಜನ ಹಳ್ಳಿ", "ಬಿಜ್ಜಾಪುರ" ಹಾಗೂ "ಬಿಜಾಪುರ" ಆಗಿರಬೇಕು ಎಂದೂ ಹೇಳಲಾಗುತ್ತಿದೆ. ಬಿಜಾಪುರವು

ರಾಜ್ಯದ ಒಂಭತ್ತನೇ ದೊಡ್ಡ ನಗರವೆನಿಸಿದೆ. ಮೂರು ನೂರು ವರ್ಷಗಳ ಹಿಂದೆ ಈ ನಗರ 20 ಲಕ್ಷ ಜನಸಂಖ್ಯೆಯನ್ನು ಹೊಂದಿದ್ದಿತು. ಆದರೆ ಮುಂದೆ 1689 ರಲ್ಲಿ ಭೀಕರ ಪ್ಲೇಗಿನಿಂದ ಆ ನಗರದ ಜನಸಂಖ್ಯೆ ಅರ್ಧಕ್ಕೆ ಇಳಿಯಿತು. ಆದಿಲ್‌ಶಾಹಿಗಳ ಉಚ್ಛ್ರಾಯ ಕಾಲದಲ್ಲಿ ಇಲ್ಲಿಯ ಜನಸಂಖ್ಯೆ ಹಾಗೂ ಪ್ರದೇಶ ವಿಸ್ತೀರ್ಣ ಈಗಿನ ಬೆಂಗಳೂರು ನಗರದಷ್ಟು ದೊಡ್ಡದಾಗಿತ್ತು. ಮೊಗಲರ ದಾಳಿ ಹಾಗೂ ಪೇಶ್ವೆಯವರ ಆಳಿಕೆಯಿಂದ ಈ ನಗರ ಅನೇಕ ಆಘಾತಗಳನ್ನು ಎದುರಿಸಿತು.

ಬಿಜಾಪುರದ ಅರಸರಲ್ಲಿ ಹೆಸರು ಪಡೆದವನು ಇಬ್ರಾಹಿಂ ಆದಿಲ್‌ಶಾಹಿ. ಇವನು ಕಲೆ, ಪಾಂಡಿತ್ಯಕ್ಕೆ ಪ್ರೋತ್ಸಾಹ ನೀಡಿದನು. ಕಲೆಗಳನ್ನು ಪೋಷಿಸಿದನು. ಸ್ವತಃ ನರಸಿಂಹದೇವರ ಪೂಜೆ ಮಾಡುತ್ತಿದ್ದನು. ಎಲ್ಲ ಧರ್ಮಗಳ ಬಗೆಗೂ ಇವನಿಗೆ ಗೌರವ ಇದ್ದಿತು. ಆದ್ದರಿಂದ ಇವನಿಗೆ "ಇಬ್ರಾಹಿಂ ಜಗದ್ಗುರು" ಎಂದು ಕರೆಯುತ್ತಿದ್ದರು. ಔರಂಗಜೇಬನು ಬಿಜಾಪುರವನ್ನು ಹಿಡಿದುಕೊಂಡಾಗ ಅವನ ಆಸ್ಥಾನದಲ್ಲಿ ಮಂತ್ರಿ ಆಗಿದ್ದ ಮಹಿಪತಿರಾಯರು ವೈರಾಗ್ಯ ಪಡೆದು ಮಹಿಪತಿ ದಾಸರಾದರು.

ಬಿಜಾಪುರದ ಗೋಲಗುಮ್ಮಟ ಜಗತ್ಪ್ರಸಿದ್ಧವಾಗಿದೆ. ಇದಲ್ಲದೆ ಅದೆಷ್ಟೋ ಮಸೀದೆಗಳು, ಹಲವಾರು ಮಂದಿರಗಳು ಐತಿಹಾಸಿಕ ಮಹತ್ವವನ್ನು ಪೌರಾಣಿಕ ಹಿನ್ನೆಲೆಯನ್ನೂ ಹೊಂದಿದವುಗಳಾಗಿವೆ. ಪಂಚನದಿಗಳ ಬೀಡು ಎಂದು ಕರೆಯಿಸಲ್ಪಡುವ ಜಿಲ್ಹೆಯ ಕೇಂದ್ರಸ್ಥಾನ ಬಿಜಾಪುರ ಆಗಿದೆ.

6) ಹಿರಿಯ ಗೌಡರಿಗೆ ಕಿರಿಯ ಮಗನನ್ನು ಶಾಲೆಗೆ ಕಳುಹಿಸಲು ಇದ್ದ ತೊಂದರೆ ಮತ್ತು ಅದರ ನಿವಾರಣೆ.

ಉತ್ತರ : ಗೌಡರ ಒಬ್ಬ ಮಗ ಆಗಲೇ ಓದುತ್ತಿದ್ದ. ಒಬ್ಬನಿಗೇನೇ ಪುಸ್ತಕ-ಒಟ್ಟೆಗಳನ್ನು ಒದಗಿಸುವದು ಅವರಿಗೆ ಸಾಕು-ಸಾಕಾಗಿತ್ತು. ಇನ್ನೊಬ್ಬನನ್ನು ಓದಿಸಲು ಅವರಿಗೆ ಚೈತನ್ಯವಿರಲಿಲ್ಲ. ಅಲ್ಲದೆ ಅವರು ಕಡು ಬಡವರು, ಅವರಿಂದ ಕೂಲಿನಾಲಿ ಮಾಡಲೂ ಆಗುತ್ತಿರಲಿಲ್ಲ. ಬರುವ ಆದಾಯ ಒಪ್ಪೊತ್ತಿನ ಊಟಕ್ಕೂ ಸಾಲುತ್ತಿರಲಿಲ್ಲ. ಕಿರಿಯ ಮಗನು ಒಂದೆರಡು ಆಡು ಮೇಯಿಸಿದರೆ ಹೇಗೋ ಖರ್ಚು ನೀಗುತ್ತದೆ ಎಂದು ಅವರ ಯೋಚನೆ. ಈ ಎಲ್ಲ ತೊಂದರೆಗಳಿಂದಾಗಿ ಗೌಡರು ಕಿರಿಯ ಮಗನನ್ನು ಶಾಲೆಗೆ ಕಳಿಸಿರಲಿಲ್ಲ.

ಕಿರಿಯ ಮಗನಿಗೇನೋ ಅಭ್ಯಾಸದಲ್ಲಿ ಆಸಕ್ತಿ ಇದ್ದಿತು. ಇದನ್ನು ಮುಖ್ಯಾಧ್ಯಾಪಕರು ಕಂಡುಕೊಂಡರು. ಗೌಡರು ಆ ಮಗನು ಶಾಲೆಗೆ ಬಂದ ತಪ್ಪಿಗಾಗಿ ಅವನನ್ನು ಹೊಡೆದಾಗ ಮುಖ್ಯಾಧ್ಯಾಪಕರು ಅವನಿಗೆ ಬುದ್ಧಿವಾದ ಹೇಳಿದರು. "ನೀನೇನೂ ಒಟ್ಟೆ ಬರೆ ಬಗ್ಗೆ ಯೋಚಿಸಬೇಡ, ನಾ ತಂದು ಕೊಡ್ತೀನಿ, ಹುಡುಗನ್ನ ನಾಳೆಯಿಂದ ಸ್ಕೂಲಿಗೆ ಕಳಿಸದಿದ್ದರೆ ಜುಲ್ಮಾನೆ ಹಾಕಸ್ತೀನಿ, ನಿನ್ನ ಮೇಲೆ ಸರಕಾರಕ್ಕೆ ಬರೀತೀನಿ" ಎಂದು ಬೆದರಿಸಿದರು. ಆಗ ಗೌಡರು ಮನಸ್ಸಿಲ್ಲದ ಮನಸ್ಸಿನಿಂದ ಮಗನನ್ನು ಶಾಲೆಗೆ ಕಳಿಸಲು ಒಪ್ಪಿದರು. ಹೀಗೆ ಮುಖ್ಯೋಪಾಧ್ಯಾಯರ ನೆರವಿನಿಂದ ಗೌಡರ ಕಿರಿಯ ಮಗನ ಕಲಿಕೆಗೆ ಇದ್ದ ತೊಂದರೆ ನಿವಾರಣೆಯಾಯಿತು.

ಪ್ರಶ್ನೆ II. ಒಂದು ಪುಟಕ್ಕೆ ಮೀರದಂತೆ ಎರಡು ಪ್ರಶ್ನೆಗಳನ್ನು ಉತ್ತರಿಸಿರಿ.

1) ಅಕಬರ ಅಲಿ ಹೇಳುವಂತೆ ಹಳಕಟ್ಟಿಯವರ ಉದಾತ್ತ ವ್ಯಕ್ತಿತ್ವ ಸಾಧನೆಗಳು.

ಉತ್ತರ : (1985 ನೇ ಎಪ್ರೀಲ್ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 2 ರ ಉತ್ತರ ನೋಡಿರಿ)

2) ಕೀರ್ತನೆಯಲ್ಲಿ ಪುರಂದರದಾಸರು ಮೋಸದ ಭಕ್ತಿ, ಡಂಭಾಚಾರಗಳನ್ನು ಕಟುವಾಗಿ ಟೀಕಿಸಿದ ಬಗೆ

ಉತ್ತರ : (1984 ನೇ ಅಕ್ಟೋಬರ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ (3 ರ ಉತ್ತರ ನೋಡಿರಿ)

3) ರಾವಣನು ಸೀತೆಯನ್ನು ಶ್ರೀರಾಮನಿಗೆ ಹೇಗೆ ಒಪ್ಪಿಸಬೇಕೆಂದು ನಿರ್ಧರಿಸಿದನು ?

ಉತ್ತರ : ಸೀತೆಯನ್ನು ರಾಮನಿಂದ ಅಗಲಿಸಿ ತಂದುದಕ್ಕಾಗಿ ರಾವಣನಿಗೆ ಪಶ್ಚಾತ್ತಾಪವಾಯಿತು. ತನ್ನ ಆ ತಪ್ಪು ಕೆಲಸದಿಂದ ತನ್ನ ಕುಲದ ಘನತೆಯೇ ತನ್ನಿಂದ ಅಗಲುವದೇನೋ ಎಂದು ಕೊಂಡನು. ತನ್ನ ತಪ್ಪನ್ನು ಒಪ್ಪಿಕೊಳ್ಳುವನು. ಸೀತೆಯನ್ನು ರಾಮನಿಗೆ ಮರಳಿ ಒಪ್ಪಿಸುವ ಯೋಚನೆಯನ್ನು ಮಾಡುತ್ತಾನೆ.

ಪ್ರಶ್ನೆ III. ಅ) ಕೆಳಗಿನ ಪದ್ಯದ ಸಾರಾಂಶವನ್ನು ಬರೆಯಿರಿ.

ಇಂದು ನೀವರುಹಿದ ಬಳಿಕ ರವಿ
ನಂದನನು ಎಂದರಿದೆ ನಲ್ಲದೆ
ಹಿಂದೆ ದುರ್ಯೋಧನನದಾವುದ ನೋಡಿ ಸಲಹಿದನು ।
ಬಂದು ಪಾಂಡವರೊಡನೆ ಕೂಡಿದ
ಡಿಂದು ನಗದೇ ಲೋಕವಂತಿರ
ಲಿಂದು ನಿಮ್ಮಡಿ ಬಂದಕಾರ್ಯವ ಬೆಸಸಿ ಸಾಕೆಂದ ॥

ಉತ್ತರ : ಇಂದು ನೀವು ಹೇಳಿದ ಬಳಿಕ ನಾನು ರವಿನಂದನ ಎಂದು ಗೊತ್ತಾಯಿತು. ಆದರೆ ಹಿಂದೆ ದುರ್ಯೋಧನನು ನನ್ನಲ್ಲಿ ಏನನ್ನು ಕಂಡು ನನ್ನನ್ನು ಸಲುಹಿದ ? ಈಗ

ನಾನು ಬಂದು ಪಾಂಡವರನ್ನು ಕೂಡಿಕೊಂಡರೆ ಲೋಕದ ಜನರು ನನ್ನನ್ನು ನೋಡಿ ಅಪಹಾಸ್ಯ ಮಾಡುವುದಿಲ್ಲವೇ ? ಅದಿರಲಿ, ಈಗ ನೀವು ಬಂದ ಕಾರ್ಯವೇನು ಹೇಳಿ ಎಂದು ಕರ್ಣನು ಅಂದನು.

ಬ) ಕೆಳಗಿನ ಹಳಗನ್ನಡ ಗದ್ಯಭಾಗವನ್ನು ಹೊಸ ಗನ್ನಡಕ್ಕೆ ಅನುವಾದಿಸಿರಿ.

ಕೇಸರಿಯಾಸುರಂ ಮಸಗಿ ಕ್ಷುಧಾಗ್ನಿಯೊಡನೆ ಕೋಪಾಗ್ನಿ ಪೆರ್ಚೆ ಮೊಲದ ಮಾತಿನ ಬಲೆಯೊಳ್ ಸಿಲ್ಕಿ ಕಡುಮುಳಿದು ತನ್ನನಿಂತು ಕಿಡೆನುಡಿದ ಸಿಂಗಮಿರ್ಪೆಡೆಯಂ ತೋರೆನೆ ಮೊಲ ನೆಂದುದು-ಆ ಸಿಂಗನತಿ ಬಲನಪ್ಪುದರಿಂ ದೇವರ್ ಪೋಗಿ ಪೆಂಗೆ ಹೀನಮಕ್ಕುಮುದಾಗಳುಳಿದ ಮೃಗಂಗಳೆಲ್ಲ ಹಾಸ್ಯಂಗೆ ಯ್ವಪ್ಪವದರಿಂದೆನ್ನನಾ ರೋಗಿಸಿ ಸುಖದೊಳಿರಿಂ. ನಿಷ್ಕಾರಣಂ ಸಾಯದೆನ್ನಂಕೊಳ್ಳಿಮೆಂದುದು.

ಉತ್ತರ: ಆಗ, ಸಿಂಹದ ಕೋಪವು ಪುಟನೆದ್ದು ಹಸಿವಿನೊಡನೆ ಕೋಪಾಗ್ನಿಯೂ ಹೆಚ್ಚಿ ಮೊಲದ ಮಾತಿಗೆ ಬಲೆ ಯಲ್ಲಿ ಸಿಲುಕಿ ತನ್ನನ್ನು ಹೀಗೆ ನಿಂದಿಸಿದ ಸಿಂಹವನ್ನು ತೋರಿಸು ಎಂದೆನಲು ಮೊಲವು- ಆ ಸಿಂಹವು ಅತಿ ಬಲಶಾಲಿ ಆಗಿರುವದು. ಆದ್ದರಿಂದ ಹೋಗಿ ಹಿಂದಿರುಗಿದರೆ ಹೀನ ವಾಗುವದು. ಉಳಿದ ಪ್ರಾಣಿಗಳೆಲ್ಲ ಹಾಸ್ಯಮಾಡುವವು; ಆದ್ದರಿಂದ ನನ್ನನ್ನು ತಿಂದು ಸುಖವಾಗಿರಿ ನಿಷ್ಕಾರಣವಾಗಿ ಸಾಯದ ನನ್ನನ್ನು ತಿನ್ನಿರಿ ಎಂದಿತು.

ಪ್ರಶ್ನೆ IV. ಕೆಳಗಿನ ಪದ್ಯಭಾಗವನ್ನು ಪೂರ್ಣ ಗೊಳಿಸಿರಿ.

ಕದಡಿದ ಸಲಿಲಂ............
..............ದಶವದನಂಗಾ
..........................
..........ಪುಟ್ಟದಲೆ ನೀಲೀರಾಗಂ ।
ಜೇನು ತುಪ್ಪದಲ್ಲಿ..............
..........................
..........................
..........ತೋರಿಸಿತ್ತು ಸುಪ್ರಭಾತಂ ॥

ಉತ್ತರ : ನಿಮ್ಮ ಪಠ್ಯಪುಸ್ತಕದ ಪದ್ಯ ವಿಭಾಗದಲ್ಲಿ ನೋಡಿರಿ.

ಪ್ರಶ್ನೆ V. ಇವರಲ್ಲಿ ಇಬ್ಬರ ಸ್ಥಳ, ಕಾಲ, ಕೃತಿ, ವೈಶಿಷ್ಟ್ಯಗಳನ್ನು ತಿಳಿಸಿರಿ..

1) ದ.ರಾ. ಬೇಂದ್ರೆ. 2) ಪಂಪ. 3) ಕೆ.ಎಸ್. ನರಸಿಂಹಸ್ವಾಮಿ.

ಉತ್ತರ : 1). ದ.ರಾ. ಬೇಂದ್ರೆ (1985 ಎಪ್ರೀಲ ಪತ್ರಿಕೆ 5 ನೇ ಪ್ರಶ್ನೆ ನೋಡಿರಿ)

2) ಪಂಪ (1987 ಆಕ್ಟೋಬರ ಪತ್ರಿಕೆ 5 ನೇ ಪ್ರಶ್ನೆ (2 ರ ಉತ್ತರ ನೋಡಿ)

3) ಕೆ. ಎಸ್. ನರಸಿಂಹಸ್ವಾಮಿ (1985 ಎಪ್ರೀಲ ಪತ್ರಿಕೆ 5 ನೇ ಪ್ರಶ್ನೆ ನೋಡಿರಿ)

ಪ್ರಶ್ನೆ VI. ಕೆಳಗಿನ ವಾಕ್ಯಗಳ ಸಂದರ್ಭ ಮತ್ತು ಸ್ವಾರಸ್ಯವನ್ನು ತಿಳಿಸಿರಿ. (ನಾಲ್ಕು ಮಾತ್ರ)

1) ಕೊಟ್ಟರೆ ಕೊಡಲ್ದೇಳು ಇಟ್ಟಾಂಗ ಇರ ಬೇಕು.

ಉತ್ತರ : ಈ ಮಾತನ್ನು ಕೆರೆಗೆ ಹಾರ ಎಂಬ ಗದ್ಯ ಪಾಠದಿಂದ ಆಯ್ದುಕೊಳ್ಳಲಾಗಿದೆ ಭಾಗೀರತಿ ತನ್ನ ಕಡೆಯ ಭೇಟಿಗಾಗಿ ಗೆಳತಿಯ ಮನೆಗೆ ಬರುತ್ತಾಳೆ. ಅವಳ ಕಣ್ಣಲ್ಲಿ ನೀರು, ಬಾಡಿದ ಮುಖಕಂಡು ಆ ಗೆಳತಿ ಕಾರಣ ಕೇಳುತ್ತಾಳೆ. ಆಗ ಭಾಗೀರತಿಯು ತನ್ನ ಅತ್ತೆ ಮಾವಂದಿರು ತನ್ನನ್ನು ಕೆರೆಗೆ ಹಾರ ಕೊಡುವ ವಿಷಯವನ್ನು ಪ್ರಸ್ತಾಪಿಸುತ್ತಾಳೆ. ಆ ಸಂದರ್ಭದಲ್ಲಿ ಭಾಗೀರತಿಯ ಗೆಳತಿಯು "ಕೊಟ್ಟರೆ ಕೊಡ ಲೇಳು ಇಟ್ಟಾಂಗ ಇರಬೇಕು" ಎಂದು ಹೇಳಿದಳು.

2) ತಾಳವೃಕ್ಷದಂತೆ ನಮ್ಮ ಬಾಳೆ ಸತತ ಕೊನರಲಿ

ಉತ್ತರ : ದ. ರಾ. ಬೇಂದ್ರೆಯವರ ಸ್ವಾತಂತ್ರ್ಯ ವರ್ಧಂತಿ ಎಂಬ ಪದ್ಯದಿಂದ ಮೇಲಿನ ಮಾತನ್ನು ಆಯ್ದು ಕೊಳ್ಳಲಾಗಿದೆ. ಶ್ರಾವಣ ಬಂದು ನೆಲ-ಹೊಲ ಹಸಿರು ಮಾಡಿ ದಂತೆ, ಸ್ವಾತಂತ್ರ್ಯವು ಬಂಧನವನ್ನು ಬಿಡಿಸಿ ಜನತೆಗೆ ಸೃಜನ ಶೀಲತೆಯನ್ನು, ಸ್ವತಂತ್ರ ಜೀವನವನ್ನೂ ತಂದುಕೊಟ್ಟಿತು. ಆದರೂ ನಾವು ಸಾಧನೆಗಾಗಿ ಹೋರಾಡಬೇಕಾಗಿದೆ, ಅಜ್ಞಾನ ವನ್ನು ದಾಟಿ ಬರಬೇಕು. ಅಹಂಕಾರವನ್ನು ಮೆಟ್ಟಿ ಬರಬೇಕು, ಜನರ ಪೌರುಷತ್ವ ಬಾಳಬೇಕು. ಜನತೆಯಲ್ಲಿ ತಾಳ ಮೇಳ ಬೇಕು. ನಮ್ಮ ಬಾಳು ತಾಳ ವೃಕ್ಷದಂತೆ ಸದಾ ಚಿಗಿಯುತ್ತಿರ ಬೇಕು ಎಂಬುದೇ ಕವಿಯ ಆಶಯವಾಗಿದೆ.

3) ಆಕಸ್ಮಿಕವಾದರೂ ಎಂಥ ಅಪೇಕ್ಷಣೀಯ ಆಕಸ್ಮಿಕ !

ಉತ್ತರ : ಗೋಲ್ಡನ್‌ಗೇಟ ಪಾರ್ಕಿನಲ್ಲಿ ಎಂಬ ಪಾಠ ದಿಂದ ಈ ಮಾತನ್ನು ಆಯ್ದುಕೊಳ್ಳಲಾಗಿದೆ. ಲೇಖಕರು ಒಮ್ಮೆ ಅಮೆರಿಕದ ಸ್ಯಾನ್ ಫ್ರಾನ್ಸಿಸ್ಕೋದಲ್ಲಿ ಇರುವ ದೊಡ್ಡ

ಉದ್ಯಾನವನದಲ್ಲಿ ಮಾರಿಸನ್ ಪ್ಲಾನಿಟೋರಿಯಂ ಖಗೋಳ ವೀಕ್ಷಣಾಲಯವನ್ನು ಸಂದರ್ಶಿಸಿದ್ದರು. ಅಲ್ಲಿಯ ವೀಕ್ಷಕ ವಿವರಣೆಯನ್ನು ಕೇಳಿ ತಿಳಿದುಕೊಳ್ಳುವದರ ಜೊತೆಗೆ ಆಕಾಶ ಕಾಯಗಳ ಚಲನವಲನ ಬಗೆಗಿನ ಪ್ರದರ್ಶನವನ್ನು ವೀಕ್ಷಿಸುತ್ತಿದ್ದರು. ಈ ಸಂದರ್ಭದಲ್ಲಿ ಆಕಸ್ಮಿಕವಾಗಿ ಹಾರುವ ತಟ್ಟೆಗಳ ಬಗೆಗಿನ ಪ್ರಸ್ತಾಪವನ್ನು ವೀಕ್ಷಿಸಿದರು. ಈ ವಿಷಯವಾಗಿಯೇ ಭಾರತದಲ್ಲಿರುವ ಕುವೆಂಪುರವರಿಗೆ ಲೇಖನ ಬರೆಯಬೇಕಾಗಿದ್ದಿತು. ಆ ವಿಷಯ ಕುರಿತು ಅಪೇಕ್ಷಣೀಯವಾದ ಪ್ರಸಂಗ ಇದಾಗಿದ್ದುದರಿಂದ ಮೇಲಿನಂತೆ ಉದ್ಗಾರ ಮಾಡಿದ್ದಾರೆ.

**5. ಕೊಂದೊಡೆ ಶರಣೆಂಬುದ ಮಾಣೆ**

**ಉತ್ತರ :** "ವಚನಾಮೃತ" ಎಂಬ ಪದ್ಯ ಪಾಠದಲ್ಲಿ ಈ ಮಾತು ಹೇಳಲಾಗಿದೆ. ಗಂಧದ ಗಿಡ, ಬಂಗಾರ, ಕಬ್ಬು ಇವುಗಳನ್ನು ಹೇಗೆ ಬೇಕಾದರೂ ವಿರೂಪಗೊಳಿಸಿದಾಗ್ಯೂ ತಮ್ಮ ತಮ್ಮ ಮೂಲ ಗುಣಧರ್ಮಗಳನ್ನೆಂದೂ ಕಳೆದುಕೊಳ್ಳಲಾರವು. ಅದರಂತೆ ಎಲೈ ದೇವನೇ ನೀನು ನನ್ನನ್ನು ಕೊಂದರೂ ನಿನಗೆ ಶರಣು ಎನ್ನುವದನ್ನು ಮಾತ್ರ ನಾನು ಬಿಡುವದಿಲ್ಲ ಎಂದು ಭಕ್ತನು ತನ್ನ ಅಚಲ ಭಕ್ತಿಯನ್ನು ಈ ಪರಿಯಾಗಿ ಹೇಳಿದ್ದಾನೆ.

**ಪ್ರಶ್ನೆ VII ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರಿಸಿರಿ.**

**1. ಭಾದ್ರಪದ ಸುಪ್ರಭಾತವು ಕವಿಗೆ ಕಂಡ ಬಗೆ**

**ಉತ್ತರ :** ಭಾದ್ರಪದ ಮಾಸದ ಒಂದು ಬೆಳಗು ಕವಿ ದಿಗಂತದ ಕಡೆ ನೋಡುತ್ತಿದ್ದಾನೆ. ಅದೇ ಮೂಡಿಬರುತ್ತಿರುವ ಸೂರ್ಯ ಹಗಲಿನ ಕಣ್ಣಾಗಿ ತೋರಿದ್ದಾನೆ. ಗಗನವೆಂಬ ಪಕ್ಷಿ ತನ್ನ ಮುಗಿಲುಗಳೆಂಬ ಗರಿಗಳನ್ನು ಕಾಯಿಸುತ್ತಿದೆ, ಅರ್ಥಾತ್ ಆಕಾಶದಲ್ಲಿಯ ಮೋಡಗಳ ಮೇಲೆಲ್ಲ ಸೂರ್ಯನ ಕಿರಣಗಳು ಪಸರಿಸಿವೆ, ಭೂಮಿ ಎಲ್ಲೆಡೆಗೂ ಹಸುರಿನಿಂದ ಶೋಭಿಸುತ್ತಿದೆ, ಕವಿಯು ಆ ಹಸುರಿನ ಸಿರಿಯನ್ನು ಕಂಡು ಆನಂದಿಸುತ್ತಿದ್ದಾನೆ.

**2. ಸರ್ವಜ್ಞನ ವಚನಗಳ ಸಾರಾಂಶ**

**ಉತ್ತರ :** ಮನುಷ್ಯನಲ್ಲಿ ಗರ್ವ, ಗುರುನಿಂದೆ, ಬರೆಯುವವರ ಕೂಡ ಹಗೆತನ ಮುಂತಾಗಿ ಇರಬಾರದು, ಎಂದು ಕೆಲವು ನಿಷೇಧಗಳನ್ನು ಸರ್ವಜ್ಞನು ಹೇಳಿದ್ದಾನೆ. ಅದರಂತೆ ಜಾತಿಭೇದವನ್ನು ಮಾಡಬಾರದೆಂದು ಜಾತಿಪದ್ಧತಿಯನ್ನು ಖಂಡಿಸಿದ್ದಾನೆ ಎಲ್ಲಕಡೆಗೂ ದೇವರಿದ್ದಾನೆ. ಎಲ್ಲವೂ ದೇವರಿಂದ ವ್ಯವಸ್ಥಿತವಾಗಿ ನಡೆಯುತ್ತಿದೆ ಎಂದು ದೃಷ್ಟಾಂತಗಳ ಮೂಲಕ ದೇವರ ಅಸ್ತಿತ್ವವನ್ನು ಮನಗಾಣಿಸಿದ್ದಾನೆ.

**3. ಎಚ್ಚೆತ್ತ ಕುಂಭಕರ್ಣನು ರಾವಣನ ಸಮೀಪಕ್ಕೆ ಹೋಗುವವದನ್ನು ನೋಡಿ ಕಪಿಗಳಿಗೆ ಆದ ದಿಗ್ಭ್ರಮೆ**

**ಉತ್ತರ :** ಕುಂಭಕರ್ಣನು ಬರುತ್ತಿರುವದನ್ನು ಕಂಡು ಹೊರವಲಯದಲ್ಲಿ ಮುತ್ತಿಕೊಂಡಿದ್ದ ಕಪಿನಾಯಕರು ಬೆದರಿ ಕಂಗೆಟ್ಟು ಶ್ರೀರಾಮನ ಸಮೀಪಕ್ಕೆ ಓಡುತ್ತಿದ್ದರು ಕೆಲವರು ಇವನ ಭಯಂಕರವಾದ ಶರೀರ ಕಂಡು ವ್ಯಥೆಪಡುತ್ತಿದ್ದರು. ಕೆಲವರು ಭ್ರಮೆಗೊಂಡಂತೆ ಭೂಮಿ ಮೇಲೆ ಬೀಳುತ್ತಿದ್ದರು. ಮತ್ತೆ ಕೆಲವರು ಸೂರ್ಯಮಂಡಲವನ್ನು ತುಡುಕುತ್ತಿದ್ದಾನೇಯೋ ಎಂಬಂತೆ ಅತ್ಯುನ್ನತವಾದ ಕುಂಭಕರ್ಣನನ್ನು ನೋಡಿ ಭಯಗೊಂಡು ಓಡುತ್ತಿದ್ದರು.

**4. ಹಾರುವ ತಟ್ಟೆಗಳ ಕುರಿತು ವಿಜ್ಞಾನಿಗಳ ಅಭಿಪ್ರಾಯ.**

**ಉತ್ತರ :** ಲೋಕಾಂತರದಿಂದ ಬರುವ ವಾಹನಗಳು ಹಾರುವ ತಟ್ಟೆಗಳೆಂದು ನಂಬಲಾಗಿದೆ. ಅವು ಕಾಲಾಂತರದಿಂದ ಇತರ ಗ್ರಹಗಳಿಂದ ಜನರನ್ನು ಹೊತ್ತು ತರುವ ಸಾಧನಗಳಾಗಿವೆ ಎಂದು ತಿಳಿಯಲಾಗಿದೆ. ಎಷ್ಟೋ ಸಲ ಉಲ್ಕಾಪಾತಗಳನ್ನು ಅಥವಾ ಉಪಗ್ರಹಗಳ ಚಲನವಲನಗಳನ್ನು ಹಾರುವ ತಟ್ಟೆಗಳೆಂದೇ ತಪ್ಪು ತಿಳಿಯಲಾಗುತ್ತದೆ. ಅಸಾಧಾರಣವಾದ ಹಾಗೂ ಅಸಾಮಾನ್ಯ ವೇಗದಿಂದ ಚಲಿಸುವ ವಾಹನಗಳೆಂದು ಇವತ್ತಿಗೂ ರಹಸ್ಯವಾಗಿಯೇ ಉಳಿದಿವೆ.

**5. ಮುಖ್ಯೋಪಾಧ್ಯಾಯ ವೀರಣ್ಣಗೌಡರ ವ್ಯಕ್ತಿತ್ವ-ಬಾಲಕ ಜವರೇಗೌಡರಿಗಾದ ಉಪಕಾರ.**

**ಉತ್ತರ :** ಮುಖ್ಯೋಪಾಧ್ಯಾಯ ವೀರಣ್ಣಗೌಡರು ಅತ್ಯಂತ ಸುರೂಪಿಗಳು, ವರ್ಚಸ್ವಿಗಳು, ಕುಶಲರು ಹಾಗೂ ಕರುಣಾಳುಗಳಾಗಿದ್ದರು. ಜನರ ಆದರ ಗೌರವಗಳಿಗೆ ಪಾತ್ರರಾಗಿದ್ದರು ಅವರೊಬ್ಬ ಶಿಸ್ತಿನ ಸಿಪಾಯಿಗಳಾಗಿದ್ದರು. ಬಾಲಕ ಜವರೇಗೌಡರಿಗೆ ತಂದೆ ಶಾಲೆಗೆ ಹೋಗಬೇಡವೆಂದು ಬಿಡಿಸಿದ್ದಾಗ ಅವರ ಖರ್ಚು–ವೆಚ್ಚ ನೋಡಿಕೊಂಡು ಶಾಲೆಗೆ ಬರುವಂತೆ ಉಪಕಾರ ಮಾಡಿದರು.

**ಪ್ರಶ್ನೆ VIII ಮದಬಂದ ಕಾಡಾನೆಯು ಕೊಳವನ್ನು ಹೊಕ್ಕಂತೆ-ಅಭಿಮನ್ಯು ಚಕ್ರವ್ಯೂಹವನ್ನು ಹೊಕ್ಕನು– ಇಲ್ಲಿ ಕಂಡುಬರುವ ಅಲಂಕಾರವನ್ನು ತಿಳಿಸಿ ಸಮನ್ವಯಗೊಳಿಸಿರಿ.**

**ಉತ್ತರ :** ಇಲ್ಲಿ ಉಪಮೇಯ ಮತ್ತು ಉಪಮಾನಗಳ ಸುಂದರ ಹೋಲಿಕೆ ಇದೆ.

ಮದಬಂದ ಕಾಡಾನೆ–ಅಭಿಮನ್ಯು

ಕೊಳ–ಚಕ್ರವ್ಯೂಹ ಇವುಗಳನ್ನು ಹೋಲಿಸಲಾಗಿದೆ.
'ಅಂತೆ'–ಇದು ಉಪಮಾವಾಚಕ
ಹೋಗುವದು ಸಾಮಾನ್ಯ ಗುಣಧರ್ಮ
ಆದ್ದರಿಂದ ಇದು ಉಪಮಾಲಂಕಾರ.

ಪ್ರಶ್ನೆ XI ಕೆಳಗಿನ ಪದ್ಯಭಾಗವನ್ನು ಪ್ರಸ್ತರಿಸಿ, ಗಣವನ್ನು ವಿಂಗಡಿಸಿ ಛಂದಸ್ಸನ್ನು ಹೆಸರಿಸಿರಿ.

ಆ ಸಮಯದಲಿ ಗಂಗೆ ನಾರೀ
ವೇಷದಲಿ ನಡೆತಂದಳೆಲೆಕುಂ
ತೀ ಸತಿಯೆ! ಕೈಯಡೆಯ ಕಂದನನೊಪ್ಪುಗೊಳು ನೀನು.

ಉತ್ತರ : – ∪ | ∪∪∪∪ | – ∪ | – – |
ಆಸ | ಮಯದಲಿ | ಗಂಗೆ | ನಾರೀ |
ಇ | ಳ | ಇ | ಳ

– ∪ | ∪∪∪∪ | – ∪ | ∪∪ – |
ವೇಷ | ದಲಿನಡೆ | ತಂದ | ಳೆಲೆಕುಂ |
ಇ | ಳ | ಇ | ಳ

– ∪ | ∪∪ – | ∪∪∪ | – ∪∪ |
ತೀಸ | ತಿಯಕೈ | ಯಡೆಯ | ಕಂದನ |
ಇ | ಳ | ಇ | ಳ

– ∪ | ∪∪ – | –
ನೊಪ್ಪು | ಗೊಳುನೀ | ನು
ಇ | ಳ | ಗು

ಲಕ್ಷಣ– ೧,೨,೪,೫ನೇ ಪಾದಗಳಲ್ಲಿ ಇ,ಳ,ಇ,ಳ, ಮಾತ್ರೆಗಳ ಗಣಗಳು ಹಾಗೂ ೩ ಮತ್ತು ೬ನೇ ಪಾದಗಳಲ್ಲಿ ಇ,ಳ, ಇ,ಳ, ಇ,ಳ ಮಾತ್ರೆಯ ಗಣಗಳೂ ಮೇಲೊಂದು ಗುರುವೂ ಬಂದಿವೆ. ಆದ್ದರಿಂದ ಇದು ಭಾಮಿನಿ ಷಟ್ಪದಿಯು.

ಪ್ರಶ್ನೆ X ಅ) ಕೆಳಗಿನ ಮಡಿಕಟ್ಟುಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿರಿ.

1) ಗಾಢ ಪರಿಣಾಮವನ್ನುಂಟು ಮಾಡು.
2) ಅನಿರ್ವಚನೀಯ ಆನಂದ.

ಉತ್ತರ: 1) ಮಗುವಿನ ಅಗಲುವಿಕೆಯು ತಾಯಿಯ ಮೇಲೆ ಗಾಢಪರಿಣಾಮವನ್ನುಂಟುಮಾಡಿತು.

2) ಅಜಿತ ಸೇನಾಚಾರ್ಯರ ಆಶೀರ್ವಾದದಿಂದ ರನ್ನಮಯ್ಯನಲ್ಲಿ ಅನಿರ್ವಚನೀಯ ಆನಂದ ಉಂಟಾಯಿತು.

ಆ) ಅವಯವಾರ್ಥ ಕೊಡಿರಿ

1. ಅಸಮಾಕ್ಷ 2. ಅಮರ್ತ್ಯನಾಥ ದಿಶೆ

ಉತ್ತರ : 1. ಅಸಮಾಕ್ಷ—ವಿಷಮಸಂಖ್ಯೆಯಲ್ಲಿ ಕಣ್ಣುಳ್ಳವನು, ಶಿವ

2. ಅಮರ್ತ್ಯನಾಥ ದಿಶೆ–ದೇವತೆಗಳ ಒಡೆಯನಾದ ಇಂದ್ರನ ದಿಕ್ಕು–ಪೂರ್ವ ದಿಕ್ಕು.

ಪ್ರಶ್ನೆ XI ಕ) ವಿಗ್ರಹ ವಾಕ್ಯವನ್ನು ಬರೆದು ಸಮಾಸದ ಹೆಸರನ್ನು ತಿಳಿಸಿ

1. ತಲೆದೂಗು 2. ಸಾಧುಪ್ರಾಣಿ

ಉತ್ತರ : 1. ತಲೆಯನ್ನು+ತೂಗು=ತಲೆದೂಗು (ಕ್ರಿ. ಸ.)

2. ಸಾಧುವಾದ+ಪ್ರಾಣಿ=ಸಾಧುಪ್ರಾಣಿ (ಕರ್ಮಧಾರಯ ಸ.)

ಬ) ಸಮಾನಾರ್ಥಕ (ಪರ್ಯಾಯ) ಪದಗಳನ್ನು ಕೊಡಿರಿ

1. ನಯನ 2. ನಂದನ

ಉತ್ತರ: ನಯನ=ನೇತ್ರ, ಅಕ್ಷ, ಕಣ್ಣು.
2. ನಂದನ=ಕುಮಾರ, ಪುತ್ರ, ಮಗ, ಅಣುಗ.

ಗ) ಪದಗಳನ್ನು ವಿಂಗಡಿಸಿ ಸಂಧಿಯ ಹೆಸರನ್ನು ತಿಳಿಸಿರಿ.

1. ದುರ್ಗತಿ. 2. ಉತ್ತಮೋತ್ತಮ. ಗಂಧೋದಕ.

ಉತ್ತರ: ದುರ್+ಗತಿ=ದುರ್ಗತಿ (ವ್ಯಂಜನ ಸಂಧಿ)
2. ಉತ್ತಮ+ಉತ್ತಮ=ಉತ್ತಮೋತ್ತಮ (ಗುಣಸಂಧಿ)
3. ಗಂಧ+ಉದಕ=ಗಂಧೋದಕ (ಗುಣಸಂಧಿ)

ಘ) ಅ) ವಿರುದ್ಧ ಅರ್ಥದ ಪದಗಳನ್ನು ಕೊಡಿರಿ

1. ಸ್ತುತಿಸು 2. ಸ್ವಾವಲಂಬನೆ

ಉತ್ತರ: 1. ನಿಂದಿಸು 2. ಪರಾವಲಂಬನೆ

ಆ) ಸಂಸ್ಕೃತಕ್ಕೆ ತದ್ಭವ, ತದ್ಭವಕ್ಕೆ ಸಂಸ್ಕೃತ ಪದಗಳನ್ನು ಕೊಡಿರಿ.

1. ಸಂಧ್ಯಾ 2. ಪಯಣ

ಉತ್ತರ: 1. ಸಂಜೆ (ದ್ಭ) 2. ಪ್ರಯಾಣ (ತ್ಸ)

ಪ್ರಶ್ನೆ XII ಒಂದೊಂದು ವಾಕ್ಯದಲ್ಲಿ ಉತ್ತರಿಸಿರಿ.

1 ಕೊನೆಯುಸಿರೆಳೆಯುವ ಪೂರ್ವದಲ್ಲಿ ಕಿಟೆಲ್ಲರು ಇಂಗ್ಲೀಷಿನಲ್ಲಿ ಮಾತನಾಡಿದ ಕರ್ನಾಟಕದವರೊಬ್ಬರನ್ನು ಪ್ರಾರ್ಥಿಸಿದ್ದು–

ಉತ್ತರ: ಕನ್ನಡದಲ್ಲಿ ಮಾತನಾಡಿ ತಮ್ಮನ್ನು ಪುನೀತರನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದರು.

2. ಕಾಶಿಕೋಪಿಯು ಮಗನನ್ನು ಕೊನೆಯದಾಗಿ ಬೈದದ್ದು–

ಉತ್ತರ : "ಎಷ್ಟುಸಲ ಬೊಗಳೋದೋ ಕತ್ತೆ ! ಬಿಟ್ಟೆ ಅಂದ್ಮೇಲೆ ಬಿಟ್ಟೆ ! ಇನ್ನೊಂದು ಸಲ ಆ ವಿಚಾರ ಎತ್ತಿದರೆ ತಲೆ ಒಡೆದು ಹಾಕಿ ಬಿಟ್ಟೇನು, ಹುಷಾರ್"

3. ಲಕ್ಕುವೆಂದರೆ ತುಂಬಾ ಹೆಮ್ಮೆ ಪಡುತ್ತಿದ್ದ ಖಾಸಸು ಎಲ್ಲರೆದುರು ಅದನ್ನು ಹೊಗಳುತ್ತಿದ್ದ ಬಗೆ

ಉತ್ತರ : ಮೇರಾ ಲಕ್ಕು "ಗಾಂವಕಾ ಶೇರ್" ಎಂದು ಹೊಗಳುತ್ತಿದ್ದನು.

4. ಸಂಶೋಧನೆಯಲ್ಲಿ ಮಗ್ನನಾಗಿದ್ದ ಫಾರಡೆಗೆ ಮಹಿಳೆಯೊಬ್ಬಳು ಅದರಿಂದ ಏನನ್ನು ಸಾಧಿಸಿದಂತಾಯಿತು ಎಂದಾಗ ಆತನ ಉತ್ತರ.

ಉತ್ತರ : ಈಗ ತಾನೇ ಹುಟ್ಟಿದ ಮಗುವಿನಿಂದ ಪ್ರಯೋಜನವಾದರೂ ಏನು ? ಎಂಬುದು ಉತ್ತರ.

5. ಕಳವು ಆಗಿ ಮನೆ ಬರಿದು, ಇಂದು ನಿಮಗೆ ಹಿಡಿ ಕಾಳೂ ಮನೆಯಲ್ಲಿಲ್ಲ ಎಂದು ವೈದ್ಯರು ಹೇಳಿದಾಗ ಬಂದವರಲ್ಲಿ ಒಬ್ಬನು ಅಂದದ್ದು.

ಉತ್ತರ : ನಾವು ಕಳುವಿಗೆ ಬಂದವರಲ್ಲವೆಂದೂ ಔಷಧ ಕ್ಕಾಗಿ ಬಂದವರೆಂದೂ ಹೇಳಿದನು.

ಬ) ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಪದಗಳನ್ನು ಭರ್ತಿ ಮಾಡಿರಿ.

ಉತ್ತರ :
1. ಅವಂತಿ ರಾಜ್ಯದ ವೈದಿಶವನ್ನು ಆಳುತ್ತಿದ್ದ ರಾಜ........(ಜಯವರ್ಮ)
2. ಕಾಷ್ಠಕೂಟನ ಹೆಂಡತಿಯ ಹೆಸರು..... (ಜಯಘಂಟಿ)
3. ಸಿದ್ಧರಾಮನ ಹುಟ್ಟೂರು............ (ಸೊನ್ನಲಿಗೆ)
4. ಲಿಪಿಲತ ಕವಿತೆಯನ್ನು ಬರೆದ ಕವಿ...... (ಡಿ. ಎಸ್. ಕರ್ಕಿ)
5. ಗಾಂಧೀಜಿ ರವೀಂದ್ರರಿಗೆ ನೀಡಿದ್ದ ಬಿರುದು........(ಮಹಾರಕ್ಷಕ ಭಟ)

ಪ್ರಶ್ನೆ XIII. ಮೊದಲಿನ ಎರಡು ಪದಗಳಿಗೆ ಇರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದಗಳನ್ನು ಬರೆಯಿರಿ.

ಉತ್ತರ :
1 ಕರ್ನಾಟಕ ಭಾರತ ಕಥಾ ಮಂಜರಿ: ಗದುಗು ಭಾರತ :: ರಾಮಚಂದ್ರ ಚರಿತ ಪುರಾಣ: ಪಂಪ ರಾಮಾಯಣಂ
2 ವಿಶ್ವಭಾರತಿಗೆ ಕನ್ನಡದಾರತಿ: ಚನ್ನವೀರ ಕಣವಿ: ಸ್ವಾತಂತ್ರ್ಯ ವರ್ಧಂತಿ: ದ. ರಾ. ಬೇಂದ್ರೆ.
3 ದುರ್ಗಸಿಂಹ: ಪಂಚ ತಂತ್ರ:: ಶಿವ ಕೋಟ್ಯಾಚಾರ್ಯ: ವಡ್ಡಾರಾಧನೆ.
4 ನನ್ನ ನಿನ್ನ ನಡುವೆ: ಮಲ್ಲಿಗೆ:: ಕಟ್ಟುವೆವು ನಾವು: ಗುರಿ
5 ಸೈಪು: ಪುಣ್ಯ:: ಬೆಂಪು: ಘನತೆ

ಪ್ರಶ್ನೆ XIV ಆಯಾಯ ಗುಂಪಿಗೆ ಸೇರದ ಪದಗಳನ್ನು ಆಯ್ದು ಬರೆಯಿರಿ.

1 ಇಮ್ಮಡಿ ನಾಗವರ್ಮ, ಮುಮ್ಮಡಿ ಕೃಷ್ಣರಾಜ, ಕೇಶಿರಾಜ, ಭಟ್ಟಾ ಕಳಂಕದೇವ (ಮುಮ್ಮಡಿ ಕೃಷ್ಣ ರಾಜ)
2 ರತ್ನಾವತೀ ಕಲ್ಯಾಣ, ಅದ್ಭುತ ರಾಮಾಯಣ, ಪಂಪ ರಾಮಾಯಣ, ಕುಮಾರ ವಿಜಯ (ಪಂಪ ರಾಮಾಯಣ)
3 ಹೆಜ್ಜೇನು, ಬೆಳ್ಗೊಡೆ, ನಿಟ್ಟುಸಿರು, ತಲೆ ತಗ್ಗಿಸು (ತಲೆತಗ್ಗಿಸು)
4 ಜಾಣ್ಮೆ, ಕೂರ್ಮೆ, ಪೆರ್ಮೆ, ಆಮೆ (ಆಮೆ)
5 ಹರೀಶ್ವರ, ಮಹೋನ್ನತ, ಸೂರ್ಯೋದಯ, ಗಂಗೋದಕ (ಹರೀಶ್ವರ)

ಪ್ರಶ್ನೆ XV "ಅ" ಗುಂಪಿನ ಪದಗಳಿಗೆ "ಬ" ಗುಂಪಿನ ಪದಗಳಲ್ಲಿ ಸರಿಯಾದವುಗಳನ್ನು ಜೋಡಿಸಿ ಬರೆಯಿರಿ.

| "ಅ" | "ಬ" |
|---|---|
| 1 ಸೈಂಧವ ಕುದುರೆ ಕಥಾ ಸಂಕಲನ | 1 ಗಾಂಧೀಜಿ |
| 2 ರಾಷ್ಟ್ರಕೂಟನ ಕೃಷ್ಣ | 2 ರವೀಂದ್ರನಾಥ ಠಾಗೋರ್ |
| 3 ದೆವ್ವದ ಮನೆ | 3 ಕೈಲಾಸಂ |
| 4 ಹರಿಜನ ಪತ್ರಿಕೆ | 4 ಕೈಲಾಸ ದೇವಾಲಯ |
| 5 ಚಿತ್ರಾಂಗದಾ ನಾಟಕಕಾರ | 5 ಕಾಡುಕೋಣ |
| | 6 ಭೂತಾಲಯ |
| | 7 ರಾವ್ ಬಹದ್ದೂರ್ |

ಉತ್ತರ : 1–5, 2–4, 3–7, 4–1, 5–2.

—●—

# ಕನ್ನಡ

**ಜೂನ–೧೯೮೮ ದ್ವಿತೀಯ ಪತ್ರಿಕೆ**

ಅವಧಿ : 2 ಗಂಟೆ ಅಂಕಗಳು : 50

**ಪ್ರಶ್ನೆ I.** ಈ ಕೆಳಗಿನ ಪ್ರಶ್ನೆಗಳಲ್ಲಿ ಎರಡನ್ನು ಆರಿಸಿಕೊಂಡು ಪ್ರತಿಯೊಂದಕ್ಕೆ ಒಂದು ಪುಟದಷ್ಟಿರುವಂತೆ ಉತ್ತರಿಸಿರಿ.

1. ತೇನಸಿಂಗನ ಬದುಕು ಸಾರ್ಥಕವಾದ ಬಗೆ ಹೇಗೆ ?

ಉತ್ತರ : (1987 ಅಕ್ಟೋಬರ ದ್ವಿತೀಯ ಪತ್ರಿಕೆ 1 ನೇ ಪ್ರಶ್ನೆ 1 ರ ಉತ್ತರ ನೋಡಿರಿ.)

2. ಜಗದೀಶಚಂದ್ರ ಬೋಸರು ಭೌತಶಾಸ್ತ್ರದಲ್ಲಿ ನಡೆಸಿದ ಸಂಶೋಧನೆಯನ್ನು ವಿವರಿಸಿರಿ.

ಉತ್ತರ : (1986 ಅಕ್ಟೋಬರ ದ್ವಿತೀಯ ಪತ್ರಿಕೆ 2 ನೇ ಪ್ರಶ್ನೆ 4 ರ ಉತ್ತರ ನೋಡಿರಿ.)

3. ಅರವಿಂದರ ವಿದೇಶೀ ವಿದ್ಯಾಭ್ಯಾಸವನ್ನು ಕುರಿತು ಬರೆಯಿರಿ.

ಉತ್ತರ : (1985 ಎಪ್ರೀಲ ದ್ವಿತೀಯ ಪತ್ರಿಕೆ 1 ನೇ ಪ್ರಶ್ನೆ 2 ರ ಉತ್ತರ ನೋಡಿರಿ.)

4. ಸ್ವಾತಂತ್ರ್ಯಯೋಧ ಅರವಿಂದರು ಅಧ್ಯಾತ್ಮಿಕ ಯೋಗದತ್ತ ತಿರುಗಲು ಕಾರಣವಾದ ಘಟನೆಗಳು ಯಾವುವು ?

ಉತ್ತರ : (1986 ಮಾರ್ಚ ಪ್ರಶ್ನೆ 1, 3, 1987 ಅಕ್ಟೋಬರ ಪ್ರ. 1 4 ರ ಉತ್ತರ ನೋಡಿರಿ.)

**ಪ್ರಶ್ನೆ II.** ಕೆಳಗಿನ ಪ್ರತಿಯೊಂದು ಪ್ರಶ್ನೆಗೂ ಏಳೆಂಟು ವಾಕ್ಯಗಳಂತೆ ಉತ್ತರಿಸಿರಿ.

1. ಪಾಂಡಿಚೇರಿಯಲ್ಲಿ ಮಾತೆಯರ ಕಾರ್ಯ ನಿರ್ವಹಣೆಯ ಕುರಿತು ಬರೆಯಿರಿ.

ಉತ್ತರ : ಮೀರಾ ಅವರು ಪಾಂಡಿಚೇರಿ ಆಶ್ರಮಕ್ಕೆ ಬಂದ ಮೇಲೆ ಅದೊಂದು ಮಾದರಿಯ ಹೊಸತನವನ್ನು ಪಡೆಯಿತು. ಅಲ್ಲಿಗೆ ಬರುವ ಅದೆಷ್ಟೋ ಸಾಧಕರ ಉಸ್ತುವಾರಿಯನ್ನು ಸರಿಯಾಗಿ ನೋಡಿಕೊಳ್ಳುವದು. ಅವರಿಗೆ ಗುರುಗಳ ದರ್ಶನ ಮಾಡಿಸುವದು ಮಾತೆಯವರ ಕರ್ತವ್ಯವಾಗಿತ್ತು. ಅರವಿಂದರನ್ನು ತಾಯಿಯಂತೆ ನೋಡಿಕೊಳ್ಳುತ್ತಿದ್ದರು. ಆಶ್ರಮದಿಂದ ಪ್ರಕಟಿತವಾಗುವ "ಆರ್ಯ" ಪತ್ರಿಕೆಯ ಯಶಸ್ಸಿಗೆ ಸಹಕರಿಸಿದರು. ಆಶ್ರಮದ ರಕ್ಷಣೆ ಹಾಗೂ ಅಭಿವೃದ್ಧಿಗೆ ತಮ್ಮ ಜೀವನವನ್ನೇ ಮುಡುಪಾಗಿಟ್ಟರು.

2. ಭಗವಾನ್‌ಚಂದ್ರರ ಮಾತೃ ಭಾಷಾ ಪ್ರೇಮವನ್ನು ತಿಳಿಸಿರಿ.

ಉತ್ತರ : "ಮಾತೃ ಭಾಷೆಯ ಮೂಲಕ ವಿದ್ಯೆ ಮನಸ್ಸನ್ನು ನೇರವಾಗಿ ಮುಟ್ಟುತ್ತದೆ. ಆಲೋಚನೆ ಹಾಗೂ ವಿಷಯ ಸಂಗ್ರಹಕ್ಕೆ ಸಹಾಯ ಮಾಡುತ್ತದೆ. ಕ್ಲಿಷ್ಟವೆನಿಸುವದಿಲ್ಲ; ಮಾತೃ ಭಾಷೆಯ ಮೂಲಕ ಕಲಿಯುವದು ಹಿತವೆನಿಸುತ್ತದೆ, ಉತ್ಸಾಹವನ್ನು ಹೆಚ್ಚಿಸುತ್ತದೆ. ಕಾರಣ ದೇಶೀಯ ಭಾಷೆಯ ಮೂಲಕ ವಿದ್ಯೆಯನ್ನು ಕಲಿಸುವದೆ ಸೂಕ್ತವೆಂದು ಭಾವಿಸಿ ಇಂಗ್ಲೀಷ ಭಾಷೆಯ ವ್ಯಾಮೋಹಕ್ಕೆ ಬಲಿಯಾಗದೆ ತಮ್ಮ ಮಗನನ್ನು ಬಂಗಾಳಿ ಶಾಲೆಗೆ ಕಳಿಸಿದರು. ಇದು ಭಗವಾನ್ ಚಂದ್ರರ ಮಾತೃ ಭಾಷಾ ಪ್ರೇಮವನ್ನು ತೋರಿಸುತ್ತದೆ.

3. ಕಾಂಗ್ ಶಿಖರಾರೋಹಣ ಸಂದರ್ಭದಲ್ಲಿ ನಡೆದ ದುರಂತವನ್ನು ತಿಳಿಸಿರಿ.

ಉತ್ತರ : ಸುಮಾರು 19,000 ಅಡಿ ಎತ್ತರದ ಕಾಂಗ್ ಶಿಖರವನ್ನೇರಲು ಫ್ರೇ ಎಂಬ ಸ್ವಿಸ್ ಆರೋಹಿಯ ತಂಡದಲ್ಲಿ ತೇನಸಿಂಗ ಹಾಗೂ ಅಂಗದವಾ ಸೇರಿದ್ದರು. ತೇನಸಿಂಗ ಮೊಳೆಯ ಕ್ಲಾಂಪುಗಳನ್ನು ಧರಿಸಿದ್ದ ಆದರೆ ಫ್ರೇ ಅವನ್ನು ಇಚ್ಛಿಸಿರಲಿಲ್ಲ. 17,000 ಅಡಿಗಳೆತ್ತರಕ್ಕೆ ಏರಿದಾಗ ಮುಂದೆ ಇದ್ದ ಫ್ರೇ ಇದ್ದಕ್ಕಿದ್ದಂತೆ ಕೆಳಗೆ ಜಾರಿದ, ತೇನಸಿಂಗನ ಹತ್ತಿರ ಬರುತ್ತಿದ್ದಂತೆ ಆತ ಕೈ ಚಾಚಿ ಅವನನ್ನು ಹಿಡಿಯಲು ಯತ್ನಿಸಿದ ಆದರೆ ಅದು ಸಾಧ್ಯವಾಗದೆ ಫ್ರೇ ಅವನ ಬೆರಳಿಗೆ ತೀಕ್ಷ್ಣ ಗಾಯ ಮಾಡಿ ಕೆಳಗೆ ನೂರಾರು ಸಾವಿರ ಅಡಿಗಳ ಕೆಳಗೆ ಬಿದ್ದು ಸತ್ತು ಹೋದ.

4. ಅರವಿಂದರು ಬರೆದ "ಸಾವಿತ್ರಿ"ಯ ಪರಿಚಯ ಮಾಡಿಕೊಡಿ.

ಉತ್ತರ : ಇದೊಂದು ಮಹಾ ಕಾವ್ಯ, ಸುಮಾರು 24 ಸಾವಿರ ಸಾಲುಗಳಷ್ಟು ದೀರ್ಘವಾಗಿದೆ. ಇಲ್ಲಿ ನೆಪಮಾತ್ರಕ್ಕೆ ಇಡಿ ಕಥೆಯನ್ನು ಸಾಂಕೇತಿಕವಾಗಿ ಪರಿವರ್ತಿಸಿದ್ದಾರೆ. ಸಾವಿತ್ರಿ-ಸತ್ಯವಾನರು ಇಲ್ಲಿ ಕೇವಲ ವ್ಯಕ್ತಿಗಳಾಗಿರದೆ ಸತ್ಯದ ಪ್ರತಿನಿಧಿಗಳಾಗಿದ್ದಾರೆ. ತತ್ವದರ್ಶನವನ್ನಿಲ್ಲಿ ಕಾಣಬಹುದು. ಹಲವಾರು ಸನ್ನಿವೇಶಗಳು ಕಥೆಯಾಗಿ ಬೆಳೆಯುವದರ ಜೊತೆಗೆ, ಜೀವನದ ವಿಕಾಸ ಹಾಗೂ ಪರಿಪೂರ್ಣತೆಯನ್ನು ಅರ್ಥವತ್ತಾಗಿ ನಿರೂಪಿತವಾಗಿವೆ.

5. ತಾರ್ಗ್ನ ಗ್ರಾಮದಲ್ಲಿ ಯೇತಿಗಳ ಹಾವಳಿಯನ್ನು ಷರ್ಪಾ ಜನರು ಹೇಗೆ ನಾಶಗೊಳಿಸಿದರು ?

ಉತ್ತರ : ಯೇತಿಗಳನ್ನು ಹುಡುಕಲು ಹೊರಟರೆ ಅವು ದೃಷ್ಟಿಗೆ ಬೀಳುತ್ತಿರಲಿಲ್ಲ. ಕಪಟದಿಂದ ಅವುಗಳನ್ನು ನಾಶ

ಮಾಡುವ ಮಾರ್ಗವನ್ನು ಅನುಸರಿಸಬೇಕಾಯಿತು. ಹೆಚ್ಚಾಗಿ ತೊಪ್ಪೆ ಬಿದ್ದಿದ್ದ ಸ್ಥಳವನ್ನು ನೋಡಿ ಅಲ್ಲಿಯೇಯೇತಿಗಳು ಒಂದೆಡೆ ಸೇರುತ್ತವೆಂದು ಗ್ರಾಮಸ್ಥರ ಅಭಿಪ್ರಾಯ. ಆ ಪ್ರಕಾರ ಆ ಸ್ಥಳದಲ್ಲಿ ಅನೇಕ ಗಡಿಗೆಗಳ ತುಂಬ ಚಾಂಗನ್ನು ಮತ್ತು ಅನೇಕ ಕುಕ್ರಿಗಳನ್ನು ಇಟ್ಟು ಬಂದರು. ರಾತ್ರಿಯಾಗುತ್ತಲೇ ಯೇತಿಗಳು ಆ ಸ್ಥಳಕ್ಕೆ ಬಂದು 'ಚಾಂಗ'ನ್ನು ಕುಡಿದವು ಕುಡಿದು ಅಮಲೇರಿದಾಗ ಕುಕ್ರಿಗಳನ್ನು ಎತ್ತಿಕೊಂಡು ಒಂದ ನ್ನೊಂದು ಕಾದಾಡಿದವು. ಕಾದಾಡಿ ಸತ್ತು ಬಿದ್ದವು. ಈ ರೀತಿ ಯಾಗಿ ಪರ್ವಾಜನರು ಯೇತಿಗಳನ್ನು ನಾಶಗೊಳಿಸಿದರು.

**ಪ್ರಶ್ನೆ III ಕೆಳಗಿನ ವಿಷಯಗಳಲ್ಲಿ ಒಂದರ ಕುರಿತು ಎರಡು ಪುಟಗಳಷ್ಟು ಇರುವಂತೆ ಪ್ರಬಂಧ ಬರೆಯಿರಿ.**

**1) ಶಾಲೆಗಳಲ್ಲಿ ವ್ಯಾಯಾಮ ಶಿಕ್ಷಣದ ಮಹತ್ವ**

ಮುಖ್ಯಾಂಶಗಳು:– ಮನುಷ್ಯನಿಗೆ ಆರೋಗ್ಯವೇ ಭಾಗ್ಯ– ಆರೋಗ್ಯ ರಕ್ಷಣೆ ಅತ್ಯವಶ್ಯಕ–ವ್ಯಾಯಾಮದಿಂದ ಆರೋಗ್ಯ ಕಾಪಾಡಿಕೊಳ್ಳುವದು:– ವ್ಯಾಯಾಮ ನಿತ್ಯದ ಕಾರ್ಯಗಳಲ್ಲಿ ಅಳವಡಿಸಿರಬೇಕು–ವ್ಯಾಯಾಮದ ವಿಧಿ–ವಿಧಾನ ಗಳು–ಶಾಲೆಗಳಲ್ಲಿ ವ್ಯಾಯಾಮ ಶಿಕ್ಷಣ-ವ್ಯಾಯಾಮದಿಂದ ಆಗುವ ಪ್ರಯೋಜನಗಳು-ದೈಹಿಕ ಹಾಗೂ ಮಾನಸಿಕ ಬೆಳವ ಣಿಗೆ–ಪೋಷಣೆ ಹಾಗೂ ರಕ್ಷಣೆ–ವ್ಯಾಯಾಮಕ್ಕಾಗಿ ನಿತ್ಯದ ಚಟುವಟಿಕೆಗಳು– ಒದಗಿಸಬಹುದಾದ ಸೌಕರ್ಯ ಹಾಗೂ ಅನುಕೂಲತೆಗಳು.

**2) ನೀವು ಕೈಕೊಂಡ ಶೈಕ್ಷಣಿಕ ಪ್ರವಾಸದ ಅನುಭವಗಳು.**

**ಉತ್ತರ: 1984 ನೇ ಎಪ್ರೀಲ್ ದ್ವಿತಿಯ ಪತ್ರಿಕೆ 3ನೇ ಪ್ರಶ್ನೆ 3 ರ ಉತ್ತರ ನೋಡಿ.**

**3) ನಿಮ್ಮ ಮೆಚ್ಚಿನ ರಾಷ್ಟ್ರನಾಯಕ.**

**ಉತ್ತರ: ನಾನು ಮೆಚ್ಚಿದ ರಾಷ್ಟ್ರನಾಯಕ— "ಗಾಂಧೀಜಿ"**

ನಮ್ಮ ದೇಶ 1947 ರ ಪೂರ್ವದಲ್ಲಿ ಪರಕೀಯರ ಆಳಿಕೆ ಹಾಗೂ ದಬ್ಬಾಳಿಕೆಯಿಂದ ತತ್ತರಿಸಿ ತಲ್ಲಣಿಸುತ್ತಿರುವಾಗ, ಅವರ ಈ ದೌರ್ಜನ್ಯವನ್ನು ಹೋಗಲಾಡಿಸಿ ಗುಲಾಮಗಿರಿ ಯಿಂದ ಭಾರತೀಯರಾದ ನಮ್ಮನ್ನು ಮುಕ್ತಗೊಳಿಸಲು ಅನೇಕ ನಮ್ಮ ನಾಯಕರು ಪರಿಶ್ರಮ ಪಟ್ಟರು. ಅವರಲ್ಲಿ ಮಹಾತ್ಮಾ ಗಾಂಧಿ, ಸುಭಾಸಚ್ಚಂದ್ರಭೋಸ, ಸರದಾರ ವಲ್ಲಭಭಾಯಿ-ಪಟೇಲ, ಬಾಲಗಂಗಾಧರ ತಿಲಕ, ಲಾಲಾಜಪತರಾಯ ಮುಂತಾದವರು ಪ್ರಮುಖರು. ಅವರೆಲ್ಲರಲ್ಲಿ ನನ್ನ ಮೆಚ್ಚಿನ ರಾಷ್ಟ್ರನಾಯಕನೆಂದರೆ ರಾಷ್ಟ್ರಪಿತವೆನಿಸಿದ "ದಿ. ಮಹಾತ್ಮಾ ಗಾಂಧಿ."

1869 ಅಕ್ಟೋಬರ 2 ರಂದು ಪೋರಬಂದರದಲ್ಲಿ ಇವರು ಜನಿಸಿದರು. ತಂದೆ ಕರಮಚಂದ ಹಾಗೂ ತಾಯಿ ಪುತಲಾಬಾಯಿ. ಬಾಲ್ಯದಲ್ಲಿಯೇ ಅವರು ಮಾತಾಪಿತರಿಂದ ಪ್ರಭಾವಿತರಾಗಿದ್ದರು. ತಾವು ನೋಡಿದ ಸತ್ಯ ಹರಿಶ್ಚಂದ್ರ ನಾಟಕದಿಂದಲೂ ಪ್ರೇರಣೆ ಪಡೆದು ಸತ್ಯವನ್ನು ದೃಢವಾಗಿ ಜೀವನದುದ್ದಕ್ಕೂ ಕಾಪಾಡಿಕೊಂಡು ಬಂದರು. ಸ್ವಾಭಿಮಾನಿಗ ಳಾದ ಇವರು ತಮ್ಮ ಹೆಚ್ಚಿನ ವಿದ್ಯಾಭ್ಯಾಸದ ಕಾಲದಲ್ಲಿದ್ದರೂ ವರ್ಗೀಯ ಭೇದಭಾವವನ್ನು ಹೋಗಲಾಡಿಸಲು ಶ್ರಮಿಸಿದರು. ಅದರಲ್ಲಿ ತೃಪ್ತಿ ಕಂಡರು. ಬಡವರ ಹಾಗೂ ಹಿಂದುಳಿದವರ ಏಳ್ಗೆಯನ್ನು ಬಯಸಿದರು, ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಸತತ ಹೆಣಗಾಡಿದರು. ಹರಿಜನೋದ್ಧಾರ ಪತ್ರಿಕೆ ಮುಖಾಂತರ ವೈಚಾರಿಕಕ್ರಾಂತಿಯನ್ನುಂಟು ಮಾಡಿದರು.

ಸ್ವಾತಂತ್ರ್ಯವನ್ನು ಗಳಿಸಲು ಅಹಿಂಸಾಮಾರ್ಗವನ್ನು ಅನು ಸರಿಸಿಕೊಂಡು ಬಂದರು. ಅದರಲ್ಲಿ ಸಫಲತೆಯನ್ನೂ ಪಡೆದರು. ಪರದಾಸ್ಯ ಸಂಕೋಲೆಯನ್ನು ಕಿತ್ತೊಗೆದು ದೇಶವನ್ನು ಸ್ವತಂತ್ರ ಗೊಳಿಸಲು ರಾಜಕೀಯಕ್ಕೆ ಧುಮುಕಿ–ತಾವೇ ನಾಯಕತ್ವವನ್ನು ವಹಿಸಿಕೊಂಡರು. ಜನರಲ್ಲಿ ರಾಷ್ಟ್ರೀಯ ಪ್ರಜ್ಞೆ ಮತ್ತು ಆತ್ಮಾಭಿ ಮಾನಗಳನ್ನು ಜಾಗ್ರತಗೊಳಿಸಿದರು. ಸತ್ಯ ಅಹಿಂಸೆ ಮತ್ತು ಸತ್ಯಾಗ್ರಹಗಳೆಂಬ ತ್ರಿವಿಧ ಅಸ್ತ್ರಗಳ ಮೂಲಕ ಅವಿಶ್ರಾಂತವಾಗಿ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದರು. ಅನೇಕ ಸಲ ಜೇಲು ವಾಸವನ್ನೂ ಅನುಭವಿಸಿದರು. ಕೊನೆಗೆ ಜಯಪಡೆದು 1947ನೇ ಆಗಸ್ಟ್ 15 ರಂದು ನಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರಕಿಸಿ ಕೊಟ್ಟು ಜಗತ್ತನ್ನೇ ಬೆರಗುಗೊಳಿಸಿದರು.

"ಆಡು ಮುಟ್ಟದ ಗಿಡವಿಲ್ಲ" ಎಂಬಂತೆ ಗಾಂಧೀಜಿಯವರ ಸಾಮಾನ್ಯ ದೃಷ್ಟಿಗೆ ಬೀಳದ ಕ್ಷೇತ್ರವಿಲ್ಲ. ನಿರರ್ಥಕವಾಗಿ ಕಳೆದ ಕಾಲವು ಪುನಃ ಬರಲಾರದು ಎಂಬ ಮಾತು ಅವರ ಜೀವನದಲ್ಲಿ ರಕ್ತಗತವಾಗಿದ್ದಿತು. ತಾನು, ತನ್ನದು ಎಂಬ ಮಮಕಾರವಿಲ್ಲದೆ ತಮ್ಮ ಜೀವನವಿಡೀ ಜನಸೇವೆಗಾಗಿಯೇ ವಿನಿಯೋಗಿಸಿದರು. ಅಸ್ಪೃಶ್ಯತಾ ನಿವಾರಣೆ, ಹರಿಜನೋದ್ಧಾರ ಅನಿಷ್ಟ ಪದ್ಧತಿಗಳ ನಿವಾರಣೆಗಾಗಿ ಅವಿಶ್ರಾಂತ ಹೋರಾಟ ಮಾಡಿದರು. ಅಲ್ಲದೆ ಬಾಲವಿವಾಹ, ಶಿಶುಹತ್ಯೆ ಇವುಗಳ ನಿರ್ಮೂಲನೆಗಾಗಿಯೂ ಪ್ರಯತ್ನಿಸಿದರು.

ಗಾಂಧೀಜಿಯವರ ದೃಷ್ಟಿಯಲ್ಲಿ ಇಂದಿನ ಶಿಕ್ಷಣ ಪದ್ಧ ತಿಯು ತುಂಬಾ ದೋಷಪೂರಿತವಾಗಿದ್ದಿತು. ವಿದ್ಯಾರ್ಥಿಗಳಲ್ಲಿ ಸರಿಯಾದ ಸಂಸ್ಕಾರ, ನೈತಿಕ ಮೌಲ್ಯಗಳು ಹಾಗೂ ಚಾರಿತ್ರಿಕ

ಅಂಶಗಳು ಬೆಳವಣಿಗೆಯಾಗಿ; ಸರ್ವಾಂಗೀಣ ಪ್ರಗತಿಯಾಗಬೇಕು ಎಂಬುದೇ ಅವರ ತತ್ವ ಸಮಾಜ ಮತ್ತು ದೇಶಕ್ಕೆ ಉಪಯುಕ್ತ ಪ್ರಜೆಯಾಗಬೇಕು. ಸ್ವಾವಲಂಬನ ಬೆಳೆದು ಬರಬೇಕು. ನಿರುದ್ಯೋಗ ಸಮಸ್ಯೆ ಉಂಟಾಗಬಾರದು, ಅದಕ್ಕಾಗಿ ವೃತ್ತಿ ಮೂಲ ಶಿಕ್ಷಣ ಇರಬೇಕು ಇವೇ ಮುಂತಾಗಿ ಸ್ವಾವಲಂಬಿ ಶಿಕ್ಷಣದ ಮಾರ್ಗತೋರಿದರು.

ಜನರಲ್ಲಿಯ ನಿರುದ್ಯೋಗ ಹಾಗೂ ಬಡತನ ನಿವಾರಣೆಯಾಗಲು ಹಳ್ಳಿಗಳ ಅಭಿವೃದ್ಧಿ ಯಾಗಬೇಕು. ಗೃಹ ಕೈಗಾರಿಕೆಗಳು ಹೆಚ್ಚಬೇಕು. ದೇಶೀಯತೆಗೆ ಪ್ರಾಮುಖ್ಯತೆ ಇರಬೇಕು ಎಂದು ಪ್ರಯತ್ನಿಸಿದರು. ದೊಡ್ಡ ದೊಡ್ಡ ಕಾರಖಾನೆಗಳ ಸ್ಥಾಪನೆಗೆ ಇವರ ವಿರೋಧವಿತ್ತು. ಕುಟುಂಬ ಯೋಜನೆಯ ವಿಷಯದಲ್ಲಿಯೂ ತಮ್ಮದೇ ಆದ ವಿಚಾರಧಾರೆಯನ್ನು ಹೊಂದಿದ್ದರು. ಜನಸಂಖ್ಯಾ ನಿಯಂತ್ರಣ ಬಯಸುತ್ತಿದ್ದರು.

ಹೀಗೆ ಗಾಂಧೀಜಿಯವರ ಕಾರ್ಯಕ್ಷೇತ್ರ ಸಾಗರದಷ್ಟು ವಿಶಾಲ. ಅವರು ಮಹತ್ ಸಾಧನೆಗಳನ್ನು ಸಾಧಿಸಿದ್ದಾರೆ. ದೇಶವನ್ನು ರಾಮರಾಜ್ಯವನ್ನಾಗಿ ಮಾಡುವ ಕನಸನ್ನು ಹೊಂದಿದ್ದರು. ಆದರೆ ದುರ್ದೈವದಿಂದ ಹಂತಕನ ಗುಂಡಿಗೆ ಬಲಿಯಾದರು. ರಾಷ್ಟ್ರಪಿತ-ನೆನಿಸಿದ ಗಾಂಧೀಜಿಯವರು ನಮಗೆಲ್ಲ ಪೂಜ್ಯರು. ಅವರ ಮಾರ್ಗದರ್ಶನದಲ್ಲಿಯೇ ನಾವೆಲ್ಲ ಮುಂದುವರಿಯೋಣ.

4) ನಮ್ಮ ದೈನಂದಿನ ಜೀವನ ವಿಜ್ಞಾನವನ್ನೇ ಹೊಂದಿಕೊಂಡಿದೆ.

ಉತ್ತರ :ಮುಖ್ಯಾಂಶಗಳು:— ನಿಸರ್ಗವು ಅನೇಕ ರಹಸ್ಯಗಳನ್ನು ಒಳಗೊಂಡಿದೆ– ಸೃಷ್ಟಿ ಸಂಬಂಧದ ವಿಶೇಷಜ್ಞಾನವೇ ವಿಜ್ಞಾನ–ಮಾನವನ ಪ್ರಗತಿಗೆ ವಿಜ್ಞಾನವು ಸಹಾಯಕ—ವಿಜ್ಞಾನವೇ ಜೀವನದ ಉಸಿರು—ಎಲ್ಲವೂ ವಿಜ್ಞಾನಮಯ-ಮಾನವನಿಗೆ ವಿಜ್ಞಾನವು ನೀಡಿದ ಅದೆಷ್ಟೋ ಕಾಣಿಕೆಗಳು–ವಿಜ್ಞಾನದ ಸದುಪಯೋಗ ಮಾನವನ ಕೈಯಲ್ಲಿದೆ.— ಜಗತ್ತಿನ ಸುಖ-ಶಾಂತಿ ಇಲ್ಲವೆ ವಿನಾಶ ವಿಜ್ಞಾನದ ಉಪಯೋಗದ ಮೇಲಿದೆ.

ಪ್ರಶ್ನೆ IV ಮನೆಯಲ್ಲಿ ಕಳ್ಳತನವಾದ ಬಗ್ಗೆ ಹತ್ತಿರದ ಆರಕ್ಷಕಠಾಣೆಯ ಅಧಿಕಾರಿಗೆ ಒಂದು ದೂರನ್ನು ಸಿದ್ಧಪಡಿಸಿ.

ಅಥವಾ

ನಿಮ್ಮೂರಿಗೆ ಕುಡಿಯುವ ನೀರಿನ ವ್ಯವಸ್ಥೆಯಾಗಬೇಕೆಂದು ಗ್ರಾಮ ಪಂಚಾಯತಿಯ ಅಧ್ಯಕ್ಷರಿಗೆ/ನಗರಸಭೆಯ ಅಧ್ಯಕ್ಷರಿಗೆ ಒಂದು ಮನವಿಯನ್ನು ಸಿದ್ಧಪಡಿಸಿ

ಆರಕ್ಷಕ ಅಧಿಕಾರಿಗಳಿಗೆ ವಿನಂತಿ ಪತ್ರ

ಉತ್ತರ :

ಹೆಸರು.........

ವಿಳಾಸ.........

ದಿನಾಂಕ.........

ಮಾನ್ಯ ಆರಕ್ಷಕ ಅಧಿಕಾರಿಗಳು
.........ಆರಕ್ಷಕ ಠಾಣೆ.

ಮಾನ್ಯರೇ,

ಇಂದು ಬೆಳಗಿನ ಜಾವ ನಮ್ಮ ಮನೆಯಲ್ಲಿ ಕಳ್ಳತನವಾಗಿರುವ ವಿಷಯ ತಮ್ಮ ಗಮನಕ್ಕೆ ತರಲು ಬಯಸುತ್ತೇನೆ. ಬೆಳಗಿನ ಸುಮಾರು ನಾಲ್ಕು ಗಂಟೆಯ ಸಮಯಕ್ಕೆ ನಮ್ಮ ಮನೆಯ ಹಿಂಭಾಗದಲ್ಲಿ ಏನೋ ಸದ್ದಾಗುತ್ತಿರುವದು ನಮಗೆ ಎಚ್ಚರಿಸಿತು. ಕೂಡಲೇ ಎದ್ದು ನೋಡಿದಾಗ ನಮ್ಮ ಹಿತ್ತಲ ಮನೆಯ ಬಾಗಿಲು ತೆರೆದಿದ್ದು ನಡುಮನೆಯಲ್ಲಿದ್ದ ಬೀರುವಿನ ಬಾಗಿಲು ಸಹ ತೆರೆಯಲ್ಪಟ್ಟಿರುವದು ಕಂಡಿತು. ಹಾಗೆಯೇ ಅದರಲ್ಲಿ ಇರಿಸಿದ ಬೆಳ್ಳಿ-ಬಂಗಾರದ ಒಡವೆಗಳು ಅಂದಾಜು ಹದಿನೈದು ಸಾವಿರ ರೂಪಾಯಿಗಳು, ಕೆಲವೊಂದು ಬೆಲೆಯುಳ್ಳ ಬಟ್ಟೆಗಳು ಅಂದಾಜು ಎಂಟು ಸಾವಿರ ರೂಪಾಯಿಗಳು ಹಾಗೂ ರೋಖು ಹಣ ನಾಲ್ಕುಸಾವಿರ ರೂ.ಗಳು ಕಳುವಾಗಿರುವದು ತಿಳಿಯಿತು. ಅಲ್ಲದೆ ಮನೆಯಲ್ಲಿಯ ಹಲವಾರು ಪಾತ್ರೆಗಳೂ ದೋಚಲ್ಪಟ್ಟಿವೆ, ಕಳ್ಳರು ಸಮಯಕ್ಕೆ ಸರಿಯಾಗಿ ಫರಾರಿಯಾಗಿದ್ದರಿಂದ ಯಾರು ಎಂಬುದು ತಿಳಿಯಲಿಲ್ಲ.

ಈ ಕಳುವಿನಿಂದ ನಮಗೆ ದಿಗ್ಭ್ರಮೆಯಾಗಿದೆ. ಮನೆಯವರೆಲ್ಲ ಭಯಭೀತರಾಗಿ ಅತ್ಯಂತ ದುಃಖಿತರಾಗಿದ್ದೇವೆ. ನಮಗೆ ಉಂಟಾದ ಈ ಅಪಾರ ನಷ್ಟದ ಬಗೆಗೆ ಮಾನ್ಯರವರು ಕೂಡಲೇ ಸೂಕ್ತ ಕ್ರಮಕೈಕೊಂಡು ಸಹಾಯ ಮಾಡಬೇಕೆಂದು ವಿನಂತಿಸುತ್ತೇನೆ,

ಇತಿ ಧನ್ಯವಾದಗಳೊಂದಿಗೆ—

ತಮ್ಮ ವಿಶ್ವಾಸಿ.

...........

ಅಥವಾ : ಕುಡಿಯುವ ನೀರಿನ ವ್ಯವಸ್ಥೆಯ ಬಗೆಗೆ ಪತ್ರ

ಉತ್ತರ : [1986 ನೇ ಮಾರ್ಚ ದ್ವಿತೀಯ ಪತ್ರಿಕೆ 4 ನೇ ಪ್ರಶ್ನೆ ಉತ್ತರ ನೋಡಿರಿ]

ಪ್ರಶ್ನೆ V ಬಿಟ್ಟ ಸ್ಥಳಗಳನ್ನು ಸರಿಯಾದ ಪದಗಳಿಂದ ತುಂಬಿರಿ.

ಉತ್ತರ : 1. ತೇನಸಿಂಗನು..........ಗ್ರಾಮದಲ್ಲಿ ಹುಟ್ಟಿದನು. (ತ್ಸ–ಚು)

2. 'ಘಾಂಗಲಾ' ಎಂಬ ಷರ್ಪಾ ಭಾಷೆಯ ಪದದ ಅರ್ಥ (ಹಿಮದ ಕಣಿವೆ)

3. ಜಗದೀಶ ಚಂದ್ರ ಬೋಸರನ್ನು 'ಭಾರತದ ಭವ್ಯ ಸಂಸ್ಕೃತಿಯ ಪ್ರತಿನಿಧಿ' ಎಂದು ಕರೆದವರು......(ಸೋದರೀ ನಿವೇದಿತಾ)

4. 'ಬಾಲ್ಯದಲ್ಲಿಯೇ ಎಂತಹ ಸಾಹಸ'–ಇಲ್ಲಿರಬೇಕಾದ ಲೇಖನ ಚಿನ್ಹೆ (!)

5. ತೇನಸಿಂಗನು...ರಂದು ನಿಧನ ಹೊಂದಿದನು.(1987)

ಪ್ರಶ್ನೆ VI ಕೆಳಗಿನ ಪದ್ಯವನ್ನು ಓದಿ ಸಾರಾಂಶವನ್ನು ಬರೆಯಿರಿ.

ನನ್ನ ಹಿತ್ತಲದಲ್ಲಿ ಹಬ್ಬಿರುವ ಹೂ ಬಳ್ಳಿ
ಹಸಿರು ಮುಂದಿದೆ ಬಂದು ಹೋದ ಮಳೆಗೆ
ಮುಗ್ಧ ಮಗುವಿನ ಸುರುಳಿ ಗೂದಲೊಲು ಬಳು ಬಳುಕಿ
ಕುಡಿಗಳೋಲಾಡುತಿವೆ ಮೇಲೆ ಕೆಳಗೆ ॥೧॥
ಸಾಲದೊಂದೇ ಕಂಬ ಬಳ್ಳಿ ಹಬ್ಬಿದೆ ತುಂಬಿ
ಮಂಟಪವ ಬೇಡ-ವೊಲು ತುಂಟತನವು!
ಹಾರ ಸೇತುವೆಯಾಗ ಕಿಟಕಿಯೆಡೆ ಕಣ್ಣಿಟ್ಟು
ಮನೆಯ ಮುತ್ತುವುದಲ್ತೆ ಬಂಟತನವು! ॥2॥
ನಸುಕಿನೊಳು ಸುಳಿಗಾಳಿ ಸೂಸಿ ಬರುತಿದ ಬಳ್ಳಿ
ನೃತ್ಯಗೈಯ್ಯುವ ಮಾಟವೇನು?
ಮನೆಯೊಳಾರಿಹರೆಂದು ಹೊರಗಿನಿಂದೊಳಗಿಣಿಕಿ
ಕದ್ದುನೋಡುವುದನ್ನೆ ನೋಡಬೇಕು!

ಉತ್ತರ : ನನ್ನ ಮನೆಯ ಹಿತ್ತಲದಲ್ಲಿ ಹೂಬಳ್ಳಿಯೊಂದು ಹಬ್ಬಿದೆ. ಹೋದ ಮಳೆಯಿಂದಾಗಿ ಒಳ್ಳೇ ಹಸಿರಾಗಿದ್ದಲ್ಲದೆ ಅದು ಕಡಿಯೊಡೆದು ನಿಂತಿದೆ ಆ ಕುಡಿಗಳು ಮುಗ್ಧ ಹಸುಳೆಯ ಸುರುಳಿಗೂದಲದಂತೆ ಮೇಲೆ ಕೆಳಗೆ ಬಳುಬಳುಕಿ ತೇಲಾಡುತ್ತಿವೆ.

ಬಳ್ಳಿ ಚೆನ್ನಾಗಿ ಹಬ್ಬಿದ್ದರಿಂದ ಅದಕ್ಕೆ ಒಂದೇ ಕಂಬ ಸಾಲದಂತಾಗಿ ಮಂಟಪವು ತನಗೆ ಬೇಕೆಂದು ಬಳ್ಳಿ ತುಂಟತನ ಮಾಡುತ್ತಿದೆ, ಹಾಗೆಯೇ ಮುಂದೆ ಬೆಳೆಯುತ್ತ ಕಿಟಕಿಯ ಹತ್ತಿರ ಬಂದು ಇಣಕಿ ನೋಡುತ್ತಿರುವಂತೆಯೂ ಮನೆಯನ್ನೇ ಮುತ್ತಿಕೊಳ್ಳುವಂತೆಯೂ, ಅದರ ದಿಟ್ಟತನವಿದೆ.

ಮುಂಜಾವಿನಲ್ಲಿಯ ಸುಳಿಗಾಳಿಯಿಂದ ಅದು ನೃತ್ಯಗೈಯುತ್ತಿರುವದೇನೋ, ಆ ಮಾಟವನ್ನು ನೋಡಬೇಕು. ಹೊರಗಿನಿಂದಲೇ ಮನೆಯಲ್ಲಿ ಯಾರಿದ್ದಾರೆಂದು ಬಳ್ಳಿ ಕದ್ದು ನೋಡುತ್ತಿರುವದನ್ನು ನೋಡಬೇಕು ಎಂದಿದ್ದಾನೆ ಕವಿ.

ಪ್ರಶ್ನೆ VII ಕೆಳಗಿನ ವಿಷಯಗಳಲ್ಲಿ ಒಂದನ್ನು ಹತ್ತು ವಾಕ್ಯಗಳಲ್ಲಿ ವಿಸ್ತರಿಸಿ ಬರೆಯಿರಿ.

1. ಕಾಯಕವೇ ಕೈಲಾಸ

ಉತ್ತರ : 1. ಬಸವಣ್ಣನವರು ತಮ್ಮ ವಚನಗಳಲ್ಲಿ ಕಾಯಕದ ಬಗ್ಗೆ ಅತ್ಯಂತ ಸ್ಪಷ್ಟವಾಗಿ ಹೇಳಿದ್ದಾರೆ. "ಕಾಯಕ" ಕೈಲಾಸವೆಂದು ಅವರು ಅಭಿಪ್ರಾಯಪಟ್ಟರು. ಕಾಯಕದಲ್ಲಿ ದೇವರನ್ನು ಕಾಣಬೇಕು. ನಮ್ಮ ಕಾಯಕ ಯಾವುದೇ ಇರಲಿ ನಿಷ್ಠೆಯಿಂದ, ಭಕ್ತಿಯಿಂದ, ಪ್ರೀತಿಯಿಂದ ಮಾಡಬೇಕು. ಅಂದಾಗ ಮಾತ್ರ ಅದರ ಫಲವನ್ನು ಪಡೆಯಲು ಸಾಧ್ಯವಾಗುತ್ತದೆ. ದುಡಿಯದೇ ಫಲ ನಮಗೆ ದೊರೆಯಲಾರದು, ಆದರೆ ಇಂದು ದುಡಿಯುವ ಪ್ರವೃತ್ತಿ ಕಡಿಮೆಯಾಗಿ ಜನ ಅಡ್ಡ ಮಾರ್ಗದಿಂದ ಫಲಾಪೇಕ್ಷೆ ಬಯಸುತ್ತಿದ್ದಾರೆ, ಅದನ್ನು ತೊರೆಯಬೇಕು. ನಮ್ಮ ವೇದಗಳು, ಪುರಾಣಗಳು, ಪವಿತ್ರ ಗ್ರಂಥಗಳು ಮತ್ತು ಧರ್ಮ, ಮಹಾತ್ಮರು ಹೇಳಿದಂತೆ 'ಕರ್ಮಮಾಡಿ' ಫಲವನ್ನು ಅನುಭವಿಸಬೇಕು. ಕಷ್ಟಪಟ್ಟು ದುಡಿಯಬೇಕು, ಸುಖಪಡಬೇಕು. ಆಗ ಮಾತ್ರ ಕೈಲಾಸ ಸಮಾನ ಸುಖ ಪ್ರಾಪ್ತಿ ಸಾಧ್ಯ.

2. ತಾನು ಶುಚಿಯಾದರೆ ಪಟ್ಟಣ ಶುಚಿ.

ಉತ್ತರ : ಶುಚಿತ್ವ ಹಾಗೂ ಆರೋಗ್ಯ ಪರಸ್ಪರ ಹೊಂದಿಕೊಂಡಿವೆ. ಇವುಗಳ ಮಹತ್ವವನ್ನು ಪ್ರತಿಯೊಬ್ಬನೂ ಅರಿತಿರಬೇಕು. ತಾನು ಹಾಗೂ ತನ್ನ ಪರಿಸರ ಯಾವಾಗಲೂ ಶುಚಿಯಾಗಿರುವಂತೆ ನೋಡಿಕೊಳ್ಳುವದು ಪ್ರತಿಯೋರ್ವನ ಕರ್ತವ್ಯ. ಒಂದು ಹಳ್ಳಿಯಾಗಲಿ, ಊರು ನಗರವೇ ಆಗಿರಲಿ ಅದು ಶುಚಿಯಾಗಿರಬೇಕು. ಹಾಗಿರಲು ಅಲ್ಲಿ ವಾಸಿಸುವ ಜನರೂ ಶುಚಿಯಾಗಿರಬೇಕು. ಅಶುಚಿ ಕೊಳಕು ಉಂಟಾದರೆ ವಾಯು ಮಾಲಿನ್ಯ, ಜಲಮಾಲಿನ್ಯ ಹಾಗೂ ರೋಗಾಣುಗಳ ಪ್ರಸಾರವಾಗಿ ಸಾಂಕ್ರಾಮಿಕ ರೋಗಗಳಿಗೆ ಕಾರಣವಾಗುವದು. ಆದುದರಿಂದ ಪ್ರತಿಯೊಬ್ಬರೂ ಸ್ವತಃ ಸ್ವಚ್ಛತೆಯ ಕಡೆಗೆ ಗಮನವಿರಿಸಿ ತಮ್ಮ ಮನೆಯನ್ನು ಪರಿಸರವನ್ನು ಶುಚಿಯಾಗಿಟ್ಟುಕೊಂಡರೆ ಇಡೀ ಪಟ್ಟಣವೇ ಶುಚಿಯಾಗಿರುತ್ತದೆ. ಶುಚಿತ್ವ ಆರೋಗ್ಯದ ಮೊದಲ ಹೆಜ್ಜೆ. ಆದ್ದರಿಂದ ಶುಚಿತ್ವ ವ್ಯಕ್ತಿಯಿಂದಲೇ ನಡೆಯಬೇಕು. ಅಂತೆಯೇ ತಾನು ಶುಚಿಯಾದರೆ ಪಟ್ಟಣವೂ ಶುಚಿಯಾಗಿರುತ್ತದೆ.

3. ಮನಸ್ಸಿದ್ದಲ್ಲಿ ಮಾರ್ಗವಿದೆ.

ಉತ್ತರ : ಮನುಷ್ಯನ ಜೀವನದಲ್ಲಿ ಬದುಕುವಿಕೆಯ ಹೋರಾಟ ನಿರಂತರ ನಡೆದಿರುತ್ತದೆ. ಈ ಒಂದು ಹೋರಾಟ ಒಂದಲ್ಲ ಒಂದು ರೀತಿಯಲ್ಲಿ ಸಾಗಿರುತ್ತದೆ. ಇದೆಲ್ಲ ಇಚ್ಛಿತ ಗುರಿ ಸಾಧನೆಗಾಗಿಯೇ ಇರುವದು. ಕೆಲಸ-ಕಾರ್ಯಗಳನ್ನು ಮಾಡದೇ, ಪೂರ್ವಾಪರ ವಿಚಾರವಿಲ್ಲದೆ ಅದು ಹೇಗೋ ವರ್ತಿಸುತ್ತಿದ್ದರೆ ಗುರಿ ತಲುಪುವದು ಅಸಾಧ್ಯ. ಒಂದು ವೇಳೆ ಆಘಾತಕ್ಕೊಳಗಾಗಿ, ಅಸಹಾಯಕನಾಗಿ, ತನ್ನಿಂದ ಏನೂ ಮಾಡಲು ಕೂಡಾ ಸಾಮರ್ಥ್ಯವಿಲ್ಲ ಎಂದು ಭಾವಿಸಿ ನಿಸ್ಸಹಾಯಕನಂತೆ ನಡೆದುಕೊಂಡರೂ ಉಪಯೋಗವಾಗಲಾರದು. ಧೈರ್ಯವನ್ನು ಬಿಡದೇ ದಿಟ್ಟತನದಿಂದ ಎದುರಿಸಿ ನಡೆಯುವ ಛಲಗಾರಿಕೆ ಇರಬೇಕು. ಮನಸ್ಸನ್ನು ಧೃಡಗೊಳಿಸಬೇಕು. ಕಾಯಕದಲ್ಲಿ ತೊಡಗಿಸಬೇಕು. ಆಂದಾಗ ಮಾತ್ರ ಫಲ ದೊರೆಯುವದು; ಗುರಿಸಾಧಿತವಾಗುವದು. ದೃಢ ಮನಸ್ಸಿನಿಂದಮಾಡಿದ ಯಾವುದೇ ಕಾರ್ಯ ಸಫಲವಾಗುವದು. ಆದ್ದರಿಂದ ಮನಸ್ಸಿದ್ದಲ್ಲಿ ಮಾರ್ಗವಿದೆ ಎಂದು ಹೇಳಲಾಗುತ್ತದೆ.

—●—

## ಸಂಭವನೀಯ ಪ್ರಶ್ನೆಪತ್ರಿಕೆ
## ಕನ್ನಡ

ಎಪ್ರಿಲ್-೧೯೮೮ ಪ್ರಥಮ ಪತ್ರಿಕೆ

ಅವಧಿ: 10-30 ರಿಂದ 1-00 ಅಂಕಗಳು : 100

ಪ್ರಶ್ನೆ 1 ಒಂದು ಪುಟಕ್ಕೆ ಮೀರದಂತೆ ಬೇಕಾದ ಮೂರು ಪ್ರಶ್ನೆಗಳಿಗೆ ಉತ್ತರಿಸಿರಿ. 5 × 3 = 15

1) ಬಿಜಾಪೂರ ಜಿಲ್ಲೆಯ ಪೌರಾಣಿಕ ಐತಿಹ್ಯಗಳಾವುವು? ವಿವರಿಸಿ.

ಉತ್ತರ: ಈ ಜಿಲ್ಲೆಯು ಅನೇಕ ಪೌರಾಣಿಕ ಐತಿಹ್ಯಗಳನ್ನು ಹೊಂದಿದೆ. ಈ ಜಿಲ್ಲೆಯ ಧೂಳ ಖೇಡ ಗ್ರಾಮವು ದಕ್ಷಯಜ್ಞದ ಕಥೆಯನ್ನು ಹೇಳುತ್ತದೆ. ದ್ರಾಕ್ಷಾಯಣಿಯು ತನ್ನ ತಂದೆಯಾದ ದಕ್ಷಬ್ರಹ್ಮನಿಂದ ತನ್ನ ಪತಿಯಾದ ಶಿವನಿಗೆ ಅಪಮಾನವಾಯಿತೆಂದು ಯಜ್ಞಕುಂಡದಲ್ಲಿ ಆತ್ಮಾಹುತಿಯಾದಳು. ಆ ಸ್ಥಳವೇ ಧೂಳಖೇಡ ಗ್ರಾಮವೆಂದು ಹೇಳುತ್ತಾರೆ.

ಪರಶುರಾಮನು ತನ್ನ ತಾಯಿ ರೇಣುಕೆಯ ಶಿರಚ್ಛೇದನ ಮಾಡಿ ತಂದೆಯ ಆಜ್ಞೆಯನ್ನು ಪಾಲಿಸಿದನು. ನಂತರ ತನ್ನ ರಕ್ತ ಸಿಕ್ತ ಕೊಡಲಿಯನ್ನು ತೊಳೆಯಲು ನೀರು ಹುಡುಕುತ್ತ ಬರುತ್ತಿರಲು ಮಲಪ್ರಭೆಯನ್ನು ಕಂಡನು. ನೀರನ್ನು ಕಂಡು "ಐಹೊಳೆ" ಎಂದು ಉದ್ಗಾರ ತೆಗೆದನು. ಆ ಸ್ಥಳವೇ ಇಂದಿನ ಇತಿಹಾಸ ಪ್ರಸಿದ್ಧ ಐಹೊಳೆ. ಈ ಸ್ಥಳದಲ್ಲಿಯೇ ಪರಶುರಾಮನು ಈಶ್ವರನನ್ನು ಪೂಜಿಸಿದನೆಂದು ಪುರಾಣ ಕಥೆಯುಂಟು. ಇವು ಬಿಜಾಪುರ ಜಿಲ್ಲೆಯ ಪೌರಾಣಿಕ ಐತಿಹ್ಯಗಳಾಗಿವೆ.

2. ಹಾರಾಡುವ ತಟ್ಟೆಗಳ ಬಗೆಗೆ ತಿಳಿದು ಬರುವ ಸಂಗತಿಗಳು.

ಉತ್ತರ : ( 1984 ಅಕ್ಟೋಬರ ಕನ್ನಡ ಪ್ರಥಮ ಪತ್ರಿಕೆ 1 ನೇ ಪ್ರಶ್ನೆ 3 ರ ಉತ್ತರ ನೋಡಿರಿ).

3. ಅಚ್ಛೋದ ಸರೋವರದ ನೈರ್ಮಲ್ಯ, ಸೌಂದರ್ಯ ಮತ್ತು ಪವಿತ್ರತೆಗಳನ್ನು ವರ್ಣಿಸಿರಿ.

ಉತ್ತರ : (1986 ಮಾರ್ಚ ಕನ್ನಡ ಪ್ರಥಮ ಪತ್ರಿಕೆ 1 ನೇ ಪ್ರಶ್ನೆ 5 ರ ಉತ್ತರ ನೋಡಿರಿ.)

4. ಕಳ್ಳಕೊಡೆಯನು ಯಾರು? ಅವನ ಮನಸ್ಸು ಹೇಗೆ ಪರಿವರ್ತನೆಯಾಯಿತು?

ಉತ್ತರ : (1984 ರ ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 1 ನೇ ಪ್ರಶ್ನೆ 1 ರ ಉತ್ತರ ನೋಡಿರಿ.)

5) ಸವೋರಾ ಜನರು ಯಾರು? ಅವರ ಜನ ಜೀವನ, ಮೂಢನಂಬಿಕೆಗಳ ಬಗೆಗೆ ಬರೆಯಿರಿ.

ಉತ್ತರ: ಸವೋರಾ ಜನರು ಗುಡ್ಡಗಾಡಿನ ಹಳ್ಳಿಗಳಲ್ಲಿ ವಾಸಿಸುವ ಒಂದು ಜನಾಂಗದವರು. ಗಂಜಾಂ ಮತ್ತು ಕೊರಪುಟ್ ಪ್ರದೇಶದಲ್ಲಿ ವಾಸಿಸುತ್ತಿದ್ದ ಇವರನ್ನು ಲೇಖಕರು ಭೇಟಿಯಾಗಿ ತಿಳಿದುಕೊಂಡಿದ್ದಾರೆ. ಅವರು ವಾಸಿಸುವ ತಾಣಗಳು ಸೌಂದರ್ಯಯುತವಾದವುಗಳು. ಇವರು ಮಿಶನರಿಗಳ ಪ್ರಭಾವಕ್ಕೆ ಒಳಗಾದವರಲ್ಲ. ನೂರಾರು ವರ್ಷಗಳ ಹಿಂದೆ ಇದ್ದಂತೆಯೇ ಈಗಲೂ ಇದ್ದಾರೆ. ಇವರು ಸ್ವಭಾವದಿಂದ ಒಳ್ಳೆಯವರು, ಸೌಜನ್ಯಶೀಲರು. ಪಿಕ ಎಂಬ ಚುಟ್ಟ ಅವರಿಗೆ ಬಹಳ ಪ್ರೀತಿ, ಟಿ ತುಂಬಾ ಇಷ್ಟ.

ಸವೋರಾ ಜನರು ತಮ್ಮ ಮತವನ್ನು ಕಟ್ಟುನಿಟ್ಟಾಗಿ ಅನುಸರಿಸುವರು. ಕಾಯಿಲೆಗಳನ್ನು ತಮ್ಮದೇ ಆದ ಪೂಜಾ ತಂತ್ರಗಳಿಂದ ವಾಸಿ ಮಾಡಲು ಯತ್ನಿಸುತ್ತಾರೆ. ಪರಕೀಯರ ಆಗಮನ ಅವರಿಗೆ ಹಿಡಿಸುವದಿಲ್ಲ. ಅದರಿಂದ ಏನಾದರೂ ಕೇಡು ಆಗುವದೆಂದು ಅವರ ಭಾವನೆ ಅದಕ್ಕಾಗಿ ಶಾಂತಿ ಮಾಡುವದು, ಬಲಿ ಕೊಡುವದು ಮಾಡುವರು. ಯಾರು ಬಂದರೆ ಯಾವುದನ್ನು ಬಲಿಕೊಡಬೇಕು ಎಂಬುದನ್ನು ತೀರ್ಮಾ

ನಿಸಿರುತ್ತಿದ್ದರು. ಫಾರೆಸ್ಟ್ ಅಧಿಕಾರಿ ಬಂದರೆ ಆಡು, ಪೋಲೀಸ ಸಬ್ ಇನಸ್ಪೆಕ್ಟರ್ ಬಂದರೆ ಕೋಳಿ, ಮಾನವ ಶಾಸ್ತ್ರಜ್ಞರು ಬಂದರೆ ಹಂದಿ ಹೀಗೆ ಹೊರಗಿನವರು ಬಂದರೆ ಶಾಂತಿ ಮಾಡ ಬೇಕೆಂದು ಒಂದು ಕಡೆಯಲ್ಲಿ ತೀರ್ಮಾನವಾಗಿರುವದನ್ನು ಲೇಖಕರು ವಿವರಿಸುತ್ತಾರೆ.

ಪ್ರಶ್ನೆ 2. ಒಂದು ಪುಟಕ್ಕೆ ಮೀರದಂತೆ ಎರಡು ಪ್ರಶ್ನೆಗಳಿಗೆ ಉತ್ತರಿಸಿರಿ. $5 \times 2 = 10$

1. ಭಾದ್ರಪದ ಸುಪ್ರಭಾತದ ಸೊಬಗನ್ನು ಕವಿ ಕುವೆಂಪುರವರು ಬಣ್ಣಿಸಿರುವ ಬಗೆ :

ಉತ್ತರ : ( 1985 ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 2 ರ ಉತ್ತರ ನೋಡಿರಿ. )

2) ಪ್ರಾಣಿಗಳ ಜೊತೆಗೆಯೇ ಬದುಕಬೇಕೆಂಬ ಆಸೆ ಕವಿ ವ್ಯಕ್ತಪಡಿಸಲು ಕಾರಣ ವಿವರಿಸಿ.

ಉತ್ತರ : ( 1986 ಮಾರ್ಚ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 3 ರ ಉತ್ತರ ನೋಡಿ. )

3) ಕೋಣನನ್ನು ಹಿಡಿಸಿ ಕಪಿಯು ಪಡೆದ ದುರ್ಗತಿ.

ಉತ್ತರ : ( 1985 ಅಕ್ಟೋಬರ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 2 ರ ಉತ್ತರ ನೋಡಿ. )

4) ಕರ್ಣನ ಔದಾರ್ಯ ಮಾತೃಭಕ್ತಿ ಹಾಗೂ ಸ್ವಾಮಿ ಭಕ್ತಿಗಳನ್ನು ಕುರಿತು ಬರೆಯಿರಿ.

ಉತ್ತರ : ( 1984 ಎಪ್ರೀಲ ಕನ್ನಡ ಪ್ರಥಮ ಪತ್ರಿಕೆ 2 ನೇ ಪ್ರಶ್ನೆ 3 ರ ಉತ್ತರ ನೋಡಿ. )

ಪ್ರಶ್ನೆ 3. ಅ) ಕೆಳಗಿನ ಪದ್ಯದ ಸಾರಾಂಶವನ್ನು ಬರೆಯಿರಿ. 3

ಬರಲು ತಾಯ್ಗಿದಿರಾಗಿ ರವಿಸುತ
ನಿಂದ ಬಂದನು ದಂಡದಂತಿರೆ
ಚರಣದಲಿ ಮೈಯಿಕ್ಕ ಲಾತನ ನೊಸಲ ನೆಗಹಿದಳು ।
ಬರಸೆಳೆದು ಬಿಗಿದಪ್ಪಿದಳು ನೀ
ರುರವಣಿಸಿದವು ನಯನದಲಿ ಸೆರೆ
ಗೊರಳಿಗೌಕಿದು ದಳಲಿನಬುಧಿಯೊಳದ್ದಳಾ ಕುಂತಿ ॥

ಉತ್ತರ : ಕುಂತಿಯು ಅಲ್ಲಿಗೆ ಬಂದ ಕೂಡಲೇ ಕರ್ಣನು ತನ್ನ ತಾಯಿಯನ್ನು ಎದುರುಗೊಂಡು, ಆಕೆಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಕುಂತಿಯು ಅವನನ್ನು ಎಬ್ಬಿಸಿ ಬರ ಸೆಳೆದುಕೊಂಡು ಅಪ್ಪಿಕೊಂಡಳು. ಆಕೆಯ ಕಣ್ಣುಗಳಲ್ಲಿ ನೀರು ತುಂಬಿ ಬಂದವು. ಕಂಠದ ನರಗಳು ಉಬ್ಬಿದವು, ಆಕೆ ದುಃಖದ ಸಾಗರದಲ್ಲಿ ಮುಳುಗಿದಳು.

ಬ) ಕೆಳಗಿನ ಹಳಗನ್ನಡ ಗದ್ಯಭಾಗವನ್ನು ಹೊಸ ಗನ್ನಡಕ್ಕೆ ಅನುವಾದಿಸಿರಿ. 3

ಅಂತೆ ಐದಿನಂದ ದೀರ್ಘಕರ್ಣನಂ ಕಂಡು ಜಠರಾನಳ ಶಿಖಿಕಳಾಪದಳಯ್ಯು ಮಾನ ಮಾನಸಂ ಸಿಂಗಂ ಮುಳಿದೇನೆಲವೊ ನೀನಿನಿತು ಪೊಳ್ತು ಆರಬಿಲದೊಳ್ ತಡೆದೆ ? ಈಗಳಂ ಬರುತ ಅಡಿಗಡಿಗೆ ಪೆರಗಂ ನೋಡುತ್ತುಂ ಭಯಾತುರನಾಗಿ ಬಂದೆ.

ಉತ್ತರ : ಹಾಗೆ ಬಂದ ದೀರ್ಘಕರ್ಣನನ್ನು ಕಂಡು ಹಸಿವಿನ ಬೇಗೆಯಿಂದ ಬಳಲುತ್ತಿದ್ದ ಸಿಂಹವು ಕೋಪದಿಂದ ಎಲವೊ !, ನೀನು ಇಷ್ಟು ಹೊತ್ತು ಯಾರ ಹತ್ತಿರ ನಿಂತೆ ? ಈಗಲೂ ಬರುವಾಗ್ಗೆ ಹೆಜ್ಜೆ ಹೆಜ್ಜೆಗೆ ಹಿಂದೆ ನೋಡುತ್ತ ಭಯಾತುರನಾಗಿ ಬಂದೆ.

ಪ್ರಶ್ನೆ 4. ಈ ಪದ್ಯ ಭಾಗಗಳನ್ನು ಪೂರ್ಣಗೊಳಿಸಿರಿ.

1) ಎಂಥ ಚೆಂದದ ಬಳ್ಳಿ.......
..............ನೋಡಿ ಹಾಡು.

2) ಮಕ್ಕಳೈವರೊಳಾನು............
..............ಜಯಲಕ್ಷ್ಮಿ ತನಗೆಂದ ॥

ಉತ್ತರ : ( ನಿಮ್ಮ ಪಠ್ಯಪುಸ್ತಕದ ಪದ್ಯ ಭಾಗದಲ್ಲಿ ನೋಡಿರಿ )

ಪ್ರಶ್ನೆ 5. ಇವರಲ್ಲಿ ಇಬ್ಬರ ಸ್ಥಳ, ಕಾಲ, ಕೃತಿ, ವೈಶಿಷ್ಟ್ಯಗಳನ್ನು ತಿಳಿಸಿರಿ.

1) ಕುವೆಂಪು. 2) ಪುರಂದರದಾಸ
3) ರಾಘವಾಂಕ

ಉತ್ತರ : ( 1) ಕುವೆಂಪು–1984 ಎಪ್ರೀಲ, 2) ಪುರಂದರದಾಸ—1986 ಅಕ್ಟೋಬರ ಹಾಗೂ 3) ರಾಘವಾಂಕ—1985 ಎಪ್ರೀಲ ಪತ್ರಿಕೆಗಳ 5 ನೇ ಪ್ರಶ್ನೆ ನೋಡಿರಿ )

ಪ್ರಶ್ನೆ 6. ಕೆಳಗಿನ ವಾಕ್ಯಗಳ ಸಂದರ್ಭ ಮತ್ತು ಸ್ವಾರಸ್ಯವನ್ನು ತಿಳಿಸಿ ( ನಾಲ್ಕು ಮಾತ್ರ ) 8

1) ಇದು ಮಹಾತ್ಕಾರ್ಯ ಸಾಧಿಸುವ ಲಕ್ಷಣವುಳ್ಳ ಮುಖ.

ಉತ್ತರ : ಈ ಮಾತು "ಬಂಕಾಪುರದಲ್ಲಿ ರನ್ನಮಯ್ಯ" ಎಂಬ ಗದ್ಯಪಾಠದಲ್ಲಿ ಬಂದಿದೆ. ತದೇಕ ಚಿತ್ತದಿಂದ ಪ್ರವಚನವನ್ನು ಕೇಳುತ್ತಿದ್ದ ರನ್ನಮಯ್ಯನನ್ನು ಗುರುಗಳಾದ ಅಜಿತ ಸೇನಾಚಾರ್ಯರು ಕರೆಕಳುಹಿಸಿದರು. ಆಗಮಿಸಿದ ಅವನ ಮುಖವನ್ನು ಸೂಕ್ಷ್ಮವಾಗಿ ನೋಡಿದರು. ವಿಶಾಲ ಹಣೆ,

ನೀಳ ಮೂಗು, ತೇಜಸ್ವಿಯಾದ ಕಣ್ಣುಗಳು, ಆತ್ಮ ತೇಜಸ್ಸನ್ನು ಹೊರಸೂಸುವ ಮುಖ ಇವುಗಳನ್ನು ಕಂಡು ಆಚಾರ್ಯರು ತಮ್ಮ ಮನಸ್ಸಿನಲ್ಲಿಯೇ "ಇದು ಮಹತ್ಕಾರ್ಯ ಸಾಧಿಸುವ ಲಕ್ಷಣವುಳ್ಳ ಮುಖ" ಎಂದುಕೊಂಡರು.

2) ಈ ಕೀಲಿ ನಮ್ಮ ಮನೆತನದ ಹಳೆಯ ಮಿತ್ರ:

ಈ ಮಾತು "ದೆವ್ವದ ಮನೆ" ಪಾಠದಲ್ಲಿ ಬಂದಿದೆ. ಲೇಖಕರು ಹುಬ್ಬಳ್ಳಿಯಿಂದ ಅಥಣಿಗೆ ಅಣ್ಣನ ಮನೆಗೆ ಬಂದಿದ್ದರು. ಆದರೆ ಅಣ್ಣನ ಮನೆಗೆ ಬೀಗ ಹಾಕಿತ್ತು. ಇವರಿಗೆ ಜ್ವರ ಬೇರೆ ಬಂದಿತ್ತು. ಹೀಗಾಗಿ ಕೋಪವೂ ಬಂದಿತ್ತು. ಆಗ "ಈ ಕೀಲಿ ನಮ್ಮ ಮನೆತನದ ಹಳೆಯ ಮಿತ್ರ" ಎಂಬ ಮಾತು ಇವರಿಗೆ ಹೊಳೆಯಿತು. ಅದರ ಒಂದು ಮೊಳೆ ಒತ್ತಿದರೆ ಕೀಲಿಕೈ ಇಲ್ಲದೆಯೇ ಅದನ್ನು ತೆರೆಯಬಹುದೆಂಬ ತಂತ್ರ ಇವರಿಗೆ ಗೊತ್ತಿದ್ದಿತು.

3) ಮಲ್ಲಯ್ಯ ತಂದಿ ನನ ಕೈಯ ಬಿಡಬ್ಯಾಡ:

ಈ ವಾಕ್ಯವು "ಕನ್ನಡ ಗರತಿ" ಪಾಠದಲ್ಲಿ ಬಂದಿದೆ. ಗರತಿ ಪ್ರಾತಃಸಮಯದಲ್ಲಿ ತನ್ನ ನಿತ್ಯದ ಕೆಲಸ ಪ್ರಾರಂಭಿಸುವ ಮುನ್ನ ದೇವರ ಪ್ರಾರ್ಥನೆ ಮಾಡುತ್ತಾಳೆ. ಆಕೆಗೆ ತನ್ನ ಜೀವನದಲ್ಲಿ ಬಂದ ಅನುಭವವೆಂದರೆ, ತಾನು ನಂಬಿದ ಮಂದಿ ತನ್ನನ್ನು ನಡುನೀರಿನಲ್ಲಿ ಕೈಬಿಟ್ಟರೆಂಬುದು, ಅದಕ್ಕಾಗಿ ಆಕೆಯು ಅದನ್ನು ನೆನೆದೇ ಶಿವನಿಗೆ "ಮಲ್ಲಯ್ಯಾ ತಂದಿ ನನ ಕೈಯ ಬಿಡಬ್ಯಾಡ" ಎಂದು ಸ್ಮರಿಸುತ್ತಾಳೆ.

4) ಅತಿ ಸ್ನೇಹವು ಪಾಪ ಶಂಕೆಯೂಡದದ್ದು

ಉತ್ತರ: "ಕನ್ಯೆ ಪೆರನೊಡನೆ ಗಡ" ಎಂಬ ಬಸಪ್ಪ ಶಾಸ್ತ್ರಿಗಳ ಪಾಠದಿಂದ ಈ ಮಾತನ್ನು ಎತ್ತಿಕೊಳ್ಳಲಾಗಿದೆ. ಪತಿಗೃಹಕ್ಕೆ ಹೊರಟು ನಿಂತ ಶಕುಂತಲೆಗೆ ಆಕೆಯ ಸಖಿಯರು ಹೇಳಿದ ಮಾತಿದು. ದುಶ್ಯಂತ ರಾಜನು ಆಕೆಯನ್ನು ಮರೆತದ್ದೇ ಆದರೆ ರಾಜಮುದ್ರಿಕೆಯುಳ್ಳ ಉಂಗುರವನ್ನು ತೋರಿಸಬೇಕೆಂದು ಆಕೆಗೆ ಸಲಹೆ ಕೊಡುತ್ತಾರೆ; ಅವಳು ಭಯಭೀತಳಾಗುತ್ತಾಳೆ. ಆಗ ಸಖಿಯರು ಸ್ನೇಹವಾಗಲಿ, ಪ್ರೇಮವಾಗಲಿ ಹೆಚ್ಚಾದಾಗ ಪ್ರೇಮಕ್ಕೆ ಪಾತ್ರರಾದವರ ಬಗ್ಗೆ ನಾನಾ ಚಿಂತೆಗಳು ಬರುವದುಂಟು. ಅದು ಅತಿ ಪ್ರೇಮದ ಪರಿಣಾಮ, ನೀನು ಹೆದರಬೇಡ ಎಂದು ಶಕುಂತಲೆಗೆ ಸಮಾಧಾನ ಹೇಳುತ್ತಾರೆ.

5) ಪಿಡಿದು ತಂದಾಂ ಕೊಟ್ಟಪೆಂ ಸೀತೆಯಂ:

ಈ ಮಾತು ನಾಗಚಂದ್ರನ "ಉದಾತ್ತನೊಳ್ ಪುಟ್ಟದಲ್ತೆ ನೀಲೀರಾಗಂ" ಎಂಬ ಪದ್ಯ ಭಾಗದಲ್ಲಿ ಬಂದಿದೆ. ಸೀತೆಯನ್ನು ರಾಮನನ್ನು ಅಗಲಿಸಿ ತಂದುದಕ್ಕಾಗಿ ರಾವಣನಿಗೆ ಪಶ್ಚಾತ್ತಾಪವೆನಿಸಿತು. ಆಕೆಯನ್ನು ರಾಮನಿಗೆ ಮರಳಿ ಒಪ್ಪಿಸುವ ಯೋಚನೆಯನ್ನು ಮಾಡುತ್ತಾನೆ. ಆದರೆ ತನ್ನ ಶೌರ್ಯಕ್ಕೆ ಒಪ್ಪುವ ರೀತಿಯಲ್ಲಿ ಅವರೊಡನೆ ಹೋರಾಡಿ, ಸೆರೆಹಿಡಿದು ತಂದು ನಂತರ ಅವರಿಗೆ ಸೀತೆಯನ್ನು ಒಪ್ಪಿಸಬೇಕು ಎಂಬುದು ಅವನ ಯೋಚನೆ ಇದನ್ನು ಹೇಳುವ ಸಂದರ್ಭದಲ್ಲಿ ರಾವಣನು ಮೇಲಿನ ಮಾತನ್ನು ಹೇಳಿದ್ದಾನೆ.

ಪ್ರಶ್ನೆ 7. ಕೆಳಗಿನ ಪ್ರಶ್ನೆಗಳಿಗೆ ನಾಲ್ಕೈದು ವಾಕ್ಯಗಳಲ್ಲಿ ಉತ್ತರಿಸಿರಿ. 10

1) ಋಷಿಗಳು ತಪಸ್ಸನ್ನು ಮಾಡುವಾಗ ಮೂಗಿನ ತುದಿಯನ್ನೇ ಏಕೆ ಗಮನಿಸುತ್ತಾರೆ?

ಉತ್ತರ: ಮೂಗಿನ ತುದಿ ಕೋಪದ ಕೇಂದ್ರಸ್ಥಾನ, ವಿದ್ಯುತ್ ತಾಣವೂ ಅಹುದು. ಅಲ್ಲಿಂದಲೇ ಶಾಪದ ಕರಂಟು ಹರಿಸುತ್ತಾರೆ. ಕೋಪವನ್ನು ಗೆಲ್ಲುವದು ಹೇಗೆಂದು ವಿಚಾರಿಸಿದಾಗ, ತಪಸ್ಸು ಮಾಡುವ ಸಮಯದಲ್ಲಿ ಮೂಗಿನ ತುದಿಯ ಮೇಲೆಯೇ ಗಮನವನ್ನು ಕೇಂದ್ರೀಕರಿಸಿದರೆ ಇದು ಸಾಧ್ಯವೆಂದು ತಿಳಿದಿರಬೇಕು. ಈ ಕಾರಣದಿಂದ ಋಷಿಗಳು ಹಾಗೆ ಮಾಡುತ್ತಾರೆ ಎಂದು ಲೇಖಕರು ವಿನೋದ ಮಾಡಿದ್ದಾರೆ.

2) ಬಸವಣ್ಣನವರು ಎಸಗಿದ ಸಾಮಾಜಿಕ ಕ್ರಾಂತಿ ಯಾವುದು?

ಬಸವಣ್ಣನವರು ವರ್ಗರಹಿತ, ವರ್ಣಭೇದವಿಲ್ಲದ, ಅಸಮಾನತೆಗಳಿಲ್ಲದ ಕ್ರಾಂತಿಕಾರಕ ಸಮಾಜ ರಚನೆಗೆ ಕೈಹಾಕಿದರು. ಪುರುಷ-ಸ್ತ್ರೀಭೇದವಿಲ್ಲದ ಹಾರುವ-ಅಂತ್ಯಜ ವ್ಯತ್ಯಾಸವಿಲ್ಲದ ವೃತ್ತಿ ಸಮಾನತೆಯ ಶೋಷಣೆ ರಹಿತ ಸಮಾಜ ಸ್ಥಾಪನೆಗೆ ಯತ್ನಿಸಿದರು. ಇದು ಬಸವಣ್ಣನವರು ಎಸಗಿದ ಸಾಮಾಜಿಕ ಕ್ರಾಂತಿ

3) ಪ್ರಜಾಹಿತಕ್ಕಾಗಿ ಚೆನ್ನಮ್ಮಾಜಿ ಕೈಕೊಂಡ ಕಾರ್ಯಗಳಾವವು?

ಚೆನ್ನಮ್ಮಾಜಿ ಪ್ರಜಾಹಿತದ ಅನೇಕ ಕಾರ್ಯಗಳನ್ನು, ಧರ್ಮ ಕಾರ್ಯಗಳನ್ನು ನೆರವೇರಿಸಿದಳು. ತನ್ನ ಪತಿಯ ನೆನಪಿಗಾಗಿ ಅಗ್ರಹಾರಗಳನ್ನು ಸ್ಥಾಪಿಸಿ, ದೇವ ಮಂದಿರಗಳನ್ನು ಭದ್ರಗೊಳಿಸಿದಳು, ಉತ್ಸವಗಳನ್ನು ಸಾಂಗಗೊಳಿಸಿದಳು. ಮಠಗಳನ್ನು ಕಟ್ಟಿಸಿದ್ದಲ್ಲದೆ ಜಾತಿ-ಭೇದವನ್ನೆಣಿಸದೆ ನಾನಾ ವಿಧದ ಶಾಶ್ವತ ದಾನಗಳನ್ನು ನೀಡಿದಳು. ಹೀಗೆ ಚೆನ್ನಮ್ಮಾಜಿ ಪ್ರಜಾಹಿತ ಕಾರ್ಯಗಳನ್ನು ಮಾಡಿದಳು.

३] हिंदी में $1\frac{1}{2}$ को ---- है ।

अ) एक आधा आ) ढाई

इ) सवा ई) डेढ

४] आदत इसका बहुवचन रुप है ।

अ) आदतें आ) आदत

इ) आदतियाँ ई) आदति

५] ठीक विभक्ति प्रत्यय चुनकर लिखिए ।

1) राम -----बेहन का नाम कमला है ।

अ) की आ) का इ) के ई) से

६] सेवक का अन्य लिंग शब्द.......है ।

अ) सेवकी आ) सेविका

इ) सेवक ई) सेवकिया

७] शुध्द वाक्य चुनकर लिखिए-

1) यह बडा किताब है ।

2) यह बडे किताब है ।

3) यह बड़ी किताब है ।

4) यह बडी किताबे है ।

८] मीठा इसका विरुध्द शब्द-----है ।

अ) मीठे आ) कडुवा

इ) कडवाहट ई) मीठापन

९] शाला यह ----- है ।

अ) क्रिया आ) संज्ञा

इ) प्रत्यय ई) विशेषण

१०] सवा सेर गेहूँ इस प्राठक लेख के----- हैं ।

अ) महादेवी वर्मा आ) अखिलेश्वर

इ) ओं प्रकाश गुप्ता ई) प्रेमचंद

११] ये+को=------ होता है ।

अ) येको आ) इसको

इ) इनको ई) उनको

१२] इनमे से ठीक हिज्जे का शब्द ----- है ।

अ) आदमि आ) आदम

इ) अदामी ई) आदमी

उत्तर-

| | | |
|---|---|---|
| १) | आ] | हूँ |
| २) | इ] | उनसठ |
| ३) | ई] | डेढ |
| ४) | अ] | आदतें |
| ५) | अ] | की |
| ६) | आ] | सेविका |
| ७) | 3] | यह बडी किताब हैं । |
| ८) | आ] | कडुवा |
| ९) | आ] | संज्ञा |
| १०) | ई] | प्रेमचंद |
| ११) | इ] | इनको |
| १२) | ई] | आदमी |

# ಸಮಾಜ ಪಾಠಗಳು

## ಎಪ್ರಿಲ್–1984 ಪ್ರಥಮ–ಪತ್ರಿಕೆ

### ಚರಿತ್ರೆ ಮತ್ತು ಪೌರನೀತಿ

I. 1) ರಾಷ್ಟ್ರೀಯತೆಗೆ ಅತ್ಯಂತ ಮುಖ್ಯವಾದ ಅಂಶ ಯಾವದು ?

ಉತ್ತರ : ಒಂದೇ ಪ್ರದೇಶದಲ್ಲಿ ವಾಸಿಸುವ ಜನ ತಮ್ಮನ್ನು ಒಂದೇ ಭಾವ ಮತ್ತು ಜನಾಂಗ ಎಂದು ಭಾವಿಸುವದು ರಾಷ್ಟ್ರೀಯತೆಯ ಮುಖ್ಯ ಅಂಶವಾಗಿದೆ.

2) ರಾಷ್ಟ್ರೀಯ ಭಾವೈಕ್ಯತೆಯನ್ನು ಪ್ರಚೋದಿಸುವ ಒಂದು ಮುಖ್ಯ ಅಂಶವನ್ನು ಹೆಸರಿಸಿ.

ಉತ್ತರ : ರಾಷ್ಟ್ರೀಯ ಭಾವೈಕ್ಯತೆಗೆ ಪ್ರೋತ್ಸಾಹಿಸುವ ಅತಿ ಮುಖ್ಯ ಅಂಶವು ನಮ್ಮ ಸಂವಿಧಾನವಾಗಿದೆ.

3) ಭಾರತ ರಕ್ಷಣಪಡೆಗಳ ಮೂರು ವಿಭಾಗಗಳಿಗೆ ಅಧಿಕಾರಿಗಳನ್ನು ಒದಗಿಸುವ ಮತ್ತು ತರಬೇತಿ ಕೊಡುವ ಒಂದು ಸಂಸ್ಥೆಯ ಹೆಸರನ್ನು ತಿಳಿಸಿ.

ಉತ್ತರ : ಭಾರತ ರಕ್ಷಣಾ ಪಡೆಗಳ ಮೂರು ವಿಭಾಗಗಳಿಗೆ ಅಧಿಕಾರಿಗಳನ್ನು ಒದಗಿಸುವ ಮತ್ತು ತರಬೇತಿ ಕೊಡುವ ಸಂಸ್ಥೆ ನವದೆಹಲಿಯಲ್ಲಿರುವ ರಾಷ್ಟ್ರೀಯ ರಕ್ಷಣಾ ಮಹಾವಿದ್ಯಾಲಯ.

4) ಕರ್ನಾಟಕ ರಾಜ್ಯದ ಅತ್ಯುನ್ನತ ಅಧಿಕಾರ ಪಡೆದ ನ್ಯಾಯಾಂಗ ಯಾವದು ?

ಉತ್ತರ : ಕರ್ನಾಟಕ ರಾಜ್ಯದ ಅತ್ಯುನ್ನತ ಅಧಿಕಾರ ಪಡೆದ ನ್ಯಾಯಾಂಗ ಕರ್ನಾಟಕ ರಾಜ್ಯದ ಉಚ್ಚನ್ಯಾಯಾಲಯ. (ಹೈಕೋರ್ಟ) ಇದು ಬೆಂಗಳೂರಲ್ಲಿದೆ.

5) ಪ್ರಜಾಪ್ರಭುತ್ವದಲ್ಲಿ ಎಷ್ಟು ಬಗೆಗಳಿವೆ ?

ಉತ್ತರ : ಪ್ರಜಾಪ್ರಭುತ್ವದಲ್ಲಿ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ಎಂಬ ಎರಡು ಬಗೆಗಳಿವೆ.

6) ಬಡತನ ಎಂದರೇನು ?

ಉತ್ತರ : ಅವಶ್ಯಕತೆಗಿಂತ ಕಡಿಮೆ ಆದಾಯ ಅಥವಾ ತಿನ್ನಲು ಸಾಕಷ್ಟು ಅನ್ನ, ಉಡಲು ಸಾಕಷ್ಟು ಬಟ್ಟೆ, ವಾಸಿಸಲು ನೆರಳಿಲ್ಲದೆ ಇರುವ ಪರಿಸ್ಥಿತಿ ಇದ್ದರೆ ಅದನ್ನು ಬಡತನ ಎನ್ನುತ್ತಾರೆ.

7) ಹರ್ಷ ಚಕ್ರವರ್ತಿಯನ್ನು ಸೋಲಿಸಿದವರು ಯಾರು?

ಉತ್ತರ : ಹರ್ಷ ಚಕ್ರವರ್ತಿಯನ್ನು ಸೋಲಿಸಿದವನು ಎರಡನೆ ಪುಲಕೇಶಿ.

8) ವಿಜಯನಗರವನ್ನು ಆಳಿದವರಲ್ಲಿ ಮೊದಲಿಗರು ಯಾರು ?

ಉತ್ತರ : ಸಂಗಮ ವಂಶದ ಹುಕ್ಕ–ಬುಕ್ಕರು ವಿಜಯ ನಗರವನ್ನು ಆಳಿದ ಮೊದಲ ದೊರೆಗಳು.

9) ಭಾರತದ ಮೊಗಲ್ ಸಂತತಿಯ ಸ್ಥಾಪಕರು ಯಾರು ?

ಉತ್ತರ : ಭಾರತದ ಮೊಗಲ್ ಸಂತತಿಯ ಸ್ಥಾಪಕ ಜಲಾಲುದ್ದೀನ ಬಾಬರ.

10) ಸಿಂಧೂ ನಾಗರಿಕತೆಯ ಹೆಸರುವಾಸಿಯಾದ ಎರಡು ನಗರಗಳು ಯಾವವು ?

ಉತ್ತರ : ಸಿಂಧೂ ಸಂಸ್ಕೃತಿಯ ಹೆಸರು ವಾಸಿಯಾದ ಎರಡು ನಗರಗಳು ಹರಪ್ಪಾ ಮತ್ತು ಮೊಹೆಂಜೋದಾರೊ.

11) ಮೌರ್ಯ ಸಂಸ್ಕೃತಿಯ ಸ್ಥಾಪಕನು ಯಾರು ?

ಉತ್ತರ : ಚಂದ್ರಗುಪ್ತ ಮೌರ್ಯನು ಮೌರ್ಯ ಸಂಸ್ಕೃತಿಯ ಸಂಸ್ಥಾಪಕ.

12) ಭಾರತದಿಂದ ಹೊರದೂಡಲು ಭಾರತದಲ್ಲಿ ಅಲೆಕ್ಸಾಂಡರನ ವಿರುದ್ಧ ಯುದ್ಧ ಮಾಡಿದವನು ಯಾರು ?

ಉತ್ತರ : ಭಾರತದಿಂದ ಹೊರದೂಡಲು ಅಲೆಕ್ಸಾಂಡರನ ವಿರುದ್ಧ ಯುದ್ಧ ಮಾಡಿದವನು ಪೋರಸ್ ದೊರೆ (ಪುರುರವ)

13) ಬ್ರಿಟಿಷ್ ಭಾರತದಲ್ಲಿ ಕಲಕತ್ತಾ ನಗರವನ್ನು ರಾಜಧಾನಿಯನ್ನಾಗಿ ಮಾಡಿದವನು ಯಾರು ?

ಉತ್ತರ : 1773 ರ ರೆಗ್ಯೂಲೇಟಿಂಗ ಶಾಸನದ ಪ್ರಕಾರ ಭಾರತದ ಗವ್ಹರ್ನರ್ ಜನರಲ್ ಆಗಿ ನೇಮಕನಾದ ವಾರನ್ ಹೇಸ್ಟಿಂಗ್ಸ್ ಕಲ್ಕತ್ತವನ್ನು ರಾಜಧಾನಿಯನ್ನಾಗಿ ಮಾಡಿದನು.

14) ಬ್ರಿಟಿಷರು ಮದ್ರಾಸಿನಲ್ಲಿ ಕಟ್ಟಿದ ಕೋಟೆಯ ಹೆಸರೇನು ?

ಉತ್ತರ : ಮದ್ರಾಸ ನಗರದಲ್ಲಿ ಇಂಗ್ಲೀಷನವರು ಕಟ್ಟಿಸಿದ ಕೋಟೆಯ ಹೆಸರು ಫೋರ್ಟ ಸೆಂಟಜಾರ್ಜ.

15) 15 ನೇಯ ಶತಮಾನದಲ್ಲಿ ಭಾರತಕ್ಕೆ ಸಮುದ್ರ ದಾರಿಯನ್ನು ಯಾರು ಕಂಡು ಹಿಡಿದರು ?

ಉತ್ತರ : 15 ನೇಯ ಶತಮಾನದಲ್ಲಿ ವಾಸ್ಕೋ–ಡ–ಗಾಮಾನು ಭಾರತಕ್ಕೆ ಸಮುದ್ರ ದಾರಿಯನ್ನು ಕಂಡುಹಿಡಿದನು.

II. 1) ಬರ್ಲಿನ್ ನಗರದ ಹಂಚುವಿಕೆಯಲ್ಲಿ ಭಾಗವಹಿಸಿದ

ಯಾವದಾದರೂ ಎರಡು ದೇಶಗಳು ಯಾವವು ? ಮತ್ತು ಆ ನಗರದಲ್ಲಿ ಗೋಡೆಯನ್ನು ಕಟ್ಟಿದ ರಾಷ್ಟ್ರ ಯಾವದು ?

**ಉತ್ತರ :** ರಷ್ಯಾ ಮತ್ತು ಅಮೇರಿಕಾ–ಬರ್ಲಿನ್ ನಗರದ ಹಂಚುವಿಕೆಯಲ್ಲಿ ಭಾಗ ಪಡೆದ ಎರಡು ರಾಷ್ಟ್ರಗಳು ರಷ್ಯ ತನ್ನ ಭಾಗಕ್ಕೆ ಬಂದ ಬರ್ಲಿನ್ ವಿಭಾಗದಲ್ಲಿ ಒಂದು ಗೋಡೆಯನ್ನು ಕಟ್ಟಿತು.

2) ಭಾರತದಲ್ಲಿ ಪೋರ್ತುಗೀಜರ ರಾಜ್ಯಕ್ಕೆ ತಳಹದಿಯನ್ನು ಹಾಕಿದವರು ಯಾರು ?

**ಉತ್ತರ :** ಅಲ್ಫಾನ್ಸೊ ಅಲ್ಬುಕರ್ಕನು ಭಾರತದಲ್ಲಿ ಪೋರ್ಚುಗೀಜರ ಅಧಿಕಾರದ ಭದ್ರ ತಳಹದಿಯನ್ನು ಹಾಕಿದನು.

3) ಯುದ್ಧ ಭಯದಿಂದ ತಮ್ಮನ್ನು ರಕ್ಷಿಸಿಕೊಳ್ಳಲು ರಚಿತವಾಗಿರುವ ಎರಡು ಮಿಲಿಟರಿ ಬಣಗಳಾವವು ?

**ಉತ್ತರ :** ಯುದ್ಧ ಭೀತಿಯಿಂದ ರಕ್ಷಣೆ ಪಡೆಯಲು ರಚಿಸಿದ ಎರಡು ಮಿಲಿಟರಿ ಬಣಗಳು–ಅಮೇರಿಕನ್ ಬಣ ಮತ್ತು ಸೋವಿಯತ್ ಬಣ

4) ಭಾರತದಲ್ಲಿ ದ್ವಿಮುಖ ಸರಕಾರವನ್ನು ಜಾರಿಗೆ ತಂದವನು ಯಾರು ?

**ಉತ್ತರ :** ಭಾರತದಲ್ಲಿ ದ್ವಿಮುಖ ಸರಕಾರವನ್ನು ಜಾರಿಗೆ ತಂದವನು ರಾಬರ್ಟ ಕ್ಲೈವ.

5) ಯುರೋಪಿನ ರಾಜಕೀಯ ಸಮಸ್ಯೆಯನ್ನು ಬಗೆಹರಿಸಲು ಪ್ರಬಲ ರಾಷ್ಟ್ರಗಳು ನಡೆಸಿದ ಸಭೆಗಳಲ್ಲಿ ಅತಿ ಮುಖ್ಯವಾದ ಎರಡು ಸಭೆಗಳು ಯಾವವು ?

**ಉತ್ತರ :** ಯುರೋಪಿನ ರಾಜಕೀಯ ಸಮಸ್ಯೆಯನ್ನು ಬಗೆಹರಿಸಲು ಪ್ರಬಲ ರಾಷ್ಟ್ರಗಳ ಸಭೆಗಳಲ್ಲಿ ಅತಿ ಮುಖ್ಯವಾದ ಎರಡು ಸಭೆಗಳೆಂದರೆ 1) ಯಾಲ್ಟಾಸಭೆ 2) ಪೊಟ್ಸ್ ಡಾಂ ಸಭೆ.

6) ಭಾರತದ ರಕ್ಷಣಾ ಪಡೆಗಳಲ್ಲಿ ಇರುವ ಮೂರು ವಿಭಾಗಗಳು ಯಾವವು ?

**ಉತ್ತರ :** ಭಾರತದ ರಕ್ಷಣಾ ಪಡೆಗಳಲ್ಲಿ ಇರುವ ಮೂರು ವಿಭಾಗಗಳೆಂದರೆ 1) ಭೂಸೈನ್ಯ 2) ನೌಕಾಪಡೆ 3) ವಾಯುದಳ.

7) ಭಾರತದ ನೆರೆ ರಾಜ್ಯಗಳಲ್ಲಿ ಕೆಲವನ್ನು ಬರೆಯಿರಿ.

**ಉತ್ತರ :** ಪಾಕಿಸ್ತಾನ, ಬಂಗ್ಲಾದೇಶ, ಶ್ರೀಲಂಕಾ, ನೇಪಾಳ, ಭೂತಾನ, ಬರ್ಮಾ ಇವು ಭಾರತದ ಕೆಲವು ನೆರೆಯ ರಾಜ್ಯಗಳಾಗಿವೆ.

8) ಭಾರತದ ರಕ್ಷಣಾ ಪಡೆಗಳ 2 ಮುಖ್ಯ ಕೆಲಸಗಳು ಯಾವವು ?

**ಉತ್ತರ :** 1] ಭಾರತದ ರಕ್ಷಣಾ ಪಡೆಗಳು ನಮ್ಮ ರಾಷ್ಟ್ರವನ್ನು ಪರಕೀಯರ ದಾಳಿಯಿಂದ ಸಂರಕ್ಷಿಸುತ್ತವೆ. ಮತ್ತು ರಾಷ್ಟ್ರದ ಸ್ವಾತಂತ್ರ್ಯವನ್ನು ರಕ್ಷಿಸುವದು ನಮ್ಮ ಎಲ್ಲ ರಕ್ಷಣಾ ಪಡೆಗಳ ಮುಖ್ಯ ಕೆಲಸವಾಗಿದೆ. 2] ಯಾವದೇ ಬಗೆಯ ದಂಗೆ ಅಥವಾ ಪ್ರತಿಕೂಲ ಘಟನಾವಳಿಗಳಂತಹ ಆತಂಕಕಾರಿ ಅಶಾಂತಿಯ ಸಮಯದಲ್ಲಿ ಪೋಲೀಸರು ಪರಿಸ್ಥಿತಿಯನ್ನು ಹತೋಟಿಗೆ ತರುವಲ್ಲಿ ಅಸಮರ್ಥರಾದಾಗ, ಶಾಂತಿ ಸಮಯದ ಅಂಗವಾಗಿ ಸೈನಿಕ ದಳಗಳು ಪೌರ ಅಧಿಕಾರಿಗಳಿಗೆ ಸಹಾಯ ಮಾಡುತ್ತವೆ.

III. 1] ಭಾರತದ ವಿದೇಶಾಂಗ ನೀತಿಯನ್ನು ವಿವರಿಸಿರಿ.

**ಉತ್ತರ :** ಭಾರತದ ವಿದೇಶಾಂಗ ನೀತಿಯ ಶಿಲ್ಪಿ ಜವಾಹರಲಾಲ್ ನೆಹ್ರೂರವರು ಅನ್ಯದೇಶಗಳೊಡನೆ ವ್ಯವಹರಿಸುವಾಗ ಭಾರತವು ಅನುಸರಿಸುವ ಧೋರಣೆ ಮತ್ತು ನಡುವಳಿಕೆಯೇ ಭಾರತದ ವಿದೇಶಾಂಗ ನೀತಿ, ನಮ್ಮ ಸಂವಿಧಾನವು ನಮ್ಮ ವಿದೇಶಾಂಗ ನೀತಿಗೆ ಸಂಬಂಧಿಸಿದಂತೆ ಹಲವು ನಿರ್ದೇಶನಗಳನ್ನು ನೀಡಿದೆ 1] ವಿಶ್ವಶಾಂತಿ ಮತ್ತು ಸುರಕ್ಷತೆಗೆ ಉತ್ತೇಜನ ನೀಡಬೇಕು. 2] ಇತರ ರಾಷ್ಟ್ರಗಳೊಡನೆ ಗೌರವಯುತ ಸಂಬಂಧಗಳನ್ನು ಹೊಂದಿರಬೇಕು. 3] ರಾಷ್ಟ್ರಗಳು ಅಂತರ ರಾಷ್ಟ್ರೀಯ ಕಾನೂನು ಮತ್ತು ಒಪ್ಪಂದಗಳನ್ನು ಪಾಲಿಸಲು ಪ್ರೋತ್ಸಾಹಿಸಬೇಕು. 4] ತಮ್ಮ ನಡುವಣ ವಿವಾದಗಳನ್ನು ಪಂಚಾಯತಿಯ ಮೂಲಕ ಬಗೆಹರಿಸಿಕೊಳ್ಳಲು ಪ್ರೋತ್ಸಾಹಿಸಬೇಕು.

ಭಾರತದ ವಿದೇಶಾಂಗ ನೀತಿಗೆ ಕೆಳಗಿನ ಸೂತ್ರಗಳು ಮಾರ್ಗದರ್ಶಕವಾಗಿವೆ. 1] ರಾಷ್ಟ್ರೀಯ ಹಿತಾಸಕ್ತಿ 2] ಅಹಿಂಸೆ 3] ಅಲಿಪ್ತನೀತಿ 4] ಪಂಚಶೀಲ 5] ಸಾಮ್ರಾಜ್ಯಶಾಹಿ ವಸಹಾತುವಾದ ವರ್ಣಭೇದಕ್ಕೆ ಸಮ್ಮತಿ ನೀಡದಿರುವಿಕೆ.

ಇವುಗಳಲ್ಲಿ ಅಲಿಪ್ತ ನೀತಿ ಮತ್ತು ಪಂಚಶೀಲ ತತ್ವಗಳೇ ಭಾರತದ ವಿದೇಶಾಂಗ ನೀತಿಯನ್ನು ರೂಪಿಸುವಲ್ಲಿ ಮುಖ್ಯ ಮಾರ್ಗದರ್ಶನ ಸೂತ್ರಗಳಾಗಿವೆ. ಅಲಿಪ್ತನೀತಿ ಪ್ರಪಂಚದಲ್ಲಿ ಅನೇಕ ಬಣಗಳಿವೆ. ಇವುಗಳಲ್ಲಿ ಯಾವ ಬಣಕ್ಕೆ ಸೇರದಿರುವದೇ ಅಲಿಪ್ತ ನೀತಿಯ ಗುರಿ. ಪ್ರಪಂಚದ ಅನೇಕ ರಾಷ್ಟ್ರಗಳು ಈ ಅಲಿಪ್ತ ನೀತಿಯನ್ನು ಒಪ್ಪಿ ಅಲಿಪ್ತ ನೀತಿಯ ಬಣಕ್ಕೆ ಸೇರಿವೆ. ಭಾರತವು ಈ ಸಂಸ್ಥೆಯ ಕಾರ್ಯಾಧ್ಯಕ್ಷವಾಗಿ ಕಾರ್ಯ ಮಾಡುತ್ತಿದೆ.

**ಪಂಚಶೀಲ :–** ಪಂಚಶೀಲ ಎಂದರೆ 5 ಬಗೆಯ ನೈತಿಕ ತತ್ವಗಳು 1) ಪರಸ್ಪರ ಭೂಭಾಗದ ಅಭೇದ್ಯತೆ ಮತ್ತು ಸಾರ್ವಭೌಮತ್ವಗಳಿಗೆ ಗೌರವ 2] ಆಕ್ರಮಣ ಮಾಡದೆ ಇರುವದು 3] ಪ್ರತಿ ರಾಷ್ಟ್ರದ ಆಂತರಿಕ ವ್ಯವಹಾರದಲ್ಲಿ ಕೈಹಾಕದಿರುವದು. 4) ರಾಷ್ಟ್ರ ಕ್ಷೇತ್ರ ಜನಸಂಖ್ಯೆ ಆರ್ಥಿಕ ಪರಿಸ್ಥಿತಿ ಇವು

ಗಳನ್ನು ಗಣನೆಗೆ ತರದೆ, ಸಮಾನ ಭಾವನೆಯಿಂದ ವ್ಯವಹರಿಸುವದು 5] ಶಾಂತ ರೀತಿಯ ಸಹಜೀವನ.

2] ದೇಶವು ಯುದ್ಧದಲ್ಲಿ ತೊಡಗಿದಾಗ ಪ್ರಜೆಗಳ ಎರಡು ಮುಖ್ಯ ಕರ್ತವ್ಯಗಳನ್ನು ತಿಳಿಸಿ.

**ಉತ್ತರ :** i) ಯುದ್ಧ ಸಮಯದಲ್ಲಿ ನಾಗರಿಕರು ಅನೇಕ ರೀತಿಯಲ್ಲಿ ರಾಷ್ಟ್ರಕ್ಕೆ ಸಹಾಯ ಮಾಡಬಹುದು. ಕೃಷಿ ಮತ್ತು ಕೈಗಾರಿಕಾ ಉತ್ಪನ್ನಗಳು ಯಾವದೇ ಕಾರಣದಿಂದ ಕಡಿಮೆಯಾಗದಂತೆ ಎಚ್ಚರಿಕೆಯಿಂದಿರಬೇಕು. ವಿದ್ಯುಚ್ಛಕ್ತಿ ಸ್ಥಾವರಗಳ ರಕ್ಷಣೆ ಸಾರ್ವಜನಿಕ ಉಪಯುಕ್ತ ಸೇವೆಗಳ ರಕ್ಷಣೆ ಮತ್ತು ಉತ್ಪನ್ನ ಹೆಚ್ಚಿಸುವದಕ್ಕೆ ತನಗೆ ಸಾಧ್ಯವಿರುವದನ್ನೆಲ್ಲಾ ಮಾಡಬೇಕು. ಲಾಭಕೋರರು ಮತ್ತು ಕಳ್ಳ ದಾಸ್ತಾನುಗಾರರನ್ನು ಅಡಗಿಸುವದು ನಾಗರಿಕನ ಪ್ರಥಮ ಕರ್ತವ್ಯ.

ii) ನಾಗರಿಕರು ಯುದ್ಧ ಸಮಯದಲ್ಲಿ ಸರ್ಕಾರದಿಂದ ಹೆಚ್ಚಿನದನ್ನು ಅಪೇಕ್ಷಿಸಬಾರದು. ಅವನು ರಾಷ್ಟ್ರಕ್ಕಾಗಿ ಯಾವದೇ ಕಷ್ಟವನ್ನು ಆಗಲಿ ಎದುರಿಸಲು ಸಿದ್ಧನಾಗಬೇಕು. ಸ್ವಸಹಕಾರದ ಮೂಲಕ ರಾಷ್ಟ್ರವನ್ನು ಬಲಪಡಿಸಬೇಕು.

3] ರಾಷ್ಟ್ರೀಯ ಚಳುವಳಿಗೆ ಬಾಲಗಂಗಾಧರ ತಿಲಕರ ಕೊಡುಗೆ ಏನು ?

**ಉತ್ತರ :** ಬಾಲಗಂಗಾಧರ ತಿಲಕರು ಕಾಂಗ್ರೆಸ್ಸಿನಲ್ಲಿಯ ಉಗ್ರಗಾಮಿಗಳ ನಾಯಕರಾಗಿದ್ದರು. ಅವರು ಶಿವಾಜಿ ಜಯಂತಿ ಮತ್ತು ಗಜಾನನ ಉತ್ಸವಗಳ ಮೂಲಕ ನಾಗರಿಕರಲ್ಲಿರಾಷ್ಟ್ರೀಯ ಭಾವನೆಗಳನ್ನು ಪ್ರಚಾರ ಮಾಡಿದರು. ತಮ್ಮ ಕೇಸರಿ ಪತ್ರಿಕೆಯ ಮೂಲಕ ಜನರನ್ನು ಧೈರ್ಯಶಾಲಿಗಳೂ, ಸ್ವಾವಲಂಬಿಗಳೂ ಮತ್ತು ನಿಸ್ವಾರ್ಥ ಹೋರಾಟಗಾರರೂ ಆಗುವಂತೆ ಪ್ರೋತ್ಸಾಹಿಸಿದರು. ಬಂಗಾಳದ ವಿಭಜನೆಯ ವಿರುದ್ಧ ಹೋರಾಟವನ್ನು ವ್ಯವಸ್ಥೆಗೊಳಿಸಿದರು. ಮುಂಬಯಿಯಲ್ಲಿ ಹೋಂ ರೂಲ್ ಲೀಗನ್ನು ಸ್ಥಾಪಿಸಿದರು. "ಸ್ವರಾಜ್ಯ ನನ್ನ ಆಜನ್ಮ ಸಿದ್ಧ ಹಕ್ಕು" ಎಂಬುದೇ ಅವರ ಘೋಷಣೆ.

 4) ತಮ್ಮ ದೇಶದ ಸ್ವಾತಂತ್ರ್ಯಕ್ಕೆ ಹೋರಾಡಿದ ಆಫ್ರಿಕದ ನಾಯಕರುಗಳಲ್ಲಿ ಕೆಲವರ ಹೆಸರನ್ನು ತಿಳಿಸಿ.

**ಉತ್ತರ :** ತಮ್ಮ ದೇಶದ ಸ್ವಾತಂತ್ರ್ಯಕ್ಕೆ ಹೋರಾಡಿದ ಆಫ್ರಿಕದ ನಾಯಕರುಗಳಲ್ಲಿ ಮುಖ್ಯರಾದವರೆಂದರೆ–ಲುಮುಂಬಾ, ಜೆಮೊ ಕೆನ್ಯಾಟ, ಎನ್‌ಕ್ರೂಮಾ, ಕೆನೆಟ್ ಬಿ ಕೌಂಡಾ, ಹೊನ್ಸಾರಿ ಭೋಮಿಡಿರ್.

5) 1916 ರ ಲಕ್ನೋ ಕಾಂಗ್ರೆಸ್ ಅಧಿವೇಶನದ ಮುಖ್ಯ ಪರಿಣಾಮವೇನು ?

**ಉತ್ತರ :** 1916 ರಲ್ಲಿ ಲಕ್ನೋದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನ ಬಹಳ ಮಹತ್ವದ್ದು. ಈ ಅಧಿವೇಶನದಲ್ಲಿ ಎರಡೂ ಹೋಂರೂಲ್ ಲೀಗಗಳು, ಕಾಂಗ್ರೆಸ್, ಮುಸ್ಲಿಂ ಲೀಗ್ ಇವನ್ನೆಲ್ಲ ಒಂದು ಗೂಡಿದವು. ಇವೆಲ್ಲ ಒಂದು ಗೂಡಿಸಲು ಲೋಕಮಾನ್ಯ ತಿಲಕರು ಲಕ್ನೋ ಒಪ್ಪಂದಕ್ಕೆ ಸಹಿ ಹಾಕಿದರು. ಇವೆಲ್ಲ ಒಂದು ಗೂಡಿ ಬ್ರಿಟಿಷರ ವಿರುದ್ಧ ಚಳುವಳಿ ಹೂಡಲು ಒಂದು ಸಾಮಾನ್ಯವಾದ ಕಾರ್ಯಕ್ರಮವನ್ನು ಹಾಕಿಕೊಂಡವು. ಇದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಭಾರತೀಯರನ್ನು ಬಂಧಿಸಿ ಬ್ರಿಟಿಶರು ಸೆರೆಮನೆಯಲ್ಲಿಟ್ಟರು. ಗಾಂಧೀಜಿಯವರ ಹೇಳಿಕೆಯ ಮೇರೆಗೆ ಮೊದಲನೆಯ ಜಾಗತಿಕ ಯುದ್ಧದಲ್ಲಿ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಭಾರತೀಯ ಸೈನಿಕರು ಮಹತ್ವದ ಸೇವೆ ಸಲ್ಲಿಸಿದ್ದರಿಂದ, ಬ್ರಿಟಿಷ್ ಸರಕಾರ 1919 ರಲ್ಲಿ ಮೊಂಟೆಗ್ಯೂ–ಚೇಮ್ಸ್ ಫರ್ಡ ಸುಧಾರಣೆಗಳ ಮೂಲಕ ಭಾರತೀಯರಿಗೆ ಜವಾಬ್ದಾರಿ ಸರ್ಕಾರವನ್ನು ನೀಡಲು ನಿರ್ಧರಿಸಿದರು.

6) ಆಫ್ರಿಕಾದಲ್ಲಿ ವರ್ಣಭೇದ ನೀತಿಯನ್ನು ಇನ್ನೂ ಅನುಸರಿಸುತ್ತಿರುವ ಎರಡು ರಾಜ್ಯಗಳ ಹೆಸರನ್ನು ತಿಳಿಸಿ.

**ಉತ್ತರ :** ದಕ್ಷಿಣ ಆಫ್ರಿಕದ ಗಣರಾಜ್ಯ ಮತ್ತು ರ್‍ಹೊಡೇಶಿಯಾಗಳು ವರ್ಣಭೇದ ನೀತಿಯನ್ನು ಇನ್ನೂ ಅನುಸರಿಸುತ್ತವೆ. ರ್‍ಹೊಡೇಶಿಯಾಕ್ಕೆ ರಾಷ್ಟ್ರೀಯ ವಾದಿಗಳು ಜಿಂಬಾಬ್ವೆ ಎಂದು ಹೆಸರಿಟ್ಟದ್ದಾರೆ.

IV. 1) ಸ್ವಾತಂತ್ರ್ಯ ಚಳುವಳಿಯಲ್ಲಿ ಜಲಿಯನ್‌ವಾಲಾ ಬಾಗ್ ಘಟನೆ ಏಕೆ ಪ್ರಾಮುಖ್ಯವಾಗಿದೆ ?

**ಉತ್ತರ :** ಬ್ರಿಟಿಷ್ ಪಾರ್ಲಿಮೆಂಟ 1919ರಲ್ಲಿ ರೌಲೆಟ್ ಕಾನೂನನ್ನು ಜಾರಿಯಲ್ಲಿ ತಂದಿತು. ರೌಲೆಟ್ ಕಾನೂನ ಪ್ರಕಾರ ಸಂಶಯಕ್ಕೆ ಒಳಗಾದ ವ್ಯಕ್ತಿಗಳನ್ನು ವಿಚಾರಣೆ ನಡೆಸದೆ ಅನಿರ್ದಿಷ್ಟ ಕಾಲದವರೆಗೆ ಸೆರೆಮನೆಯಲ್ಲಿ ಇಡಲು ಸರ್ಕಾರ ಅಧಿಕಾರವನ್ನು ಪಡೆಯಿತು. ಈ ಕಾನೂನಿನ ವಿರುದ್ಧ ದೇಶದಾದ್ಯಂತ ಚಳುವಳಿ ನಡೆಯಿತು. ಗಾಂಧೀಜಿಯವರು ಈ ಚಳುವಳಿಯಲ್ಲಿ ಧುಮುಕಿದರು. ಈ ಕಾನೂನನ್ನು ವಿರೋಧಿಸಿ 1919 ಎಪ್ರಿಲ್ 13 ರಂದು ಪಂಜಾಬಿನ ಜಲಿಯನ್ ವಾಲಾಬಾಗ್‌ನಲ್ಲಿ ಸಹಸ್ರಾರು ಜನ ಸಭೆ ಸೇರಿದ್ದರು. ಜಲಿಯನ್ ವಾಲಾಬಾಗ್ ಇದು ಅಮೃತಸರದಲ್ಲಿಯ ಆಯತಾಕಾರದ ಒಂದು ಬಯಲು. ಸುತ್ತಲೂ ಕಟ್ಟಡ ಒಂದೇ ಕಡೆ ಪ್ರವೇಶ, ಅಂದಿನ ಪಂಜಾಬಿನ ಧುರೀಣರಾದ ಡಾ|| ಕೀಚಲು, ಡಾ|| ಸತ್ಯಪಾಲ ಇವರನ್ನು ರೌಲೆಟ್ ಕಾನೂನ ಪ್ರಕಾರ ಕೈದು ಮಾಡಲಾಯಿತು. ಸಿಟ್ಟಿಗೆದ್ದ ಜನ ಡೆಪ್ಯೂಟಿ ಕಮೀಷನರ ಮನೆಯ ಕಡೆ ಧಾವಿಸಿದರು. ಸೈನಿಕರು ಗುಂಡು ಹಾರಿಸಿದರು. ಅನೇಕರು ಸತ್ತರು. ಜನರಲ್ ಡಯರ 1919 ಎಪ್ರಿಲ್ 12 ರಂದು ಮೆರವಣಿಗೆ ಸಭೆಗಳು ನಡೆಯಕೂಡದೆಂದು

ಆಜ್ಞೆ ಹೊರಡಿಸಿದನು. 13 ನೇ ಸಂಜೆ ಜಾಹೀರ ಸಭೆಯನ್ನು ಏರ್ಪಡಿಸಲಾಗಿತ್ತು. ಜನರಲ್ ಡಯರನು ಸುಸಜ್ಜಿತ ಸೈನ್ಯ ಸೊಂದಿಗೆ ಬಂದು ಜನರಿಗೆ ಯಾವ ಮುನ್ನೆಚ್ಚರಿಕೆ ಕೊಡದೆ ಗುಂಡು ಹಾರಿಸಲು ಆಜ್ಞೆ ಕೊಟ್ಟನು. 379 ಜನರು ಸತ್ತರು. 1100 ಜನರು ಗಾಯಗೊಂಡರು. ಇದರ ಪರಿಣಾಮವಾಗಿ ರವೀಂದ್ರನಾಥ ಟಾಗೋರರು ಬ್ರಿಟಿಷ್ ಸರಕಾರ ತಮಗೆ ಕೊಟ್ಟಿದ್ದ ನೈಟ್ ಪದವಿಯನ್ನು ತ್ಯಜಿಸಿದರು. ಭಾರತದಲ್ಲಿ ಚಳುವಳಿ ಮತ್ತಷ್ಟು ಉಗ್ರವಾಯಿತು.

2) ರಾಷ್ಟ್ರೀಯ ಭಾವೈಕ್ಯತೆಗೆ ಅಡ್ಡಿಮಾಡುತ್ತಿರುವ ಯಾವುದಾದರೂ ಎರಡು ಅಂಶಗಳನ್ನು ಹೆಸರಿಸಿ.

**ಉತ್ತರ :** ರಾಷ್ಟ್ರೀಯ ಭಾವೈಕ್ಯತೆಗೆ ಅನೇಕ ಅಡಚಣಿಗಳಿವೆ. ಜಾತಿ, ಮತ ಪಂಥಗಳು ಮುಖ್ಯ ಅಡಚಣೆಗಳು.

3) ವಿಶ್ವಸಂಸ್ಥೆಯ ಯಾವುದಾದರೂ ಎರಡು ಅಂಗಗಳ ಹೆಸರನ್ನು ತಿಳಿಸಿ.

**ಉತ್ತರ :** ವಿಶ್ವಸಂಸ್ಥೆಗೆ ಆರು ಅಂಗಗಳಿವೆ. ಅವುಗಳಲ್ಲಿ 1] ಸಾಮಾನ್ಯ ಸಭೆ, 2] ಭದ್ರತಾ ಸಮಿತಿ ಮುಖ್ಯ ಅಂಗಗಳು.

4) ಸ್ಥಳೀಯ ಸರ್ಕಾರವೆಂದರೇನು ?

**ಉತ್ತರ :** ಪ್ರಜೆಗಳಿಂದಲೇ ಆಡಳಿತ ನಡೆಸಲ್ಪಡುವ ಒಂದು ಚುನಾಯಿತ ಸರ್ಕಾರಕ್ಕೆ ಸ್ಥಳೀಯ ಸರಕಾರವೆನ್ನುತ್ತಾರೆ. ಉದಾಹರಣೆ— ಗ್ರಾಮ ಪಂಚಾಯತಿ, ಮಂಡಲ ಪಂಚಾಯತಿ, ತಾಲೂಕಾ ಬೋರ್ಡ, ನಗರಸಭೆ.

5] ಮಾರ್ಟಿನ್ ಲೂಥರನು ಪ್ರಾರಂಭಿಸಿದ ಧರ್ಮ ಸುಧಾರಣೆ ಎಂದರೇನು ?

**ಉತ್ತರ :** 15 ಮತ್ತು 16 ನೇ ಶತಮಾನಗಳಲ್ಲಿ ಯುರೋಪಿನಲ್ಲಿ ರೋಮನ್ ಕ್ಯಾಥೋಲಿಕ್ ಚರ್ಚದ ಪೋಪರೇ ಅನೇಕ ಅವ್ಯವಹಾರಗಳಲ್ಲಿ ತೊಡಗಿದ್ದರು. ಅವರ ದೋಷಗಳನ್ನು ವಿರೋಧಿಸಲು ಮಾರ್ಟಿನ್ ಲೂಥರ ಚಳುವಳಿ ಪ್ರಾರಂಭಿಸಿದನು. ಈ ಚಳುವಳಿಗೆ "ಧಾರ್ಮಿಕ ಸುಧಾರಣಾ ಚಳುವಳಿ"ಎನ್ನುತ್ತಾರೆ.

V a) ಖಾಲಿ ಜಾಗಗಳನ್ನು ಭರ್ತಿಮಾಡಿ (ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ)

1) ಭಾರತದಲ್ಲಿ ಇಂಗ್ಲಿಷ್ ಅಭ್ಯಾಸವನ್ನು ಪ್ರಾರಂಭಿಸಿದವನು............[ಲಾರ್ಡ ವಿಲಿಯಂಬೆಂಟಿಂಕ್]

2) ಭಾರತದಲ್ಲಿ ಸಿಖ್ಖರ ರಾಜ್ಯ ಸ್ಥಾಪಕ............ (ರಣಜಿತ್‌ಸಿಂಗ್)

3) ಜವಾಹರಲಾಲ್ ನೆಹರುರವರು ತಮ್ಮ "ಭಾರತ ದರ್ಶನ"ದಲ್ಲಿ ಸಿಪಾಯಿ ದಂಗೆಯನ್ನು........ಎಂದು ಕರೆದಿದ್ದಾರೆ. (ಜನಪ್ರಿಯ ಬಂಡಾಯದ ಮತ್ತು ಸ್ವಾತಂತ್ರ್ಯ ಸಮರದ ಲಕ್ಷಣಗಳನ್ನು ಪಡೆದ 1857 ರ ಮಹಾದಂಗೆ)

4) ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ನೀತಿಯನ್ನು ಜಾರಿಗೆ ತಂದವನು......(ಲಾರ್ಡಡಾಲಹೌಸಿ).

5) ಸತಿಪದ್ಧತಿಯನ್ನು ರದ್ದುಪಡಿಸಿದ ಭಾರತದ ಗವ್ಹರ್ನರ್ ಜನರಲ್‌ನು.......[ಲಾರ್ಡ ವಿಲಿಯಂ ಬೆಂಟಿಂಕ್]

6) ಮರಾಠರ ರಾಜ್ಯವನ್ನು ಸ್ಥಾಪಿಸಿದನನು....... [ಶಿವಾಜಿ]

7) ಭಾರತ ಸೇನಾಪಡೆಗಳ ಸರ್ವೋಚ್ಛ ಸೇನಾಪತಿ.... [ರಾಷ್ಟ್ರಪತಿ]

VI. ಹೇಳಿಕೆಗಳನ್ನು ಸರಿಪಡಿಸಿ.

1) ಸಿಪಾಯಿ ದಂಗೆಗೆ ಬಹಳ ಮುಖ್ಯ ಪಾತ್ರವಹಿಸಿದವನು ದಯಾನಂದ ಸರಸ್ವತಿ/ನಾನಾಸಾಹೇಬ.

**ಉತ್ತರ :** ನಾನಾಸಾಹೇಬ ಸಿಪಾಯಿ ದಂಗೆಗೆ ಬಹಳ ಪ್ರಾಮುಖ್ಯ ಪಾತ್ರ ವಹಿಸಿದನು.

2) ಮೈಸೂರಿನ ಹುಲಿ ಶಿವಾಜಿ/ಟಿಪ್ಪು ಸುಲ್ತಾನ.

**ಉತ್ತರ :** ಮೈಸೂರಿನ ಹುಲಿ ಟಿಪ್ಪು ಸುಲ್ತಾನ.

3) ಪಿಂಡಾರಿಯವರನ್ನು ಅಡಗಿಸಿದ ಗವ್ಹರ್ನರ್ ಜನರಲ್ ಲಾರ್ಡಮಿಂಟೊ/ಲಾರ್ಡವೆಲ್ಲಸ್ಲಿ.

**ಉತ್ತರ :** ಪಿಂಡಾರಿಯವರನ್ನು ಅಡಗಿಸಿದ ಗವ್ಹರ್ನರ್ ಜನರಲ್ ಲಾರ್ಡಮಿಂಟೊ.

4) ಸರ್ವೆಂಟ್ಸ ಆಫ್ ಇಂಡಿಯಾ ಸೊಸೈಟಿಯನ್ನು ಸ್ಥಾಪಿಸಿದವರು ಗೋಪಾಲ ಕೃಷ್ಣ ಗೋಖಲೆ/ರಾಜಾರಾಮ ಮೋಹನರಾಯ.

**ಉತ್ತರ :** ಸರ್ವೆಂಟ್ಸ ಆಫ್ ಇಂಡಿಯಾ ಸೊಸೈಟಿಯನ್ನು ಸ್ಥಾಪಿಸಿದವರು ಗೋಪಾಲಕೃಷ್ಣ ಗೋಖಲೆ.

—◎—

# ಸಮಾಜ ಪಾಠಗಳು

## ಎಪ್ರಿಲ್–1984 2 ನೆಯ ಪತ್ರಿಕೆ

## [ ಭೂ–ವಿವರಣೆ ]

IMP 1) ಆಧುನಿಕ ತಯಾರಿಕಾ ಕೈಗಾರಿಕೆ ಎಂದರೇನು ? ಹಾಗೂ ಅದರ ಲಕ್ಷಣಗಳಾವವು ?

**ಉತ್ತರ :** ಮೂಲ ಕಚ್ಚಾ ವಸ್ತುಗಳ ಸ್ವರೂಪ ಮತ್ತು ಸ್ವಭಾವಗಳನ್ನು ಬದಲಾಯಿಸಿ ಅವುಗಳನ್ನು ಸಿದ್ಧವಸ್ತುಗಳನ್ನಾಗಿ

ಮಾರ್ಪಡಿಸುವ ಚಟುವಟಿಕೆಗಳಿಗೆ ಆಧುನಿಕ ರೀತಿಯ ತಯಾರಿಕಾ ಕೈಗಾರಿಕೆ ಎನ್ನುತ್ತಾರೆ. ಇದು ಕಾರ್ಖಾನೆಗಳಲ್ಲಿ ಯಂತ್ರಗಳಿಂದ ನಡೆಯುತ್ತದೆ. ಇದಕ್ಕೆ ಹೆಚ್ಚು ಬಂಡವಾಳ ಬೇಕು. ಹೊಸ ವೈಜ್ಞಾನಿಕ ಮತ್ತು ತಾಂತ್ರಿಕ ವಿಧಾನಗಳನ್ನು ಅಳವಡಿಸಬೇಕು. ಹೀಗೆ ಅಧಿಕವಾದ ವಿದ್ಯುಚ್ಛಕ್ತಿಯ ಬಳಕೆ, ಬೃಹತ್ ಪ್ರಮಾಣದಲ್ಲಿ ಉದ್ಯೋಗಾವಕಾಶ, ಕೆಲಸದ ಹಂಚಿಕೆ, ದಕ್ಷತೆಯಿಂದ ಕೆಲಸ ನಿರ್ವಹಿಸುವ ಕೆಲಸಗಾರರು ಮತ್ತು ಉಪಕರಣಗಳು, ಕಡಿಮೆ ವೆಚ್ಚದಲ್ಲಿ ನಿರ್ದಿಷ್ಟ ಮಟ್ಟದ ಉತ್ಪನ್ನಗಳನ್ನು ಬೃಹತ್ ಪ್ರಮಾಣದಲ್ಲಿ ಉತ್ಪಾದಿಸುವುದು. ಸಿದ್ಧ ವಸ್ತುಗಳನ್ನು ಸ್ಥಳೀಯ ಮತ್ತು ದೂರದ ಮಾರುಕಟ್ಟೆಗೆ ರವಾನಿಸುವುದು ಇವು ಆಧುನಿಕ ತಯಾರಿಕಾ ಕೈಗಾರಿಕೆಯ ವೈಶಿಷ್ಟ್ಯಗಳಾಗಿವೆ.

**ಅಥವಾ**

ಜನಸಂಖ್ಯೆಯ ಅಸಮಾನ ಹಂಚಿಕೆಗೆ ಕಾರಣವಾದ ಭೌಗೋಳಿಕ ಅಂಶಗಳಾವವು ?

**ಉತ್ತರ :** ಭಾರತದಲ್ಲಿ ಜನಸಾಂದ್ರತೆಯು ಒಂದೇ ಸಮನಾಗಿಲ್ಲದಿರುವದಕ್ಕೆ ಕಾರಣಗಳು—

i) ಭಾರತವು ಒಂದು ಉಪಖಂಡವು ವಿಶಾಲವಾದ ನಾಡು, ವೈವಿಧ್ಯಮಯ ರಚನೆ.ಹಿಮಾಲಯಅತ್ಯುನ್ನತವಾದದ್ದು, ನದಿಗಳ ಬಯಲು ಇದು ಪುರಾತನಕಾಲದಿಂದ ದಟ್ಟ ಜನವಸತಿಯುಳ್ಳ ಪ್ರದೇಶ. ದೀರ್ಘ ಕರಾವಳಿ ಭೂರಚನೆಗೆ ತಕ್ಕಂತೆ ಜನವಸತಿ ii) ಭೂರಚನೆಗೆ ಅನುಸಾರವಾಗಿ ಹವಾಗುಣ. ಹಿಮಾಲಯಪ್ಪಲ್ಲಿ ಅತಿ ಶೀತ.ರಾಜಸ್ತಾನದಲ್ಲಿ ವಿಷಮ. ದಕ್ಷಿಣದಲ್ಲಿ ಉಷ್ಣ ಅಲ್ಹಾದಕರ ಹವಾಮಾನದಲ್ಲಿ ದಟ್ಟ ಜನವಸತಿ. ಉತ್ತರ ಪ್ರದೇಶದಲ್ಲಿ ಜನವಸತಿ ದಟ್ಟ. ಕೇರಳ ಕರಾವಳಿಯಲ್ಲಿದಟ್ಟ ಜನಸಾಂದ್ರತೆ iii) ಕೈಗಾರಿಕಾ ಪ್ರದೇಶಗಳಲ್ಲಿ ನಗರಗಳ ಉದಯ. ದಟ್ಟ ಜನವಸತಿ ಬಿಹಾರ ಕೈಗಾರಿಕಾ ಕ್ಷೇತ್ರದಲ್ಲಿ ಕಲಕತ್ತಾ ಸುತ್ತಲಿನ ಕೈಗಾರಿಕಾ ಕ್ಷೇತ್ರದಲ್ಲಿ ನಗರಗಳು ಉದಯವಾಗಿವೆ.

iv) ನೀರಾವರಿ ಯೋಜನೆಗಳುಳ್ಳ ಪ್ರದೇಶದಲ್ಲಿ ಸಾಕಷ್ಟು ನೀರು. ಎರಡೆರಡು ಬೆಳೆಗಳು ವ್ಯವಸಾಯ ದೊಡ್ಡ ಪ್ರಮಾಣದಲ್ಲಿ, ಜನಸಾಂದ್ರತೆ ಹೆಚ್ಚು.

v) ಸಂಚಾರ ಸಂಪರ್ಕ ಸೌಕರ್ಯಗಳು ಬೆಳೆಯದಿದ್ದಲ್ಲಿ ಆರ್ಥಿಕ ಚಟುವಟಿಕೆಗಳು ನಡೆಯಲಾರವು. ತೀರ ಕಡಿಮೆ ಜನವಸತಿ.

vi) ಭೂಮಿ ಫಲವತ್ತಾಗಿದ್ದರೆ ಹೆಚ್ಚು ದಟ್ಟ ಜನವಸತಿಗೆ ಆರ್ಥಿಕ ಚಟುವಟಿಕೆಗಳನ್ನು ಪೂರೈಸುವದು. ಕಬ್ಬು, ಚಹಾ, ಕಾಫಿ ತೋಟಗಳಲ್ಲಿ ಜನರ ದುಡಿಮೆ ಹೆಚ್ಚು, ವಸತಿ ಹೆಚ್ಚು.

vii) ಸರ್ವಋತು ಬಂದರಗಳಿದ್ದು ಫಲವತ್ತಾದ ಅಥವಾ ಕೈಗಾರಿಕೆಗಳಿದ್ದ ಹಿನ್ನಾಡುಗಳಿದ್ದರೆ ಜನಸಾಂದ್ರತೆ ದಟ್ಟ, ಉದಾಹರಣೆ—ಮುಂಬೈ.

ಹೀಗೆ ಉತ್ತರ ಭಾರತದ ಮೈದಾನ ಪ್ರದೇಶ, ಗೋದಾವರಿ ಕೃಷ್ಣ ಮತ್ತು ಕಾವೇರಿ ನದಿಗಳ ಮುಖಜ ಭೂಮಿಗಳಲ್ಲಿ ಜನಸಂಖ್ಯೆ ಹೆಚ್ಚಾಗಿದೆ. ಹಳ್ಳ ತಿಟ್ಟುಗಳು, ಅನಾರೋಗ್ಯ ಪ್ರದೇಶ, ದಖನ್ ಪ್ರಸ್ಥಭೂಮಿಯಂತಹ ಬಂಜರು ಭೂಮಿ, ರಾಜಸ್ಥಾನದಂತಹ ಮರಳು ಭೂಮಿ ಮೊದಲಾದ ಪ್ರದೇಶಗಳಲ್ಲಿ ಜನಸಂಖ್ಯೆ ಅತಿವಿರಳ. ಪಶ್ಚಿಮ ಬಂಗಾಲ, ಬಿಹಾರ, ಉತ್ತರ ಪ್ರದೇಶ, ತಮಿಳುನಾಡು, ಕೇರಳದಲ್ಲಿ ಜನಸಾಂದ್ರತೆ ಹೆಚ್ಚು.

2) ಭಾರತವು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರವೆಂದು ಪರಿಗಣಿಸಲ್ಪಡುತ್ತದೆ. ಕಾರಣ ಕೊಡಿರಿ.

**ಉತ್ತರ :** ಅಭಿವೃದ್ಧಿಯನ್ನು ನಿರ್ಧರಿಸುವ ಮುಖ್ಯ ಸಂಗತಿಗಳನ್ನು ಪರಿಶೀಲಿಸಿದರೆ ಭಾರತದ ಸ್ಥಿತಿಯು ಗೊತ್ತಾಗುವದು.

1] ತಲಾ ಆದಾಯ : ಭಾರತದಲ್ಲಿ ತಲಾ ಆದಾಯವು 100 ಡಾಲರಿಗಿಂತ ಕಡಿಮೆ, ಹೆಚ್ಚು ಬಡತನದ ರಾಷ್ಟ್ರ 2) ಪ್ರಾಕೃತಿಕ ಸಂಪನ್ಮೂಲಗಳನ್ನು ಪೂರ್ಣ ಉಪಯೋಗದಲ್ಲಿ ಭಾರತವು ತಂದಿಲ್ಲ. ಆದ್ದರಿಂದ ಇದು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರ. ವ್ಯವಸಾಯವೇ ರಾಷ್ಟ್ರೀಯ ಆದಾಯದ ಮುಖ್ಯ ಭಾಗ ಆದ್ದರಿಂದ ಭಾರತವು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರ. 4] ಕೈಗಾರಿಕೆಗಳಿಗೆ ರಾಷ್ಟ್ರೀಯ ಆದಾಯದಲ್ಲಿ ಹೆಚ್ಚು ಪಾಲು ಇಲ್ಲ. ಆದ್ದರಿಂದ ಭಾರತವು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರ. 5] ಉಳಿದ ಅಂಶಗಳಲ್ಲಿ ಎಲ್ಲ ಭಾರತೀಯರಿಗೂ ಉದ್ಯೋಗವಿಲ್ಲ, ವಿದ್ಯಾಭ್ಯಾಸ ಶೇಕಡಾ 40 ದಾಟಿರುವದಿಲ್ಲ. ತಾಂತ್ರಿಕ ವಿಜ್ಞಾನ ಈಗ ಬೆಳೆಯುತ್ತಲಿದೆ. ಮಿತಿಮೀರಿದ ಜನಸಂಖ್ಯೆ, ಜನಸಂಖ್ಯೆಯನ್ನು ಹಿಡಿತದಲ್ಲಿ ತರಲು ಇನ್ನೂ ಪ್ರಯತ್ನಗಳು ನಡೆದಿವೆ.

**ಅಥವಾ**

ಹಿನ್ನಾಡು ಎಂದರೇನು ? ರೇವುಗಳ ಅಭಿವೃದ್ಧಿಗೆ ಇದು ಹೇಗೆ ಸಹಾಯವಾಗಿದೆ ?

**ಉತ್ತರ :** ಬಂದರಿನ ಆಳವಿನಲ್ಲಿರುವ ಸುತ್ತಮುತ್ತಲಿನ ಪ್ರದೇಶಕ್ಕೆ ಹಿನ್ನಾಡು (Hinterland) ಎನ್ನುವರು. ಹಿನ್ನಾಡು ರೇವುಗಳ ಅಭಿವೃದ್ಧಿಗೆ ಸಹಾಯವಾಗುತ್ತದೆ. ರಫ್ತಾಗುವ ಸರಕುಗಳನ್ನು ಒದಗಿಸುವದು. ಆಮದಾದ ಸರಕುಗಳನ್ನು

ಒಳನಾಡಿನಲ್ಲಿ ಹಂಚುವದು. ಹಿನ್ನಾಡಿನಲ್ಲಿ ಖನಿಜ ಸಂಪತ್ತಿರಬೇಕು. ಸಂಚಾರ ಸೌಕರ್ಯಗಳಿರಬೇಕು ಹಿನ್ನಾಡು ಉತ್ಪಾದನೆಯ ಕೇಂದ್ರವಾಗಿರಬೇಕು. ಕಚ್ಚಾ ವಸ್ತುಗಳನ್ನು ಒದಗಿಸುವಂತಹದು ಇರಬೇಕು.

ಉದಾ : ಮುಂಬೈ–ಪ್ರಮುಖ ಸ್ವಾಭಾವಿಕ ಬಂದರು, ರೈಲು ಮತ್ತು ವಾಯು ಮಾರ್ಗ, ಉತ್ತಮ ರಸ್ತೆ, ಸಂಪರ್ಕ ಸಾಕಷ್ಟು, ಅಂತರ ರಾಷ್ಟ್ರೀಯ ವ್ಯಾಪಾರ.

ಕಲಕತ್ತಾ–ಹಿನ್ನಾಡಿನಲ್ಲಿ, ಚಹಾ, ಸಣಬು, ಖನಿಜಗಳು, ಸಿದ್ಧವಸ್ತುಗಳು, ಮೈಕಾ, ಕಲ್ಲಿದ್ದಲಿ, ಕಬ್ಬಿಣ, ಸಂಚಾರ ಸೌಕರ್ಯ, ಅಂತರರಾಷ್ಟ್ರೀಯ ಸಂಪರ್ಕ. ಎಂಜನಿಯರಿಂಗ ಸಾಮುಗ್ರಿಗಳ ಉತ್ಪಾದನೆ. ಅದರಂತೆ ನ್ಯೂಯಾರ್ಕ–ಆದರ್ಶ ಹಿನ್ನಾಡಿನಲ್ಲಿದೆ.

III. ಇವುಗಳಿಗೆ ಉತ್ತರಗಳನ್ನು ಬರೆಯಿರಿ.

1] ಪ್ರಪಂಚದಲ್ಲಿ ಒಳನಾಡಿನ ಜಲಮಾರ್ಗಗಳಾವವು ?

ಉತ್ತರ : ಅಮೆಜಾನ್, ಮಿಸ್ಸಿಸಿಪಿ, ಸೆಂಟಲಾರೆನ್ಸ್, ಡಾನ್ಯೂಬ್, ರೈನ್, ಮೊಲ್ಗ, ನೈಜರ್, ನೈಲ್, ಬ್ರಹ್ಮಪುತ್ರಾ, ಐರಾವತಿ, ಹೋ ಆಂಗ ಹೊ ಮುಂತಾದ ನದಿಗಳು ಒಳನಾಡಿನ ಜಲಮಾರ್ಗಗಳಾಗಿವೆ. ಸಂಪೀರಿಯರ್, ಮಿಚಗನ್, ಹ್ಯೂರನ್, ಈರಿ ಮತ್ತು ಅಂಟೇರಿಯಾ ಈ ಸರೋವರಗಳು ಕೂಡ ಒಳನಾಡಿನ ಜಲಮಾರ್ಗಗಳನ್ನು ಹೊಂದಿವೆ. ಕಾನ್ಸ್ಟೆನ್ಸ್, ನ್ಯಾಸ್ ತಾಂಗಾನೀಕಾ ಮತ್ತು ವಿಕ್ಟೋರಿಯಾ ಸರೋವರಗಳು ಒಳನಾಡಿನ ಜಲಮಾರ್ಗಗಳನ್ನು ಹೊಂದಿವೆ.

2) ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ರಾಷ್ಟ್ರೀಯ ಹೆದ್ದಾರಿಗಳ ಲಕ್ಷಣಗಳನ್ನು ಹೇಳಿರಿ.

ಉತ್ತರ : ಆರ್ಥಿಕ ಅಭಿವೃದ್ಧಿಯಲ್ಲಿ ಹೆದ್ದಾರಿಗಳು ಬಹು ಮುಖ್ಯ ಪಾತ್ರವನ್ನು ವಹಿಸುತ್ತವೆ. ಅಮೇರಿಕ ಸಂಯುಕ್ತ ಸಂಸ್ಥಾನಗಳು, ಯುರೋಪ್, ಜಪಾನ್ ದೇಶದ ಹೆದ್ದಾರಿಗಳು ಏಕ ಕಾಲವಲ್ಲಿ ಎಂಟು ವಾಹನಗಳು ಪ್ರತಿಯೊಂದು ದಿಕ್ಕಿನಲ್ಲಿ ನಾಲ್ಕರಂತೆ ಹೋಗುವಷ್ಟು ವಿಶಾಲವಾಗಿವೆ. ತ್ರಿವೇಸ್ ಎಂಬ ಹೆದ್ದಾರಿ ಪ್ರತಿಯೊಂದು ದಿಕ್ಕಿನಲ್ಲಿ ಏಕಕಾಲದಲ್ಲಿ ಆರುವಾಹನಗಳ ಸಂಚಾರಕ್ಕೆ ಆಸ್ಪದ ನೀಡುತ್ತದೆ, ಅಡ್ಡ ರಸ್ತೆಗಳನ್ನು ಹಾದು ಹೋಗಲು ರಸ್ತೆಗಳಲ್ಲಿ ಸೇತುವೆಗಳನ್ನು ನಿರ್ಮಿಸಲಾಗಿದೆ. ಈ ಎಲ್ಲ ಹೆದ್ದಾರಿಗಳು ವೇಗವಾದ ಸಂಚಾರಕ್ಕೆ ಅನುಕೂಲವಾಗಿವೆ.

3) ಜಪಾನದ ಕೈಗಾರಿಕಾ ಪ್ರದೇಶಗಳಾವವು ?

ಉತ್ತರ : ಜಪಾನದ ಮುಖ್ಯ ಕೈಗಾರಿಕಾ ಪ್ರದೇಶಗಳು ಯಾವವೆಂದರೆ : ಟೋಕಿಯೋ, ಯಾಕೋಹಾಮ್ ಪ್ರದೇಶ, ನಗೋಯಿ ಪ್ರದೇಶ, ಒಸಾಕಾ ಕೊಂಬೆ ಪ್ರದೇಶ, ಉತ್ತರ ಕಿಯಾಷು ಕ್ಷೇತ್ರ, ಕಾನ್ಯುಷಿ, ಮುರೂರನ್ ಕ್ಷೇತ್ರ.

4) ಭಾರತದ ಪ್ರಮುಖ ಆಮದು ಮತ್ತು ರಫ್ತುಗಳನ್ನು ತಿಳಿಸಿರಿ.

ಉತ್ತರ : ಭಾರತದ ರಫ್ತುಗಳು–ಹತ್ತಿ, ಸಣಬು, ಚಹಾ, ಚರ್ಮದ ವಸ್ತುಗಳು, ಹೊಗೆಸೊಪ್ಪು, ಸಾಂಬಾರದ ಪದಾರ್ಥಗಳು, ಅಭ್ರಕ, ಕಾಫಿ, ಮ್ಯಾಂಗನೀಸ್, ಕಬ್ಬಿಣದ ಅದಿರು, ಬೈಸಿಕಲ್, ಹೊಲಿಗೆ ಯಂತ್ರ, ಸಕ್ಕರೆ, ಗೋಡಂಬಿ ಮತ್ತು ಹಿಂಡಿ ಇವು ಭಾರತದಿಂದ ರಫ್ತಾಗುತ್ತಿರುವ ವಸ್ತುಗಳು.

ಭಾರತದ ಆಮದುಗಳು : ಕೈಗಾರಿಕೆಯ ಕಚ್ಚಾ ವಸ್ತುಗಳು, ಯಂತ್ರಗಳು, ಉಪಕರಣಗಳು, ಉಕ್ಕು, ಪೆಟ್ರೋಲಿಯಂ, ರಾಸಾಯನಿಕ ವಸ್ತುಗಳು, ಕೃತಕಗೊಬ್ಬರ, ತಾಮ್ರ, ಕಾಗದ, ವನಸ್ಪತಿ, ಔಷಧಿ ಇವುಗಳನ್ನು ಆಮದು ಮಾಡಿಕೊಳ್ಳುತ್ತದೆ.

5) ಗಣಿಗಾರಿಕೆಯ ವಿಧಗಳು ಯಾವವು ?

ಉತ್ತರ : ಗಣಿಗಾರಿಕೆಯಲ್ಲಿ ಭೂಮಿಯ ಮೇಲ್ಭಾಗದ ಅಥವಾ ತೆರೆದ ಗುಂಡಿಗಳ ಗಣಿಗಾರಿಕೆ ಮತ್ತು ಭೂಮಿಯನ್ನು ಆಳವಾಗಿ ಅಗೆದು ತೆಗೆಯುವ ಗಣಿಗಾರಿಕೆ ಎಂಬ ಎರಡು ಪ್ರಕಾರಗಳಿವೆ.

IV. ಕೆಳಗಿನವುಗಳಿಗೆ ಕಾರಣ ಕೊಡಿರಿ.

1) ಡೆನ್ಮಾರ್ಕವು ಹೈನುಗಾರಿಕೆಯ ಉದ್ದಿಮೆಗೆ ಪ್ರಸಿದ್ಧವಾಗಿದೆ.

ಉತ್ತರ : ಡೆನ್ಮಾರ್ಕದಲ್ಲಿ ದನಕರುಗಳಿಗೆ ಅವಶ್ಯಕವಾದ ಹುಲ್ಲು ಹೆಚ್ಚಾಗಿ ಬೆಳೆಯುವ ಪ್ರದೇಶಗಳಿವೆ. ಅಲ್ಲಿ ತೇವದಿಂದ ಕೂಡಿದ ತಂಪು ಹವಾಗುಣವಿದೆ. ದನಕರುಗಳನ್ನು ವೈಜ್ಞಾನಿಕ ಕ್ರಮದಿಂದ ಸಾಕುತ್ತಾರೆ. ಅಲ್ಲಿಯ ಸರ್ಕಾರವೂ ತನ್ನ-ಸಹಕಾರ ನೀತಿಯ ಅನುಕರಣೆಯಿಂದ ಹೈನು ಉತ್ಪಾದನೆಯನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸುತ್ತದೆ. ಸಮೀಪದಲ್ಲಿ ಯುರೋಪ ದೇಶಗಳ ಮಾರುಕಟ್ಟೆಗಳಿವೆ.

2) ಪನಾಮಾ ಕಾಲುವೆಯಲ್ಲಿ "ಲಾಕ್" ಎಂಬ ಸಾಧನವನ್ನು ಅಳವಡಿಸುವದು ಅತ್ಯವಶ್ಯಕವಾಗಿದೆ.

ಉತ್ತರ : ಏಕೆಂದರೆ ಈ ಕಾಲುವೆಯು ಸಮುದ್ರಮಟ್ಟಕ್ಕಿಂತ 25 ಮೀಟರ ಎತ್ತರದಲ್ಲಿದೆ. ಆದ್ದರಿಂದ ಹಡಗುಗಳನ್ನು ಸಮುದ್ರದ ನೀರಿನ ಮಟ್ಟಕ್ಕೆ ಏರಿಸಲು ಮತ್ತು ಇಳಿಸಲು ಈ ಕಾಲುವೆಯಲ್ಲಿ "ಲಾಕ್" ಸಾಧನವನ್ನು ಅಳವಡಿಸಲಾಗಿದೆ.

3) ಮಧ್ಯ ಏಸಿಯಾದಲ್ಲಿ ರಸ್ತೆಗಳು ವ್ಯಾಪಕವಾಗಿಲ್ಲ.

ಉತ್ತರ : ಮಧ್ಯ ಏಶಿಯಾ ಪ್ರದೇಶವು ಹಳ್ಳ ತಿಟ್ಟುಗಳಿಂದ, ಕಾಡು, ಮರುಭೂಮಿಯಿಂದ ಕೂಡಿರುವದು. ಇಲ್ಲಿ ಜನ

ಸಂಖ್ಯೆಯೂ ಕಡಿಮೆ. ಆದ್ದರಿಂದ ಈ ಪ್ರದೇಶವು ವಿಸ್ತಾರವಾದ ರಸ್ತೆಗಳನ್ನು ಹೊಂದಿರುವದಿಲ್ಲ.

4) ಪ್ರಪಂಚದ ಬಹಳಷ್ಟು ಜನಸಂಖ್ಯೆಯು ಉತ್ತರ ಗೋಲಾರ್ಧದಲ್ಲಿ ಕೇಂದ್ರೀಕೃತವಾಗಿದೆ.

ಉತ್ತರ : ಈ ಪ್ರದೇಶವು ಬಹಳ ಫಲವತ್ತಾದ ಮಣ್ಣು ಮತ್ತು ಸಮರ್ಪಕವಾಗಿ ನೀರಿನ ಸೌಲಭ್ಯ ಮತ್ತು ಹಿತಕರವಾದ ಹವಾಮಾನ ಹೊಂದಿರುವ ಕೃಷಿ ಪ್ರದೇಶವಾಗಿದೆ. ಅಲ್ಲದೆ ಪ್ರಮುಖ ಕಣಿವೆಗಳು ಇಲ್ಲಿವೆ. ಆದ್ದರಿಂದ ಇಲ್ಲಿ ಬಹಳಷ್ಟು ಜನಸಂಖ್ಯೆ ಕೇಂದ್ರೀಕೃತವಾಗಿದೆ.

5) ಸಣಬಿನ ಕೈಗಾರಿಕೆಯು ಪಶ್ಚಿಮ ಬಂಗಾಲದಲ್ಲಿ ಕೇಂದ್ರೀಕೃತವಾಗಿದೆ.

ಉತ್ತರ : ಪಶ್ಚಿಮ ಬಂಗಾಲದಲ್ಲಿ ಅತ್ಯಂತ ಹೆಚ್ಚು ಸಣಬು ಬೆಳೆಯುವ ಪ್ರದೇಶವಿದೆ ಮತ್ತು ಅಲ್ಲಿಯೇ ಅನೇಕ ಸಣಬಿನ ಗಿರಣಿಗಳಿವೆ.

6) ಅಂತರರಾಷ್ಟ್ರೀಯ ವ್ಯಾಪಾರವು ಒಂದು ದೇಶದ ಆರ್ಥಿಕ ಪ್ರಗತಿಯ ಸಂಕೇತವಾಗಿದೆ.

ಉತ್ತರ : ಅಂತರರಾಷ್ಟ್ರೀಯ ವ್ಯಾಪಾರವು ಒಂದು ದೇಶದ ಪ್ರಾಕೃತಿಕ ಸಂಪನ್ಮೂಲಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಲು ಸಹಾಯ ಮಾಡುತ್ತಿದೆ. ಹೆಚ್ಚುವರಿ ಉತ್ಪಾದನೆ ಹೊಂದಿರುವ ದೇಶಗಳು ಅಭಾವವಿರುವ ಪ್ರದೇಶಗಳಿಗೆ ಪದಾರ್ಥಗಳನ್ನು ರಫ್ತುಮಾಡುವದರಿಂದ ಒಂದು ದೇಶದ ರಾಷ್ಟ್ರೀಯ ಆದಾಯ ಹೆಚ್ಚಾಗುತ್ತದೆ. ಆದ್ದರಿಂದ ಹೆಚ್ಚು ಅಂತರರಾಷ್ಟ್ರೀಯ ವ್ಯಾಪಾರವನ್ನು ಹೊಂದಿದ ರಾಷ್ಟ್ರವನ್ನು ಅತಿ ಆರ್ಥಿಕವಾಗಿ ಪ್ರಗತಿಹೊಂದಿದ ರಾಷ್ಟ್ರ ಎಂದು ಪರಿಗಣಿಸಲಾಗುತ್ತದೆ.

V A) ಖಾಲಿ ಜಾಗಗಳನ್ನು ಭರ್ತಿಮಾಡಿ (ಉತ್ತರಗಳನು ಆವರಣದಲ್ಲಿ ಕೊಡಲಾಗಿದೆ.)

1) ಭೂಮಿಯ ಅಕ್ಷವು ಭೂಕಕ್ಷೆಯ ಮೇಲ್ಮೈಗೆ ಲಂಬವಾಗಿ.........ಯಷ್ಟು ಪ್ರವರ್ಣಕೆಯನ್ನು ಹೊಂದಿದೆ (33°-30°)

2) ಉತ್ತರ ಗೋಲಾರ್ಧದಲ್ಲಿ ಉದಕ ಪ್ರವಾಹವು....ಯಾಗಿ ಹರಿಯುತ್ತದೆ. (ಪ್ರದಕ್ಷಿಣೆಯಾಗಿ)

3) ಮೊದಲನೆಯ ಜಲವಿದ್ಯುತ್ ಕೇಂದ್ರವನ್ನು ಭಾರತದ.........ಎಂಬಲ್ಲಿ ಪ್ರಾರಂಭಿಸಲಾಯಿತು. (ಶಿವಸಮುದ್ರ)

4) ಸುಣ್ಣಕಲ್ಲು.........ಶಿಲೆಗೆ ಒಂದು ಉದಾಹರಣೆ. (ಜೈವಿಕ ಕ್ರಿಯೆಯಿಂದಾದ)

B) ಕೆಳಗಿನ ಶಬ್ದಗಳ ಗುಂಪಿನಲ್ಲಿಯ ಸಂಬಂಧವನ್ನು ಕಂಡುಹಿಡಿದು ಬಿಟ್ಟ ಸ್ಥಳಗಳನ್ನು ತುಂಬಿರಿ. (ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ)

1) ಬ್ರೆಝಿಲ್-ಕಾಫಿ : ಮಲೇಷಿಯಾ——(ರಬ್ಬರು)

2) ಕುರೋಸಿವೋ-ಉತ್ತರ ಫೆಸಿಫಿಕ್ ಸಾಗರ : ಗಲ್ಫಸ್ಟ್ರೀಮ——(ಅಟ್ಲಾಂಟಿಕ್ ಸಾಗರ)

3) ಘಟ್ಟ ಪ್ರದೇಶ-ಪರ್ವತ ಜನಿತ ಮಳೆ : ಸಮಭಾಜಕದ ಪ್ರದೇಶ——(ಪರಿಸರಣ ಮಳೆ)

4) ಸಮಭಾರರೇಖೆ-ವಾಯುವಿನ ಒತ್ತಡ : ಸಮತಾಪರೇಖೆ——(ಉಷ್ಣಾಂಶ ಗುರುತಿಸುವದು)

C) "A" ಮತ್ತು "B" ಪಟ್ಟಿಗಳನ್ನು ಸರಿಜೋಡಿಸಿ ಬರೆಯಿರಿ

| A | B |
|---|---|
| 1) ಸಹ್ಯಾದ್ರಿ | a) ಮಡಿಕೆ ಪರ್ವತ |
| 2) ವೆಸೂವಿಯಸ್ ಪರ್ವತ | b) ಹೆದ್ದಾರಿ |
| 3) ವೂಲರ್ | c) ಒಂದು ಬಂದರು |
| 4) ರೋಟರ್ ಡ್ಯಾಮ್ | d) ಉಪಗ್ರಹ ಅವಲೋಕನ ಸ್ಥಾನ |
| 5) ಆರ್ವಿ | e) ಅಗ್ನಿ ಪರ್ವತ |
| 6) ಆಟೋಸ್ಟ್ರೇಡ್ | f) ಸರೋವರ |
| | g) ಉಬ್ಬಚ್ಚು ಪರ್ವತಗಳು |

ಉತ್ತರ : 1] ಸಹ್ಯಾದ್ರಿ-ಉಬ್ಬಚ್ಚು ಪರ್ವತಗಳು
2] ವೆಸೂವಿಯಸ್ ಪರ್ವತ-ಜ್ವಾಲಾಮುಖಿಯ ಪರ್ವತ
3] ವೂಲರ್-ಒಂದು ಸರೋವರ
4] ರೋಟರ್ ಡ್ಯಾಮ್-ಒಂದು ಬಂದರು
5] ಆರ್ವಿ-ಉಪಗ್ರಹ ನಿಲ್ದಾಣ
6] ಆಟೋ ಸ್ಟ್ರೇಡ್-ಹೆದ್ದಾರಿ.

....O....

# ಸಮಾಜ ಪಾಠಗಳು

## ಸಪ್ಟಂಬರ-1984 ಪ್ರಥಮ-ಪತ್ರಿಕೆ

## ( ಚರಿತ್ರೆ ಮತ್ತು ಪೌರನೀತಿ )

1] ಆಫ್ರಿಕಾ ಖಂಡದಲ್ಲಿ ವಸಾಹತುಗಳನ್ನು ಸ್ಥಾಪಿಸಿದ ಯುರೋಪಿಯನ್ ರಾಷ್ಟ್ರಗಳಾವವು ?

ಉತ್ತರ : ಕ್ರಿ. ಶ. 1914ರ ವೇಳೆಗೆ ಆಫ್ರಿಕಾ ಖಂಡವು ಯುರೋಪಿನ ರಾಷ್ಟ್ರಗಳಲ್ಲಿ ಭಾಗವಾಗಿ ಹೋಯಿತು. ಈಜಿಪ್ತ ಮತ್ತು ಸೂಡಾನ್ ಬ್ರಿಟಿಶ್‌ರ ವಸಾಹತುಗಳಾದವು. ಮೊರೊಕ್ಕೊ ಅಲ್ಜೀರಿಯಾಗಳು ಫ್ರಾನ್ಸದ ವಸಾಹತುಗಳಾದವು. ಇಟಲಿ, ಜರ್ಮನಿಗಳು ಅನೇಕ ವಸಾಹತುಗಳನ್ನು ಪಡೆದವು. ಬೆಲ್ಜಿಯಂ ದೇಶ ಕಾಂಗೋ ಪ್ರದೇಶವನ್ನು ಪಡೆಯಿತು.

2] 1] ವಿಶ್ವಸಂಸ್ಥೆಯ ಯಾವುದಾದರೂ ಎರಡು ಮುಖ್ಯ ಅಂಗಗಳನ್ನು ತಿಳಿಸಿ.

ಉತ್ತರ : 1] ಸಾಮಾನ್ಯ ಸಭೆ, 2] ಭದ್ರತಾ ಸಮಿತಿ.

2] ವಿಶ್ವಸಂಸ್ಥೆಯ ಮುಖ್ಯ ಉದ್ದೇಶಗಳಾವವು ?

ಉತ್ತರ : a] ಅಂತರ್‌ರಾಷ್ಟ್ರೀಯ ಶಾಂತಿ ಮತ್ತು ಭದ್ರತೆಗಳನ್ನು ಸ್ಥಾಪಿಸುವದು. b] ಪ್ರಪಂಚದ ರಾಷ್ಟ್ರಗಳ ನಡುವೆ ಸ್ನೇಹ ಸೌಹಾರ್ದತೆಗಳನ್ನು ಬೆಳೆಸುವದು. c] ಜಗತ್ತಿನಲ್ಲಿ ಎಲ್ಲ ಜನರ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸಮಸ್ಯೆಗಳನ್ನು ಬಗೆಹರಿಸುವದು. d] ಮಾನವನ ಮೂಲ ಭೂತ ಹಕ್ಕುಗಳನ್ನು ಸ್ವಾತಂತ್ರ್ಯತೆಯನ್ನು ಅಭಿವೃದ್ಧಿ ಪಡಿಸುವದು.

3] ಭಾರತೀಯರ ಹಕ್ಕು ಬಾಧ್ಯತೆಗಳನ್ನು ರಕ್ಷಣೆ ಮಾಡುವ [ಗಾರ್ಡಿಯನ್]ವರು ಯಾರು ?

ಉತ್ತರ : ನವದೆಹಲಿಯಲ್ಲಿ ಸ್ಥಾಪಿತವಾಗಿರುವ ಉಚ್ಚತಮ ನ್ಯಾಯಾಲಯವು ಭಾರತೀಯರ ಮೂಲಭೂತ ಹಕ್ಕುಗಳನ್ನು ರಕ್ಷಿಸುತ್ತದೆ.

3) 1) ಮಾರ್ಕ್ಸನ ಸಮಾಜವಾದದ ವಿಶೇಷ ಲಕ್ಷಣಗಳೇನು ?

ಉತ್ತರ : ಕಾರ್ಲಮಾರ್ಕ್ಸನು ವೈಜ್ಞಾನಿಕ ಸಮಾಜವಾದವನ್ನು ಸ್ಥಾಪಿಸಿದನು. 1] ಎಲ್ಲ ಆರ್ಥಿಕ ಬೆಲೆಯ ಮೂಲ ಮತ್ತು ಅರ್ಥವೆಲ್ಲವೂ ಕಾರ್ಮಿಕರಿಂದ ಉತ್ಪತ್ತಿ ಮಾಡಲ್ಪಟ್ಟಿರುತ್ತದೆ. 2) ಬಂಡವಾಳಗಾರರು ಕಾರ್ಮಿಕರು ಉತ್ಪಾದಿಸಿದ ಸಂಪತ್ತಿನಲ್ಲಿ ಲೇಶ ಮಾತ್ರ ಅವರಿಗೆ ಕೊಟ್ಟು ಹೆಚ್ಚುವರಿಯನ್ನು ತಾವು ತೆಗೆದುಕೊಳ್ಳುತ್ತಾರೆ. 3) ಬಂಡವಾಳಗಾರರು ಮತ್ತು ಕಾರ್ಮಿಕರ ಮಧ್ಯ ವರ್ಗ ಹೋರಾಟ ಆರಂಭವಾದಾಗ ಕಾರ್ಮಿಕರಿಗೆ ಆದ ಅನ್ಯಾಯ ಕೊನೆಗೊಳ್ಳುತ್ತದೆ. 4] ಅಂತ್ಯದಲ್ಲಿ ಕಾರ್ಮಿಕರಿಗೆ ಜಯ ಲಭಿಸಿ ಬಂಡವಾಳ ಪದ್ಧತಿ ಕುಸಿಯುತ್ತದೆ. ವರ್ಗಭೇದವಿಲ್ಲದ ಸಮಾಜ ನಿರ್ಮಾಣಗೊಳ್ಳುತ್ತದೆ.

2) ಮಾಗ್ನಾಕಾರ್ಟಾದ ಮುಖ್ಯ ಅಂಶಗಳೇನು ?

ಉತ್ತರ : ಬ್ರಿಟಿಶ್ ಪ್ರಜೆಗಳು ಕ್ರಿ. ಶ. 1215 ರಲ್ಲಿ ಅಲ್ಲಿಯ ದೊರೆ ಜಾನ್‌ನಿಗೆ ಮಂಡಿಸಿದ ಮನವಿಯೇ ಮಾಗ್ನಾಕಾರ್ಟಾ (ಮಹಾಸನ್ನದು) ಆ ಮನವಿಯ ಪ್ರಕಾರ 1] ಪ್ರಜೆಗಳಿಂದ ರಚಿಸಲ್ಪಟ್ಟ ರೀತಿ, ನೀತಿ ನಿಯಮಗಳಂತೆ ರಾಜ್ಯಾಡಳಿತ ನಡೆಸಬೇಕೇ ಹೊರತು ಅವನು ತನ್ನ ಮನ ಬಂದಂತೆ ರಾಜ್ಯಾಡಳತೆ ಮಾಡುವಂತಿಲ್ಲ.

2) ರಾಜ್ಯದ ಕಾನೂನುಗಳನ್ನು ಪ್ರತಿನಿಧಿಗಳನ್ನು ಪ್ರಜೆಗಳು ಚುನಾಯಿಸಬೇಕು.

4. 1) ಪಂಚಶೀಲದಲ್ಲಿ ಅಡಗಿರುವ ಮುಖ್ಯ ಅಂಶಗಳಾವವು?

ಉತ್ತರ : ಭಾರತದ ಮೊದಲನೆ ಪ್ರಧಾನಿಯಾಗಿದ್ದ ಪಂಡಿತ ಜವಾಹರಲಾಲ್ ನೆಹ್ರೂರವರು ತಮ್ಮ ವಿದೇಶಿ ವ್ಯವಹಾರವನ್ನು ಪಂಚಶೀಲ ತತ್ವಗಳ ಆಧಾರದ ಮೇಲೆ ನಡೆಸಿದರು. 1] ಭೂಸಮಗ್ರತೆ ಮತ್ತು ಸಮಾಧಿಕಾರಕ್ಕೆ ಪರಸ್ಪರ ಗೌರವ ಕೊಡುವದು. 2) ಪರಸ್ಪರ ಯುದ್ಧ ನಿಷೇಧ ನಿಲುವು. 3) ಪರಸ್ಪರ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡದಿರುವದು. 4) ಸಮಾನತೆ ಮತ್ತು ಪರಸ್ಪರರ ಅನುಕೂಲಗಳು 5) ಶಾಂತಿಯುತ ಸಹಬಾಳ್ವೆ. ಇವು ಪಂಚಶೀಲ ತತ್ವಗಳು.

2) ವಿಶ್ವಸಂಸ್ಥೆಯ ವಾಣಿಜ್ಯ ಮತ್ತು ಅಭಿವೃದ್ಧಿ ಸಮ್ಮೇಳನದ ಗುರಿ ಏನು ?

ಉತ್ತರ : ಅಂಕ್‌ಟಡ್ ಎಂದು ಕರೆಯಲಾಗುವ ವಿಶ್ವಸಂಸ್ಥೆಯ ವಾಣಿಜ್ಯ ಮತ್ತು ಅಭಿವೃದ್ಧಿಯ ಸಮ್ಮೇಳನವನ್ನು 1964 ರಲ್ಲಿ ಸ್ಥಾಪಿಸಲಾಯಿತು. ಅದರ ಗುರಿಗಳು ಈ ರೀತಿ ಇವೆ. i) ವಿವಿಧ ಹಂತಗಳ ಬೆಳವಣಿಗೆಯಲ್ಲಿರುವ ರಾಜ್ಯಗಳ ನಡುವೆ ಅಂತರರಾಷ್ಟ್ರೀಯ ವಾಣಿಜ್ಯವನ್ನು ಬೆಳೆಸುವದು. ii] ಅಂತರರಾಷ್ಟ್ರೀಯ ವಾಣಿಜ್ಯದ ಬೆಳವಣಿಗೆಗಾಗಿ ಸೂಕ್ತ ಧೋರಣೆಗಳನ್ನು ರೂಪಿಸುವದು. iii] ವಿವಿಧ ಸರ್ಕಾರಗಳ ವಾಣಿಜ್ಯ ಮತ್ತು ಅಭಿವೃದ್ಧಿ ನೀತಿಗಳ ನಡುವೆ ಸಾಮರಸ್ಯ ಉಂಟು ಮಾಡುವ ಕೇಂದ್ರವಾಗಿ ಕೆಲಸ ಮಾಡುವದು.

5. ಪ್ರಜಾಪ್ರಭುತ್ವವು ಸುಸೂತ್ರವಾಗಿ ಕಾರ್ಯ ನಿರ್ವಹಣೆ ಮಾಡಲು ಇರುವ ಕೆಲವು ಸಾಮಾಜಿಕ ಅಡ್ಡಿ ಆತಂಕಗಳನ್ನು ಹೆಸರಿಸಿ

i) ಭಾರತ ದೇಶದಲ್ಲಿಯ ಜಾತಿ ಪದ್ಧತಿಯ ಮತ್ತು ಮತೀಯ ದೋಷಗಳು ಭಾಗಶದಲ್ಲಿ ಅನೇಕ ಜಾತಿಗಳು ಮತ್ತು ಮತ ಧರ್ಮಗಳು ಇರುವದು ಒಂದು ಮುಖ್ಯ ಆತಂಕವಾಗಿದೆ.

ii) ಮೂಢ ನಂಬಿಕೆಗಳು, ಬಾಲವಿವಾಹ, ಪರದಾ ಪದ್ಧತಿ, ಸತಿ ಪದ್ಧತಿ ಇಂಥ ಸಾಮಾಜಿಕ ಅನಿಷ್ಟ ಪದ್ಧತಿಗಳು.

6\. 1] ರಾಷ್ಟ್ರದ ಅತಿ ಮುಖ್ಯವಾದ ಅಂಶಗಳಾವವು ?

ಉತ್ತರ : ಒಂದೇ ಬುಡಕಟ್ಟಿಗೆ ಸೇರಿದಂತಹ ಜನತೆಯ ಗುಂಪು ಒಂದೇ ಭೂ ಪ್ರದೇಶದಲ್ಲಿ ವಾಸಿಸುತ್ತಿದ್ದರೆ ಅದು ರಾಷ್ಟ್ರವಾಗಿ ರೂಪುಗೊಳ್ಳುತ್ತದೆ. ಏಕ ಬುಡಕಟ್ಟು, ಏಕಭಾಷೆ ಮತ್ತು ಏಕ ಮತಧರ್ಮ ಜನತೆಯನ್ನು ಒಟ್ಟುಗೂಡಿಸಲು ಕಾರಣವಾಗಿವೆ. ಅದರಂತೆ ಒಂದೇ ರೀತಿಯ ರೂಢಿಗಳು, ಸಂಪ್ರದಾಯಗಳು ಸಮಾನ ಸಂಸ್ಕೃತಿ ಮತ್ತು ಇತಿಹಾಸ ಏಕತಾ ಭಾವನೆಯನ್ನು ಹುಟ್ಟಿಸುವ ಅಂಶಗಳು. ಅತಿ ಮುಖ್ಯವಾದದ್ದೆಂದರೆ ತಾವೆಲ್ಲರೂ ಒಟ್ಟಾಗಿ ಬಾಳಬೇಕೆಂಬ ಆಕಾಂಕ್ಷೆ. ಮೇಲೆ ಹೇಳಿದ ಅಂಶಗಳು ಇದ್ದಲ್ಲಿ ರಾಷ್ಟ್ರವು ರೂಪುಗೊಳ್ಳುತ್ತದೆ.

2\) ಭಾರತದಲ್ಲಿ ಅತ್ಯಂತ ಉಚ್ಚತಮ ನ್ಯಾಯನೀಡುವ ಅಂಗವಾವುದು ? ಅದರ ಮುಖ್ಯಸ್ಥನಾರು ?

ಉತ್ತರ : ದೆಹಲಿಯಲ್ಲಿರುವ ಉಚ್ಚತಮ ನ್ಯಾಯಾಲಯವು. [Supreme Court] ಅದರ ಮುಖ್ಯಸ್ಥರು– ಸರ್ವೋಚ್ಚ ನ್ಯಾಯಾಧೀಶರು [Supreme Court Judge].

7\. 1] ರಾಷ್ಟ್ರೀಯ ಭಾವೈಕ್ಯತೆಯ ಮುಖ್ಯ ಅಂಶಗಳಾವವು ?

ಉತ್ತರ : 1] ನಮ್ಮ ಸಂವಿಧಾನದ ಜಾತ್ಯಾತೀತ, ಸಮಾಜವಾದಿ ಪ್ರಜಾಸತ್ತಾತ್ಮಕ ಸ್ವರೂಪ 2] ನಮ್ಮ ಸರಕಾರದ ಸಂಯುಕ್ತ ಸ್ವರೂಪವು ಭಾವೈಕ್ಯತೆಗೆ ಪೂರಕವಾಗಿರುತ್ತದೆ. 3] ಪ್ರಗತಿಗಾಮಿ ಆರ್ಥಿಕ ಧೋರಣೆ 4] ರಾಷ್ಟ್ರೀಯ ರಾಜಕೀಯ ಪಕ್ಷಗಳು 5] ರಾಷ್ಟ್ರೀಯ ಕಾರ್ಮಿಕ ಸಂಘಟನೆ 6] ರಾಷ್ಟ್ರೀಯ ಲಾಂಛನಗಳು 7] ವಿದ್ವನ್ಮಂಡಲ 8] ಕೇಂದ್ರ ಲೋಕ ಸೇವಾ ಆಯೋಗ 9] ಸಾಂಸ್ಕೃತಿಕ ಸಂಸ್ಥೆಗಳು 10] ರಾಷ್ಟ್ರೀಯ ವೈಜ್ಞಾನಿಕ ಪ್ರಯೋಗ ಶಾಲೆಗಳು ಇವು ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಂಬಲಿಸುವ ಅಂಶಗಳು.

2] ಬೌದ್ಧಮತ ಮತ್ತು ಜೈನ ಮತವನ್ನು ಸ್ಥಾಪಿಸಿದವರು ಯಾರು ?

ಉತ್ತರ : ಕಪಿಲವಸ್ತುವಿನಲ್ಲಿ ಜನಿಸಿದ ಸಿದ್ಧಾರ್ಥನು ಬೌದ್ಧ ಮತವನ್ನು ಸ್ಥಾಪಿಸಿದನು. ವೈಶಾಲಿಯಲ್ಲಿ ಜನಿಸಿದ ವರ್ಧಮಾನನು ಜೈನ ಮತವನ್ನು ಸ್ಥಾಪಿಸಿದನು.

8\. 1) ಭಾರತದ ಎರಡು ಮಹಾಗ್ರಂಥಗಳಾವವು ?

ಉತ್ತರ : 1] ರಾಮಾಯಣ, ಮಹಾಭಾರತ.

2\) ಆರ್ಥಿಕ ಬೆಳವಣಿಗೆ ರಾಷ್ಟ್ರದ ರಕ್ಷಣೆಗೆ ಹೇಗೆ ಸಂಬಂಧಿಸಿದೆ ?

ಉತ್ತರ : ರಕ್ಷಣೆ ಮತ್ತು ಆರ್ಥಿಕ ಪ್ರಗತಿ ಜೊತೆ ಜೊತೆಯಾಗಿ ಮುನ್ನಡೆಯಬೇಕು. ಆರ್ಥಿಕ ಬೆಂಬಲವಿಲ್ಲದೆ ರಕ್ಷಣಾ ಸಿದ್ಧತೆ ಅಸಾಧ್ಯ. ರಕ್ಷಣೆಗಾಗಿ ಸಮೃದ್ಧವಾದ ಸಂಪನ್ಮೂಲಗಳನ್ನು ರೂಢಿಸಿಕೊಳ್ಳಬೇಕಾಗಿರುವದು ಅತಿಮುಖ್ಯ. ಆದ್ದರಿಂದ ಎಲ್ಲಾ ಗಂಡಸರು ಮತ್ತು ಹೆಂಗಸರು ಕೃಷಿ ಮತ್ತು ಕೈಗಾರಿಕೆಗಳಲ್ಲೆಲ್ಲಾ ಅತ್ಯಂತ ಕಷ್ಟಪಟ್ಟು ಕೆಲಸ ಮಾಡಬೇಕಾಗುತ್ತದೆ ಮತ್ತು ಹೆಚ್ಚು ಉತ್ಪಾದಿಸಬೇಕಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಆಮದು ಮಾಡಿಕೊಳ್ಳಬೇಕಾದ ಪದಾರ್ಥಗಳಿಗೆ ವಿದೇಶಿ ಹಣದ ವಿನಿಮಯದ ಅವಶ್ಯಕತೆ ಇರುತ್ತದೆ. ಇವಕ್ಕಾಗಿ ಹಣಕಾಸಿನ ವ್ಯವಸ್ಥೆ ಸುಭದ್ರವಾಗಿರಬೇಕು. ಆದಕ್ಕಾಗಿ ಆರ್ಥಿಕ ಮುನ್ನಡೆ ಮತ್ತು ರಕ್ಷಣೆ ಮೂರು ಮುಖ್ಯ ಸಾಧನೆಗಳನ್ನು ಅವಲಂಬಿಸಿದೆ. 1) ಭೂ ಸಂಪನ್ಮೂಲದ ಅತಿ ಹೆಚ್ಚಿನ ಉಪಯೋಗ 2) ಸರಿಯಾಗಿ ವಿಕಾಸಗೊಂಡ ಕೈಗಾರಿಕಾ ನೆಲೆ ಮತ್ತು 3) ಉತ್ತಮ ತರಬೇತಿ ಪಡೆದ, ಚನ್ನಾಗಿ ನುರಿತ ಮತ್ತು ರಾಷ್ಟ್ರ ಸೇವೆಯಲ್ಲಿ ಸಮರ್ಥರಾದ ವಿಜ್ಞಾನಿಗಳು ಮತ್ತು ತಾಂತ್ರಿಕರು.

9\. 1) ರಕ್ತಪಾತವಿಲ್ಲದ ಕ್ರಾಂತಿಯ ನಂತರ ಬ್ರಿಟಿಷ್ ಸಂಸತ್ ಜಾರಿಗೆ ತಂದ ಎರಡು ಮುಖ್ಯ ಶಾಸನಗಳಾವವು ?

ಉತ್ತರ : ಇಂಗ್ಲಂಡದಲ್ಲಿ ಕ್ರಿ. ಶ. 1688 ರಲ್ಲಿ ರಕ್ತಪಾತವಿಲ್ಲದ ಕ್ರಾಂತಿ ನಡೆಯಿತು. ನಂತರ ಇಂಗ್ಲಂಡ ಸಂಸತ್ತು ಬಿಲ್ ಆಫ್ ರೈಟ್ಸ್ ಎಂಬ ಕಾನೂನನ್ನು ಕ್ರಿ. ಶ. 1686 ರಲ್ಲಿ ಪಾಸು ಮಾಡಿತು. ಈ ಶಾಸನದಿಂದ ಮಹಾಸನ್ನಿದಿನಲ್ಲಿ ನಮೂದಿಸಲಾಗಿದ್ದ ನಿಯಮಗಳು ಮುಂದುವರಿಸಲ್ಪಟ್ಟವು. ಕ್ರಿ. ಶ. 1701 ರಲ್ಲಿ ಆ್ಯಕ್ಟ ಆಫ್ ಸೆಟ್ಲಮೆಂಟ ಕಾನೂನು ಪಾಸಾಯಿತು. ಇದರಿಂದ ಆರೇಂಜದ ವಿಲಿಯಂನು ಸಿಂಹಾಸನಕ್ಕೆ ಬಂದನು ಮತ್ತು ಅವನ ನಂತರ ಸಿಂಹಾಸನಕ್ಕೆ ಬರುವ ಅಧಿಕಾರಿ ಯಾರು ಎಂದು ನಿರ್ಧರಿಸಲಾಯಿತು.

2\) ಕಾರ್ಲಮಾರ್ಕ್ಸ್ ಬರೆದ ಎರಡು ಮುಖ್ಯ ಪುಸ್ತಕಗಳಾವವು ?

ಉತ್ತರ : i) ದಾಸ್ ಕ್ಯಾಪಿಟಲ್ ii) "ಕಮ್ಯೂನಿಸ್ಟ ಮ್ಯಾನಿಫೆಸ್ಟೋ".

3\) ಆದರ್ಶವಾದಿಗಳು ಯಾರು ?

ಉತ್ತರ : ಸಾಮುದಾಯಿಕ ಜೀವನ ಮತ್ತು ಆಸ್ತಿಯ ಸಾರ್ವಜನಿಕ ಉಪಯೋಗಕ್ಕೆ ಕೊಟ್ಟವರನ್ನು ಆದರ್ಶ ಸಮಾಜವಾದಿಗಳೆಂದು ಕರೆಯುತ್ತಾರೆ. ಫ್ರೆಂಚ್ ವಿಚಾರವಾದಿ ಸೈಂಟ್ ಸೈಮನ್ "ಪ್ರತಿಯೊಬ್ಬನಿಂದಲೂ ಅವನ ಸಾಮರ್ಥ್ಯದಂತೆ ಮತ್ತು ಪ್ರತಿಯೊಬ್ಬನಿಗೂ ಅವನ ಅವಶ್ಯಕತೆ ಇದ್ದಂತೆ" ಎಂಬ ಧ್ಯೇಯ ಮಂತ್ರವನ್ನು ನಮಗೆ ಕೊಟ್ಟನು.

10\. ಕೆಮಲ್ ಪಾಷಾನು ಟರ್ಕಿ ದೇಶವನ್ನು ಹೇಗೆ ಆಧುನಿಕ ರಾಷ್ಟ್ರವನ್ನಾಗಿ ಮಾಡಿದನು ?

ಉತ್ತರ : ಕೆಮಲ್ ಪಾಷನು ಆಧುನಿಕ ತುರ್ಕಿಯ ನಿರ್ಮಾಪಕನು. ರಾಜಪ್ರಭುತ್ವವನ್ನು ಕೊನೆಗಾಣಿಸಿ ಗಣರಾಜ್ಯವನ್ನಾಗಿ ಘೋಷಿಸಿದನು ಸಾಂಪ್ರದಾಯಿಕ ಜೀವನದಲ್ಲಿ ಬದಲಾವಣೆ ಮಾಡಿದನು. ಹೊಸ ಬಗೆಯ ವಿದ್ಯಾಭ್ಯಾಸ, ಕಾನೂನುಗಳು, ಆಡಳಿತ ಮತ್ತು ಸಂವಿಧಾನದ ಫಲವಾಗಿ ತುರ್ಕಿಯು ಹೊಸಯುಗದಲ್ಲಿ ಕಾಲಿಟ್ಟಿತು. ಅನೇಕ ಸುಧಾರಣೆಗಳು, ವಿಶೇಷವಾಗಿ ಮಹಿಳೆಯರ ವಿಮೋಚನೆ, ಪುರಾತನ ಸಂಪ್ರದಾಯಗಳಿಂದ ಬಿಡುಗಡೆ ಹೊಂದುವದು. ಈ ಸುಧಾರಣೆಗಳ ಪ್ರಮುಖ ಅಂಶವಾಗಿತ್ತು. ದೇಶಕ್ಕಾಗಿ ಮಾಡಿದ ಸೇವೆಗಳಿಗಾಗಿ ಅವನನ್ನು "ಅಟಾಟರ್ಕ" (ರಾಷ್ಟ್ರಪಿತ) ಎಂದು ಕರೆಯಲಾಗಿದೆ.

11. ಆಗ್ನೇಯ ಏಷ್ಯಾದಲ್ಲಿ ಸ್ವಾತಂತ್ರ್ಯಕ್ಕೆ ಕಾರಣವಾದ ಅಂಶಗಳಾವವು ?

ಉತ್ತರ : 19 ನೇ ಶತಮಾನದಲ್ಲಿ ಇಂಡೋನೇಶಿಯಾ, ಇಂಡೋಚೀನ, ಫಿಲಿಫೈನ್ಸ್, ಮಲಯ, ಬರ್ಮ, ಶ್ರೀಲಂಕಾ ಈ ಎಲ್ಲ ಆಗ್ನೇಯ ಏಷ್ಯಾದ ದೇಶಗಳೆಲ್ಲವೂ ಯುರೋಪಿಯನ್ನರ ಆಳ್ವಿಕೆಗೆ ಒಳಪಟ್ಟದ್ದವು. ರಾಷ್ಟ್ರೀಯ ನಾಯಕರು ಬಂಧನಕ್ಕೊಳಗಾದರು. ಡಾ|| ಸುರಕ್ನೊರವರನ್ನು ಜಪಾನೀಯರು ಬಿಡುಗಡೆ ಮಾಡುವವರೆಗೆ (1942) ಅವರು ಬಂಧನದಲ್ಲಿದ್ದರು. ವಿಯಟ್ನಾಂ ನಾಯಕ ಹೋಚಿಮಿನ್ ದೇಶಭ್ರಷ್ಟನಾಗಿದ್ದುಕೊಂಡೇ ಕಾರ್ಯನಿರತನಾಗಿದ್ದನು. ಎರಡನೇ ಪ್ರಪಂಚ ಯುದ್ಧದ ನಂತರ ಈ ದೇಶಗಳು ಸ್ವತಂತ್ರವಾದವು. ನೆಲಸುನಾಡಿನ ರಾಷ್ಟ್ರಗಳ ಗೊಂದಲಮಯ ಆರ್ಥಿಕ ಸ್ಥಿತಿ, ಕಮ್ಯುನಿಸ್ಟ ವ್ಯಾಪಕತೆಯ ದಿಗಿಲು, ಎರಡನೆ ಪ್ರಪಂಚ ಯುದ್ಧದಲ್ಲಿ ಆದ ನಷ್ಟ ನೆಲಸುನಾಡಿನಲ್ಲಿ ಸ್ವಾತಂತ್ರ್ಯ ಹೋರಾಟದ ತೀಕ್ಷ್ಣತೆ ಮತ್ತು ಬಂಧ ವಿಮೋಚನೆಗಾಗಿ ಬೆಳೆಯುತ್ತಿದ್ದ ಜನಾಭಿಪ್ರಾಯ ಇವುಗಳು ಈ ದೇಶಗಳ ಸ್ವಾತಂತ್ರ್ಯಗಳಿಸಲು ಸಹಾಯಕವಾದವು

12. ಲೆನಿನ್ನನು ಅಧಿಕಾರಕ್ಕೆ ಬರಲು ಸಹಾಯಕವಾದ ಅಂಶಗಳಾವವು ?

ಉತ್ತರ : ಲೆನಿನ್ನನು ರಷ್ಯಾದ ಕ್ರಾಂತಿಯ ಮಹಾ ಶಿಲ್ಪಿಯು. ಮಾರ್ಕ್ಸನ ತತ್ವಗಳಿಂದ ಕ್ರಾಂತಿಕಾರಿಯಾದನು. "ಕ್ರಾಂತಿಕಾರಕ ಒಂದು ಸಮೂಹ ನನಗೆ ದೊರೆಯಲಿ ರಷ್ಯಾವನ್ನು ತಲೆಕೆಳಗೆ ಮಾಡಿ ಬಿಡುತ್ತೇನೆ ಎಂದು ಹೇಳುತ್ತಿದ್ದನು." ಕ್ರಾಂತಿಯ ನಂತರ ಜಾರ್ ಅಧಿಕಾರ ಮುಗಿದು ತಾತ್ಕಾಲಿಕ ಅಧಿಕಾರ ಸ್ಥಾಪಿತವಾಯಿತು. ಆದರೆ ಈ ಪಕ್ಷ ಬದಲಾವಣೆಗಳನ್ನು ಮಾಡಲು ಅಸಮರ್ಥವಾಗಿರುವುದರಿಂದ ಬಾಲ್ಶೆವಿಕ್ ಪಕ್ಷದ ನಾಯಕನಾದ ಲೆನಿನ್ ಅಧಿಕಾರ ವಹಿಸಿಕೊಳ್ಳಲು ಅನುಕೂಲವಾಯಿತು. ಇವನು ಹೊಸ ಸರ್ಕಾರವನ್ನು ಸ್ಥಾಪಿಸಿದನು.

13. ಮುಸೋಲಿನಿಯ ಮೂರು ವಿಷಯಕ ಕಾರ್ಯಕ್ರಮವನ್ನು ತಿಳಿಸಿ.

ಉತ್ತರ : ಬೆನಿಟೊ ಮುಸೊಲಿನಿ ಸಮಾಜವಾದಿ. ಫ್ಯಾಸಿಸ್ಟ ಪಕ್ಷದ ನಾಯಕ. ಇವನ ಮೂರು ಮುಖ್ಯ ಧ್ಯೇಯಗಳು i) ಕಮ್ಯುನಿಸಂ ತತ್ವದ ದ್ವೇಷ, ii) ಪ್ರಜಾಪ್ರಭುತ್ವ ವಿರೋಧಿಸುವದು, iii) ಶೀಘ್ರವಾದ ರಾಷ್ಟ್ರೀಯತೆ.

14. ಭದ್ರತಾ ಸಮಿತಿಯ ಶಾಶ್ವತ ಸದಸ್ಯತ್ವ ಪಡೆದಿರುವ ರಾಷ್ಟ್ರಗಳಾವವು ?

ಉತ್ತರ : 1945 ರಲ್ಲಿ ವಿಶ್ವಸಂಸ್ಥೆ ಸ್ಥಾಪಿತವಾಯಿತು. ಇದರಲ್ಲಿ ಆರು ಅಂಗಗಳಿವೆ. ಅದರಲ್ಲಿ ಭದ್ರತಾ ಸಮಿತಿ ಅತ್ಯಂತ ಮುಖ್ಯವಾದುದು. ಫ್ರಾನ್ಸ್, ಅಮೇರಿಕಾ, ರಷ್ಯಾ, ಕಮ್ಯುನಿಸ್ಟ ಚೀನಾ ಮತ್ತು ಗ್ರೇಟ ಬ್ರಿಟನ್‌ಗಳು ಶಾಶ್ವತಸ್ಥಾನ ಪಡೆದಿರುವ ಸದಸ್ಯ ರಾಷ್ಟ್ರಗಳು.

15. ಭಾರತದ ಸಂಸತ್ತಿನಲ್ಲಿ ಎಷ್ಟು ಸಭೆಗಳಿವೆ ?

ಉತ್ತರ : ಭಾರತದ ಸಂಸತ್ತಿನಲ್ಲಿ ಲೋಕಸಭೆ ಮತ್ತು ರಾಜ್ಯ ಸಭೆಗಳೆಂಬ ಎರಡು ಸಭೆಗಳಿವೆ.

—●—

# ಸಮಾಜ ಪಾಠಗಳು

**ಅಕ್ಟೋಬರ–1984** **2 ನೆಯ ಪತ್ರಿಕೆ**

## [ ಭೂ ವಿವರಣೆ ]

TMP

I. ಬೃಹತ್ ಕೈಗಾರಿಕೆಗಳು ಲಘು ಕೈಗಾರಿಕೆಗಳು ಇವುಗಳಲ್ಲಿರುವ ವ್ಯತ್ಯಾಸವೇನು ?

ಉತ್ತರ : ಕೈಗಾರಿಕೆಗಳಲ್ಲಿ ಬೃಹತ್ ಕೈಗಾರಿಕೆಗಳು ಮತ್ತು ಲಘು ಕೈಗಾರಿಕೆಗಳು ಎಂದು ಎರಡು ವಿಭಾಗ ಮಾಡಬಹುದು.

ಬೃಹತ್ ಕೈಗಾರಿಕೆ ಮತ್ತು ಲಘು ಕೈಗಾರಿಕೆಗಳಲ್ಲಿ ವ್ಯತ್ಯಾಸ.

| ಬೃಹತ್ ಕೈಗಾರಿಕೆ | ಲಘು ಕೈಗಾರಿಕೆ |
|---|---|
| 1) ಹೆಚ್ಚು ಬಂಡವಾಳ | 1) ಕಡಿಮೆ ಬಂಡವಾಳ |
| 2) ಉತ್ಪಾದಕರಿಗೆ ಅತಿ ಮಹತ್ವವು | 2) ಬಳಕೆದಾರರಿಗೆ ನೇರ ದೊರೆಯುವವು. |
| 3) ಪರಿಣತಿ ತಕ್ಕಮಟ್ಟಿಗೆ | 3) ಪರಿಣತಿ ಅತಿ ಹೆಚ್ಚು |

| | |
|---|---|
| 4) ಕಚ್ಚಾ ಮಾಲಿಗಾಗಿ ನಿರ್ಮಾಣದ ಸ್ಥಾನ ಮಹತ್ವ | 4) ಸ್ಥಾನಕ್ಕೆ ಅಷ್ಟು ಮಹತ್ವವಿಲ್ಲ |
| 5) ಕಾರ್ಮಿಕರ ಬಲವು ಮುಖ್ಯ | 5) ಕುಶಲ ಕಾರ್ಮಿಕರ ಅವಶ್ಯಕತೆ |
| 6) ಸಾಗಾಣಿಕೆಯ ಸಮಸ್ಯೆ | 6) ಸಾಗಾಣಿಕೆ ಮಹತ್ವದ್ದಲ್ಲ. |

ಅಥವಾ

ಉಪಗ್ರಹ ಯೋಜನೆಗಳು ಎಂದರೇನು ? ಸಂಪರ್ಕ ವಿಧಾನದಲ್ಲಿ ಅದರ ಪಾತ್ರವೇನು ?

**ಉತ್ತರ :** ತಂತಿ, ದೂರವಾಣಿ, ಟೆಲೆಕ್ಸ್, ರೇಡಿಯೊ ಮೊದಲಾದವು ಉಪಗ್ರಹಗಳ ಮೂಲಕ ಇರುವ ಸಂಪರ್ಕ ಸಾಧನೆಗಳು, ಅಂತರ ರಾಷ್ಟ್ರೀಯ ಟೆಲಿಸಂಪರ್ಕ ಉಪಗ್ರಹ [International Tele communication Satellite–INTELSAT] ಪ್ರಪಂಚದ ಎಲ್ಲಾ ರಾಷ್ಟ್ರಗಳೂ ಉಪಯೋಗಿಸಿಕೊಳ್ಳುವ ಸಂಪರ್ಕ ಸಾಧನವಾಗಿದೆ. ಪುಣೆಯ ಬಳಿ ಇರುವ ಅರ್ವಿ ಮತ್ತು ಡೆಹರಾಡೂನ್ ಬಳಿ ಇರುವ ಡೂನ್ ಭಾರತದ ಉಪಗ್ರಹ ಕೇಂದ್ರಗಳಾಗಿವೆ.

ಉಪಗ್ರಹ ಯೋಜನೆಗಳು ಸಂಪರ್ಕದ ವಿಧಾನದಲ್ಲಿ ಮಹತ್ವದ ಪಾತ್ರ ವಹಿಸಿದೆ. ಜಗತ್ತಿನ ಇತರ ರಾಷ್ಟ್ರಗಳ ಸಂಗಡ ಸಂಪರ್ಕ ಸುಲಭವಾಗಿದೆ. ಇದರಿಂದ ಭಾರತವು ತಾಂತ್ರಿಕ ಜ್ಞಾನದಲ್ಲಿ ಮುಂದುವರಿದಿದೆ. ಭಾರತವು ಇತರ ರಾಷ್ಟ್ರಗಳೊಂದಿಗೆ ಸೌಹಾರ್ದತೆಯಿಂದ ಇರಲು ಅಪೇಕ್ಷಿಸುತ್ತದೆ ಎಂಬುದನ್ನು ತೋರಿಸುತ್ತದೆ.

II. ಸಂಚಾರ ಮತ್ತು ಸಾರಿಗೆಗಳ ಪ್ರಾಮುಖ್ಯತೆಯನ್ನು ತಿಳಿಸಿ.

**ಉತ್ತರ :** ಸಾರಿಗೆ ಸಂಪರ್ಕಗಳು ಪ್ರಪಂಚದ ಸಾಂಸ್ಕೃತಿಕ ಪ್ರಗತಿ ಮತ್ತು ಆರ್ಥಿಕ ಉನ್ನತಿಗಾಗಿ ತೀರ ಮಹತ್ವವಾದವುಗಳು. ಇವು ಮಾನವನ ದೇಹದಲ್ಲಿ ರಕ್ತ ಸಂಚಾರವಿದ್ದಂತೆ. ಜಪಾನದಂಥ ಚಿಕ್ಕ ರಾಷ್ಟ್ರವು ಪ್ರಪಂಚದಲ್ಲಿ ಮುಖ್ಯ ಕೈಗಾರಿಕಾ ರಾಷ್ಟ್ರವಾಗಲಿಕ್ಕೆ ಅಲ್ಲಿಯ ಸಾರಿಗೆ ಸಂಪರ್ಕವೇ ಕಾರಣ. ರಶಿಯಾ ದೇಶವು ಒಂದು ಖಂಡದಿಂದ ಇನ್ನೊಂದು ಖಂಡದ ತುದಿಯವರೆಗೆ ಹಬ್ಬಿದೆ. ಆದರೂ ಸಾರಿಗೆ ಸಂಪರ್ಕಗಳ ಆಧುನೀಕರಣದಿಂದ ಐಕ್ಯ ಉಂಟಾಗಿದೆ. ಕೈಗಾರಿಕಾ ರಾಷ್ಟ್ರವಾಗಿದೆ.

ಬ್ರಾಜಿಲ್, ಅರ್ಜೆಂಟೈನಾ, ಮಲೇಸಿಯಾ, ಇಂಡೋನೇಸಿಯಾ ಮತ್ತು ಪಶ್ಚಿಮ ಏಶಿಯಾದ ರಾಷ್ಟ್ರಗಳು ತಮ್ಮ ಹೆಚ್ಚಿನ ನೈಸರ್ಗಿಕ ಸಂಪತ್ತನ್ನು ಮಾರಿ ಪರದೇಶದ ವಿನಿಮಯವನ್ನು ಗಳಿಸುವವು. ಇದು ಅಭಿವೃದ್ಧಿ ಹೊಂದಿದ ಸಾರಿಗೆ ಸಂಪರ್ಕಗಳಿಂದ ಸಾಧ್ಯವಾಗಿದೆ. ಈಗ ಡೀಲಕ್ಸ ರೈಲುಗಳು ನಿರ್ಮಾಣವಾಗಿವೆ. ಒಂದು ಗಂಟೆಗೆ 200 ಕಿ. ಮೀ. ಕ್ಕಿಂತ ಹೆಚ್ಚು ವೇಗವುಳ್ಳ ಇಂಜಿನ್ನುಗಳು. ಇವೆಲ್ಲ ತೀವ್ರಗತಿಯ ಸಾಧನಗಳಾಗಿವೆ. ಈ ತರದ ಕ್ರಾಂತಿಕಾರಿ ಬದಲಾವಣೆಗಳು ಸಾರಿಗೆ ಸಂಪರ್ಕದಲ್ಲಿ ನಡೆದದ್ದರಿಂದ ಇಂದಿನ ಯುದ್ಧಗಳ ರೀತಿಯೇ ಬದಲಾಗಿದೆ. ಉತ್ತರ ಧ್ರುವ ಸುತ್ತಲಿನ ಪ್ರದೇಶವು ಅತಿ ಶೀತ ಮತ್ತು ಬಂಜರವಾಗಿದ್ದರೂ ಸಾರಿಗೆ ಸಂಪರ್ಕಗಳಿಂದ ಅದಕ್ಕೆ ಮಹತ್ವ ಬಂದಿದೆ. ಪ್ರಪಂಚದ ಮೂಲೆ ಮೂಲೆಗೂ ಸಾರಿಗೆ ಸಂಪರ್ಕಗಳು ಮುಟ್ಟಿವೆ.

ಅಥವಾ

ಜನಸಾಂದ್ರತೆಯ ಕಡಿಮೆ ವಾಸಸ್ಥಳಗಳು ಉಂಟಾಗಲು ಕಾರಣವೇನು ? ಮುಖ್ಯವಾದ ಕಡಿಮೆ ವಾಸಸ್ಥಳಗಳಾವವು ?

**ಉತ್ತರ :** ಪ್ರಪಂಚದಲ್ಲಿಯ ಭೂಮಿ ಪರ್ವತ ಶ್ರೇಣಿ, ಕೊಳ್ಳಗಳು, ಮರುಭೂಮಿ, ಅತಿಶೀತ ಭೂಮಿ ಇವು ಇದ್ದಲ್ಲಿ ಇವು ಮಾನವನ ವಾಸ್ತವ್ಯಕ್ಕೆ ಪ್ರತಿಕೂಲವಾಗಿದೆ. ಜನಸಂಖ್ಯೆ ತೀರ ವಿರಳ ಜನ ವಸತಿಗೆ ತೀರ ಅನುಕೂಲ ಇವು ಇಲ್ಲದ ಪ್ರದೇಶಗಳಲ್ಲಿ ಜನಸಂಖ್ಯೆ ಕಡಿಮೆ. ಸಂಚಾರ ಸಂಪರ್ಕವಿರದಿದ್ದಲ್ಲಿ ಜನಸಂಖ್ಯೆ ವಿರಳ. ನೀರಿನ ಪೂರೈಕೆಯಲ್ಲಿ ಅಭಾವವಿದ್ದಲ್ಲಿ ಜನವಸತಿ ಕಡಿಮೆ.

ಆಫ್ರಿಕಾ, ಏಷ್ಯಾ ವಿಭಾಗದಲ್ಲಿ ಉತ್ತರ ಆಫ್ರಿಕಾದ ತೀರ ಪ್ರದೇಶದಲ್ಲಿ ಸಹರಾ, ಅರೇಬಿಯಾ, ಅಫಗಾನಿಸ್ತಾನ, ಮಧ್ಯ ಏಷ್ಯಾ, ಟಿಬೆಟ್ ಪ್ರಸ್ಥಭೂಮಿ ಮತ್ತು ಮಂಗೋಲಿಯಾ ಆದರಂತೆ ಅಂಟಾರ್ಟಿಕ್, ಅಮೇಜಾನ್ - ಮೈದಾನ, ನೈಋತ್ಯ ಆಫ್ರಿಕಾ ಮತ್ತು ದಕ್ಷಿಣ ಅಮೇರಿಕದ ದಕ್ಷಿಣ ತುದಿ ಇವು ಕಡಿಮೆ ಜನಸಂಖ್ಯೆಯುಳ್ಳ ಪ್ರದೇಶಗಳು.

III. ಇವುಗಳಿಗೆ ಉತ್ತರಗಳನ್ನು ಬರೆಯಿರಿ.

1) ಗಣಿ ಕೈಗಾರಿಕೆಯ ಸಮಸ್ಯೆಗಳಾವವು ?

**ಉತ್ತರ :** ಗಣಿಗಳಲ್ಲಿ ಕೆಲಸ ಮಾಡುವವರಿಗೆ ಅನೇಕ ಸಮಸ್ಯೆಗಳುಂಟಾಗುವವು. ಇದ್ದಕ್ಕಿದ್ದಂತೆ ಭೂಮಿ ಕುಸಿದು ಬೀಳಬಹುದು. ಇಂಥ ಸಮಸ್ಯೆಗಳು ಭೂಮಿಯೊಳಗೆ ಆಳವಾದ ಬಾವಿ ತೋಡಿದ ಕೈಗಾರಿಕೆಗಳಲ್ಲಿ ಕಂಡು ಬರುತ್ತವೆ. ಉದಾ : ಕಲ್ಲಿದ್ದಲಿ, ಚಿನ್ನ, ತಾಮ್ರ, ಪೆಟ್ರೋಲಿಯಂ ಗಣಿ ಕೈಗಾರಿಕೆಗಳಲ್ಲಿ ಸಮಸ್ಯೆಗಳು ಹೆಚ್ಚು. ವಿಷಪೂರಿತವಾದ ವಾಯು ಬಿಡುಗಡೆ ಮತ್ತು ಪ್ರವಾಹಗಳ ನುಗ್ಗುವಿಕೆಯಿಂದ ಅತಿ ದುಸ್ತರವಾದ ಸಮಸ್ಯೆಗಳಾಗಿವೆ.

2) ಕೈಗಾರಿಕೆಯ ನಗರಗಳ ಸಮಸ್ಯೆಗಳೇನು ?

**ಉತ್ತರ :** ಕೈಗಾರಿಕೆಯ ನಗರಗಳ ಮುಖ್ಯವಾದ ಸಮಸ್ಯೆಗಳೆಂದರೆ ದಟ್ಟ ಜನವಸತಿ, ಅನಾರೋಗ್ಯಕರ ವಾತಾವರಣ ಮಾಲಿನ್ಯ, ನೀರು ಕೆಟ್ಟು ಹೋಗುವದು, ಕೈಗಾರಿಕೆಗಳು ಒಂದೇ ಕಡೆ ಸ್ಥಾಪಿತನಾಗಿರುವದು, ವಾಸಿಸಲು ಮನೆಗಳು ದೊರೆಯದಿರುವದು, ಸಾರಿಗೆ ಸಮಸ್ಯೆ ಮತ್ತು ಆಹಾರ ಸಮಸ್ಯೆಗಳು ಹೆಚ್ಚುತ್ತವೆ.

3) ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಗಳು ಭಾರತದ ಈಶಾನ್ಯ ಭಾಗದಲ್ಲಿ ಸ್ಥಾಪಿತವಾಗಿವೆ, ಏಕೆ ?

**ಉತ್ತರ :** ಭಾರತದ ಈಶಾನ್ಯ ಭಾಗದಲ್ಲಿ ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಗಳಿಗೆ ಬೇಕಾದ ಖನಿಜ ಸಂಪತ್ತು, ಕಚ್ಚಾ ಮಾಲು ಮತ್ತು ಸಾರಿಗೆ ಸಂಪರ್ಕದ ಅನುಕೂಲವಿದೆ. ಸುಣ್ಣ, ತಾಮ್ರ, ಬಾಕ್ಸೈಟ್ ಮೊದಲಾದ ಖನಿಜಗಳು ದೊರಕುತ್ತವೆ.

4) ಟೆಲೆಕ್ಸ ಟೆಲಿಪ್ರಿಂಟರ್ ಎಂದರೇನು ?

**ಉತ್ತರ :** ಒಂದು ಪ್ರದೇಶದಿಂದ ದೂರದಲ್ಲಿರುವ ಮತ್ತೊಂದು ಪ್ರದೇಶದಲ್ಲಿ ಸಮಾಚಾರವನ್ನು ಮುದ್ರಿಸುವದಕ್ಕೆ "ಟೆಲಿಪ್ರಿಂಟ್" ಎಂದು ಹೆಸರು. ರಾಷ್ಟ್ರೀಯ ಟೆಲೆಕ್ಸ್ ವ್ಯವಸ್ಥೆ ಚಂದಾದಾರರಲ್ಲಿ ಸಮಾಚಾರವನ್ನು ಶೀಘ್ರವಾಗಿ ವಿವರಣೆ ಮಾಡಲು 1963 ರಲ್ಲಿ ಸ್ಥಾಪಿತವಾಯಿತು. ಹೀಗೆ ತಂತಿ ಸಂದೇಶಗಳನ್ನು ಸ್ವತಃ ಅಚ್ಚು ಮಾಡುವ ಸಾಧನಗಳಾದ ಟೆಲಿಪ್ರಿಂಟರ್ ಮತ್ತು ಟೆಲೆಕ್ಸ್‌ಗಳ ಅವಿಷ್ಕಾರವಾದ ವೇಳೆ ಈ ದಿಶೆಯಲ್ಲಿ ಹೆಚ್ಚಿನ ಅಭಿವೃದ್ಧಿ ಮಾಡಲಾಗಿದೆ. ಮುಖ್ಯವಾದ ಸಂದೇಶಗಳನ್ನು ತ್ವರಿತವಾಗಿ ಪ್ರಸಾರ ಮಾಡಲು ಸರ್ಕಾರಿ ಕಚೇರಿಗಳು ಮತ್ತು ವರ್ತಮಾನ ಪತ್ರಿಕೆಗಳು ಟೆಲೆಕ್ಸನ್ನು ಹೆಚ್ಚು ಹೆಚ್ಚಾಗಿ ಬಳಸಿಕೊಳ್ಳುತ್ತವೆ.

5) (ಕ್ಲಿಯರನ್ಸ) ತೀರುವೆ ಮನೆಗಳೆಂದರೇನು ?

**ಉತ್ತರ :** ಎಲ್ಲ ದೇಶಗಳೂ ಪ್ರತಿಯೊಂದು ವ್ಯವಹಾರಕ್ಕೂ ಹಣಪಾವತಿ ಮಾಡುವದಿಲ್ಲ ಆದರೆ ವರ್ಷದ ಕೊನೆಯಲ್ಲಿ ಎಲ್ಲಾ ದೇಶಗಳು ಜಮಾ ಖರ್ಚಿನ ಪಟ್ಟಿಯನ್ನು ತಯಾರಿಸಿ ಪರಸ್ಪರ ಸಂದಾಯದ ಹಣವನ್ನು ಲೆಕ್ಕದಲ್ಲಿ ಕಳೆಯುತ್ತವೆ. ಹೀಗೆ ತೀರುಮನೆಗಳು ವಿದೇಶಿ ವಿನಿಮಯ ಸಮಸ್ಯೆಯನ್ನು ಪರಿಹರಿಸಲು ಸಹಾಯಕವಾಗಿವೆ.

**V. ಇವುಗಳಿಗೆ ಕಾರಣಗಳನ್ನು ಕೊಡಿ.**

1) ರೈಲು ರಸ್ತೆಗಳು ಅತ್ಯಂತ ಸಹಕಾರಿಯಾಗಿವೆ.

**ಉತ್ತರ :** ರೈಲುಗಳು ಅಧಿಕ ಸಂಖ್ಯೆಯಲ್ಲಿ ಪ್ರಯಾಣಿಕರನ್ನು ಮತ್ತು ಹೆಚ್ಚಿನ ಪ್ರಮಾಣದಲ್ಲಿ ಸರಕುಗಳನ್ನು ಅತ್ಯಂತ ಶೀಘ್ರವಾಗಿಯೂ, ಸುರಕ್ಷಿತವಾಗಿಯೂ ಮತ್ತು ಕಡಿಮೆ ವೆಚ್ಚದಲ್ಲಿಯೂ ಸಾಗಿಸುವದರಲ್ಲಿ ಅತ್ಯಂತ ಸಹಾಯಕವಾಗಿವೆ.

2) ಭಾರತದಲ್ಲಿ ಜನಸಾಂದ್ರತೆ ಒಂದೇ ಸಮನಾಗಿಲ್ಲ.

**ಉತ್ತರ :** ಭಾರತದಲ್ಲಿ ಭೌಗೋಳಿಕ ಮತ್ತು ಆರ್ಥಿಕ ವೈವಿಧ್ಯತೆ ಹೆಚ್ಚಾಗಿರುವದರಿಂದ ಜನಸಾಂದ್ರತೆ ಒಂದೇ ಸಮನಾಗಿಲ್ಲ.

3) ಬಂದರಿನ ಹತ್ತಿರ ವಿಶಾಲವಾದ ಚಪ್ಪಟೆಯಾದ ಭೂಮಿ ಅವಶ್ಯಕ.

**ಉತ್ತರ :** ಮಳಿಗೆ ಮತ್ತು ಶೇಖರಣೆ ಕೊಠಡಿಗಳನ್ನು ಕಟ್ಟಿ ಅವುಗಳಿಗೆ ಸುವ್ಯವಸ್ಥಿತವಾದ ಸಂಚಾರ ಸೌಕರ್ಯ ಪಡೆಯಲು ವಿಶಾಲವಾದ ಚಪ್ಪಟೆಯಾದ ಭೂಮಿ ಅವಶ್ಯಕ.

4) ಬೆಟ್ಟದ ಪ್ರದೇಶಗಳು ಜನವಾಸಕ್ಕೆ ಯೋಗ್ಯವಾಗಿಲ್ಲ

**ಉತ್ತರ :** ಬೆಟ್ಟದ ಪ್ರದೇಶಗಳು ಗುಡ್ಡ, ಕೊಳ್ಳಗಳಿಂದ ಕೂಡಿದ್ದು ವ್ಯವಸಾಯಕ್ಕೆ ಅನುಕೂಲವಿರುವದಿಲ್ಲ ಮತ್ತು ಸಾರಿಗೆ—ಸಂಪರ್ಕಕ್ಕೆ ಅನುಕೂಲವಾಗಿರುವದಿಲ್ಲ.

5) ಉಷ್ಣ ವಲಯದ ಪ್ರದೇಶದಲ್ಲಿ ನಿರ್ದಿಷ್ಟವಾದ ಋತುಮಾನಗಳಿಲ್ಲ.

**ಉತ್ತರ :** ವರ್ಷಪೂರ್ತಿ ಇಲ್ಲಿ ಉಷ್ಣಾಂಶ ಅಧಿಕವಾಗುತ್ತದೆ. ಅದರ ಜೊತೆಗೆ ಹನ್ನೆರಡು ತಿಂಗಳು ಮಳೆಯಾಗುತ್ತದೆ.

6) ಭಾರತದಲ್ಲಿ ವ್ಯವಸಾಯವು ಮುಂಗಾರು ಮಾರುತಗಳೊಡನೆ ಒಂದು ಜೂಜು.

**ಉತ್ತರ :** ಭಾರತದ ಹೆಚ್ಚಿನ ಭಾಗಕ್ಕೆ ನೈರುತ್ಯ ಮಾನ್ಸೂನ ಮಾರುತಗಳಿಂದ ಮಳೆ ಬರುತ್ತದೆ. ಆದರೆ ಅನೇಕ ಸಂದರ್ಭಗಳಲ್ಲಿ ಅನಾವೃಷ್ಟಿಯಾಗಿ ಬೆಳೆಗಳಿಗೆ ಸಾಕಾಗುವಷ್ಟು ಮಳೆ ಬೀಳದೆ ಬೆಳೆಗಳು ಹಾಳಾಗುತ್ತವೆ. ಕೆಲವು ಬಾರಿ ಅತಿವೃಷ್ಟಿಯಾಗಿ ಪ್ರಾಣ ಮತ್ತು ಪ್ರಾಣ ಹಾನಿಯಾಗುವದಲ್ಲದೆ ಬೆಳೆಗಳೂ ನಾಶವಾಗುತ್ತವೆ.

**V.** ಎ) ಕೆಳಗಿನ ಗುಂಪುಗಳಲ್ಲಿ ಮೊದಲು ಎರಡು ಪದಗಳಿಗಿರುವ ಸಂಬಂಧವನ್ನು ಉಪಯೋಗಿಸಿಕೊಂಡು ಕೊನೆಯ ಎರಡು ಪದಗಳಲ್ಲಿರಬೇಕಾದ ಪದವನ್ನು ಬರೆಯಿರಿ. (ಉತ್ತರ ಆವರಣದಲ್ಲಿ ಕೊಟ್ಟಿದೆ)

1) ಕುರೋಸಿವೋ : ಉತ್ತರ ಫೆಸಿಫಿಕ್: ಗಲ್ಫಸ್ಟ್ರೀಮ್ (ಅಟ್ಲಾಂಟಿಕ್)

2) ಯುರೇಷಿಯಾ ಟಂಡ್ರಾ : ಲಾಪ್ಸ್ : ಉತ್ತರ ಅಮೇರಿಕದ ಟಂಡ್ರ :— (ಎಸ್ಕಿಮೊ)

3) ಹೆಮಟೈಟ್ : ಕಬ್ಬಿಣದ ಅದಿರು : ಬಾಕ್ಸೈಟ್ : (ಅಲ್ಯುಮಿನಿಯಂ ಅದಿರು)

4) ಸವನ್ನ : ಉಷ್ಣವಲಯದ ಹುಲ್ಲುಗಾವಲು : ಪಂಪಾಸ್ :——(ಸಮಶೀತೋಷ್ಣ ಹುಲ್ಲುಗಾವಲು)

ಬಿ) ಕೆಳಗಿನವುಗಳನ್ನು ಸರಿ ಹೊಂದಿಸಿ ಬರೆಯಿರಿ.

| A | B |
|---|---|
| 1) ಕೋಯಿ ಮತ್ತೂರ | ಎ) ಯಂತ್ರಗಳು |
| 2) ಟಿಟಿಗರ್ | ಬಿ) ಕಬ್ಬಿಣ ಮತ್ತು ಉಕ್ಕು |
| 3) ಗೋರಕ್‌ಪುರ | ಸಿ) ಸಿಮೆಂಟ್ ಕೈಗಾರಿಕೆ |
| 4) ಸಿಂದ್ರಿ | ಡಿ) ಸೆಣಬಿನ ಕೈಗಾರಿಕೆ |
| 5) ಬಾಗಲಕೋಟೆ | ಇ) ಸೆಣಬಿನ ಕೈಗಾರಿಕೆ |
| 6) ಬೋಕಾರೋ | ಎಫ್) ರಾಸಾಯನಿಕ ಗೊಬ್ಬರ |
| | ಜಿ) ಹತ್ತಿ ಕೈಗಾರಿಕೆ |

ಉತ್ತರ : 1) ಕೋಯಿ ಮತ್ತೂರ— ಜಿ) ಹತ್ತಿ ಕೈಗಾರಿಕೆ

2) ಟಿಟಿಗರ್— ಡಿ) ಸೆಣಬಿನ ಕೈಗಾರಿಕೆ

3) ಗೋರಕ್‌ಪುರ— ಇ) ಸೆಣಬಿನ ಕೈಗಾರಿಕೆ

4) ಸಿಂದ್ರಿ— ಎಫ್) ರಾಸಾಯನಿಕ ಗೊಬ್ಬರ

5) ಬಾಗಲಕೋಟೆ— ಸಿ) ಸಿಮೆಂಟ ಕೈಗಾರಿಕೆ

6) ಬೋಕಾರೊ— ಬಿ) ಕಬ್ಬಿಣ ಮತ್ತು ಉಕ್ಕು

ಸಿ) ಖಾಲಿ ಬಿಟ್ಟಿರುವ ಜಾಗಗಳನ್ನು ಭರ್ತಿಮಾಡಿ [ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ]

1) ವಿಶ್ವದ ಅಂಚೆ ಸಂಘದ ಸಂಸ್ಥೆಯು...... ರಲ್ಲಿ...... ನಗರದಲ್ಲಿ ಸ್ಥಾಪಿತವಾಯಿತು.

ಉತ್ತರ : (1876–ಸ್ವಿಟ್ಜರ್‌ಲೆಂಡಿನ ಬರ್ನ್)

2) ಉಷ್ಣವಲಯದ ರಾಜ್ಯಗಳು......ಗಳನ್ನೇ ಆಮದು ಮಾಡಿಕೊಳ್ಳುತ್ತವೆ.

ಉತ್ತರ : [ಬಟ್ಟೆಗಳನ್ನು, ಸಿದ್ಧವಸ್ತುಗಳನ್ನು, ಆಹಾರ ಪದಾರ್ಥಗಳನ್ನು ಮತ್ತು ಯಂತ್ರೋಪಕರಣಗಳು]

3] ಕುರಾಕೊ ಎಂಬುದು ವೆನಿಜೂಲದಲ್ಲಿರುವ ಒಂದು ......ಬಂದರಿಗೆ ಉದಾಹರಣೆ.

ಉತ್ತರ : [ಸರಕು ಸಾಗಾಣಿಕೆ]

4] ಸುಯೆಜ್ ಕಾಲುವೆಯು......ರಲ್ಲಿ ರಾಷ್ಟ್ರೀಕರಣವಾಯಿತು.

ಉತ್ತರ : 1956.

...○...

# ಸಮಾಜ ಪಾಠಗಳು

## ಎಪ್ರಿಲ್–1985 1 ನೆಯ–ಪತ್ರಿಕೆ

ಅವಧಿ : 2½ ಗಂಟೆ ಗುಣಗಳು : 65

## ( ಚರಿತ್ರೆ ಮತ್ತು ಪೌರನೀತಿ )

1. ಕೆಳಗಿನ ವಾಕ್ಯಗಳಲ್ಲಿಯ ಬಿಟ್ಟ ಶಬ್ದಗಳನ್ನು ಪೂರ್ತಿ ಮಾಡಿರಿ. [ಉತ್ತರಗಳನ್ನು ಆವರಣದಲ್ಲಿ ಕೊಟ್ಟಿದೆ]

1) ಹರ್ಷನು......ನ ಧರ್ಮದಾನ ಕಾರ್ಯದ ಪದ್ಧತಿಯನ್ನು ಅನುಸರಿಸಿದನು. [ಅಶೋಕ]

2) .......ನು ತನ್ನ ರಾಯಭಾರಿಯನ್ನು ಎರಡನೆಯ ಪುಲಕೇಶಿಯ ಆಸ್ಥಾನಕ್ಕೆ ಕಳುಹಿಸಿದನು. [2 ನೇ ಖುಸ್ರು]

3) ಮಹಾವೀರನು ಕಡೆಯ.......[ತೀರ್ಥಂಕರನು]

4) .......ನು ನವಕೋಟಿ ನಾರಾಯಣನೆಂಬ ಬಿರುದು ಪಡೆದನು. [ಚಿಕ್ಕ ದೇವರಾಜ ಒಡೆಯರು]

5) ಉತ್ತರ ಅಮೇರಿಕೆಯಲ್ಲಿ.......ಇಂಗ್ಲೀಷರ ವಸಾಹತುಗಳಿದ್ದವು. [ಹದಿಮೂರು]

6) .......ನು ಹಳ್ಳಿಯ ಮುಖ್ಯಸ್ಥನಾಗಿದ್ದನು. [ಗ್ರಾಮಿಣಿ]

7) ಶಿವಾಜಿಯು.......ಇಸ್ವಿಯಲ್ಲಿ ಮರಣ ಹೊಂದಿದನು. [1680]

2. ಕೆಳಗಿನ ಪ್ರಶ್ನೆಗಳಿಗೆ ಉತ್ತರಗಳನ್ನು ಒಂದು ಶಬ್ದ ಅಥವಾ ಒಂದು ವಾಕ್ಯದಲ್ಲಿ ಬರೆಯಿರಿ.

1) ನಗರಸಭೆಯ ಮುಖ್ಯಸ್ಥನನ್ನು ಏನೆಂದು ಕರೆಯುವರು.

ಉತ್ತರ : ನಗರಸಭಾಧ್ಯಕ್ಷ ಎಂದು ಕರೆಯುವರು.

2) ಜೀವವಿಕಾಸವೆಂದರೇನು ?

ಉತ್ತರ : ಎಲ್ಲಾ ಜೀವಿಗಳೂ ಬದಲಾವಣೆಯಾಗುತ್ತ ವೃದ್ಧಿಹೊಂದುತ್ತವೆ, ಈ ಬದಲಾವಣೆಗೆ ಜೀವವಿಕಾಸವೆನ್ನುವರು.

3) ಕಲೀಫರು ಯಾರು ?

ಉತ್ತರ : ಮಹತ್ವದ ಪೈಗಂಬರರ ನಂತರ ಬಂದ ಅವರ ಉತ್ತರಾಧಿಕಾರಿಗಳಿಗೆ ಕಲೀಫರು ಎಂದು ಕರೆಯುವರು.

4) ತಾಲೂಕ ಅಭಿವೃದ್ಧಿ ಮಂಡಲಿಯಲ್ಲಿ ಎಷ್ಟು ಮಂದಿ ಸದಸ್ಯರು ಇರುವರು ?

ಉತ್ತರ : ತಾಲೂಕ ಅಭಿವೃದ್ಧಿ ಮಂಡಲಿಯಲ್ಲಿ 13 ಅಥವಾ 19 ಮಂದಿ ಸದಸ್ಯರು ಇರುವರು.

5) ಸ್ಪಿನ್ನಿಂಗ ಜನ್ನಿಯನ್ನು ಯಾರು ಕಂಡು ಹಿಡಿದರು?

ಉತ್ತರ : ಜೇಮ್ಸ ಹಾರ್‌ಗ್ರೀವ್ಸ್ ಎಂಬವನು.

6) ಬುದ್ಧನ ಮೂಲ ಹೆಸರು ಏನು ?

ಉತ್ತರ . ಸಿದ್ಧಾರ್ಥ.

3. ಕೆಳಗಿನ ಪ್ರಶ್ನೆಗಳಿಗೆ ಮೂರು ವಾಕ್ಯಗಳು ಮೀರದಂತೆ ಉತ್ತರ ಬರೆಯಿರಿ.

1) ಶೀತಲ ಯುದ್ಧ ಎಂದರೇನು ?

ಉತ್ತರ : ಎರಡನೇ ಪ್ರಪಂಚದ ಯುದ್ಧದ ನಂತರ ಜಗತ್ತಿನಲ್ಲಿ ಮಿಲಿಟರಿ ಬಣಗಳು ರಚಿತವಾದವು. ಬ್ರಿಟನ್, ಫ್ರಾನ್ಸ್, ಅಮೇರಿಕಾ ಮೊದಲಾದ ದೇಶಗಳು ಕಮ್ಯುನಿಸಂನ ಬೆಳವಣಿಗೆಯಿಂದ ಗಾಬರಿಗೊಂಡು ಉತ್ತರ ಅಟ್ಲಾಂಟಿಕ್ ಒಪ್ಪಂದ ಕೂಟ [ನ್ಯಾಟೋ] ಬಣ ರಚಿಸಿಗೊಂಡರು. ಇದಕ್ಕೆ ಪ್ರತ್ಯುತ್ತರವಾಗಿ ರಷ್ಯ ಹಲವು ಕಮ್ಯುನಿಸ್ಟ ರಾಜ್ಯಗಳನ್ನೊಳಗೊಂಡಂತೆ ವಾರ್ಸಾ ಒಪ್ಪಂದವೆಂಬ ಒಂದು ವಿರೋಧಿ ಕೂಟವನ್ನು ರಚಿಸಿತು. ಹೀಗೆ ಅತಿ ಶೀಘ್ರದಲ್ಲಿಯೇ ಪ್ರಪಂಚದ ಹಲವಾರು ದೇಶಗಳು ಅಮೇರಿಕ ಇಲ್ಲವೆ ಸೋವಿಯಟ್ ಬಣಗಳನ್ನು ಸೇರಿಕೊಂಡವು. ಈ ಎರಡು ಬಣಗಳ ನಡುವಿನ ಸ್ಪರ್ಧೆಗೆ ಶೀತಲ ಯುದ್ಧವೆಂದು ಕರೆಯುತ್ತಾರೆ

2) ಭಾರತವು ಒಂದು ರಾಷ್ಟ್ರವೇ ? ಕಾರಣಗಳನ್ನು ಕೊಡಿರಿ ?

ಉತ್ತರ : ಯಾವದೇ ಆಳತೆಗೋಲಿನಿಂದ ವಿಮರ್ಶಿಸಿದರೂ ಸಹ ಇಂದು ಭಾರತವು ಒಂದು ರಾಷ್ಟ್ರ. ಕಾರಣಗಳು : 1] ಪ್ರತಿಯೊಬ್ಬ ಭಾರತೀಯನೂ ಇದನ್ನು ಮಾತೃಭೂಮಿ ಎಂದು ಗೌರವಿಸುತ್ತಾನೆ. 2] ತನ್ನದೇ ಆದ ನಿರ್ದಿಷ್ಟ ಭೂ ಪ್ರದೇಶ, ಸರಕಾರ ಮತ್ತು ಸಾರ್ವಭೌಮತ್ವ ಅಧಿಕಾರ ಹೊಂದಿದೆ 3] ಭಾರತದಲ್ಲಿ ವೈವಿಧ್ಯತೆಯಿದ್ದರೂ ಅದು ತನ್ನದೇ ಆದ ಸಾಂಸ್ಕೃತಿಕ ಐಕ್ಯತೆಯನ್ನು ಪಡೆದಿದೆ. ಇವುಗಳನ್ನು ಗಮನಿಸಿದರೆ ಭಾರತ ಒಂದು ರಾಷ್ಟ್ರ ಎಂದು ಹೇಳಬಹುದು.

3) ವಿಶ್ವಸಂಸ್ಥೆಯ ಪ್ರಮುಖ ಸಾಧನೆಗಳನ್ನು ತಿಳಿಸಿರಿ.

ಉತ್ತರ : 1) ಜಾಗತಿಕ ಶಾಂತಿಯನ್ನು ಸ್ಥಾಪಿಸುವಲ್ಲಿ ವಿಶ್ವಸಂಸ್ಥೆ ಪ್ರಮುಖ ಪಾತ್ರ ವಹಿಸುತ್ತಲಿದೆ. 1956ರಲ್ಲಿ ಸುಯೇಜ್ ಬಿಕ್ಕಟ್ಟಿನ ಪರಿಣಾಮವಾಗಿ ಇಸ್ರೇಲ್, ಫ್ರಾನ್ಸ್ ಮತ್ತು ಗ್ರೇಟಬ್ರಿಟನ್ ಈಜಿಪ್ತ ವಿರುದ್ಧವಾಗಿ ಮಧ್ಯ ಪ್ರವೇಶಿಸಿದಾಗ ಯುದ್ಧಕ್ಕೆ ಎಡೆಯಾಯಿತು. ವಿಶ್ವಸಂಸ್ಥೆ ಮಧ್ಯ ಪ್ರವೇಶಿಸಿ ಯುಧ್ಧವನ್ನು ಕೊನೆಗಾಣಿಸಿತು. 2) 1950 ರಲ್ಲಿ ಕೋರಿಯಾದಲ್ಲಿ ನಡೆದ ಯುದ್ಧ ವಿಶ್ವಶಾಂತಿಗೆ ಬೆದರಿಕೆಯನ್ನುಂಟುಮಾಡಿತು. ವಿಶ್ವಸಂಸ್ಥೆಯು ಯುದ್ಧ ವಿರಾಮವನ್ನು ಏರ್ಪಡಿಸಿ ಉತ್ತರ ಕೋರಿಯಾದ ಸೈನ್ಯವು ಹಿಂದಕ್ಕೆ ಸರಿಯುವಂತೆ ಮಾಡಿ ಅಲ್ಲಿ ಶಾಂತಿ ನೆಲೆಸುವಂತೆ ಮಾಡಿತು. 3) ಕಾಶ್ಮೀರ ಸಮಸ್ಯೆಯು ಭಾರತ ಪಾಕಿಸ್ತಾನಗಳ ನಡುವೆ 1948 ರಲ್ಲಿ ಯುದ್ಧಕ್ಕೆ ಕಾರಣವಾಯಿತು. ವಿಶ್ವಸಂಸ್ಥೆ ಮಧ್ಯ ಪ್ರವೇಶಿಸಿ ಕದನ ವಿರಾಮವನ್ನೇರ್ಪಡಿಸಿತು.

4) ರಾಷ್ಟ್ರೀಯ ಭಾವೈಕ್ಯತೆ ಎಂದರೇನು ?

ಉತ್ತರ : ರಾಷ್ಟ್ರೀಯ ಭಾವೈಕ್ಯತೆಯು ಪ್ರಜೆಗಳಲ್ಲಿ ತಾವೆಲ್ಲರೂ ಒಂದು ಎಂಬ ಮನೋಭಾವವನ್ನು ಸೂಚಿಸುತ್ತದೆ. ಒಂದು ರಾಷ್ಟ್ರದ ಸದಸ್ಯರು ಮತ್ತು ತಮ್ಮ ನಡುವೆ ಅನೇಕ ಸರಿಸಮಾನ ಗುಣ ಲಕ್ಷಣಗಳಿವೆ. ಎಂಬ ಭಾವನೆಯನ್ನು ಉಂಟು ಮಾಡುತ್ತದೆ. ಅವರೊಳಗೆ ಒಗ್ಗಟ್ಟು, ಸಹಿಷ್ಣುತೆ, ಪರಸ್ಪರ ಗೌರವಭಾವನೆ ಮತ್ತು ಪ್ರೀತಿಯನ್ನು ಅದು ವೃದ್ಧಿಸುತ್ತದೆ. ರಾಷ್ಟ್ರೀಯ ಭಾವೈಕ್ಯತೆಯು ಗತಕಾಲದ ಸಾಧನೆಗಳ ಬಗ್ಗೆ ಹೆಮ್ಮೆಯ ಭಾವವನ್ನು ಮತ್ತು ಭವಿಷ್ಯದ ಆಶೋತ್ತರಗಳ ಬಗ್ಗೆ ಸುಂದರ ಕಲ್ಪನೆಗಳನ್ನು ಮೂಡಿಸುತ್ತದೆ.

5) 1942 ರ "ಭಾರತವನ್ನು ಬಿಟ್ಟು ತೊಲಗಿ" ಚಳುವಳಿ ಏಕೆ ವಿಫಲವಾಯಿತು ವಿವರಿಸಿ.

ಉತ್ತರ : 1942 ರ "ಭಾರತವನ್ನು ಬಿಟ್ಟು ತೊಲಗಿ" ವಿಫಲವಾಗಲು ಕಾರಣಗಳೆಂದರೆ 1] ಶ್ರೀಮಂತರು, ವರ್ತಕರು, ರಾಜಕುಮಾರರು ಚಳುವಳಿಯಿಂದ ಹೊರಗುಳಿದರು. 2] ಚಳುವಳಿಗೆ ಬೆಂಬಲ ಕೊಡದಂತೆ ಜಿನ್ನಾರವರು ಮುಸ್ಲಿಂರನ್ನು ತಡೆಹಿಡಿದರು. 3) ಪೋಲೀಸರು, ಅಧಿಕಾರಿಗಳು ಬ್ರಿಟಿಷ್‌ರಿಗೆ ಸ್ವಾಮಿನಿಷ್ಠೆಯುಳ್ಳವರಾಗಿದ್ದರು.

6) ರಾಷ್ಟ್ರಾಧ್ಯಕ್ಷರ 4 ಕರ್ತವ್ಯಗಳನ್ನು ಹೇಳಿರಿ.

ಉತ್ತರ : i] ರಾಷ್ಟ್ರಾಧ್ಯಕ್ಷರು ಕಾರ್ಯಾಂಗದ ಮುಖ್ಯಸ್ಥರಾದುದರಿಂದ, ಲೋಕಸಭೆಯಲ್ಲಿ ಬಹುಮತ ಪಡೆದ ಪಕ್ಷದ ನಾಯಕನನ್ನು ಪ್ರಧಾನ ಮಂತ್ರಿಯನ್ನಾಗಿ ನಿಯಮಿಸುತ್ತಾರೆ. ii] ನ್ಯಾಯಾಂಗದ ಮುಖ್ಯ ಅಧಿಕಾರಿಯಾದುದರಿಂದ ಉಚ್ಚ ಮತ್ತು ಉಚ್ಚತಮ ನ್ಯಾಯಾಲಯಗಳಿಗೆ ನ್ಯಾಯಮೂರ್ತಿಗಳನ್ನು ನಿಯಮಿಸುತ್ತಾರೆ iii] ನ್ಯಾಯಾಲಯವು ವಿಧಿಸುವ ಶಿಕ್ಷೆಯನ್ನು "ರದ್ದುಪಡಿಸುವ" "ಕ್ಷಮಿಸುವ" ಶಿಕ್ಷೆಯ ಅವಧಿಯನ್ನು ಕಡಿಮೆ ಮಾಡುವ ಹಾಗೂ ಮರಣ ದಂಡನೆಯನ್ನು

ರದ್ದುಗೊಳಿಸುವ ಅಧಿಕಾರವಿದೆ. iv] ವಿಶೇಷ ಸಂದರ್ಭಗಳಲ್ಲಿ ವಿಶೇಷ ಆಜ್ಞೆಗಳನ್ನು ಘೋಷಿಸುವರು.

7) ವಿಶ್ವಸಂಸ್ಥೆಯ ಯಾವುದಾದರೂ ಎರಡು ಅಂಗಗಳನ್ನು ಹೆಸರಿಸಿ.

ಉತ್ತರ : ಪ್ರಶ್ನೆ IV (3) ಎಪ್ರಿಲ್ 1984-ನೋಡಿರಿ

4. ಕೆಳಗಿನ ಪ್ರಶ್ನೆಗಳಿಗೆ ಐದು ಅಥವಾ ಆರುವಾಕ್ಯಗಳಲ್ಲಿ ಉತ್ತರ ಬರೆಯಿರಿ.

1] ಸ್ಟ್ಯಾಲಿನ್‌ನು ಏನೇನು ಸಾಧನೆಗಳನ್ನು ಮಾಡಿದನು ?

ಉತ್ತರ : 1942 ರಲ್ಲಿ ಲೆನಿನ್ ಮರಣ ಹೊಂದಿದನು. 1927 ರಲ್ಲಿ ಸ್ಟ್ಯಾಲಿನ್ ಸರ್ವಾಧಿಕಾರಿಯಾದನು. ಅವನ ಸಾಧನೆಗಳು—

1] ಪಾಶ್ಚಿಮಾತ್ಯ ರಾಷ್ಟ್ರಗಳನ್ನು ಎದುರು ಹಾಕಿಕೊಳ್ಳದೇ ಅವರೊಂದಿಗೆ ಒಪ್ಪಂದ ಮಾಡಿಕೊಂಡನು.

2) ರಷ್ಯಾವನ್ನು ರಾಷ್ಟ್ರಸಂಘದ ಸದಸ್ಯ ರಾಷ್ಟ್ರವನ್ನಾಗಿ ಮಾಡಿ ಜಾಗತಿಕ ಶಾಂತಿಗೆ ಶ್ರಮಿಸಿದನು.

3) ಪಂಚವಾರ್ಷಿಕ ಯೋಜನೆಗಳನ್ನು ಪ್ರಾರಂಭಿಸಿ ರಷ್ಯಾದ ಆರ್ಥಿಕ ಮತ್ತು ಔದ್ಯೋಗಿಕ ಯೋಜನೆಗಳಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದನು.

4) 1928 ರಲ್ಲಿ ಮೊದಲನೆ ಪಂಚವಾರ್ಷಿಕ ಯೋಜನೆಯನ್ನು ಪ್ರಾರಂಭಿಸಿ ಕೈಗಾರಿಕಾ ಪ್ರಗತಿಗೆ ಆದ್ಯತೆ ನೀಡಿದನು. ಇದರಿಂದ ರಶಿಯಾ ಭಾರಿ ಪ್ರಮಾಣದ ಯಂತ್ರಗಳ ಉತ್ಪಾದನೆ ಮತ್ತು ಉದ್ಯೋಗಗಳಲ್ಲಿ ಅದ್ಭುತ ಪ್ರಗತಿಯನ್ನು ಸಾಧಿಸಿತು.

5) 1933 ರಲ್ಲಿ ಅವನು ಪ್ರಾರಂಭಿಸಿದ ದ್ವಿತೀಯ ಪಂಚವಾರ್ಷಿಕ ಯೋಜನೆ ನಿತ್ಯ ಬಳಕೆ ವಸ್ತುಗಳ ಉತ್ಪಾದನೆಗಳಿಗಾಗಿ ಪ್ರಾಧಾನ್ಯತೆ ನೀಡಿತು. ಆಹಾರ ಉತ್ಪಾದನೆಯನ್ನು ಹೆಚ್ಚಿಸಲಾಯಿತು. ಜನರ ಜೀವನ ಮಟ್ಟವನ್ನು ಉತ್ತಮಗೊಳಿಸಲಾಯಿತು.

6) 1938 ರಲ್ಲಿ ಸ್ಟ್ಯಾಲಿನ್ ಪ್ರಾರಂಭಿಸಿದ ತೃತೀಯ ಯೋಜನೆ ರಶಿಯಾದ ಸರ್ವಾಂಗೀಣ ಪ್ರಗತಿಗೆ ಸಹಾಯ ನೀಡಿತು. ರಷ್ಯಾ ಪ್ರಗತಿಪರ ರಾಷ್ಟ್ರವಾಯಿತು.

2) ಯುನೆಸ್ಕೊ [UNESCO] ವಿನ ಕಾರ್ಯಗಳಾವವು ?

ಉತ್ತರ : ಯುನೆಸ್ಕೊ [UNFSCO] ಇದರ ಮುಖ್ಯ ಕಚೇರಿ ಪ್ಯಾರೀಸದಲ್ಲಿದೆ. ರಾಷ್ಟ್ರಗಳ ಬಡತನ ಮತ್ತು ಅಜ್ಞಾನವನ್ನು ತೆಗೆದುಹಾಕಿ ತಿಳುವಳಿಕೆ ಮತ್ತು ಸಹಕಾರವನ್ನು ಪ್ರೋತ್ಸಾಹಿಸುವದು ವಿಶ್ವಶಾಂತಿಯನ್ನು ನೆಲೆಗೊಳಿಸುವದು. ಕಾರ್ಯಗಳು : 1) ಶೈಕ್ಷಣಿಕ, ವೈಜ್ಞಾನಿಕ, ಸಾಂಸ್ಕೃತಿಕ ವಿಷಯಗಳಲ್ಲಿ ವಿವಿಧ ರಾಷ್ಟ್ರಗಳಿಗೆ ಸಹಾಯ ನೀಡುವದು. 2) ಶಿಕ್ಷಣದಲ್ಲಿ ಸಂಶೋಧನ ಕಾರ್ಯಕ್ರಮಗಳನ್ನು ಯೋಜಿಸುವದು. 3) ಸಾಕ್ಷರತಾ ಚಳುವಳಿಗೆ ಪ್ರೋತ್ಸಾಹ ನೀಡುವದು 4] ಪ್ರತಿಯೊಂದು ರಾಷ್ಟ್ರವು ತನ್ನ ಸಂಸ್ಕೃತಿಯನ್ನು ಬೆಳೆಸಿಕೊಳ್ಳಲು ಸಹಾಯ ಮಾಡುವದು 5) ಯುನೆಸ್ಕೊ ಇದು ಭಾರತದ ಅಧ್ಯಾಪಕರನ್ನು ಮತ್ತು ವಿದ್ಯಾರ್ಥಿಗಳನ್ನು ವಿದೇಶಕ್ಕೆ ಕಳುಹಿಸಲು ಹಾಗೂ ಅಲ್ಲಿಯವರನ್ನು ಭಾರತಕ್ಕೆ ಬರಲು ಸಹಾಯಕವಾಗಿದೆ 6) ಅಧ್ಯಾಪಕರಿಗೆ, ವಿಜ್ಞಾನಿಗಳಿಗೆ, ಇಂಜನಿಯರುಗಳಿಗೆ ತರಬೇತಿ ನೀಡುತ್ತದೆ.

3) ರಾಜಾರಾಂ ಮೋಹನರಾಯರ ಸೇವೆಗಳನ್ನು ಕುರಿತು ಸಂಕ್ಷೇಪವಾಗಿ ಬರೆಯಿರಿ.

ಉತ್ತರ : ರಾಜಾರಾಮ ಮೋಹನರಾಯರು ಬಂಗಾಲದವರು, 1772 ರಲ್ಲಿ ಜನನ ಇವರು ಈಸ್ಟ ಇಂಡಿಯಾ ಕಂಪನಿಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಈ ಕಾಲದಲ್ಲಿಯೇ ಆಂಗ್ಲ ಭಾಷೆಯ ಅಭ್ಯಾಸ ಮಾಡಿದರು.

ಇವರು ಭಾರತಕ್ಕೆ ರಾಜಕೀಯ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಅಮೂಲ್ಯ ಸೇವೆಯನ್ನು ಸಲ್ಲಿಸಿರುವರು. ರಾಜಕೀಯ ಕ್ಷೇತ್ರದಲ್ಲಿ ಇವರು ಬ್ರಿಟಿಷ್ ಇಂಡಿಯಾದ ಸೇನೆಯ ಭಾರತೀಕರಣ, ನ್ಯಾಯಾಲಯಗಳ ಭಾಷೆ ಇಂಗ್ಲೀಷ್ ಇರಬೇಕು ಮುದ್ರಣ ಸ್ವಾತಂತ್ರ್ಯವಿರಬೇಕು. ಇವುಗಳಿಗೆ ಹೋರಾಡಿದರು.

ಪಾಶ್ಚಿಮಾತ್ಯ ಶೈಕ್ಷಣಿಕ ತಳಹದಿಯ ಮೇಲೆ ಭಾರತೀಯರಿಗೆ ಇಂಗ್ಲೀಷ ಶಿಕ್ಷಣ ದೊರೆಯಬೇಕು ಎಂಬುದು ಅವರ ಅಭಿಪ್ರಾಯವಿತ್ತು. ಸತಿ ಹೋಗುವ ಪದ್ಧತಿಯನ್ನು ವಿರೋಧಿಸಿದರು. ಸ್ತ್ರೀಯರ ಸ್ಥಾನವನ್ನು ಎತ್ತರಿಸಲು ಪ್ರಯತ್ನಿಸಿದರು. ವಿಧವೆಯರ ಸ್ಥಿತಿಗತಿ, ಬಹುಪತ್ನಿತ್ವ ನಿರ್ಮೂಲನ ಇವುಗಳಿಗಾಗಿ ಹೋರಾಡಿದರು.

ಧಾರ್ಮಿಕ ಕ್ಷೇತ್ರದಲ್ಲಿ ಇವರು ಬ್ರಹ್ಮ ಸಮಾಜವನ್ನು ಸ್ಥಾಪಿಸಿ ಒಬ್ಬ ಈಶ್ವರನ ಪೂಜೆಯನ್ನು ಪ್ರತಿಪಾದಿಸಿ ಸರ್ವಧರ್ಮ ಸಮನ್ವಯವನ್ನು ಉಂಟು ಮಾಡಿದರು, ಅವರು ಜಾತಿ ಪದ್ಧತಿ, ಸಹಗಮನ ಪದ್ಧತಿ ಮತ್ತು ಹೆಣ್ಣು ಶಿಶುಗಳ ಹತ್ಯೆಯಂತಹ ಸಾಮಾಜಿಕ ಕೆಡಕುಗಳನ್ನು ವಿರೋಧಿಸಿದರು.

ಸಂಕ್ಷಿಪ್ತವಾಗಿ ಹೇಳುವದಾದರೆ ರಾಜಾರಾಮ ಮೋಹನರಾಯರು ಭಾರತಕ್ಕೆ ಮಹತ್ತರ ಸೇವೆ ಸಲ್ಲಿಸಿದ್ದಾರೆ, ಅವರು ಉದಾರವಾದಿಗಳೂ, ವಿಚಾರವಾದಿಗಳೂ, ವಿಶಾಲ ಮನೋಭಾವ

ದವರೂ ಆಗಿದ್ದರು. ಅವರನ್ನು "ಆಧುನಿಕ ಭಾರತ ಜನಕ" ಎಂದು ಕರೆಯುವುದು ಸೂಕ್ತವಾಗಿಯೇ ಇದೆ.

4) ಭಾರತದ ಪ್ರಜೆಗಳಿಗೆ ನೀಡಿರುವ ಮೂಲಭೂತ ಹಕ್ಕುಗಳಾವುವು.

ಉತ್ತರ : ಭಾರತದ ರಾಜ್ಯಾಂಗವು ತನ್ನ ಪೌರರಿಗೆ ಕೆಲವು ಹಕ್ಕುಗಳನ್ನು ಕೊಟ್ಟಿದೆ. ಅವು ಯಾವುವೆಂದರೆ 1) ಸಮಾನತೆಯ ಹಕ್ಕು 2) ಸ್ವಾತಂತ್ರ್ಯದ ಹಕ್ಕು 3) ಶೋಷಣೆಯನ್ನು ವಿರೋಧಿಸುವ ಹಕ್ಕು 4) ಧಾರ್ಮಿಕ ಸ್ವಾತಂತ್ರ್ಯದ ಹಕ್ಕು 5) ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕು 6) ಶಾಸನ ಬದ್ಧ ಪರಿಹಾರಗಳ ಹಕ್ಕು.

ಭಾರತವು 1950 ರ ಜನವರಿ 26 ರಂದು ಸಾರ್ವಭೌಮ ಲೋಕತಂತ್ರಾತ್ಮಕ ಗಣರಾಜ್ಯವಾದ ಸಂದರ್ಭದಲ್ಲಿ ಹೊಸ ರಾಜ್ಯಾಂಗ ಆಚರಣೆಗೆ ಬಂದಿತು. ಈ ರಾಜ್ಯಾಂಗವು ಮೇಲೆ ಹೇಳಿದ ಹಕ್ಕುಗಳನ್ನು ತನ್ನ ಪೌರರಿಗೆ ಕೊಟ್ಟಿದೆ.

ಪ್ರತಿಯೊಬ್ಬ ಪೌರನಿಗೂ ಸಮಾನತೆಯ ಹಕ್ಕಿದೆ. ಸ್ತ್ರೀ ಪುರುಷರಾದಿಯಾಗಿ ಸರ್ವರಿಗೂ ಸಮಾನವಾದ ಕೆಲಸ ಮತ್ತು ಸಮಾನವಾದ ವೇತನ ದೊರಕಿಸಿಕೊಳ್ಳುವ ಅಧಿಕಾರವಿದೆ ಅದರಂತೆ ಪ್ರತಿಯೊಬ್ಬ ಪೌರನಿಗೂ ವಾಕ್ ಸ್ವಾತಂತ್ರ್ಯ, ಅಭಿಪ್ರಾಯ ಸ್ವಾತಂತ್ರ್ಯಗಳಿದ್ದು ಪೌರನು ತನ್ನ ಅಭಿಪ್ರಾಯಗಳನ್ನು ನಿರ್ಭಯವಾಗಿ ವ್ಯಕ್ತಪಡಿಸುವ ಅಧಿಕಾರವಿದೆ. ತನ್ನ ಹಕ್ಕುಗಳಿಗೆ ಸರ್ಕಾರವಾಗಲಿ ಅಥವಾ ಇತರರೇ ಯಾರೇ ಆಗಲಿ ಧಕ್ಕೆ ತಂದರೆ, ಅಂತಹ ವ್ಯಕ್ತಿಯ ಮೇಲೆ ಅಥವಾ ಸರ್ಕಾರದ ಮೇಲೆ ಕ್ರಮ ಕೈಗೊಳ್ಳಲು ನ್ಯಾಯಾಲಯಕ್ಕೆ ಹೋಗಬಹುದು. ನ್ಯಾಯಾಲಯದಲ್ಲಿ ತನ್ನ ಹಕ್ಕನ್ನು ಸಾಬೀತು ಮಾಡಿ ನ್ಯಾಯ ದೊರಕಿಸಿಕೊಳ್ಳಬಹುದು, ತನಗೆ ಇಷ್ಟ ಪಟ್ಟಷ್ಟು ವಿದ್ಯೆಯನ್ನು ಕಲಿಯಲು ಪ್ರತಿ ಪೌರನಿಗೂ ಹಕ್ಕಿದೆ. ಭಾರತದ ರಾಜ್ಯಾಂಗದ ಪ್ರಕಾರ ಪ್ರತಿಯೊಬ್ಬ ಪೌರನೂ ಧಾರ್ಮಿಕ ಸ್ವಾತಂತ್ರ್ಯ ಪಡೆದಿದ್ದಾನೆ. ಭಾರತವು ಜಾತ್ಯಾತೀತ ರಾಷ್ಟ್ರವಾಗಿದ್ದು ಯಾವ ಧಾರ್ಮಿಕ ತತ್ವಗಳನ್ನಾದರೂ ಅನುಸರಿಸಬಹುದಾಗಿದೆ. ಹೀಗೆ ಭಾರತದ ಪ್ರತಿಯೊಬ್ಬ ಪ್ರಜೆಯೂ ಒಂದಲ್ಲ ಒಂದು ಭರವಸೆಯನ್ನು ಹೊಂದಿದ್ದಾನೆ. ಈ ಭರವಸೆಗಳು ರಾಜ್ಯಾಂಗದಲ್ಲಿ ಅಡಕವಾಗಿವೆ. ವ್ಯಕ್ತಿಯ ಹಕ್ಕುಗಳು ಉಚ್ಚತಮ ನ್ಯಾಯಾಲಯದಿಂದ ರಕ್ಷಿಸಲ್ಪಟ್ಟಿವೆ. ಅದನ್ನು "ಮೂಲಭೂತ ಹಕ್ಕುಗಳ ರಕ್ಷಕ" ಎಂದು ಕರೆಯಲಾಗಿದೆ.

ಇವುಗಳ ಜೊತೆಗೆ ಭಾರತೀಯನಿಗೆ ಮತ ಚಲಾಯಿಸುವ ಹಕ್ಕು ವಿಧಾನ ಸಭೆ, ಲೋಕಸಭೆಗಳಿಗೆ ಸದಸ್ಯತ್ವಕ್ಕೆ ಸ್ಪರ್ಧಿಸುವ ರಾಜಕೀಯ ಹಕ್ಕುಗಳೂ ಇವೆ.

5) ಸಮಕಾಲೀನ ಪ್ರಪಂಚವೆಂದರೇನು ?

ಉತ್ತರ : ಎರಡನೆ ಪ್ರಪಂಚದ ಯುದ್ಧದ ವಿಪತ್ತಿನಿಂದ ಉದಯಿಸಿದ ಪ್ರಪಂಚವನ್ನು ಸಮಕಾಲಿನ ಪ್ರಪಂಚ ಎಂದು ಕರೆಯುತ್ತಾರೆ. ಅಂತರರಾಷ್ಟ್ರೀಯ ವಿವಾದಗಳಿಗೆ ಯುದ್ಧ ಪರಿಹಾರವಲ್ಲ. ವಿಶ್ವಸಂಸ್ಥೆಯಿಂದ ಶಾಶ್ವತ ಶಾಂತಿಯನ್ನು ಪಡೆಯಬಹುದು ಎಂಬ ಪಾಠವನ್ನು ಮಾನವನು ಇತಿಹಾಸದಿಂದ ಕಲಿತಿದ್ದಾನೆ ಎಂಬ ಹೆಚ್ಚಿನ ಆಶಯದಿಂದ ಪ್ರಾರಂಭವಾಯಿತು. ಈ ಭರವಸೆ ಇನ್ನೂ ಕೈಗೂಡಿಲ್ಲ.

6) 1971 ರಲ್ಲಿ ಭಾರತವು ಬಾಂಗ್ಲಾ ದೇಶದ ಸಮಸ್ಯೆಯಲ್ಲಿ ಏಕೆ ಪ್ರವೇಶ ಮಾಡಬೇಕಾಯಿತು ?

ಉತ್ತರ : ವಿಶ್ವ ರಾಜಕೀಯದಲ್ಲಿ ಭಾರತ ಅಲಿಪ್ತ ನೀತಿಯನ್ನು ಅನುಸರಿಸುತ್ತಲಿದೆ. ಆದರೆ ಆದರ ವಿದೇಶ ನೀತಿ ಕ್ರಿಯಾತ್ಮಕ ಅಲಿಪ್ತ ನೀತಿಯಾಗಿದೆ. ವಿಶ್ವಶಾಂತಿಗೆ ಭಂಗ ಬರುವಂತಹ ಘಟನೆಗಳನ್ನು ಭಾರತ ಪ್ರತಿಭಟಿಸುತ್ತದೆ. ಇನ್ನೊಂದು ದೇಶದ ಸ್ವಾತಂತ್ರ್ಯ ರಕ್ಷಣೆಗೆ ಅದು ತನ್ನ ಸಹಾಯ ಸಹಕಾರಗಳನ್ನು ನೀಡುತ್ತಲಿದೆ. ಪಾಕಿಸ್ತಾನ ಬಂಗ್ಲಾ ದೇಶದ ಸ್ವಾತಂತ್ರ್ಯ ಹರಣಕ್ಕಾಗಿ ಪ್ರಯತ್ನಿಸಿ, ಹಿಂಸಾಚಾರ ನಡೆಸಿದಾಗ ಭಾರತ ಮಧ್ಯ ಪ್ರವೇಶಮಾಡಿ ಬಾಂಗ್ಲಾ ದೇಶಕ್ಕೆ ಸ್ವಾತಂತ್ರ್ಯ ಕೊಡಿಸುವಲ್ಲಿ ಯಶಸ್ವಿಯಾಯಿತು.

5. ಕೆಳಗಿನ ಪ್ರಶ್ನೆಗಳಿಗೆ ಒಂದೂವರೆ ಪುಟಗಳಿಗೆ ಮೀರದಂತೆ ಉತ್ತರ ಬರೆಯಿರಿ.

1) ಭಕ್ತಿ ಪಂಥದ ಸಂತರು ಯಾರು ? ಅವರ ಸಂದೇಶವೇನು ?

ಉತ್ತರ : ಭಾರತದ ಇತಿಹಾಸದ ಮೇಲೆ ಪ್ರಭಾವ ಬೀರಿದ ಪ್ರಮುಖ ಚಳುವಳಿ ಭಕ್ತಿ ಚಳುವಳಿ. ಶಂಕರಾಚಾರ್ಯ, ರಾಮಾನುಜ, ಮಧ್ವಾಚಾರ್ಯ, ಬಸವಣ್ಣ, ಕಬೀರದಾಸ್, ಮೀರಾಬಾಯಿ, ರಮಾನಂದ, ಗುರುನಾನಕ್ ಮೊದಲಾದವರು ಭಕ್ತಿಯ ಮೂಲಕ ಆತ್ಮ ಉದ್ಧಾರವನ್ನು ಪ್ರತಿಪಾದಿಸಿದರು

ಮಧ್ಯಯುಗದ ಅತ್ಯಂತ ಪ್ರಮುಖ ಬೆಳವಣಿಗೆಯೆಂದರೆ ಭಾರತಕ್ಕೆ ಇಸ್ಲಾಂ ಧರ್ಮದ ಆಗಮನ. ಇಸ್ಲಾಂ ಧರ್ಮವು ಎರಡು ಮೂಲತತ್ವಗಳ ನೆಲೆಯಾಗಿತ್ತು. ದೇವರು ಒಬ್ಬನೇ, ಮಾನವರೆಲ್ಲ ಒಂದೇ ಎಂಬ ಮೂಲ ತತ್ವಗಳಿಂದ ಸಹೋದರತೆ ಮತ್ತು ಸಮಾನತೆ ಜನ್ಮ ತಾಳಿದವು. ಮುಂದೆ ಇದೇ ವಿಚಾರ ಭಕ್ತಿ ಪಂಥದ ಉದಯಕ್ಕೆ ಕಾರಣವಾಯಿತು.

ಮೇಲೆ ಹೇಳಿದ ಸಂತರು ಭಕ್ತಿ ಮತ್ತು ಪ್ರೀತಿಯ ಮೂಲಕ ಆತ್ಮೋದ್ಧಾರವನ್ನು ಮತ್ತು ಜಾತಿವಾದದ ಮೂಲೋಚ್ಛಾಟನೆಯನ್ನು ಪ್ರತಿಪಾದಿಸಿದರು. ಸೂಫಿ ಸಂತರು ಜಾತಿ, ಪಂಥ, ವರ್ಣಗಳನ್ನು ಗಮನಿಸದೆ ಪ್ರೀತಿ, ತ್ಯಾಗ ಮತ್ತು

ಜೀವನದ ಸಂದೇಶವನ್ನು ಸಾರಿದರು. ಭಾರತದಲ್ಲಿ ಹಿಂದೂ-ಮುಸ್ಲಿಂರನ್ನು ಈ ಸೂಫಿ ಸಂಘದವರು ಆಕರ್ಷಿಸಿ ಐಕ್ಯತೆಯನ್ನು ಸಾಧಿಸಿದರು. ಮಹಾತ್ಮಾ ಕಬೀರದಾಸ್ ರಮಾನಂದರ ಶಿಷ್ಯರಾಗಿ ತಾವು ಮುಸ್ಲಿಂರಾದರೂ ಹಿಂದೂ ಮುಸ್ಲಿಂ ಐಕ್ಯತೆಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟರು.

2) ಶಾಂತಿ ಸಮಯದಲ್ಲಿ ರಕ್ಷಣಾ ಪಡೆಯ ಪಾತ್ರವೇನು?

**ಉತ್ತರ :** ಭಾರತವು ವಿಶಾಲವಾದ ದೇಶ, ಇದರ ಗಡಿಗಳನ್ನು ರಕ್ಷಿಸುವದು ರಕ್ಷಣಾ ದಳಗಳ ಮುಖ್ಯ ಕರ್ತವ್ಯ. ಆದಕ್ಕಾಗಿ ನಮ್ಮ ದೇಶದ ರಕ್ಷಣಾ ಪಡೆಗಳು ಹಗಲಿರುಳೂ ದುಡಿಯುತ್ತವೆ. ಶಾಂತಿ ಸಮಯದಲ್ಲು ಕೂಡಾ ನಮ್ಮ ರಕ್ಷಣಾ ಸೇನೆಯು ಮಹತ್ತರ ಪಾತ್ರ ವಹಿಸುತ್ತಲಿದೆ. ಯಾವದೇ ಬಗೆಯ ದಂಗೆ ಅಥವಾ ಪ್ರತಿಕೂಲ ಚಟುವಟಿಕೆಗಳಂತಹ ಆತಂಕಕಾರಿ ಆಂತರಿಕ ಸಮಯದಲ್ಲಿ ಪೋಲೀಸರು ಪರಿಸ್ಥಿತಿಯನ್ನು ತಹಬಂದಿಗೆ ತರುವಲ್ಲಿ ಅಸಮರ್ಥರಾದಾಗ ಸೈನಿಕ ದಳಗಳು ಪೌರ ಅಧಿಕಾರಿಗಳಿಗೆ ಸಹಾಯ ಮಾಡುತ್ತವೆ. ಇದಲ್ಲದೆ ಪ್ರವಾಹ, ಬರಗಾಲ, ಭೂಕಂಪ, ಅಗ್ನಿ ಅನಾಹುತಗಳು, ಚಂಡಮಾರುತ ಮುಂತಾದ ನೈಸರ್ಗಿಕ ವಿಕೋಪಗಳಿಂದ ದೇಶದ ವಿವಿಧ ಭಾಗಗಳಲ್ಲಿ ಉಂಟಾಗುವ ಕ್ಷೋಭೆಯನ್ನು ನಿವಾರಿಸುವಲ್ಲಿ ನಮ್ಮ ರಕ್ಷಣಾ ಪಡೆಗಳು ನೆರವು ನೀಡುತ್ತವೆ. ಇದಲ್ಲದೆ ನಮ್ಮ ರಕ್ಷಣಾ ಪಡೆಗಳು ವಿದೇಶದಲ್ಲಿ ಐದು ಬಾರಿ ಶಾಂತಿ ದೂತರಾಗಿ ಪಾಲ್ಗೊಂಡಿರುವ ಅಪೂರ್ಣ ಗೌರವ ಮತ್ತು ವೈಶಿಷ್ಟ್ಯ ಭಾರತೀಯ ಸೈನಿಕ ಬಲಗಳಿಗೆ ಇದೆ. ವಿಶ್ವಸಂಸ್ಥೆಯ ಆವ್ಹಾನದ ಮೇರೆಗೆ ಭಾರತದ ಸೈನಿಕ ತುಕಡಿಗಳು ಕೋರಿಯ, ಈಜಿಪ್ತ ಮತ್ತು ಕಾಂಗೋಗಳಿಗೆ ಕಳುಹಿಸಲ್ಪಟ್ಟಿದ್ದವು. ಆ ದೇಶಗಳಲ್ಲಿ ಶಾಂತಿ ನೆಲೆಸುವಂತೆ ಮಾಡಲು ನಮ್ಮ ಸೇನಾ ಪಡೆಗಳು ಅತ್ಯಂತ ಮಹತ್ವದ ಪಾತ್ರ ವಹಿಸಿವೆ.

3) ತನ್ನ ದೇಶದ ಆಂತರಿಕ ಸಮಸ್ಯೆಗಳ ಬಗ್ಗೆ ಹಿಟ್ಲರನು ಹೇಗೆ ವ್ಯವಹರಿಸಿದನು ?

**ಉತ್ತರ :** ಪ್ರಪಂಚದ ಮೊದಲನೆ ಮಹಾಯುದ್ಧವು 1914 ರಿಂದ 1918 ರ ವರೆಗೆ ನಡೆಯಿತು. ಇದರಲ್ಲಿ ಜರ್ಮನಿ ಸೋತಿತು. ಆದರ ಪರಿಣಾಮವಾಗಿ ಅದು ಅನೇಕ ರೀತಿಯ ತೊಂದರೆಗಳನ್ನು ಅನುಭವಿಸಬೇಕಾಯಿತು. ವರ್ಸೆಲಿಸ್ ಒಪ್ಪಂದ ಕರಾರುಗಳಿಂದ ಜರ್ಮನಿ ತನ್ನ ವಸಹಾತುಗಳನ್ನು ಕಳೆದುಕೊಂಡಿತಲ್ಲದೆ ಯುದ್ಧದ ವೆಚ್ಚ ಕೊಡಬೇಕಾಯಿತು. ಜರ್ಮನಿಯಲ್ಲಿ ಆಂತರಿಕ ಸಮಸ್ಯೆಗಳುಂಟಾದವು.

ಇಂಥ ಸಮಯದಲ್ಲಿ ಹಿಟ್ಲರ್ ನಾಝಿ ಪಕ್ಷವನ್ನು ಸ್ಥಾಪಿಸಿ ತೀವ್ರ ರಾಷ್ಟ್ರೀಯವಾದವನ್ನು ಪಸರಿಸಿದನು. 1933 ರಲ್ಲಿ ಶಾಸನ ಸಭೆಯ ಪ್ರಧಾನಿಯಾದನು. ಆಸ್ಟ್ರಿಯಾ, ಪೋಲಂಡ, ಜೆಕೊಸ್ಲೊವಾಕಿಯಾಗಳಲ್ಲಿಯ ಜರ್ಮನ್‌ರನ್ನು ಐಕ್ಯಗೊಳಿಸಿ ವಿಶಾಲ ಜರ್ಮನಿಯನ್ನು ಸ್ಥಾಪಿಸಿದನು. ಜರ್ಮನ್ ಜನಾಂಗವು ವಿಶ್ವದಲ್ಲಿಯೇ ಶ್ರೇಷ್ಠವಾದದ್ದು ಎಂಬ ವಿಚಾರಧಾರೆಯನ್ನು ಪ್ರಸಾರ ಮಾಡಿದನು. ಅವನು ತನ್ನ ವಿರೋಧಿಗಳನ್ನು ಬಲ ಪ್ರಯೋಗದಿಂದ ನಿರ್ನಾಮ ಮಾಡಿದನು.

ದೇಶದ ಎಲ್ಲ ಜನರಿಗೂ ಉದ್ಯೋಗ ನೀಡಿ ಸಮರ್ಥವಾದ ಆಡಳಿತ ಸ್ಥಾಪಿಸಿದನು. ತನ್ನ ಜನರ ಆರ್ಥಿಕ ಪರಿಸ್ಥಿತಿಯನ್ನು ಅಭಿವೃದ್ಧಿಗೊಳಿಸಿದನು. ಆರ್ಥಿಕ ಸಂಸ್ಥೆಗಳನ್ನು ರಾಷ್ಟ್ರೀಕರಿಸಿದನು. ವೃದಾಪ್ಯ ಮತ್ತು ಆರೋಗ್ಯ ವಿಮಾ ಯೋಜನೆಗಳನ್ನು ಜಾರಿಗೆ ತಂದನು. ವ್ಯವಸಾಯ ರಂಗದಲ್ಲಿ ಮಹತ್ವದ ಸುಧಾರಣೆಗಳನ್ನು ಮಾಡಿದನು. ಅತಿ ಸ್ವಲ್ಪ ಕಾಲದಲ್ಲಿಯೇ ಜರ್ಮನಿಯು ವಿಶ್ವದ ಹೆಚ್ಚು ಪ್ರಬಲವಾದ ರಾಷ್ಟ್ರವಾಯಿತು. ಜರ್ಮನಿ ಆಕ್ರಮಣಕಾರಿ ಆಗಿ ಜಗತ್ತಿನ ಶಾಂತಿಗೆ ಬೆದರಿಕೆಯನ್ನುಂಟು ಮಾಡಿತು.

4) ಎರಡನೆ ಪ್ರಪಂಚ ಯುದ್ಧದ ಹಾನಿಗಳಿಂದ ಜಪಾನ್ ಹೇಗೆ ಚೇತರಿಸಿಕೊಂಡಿತು ?

**ಉತ್ತರ :** 1945 ರಲ್ಲಿ ಜಪಾನು ಅಮೇರಿಕನ್ನರಿಗೆ ಶರಣಾಗತವಾಯಿತು. ಜನರಲ್ ಮೇಕ ಆರ್ಥರ್ ಆದರ ಅಧಿಕಾರ ವಹಿಸಿಕೊಂಡನು. ಯುದ್ಧದ ಹಾನಿಗಳಿಂದ ಚೇತರಿಸಿಕೊಳ್ಳಲು ಜಪಾನ್ ಅದ್ಭುತ ಪ್ರಯತ್ನಗಳನ್ನು ಮಾಡಿತು. 1945 ರಿಂದ 1952 ರ ವರೆಗೆ ಅಂದರೆ ಏಳು ವರ್ಷಗಳ ಅವಧಿಯಲ್ಲಿ ಅದು ಮತ್ತೆ ಚೇತರಿಸಿಕೊಂಡಿತು. ಈ ಅವಧಿಯಲ್ಲಿ ಜಪಾನಿನ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಗಳಲ್ಲಿ ಅನೇಕ ಬದಲಾವಣೆಗಳನ್ನು ತರಲಾಯಿತು. ಜಪಾನ ತನ್ನ ನಾಡಿನ ವಿಸ್ತರಣಾ ನೀತಿಯನ್ನು ತ್ಯಜಿಸಿತು. ರಾಜ ಪ್ರಭುತ್ವದ ರಾಜ್ಯ ವ್ಯವಸ್ಥೆ ಪುನಃ ಸ್ಥಾಪನೆಯಾಯಿತು. ಅಮೇರಿಕಾ ಜಪಾನಿಗೆ ಉದಾರವಾದ ಹಣ ಸಹಾಯಮಾಡಿತು. ರಕ್ಷಣಾ ವ್ಯವಸ್ಥೆಯಲ್ಲಿ ವೆಚ್ಚ ಕಡಿಮೆಯಾಗುವಂತೆ ಮಾಡಿ ಆರ್ಥಿಕ ವ್ಯವಸ್ಥೆಯನ್ನು ಉತ್ತಮಪಡಿಸಿಕೊಂಡಿತು. ಶ್ರದ್ಧಾಯುಕ್ತ ದುಡಿಮೆಯಿಂದ ಜಪಾನ್ ಮತ್ತೆ ಪ್ರಗತಿಯನ್ನು ಸಾಧಿಸಿತು. ಕರ ಕಡಿತ ಮತ್ತು ಆರ್ಥಿಕ ವ್ಯವಸ್ಥೆಯನ್ನು ಪುನಃ ನಿರ್ಮಿಸುವಲ್ಲಿ ಜಪಾನೀಯರು ಯುದ್ಧದಿಂದ ಉಂಟಾದ ಹಾನಿಯನ್ನು ತುಂಬಿಕೊಂಡು ವಿಶ್ವದ ಮುಂದುವರಿದ ರಾಷ್ಟ್ರಗಳಲ್ಲಿ ಒಂದಾಗುವಂತೆ ಮಾಡಿದರು.

....O....

# ಸಮಾಜ ಪಾಠಗಳು

## ಎಪ್ರಿಲ್-1985 ದ್ವಿತೀಯ-ಪತ್ರಿಕೆ

### [ ಭೂ ವಿವರಣೆ ]

I) ಕೈಗಾರಿಕಾ ಸ್ಥಾನೀಕರಣ ಎಂದರೇನು ? ಕೈಗಾರಿಕ ಸ್ಥಾನೀಕರಣಕ್ಕೆ ಸರಕಾರವು ಹೇಗೆ ಸಹಾಯ ಮಾಡುತ್ತದೆ ?

ಉತ್ತರ : ಅನೇಕ ಕೈಗಾರಿಕೆಗಳು ಕೆಲವು ಅನುಕೂಲ ಕರವಾದ ಪ್ರದೇಶದಲ್ಲಿ ಒಂದುಗೂಡುವದಕ್ಕೆ ಕೈಗಾರಿಕಾ ಸ್ಥಾನೀಕರಣ ಎನ್ನುವರು. ಕೈಗಾರಿಕಾ ಸ್ಥಾನೀಕರಣಕ್ಕೆ ಈ ಕೆಳಗಿನ ಅಂಶಗಳು ಸಹಾಯಕವಾಗಿವೆ. 1] ಕಚ್ಚಾ ವಸ್ತುಗಳು, 2) ಇಂಧನ ಮತ್ತು ಶಕ್ತಿ, 3) ಕೆಲಸಗಾರರು, 4) ಸಾಗಾಣಿಕೆ, 5) ಮಾರುಕಟ್ಟೆ, 6) ನೀರಿನ ಪೂರೈಕೆ, 7) ಬಂಡವಾಳ ಮತ್ತು ಸರ್ಕಾರದ ನೀತಿ.

ಸರಕಾರದ ನೀತಿ ಕೈಗಾರಿಕೆಗಳ ಸ್ಥಾಪನೆಯನ್ನು ನಿರ್ಣಯಿಸುತ್ತದೆ. ಹಿಂದುಳಿದ ಪ್ರದೇಶಗಳಲ್ಲಿ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಲು ತೆರಿಗೆ ವಿನಾಯತಿ, ಕಡಿಮೆ ದರದ ಬಡ್ಡಿಯಲ್ಲಿ ಸಾಲ ಕೊಡುವದು, ರಸ್ತೆಗಳು ಮತ್ತು ರೈಲು ಮಾರ್ಗಗಳನ್ನು ನಿರ್ಮಿಸುವದು. ಭೂಮಿ, ನೀರು ಮತ್ತು ವಿದ್ಯುಚ್ಛಕ್ತಿಯನ್ನು ರಿಯಾಯತಿ ದರದಲ್ಲಿ ಒದಗಿಸುವದು ಮತ್ತು ಮಾರುಕಟ್ಟೆಗಳನ್ನು ಉತ್ತಮ ಪಡಿಸುವದು ಮುಂತಾದ ಸೌಲಭ್ಯಗಳನ್ನು ಒದಗಿಸಲು ಸರಕಾರ ಮುಂದೆ ಬರಬಹುದು.

OR

ಜನಸಂಖ್ಯೆಯು ಒಂದೇ ಸಮನಾಗಿ ಹಂಚಿಕೆಯಾಗದಿರುವದಕ್ಕೆ ಯಾವುದಾದರೂ ನಾಲ್ಕು ಕಾರಣಗಳನ್ನು ಕೊಡಿರಿ.

ಉತ್ತರ : ಎಪ್ರಿಲ್ 1984 ರ ಪ್ರಶ್ನೆ 1 [ಅಥವಾ] ನೋಡಿರಿ.

II. ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ನಿರ್ಣಾಯಕ ಅಂಶಗಳಾವವು ?

ಉತ್ತರ : ಪ್ರಪಂಚದಲ್ಲಿ ಅನೇಕ ರಾಷ್ಟ್ರಗಳು ಅಭಿವೃದ್ಧಿ ಹೊಂದಿದ ಗುಂಪಿಗೆ ಸೇರಿವೆ.

ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳ ವಿಶೇಷ ಲಕ್ಷಣಗಳೆಂದರೆ ಆ ಗುಂಪಿಗೆ ಸೇರಿದ ರಾಷ್ಟ್ರಗಳ ತಲಾ ಆದಾಯ ವರ್ಷಕ್ಕೆ 500 ಡಾಲರುಗಳಿಗಿಂತ ಹೆಚ್ಚಾಗಿರುತ್ತದೆ. ಅಂಥ ರಾಷ್ಟ್ರಗಳು ತಮ್ಮ ಎಲ್ಲ ಸ್ವಾಭಾವಿಕ ಸಂಪನ್ಮೂಲಗಳನ್ನು ಪೂರ್ತಿಯಾಗಿ ಉಪಯೋಗಿಸಿಕೊಳ್ಳುತ್ತವೆ. ಆ ರಾಷ್ಟ್ರಗಳಲ್ಲಿ ರಾಷ್ಟ್ರೀಯ ಕೊಡುಗೆಗೆ ಕೈಗಾರಿಕೆಗಳಿಂದ ಹೆಚ್ಚು ಆದಾಯವಿರುತ್ತದೆ. ಈ ಲಕ್ಷಣಗಳಲ್ಲದೆ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಲ್ಲಿ ಉದ್ಯೋಗ, ವಿದ್ಯಾಭ್ಯಾಸ, ಬಂಡವಾಳದ ರಚನೆ, ತಾಂತ್ರಿಕ ವಿಜ್ಞಾನದ ಮಟ್ಟ ಆರ್ಥಿಕ ಸಂಘಗಳು ಮತ್ತು ಜನಸಂಖ್ಯೆ ವಿಚಾರಗಳಲ್ಲಿ ಅಧಿಕ ಮುನ್ನಡೆ ಆಗಿರುತ್ತದೆ. ಅಲ್ಲದೆ ನಿರುದ್ಯೋಗದ ಸಮಸ್ಯೆ ಇರುವದಿಲ್ಲ. ಜನಸಂಖ್ಯೆ ಮಿತದಲ್ಲಿರುತ್ತದೆ. ಹಾಗೂ ಆರ್ಥಿಕ ಉತ್ಪತ್ತಿಗೆ ಸಹಾಯಕವಾದ ಅನೇಕ ಆರ್ಥಿಕ ಸಂಸ್ಥೆಗಳಿರುತ್ತವೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ನಿರ್ಣಾಯಕ ಅಂಶಗಳಿಗೆ ಪ್ರಶ್ನೆ ನಂ. II 1984 ಎಪ್ರಿಲ್ ನೋಡಿರಿ.

OR

ಸಾಗಾಟದ ವಿವಿಧ ಸಾಧನಗಳಾವವು ? ಯಾವುದಾದರೂ ಎರಡು ಸಾಧನಗಳ ಬಗ್ಗೆ ಚರ್ಚಿಸಿರಿ.

ಉತ್ತರ : 1) ಭೂ ಮಾರ್ಗಗಳ ಮೂಲಕ ಸಾಗಾಣಿಕೆ : ಮನುಷ್ಯನ ಮೂಲಕ, ಪ್ರಾಣಿಗಳ ಮೂಲಕ, ರೈಲುಗಳ ಮೂಲಕ, ರಸ್ತೆಗಳ ಮೂಲಕ, ಕೊಳಾಯಿಗಳ ಮೂಲಕ ಸಾಗಾಣಿಕೆ ನಡೆಯುವದು.

2) ಜಲಮಾರ್ಗಗಳ ಮೂಲಕ ಸಾಗಾಣಿಕೆ– ಒಳನಾಡಿನ ಜಲಮಾರ್ಗಗಳ ಮೂಲಕ, (ಕಾಲುವೆ, ನದಿ ಮೊದಲಾದವುಗಳ) ಸಮುದ್ರ ಮಾರ್ಗದ ಮೂಲಕ.

3) ವಾಯು ಮಾರ್ಗಗಳ ಮೂಲಕ ಸಾಗಾಣಿಕೆ. ಹೀಗೆ ಸಾಗಾಣಿಕೆಯ ಮೂರು ವಿಧಾನಗಳು.

ಆರ್ಥಿಕ ಅಭಿವೃದ್ಧಿಯಲ್ಲಿ ರಸ್ತೆಗಳು ಬಹು ಮುಖ್ಯ ಪಾತ್ರವನ್ನು ವಹಿಸುತ್ತವೆ. ಶಾಂತ ಮತ್ತು ಯುದ್ಧದ ಪರಿಸ್ಥಿತಿಯಲ್ಲಿ ಹೆದ್ದಾರಿಗಳು ಬಹಳ ಪ್ರಯೋಜನಕಾರಿಯಾಗಿವೆ. ಅಮೇರಿಕದ ಸಂಯುಕ್ತ ಸಂಸ್ಥಾನಗಳು, ಪಶ್ಚಿಮ ಯುರೋಪು, ಜಪಾನು ಮತ್ತು ಭಾರತದಲ್ಲಿ ಅಭಿವೃದ್ಧಿ ಹೊಂದಿದ ರಸ್ತೆ ವ್ಯವಸ್ಥೆಗಳಿವೆ.

ರೈಲು ಮಾರ್ಗಗಳು ದೇಶ ಅಭಿವೃದ್ಧಿಯಲ್ಲಿ ಅತಿ ಮುಖ್ಯ ಪಾತ್ರವನ್ನು ವಹಿಸುತ್ತವೆ. ಪ್ರಪಂಚದಲ್ಲಿ ರೈಲು ಮಾರ್ಗಗಳು ಒಂದೇ ಸಮನಾಗಿ ಹರಡಿಲ್ಲ. ಕೆನೇಡಿಯನ್ ನ್ಯಾಶನಲ್ ರೇಲ್ವೆ, ಕೆನೆಡಿಯನ್ ಫೆಸಿಫಿಕ್ ರೇಲ್ವೆ ರಾಕೀ ಪರ್ವತದ ಮೂಲಕ ಹಾದು ಹೋಗುತ್ತವೆ. ಟ್ರಾನ್ಸ್ ಸೈಬೇರಿಯನ್ ರೇಲ್ವೆ ಪ್ರಪಂಚದಲ್ಲಿ ಅತಿ ಉದ್ದವಾದ ರೈಲು ಮಾರ್ಗವಿದೆ. ಇದು ಬಾಲ್ಟಿಕ್ ಸಮುದ್ರ ತೀರದ ಲೆನಿನ್ ಗ್ರೇಡಿನಿಂದ ಪೆಸಿಫಿಕ್ ಸಾಗರದಲ್ಲಿರುವ ವ್ಲಾಡಿವೋಸ್ಟಾಕ್‌ಗೆ ಹೋಗುತ್ತದೆ.

III. ಕೆಳಗಿನ ಪ್ರಶ್ನೆಗಳಿಗೆ 2 ಅಥವಾ 3 ವಾಕ್ಯಗಳಲ್ಲಿ ಉತ್ತರ ಬರೆಯಿರಿ.

1) ಸುಯೆಜ್ ಕಾಲುವೆಯು ಕೂಡಿಸಿರುವ ಎರಡು ಸಮುದ್ರಗಳ ಹೆಸರನ್ನು ತಿಳಿಸಿ.

**ಉತ್ತರ :** ಕೆಂಪು ಸಮುದ್ರ ಮತ್ತು ಮೆಡಿಟರೇನಿಯನ್ ಸಮುದ್ರಗಳನ್ನು ಕೂಡಿಸುತ್ತದೆ.

2) "ಲಾಕ್ಸ್" ವಿಧಾನವೆಂದರೇನು ?

**ಉತ್ತರ :** 1984 ಎಪ್ರಿಲ್ ಪ್ರಶ್ನೆ ಸಂ. IV [2] ನೋಡಿರಿ.

3) ಸಮಾಚಾರಗಳನ್ನು ವೇಗವಾಗಿ ಸಾಗಿಸಬಲ್ಲ ಸಂಪರ್ಕ ಸಾಧನ ಕೈಗಾರಿಕೆಗಳಾವವು ?

**ಉತ್ತರ :** ಟೆಲಿಪ್ರಿಂಟರ್ಸ್, ಟೆಲೆಕ್ಸ್ ಸಾಧನಗಳ ಮೂಲಕ ಸಮಾಚಾರಗಳನ್ನು ವೇಗವಾಗಿ ಸಾಗಿಸಬಹುದು.

4) "ಟೆಲಿವಿಷನ್ನ್"ನ ಅನುಕೂಲತೆಗಳನ್ನು ವಿವರಿಸಿ.

**ಉತ್ತರ :** ಟೆಲಿವಿಷನ್ನಿನಲ್ಲಿ ಕೇವಲ ಧ್ವನಿ ಮಾತ್ರ ಪ್ರಸಾರವಾಗದೆ ಅದರ ಜೊತೆಗೆ ದೃಶ್ಯದ ಭಾವಚಿತ್ರವೂ ಪರದೆಯ ಮೇಲೆ ಕಾಣುತ್ತದೆ. ಬಿಡುವಿಲ್ಲದ ಕೆಲಸ ಕಾರ್ಯಗಳಲ್ಲಿ ತೊಡಗಿದವರಿಗೆ ಪ್ರಪಂಚದ ವಾರ್ತೆಗಳನ್ನು ತಿಳಿಯಲು ಇದೊಂದು ಮಾಧ್ಯಮವಾಗಿದೆ. ಕಲೆಗಾರರು, ವಿಜ್ಞಾನಿಗಳು, ಶಿಕ್ಷಣ ತಜ್ಞರು, ರಾಜಕಾರಣಿಗಳು ತಮ್ಮ ಪ್ರತಿಭಾ ಪ್ರದರ್ಶನ ಹಾಗೂ ಅಭಿಪ್ರಾಯಗಳನ್ನು ಮಂಡಿಸಲು ಟೆಲಿವಿಷನ್ ಮಾಧ್ಯಮವನ್ನು ಅವಲಂಬಿಸಿರುತ್ತಾರೆ.

5) ಭಾರತ ಸರ್ಕಾರ ನಡೆಸುತ್ತಿರುವ ವಾಯು ಮಾರ್ಗಗಳಾವವು ? ನಮ್ಮ ವಿಮಾನ ನಿಲ್ದಾಣಗಳು ಎಷ್ಟು ಪ್ರಕಾರಗಳಾಗಿ ವಿಂಗಡಿಸಲ್ಪಟ್ಟಿವೆ ? ಅವು ಯಾವವು ?

**ಉತ್ತರ :** ಭಾರತ ಸರ್ಕಾರ ನಡೆಸುತ್ತಿರುವ ವಾಯು ಮಾರ್ಗಗಳು ಏರ್ ಇಂಡಿಯಾ ಮತ್ತು ಇಂಡಿಯನ್ ಏರ್‌ಲೈನ್ಸ್. ಭಾರತದ ವಿಮಾನ ನಿಲ್ದಾಣಗಳನ್ನು ಪ್ರಮುಖ, ಮಧ್ಯಮ ಮತ್ತು ಚಿಕ್ಕ ನಿಲ್ದಾಣಗಳೆಂದು ವಿಭಾಗಿಸಲಾಗಿದೆ. ಸಂತಾಕ್ರೂಸ್ [ಬೊಂಬಾಯಿ], ಮೀನಾಂಬಾಕಂ (ಮದ್ರಾಸು), ಪಾಲಂ [ದೆಹಲಿ] ಮತ್ತು ಡಂಡಂ [ಕಲ್ಕತ್ತ] ಇವು ಪ್ರಮುಖ ನಿಲ್ದಾಣಗಳು. ಬೆಂಗಳೂರು, ಹೈದರಾಬಾದ ಮೊದಲಾದ ನಿಲ್ದಾಣಗಳು ಮಧ್ಯಮ ನಿಲ್ದಾಣಗಳು ಉಳಿದವು ಚಿಕ್ಕ ನಿಲ್ದಾಣಗಳು.

**IV.** ಈ ಕೆಳಗಿನವುಗಳಿಗೆ ಕಾರಣ ಕೊಡಿರಿ.

1) ಭಾರತದಲ್ಲಿ ಜಲಮಾರ್ಗಗಳು ಅಭಿವೃದ್ಧಿ ಹೊಂದಿಲ್ಲ.

**ಉತ್ತರ :** ಭಾರತದ ಜಲಮಾರ್ಗಗಳು ಪಾಶ್ಚಾತ್ಯ ದೇಶದ ಜಲಮಾರ್ಗಗಳಂತೆ ಸಾರಿಗೆಯಲ್ಲಿ ಪ್ರಮುಖ ಪಾತ್ರ ವಹಿಸುವದಿಲ್ಲ ಏಕೆಂದರೆ ನಮ್ಮ ದೇಶದ ಸ್ವಾಭಾವಿಕ ಲಕ್ಷಣಗಳು ಇದಕ್ಕೆ ಅನುಕೂಲವಾಗಿಲ್ಲ. ದಕ್ಷಿಣ ಭಾರತದ ನದಿಗಳು ಆಳವಾಗಿಲ್ಲ– ಗುಡ್ಡಗಾಡು ಪ್ರದೇಶದಲ್ಲಿ ಹರಿಯುತ್ತವೆ.

2) ಗಂಗಾ ಮೈದಾನ ಜನಸಾಂದ್ರತೆಗೆ ಹೆಸರುವಾಸಿಯಾಗಿದೆ ?

ಗಂಗಾನದಿಯು ಇಡೀ ವರ್ಷ ತುಂಬಿ ಹರಿಯುತ್ತದೆ. ಈ ನದಿಯ ಮೈದಾನವು ಅತಿ ಫಲವತ್ತಾದ ಪ್ರದೇಶವಾಗಿದ್ದು, ವ್ಯವಸಾಯ, ಉದ್ದಿಮೆ ಮತ್ತು ಸಾರಿಗೆ ಸಂಪರ್ಕಗಳಿಗೆ ಹೆಚ್ಚು ಅನುಕೂಲತೆ ಪಡೆದಿದೆ.

3] ಮುಂಬಯಿ ಮತ್ತು ಅಹಮದಾಬಾದ ವಿಭಾಗದಲ್ಲಿ ಬಟ್ಟೆ ಕೈಗಾರಿಕೆಗಳು ಸ್ಥಾಪಿಸಲ್ಪಟ್ಟಿವೆ.

**ಉತ್ತರ :** ಮುಂಬಯಿ ಮತ್ತು ಅಹಮದಾಬಾದಿನ ಸುತ್ತಮುತ್ತಲ ಪ್ರದೇಶಗಳಲ್ಲಿ ಹೆಚ್ಚಾಗಿ ಹತ್ತಿ ಬೆಳೆಯುವ ಪ್ರದೇಶಗಳಾಗಿರುವದರಿಂದ, ಹತ್ತಿ ಗಿರಣಿಗಳಿಗೆ ಬೇಕಾದ ಕಚ್ಚಾ ಹತ್ತಿ ಹೆಚ್ಚು ಪ್ರಮಾಣದಲ್ಲಿ ದೊರೆಯುತ್ತದೆ.

4] ಹೈನುಗಾರಿಕೆಯು ಡೆನ್ಮಾರ್ಕಿನ ಮುಖ್ಯ ಕೈಗಾರಿಕೆಯಾಗಿದೆ.

**ಉತ್ತರ :** ಎಪ್ರಿಲ್ 1984 Q. IV [1] ನೋಡಿರಿ.

5] ಪ್ರತಿಯೊಂದು ದೇಶಕ್ಕೂ ವಿದೇಶಿ ವಿನಿಮಯ ಅವಶ್ಯವಾಗಿದೆ.

**ಉತ್ತರ :** ಪ್ರತಿಯೊಂದು ದೇಶಕ್ಕೂ ವಿದೇಶಿ ವಿನಿಮಯದ ಅವಶ್ಯಕತೆ ಇದೆ. ನಾವು ವಿದೇಶಕ್ಕೆ ಹೋಗಬೇಕಾದರೆ ಅಥವಾ ವಿದೇಶಗಳಿಂದ ಸರಕುಗಳನ್ನು ತರಿಸಿಕೊಳ್ಳಬೇಕಾದರೆ ಹಣದ ರೂಪದಲ್ಲಿ ನಾವು ಅವರಿಗೆ ಕೊಡಬೇಕಾಗುತ್ತದೆ. ಅದೇ ರೀತಿ ಅವರು ಸಹ ನಮ್ಮ ದೇಶದಲ್ಲಿ ಚಲಾವಣೆಯಲ್ಲಿರುವ ಹಣದ ರೂಪದಲ್ಲಿ ನಮಗೆ ಕೊಡಬೇಕಾಗುತ್ತದೆ.

6] ಸಣ್ಣ ಕೈಗಾರಿಕೆಯ ಮುಖ್ಯ ಲಕ್ಷಣ ಯಾವದು ?

**ಉತ್ತರ :** ಪದಾರ್ಥಗಳನ್ನು ತಯಾರಿಸುವದರಲ್ಲಿ ಪರಿಣತೆಗೆ ಹೆಚ್ಚು ಪ್ರಾಮುಖ್ಯತೆ ಪಡೆದಿರುವದೇ ಸಣ್ಣ ಕೈಗಾರಿಕೆಯ ಲಕ್ಷಣ.

**V. A]** ಬಿಟ್ಟ ಸ್ಥಳಗಳನ್ನು ತುಂಬಿರಿ. [ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ]

1] ವೃತ್ತಿ ಸಂಘಗಳನ್ನು……ನಿರ್ವಹಿಸುತ್ತಿದ್ದರು. [ಪರಿಣಿತರಾದ ಕುಶಲ ಕರ್ಮಿಗಳು]

2] ಇಂದಿಗೂ……ಅತಿ ಕಡಿಮೆ ವೆಚ್ಚದ ಸಾರಿಗೆ ಸಾಧನವಾಗಿದೆ. [ಜಲಮಾರ್ಗ]

3] ……ಭಾರತದ ಪಶ್ಚಿಮ ಕರಾವಳಿಯ ಮುಖ್ಯ ಬಂದರವಾಗಿದೆ (ಮುಂಬಯಿ)

4] ಭೂಮಿಯ……ದಿಂದ ಕಾಲಮಾನಗಳುಂಟಾಗುತ್ತವೆ. [ಪೃಥ್ವಿಯ ವಾರ್ಷಿಕ ಚಲನೆಯಿಂದ]

B] ಹೊಂದಿಸಿ ಬರೆಯಿರಿ.

| ಎ | ಬಿ |
|---|---|
| 1] ವಾಟ್ | ಎ] ದಿಲ್ಲಿ |
| 2] ಪಾಲ್ | ಬಿ] ಉಗಿಯಂತ್ರ |
| 3] ಉತ್ತರ ಅಮೇರಿಕ | ಸಿ] ಕಬ್ಬಿಣ ಮತ್ತು ಉಕ್ಕು |
| 4] ಬ್ರೆಜಿಲ್ | ಡಿ) ಸಿಡ್ನಿ |
| 5) ಆಸ್ಟ್ರೇಲಿಯಾ | ಇ) ಸ್ಯಾನ್ ಫ್ರಾನ್ಸಿಸ್ಕೋ |
| 6) ಜೆಮ್‌ಷೆಡ್‌ಪುರ | ಎಫ್) ಕಾಫಿ |

ಉತ್ತರ : 1) ವಾಟ್ ಬಿ) ಉಗಿಯಂತ್ರ
2) ಪಾಲಸ್ ಎ) ದಿಲ್ಲಿ
3) ಉತ್ತರ ಅಮೇರಿಕ ಇ) ಸ್ಯಾನ್ ಫ್ರಾನ್ಸಿಸ್ಕೋ
4) ಬ್ರೆಜಿಲ್ ಎಫ್) ಕಾಫಿ
5) ಆಸ್ಟ್ರೇಲಿಯಾ ಡಿ) ಸಿಡ್ನಿ
6) ಜೆಮ್‌ಷಡ್‌ಪುರ ಸಿ) ಕಬ್ಬಿಣ ಮತ್ತು ಉಕ್ಕು

—●—

# ಸಮಾಜ ಪಾಠಗಳು

## ಅಕ್ಟೋಬರ–1985 1 ನೆಯ ಪತ್ರಿಕೆ

## [ ಇತಿಹಾಸ ಮತ್ತು ಪೌರನೀತಿ ]

I. ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಜಾಗಗಳನ್ನು ಸೂಕ್ತ ಪದಗಳಿಂದ ಭರ್ತಿಮಾಡಿ.

1) ಆರ್ಯರ ಕಾಲದಲ್ಲಿ........ಕುಟುಂಬ ಪದ್ಧತಿಯು ಜಾರಿಯಲ್ಲಿದ್ದಿತು. (ಅವಿಭಕ್ತ)

2) ಗುಪ್ತ ವಂಶದ ದೊರೆಗಳಲ್ಲಿ ಕಡೆಯ ಮುಖ್ಯದೊರೆ .......(ಬುಧಗುಪ್ತ)

3) ರಾಷ್ಟ್ರಕೂಟರ ಮೊದಲನೆ ಕೃಷ್ಣನು ಕೈಲಾಸನಾಥ ದೇವಾಲಯವನ್ನು..........ಎಂಬಲ್ಲಿ ಕಟ್ಟಿಸಿದನು (ಎಲ್ಲೋರ)

4) ಶ್ರೀವೈಷ್ಣವ ಪಂಥದ ಪ್ರತಿಪಾದಕ.......ಚೋಳ ರಾಜ್ಯದಿಂದ ಬಂದನು (ರಾಮಾನುಜಾಚಾರ್ಯ)

5) ಚಾಲುಕ್ಯರ ರಾಜಧಾನಿ.......(ಬದಾಮಿ)

6) ಪಾಂಡ್ಯರು ತಮಿಳು ನಾಡಿನ.......ಪ್ರಾಂತ್ಯದ ಅರಸರಾಗಿದ್ದರು (ಮಧುರೈ)

II. 1) ರಾಜ್ಯದ ಶಾಸಕಾಂಗವು ಎಷ್ಟು ವಿಷಯಗಳ ಮೇಲೆ ಕಾನೂನುಗಳನ್ನು ರಚಿಸುವ ಅಧಿಕಾರ ಪಡೆದಿದೆ.

ಉತ್ತರ : ರಾಜ್ಯ ಶಾಸಕಾಂಗವು 66 ವಿಷಯಗಳ ಮೇಲೆ ಕಾನೂನು ರಚಿಸುವ ಅಧಿಕಾರ ಪಡೆದಿದೆ.

2) ವಿವಾಹವಾಗಲು ಹೆಣ್ಣು, ಗಂಡು ಮಕ್ಕಳಿಗೆ ಈಗ ಇರುವ ಕನಿಷ್ಟ ವಯೋಮಿತಿ ಎಷ್ಟು ?

ಉತ್ತರ : ವಿವಾಹವಾಗಲು ಹೆಣ್ಣು ಮಗಳಿಗೆ 18 ವರ್ಷ ಮತ್ತು ಗಂಡಿಗೆ 21 ವರ್ಷಗಳಾಗಿರಬೇಕು.

3) ಬಂಗಾಳದಲ್ಲಿ ವೈಷ್ಣವ ಪಂಥವನ್ನು ಸ್ಥಾಪಿಸಿದವರು ಯಾರು ?

ಉತ್ತರ : ಚೈತನ್ಯರು ಬಂಗಾಳದಲ್ಲಿ ವೈಷ್ಣವ ಪಂಥವನ್ನು ಸ್ಥಾಪಿಸಿದರು.

4) ತಾಲ್ಲೂಕು ಬೋರ್ಡಿನಲ್ಲಿರುವ ಸದಸ್ಯರ ಸಂಖ್ಯೆ ಎಷ್ಟು ?

ಉತ್ತರ : ತಾಲ್ಲೂಕಾ ಬೋರ್ಡಿನಲ್ಲಿರುವ ಸದಸ್ಯರ ಸಂಖ್ಯೆ 15 ರಿಂದ 19.

5) ರಾಜ್ಯದ ಗೃಹ ರಕ್ಷಕ ದಳದ ಮುಖ್ಯಸ್ಥನನ್ನು ಏನೆಂದು ಕರೆಯುವರು ?

ಉತ್ತರ : ರಾಜ್ಯದ ಗೃಹರಕ್ಷಕ ದಳದ ಮುಖ್ಯಸ್ಥ– ಕಂಮ್ಯಾಂಡಂಟ್ ಜನರಲ್.

6). ಕರ್ನಾಟಕದಲ್ಲಿ ಪುರಾತನ ಚಿತ್ರಕಲೆಯ ಕೃತಿಗಳು ಎಲ್ಲಿವೆ ?

ಉತ್ತರ : ರಾಯಚೂರ ಜಿಲ್ಲೆಯ ಪಿಕ್ಲಿಹಾಲ್ ಮತ್ತು ಹಿರೆಬೆಣಕಲ್ ಎಂಬಲ್ಲಿ ಪುರಾತನ ಚಿತ್ರಕಲೆಯ ಕೃತಿಗಳು ಇವೆ

III. 1857 ರ ಭಾರತ ಸ್ವಾತಂತ್ರ ಸಂಗ್ರಾಮದ ಫಲಿತಾಂಶಗಳನ್ನು ತಿಳಿಸಿ. [ಉತ್ತರ ಹತ್ತು ವಾಕ್ಯಗಳಿಗೆ ಮೀರದಿರಲಿ]

ಉತ್ತರ : 1] 1857 ರ ಮಹಾದಂಗೆಯು ಪೂರ್ಣವಾಗಿ ಹತ್ತಿಕ್ಕಲ್ಪಟ್ಟಿತು. ಪ್ರಥಮ ಸ್ವಾತಂತ್ರ್ಯ ಸಂಗ್ರಾಮವು ಅಯಶಸ್ವಿಯಾಯಿತು. ಬ್ರಿಟಿಷರ ದಬ್ಬಾಳಿಕೆಯು ಕ್ರೂರ ಕೃತ್ಯಗಳನ್ನು ಹರಡಿತು. ದಿಲ್ಲಿಯಲ್ಲಿ ಸುಲಿಗೆ ನಡೆದು ಜನರಲ್ ನೀಲನು ತನ್ನ ರಕ್ತ ಪಿಪಾಸೆಯನ್ನು ಪೂರೈಸಿಕೊಂಡನು. 2) ಮೊಗಲ ಸಾಮ್ರಾಜ್ಯ ಪೂರ್ಣ ನಶಿಸಿ ಹೋಯಿತು. 3) 1858 ರಲ್ಲಿ ವಿಕ್ಟೋರಿಯಾ ಮಹಾರಾಣಿಯಿಂದ ಒಂದು ಘೋಷಣೆಯು ಹೊರಡಿಸಲ್ಪಟ್ಟಿತು. 4) ಭಾರತೀಯರಿಗೆ ಅನೇಕ ಸೌಲಭ್ಯಗಳನ್ನು ಕೊಡುವದಾಗಿ ಸಾರಲಾಯಿತು. ಭಾರತೀಯರ ವಿಶ್ವಾಸವನ್ನು ಗಳಿಸುವ ಉದ್ದೇಶವಿತ್ತು. 5] ಬ್ರಿಟಿಷ್‌ರ ಆಡಳಿತ

ಯಲ್ಲಿ ಎಲ್ಲ ಜನರಿಗೂ ಸಮಾನ ಅವಕಾಶಗಳು ಒದಗಿಸಲ್ಪಟ್ಟವು. 6) ದಂಗೆಯಲ್ಲಿ ಭಾಗವಹಿಸಿದ್ದ ಸಾಮಾನ್ಯರಿಗೆ ಕ್ಷಮಾದಾನ ಮಾಡಲಾಯಿತು. 7] ಸಾಮ್ರಾಜ್ಯ ವಿಸ್ತರಣೆ ನಿಂತಿತು. ಲ್ಯಾಪ್ಸ ಪದ್ಧತಿಯನ್ನು ತಡೆಹಿಡಿಯಲಾಯಿತು. 8] ಈಸ್ಟ ಇಂಡಿಯಾ ಕಂಪನಿಯ ಆಡಳಿತ ಮುಕ್ತಾಯವಾಯಿತು; ಭಾರತ ವ್ಯವಹಾರಗಳ ಕಾರ್ಯದರ್ಶಿಗೆ [The secretary of state for India] ಭಾರತದ ಆಡಳಿತೆಯ ಹೊಣೆಯನ್ನು ಒಪ್ಪಿಸಲಾಯಿತು. 9) ಆಡಳಿತೆಯು ಬದಲಾವಣೆಯಾಗಿ ಹೊಸ ಆಡಳಿತೆಯು ಜಾರಿಯಲ್ಲಿ ಬಂದಿತು.

IV. ಈ ಕೆಳಗಿನ ಪ್ರಶ್ನೆಗಳಿಗೆ ಎರಡು ಅಥವಾ ಮೂರು ವಾಕ್ಯ ಗಳಿಗೆ ಉತ್ತರ ಬರೆಯಿರಿ.

1) ಲಾರ್ಡ ಕಾರ್ನವಾಲಿಸ್‌ನ ಆಂತರಿಕ ಸುಧಾರಣೆ ಗಳನ್ನು ತಿಳಿಸಿ.

ಉತ್ತರ: 1] ಕಂಪನಿಯ ನೌಕರರು ನಡೆಸುತ್ತಿದ್ದ ಖಾಸಗಿ ವ್ಯಾಪಾರವನ್ನು ನಿಲ್ಲಿಸಿ ಅವರ ಸಂಬಳಗಳನ್ನು ಹೆಚ್ಚಿಸಿದನು. 2) ನ್ಯಾಯಾಂಗವನ್ನು ಕಾರ್ಯಾಂಗದಿಂದ ಪ್ರತ್ಯೇಕಿಸಿದನು. 3) ವಾರನ್ ಹೇಸ್ಟಿಂಗ್ಸನು ಪ್ರಾರಂಭಿಸಿದ್ದ ವಾರ್ಷಿಕ ಗುತ್ತಿಗೆಯ ಪದ್ಧತಿಯನ್ನು ರದ್ದುಗೊಳಿಸಿ ಖಾಯಂ ಜಮೀನ್ದಾರಿ ಪದ್ಧತಿಯನ್ನು ಜಾರಿಗೆ ತಂದನು. 4) ಉನ್ನತ ಹುದ್ದೆಗಳನ್ನು ಬ್ರಿಟಿಷ್‌ರಿಗೆಂದೇ ಮೀಸಲಾಗಿಟ್ಟನು.

2) 1853 ಸನ್ನದು ಶಾಸನವನ್ನು ವಿವರಿಸಿ.

ಉತ್ತರ: 1) ಈ ಕಾನೂನು ಕಾರ್ಯಾಂಗ ಮತ್ತು ಶಾಸಕಾಂಗಗಳ ಕರ್ತವ್ಯಗಳನ್ನು ಬೇರ್ಪಡಿಸಿತು. 2) ಭಾರತದಲ್ಲಿಯ ಪಾರ್ಲಿಮೆಂಟಿನ ಆಡಳಿತೆಯ ತಳಹದಿಯಾಯಿತು. 3) ಶಾಸನಗಳಾಗುವ ಪೂರ್ವದಲ್ಲಿ ಅವುಗಳನ್ನು ಚರ್ಚಿಸುವ ತಜ್ಞರ ಸಮಿತಿಗೆ ಒಪ್ಪಿಸುವ ಹಕ್ಕು ದೊರೆಯಿತು. 4) ಭಾರತದ ಮೇಲೆ ಬ್ರಿಟಿಶ್ ಪಾರ್ಲಿಮೆಂಟಿನ ಪೂರ್ಣ ಹತೋಟಿ. 5) ಕೇಂದ್ರದಲ್ಲಿ ಶಾಸನ ಸಭೆಯ ಸ್ಥಾಪನೆ, ಕೌನ್ಸಿಲ್ಲಿನಲ್ಲಿ ಎಲ್ಲ. ಪ್ರಾಂತ್ಯಗಳಿಗೂ ಪ್ರಾತಿನಿಧ್ಯ.

3) ಭಾರತದ ಸ್ವಾತಂತ್ರ ಸಂಗ್ರಾಮದಲ್ಲಿ ನಾನಾ ಸಾಹೇಬನ ಪಾತ್ರವನ್ನು ವಿವರಿಸಿ.

ಉತ್ತರ: 1850 ರಲ್ಲಿ 2 ನೇ ಬಾಜೀರಾಯ ಮರಣ ಹೊಂದಿದನು. ದತ್ತು ಮಗ ನಾನಾಸಾಹೇಬನ ಕೈಯ್ಯಲ್ಲಿ ಆಸ್ತಿ ಬಂದಿತು. ಬ್ರಿಟಿಶ್ ಸರಕಾರ ಇವನ ಪೆನ್ಶನ್ ನಿಲ್ಲಿಸಿತು. ಕ್ರಾಂತಿಯ ಕಿಡಿಗಳು ಹಾರ ಹತ್ತಿದವು. ನಾನಾಸಾಹೇಬನಿಂದ ಸಂಘಟನೆ, ಅವನೂ ಅಜಿಮುಲ್ಲಾ ಖಾನನೂ ರಾಷ್ಟ್ರವೆಲ್ಲಾ ಸಂಚರಿಸಿ ಕ್ರಾಂತಿಯ ಪ್ರಚಾರ ಮಾಡಿ ಬಂದರು. ತಾನೇ ಪೇಶ್ವೆಯೆಂದು ಸಾರಿ ಬಹಾದ್ದೂರಶಹನನ್ನು ಹಿಂದುಸ್ತಾನದ ಚಕ್ರವರ್ತಿಯೆಂದು ಮನ್ನಿಸಿದನು. ಅವನು ಬಿಠೂರ, ಪತ್ತೇಪೂರ, ಕಾನ್ಪುರಗಳಲ್ಲಿ ಯುದ್ಧಗಳಲ್ಲಿ ತೀವ್ರತೆಯಿಂದ ಭಾಗವಹಿಸಿದನು.

4) ಭಾರತದ ಸಂವಿಧಾನದ ಚರಿತ್ರೆಯಲ್ಲಿ 1935 ರ ಕಾನೂನು ಒಂದು ಮುಖ್ಯವಾದ ಹೆಜ್ಜೆಯಾಗಿದೆ, ಹೇಗೆ ?

ಉತ್ತರ: ಕ್ರಿ. ಶ. 1935 ರಲ್ಲಿ ಬ್ರಿಟಿಷ್ ಸರಕಾರ ಭಾರತ ಸರಕಾರದ ಶಾಸನವನ್ನು ಜಾರಿಗೆ ತಂದಿತು. ಇದರಿಂದ ಪ್ರಾಂತ್ಯಗಳಿಗೆ ಅಧಿಕಾರ ದೊರೆತು ಪ್ರಾಂತ್ಯ ಸರ್ಕಾರಗಳು ಆಡಳಿತ ವಹಿಸಿ ಸ್ವಾತಂತ್ರ್ಯಕ್ಕೆ ತಳಹದಿ ಹಾಕಿತು. ಈ ಶಾಸನವು ಅಖಿಲ ಭಾರತೀಯ ಸಂಯುಕ್ತ ರಾಜ್ಯಕ್ಕೆ ಅವಕಾಶ ಮಾಡಿ ಕೊಟ್ಟಿತು ದೇಶೀಯ ಸಂಸ್ಥಾನಗಳ ಫೆಡರಲ್ ಅಸೆಂಬ್ಲಿಗೆ 125 ಸದಸ್ಯರನ್ನು ಕಳಿಸುವಂತಾಯಿತು. ಸಂವಿಧಾನದ ಇತಿಹಾಸದಲ್ಲಿ ಒಂದು ದೊಡ್ಡ ಹೆಜ್ಜೆಯಾಗಿತ್ತು.

5) ಭಾರತದ ಪ್ರಜೆಗಳ ಯಾವುದಾದರೂ ನಾಲ್ಕು ಮೂಲಭೂತ ಹಕ್ಕುಗಳನ್ನು ಹೆಸರಿಸಿ.

ಉತ್ತರ: ಎಪ್ರಿಲ್ 1985 ಪ್ರಶ್ನೆ 4 (4) ರ ಉತ್ತರ ನೋಡಿರಿ.

V. ಭಾರತದಲ್ಲಿ ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಂಬಲಿಸುವ ಅಂಶಗಳು ಯಾವವು ?
ಹತ್ತು ವಾಕ್ಯಗಳಲ್ಲಿ ಉತ್ತರಿಸಿ.
ಉತ್ತರ: ಸಪ್ಟಂಬರ 1984 ರ ಪ್ರಶ್ನೆ 7 [1] ರ ಉತ್ತರ ನೋಡಿರಿ.

VI. ಇವುಗಳಿಗೆ ಸುಮಾರು ಐದು ವಾಕ್ಯಗಳಲ್ಲಿ ಉತ್ತರ ನೋಡಿರಿ.

1) ಸರ್ ಸಯ್ಯದ ಅಹಮದ್‌ಖಾನರು ಭಾರತದ ಮುಸಲ್ಮಾನರನ್ನು ಹೇಗೆ ಆಧುನೀಕರಿಸಿದರು ?

ಉತ್ತರ: ಮುಸ್ಲಿಂರ ಜನತೆಗೆ ತಮ್ಮ ಸಾಮಾಜಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ ವಿಚಾರಗಳಲ್ಲಿ ಕ್ರಾಂತಿಕಾರಿ ಬದಲಾವಣೆಗಳನ್ನು ತರಲು ಸೂಚಿಸಿದರು. ಅಲೀಗಢ್ ಚಳುವಳಿ ಪ್ರಾರಂಭಿಸಿದರು. ಅಲ್ಲಿ ಒಂದು ಶಾಲೆಯನ್ನು ಸ್ಥಾಪಿಸಿದರು. ಮಹಮ್ಮದನ್ ಆಂಗ್ಲೋ ಓರಿಯಂಟಲ್ (M.A.O.) ಕಾಲೇಜನ್ನು ಸ್ಥಾಪಿಸಿದರು. ಅದೇ ಅಲೀಗಡ ವಿಶ್ವವಿದ್ಯಾನಿಲಯವಾಯಿತು. ಘೋಷಾ ಪದ್ಧತಿಯನ್ನು ವಿರೋಧಿಸಿದರು. ತಮ್ಮ ಸ್ತ್ರೀಯರ ಶಿಕ್ಷಣ ಪ್ರಚಾರ ಮಾಡಿದರು. ತಮ್ಮದೊಂದು ಪತ್ರಿಕೆಯನ್ನು ಹೊರಡಿಸಿ ಅದರ ಮುಖಾಂತರ ತಮ್ಮ ಸುಧಾರಣೆಗಳನ್ನು ಪ್ರಚಾರ ಮಾಡಿದರು.

2) ಪ್ಯಾರಿಸ್ ಶಾಂತಿ ಸಮ್ಮೇಳನದ ಪರಿಣಾಮಗಳನ್ನು ತಿಳಿಸಿ.

ಉತ್ತರ : ಶಾಂತಿ ಒಪ್ಪಂದಗಳನ್ನು ರಚಿಸಲು ವಿಜೇತ ರಾಷ್ಟ್ರಗಳು 1919 ರ ಜನೇವರಿಯಲ್ಲಿ ಪ್ಯಾರಿಸ್ ಸಭೆ ಸೇರಿದವು. ಪ್ರಪಂಚದ 2 ನೇ ಮಹಾಯುದ್ಧದ ಬೀಜಗಳನ್ನು ವ್ಹರ್ಸಲ್ಸ [ಪ್ಯಾರಿಸ್] ಒಡಂಬಡಿಕೆಯಲ್ಲಿಯೇ ಬಿತ್ತಲಾಗಿತ್ತು. ಇದರಲ್ಲಿ ಜರ್ಮನಿಗೆ ಸದಾ ಕಿರುಕೊಳ ಕೊಡಲಾಯಿತು. ಅಪಮಾನ ಮಾಡಲಾಗಿತ್ತು. ಅದು ಸೈನ್ಯವನ್ನು ಇಡಬಾರದೆಂದು ಕರಾರು ಹಾಕಲಾಗಿತ್ತು. ಯುದ್ಧಗಳ ನಷ್ಟವನ್ನು ತುಂಬಿಕೊಡಲು ಅಪಾರ ಹಣವನ್ನು ಕೊಡಬೇಕಾಗಿತ್ತು.

VII. ಮುಸೂಲೋನಿಯ ಸಾಧನೆಗಳನ್ನು 10 ವಾಕ್ಯಗಳಲ್ಲಿ ಬರೆಯಿರಿ.

ಉತ್ತರ : ಮುಸಲೋನಿ ಒಬ್ಬ ಸಮಾಜವಾದಿ ಕಮ್ಮಾರನ ಮಗ ಅವನು ತನ್ನ ಜೀವನವನ್ನು ಉಪಾಧ್ಯಾಯನಾಗಿ ಪ್ರಾರಂಭಿಸಿದನು 1919 ರಲ್ಲಿ ಯೋಧರ ಸಂಘವೆಂಬ ಒಂದು ಪಕ್ಷವನ್ನು ಸ್ಥಾಪಿಸಿದನು. ಅದು ಸರ್ವಾಧಿಕಾರ (ಫ್ಯಾಸಿಸ್ಟ) ಪಕ್ಷವೆಂದು ಜನಪ್ರಿಯವಾಯಿತು. ಅದರ ಮುಖಂಡನಾದ ಮುಸಲೋನಿಯು "ಡೂಚಿ" ಅಥವಾ ಅಧಿನಾಯಕನಾದನು. ಕಮ್ಯುನಿಜಂ ದ್ವೇಷಿಸುವದು, ಪ್ರಜಾಪ್ರಭುತ್ವವನ್ನು ವಿರೋಧಿಸುವದು ಮತ್ತು ತೀವ್ರವಾದ ರಾಷ್ಟ್ರೀಯತೆ ಈ ಮೂರು ಅಂಶಗಳ ಕಾರ್ಯಕ್ರಮ ಅದು ಹೊಂದಿತ್ತು. "ಬ್ಲಾಕ್‌ಶರ್ಟ್ಸ್" ಎಂಬ ಒಂದು ಪಕ್ಷವನ್ನು ವ್ಯವಸ್ಥೆಗೊಳಿಸಿ, 1922 ರಲ್ಲಿ ಅಧಿಕಾರವನ್ನು ಸ್ವಾಧೀನಪಡಿಸಿಕೊಂಡನು.

ತನ್ನ ಪಕ್ಷಕ್ಕೆ ಇದ್ದ ಎಲ್ಲಾ ವಿರೋಧವನ್ನು ಅಡಗಿಸಿದನು. ವಿರೋಧಿಗಳು ಕೊಲ್ಲಲ್ಪಟ್ಟರು ಇಲ್ಲವೇ ಗಡೀಪಾರು ಮಾಡಲ್ಪಟ್ಟರು. ಹೀಗೆ ಮುಸಲೋನಿಯು ಸ್ಥಿರವಾಗಿ ಸರ್ವಾಧಿಕಾರಿವಾದಿ ಸರಕಾರವನ್ನು ಸ್ಥಾಪಿಸಿದನು. ಅಲ್ಲದೇ ಅಧಿಕಾರವೆಲ್ಲವೂ ತನ್ನಲ್ಲಿಯೇ ಕೇಂದ್ರೀಕೃತವಾಗಿರುವಂತೆ ಯೋಜನೆಯನ್ನು ಹೂಡಿದನು. ಅವನ 1927 ರ ಕಾರ್ಮಿಕರ ಶಾಸನವು ಮಾಲಿಕರೊಂದಿಗೆ ಕೆಲಸಗಾರರ ಸಂಬಂಧವನ್ನು ನಿರೂಪಿಸಿತು. ಆಹಾರದ ಸಮಸ್ಯೆಯನ್ನು ನಿವಾರಿಸಲು ಗೋದಿಯ ಕಾಳಗ ಪ್ರಾರಂಭಿಸಿದನು. ಫೆಬ್ರುವರಿ 1929 ರಂದು ಪೋಪನೊಂದಿಗೆ ಮಾಡಿಕೊಂಡ ಒಪ್ಪಂದ ಮುಸಲೋನಿಯ ಮಹತ್ವದಸಾಧನೆಯಾಗಿತ್ತು. ಇದು ರಾಜ್ಯ ಮತ್ತು ಚರ್ಚಿನೊಡನೆ ಆದರಪೂರ್ವಕ ಸಂಬಂಧವನ್ನು ಸ್ಥಾಪಿಸಿತು.

ಇತರ ನಿರಂಕುಶಾಧಿಪತಿಗಳಂತೆ ಮುಸಲೋನಿಯೂ ಸಹ ತನ್ನ ದೇಶದ ಸಮಸ್ಯೆಗಳನ್ನು ನಿವಾರಿಸಲು ಯುದ್ಧವೊಂದೇ ಮಾರ್ಗವೆಂದು ನಂಬಿದ್ದನು. ಇದು ವಿಶ್ವಶಾಂತಿಗೆ ಹೆಚ್ಚು ಭಯವನ್ನುಂಟು ಮಾಡಿತು. ಗ್ರೀಕ ದೇಶದ ಕೋರ್ಫುವನ್ನು ಆಕ್ರಮಿಸಿದನು. 1935 ರಲ್ಲಿ ಇಥಿಯೊಪಿಯಾವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. 1737 ರಲ್ಲಿ ಮುಸಲೋನಿ ರಾಷ್ಟ್ರ ಸಂಘದಿಂದ ಹಿಂತೆಗೆದುಕೊಂಡನು. ಜರ್ಮನಿ ಮತ್ತು ಜಪಾನಿನೊಡನೆ ರೋಂ—ಬರ್ಲಿನ್—ಟೋಕಿಯೊ—ಅಕ್ಸಿಸ್ ಎಂದು ಕರೆಯಲ್ಪಡುವ ಮೈತ್ರಿ ಸಂಬಂಧವನ್ನು ಬೆಳೆಸಿದನು. ಈ ಮೈತ್ರಿ ಸಂಬಂಧವು ವಿಶ್ವಶಾಂತಿಗೆ ತೀವ್ರ ಬೆದರಿಕೆಯಾಗಿ ಪರಿಣಮಿಸಿತು. 1939 ರಲ್ಲಿ ಮುಸೂಲೋನಿಅಲ್ಬೇನಿಯವನ್ನು ಸೋಲಿಸಿ ಅದನ್ನು ವಶಪಡಿಸಿಕೊಂಡನು.

VIII. ಐದು ವಾಕ್ಯಗಳಿಗೆ ಮೀರದಂತೆ ಉತ್ತರ ಬರೆಯಿರಿ.

1] ಅರಾಜಕತವಾದ ಎಂದರೇನು ?

ಉತ್ತರ : ಅರಾಜಕತಾವಾದವು ಅತಿ ತೀವ್ರಗಾಮಿ ಸಮಾಜವಾದದ ಒಂದು ರೂಪ. ಹೊಸದಾಗಿ ಎಲ್ಲವನ್ನೂ ನಿರ್ಮಿಸುವದಕ್ಕೆ ಮೊದಲು ಪ್ರಚಲಿತ ಸಮಾಜದ ಕ್ರಮವನ್ನು ಸಂಪೂರ್ಣವಾಗಿ ನಾಶಮಾಡಬೇಕೆಂಬುದು ಅದರ ಅಭಿಪ್ರಾಯ.

2) ಆಹಾರ ಮತ್ತು ಕೃಷಿ ಸಂಸ್ಥೆಯ ಕೆಲಸಗಳೇನು ?

ಉತ್ತರ . ಎಲ್ಲಾ ದೇಶಗಳ ಎಲ್ಲಾ ಜನರು ಜೀವನಾಗತ್ಯಗಳ ಕೊರತೆಯಿಲ್ಲದೆ ಬಾಳಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ ಅಟ್ಲಾಂಟಿಕ್ ಪ್ರಣಾಳಿಕೆಯು ಆಹಾರ ಮತ್ತು ಕೃಷಿ ಸಂಸ್ಥೆಯ ಮೂಲವಾಗಿದೆ. ಆಹಾರ ಮತ್ತು ಕೃಷಿ ಸಂಸ್ಥೆಯನ್ನು 1945 ರ ಅಕ್ಟೋಬರ 16 ರಂದು ಸ್ಥಾಪಿತವಾಯಿತು. 1) ಪುಷ್ಟಿದಾಯಕ ಆಹಾರದ ಪೋಷಣೆ ಮತ್ತು ಜೀವನಮಟ್ಟ ಸುಧಾರಣೆ, 2) ಆಹಾರದ ಉತ್ಪಾದನೆ ಮತ್ತು ವಿತರಣೆಯ ದಕ್ಷತೆಯನ್ನು ಹೆಚ್ಚಿಸುವದು, 3) ಗ್ರಾಮೀಣ ಪ್ರದೇಶಗಳ ಪರಿಸ್ಥಿತಿಯನ್ನು ಉತ್ತಮಪಡಿಸುವದು ಹಾಗೂ ಹಸಿವಿನಿಂದ ಬಿಡುಗಡೆ ದೊರಕಿಸುವದು. ಈ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರುವದೇ ಈ ಸಂಸ್ಥೆಯ ಕೆಲಸಗಳು.

3) ರೇಜಾಷಾನು ಇರಾನಿನಲ್ಲಿ ಜಾರಿಗೆ ತಂದ ಸಾಮಾಜಿಕ ಸುಧಾರಣೆಗಳಾವವು ?

ಉತ್ತರ : 1921 ರಲ್ಲಿ ಸೈನಿಕ ಅಧಿಕಾರಿಯಾದ ರೇಜಾಷಾನು ಅಧಿಕಾರವನ್ನು ವಹಿಸಿಕೊಂಡನು. ಚಕ್ರವರ್ತಿ ಎಂದು ಘೋಷಿಸಿಕೊಂಡು ಒಂದು ಹೊಸ ಮನೆತನವನ್ನು ಸ್ಥಾಪಿಸಿದನು. ರಾಷ್ಟ್ರೀಯ ಜಾಗೃತಿಯನ್ನು ಎಚ್ಚರಿಸಿದನು. ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಆರ್ಥಿಕ ಕಾರ್ಯಗಳನ್ನು ಪೂರ್ಣಗೊಳಿಸಿದನು. ಹೊರದೇಶಗಳೊಡನೆ ಸ್ನೇಹ ಸಂಬಂಧ ಬೆಳೆಸಿದನು. ಇರಾನನ್ನು ಆಧುನೀಕರಿಸಲು ಪ್ರಯತ್ನಿಸಿದನು.

IX. ಐದು ವಾಕ್ಯಗಳಲ್ಲಿ ಉತ್ತರ ಬರೆಯಿರಿ.

1) ವಿಯಟ್ನಾಂ ಯುದ್ಧಕ್ಕೆ ಕಾರಣಗಳನ್ನು ತಿಳಿಸಿ.

ಉತ್ತರ : ವಿಯಟ್ನಾಂ ಎಂದರೆ ಮೊದಲಿನ ಇಂಡೋ ಚೀನಾ. ಅಲ್ಲಿ ಸ್ವಾತಂತ್ರ್ಯಕ್ಕಾಗಿ ರಾಷ್ಟ್ರೀಯ ಚಳುವಳಿಯು ಹೋಚಿಮಿನ್ ನಾಯಕತ್ವದಲ್ಲಿ ಪ್ರಾರಂಭವಾಯಿತು. ಎರಡನೇ ಮಹಾಯುದ್ಧದ ನಂತರ ಇದರಲ್ಲಿ ಎರಡು ಭಾಗವಾಯಿತು. ಉತ್ತರ ವಿಯಟ್ನಾಂ ಫ್ರೆಂಚರ ಪ್ರಭಾವದಲ್ಲಿ ದಕ್ಷಿಣ ವಿಯಟ್ನಾಂ ಚೀನಾದ ಪ್ರಭಾವದಲ್ಲಿದ್ದವು. ಫ್ರೆಂಚರಿಗೆ ಅಮೇರಿಕನ್ನರು ಶಸ್ತ್ರಾಸ್ತ್ರ ಪೂರೈಸಹತ್ತಿದರು. ಇತ್ತ ಚೀನಿಯರು ದಕ್ಷಿಣ ವಿಯಟ್ನಾಮಕ್ಕೆ ಸೈನಿಕ ನೆರವು ಕೊಟ್ಟರು. ಹೀಗೆ ಯುದ್ಧಕ್ಕೆ ಅಣಿಯಾದವು. ಈ ಯುದ್ಧವನ್ನು ತಡೆಯಲು ಭಾರತ ಮುಂದಾಯಿತು.

2) "ಖಿಲಾಫತ್ ಚಳುವಳಿ" ಎಂದರೇನು ?

ಉತ್ತರ : ಪ್ಯಾರಿಸ್ ಕೌನ್ಸಿಲಿನಲ್ಲಿ ಇಂಗ್ಲೀಷರು ತುರ್ಕಿ ದೇಶವನ್ನು ತೇಜೋವಧೆ ಮಾಡುವ ರೀತಿಯಲ್ಲಿ ನಡೆಸಿಕೊಂಡುದು ಭಾರತದ ಮುಸ್ಲಿಂರನ್ನು ಸಿಟ್ಟಿಗೆಬ್ಬಿಸಿತು. ಮಹಮ್ಮದಅಲಿ ಮತ್ತು ಶೌಕತ್ಅಲಿ ಎಂಬ ಇಬ್ಬರು ಸಹೋದರರು ಅಬ್ದುಲ್ ಕಲಂ ಅಜಾದ್, ಹಕ್ಕಿಂ ಅಜ್ಮಲ್‌ಖಾನ್ ಮತ್ತು ಹಜರತ್ ಎಂಬ ವರು "ಖಿಲಾಫತ್" ಎಂಬ ಮುಸ್ಲಿಂರ ಜನತಾ ಚಳುವಳಿಯನ್ನು ವ್ಯವಸ್ಥೆಗೊಳಿಸಿದರು. ಮಹಾತ್ಮಾ ಗಾಂಧೀಯವರು ಈ ಚಳು ವಳಿಯಲ್ಲಿ ಸೇರಿದರು. ಹಿಂದೂಗಳಿಗೆ ಖಿಲಾಫತ್ ಚಳುವಳಿಗೆ ಸಹಕಾರ ನೀಡುವಂತೆ ಕೋರಿದರು. ಖಿಲಾಫತ್ ಚಳುವಳಿಯು ಹಿಂದೂಗಳನ್ನು ಮುಸ್ಲಿಂರನ್ನು ಒಂದುಗೂಡಿಸಿತು.

3) ವಿಜಯನಗರದ ಕಾಲದಲ್ಲಿ ರಚಿಸಲ್ಪಟ್ಟ ಸಾಹಿತ್ಯ ಕೃತಿಗಳು ಯಾವವು ?

ಉತ್ತರ : ಕುಮಾರವ್ಯಾಸನಿಂದ ಗದುಗಿನ ಭಾರತ, ರತ್ನಾಕರ ವರ್ಣಿಯಿಂದ ಭರತೇಶ ವೈಭವ, ಭೀಮಕವಿಯಿಂದ ಬಸವ ಪುರಾಣ, ಚಾಮರಾಜನಿಂದ ಪ್ರಭುಲಿಂಗಲೀಲೆ, ಪುರಂದರ ದಾಸ ಮತ್ತು ಕನಕದಾಸರ ದಾಸ ಸಾಹಿತ್ಯದ ಬೆಳವಣಿಗೆ, ಮುಂತಾದ ಸಾಹಿತ್ಯ ಕೃತಿಗಳು ರಚಿತವಾದವು.

4) "ದೀನ್ ಇಲಾಹಿ" ಎಂದರೇನು ? ಇದು ವಿಫಲ ವಾಗಲು ಕಾರಣವೇನು ?

ಉತ್ತರ : ಅಕ್ಬರನು ತನ್ನ ಸಾಮ್ರಾಜ್ಯದ ಎಲ್ಲ ಪ್ರಜೆ ಗಳನ್ನು ಒಂದೇ ಧರ್ಮದ ಅಡಿಯಲ್ಲಿ ಒಂದುಗೂಡಿಸುವದರ ಸಲು ವಾಗಿ "ದೀನ್ ಇಲಾಹಿ" ಎಂಬ ಮತವನ್ನು ಸ್ಥಾಪಿಸಿದನು. ಹಿಂದೂಗಳಂತೆ ಮುಸಲ್ಮಾನರು ತಮ್ಮ ಧರ್ಮ ಬಿಟ್ಟು ಹೊಸ ಧರ್ಮ ಅನುಸರಿಸಲು ಇಷ್ಟ ಪಡಲಿಲ್ಲ. ಆದ್ದರಿಂದ ಅಕ್ಬರನ ಹೊಸ ಧರ್ಮವು ಜನಪ್ರಿಯವಾಗಲಿಲ್ಲ. ಅಕ್ಬರನ ನಂತರ ಅದು ನಶಿಸಿ ಹೋಯಿತು.

X. ಭಾರತ ವಿದೇಶಾಂಗ ನೀತಿಯಲ್ಲಿ ಅಳವಡಿಸಿರುವ ಮುಖ್ಯ ತತ್ವಗಳನ್ನು ತಿಳಿಸಿ.

ಉತ್ತರ : ಎಪ್ರಿಲ್ 1984 ರ ಪ್ರಶ್ನೆ (III) (1) ನೋಡಿರಿ.

....O....

# ಸಮಾಜ ಪಾಠಗಳು

## ಅಕ್ಟೋಬರ–1985 2 ನೆಯ–ಪತ್ರಿಕೆ

ಅವಧಿ : 2½ ಗಂಟೆ ಗುಣಗಳು : 65

## ( ಭೂಗೋಳ )

1. ಕೈಗಾರಿಕಾ ಕೇಂದ್ರೀಕರಣವೆಂದರೇನು ? ಇದಕ್ಕೆ ಸಹಾಯಕವಾಗುವ ಯಾವುದಾದರೂ ಮೂರು ಅಂಶಗಳನ್ನು ವಿವರಿಸಿ.

ಉತ್ತರ : ಎಪ್ರಿಲ್ 1985 ರ ಪ್ರಶ್ನೆ 1 ನೋಡಿರಿ ಮತ್ತು ಮೂರು ಅಂಶಗಳನ್ನು ವಿವರಿಸಲಾಗಿದೆ.

1) ಕಚ್ಚಾ ವಸ್ತುಗಳು—ಆ ಕೈಗಾರಿಕೆಗೆ ಸಂಬಂಧ ಪಟ್ಟ ಕಚ್ಚಾ ವಸ್ತುಗಳ ದೊರಕುವಿಕೆ ಬಹು ಮುಖ್ಯ ಅಂಶ ವಾಗಿದೆ. ಇವುಗಳು ಅಗ್ಗವಾಗಿ ಅಧಿಕ ಪ್ರಮಾಣದಲ್ಲಿ ದೊರೆಯ ಬೇಕು. ಇದರಿಂದ ಸಂಬಂಧಪಟ್ಟ ಕೈಗಾರಿಕೆಗಳು ಕೇಂದ್ರೀಕೃತ ವಾಗುತ್ತವೆ. 2) ಇಂಧನ ಮತ್ತು ಶಕ್ತಿ ಸರ್ವಸಾಮಾನ್ಯ ಎಲ್ಲ ಕೈಗಾರಿಕೆಗಳಿಗೂ ಇಂಧನ ಬೇಕೇಬೇಕು. ಇಂಧನಗಳಾದ ಕಲ್ಲಿದ್ದಲು, ಪೆಟ್ರೋಲಿಯಂ ಅಥವಾ ವಿದ್ಯುಚ್ಛಕ್ತಿಯ ಪೂರೈಕೆ ಸಾಕಷ್ಟಿರಬೇಕು. 3) ಕೆಲಸಗಾರರು— ಕೈಗಾರಿಕೆಯ ಕೇಂದ್ರೀ ಕರಣಕ್ಕೆ ಸಾಕಷ್ಟು ಕೆಲಸಗಾರರು ಮತ್ತು ಅಗ್ಗದರದಲ್ಲಿ ದೊರೆ ಯುವಂತಹ ಕೆಲಸಗಾರರ ಆವಶ್ಯಕತೆ ಬಹಳ ಇರುವದು.

ಅಥವಾ

ಆರ್ಥಿಕ ಅಭಿವೃದ್ಧಿಯಲ್ಲಿ ಕೈಗಾರಿಕೆಗಳ ಪಾತ್ರವನ್ನು ವಿವರಿಸಿ.

ಉತ್ತರ : ಯಾವದೇ ದೇಶದ ಅಭಿವೃದ್ಧಿಯು ಆ ದೇಶದ ಕೈಗಾರಿಕೆಗಳ ಮೇಲೆ ಅವಲಂಬಿಸಿದೆ. ದೇಶದ ರಕ್ಷಣೆ ಮತ್ತು ಗ್ರಾಹಕರ ಅವಶ್ಯಕತೆಗಳನ್ನು ಪೂರೈಸಲು ಕೈಗಾರಿಕೆಗಳು ಅತಿ ಅವಶ್ಯ ಒಕ್ಕಲುತನ ಅಭಿವೃದ್ಧಿಯಿಂದ ಕಚ್ಚಾ ವಸ್ತುಗಳು ಉತ್ಪಾದನೆಯಾಗುತ್ತವೆ. ಕೈಗಾರಿಕಾ ಉತ್ಪನ್ನಗಳಿಗಿಂತ ಒಕ್ಕ ಲುತನದಿಂದ ಉತ್ಪಾದಿಸಿದ ಕಚ್ಚಾ ವಸ್ತುಗಳ ಬೆಲೆ ಕಡಿಮೆ

ಯಾವವೇ ರಾಷ್ಟ್ರ ತನಗೆ ಬೇಕಾದ ವಸ್ತುಗಳಿಗೆ ಇತರ ದೇಶಗಳನ್ನು ನಂಬಿದರೆ ಹೆಚ್ಚು ಹಣ ಕೊಡಬೇಕಾಗುತ್ತದೆ. ಅಲ್ಲದೆ ಕೆಲವು ಸಲ ದೇಶಕ್ಕೆ ಸರಿಯಾದ ಸಮಯದಲ್ಲಿ ಸಹಾಯ ದೊರಿಯದೆ ಇರಬಹದು. ಆದ್ದರಿಂದ ದೇಶವು ಸ್ವಾವಲಂಬನೆಯಿಂದಿರಬೇಕಾದರೆ ಸಾಧ್ಯವಾದಷ್ಟು ಕೈಗಾರಿಕೆಗಳನ್ನು ಸ್ಥಾಪಿಸಬೇಕು.

ಕೈಗಾರಿಕಾಕರಣದಿಂದ ಕಚ್ಚಾ ವಸ್ತುಗಳನ್ನು ಸಿದ್ಧ ವಸ್ತುಗಳನ್ನಾಗಿ ಪರಿವರ್ತಿಸಬಹುದು. ಹೆಚ್ಚು ಪ್ರಮಾಣದಲ್ಲಿ ಉದ್ಯೋಗಗಳನ್ನು ಒದಗಿಸಿ ನಿರುದ್ಯೋಗತೆಯನ್ನು ಹೋಗಲಾಡಿಸಬಹುದು, ಜನರ ಜೀವನ ಮಟ್ಟವನ್ನು ಹೆಚ್ಚಿಸಬಹುದು. ಹೆಚ್ಚು ಕೈಗಾರಿಕೆಗಳನ್ನು ಸ್ಥಾಪಿಸುವದರಿಂದ ಜನರ ಕುಶಲತೆಯನ್ನು ಉತ್ತಮಪಡಿಸಿ ಸಂಪತ್ತನ್ನು ಬೆಳೆಸಬಹುದು. ವಾಣಿಜ್ಯ ಮತ್ತು ವ್ಯಾಪಾರವನ್ನು ಹೆಚ್ಚಿಸಬಹುದು. ಆಧುನಿಕ ಕೈಗಾರಿಕಾಕರಣ ಒಂದು ನಿರ್ದಿಷ್ಟ ಪ್ರಮಾಣಕ್ಕೆ ಅನುಗುಣವಾಗಿ ಪದಾರ್ಥಗಳನ್ನು ಸಾಮೂಹಿಕವಾಗಿ ಉತ್ಪನ್ನ ಮಾಡುತ್ತವೆ. ಇದರಿಂದ ರಾಷ್ಟ್ರಗಳ ಸ್ವಾಭಾವಿಕ ಸಂಪನ್ಮೂಲಗಳ ಉಪಯೋಗವಾಗುತ್ತದೆ. ಕೈಗಾರಿಕಾಕರಣ ಕೃತಕ ಗೊಬ್ಬರಗಳು ಮತ್ತು ಪ್ರಾಣಿಗಳ ಆಹಾರ ವಸ್ತುಗಳನ್ನು ಒದಗಿಸುತ್ತದೆ.

II. ಅಂತರರಾಷ್ಟ್ರೀಯ ಕಾಲುವೆಗಳ ಪ್ರಾಮುಖ್ಯತೆಯನ್ನು ವಿವರಿಸಿ.

**ಉತ್ತರ :** ಮುಖ್ಯವಾದ ಅಂತರ ರಾಷ್ಟ್ರೀಯ ಕಾಲುವೆಗಳು 1) ಸೂಯೆಜ್ ಕಾಲುವೆ 2) ಪನಾಮಾ ಕಾಲುವೆ.

1) ಸೂಯೆಜ್ ಕಾಲುವೆ—ಈ ಕಾಲುವೆ 1869 ರಲ್ಲಿ ನಿರ್ಮಾಣವಾಯಿತು. ಇದರ ಉದ್ದ 162 ಕಿ. ಮೀ. ಇದು ಕೆಂಪು ಸಮುದ್ರವನ್ನು ಮತ್ತು ಮೆಡಿಟರೇನಿಯನ್ [ಭೂಮಧ್ಯ ಸಮುದ್ರ] ಸಮುದ್ರವನ್ನು ಕೂಡಿಸುತ್ತದೆ. ಇದರ ಆಳ 10 ಮೀದಷ್ಟು ಇದನ್ನು 1956 ರಲ್ಲಿ ರಾಷ್ಟ್ರೀಕರಣ ಮಾಡಲಾಯಿತು. ಈ ಕಾಲುವೆಯು ಯುರೋಪ ಮತ್ತು ಪೂರ್ವ ದೇಶಗಳಿಗೆ ಇರುವ ಅಂತರವನ್ನು ಮತ್ತು ಪ್ರಯಾಣದ ಸಮಯವನ್ನು ಕಡಿಮೆ ಮಾಡಿದೆ. ಪ್ರಪಂಚದ ವ್ಯಾಪಾರದ ಶೇಕಡಾ 15 ರಷ್ಟು ವ್ಯಾಪಾರ ಈ ಕಾಲುವೆಯ ಮೂಲಕ ನಡೆಯುತ್ತದೆ. ಲಂಡನ್ ಮುಂಬೈ ಅಂತರವನ್ನು ಈ ಕಾಲುವೆಯು ಕೇಪ್ ಮಾರ್ಗಕ್ಕಿಂತ 6500 ಕಿ. ಮಿ. ಕಡಿಮೆಮಾಡಿದೆ. ನ್ಯೂಯಾರ್ಕದಿಂದ ಹಾಂಗಕಾಂಗ ಅಂತರವು ಕೇಪ ಮಾರ್ಗಕ್ಕಿಂತ 18136 ಕಿ. ಮಿ. ಕಡಿಮೆಯಾಗಿದೆ. ಪ್ರಪಂಚದ ಶೇಕಡ 15 ರಷ್ಟು ವ್ಯಾಪಾರವು ಈ ಕಾಲುವೆಯ ಮುಖಾಂತರ ನಡೆಯುವದು. ಇದು ಅತಿ ವೇಗದ ಮತ್ತು ಕಡಿಮೆ ವೆಚ್ಚದ ಕಾಲುವೆಯು ಇದನ್ನು ದಾಟಲು 10-12 ಗಂಟೆಗಳು ಬೇಕು.

2) ಪನಾಮಾ ಕಾಲುವೆ :- ಇದು ಅಟ್ಲಾಂಟಿಕ್ ಮಹಾಸಾಗರವನ್ನು ಫ್ಯಾಸಿಫಿಕ್ ಮಹಾಸಾಗರಕ್ಕೆ ಕೂಡಿಸುತ್ತದೆ. ಉತ್ತರ ಅಮೇರಿಕೆಯ ಪೂರ್ವ ಕರಾವಳಿಯಿಂದ ಪಶ್ಚಿಮ ಕರಾವಳಿಗೆ ಸಂಚರಿಸಲು ಅತಿ ಉಪಯುಕ್ತವಾಗಿದೆ. ನ್ಯೂಯಾರ್ಕ ಮತ್ತು ಸಿಡ್ನಿಗಳ ಅಂತರ ಬಹು ಕಡಿಮೆಯಾಗಿದೆ.

ಈ ಕಾಲುವೆಯು ಲಾಕ್ಸ ಎಂಬ ವಿಧಾನದಿಂದ ಹಡಗುಗಳನ್ನು ಸಮುದ್ರ ಮಟ್ಟಕ್ಕೆ ಏರಿಸಲು ಇಳಿಸಲು ಸಾಧ್ಯವಾಗಿದೆ. ಈ ಕಾಲುವೆಯನ್ನು ದಾಟಲು 8 ಗಂಟೆ ಬೇಕು. ಇದು ಅಟ್ಲಾಂಟಿಕ್ ಸಾಗರದ ತೀರದಲ್ಲಿ ಕೋಲನ್ ಮತ್ತು ಕ್ರಿಸ್ಟಬೆಲ್ ಮತ್ತು ಫೆಸಿಫಿಕ್ ಸಾಗರದ ತೀರದಲ್ಲಿ ಪನಾಮ ಮತ್ತು ಬಾಲ್ಬೋವಾ ಕೇವು ಪಟ್ಟಣಗಳಿವೆ, ಈ ಕಾಲುವೆಯ ಮೂಲಕ ಅಂತರ ರಾಷ್ಟ್ರೀಯ ವ್ಯಾಪಾರ ಜಾಸ್ತಿಯಾಗಿ ನಡೆಯುತ್ತದೆ.

**ಅಥವಾ**

ಅಂಚೆ ಮತ್ತು ತಂತಿ ಕಚೇರಿಗಳು ಸಲ್ಲಿಸುವ ಸೇವೆಯನ್ನು ವಿವರಿಸಿ.

**ಉತ್ತರ :** ಭಾರತದ ಅಂಚೆ ಕಚೇರಿಗಳು ಉಳಿತಾಯ ಬ್ಯಾಂಕುಗಳ ರೂಪದಲ್ಲೂ, ರಾಷ್ಟ್ರೀಯ ಉಳಿತಾಯ ಸರ್ಟಿಫಿಕೆಟ್ಟುಗಳ ರೂಪದಲ್ಲೂ, ಅಂಚೆ ಜೀವವಿಮಾ ಪಾಲಿಸಿ ರೂಪದಲ್ಲಿಯೂ ಮತ್ತು ಯುನಿಟ್ ಟ್ರಸ್ಟ ಆಫ್ ಇಂಡಿಯಾದ ಯೂನಿಟ್‌ಗಳ ಮಾರಾಟ ಮಾಡುವ ರೂಪದಲ್ಲಿಯೂ ಏಜನ್ಸಿಗಳಾಗಿ ಕಾರ್ಯ ನಿರ್ವಹಿಸುತ್ತಲಿವೆ. ಅಂಚೆ ಖಾತೆ 1971 ರಿಂದ ಹಿಂದುಳಿದ ಪ್ರದೇಶಗಳಿಗೆ ಅಂಚೆ ಸೌಲಭ್ಯಗಳನ್ನು ಒದಗಿಸುತ್ತಲಿದೆ. 1975 ರಲ್ಲಿ ತ್ವರಿತ ಅಂಚೆ ರವಾನೆ ಎಂಬ ಹೊಸ ಕ್ರಮವನ್ನು ಪ್ರಾರಂಭಿಸಿದೆ. ಕಡಿಮೆ ಬೆಲೆಗೆ ಕಾಗದ ಮತ್ತು ಕಟ್ಟುಗಳನ್ನು ಬಟವಡೆ ಮಾಡುವದಲ್ಲದೆ ಕಾರ್ಡು, ಕವರುಗಳು, ಸ್ಟಾಂಪುಗಳು ಮನಿ ಆರ್ಡರುಗಳು ಮೊದಲಾದ ಬರವಣಿಗೆ ಸಾಧನಗಳನ್ನು ಮಾರುತ್ತದೆ.

ದೂರದ ದೇಶಗಳಿಗೆ ವಿದ್ಯುತ್ ಕಾಂತಿಯ ಸಾಧನಗಳ ಮೂಲಕ ಸಂದೇಶಗಳನ್ನು ಕಳಿಸುವ ವ್ಯವಸ್ಥೆಯೆ "ಟೆಲೆಗ್ರಾಫ್" ದೂರದ ದೇಶಗಳಿಗೆ ವಿದ್ಯುತ್ ಟೆಲಿಗ್ರಾಫ್ ಮೂಲಕ ಸಂದೇಶಗಳನ್ನು ಕಳುಹಿಸುವ ಅಂಗವಾಗಿ ಮೊದಲಿಗೆ ಅಂತರ್ ರಾಷ್ಟ್ರೀಯ ಮಾರ್ಸನ ಕೀಲಿಯನ್ನು ಅಭಿವೃದ್ಧಿ ಪಡಿಸಲಾಯಿತು. ಸಂದೇಶವನ್ನು ವಿದ್ಯುತ್ ಪ್ರವಾಹ ಚುಕ್ಕಿ ಮತ್ತು ಚಿಕ್ಕಗೆರೆಯ [—] ಸಂಕೇತಗಳ ಸ್ಪಂದನ ರೂಪದಲ್ಲಿ ಕಳುಹಿಸಲಾಗುತ್ತದೆ. ತಂತಿ ಸಂದೇಶಗಳನ್ನು ಸ್ವತಃ ಅಚ್ಚು ಮಾಡುವ ಟೆಲೆಕ್ಸ್ ಮತ್ತು ಟೆಲಿ ಪ್ರಿಂಟರ್ಸ್‌ನ್ನು ಅಭಿವೃದ್ಧಿಮಾಡಲಾಗಿದೆ. ರೇಡಿಯೋ ಟೆಲಿಗ್ರಾಫಿ ಮತ್ತು ವೈರ್‌ಲೆಸ್ ಮೂಲಕವೂ ಸಹ ಸಂದೇಶಗಳನ್ನು ಕಳುಹಿಸ

ಬಹುದು. ಈ ರೀತಿ ಅಂಚೆ ತಂತಿ ಕಚೇರಿಗಳು ಜನ ಜೀವನದಲ್ಲಿ ಸೇವೆಸಲ್ಲಿಸುತ್ತಿವೆ.

ಆಧುನಿಕ ಕೈಗಾರಿಕೆ ಮತ್ತು ವ್ಯಾಪಾರವು ಈ ಸಂಪರ್ಕ ಸಾಧನೆಗಳ ಉಪಯೋಗಪಡೆಯುತ್ತಿವೆ.

III. ಇವುಗಳಿಗೆ ನಾಲ್ಕು ವಾಕ್ಯಕ್ಕೆ ಮೀರದಂತೆ ಉತ್ತರಿಸಿ.

1. ಅಮೇರಿಕ ಸಂಯುಕ್ತ ಸಂಸ್ಥಾನದ ಒಳನಾಡಿನ ಜಲಮಾರ್ಗಗಳನ್ನು ತಿಳಿಸಿ.

**ಉತ್ತರ :** ಅಮೇರಿಕ ಸಂಯುಕ್ತ ಸಂಸ್ಥಾನದ ಸುಪೀರಿಯರ್, ಹ್ಯೂರೆನ್, ಮಿಚಿಗನ್ ಇರಿ ಮತ್ತು ಅಂಟೋರಿಯೊ ಎಂಬ ಮಹಾ ಸರೋವರಗಳು ಮತ್ತು ಸೆಂಟ್‌ಲಾರೆನ್ಸ್ ನದಿಯು ಅತ್ಯಂತ ಉಪಯುಕ್ತವಾದ ಜಲಮಾರ್ಗಗಳಾಗಿವೆ.

2) ರಷ್ಯದ ಕೈಗಾರಿಕಾ ಪ್ರದೇಶಗಳನ್ನು ಹೆಸರಿಸಿ.

**ಉತ್ತರ :** 1) ಯುಕ್ರೈನ್ ಪ್ರದೇಶ, 2) ಮಧ್ಯ ಪ್ರದೇಶ, 3) ಯೂರಲ್ ಪ್ರದೇಶ, 4) ವೋಲ್ಗಾನದಿಯ ತಗ್ಗು ಪ್ರದೇಶ, 5) ಕುಜನೆಸ್ಕ-ಕಾರಗಾಂಡ ಪ್ರದೇಶ, 6) ಟಾಸ್ಕೆಂಟ ಪ್ರದೇಶ.

3) ಅಂತರರಾಷ್ಟ್ರೀಯ ವ್ಯಾಪಾರದ ಪ್ರಾಮುಖ್ಯತೆ ಏನು ?

**ಉತ್ತರ :** ಎಪ್ರಿಲ್ 1984 ರ ಪ್ರಶ್ನೆ IV [6] ರ ಉತ್ತರ ನೋಡಿರಿ.

4) "ಸಾಗುವ ದಿಕ್ಕು" ಎಂದರೇನು ? ಸಾಮಾನ್ಯವಾಗಿ ಯಾವ ಯಾವ ಪ್ರದೇಶಗಳು ಇದಕ್ಕೊಳಪಡುತ್ತವೆ ?

**ಉತ್ತರ :** ಪದಾರ್ಥಗಳ ಉತ್ಪಾದನಾ ಸ್ಥಳಗಳಿಗೂ ಮತ್ತು ಸರಕುಗಳನ್ನು ರಫ್ತು ಮಾಡುವ ಕ್ಷೇತ್ರಕ್ಕೂ ನಡುವೆ ಇರುವ ವ್ಯಾಪಾರ ಮಾರ್ಗವನ್ನು "ಸಾಗುವ ದಿಕ್ಕು" ಎನ್ನುತ್ತಾರೆ

ವ್ಯವಸಾಯೋತ್ಪನ್ನ ಕ್ಷೇತ್ರಗಳು ಖನಿಜ ಉತ್ಪಾದನೆ ಮಾಡುವ ಉಷ್ಣವಲಯದ ಪ್ರದೇಶಗಳೂ, ಕಚ್ಚಾ ವಸ್ತುಗಳನ್ನು ಸಿದ್ಧಪಡಿಸುವ ಸಮಶೀತೋಷ್ಣ ವಲಯ ಪ್ರದೇಶಗಳೂ ಇದಕ್ಕೆ ಒಳಪಡುತ್ತವೆ.

5) ಗಂಗಾನದಿಯ ಬಯಲು ಅಧಿಕ ಜನಸಾಂದ್ರತೆಯಿಂದ ಕೂಡಿರಲು ಕಾರಣವೇನು ?

**ಉತ್ತರ :** ಎಪ್ರಿಲ್ 1985 ರ ಪ್ರಶ್ನೆ IV [2] ರ ಉತ್ತರ ನೋಡಿರಿ.

IV. ಇವುಗಳಿಗೆ ಕಾರಣಗಳನ್ನು ಕೊಡಿ.

1) ಉಷ್ಣಾಂಶದ ವಿತರಣೆಯು ಎಲ್ಲ ಕಡೆಗೂ ಒಂದೇ ತೆರನಾಗಿಲ್ಲ.

**ಉತ್ತರ :** ಪೃಥ್ವಿಯು ಧ್ರುವ ವೃತ್ತದ ಕಡೆಗೆ ಒಲಿದು ತನ್ನ ಸುತ್ತು ತಿರುಗುತ್ತ ಸೂರ್ಯನ ಸುತ್ತಲೂ ತಿರುಗುವದು. ಭೂಮಿಯ ದೈನಂದಿನ ಚಲನೆ, ವಾರ್ಷಿಕ ಚಲನೆ ಮತ್ತು ಭೂಮಿಯ ಅಕ್ಷವು ವಾಲಿರುವದೇ ಇದಕ್ಕೆ ಕಾರಣ.

2) ಆಸ್ಸಾಂ ಪ್ರದೇಶವು ಅಧಿಕ ಮಳೆ ಪಡೆಯುತ್ತದೆ.

**ಉತ್ತರ :** ನೈಋತ್ಯ ಮನ್ಸೂನ ಗಾಳಿಗಳು ತೇವಾಂಶ ಕೂಡಿಕೊಂಡು ಬೀಸುವಾಗ ಉತ್ತರದಲ್ಲಿದ್ದ ಎತ್ತರವಾದ ಹಿಮಾಲಯ ಪರ್ವತವು ಈ ಮನ್ಸೂನ್ ಗಾಳಿಯನ್ನು ತಡೆಯುವದರಿಂದ ಇಲ್ಲಿ ಮಳೆ ಹೆಚ್ಚು.

3) ಕಾಶ್ಮೀರವನ್ನು ಭಾರತದ "ಸ್ವಿಟ್ಜರ್‌ಲ್ಯಾಂಡ್" ಎಂದು ಕರೆಯುವರು.

**ಉತ್ತರ :** ಕಾಶ್ಮೀರವು ಗುಡ್ಡಕೊಳ್ಳಗಳಿಂದ ಕೂಡಿದ್ದು ಅಲ್ಲಿ ಹಿತಕರವಾದ ವಾಯುಗುಣ ಇರುತ್ತದೆ ಮತ್ತು ಸೃಷ್ಟಿ ಸೌಂದರ್ಯವು ಆಕರ್ಷಕವಾಗಿರುತ್ತದೆ. ಆದ್ದರಿಂದ ಇದನ್ನು ಭಾರತದ ಸ್ವಿಟ್ಜರ್‌ಲ್ಯಾಂಡ್ ಎನ್ನುವರು.

4) ಮರಕಡಿಯುವದು ಕೆನಡಾದ ಮುಖ್ಯ ಉದ್ಯೋಗ.

**ಉತ್ತರ :** ಕೆನಡಾ ದೇಶವು ಹೆಚ್ಚು ಕಾಡನ್ನು ಹೊಂದಿದೆ ಮತ್ತು ಈ ಕಾಡುಗಳಲ್ಲಿ ಮೃದುವಾದ, ಉಪಯುಕ್ತವಾದ ಕಟ್ಟಿಗೆ ದೊರೆಯುತ್ತದೆ. ಆದ್ದರಿಂದ ಇಲ್ಲಿಯ ಜನರ ಉದ್ಯೋಗ ಮರ ಕಡಿಯುವದು.

5) ವಾಯು ಸಂಚಾರ ಹೆಚ್ಚು ವೆಚ್ಚವುಳ್ಳದ್ದು.

**ಉತ್ತರ :** ವಿಮಾನಗಳು ಇಳಿಯಲು ಆಧುನಿಕ ವಿಮಾನ ನಿಲ್ದಾಣಗಳು ಬೇಕು. ಇವುಗಳಿಗೆ ಹೆಚ್ಚಾಗಿ ಇಂಧನಗಳುಬೇಕು. ಭಾರ ಒಯ್ಯುವ ಶಕ್ತಿಯೂ ಕಡಿಮೆ. ಆದ್ದರಿಂದ ವಾಯು ಸಂಚಾರ ಹೆಚ್ಚು ವೆಚ್ಚವುಳ್ಳದ್ದು.

6) ಅಂಟಾರ್ಟಿಕಾ ಪ್ರದೇಶಗಳು ನಿರ್ಜನ ಪ್ರದೇಶಗಳಾಗಿವೆ.

**ಉತ್ತರ :** ಏಕೆಂದರೆ ಈ ಪ್ರದೇಶವು ಮಂಜಿನಿಂದ ಕೂಡಿದೆ. ವ್ಯವಸಾಯ ಸಾಧ್ಯವಿಲ್ಲ ವಿಪರೀತ ಚಳಿ ಮತ್ತು ಅಹಿತಕರವಾದ ವಾಯುಗುಣವಿದೆ. ಆದ್ದರಿಂದ ಇಲ್ಲಿ ಜನರ ವಾಸವಿಲ್ಲ.

V. A. ಖಾಲಿ ಬಿಟ್ಟಿರುವ ಜಾಗಗಳನ್ನು ಭರ್ತಿ ಮಾಡಿ. (ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ.)

1) ಭೂಮಿಯು.........ಕಾರದಿಂದಿದೆ [ಗೋಲಾ]

2) ಪೃಥ್ವಿಯ.........ಚಲನೆಯಿಂದ ಋತುಮಾನಗಳಾಗುತ್ತವೆ. (ವಾರ್ಷಿಕ)

3) ಗಾಳಿಯ ಒತ್ತಡವನ್ನು.........ಯಂತ್ರದಿಂದ ಅಳೆಬಹುದು. (ವಾಯುಭಾರ ಮಾಪಕ)

4) ನಾವು ವಾಸಿಸುವ ಮತ್ತು ನಮ್ಮ ಸುತ್ತು ಕಂಡು ಬರುವ ಎಲ್ಲವನ್ನು ಒಟ್ಟು ಸೇರಿ.........ಎಂದು ಕರೆಯುವರು. [ಪರಿಸರ]

5) ಭಾಕ್ರಾನಾಂಗಲ್ ಅಣೆಕಟ್ಟನ್ನು.........ನದಿಗೆ ಅಡ್ಡಲಾಗಿ ಕಟ್ಟಲಾಗಿದೆ [ಸತಲಜ್]

6) ಕೊಡಗಿನ ಗೋಣಿಕೊಪ್ಪಲಿನಲ್ಲಿ.........ಕಾರ್ಖಾನೆ ಇದೆ. [ಹಣ್ಣಿನ ಸಂಸ್ಕರಣದ]

7) ಕೇರಳದ.........ಕಾಲುವೆ ಜಲಮಾರ್ಗಕ್ಕೆ ಹೆಸರಾಗಿದೆ. [ಹಿನ್ನೀರಿನ]

8) ಪರ್ವತದ ಮಳೆಯು.........ಪ್ರದೇಶಗಳಲ್ಲಿ ಬೀಳುತ್ತದೆ. [ಪರ್ವತ]

B. ಹೊಂದಿಸಿ ಬರೆಯಿರಿ.

| | | | |
|---|---|---|---|
| 1] | ಕ್ಯೂಬಾ | ಎ] | ಟೀ ಮತ್ತು ಸೆಣಬು |
| 2] | ಬ್ರೆಜಿಲ್ | ಬಿ] | ಪೆಟ್ರೋಲಿಯಂ |
| 3] | ಮಲಯ | ಸಿ] | ಉಣ್ಣೆ ಮತ್ತು ಪಶುಪಾಲನೆ |
| 4] | ಇಂಡಿಯಾ | ಡಿ] | ಹೈನುಗಾರಿಕೆ |
| 5] | ಸೌದಿ ಅರೇಬಿಯಾ | ಇ] | ಕಾಫಿ |
| 6] | ಆಸ್ಟ್ರೇಲಿಯಾ | ಎಫ್] | ಸಕ್ಕರೆ |

ಉತ್ತರ : 1–ಎಫ್, 2–ಇ, 3–ರಬ್ಬರ್, 4–ಎ, 5–ಬಿ, 6–ಸಿ.

VI. ಭಾರತವು ಈ ಕೆಳಕಂಡ ದೇಶಗಳೊಡನೆ ರಫ್ತು ಮತ್ತು ಆಮದು ಮಾಡುವ ಎರಡೆರಡು ಪದಾರ್ಥಗಳನ್ನು ಹೆಸರಿಸಿ.

| ರಾಷ್ಟ್ರಗಳ ಹೆಸರು | ರಫ್ತು | ಆಮದು |
|---|---|---|
| 1] ಅಮೇರಿಕೆ ಸಂಯುಕ್ತ ಸಂಸ್ಥಾನ | ಸೆಣಬು | ಯಂತ್ರಗಳು |
| | ಮೀನು | ಖನಿಜಗಳು |
| 2] ಜಪಾನ್ | ಕಬ್ಬಿಣದ ಅದಿರು | ವಿದ್ಯುತ್ ವಸ್ತುಗಳು |
| | ಹತ್ತಿ | ಯಂತ್ರಗಳು |
| 3] ಯು. ಎಸ್. ಎಸ್. ಆರ್. | ಸೆಣಬು | ರಸಗೊಬ್ಬರಗಳು |
| | ಟೀ | ಕಾಗದ |
| 4] ಯುನೈಟೆಡ್ ಕಿಂಗಡಮ್ | ಟೀ | ಯಂತ್ರೋಪಕರಣಗಳು |
| | ಹೊಗೆಸೊಪ್ಪು | ವಿದ್ಯುಚ್ಛಕ್ತಿ ಉಪಕರಣಗಳು |

—●—

# ಸಮಾಜ ಪಾಠಗಳು

## ಮಾರ್ಚ್–1986 1 ನೆಯ ಪತ್ರಿಕೆ

## ( ಚರಿತ್ರೆ ಮತ್ತು ಪೌರನೀತಿ )

A. ಬಿಟ್ಟ ಸ್ಥಳಗಳನ್ನು ಸರಿಯಾದ ಶಬ್ದಗಳಿಂದ ತುಂಬಿರಿ. [ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ.]

1) ಪ್ರಖ್ಯಾತನಾದ ಯಜ್ಞ್ಯವಲ್ಕನು.........ನ ಆಸ್ಥಾನದಲ್ಲಿದ್ದನು. [ಜನಕರಾಜ]

2) .........ನು ಪರಮಾಣುವಿನಲ್ಲಿ ಅಣುಅಂಶಗಳಿವೆ. ಎಂಬುದನ್ನು ಕಂಡು ಹಿಡಿದನು. [ಕಪಿಲ]

3) .........ಒಬ್ಬ ಚೀನಾ ಯಾತ್ರಿಕ ಹರ್ಷನ ಆಸ್ಥಾನವನ್ನು ಸಂದರ್ಶಿಸಿದನು. (ಹ್ಯೂಯನ್‌ತ್ಸಾಂಗ)

4) ರಾಜೇಂದ್ರ ಚೋಳ.........ಎಂಬ ಬಿರುದನ್ನು ಇಟ್ಟುಕೊಂಡನು. (ಗಂಗೈಕೊಂಡ ಚೋಳ)

5) ಬಾದಾಮಿ ಚಾಳುಕ್ಯರ ಕಾಲದಲ್ಲಿ ಕನ್ನಡದಲ್ಲಿ......ಎಂಬ ಪದ್ಯಪದ್ಧತಿ ಪ್ರಾರಂಭವಾಯಿತು. (ತ್ರಿಪದಿ)

6) ಮೊದಲನೆ ಅಮೋಘ ವರ್ಷನು.........ಲ್ಲಿ ಹೊಸ ರಾಜಧಾನಿಯನ್ನು ಕಟ್ಟಿಸಿದನು. (ಮಾನ್ಯಖೇಟ)

7) ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು........ವಯಸ್ಸಾದ ನಂತರ ನಿವೃತ್ತರಾಗುತ್ತಾರೆ.[62]

8) ....ಯಾದವರ ರಾಜಧಾನಿಯಾಗಿತ್ತು. [ದೇವಗಿರಿ]

9) ಅಕ್ಬರನ ಭೂ ಕಂದಾಯದ ಮಂತ್ರಿ.........[ರಾಜಾ ತೋಡರಮಲ್ಲ]

10) ಚಾಮರಾಜೋಕ್ತಿ ವಿಲಾಸವನ್ನು ಬರೆದವರು.........[ಚಾಮರಾಜ ಒಡೆಯರ್]

11) ಜರ್ಮನಿಯ ಐಕ್ಯತೆಯ ಶಿಲ್ಪಿ.........[ಬಿಸ್ಮಾರ್ಕ್]

12) ಗ್ಯಾರಿಬಾಲ್ಡಿ.........ಎಂಬ ಒಂದು ಹೊಸ ಗುಂಪನ್ನು ರಚಿಸಿದನು. [ಕೆಂಪು ಅಂಗಿ]

13) .........ಬ್ಯಾಂಕು ರಾಜ್ಯಮಟ್ಟದ ಸಹಕಾರಿ ಬ್ಯಾಂಕ. [ಅಪೆಕ್ಸ್]

II. ಈ ಕೆಳಗಿನ ಪ್ರಶ್ನೆಗಳಿಗೆ 4 ವಾಕ್ಯಗಳಿಗೆ ಮೀರದಂತೆ ಉತ್ತರ ಬರೆಯಿರಿ.

14) ಅಲ್ಬುಕರ್ಕನ ಸಾಧನೆಗಳನ್ನು ವಿವರಿಸಿ.

ಉತ್ತರ : ಅಲ್ಫಾನ್ಸೋ–ಡಿ–ಅಲ್ಬುಕರ್ಕನು ಕ್ರಿ. ಶ. 1508 ರಲ್ಲಿ ಪೋರ್ತುಗೀಜ್ ಸ್ವಾಸ್ಥ್ಯಗಳಿಗೆ ಅಧಿಕಾರಿಯಾಗಿ ಬಂದನು. ಭಾರತದಲ್ಲಿ ಪೋರ್ತುಗೀಜರ ಅಧಿಕಾರಕ್ಕೆ ತಳಹದಿ

ಹಾಕಿದನು. 1510 ರಲ್ಲಿ ಬಿಜಾಪೂರ ಸುಲ್ತಾನನಿಂದ. ಗೋವೆಯನ್ನು ವಶಪಡಿಸಿಕೊಂಡನು. ಅದನ್ನು ಪೋರ್ತುಗೀಜರ ರಾಜಧಾನಿಯನ್ನಾಗಿ ಮಾಡಿದನು. ಸುಮಾರು ಒಂದು ಶತಮಾನಗಳ ಕಾಲ ಪೋರ್ತುಗೀಜರು ಭಾರತದಲ್ಲಿ ಅಧಿಕಾರ ಪಡೆಯಲು ಇವನ ಸಮರ್ಥ ಆಡಳಿತೆಯೇ ಕಾರಣ.

15) ಸರ್ ಸೈಯದ್ ಅಹಮದ್ ಖಾನ್‌ರು ಮಹಮ್ಮದೀಯರ ಪುನರುದ್ಧಾರ ಕೆಲಸದಲ್ಲಿ ಹೇಗೆ ಪ್ರಸಿದ್ಧರಾಗಿದ್ದಾರೆ ?

ಉತ್ತರ : 1985 ಅಕ್ಟೋಬರದ ಪ್ರಶ್ನೆ IV (1) ರ ಉತ್ತರ ನೋಡಿರಿ.

16) ಸ್ವರಾಜ್ಯ ಪಕ್ಷದ ಮೂಲಧ್ಯೇಯ ಏನು?ಆ ಪಕ್ಷದ ನಾಯಕರು ಯಾರು ?

ಉತ್ತರ : ಅಸಹಕಾರ ಚಳುವಳಿ ವಿಫಲವಾಗಲು ಸ್ವರಾಜ್ಯ ಪಕ್ಷ ಹುಟ್ಟಿಕೊಂಡಿತು. ಶಾಸನ ಸಭೆಗಳ ಒಳಗಿಂದಲೇ ಸರಕಾರಕ್ಕೆ ಅಡಚಣೆ ಉಂಟುಮಾಡುವದು ಅದರ ಉದ್ದೇಶವಾಗಿತ್ತು. ಅಂತಹ ನೀತಿಯು ಒಂದು ವಿಧದಲ್ಲಿ ಉಪಯೋಗವುಳ್ಳದಾಗಿತ್ತು. ಅದು ಬ್ರಿಟಿಷರ ಆಳಿಕೆಯ ದೋಷಗಳನ್ನು ಬಹಿರಂಗ ಪಡಿಸಿತು. ಮೋತಿಲಾಲ್ ನೆಹರು ಮತ್ತು ಚಿತ್ತರಂಜನದಾಸರು ಅದರ ನಾಯಕರು.

17) ರೆಗ್ಯೂಲೇಟಿಂಗ ಆ್ಯಕ್ಟದ ನ್ಯೂನತೆಗಳಾವವು ?

ಉತ್ತರ : 1) ಅದು ಉಚ್ಚತಮ ನ್ಯಾಯಾಲಯದ ವ್ಯಾಪ್ತಿಯನ್ನು ಸ್ಪಷ್ಟವಾಗಿ ತಿಳಿಸಲಿಲ್ಲ. 2) ಮದ್ರಾಸು ಮತ್ತು ಮುಂಬಯಿಗಳನ್ನು ಅಧೀನ ಪ್ರಾಂತ್ಯಗಳನ್ನಾಗಿ ಮಾಡಿದ್ದಾಗ್ಯೂ ಅವು ಯುದ್ಧ ಸಮಯದಲ್ಲಿ ಅಥವಾ ವಿಶೇಷ ಸಂದರ್ಭದಲ್ಲಿ ಬಂಗಾಳದ ಉಚ್ಚತಮ ಸರ್ಕಾರದ ಆಜ್ಞೆ ಇಲ್ಲದೆ ತಾವೇ ಸ್ವತಃ ಕಾರ್ಯ ಪ್ರವೃತ್ತರಾಗಬಹುದಿತ್ತು. ಇದು ಅನೇಕ ಸಮಸ್ಯೆಗಳಿಗೆ ಎಡೆಮಾಡಿತು.

18) "ವಿಭಾಗಿಸು ಮತ್ತು ಆಳು" ಇದರ ಅರ್ಥವೇನು ?

ಉತ್ತರ : ಬ್ರಿಟಿಷರು ಭಾರತದಲ್ಲಿ "ವಿಭಾಗಿಸು ಮತ್ತು ಆಳು" ಎಂಬ ನೀತಿಯನ್ನು ಅನುಸರಿಸಿ ಆಡಳಿತ ನಡೆಸಿದರು. ಹಿಂದೂ ಮುಸ್ಲಿಂಮರು ಒಕ್ಕಟ್ಟಿನಿಂದ ಇದ್ದರೆ ತಮ್ಮ ಆಳ್ವಿಕೆಗೆ ತೊಂದರೆಯುಂಟಾಗುವದೆಂದು ಯಾವಾಗಲೂ ಅವರಲ್ಲಿ ಒಡಕನ್ನು ಹುಟ್ಟಿಸಲು ಪ್ರಯತ್ನಿಸುತ್ತಿದ್ದರು. ಉದಾ : 1906 ರಲ್ಲಿ ಬಂಗಾಲವನ್ನು ವಿಭಾಗಿಸಿ ಮುಸ್ಲಿಂರಿಗೆ ಪ್ರತ್ಯೇಕ ಚುನಾವಣಾವಕಾಶಗಳನ್ನು ಕೊಟ್ಟು ಅವರನ್ನು ಹಿಂದುಗಳಿಗೆ ವಿರೋಧಿಗಳಾಗುವಂತೆ ಯೋಜನೆ ಮಾಡಿದರು.

19) ಪಂಚಶೀಲದ ತತ್ವಗಳನ್ನು ವಿವರಿಸಿ.

ಉತ್ತರ : 1984 ಸೆಪ್ಟೆಂಬರ ಪ್ರಶ್ನೆ 4 (1) ರ ಉತ್ತರ ನೋಡಿರಿ.

20) ಯುನೆಸ್ಕೊ ಭಾರತಕ್ಕೆ ನೀಡಿದ ಸೇವೆ ಏನು ?

ಉತ್ತರ : ಯುನೆಸ್ಕೊ ಸಂಸ್ಥೆಯು ಭಾರತಕ್ಕೆ ವೈಜ್ಞಾನಿಕ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ಸಹಾಯ ಮಾಡಿದೆ. ಅಧ್ಯಾಪಕರನ್ನು ಮತ್ತು ವಿದ್ಯಾರ್ಥಿಗಳನ್ನು ವಿದೇಶಗಳಿಗೆ ಕಳುಹಿಸಲು ಹಾಗೂ ಅಲ್ಲಿಯವರನ್ನು ಇಲ್ಲಿಗೆ ಆಹ್ವಾನಿಸಲು ಸಹ ಅದು ಸಹಾಯಮಾಡಿದೆ. ಜೊತೆಗೆ ವಿವಿಧ ದೇಶಗಳೊಡನೆ ಸಾಂಸ್ಕೃತಿಕ ಸಂಬಂಧಗಳ ಬೆಳವಣಿಗೆಯನ್ನು ಪ್ರೋತ್ಸಾಹಿಸುತ್ತದೆ.

21) ಗೃಹ ರಕ್ಷಕ ದಳದ ಮುಖ್ಯ ಕರ್ತವ್ಯಗಳೇನು ?

ಉತ್ತರ : ಇದೊಂದು ಮುಖ್ಯವಾದ ಸ್ವಯಂ ಸೇವಕ ಸಂಸ್ಥೆ. ನಾಗರಿಕರಿಗೆ ಸಮಾಜ ಸೇವೆಮಾಡಲು ಈ ಸಂಸ್ಥೆ ಅವಕಾಶ ಒದಗಿಸುತ್ತದೆ. ಅದರ ಕರ್ತವ್ಯಗಳು.

1) ಕಲ್ಯಾಣ ರಾಜ್ಯದಲ್ಲಿ ನಿಯಮಿತ ಅಗತ್ಯ ಸೇವಾ ಕಾರ್ಯಗಳಲ್ಲಿ ನಿರತರಾಗಿರುವ ಅಧಿಕಾರಿಗಳಿಗೆ ಪೂರಕವಾಗಿರುವದು. 2) ಅಗ್ನಿ ಅನಾಹುತ, ಪ್ರವಾಹ, ಭೂಕಂಪ, ಸಾಂಕ್ರಾಮಿಕ ರೋಗಗಳಿಂದ ಉಂಟಾಗುವ ತುರ್ತುಸರಿಸ್ಥಿತಿಯನ್ನು ಎದುರಿಸುವದು ಹಾಗೂ 3) ಕಾನೂನು ಮತ್ತು ಶಿಸ್ತನ್ನು ಕಾಪಾಡಿಕೊಂಡು ಬರುವದು.

22) ಇಸ್ರೇಲ್ ಸಂಸ್ಥಾನದ ಸ್ಥಾಪನೆಯಿಂದ ಆಗಿರುವ ಪರಿಣಾಮ ಏನು ?

ಉತ್ತರ : ವಿಶ್ವರಾಷ್ಟ್ರ ಸಂಘವು ಇರಾಕ್ ಮತ್ತು ಪ್ಯಾಲಸ್ಟೈನ್‌ಗಳ ಮೇಲಿನ ಹತೋಟಿಯನ್ನು ಬ್ರಿಟನ್ನಿಗೆ ವಹಿಸಿತು. ಇದನ್ನು ಅರಬ್ಬಿಯ ಪಾಲಿಸ್ತೀನಿಯನ್ನರು ವಿರೋಧಿಸಿದರು. ಆದರೆ ಅವರಲ್ಲಿ ಐಕ್ಯಮತ್ಯವಿಲ್ಲದಿದ್ದುದರಿಂದ ಅವರು ಇಸ್ರೇಲ್ ಸಂಸ್ಥಾನವನ್ನು ರಚಿಸಿದರು. 1948 ರಲ್ಲಿ ಯಹೂದ್ಯರ ನಡೆಸಿದ ಸತತ ವಿರೋಧದ ಪರಿಣಾಮವಾಗಿ ವಿಶ್ವಸಂಸ್ಥೆ ಇಸ್ರೇಲ್ ರಚನೆಯನ್ನು ಘೋಷಿಸಿತು, ಆದರೆ ಇದರಿಂದ ಇಂದಿಗೂ ಅನೇಕ ಕ್ಲಿಷ್ಟ ಸಮಸ್ಯೆಗಳುಂಟಾಗಿ ಮೂರು ಬಾರಿ ಯುದ್ಧಕ್ಕೆ ಅವಕಾಶ ಮಾಡಿಕೊಟ್ಟಿದೆ.

23) ಚೀನಾ ದೇಶಕ್ಕೆ ಡಾ|| ಸನ್‌ಯತ್ ಸೇನ್‌ರ ಸೇವೆಗಳೇನು ?

ಉತ್ತರ : ಸನ್‌ಯತ್‌ಸೇನರು ಚೀನದ ರಾಷ್ಟ್ರಪಿತ ಎಂದು ಎನಿಸಿಕೊಂಡಿರುವರು. ಚೀನವು ಮಂಚೂ ವಂಶದ ರಾಜರ ಕೈಯ್ಯಲ್ಲಿದ್ದಿತು. ಇದಲ್ಲದೆ ಬ್ರಿಟನ್, ಅಮೇರಿಕಾ ಇವೆರಡೂ ಚೀನದಲ್ಲಿ ಸಾಧ್ಯವಿದ್ದಷ್ಟು, ವ್ಯಾಪಾರಿ ಸೌಲಭ್ಯಗಳನ್ನು ಪಡೆದಿದ್ದವು ಮತ್ತು ಚೀನವು ತಲೆ ಎತ್ತದಂತೆ ಈ ರಾಷ್ಟ್ರಗಳು ನೋಡಿಕೊಳ್ಳುತ್ತಿದ್ದವು.

ಪ್ರಪಂಚದಲ್ಲಿ ಎದ್ದ ಸ್ವಾತಂತ್ರ್ಯದ ಚಳುವಳಿ ಚೀನವನ್ನು ಜಾಗೃತಗೊಳಿಸಿತು. ಡಾ. ಸನ್‌ಯತ್ ಸೇನರು ಚೀನವನ್ನು ಪುನರುಜ್ಜೀವನಗೊಳಿಸಲು ಪಣತೊಟ್ಟರು. 1894 ರಲ್ಲಿ "ಚೀನ ಪುನರುಜ್ಜೀವನ ಸಂಘ" ಎಂಬ ಸಂಘವನ್ನು ಸ್ಥಾಪಿಸಿದರು. 1905 ರಲ್ಲಿ ಮಂಚೂರಾಜರ ಆಡಳಿತೆಯ ವಿರುದ್ಧ ಬಂಡು ಹೂಡಿದರು. 1910 ರಲ್ಲಿ ತಮ್ಮ ರಾಜಕೀಯ ಪಕ್ಷಕ್ಕೆ "ಕೋಮಿನ್‌ಟಾಂಗ್" ಎಂಬ ಹೆಸರಿಟ್ಟು ಅದನ್ನು ಬಲಪಡಿಸಿದರು. 1911 ರಲ್ಲಿ ಕ್ರಾಂತಿಯಾಗಿ ಚೀನವು ಗಣರಾಜ್ಯವಾಯಿತು. ಸನ್‌ಯತ್ ಸೇನರು ಸ್ವತಂತ್ರ ಚೀನದ ಪ್ರಥಮ ರಾಷ್ಟ್ರಾಧ್ಯಕ್ಷರಾದರು.

C. ಕೆಳಗಿನ ಪ್ರಶ್ನೆಗಳಿಗೆ 5-6 ವಾಕ್ಯಗಳಿಗೆ ಮೀರದಂತೆ ಉತ್ತರ ಬರೆಯಿರಿ.

24) ಸಮಾಜ ಸುಧಾರಣೆಯಲ್ಲಿ ರಾಮಕೃಷ್ಣ ನಿಯೋಗದ ಪಾತ್ರವೇನು ?

**ಉತ್ತರ :** 1) ಇದು ಅಂಧ ವಿಶ್ವಾಸಗಳನ್ನೂ, ಮೂಢ ನಂಬಿಕೆಗಳನ್ನೂ ಖಂಡಿಸಿ ತರ್ಕಬದ್ಧವಾದ ವಿಧ್ಯಾಭ್ಯಾಸವನ್ನು ಪ್ರೋತ್ಸಾಹಿಸಿತು. 2) ಇದು ಶಾಲೆಗಳು, ಆಸ್ಪತ್ರೆಗಳು, ಗ್ರಂಥ ಭಂಡಾರಗಳು ಮತ್ತು ಅನಾಥ ನಿಲಯಗಳನ್ನು ತೆರೆದು ಸಾಮಾಜಿಕ ಮತ್ತು ಮಾನವೀಯ ಕ್ಷೇತ್ರಗಳಲ್ಲಿ ಮಹತ್ವವಾದ ಕಾರ್ಯ ಮಾಡಿತು.

25) ರಾಷ್ಟ್ರ ಸಂಘವು ಸ್ಥಾಪಿತವಾದುದು ಯಾವಾಗ ? ಏಕೆ ?

**ಉತ್ತರ :** ಒಂದನೆ ಪ್ರಪಂಚ ಯುದ್ಧ ಜಗತ್ತಿನ ರಾಷ್ಟ್ರಗಳಿಗೆ ವಿನಾಶವನ್ನು ತಂದಿತು. ಆಗ ವಿಶ್ವಶಾಂತಿಯು ಅವಶ್ಯವೆನಿಸಿತು. ಅಮೇರಿಕೆಯ ಅಧ್ಯಕ್ಷ ವುಡ್ರೋವಿಲ್ಸನ್ನರು ಒಂದು ಜಗತ್ತು ಎಂಬ ಧ್ಯೇಯದಿಂದ ಇದಕ್ಕಾಗಿ ಪ್ರಯತ್ನ ಮಾಡಿದರು. ಈ ಸಂಘದಲ್ಲಿ 32 ರಾಷ್ಟ್ರಗಳ ಎಪ್ರಿಲ್ 28, 1919 ರಂದು ಒಡಂಬಡಿಕೆಗೆ ಸಹಿ ಹಾಕಿದವು. i) ವಿಶ್ವದಲ್ಲಿ ಶಾಂತಿ ಸ್ಥಾಪಿಸುವದು. ii) ಎಲ್ಲ ರಾಷ್ಟ್ರಗಳ ಸ್ವಾತಂತ್ರ್ಯವನ್ನು ಸಾಧಿಸುವದು. iii) ಎಲ್ಲ ವಿವಾದಗಳನ್ನು ಸಂಧಾನ ಮೂಲಕ ಬಗೆಹರಿಸುವದು. ಈ ಉದ್ದೇಶಗಳನ್ನು ಪೂರೈಸಲು ರಾಷ್ಟ್ರ ಸಂಘವು ಸ್ಥಾಪಿಸಲ್ಪಟ್ಟಿತು.

25) ಕೈಗಾರಿಕಾಕರಣದ ಸಮಸ್ಯೆಗಳಾವವು ?

**ಉತ್ತರ :** ಹೊಸ ಕೈಗಾರಿಕಾ ಬೆಳವಣಿಗೆ ಅನೇಕ ಸಮಸ್ಯೆಗಳನ್ನುಂಟು ಮಾಡಿತು. ನಗರಗಳು ಅತಿಯಾಗಿ ಬೆಳೆದು ಅಲ್ಲಿ ಹೊಲಸು ಕೇರಿಗಳು ಬೆಳೆದವು. ವಸತಿ, ಶಾಖದ ವ್ಯವಸ್ಥೆ, ದೀಪ, ನೀರು ಮತ್ತು ನೈರ್ಮಲ್ಯ ಮುಂತಾದ ಇಲ್ಲಿನ ಸಮಸ್ಯೆಗಳು ಕಳವಳಕಾರಿ ಯಾತನೆಯನ್ನುಂಟು ಮಾಡಿದವು. ನಗರದಲ್ಲಿ ಕಾರ್ಖಾನೆಗಳಿಂದ ಬರುವ ಹೊಗೆ ನಗರದ ಹವಾಮಾನವನ್ನು ಕಲುಷಿತಗೊಳಿಸುತ್ತದೆ. ಬಂಡವಾಳಗಾರರು ಹೆಚ್ಚು ಬಲಶಾಲಿಗಳಾದರು. ಸಾಮಾನ್ಯರು ನಿರುದ್ಯೋಗಿಗಳಾದರು.

27) 1942 ರ "ಭಾರತವನ್ನು ಬಿಟ್ಟು ತೊಲಗಿ" ಚಳುವಳಿ ಏಕೆ ವಿಫಲವಾಯಿತು ವಿವರಿಸಿ.

**ಉತ್ತರ :** ಎಪ್ರಿಲ್ 1985 ರ ಪ್ರಶ್ನೆ III (5) ರ ಉತ್ತರ ನೋಡಿರಿ.

D. ಕೆಳಗಿನ ಪ್ರಶ್ನೆಗಳಿಗೆ ಒಂದು ಪುಟಕ್ಕೆ ಮೀರದಂತೆ ಉತ್ತರ ಬರೆಯಿರಿ.

28) ರಷ್ಯಾ ದೇಶಕ್ಕೆ ಲೆನಿನ್ ನೀಡಿದ ಸೇವೆಯನ್ನು ವಿವರಿಸಿ.

**ಉತ್ತರ :** ನಿಕೊಲಾಯ್ ಲೆನಿನ್ನನು (1870-1924) ರಷ್ಯಾದ ಕ್ರಾಂತಿಯ ಮಹಾಶಿಲ್ಪಿಯು. ಮಾರ್ಕ್ಸನ ತತ್ವಗಳಿಂದ ಕ್ರಾಂತಿಕಾರಿಯಾದನು. ಲೆನಿನ್ನನ ಪಕ್ಷದವರು ಬೋಲ್ ಸೆವಿಕ್‌ರು ಬಹುಸಂಖ್ಯಾತರು. ಕ್ರಾಂತಿಯು ಇವರ ಸಂಘ. ಯಾರಿಗೂ ಸ್ವಂತ ಆಸ್ತಿ ಇರಕೂಡದು. ಎಲ್ಲರ ಆಸ್ತಿಯೂ ಸರಕಾರಕ್ಕೆ ಸೇರಿದ್ದು. ಬ್ಯಾಂಕುಗಳ-ವ್ಯಾಪಾರ, ಕೈಗಾರಿಕೆಗಳೆಲ್ಲವೂ ಸರಕಾರದ ಆಧೀನದಲ್ಲಿ ಇರಬೇಕು. ಇವು ಅವನ ತತ್ವಗಳಾಗಿದ್ದವು.

**ಲೆನಿನ್ ರಶಿಯಾಕ್ಕೆ ಸಲ್ಲಿಸಿದ ಸೇವೆ :**

a) ಲೆನಿನ್‌ನು ಅಕ್ಟೋಬರ ಕ್ರಾಂತಿಯ ನಂತರ ರಶಿಯಾದಲ್ಲಿ ಹೊಸ ಸರಕಾರವನ್ನು ರಚಿಸಿ ಜರ್ಮನಿಯೊಂದಿಗೆ ಯುದ್ಧವನ್ನು ಕೊನೆಗಾಣಿಸಿ ತನ್ನ ದೇಶವನ್ನು ಬಂಡವಾಳಗಾರ ಶತ್ರುದಿಂದ ವಿಮೋಚನಗೊಳಿಸಿ, ಸಮಾಜವಾದ ತತ್ವವನ್ನು ಅನುಸರಿಸುವಂತೆ ಮಾಡಿದನು. b) ಕ್ರಾಂತಿಕಾರಕ ವಿರೋಧ ಶಕ್ತಿಗಳನ್ನು ಪ್ರತಿಬಂಧಿಸಿ ಜಾರ್ ಬೆಂಬಲಿಗರನ್ನು ಹತ್ತಿಕ್ಕಿ ಹೊಸ ಆಳ್ವಿಕೆಯನ್ನು ಪ್ರಾರಂಭಿಸಿದನು. c) ಕಮ್ಯುನಿಸಂ ಸಮರ ಎಂದು ಕರೆಯಲಾದ ಆರ್ಥಿಕ ಯೋಜನೆಯನ್ನು ಜಾರಿಯಲ್ಲಿ ತಂದನು. d) 1921 ರಲ್ಲಿ ಹೊಸ ಆರ್ಥಿಕ ನೀತಿಯನ್ನು ಜಾರಿಯಲ್ಲಿ ತಂದನು. ಈ ನೀತಿಯ ಪ್ರಕಾರ ರೈತರು ತಮ್ಮ ಉತ್ಪನ್ನದ ಹೆಚ್ಚು ಭಾಗವನ್ನು ಒಪ್ಪಿಸುವದರ ಬದಲಾಗಿ ತೆರಿಗೆಯನ್ನು ಕೊಡಬೇಕಾಯಿತು. e) ಕ್ರಮವಾದ ನಾಣ್ಯ ಚಲಾವಣೆ ಮತ್ತು ಪಡಿತರ ಯೋಜನೆಗಳನ್ನು ಪ್ರಾರಂಭಿಸಿದನು. f) ಖಾಸಗಿ ವ್ಯಾಪಾರಕ್ಕೆ ಆಸ್ಪದ ಕೊಟ್ಟನು. ಸಹಕಾರಿ ಸಂಘಗಳನ್ನು ಸ್ಥಾಪಿಸಲು ಅವಕಾಶವನ್ನು ಕಲ್ಪಿಸಿಕೊಟ್ಟನು. g) ಬ್ರಿಟನ್ ಮತ್ತು ಜರ್ಮನಿಯೊಂದಿಗೆ ವ್ಯಾಪಾರ ಒಪ್ಪಂದಗಳಿಗೆ

ಸಹಿ ಹಾಕಿದನು. ಈ ಎಲ್ಲ ಯೋಜನೆಗಳಿಂದ ರಷ್ಯದ ಆರ್ಥಿಕ ಸ್ಥಿತಿ ಚೇತರಿಸಿಕೊಂಡು ರಷ್ಯಾ ಅಭಿವೃದ್ಧಿ ಹೊಂದಲು ಅನುಕೂಲವಾಯಿತು.

29) ಪ್ರಪಂಚದ ಮೊದಲನೆ ಯುದ್ಧಕ್ಕೆ ಕಾರಣಗಳಾವವು ? ಫಲಿತಾಂಶಗಳೇನು ?

ಉತ್ತರ : ಮೊದಲ ಜಾಗತಿಕ ಯುದ್ಧದ ಕಾರಣಗಳು–

1] 19 ನೇ ಶತಮಾನದಲ್ಲಿ ಯುರೋಪ ಖಂಡಗಳ ರಾಷ್ಟ್ರಗಳಲ್ಲಿ ತಲೆದೋರಿದ ಅತಿಯಾದ "ರಾಷ್ಟ್ರೀಯತೆ" ಜಾಗತಿಕ ಯುದ್ಧದ ಒಂದು ಪ್ರಮುಖ ಕಾರಣವು ಬಿಸ್ಮಾರ್ಕ ಫ್ರಾನ್ಸಿನೊಡನೆ ಯುದ್ಧ ಮಾಡಿ ಅಲ್ಸಾಕ್ ಮತ್ತು ಲೋರೇನ್ ಪ್ರಾಂತ್ಯಗಳನ್ನು ವಶಪಡಿಸಿಕೊಂಡನು ಇದಕ್ಕೆ ರಾಷ್ಟ್ರೀಯತೆಯೇ ಮುಖ್ಯ ಕಾರಣ ಇದೇ ಕಾರಣದಿಂದ ರಷ್ಯಾ ಮತ್ತು ಹಂಗೇರಿಗಳ ನಡುವೆ ವೈರತ್ವ, ಹೀಗೆ ಅನೇಕ ರಾಷ್ಟ್ರಗಳು ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ಯುದ್ಧಕ್ಕೆ ಮಾರು ಹೋದವು. ರಾಷ್ಟ್ರೀಯ ಭಾವನೆಯಿಂದ ಕೂಡಿದ್ದ ಸಾಹಿತ್ಯವೂ ಸಹಾಯವಾಯಿತು. ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರಕ್ಕಿಂತ ಹೆಚ್ಚಿನದು ಎಂಬ ಭಾವನೆಯನ್ನು ಬೆಳೆಸಲು ಕಾರಣವಾಯಿತು.

2) ಆರ್ಥಿಕ ಪೈಪೋಟಿ ಮತ್ತೊಂದು ಕಾರಣವಾಗಿತ್ತು. ಕೆಲವು ರಾಷ್ಟ್ರಗಳು ಕೈಗಾರಿಕಾ ಪ್ರಗತಿಯನ್ನು ಸಾಧಿಸಿದವು. ಕಚ್ಚಾ ಮಾಲುಗಳನ್ನು ಪಡೆಯಲು, ಉತ್ಪಾದಿತ ವಸ್ತುಗಳನ್ನು ಮಾರಲು ವಸಾಹತುಗಳ ಅವಶ್ಯಕತೆ ಉಂಟಾಯಿತು. ಯುರೋಪಿನ ರಾಷ್ಟ್ರಗಳು ವಸಾಹತುಗಳನ್ನು ಸ್ಥಾಪಿಸಲು ಸ್ಪರ್ಧಿಸಹತ್ತಿದವು. ಇದು ಈ ರಾಷ್ಟ್ರಗಳಲ್ಲಿ ಸತತ ಘರ್ಷಣೆ ಮತ್ತು ಯುದ್ಧಕ್ಕೆ ಅವಕಾಶ ಮಾಡಿಕೊಟ್ಟಿತು.

3) ಯುದ್ಧ ಸನ್ನಾಹದ ಸ್ಪರ್ಧೆ– ಬಿಸ್ಮಾರ್ಕ ಮುಂತಾದ ಸರ್ವಾಧಿಕಾರಿ ಮನೋವೃತ್ತಿಯ ನಾಯಕರು ಯುದ್ಧವೇ ಶಾಂತಿ ಸ್ಥಾಪನೆಯ ಏಕೈಕ ಮಾರ್ಗ ಎಂದು ಬಲವಾಗಿ ನಂಬಿದ್ದರು. ಆದ್ದರಿಂದ ಅವರು ತಮ್ಮ ಸೇನೆಗಳನ್ನೂ ನೌಕಾ ಬಲಗಳನ್ನೂ ಸಜ್ಜುಗೊಳಿಸಿದರು. ಎಲ್ಲ ರಾಷ್ಟ್ರಗಳು ಸಿಡಿ ಮಾರಕ ಅಸ್ತ್ರಗಳಿಂದ ಸಿದ್ಧವಾದವು.

4) ಯುರೋಪ ದೇಶಗಳ ನಡುವಿನ ನಿಗೂಢ ಮೈತ್ರಿ:– ಯುರೋಪಿನ ರಾಷ್ಟ್ರಗಳು ಮೈತ್ರಿ ಸಂಬಂಧ ಬೆಳೆಸಿ ಅಂತರ ರಾಷ್ಟ್ರೀಯ ಶಾಂತಿಗೆ ಭಂಗ ಉಂಟು ಮಾಡಿದವು. ಬಿಸ್ಮಾರ್ಕ 1879 ರಲ್ಲಿ ಆಸ್ಟ್ರಿಯಾ–ಹಂಗೆರಿಗಳೊಡನೆ ಹಾಗೂ 1882 ರಲ್ಲಿ ಇಟಲಿಯೊಡನೆ ಮೈತ್ರಿ ಬೆಳೆಸಿಕೊಂಡನು. ಬಿಸ್ಮಾರ್ಕ ಮಡಿದ ನಂತರ 2 ನೇ ಕೈಸರ್ ವಿಲಿಯಂ ಮಹಾತ್ವಾಕಾಂಕ್ಷೆಯುಳ್ಳವನಾಗಿದ್ದನು. ಬರ್ಲಿನ್‌ನಿಂದ ಬಗದಾದ್ ವರೆಗೆ ರೈಲು ಮಾರ್ಗ ನಿರ್ಮಿಸಲು ಯೋಜಿಸಿದ್ದನು. ಆದ್ದರಿಂದ ಈ ಮೈತ್ರಿಕೂಟದ ಅಪಾಯವನ್ನು ತಪ್ಪಿಸಿಕೊಳ್ಳಲು ಇಂಗ್ಲಂಡ್, ಫ್ರಾನ್ಸ್ ಮತ್ತು ರಷ್ಯಾ ಒಂದು ಮೈತ್ರಿ ಒಪ್ಪಂದ ಮಾಡಿಕೊಳ್ಳಲು ಅವಕಾಶ ಉಂಟು ಮಾಡಿತು. ಹೀಗೆ ಯುರೋಪ ಖಂಡದಲ್ಲಿ ಎರಡು ಬಣಗಳು ನಿರ್ಮಾಣವಾದವು.

5) ತಾತ್ಕಾಲಿಕ ಕಾರಣ : ಬೋಸ್ನಿಯಾದ ರಾಜಧಾನಿಯಾದ ಸರಜೇವೊಕ್ಕೆ, ಆಸ್ಟ್ರಿಯಾದ ಯುವರಾಜನಾದ ಫ್ರಾನ್ಸಿಸ್ ಫರ್ಡಿನಾಂಡ ಭೆಟ್ಟಿಯಿತ್ತಾಗ ಜೂನ್ 28, 1914 ರಲ್ಲಿ ಅವನು ಅಲ್ಲಿಯೇ ಕೊಲೆಮಾಡಲ್ಪಟ್ಟನು. ಇದರ ವಿರುದ್ಧ ದೃಢವಾದ ಕ್ರಮ ತೆಗೆದುಕೊಳ್ಳಲು ಆಸ್ಟ್ರಿಯಾ ಜುಲೈ 28, 1914 ರಂದು ಸರ್ಬಿಯಾದ ಮೇಲೆ ಆಕ್ರಮಣ ಮಾಡಿತು. ಅದು ಜರ್ಮನಿಯ ಬೆಂಬಲ ಪಡೆಯಿತು. ಇದಕ್ಕೆ ವಿರುದ್ಧವಾಗಿ ಫ್ರಾನ್ಸ, ಬ್ರಿಟಿಷರು ಜರ್ಮನಿಗೆ ವಿರೋಧವಾಗಿ ಯುದ್ಧ ಘೋಷಿಸಿದರು. ಹೀಗೆ ಪ್ರಥಮ ಜಾಗತಿಕ ಯುದ್ಧ ಪ್ರಾರಂಭವಾಯಿತು.

ಮೊದಲ ಜಾಗತಿಕ ಯುದ್ಧದ ಫಲಿತಾಂಶಗಳು :—

1) 1918 ರಲ್ಲಿ ಯುದ್ಧ ಮುಕ್ತಾಯವಾದಾಗ ವರ್ಸೇಲ್ಸ್ ಒಪ್ಪಂದ ನಡೆದು ಆ ಒಪ್ಪಂದದ ಪ್ರಕಾರ ಜರ್ಮನಿ ತನ್ನ ಎಲ್ಲ ಸ್ವಾಮ್ಯಗಳನ್ನೂ ಕಳೆದುಕೊಂಡಿತು. ಯುದ್ಧ ಖರ್ಚನ್ನು ಜರ್ಮನಿಯೇ ತುಂಬಬೇಕಾಯಿತು. 2) 80 ಲಕ್ಷ ಜನ ಮಡಿದರು. 199 ಲಕ್ಷ ಜನ ದುರ್ಬಲಗೊಂಡರು. 3) ಆರ್ಥಿಕ ಬಿಕ್ಕಟ್ಟು ತಲೆದೋರಿತು. ಕೈಗಾರಿಕೆ, ಉದ್ದಿಮೆ ಅವನತಿ ಹೊಂದಿದವು. ಹಣದುಬ್ಬರ ಜಗತ್ತಿನ ತುಂಬೆಲ್ಲ ತಲೆದೋರಿತು. ವ್ಯಾಪಾರ ಕುಂಠಿತವಾಯಿತು. 4) ಜನರಲ್ಲಿ ರಾಜತತ್ವದಲ್ಲಿದ್ದ ಜನಪ್ರಿಯತೆ ಮಾಸಿ ಹೋಯಿತು. ಕೆಲವು ದೇಶಗಳಲ್ಲಿ ನಿರಂಕುಶ ಪ್ರಭುತ್ವ ಜಾರಿಗೆ ಬಂದಿತು. 5) ಎಲ್ಲ ಕಡೆಗೂ ಮುಷ್ಕರ ಚಳುವಳಿಗಳು ಪ್ರಾರಂಭವಾದವು. 6) ಇಂಗ್ಲಂಡ ಮುಂತಾದ ರಾಷ್ಟ್ರಗಳ ವಸಾಹತುಶಾಹಿಯ ಧೋರಣೆಗೆ ಕೊಡಲಿಪೆಟ್ಟು ಬಿದ್ದಿತು. 7) ಪೋಲಂಡ ಮುಂತಾದ ಹೊಸ ರಾಷ್ಟ್ರಗಳ ಉದಯ 8) ಜಾಗತಿಕ ಶಾಂತಿಯನ್ನು ಸ್ಥಾಪಿಸಲು ಅಮೇರಿಕೆಯ ಅಧ್ಯಕ್ಷರಾಗಿದ್ದ ವುಡ್ರೊ ವಿಲ್ಸನ್ನರ ಮುಖಂಡತ್ವದಲ್ಲಿ ರಾಷ್ಟ್ರ ಸಂಘ ಎಂಬ ಅಂತರ್‌ರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಲಾಯಿತು.

30) ರಾಜಾರಾಮ್ ಮೋಹನರಾಯರ ಸಾಮಾಜಿಕ ಆಧುನಿಕ ಸುಧಾರಣೆಗಳನ್ನು ವಿವರಿಸಿ.

ಉತ್ತರ : 1985 ಎಪ್ರಿಲ್ ಪ್ರಶ್ನೆ 4 [4] ರ ಉತ್ತರ ನೋಡಿರಿ.

31) ರಾಷ್ಟ್ರೀಯ ಭಾವೈಕ್ಯತೆ ಎಂದರೇನು ? ಕೆಳಗಿನ ಸಂಸ್ಥೆಗಳು ರಾಷ್ಟ್ರೀಯ ಭಾವೈಕ್ಯತೆಗೆ ಹೇಗೆ ಸಹಾಯ ಮಾಡಿವೆ ?

ರಾಷ್ಟ್ರಾಂಗ ಮತ್ತು ಪಂಚಾಯತ ರಾಜ್ಯ.

[ಎಪ್ರಿಲ್ 1985 ರ ಪ್ರಶ್ನೆ 3 [1] ರ ಉತ್ತರ ಸೋಡಿರಿ ಮತ್ತು ಕೆಳಗಿನದನ್ನೂ ಓದಿರಿ.

ರಾಷ್ಟ್ರಾಂಗ : ಭಾರತದ ರಾಷ್ಟ್ರಾಂಗವು ರಾಷ್ಟ್ರೀಯ ಭಾವೈಕ್ಯತೆಯನ್ನು ವೃದ್ಧಿಸುವ ಅತಿ ಮುಖ್ಯವಾದ ಅಂಶ. ನಮ್ಮ ಸಂವಿಧಾನವು ಎಲ್ಲ ಪ್ರಜೆಗಳಿಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯವನ್ನು, ವಿಚಾರ ಅಭಿವ್ಯಕ್ತಿ, ವಿಶ್ವಾಸ ಮತ್ತು ಉಪಾಸನಾ ಸ್ವಾತಂತ್ರ್ಯವನ್ನು ಸ್ಥಾನಮಾನ ಹಾಗೂ ವ್ಯಕ್ತಿಗೌರವದ ಸಮಾನತೆಯನ್ನು ಒದಗಿಸಿದೆ. ಸಂವಿಧಾನದ ಸಂಯುಕ್ತ ಸ್ವರೂಪ, ಏಕಪೌರತ್ವದ ಅಂಶ, ಮೂಲಭೂತ ಹಕ್ಕುಗಳು, ನಿರ್ದೇಶಕ ತತ್ವಗಳು ಭಾವೈಕ್ಯತೆಗೆ ಸಹಾಯಕವಾಗಿವೆ.

**ಪಂಚಾಯತ ರಾಜ್ಯ :** ನಮ್ಮ ಸರ್ಕಾರಗಳು ಪಂಚಾಯತಿ ರಾಜ್ಯದ ಮೂಲಕ ಗ್ರಾಮಾಭ್ಯುದಯದ ಕಡೆ ತಮ್ಮ ಗಮನವನ್ನು ಕೇಂದ್ರೀಕರಿಸಿವೆ. ಬಡತನ, ಅಜ್ಞಾನ ಮತ್ತು ನಿರಕ್ಷರತೆಯನ್ನು ಹೋಗಲಾಡಿಸುವದು ಮತ್ತು ರಾಷ್ಟ್ರೀಯ ಜೀವನದ ಹೆದ್ದಾರಿಯಿಂದ ಹೊರತಾಗಿರುವ ಗ್ರಾಮೀಣ ಪ್ರದೇಶಗಳ ಏಕಾಂತವನ್ನು ಕೊನೆಗೊಳಿಸುವದು ಇದರ ಉದ್ದೇಶ. ಈ ನೂತನ ವ್ಯವಸ್ಥೆಯಲ್ಲಿ ತಮ್ಮ ವ್ಯವಹಾರಗಳನ್ನು ನಿಭಾಯಿಸಲು ಕೆಲವು ಅಧಿಕಾರಗಳನ್ನು ಗ್ರಾಮ ಪಂಚಾಯತಿಗಳಿಗೆ ನೀಡುವ ಮೂಲಕ ಅವುಗಳಲ್ಲಿ ತಮ್ಮ ಪ್ರಾಮುಖ್ಯತೆಯ ಭಾವವನ್ನು ಬೆಳಸಲಾಗಿದೆ. ಪಂಚಾಯತಿಯ ಮಟ್ಟದಲ್ಲಿಯೂ ಚುನಾವಣಾ ತತ್ವಗಳನ್ನು ಜಾರಿಗೊಳಿಸಿದ್ದರಿಂದ ಅಡಿಪಾಯದಿಂದ ಪ್ರಜಾತಾಂತ್ರಿಕ ವ್ಯವಸ್ಥೆಯನ್ನು ರಚಿಸಿದಂತಾಗಿದೆ.

....O....

# ಸಮಾಜ ಪಾಠಗಳು

## ಎಪ್ರಿಲ್-1986 ದ್ವಿತೀಯ-ಪತ್ರಿಕೆ

## [ ಭೂಗೋಳ ]

1) ಗಣಿ ಕೈಗಾರಿಕೆಯ ವಿಧಾನಗಳಾವವು ? ಆಧುನಿಕ ಗಣಿ ಕೆಲಸಕ್ಕೆ ಬೇಕಾದ ಮುಖ್ಯ ಸಲಕರಣೆಗಳು ಯಾವವು ?

**ಉತ್ತರ :** 1] ಭೂಮಿಯ ಮೇಲ್ಭಾಗದ ಅಥವಾ ತೆರೆದ ಗುಂಡಿಗಳ ಗಣಿಗಾರಿಕೆ ಮತ್ತು 2] ಭೂಮಿಯನ್ನು ಆಳವಾಗಿ ತೆಗೆಯುವ ಗಣಿಗಾರಿಕೆ ಹೀಗೆ ಗಣಿಗಾರಿಕೆಯಲ್ಲಿ ವಿಧಾನಗಳಿವೆ. ಕಬ್ಬಿಣದ ಅದಿರು, ಮ್ಯಾಂಗನೀಜ್ ಮತ್ತು ಬಾಕ್ಸೈಟ್ ಖನಿಜಗಳನ್ನು ಬಹುಮಟ್ಟಿಗೆ ಭೂಮಿಯ ಮೇಲ್ಭಾಗದ ಗುಂಡಿಗಳಲ್ಲಿ ಬಂಡೆಗಳನ್ನು ಒಡೆದು ತೆಗೆಯುತ್ತಾರೆ. ಕಲ್ಲಿದ್ದಲು, ಚಿನ್ನ, ತಾಮ್ರ ಮತ್ತು ಪೆಟ್ರೋಲಿಯಂ ಇವುಗಳನ್ನು ಸಾಮಾನ್ಯವಾಗಿ ಆಳವಾದ ಗಣಿಗಳಿಂದ ತೆಗೆಯುತ್ತಾರೆ. ಆಳವಾದ ಗಣಿಗಳಲ್ಲಿ ಭೂಮಿಯ ಅಂತರ್ ಜಲವನ್ನು ಪಂಪುಗಳ ಸಹಾಯದಿಂದ ತೆಗೆಯಬೇಕು.

ಬಂಡೆಗಲ್ಲುಗಳನ್ನು ಮತ್ತು ಕಲ್ಲಿದ್ದಲಿನ ಸ್ತರಗಳನ್ನು ಒಡೆಯಲು ಅನೇಕ ವಿಧವಾದ ಕೊರೆಯುವ ಯಂತ್ರಗಳು ಬೇಕು. ಕೆಲವು ವೇಳೆ ಖನಿಜಗಳನ್ನು ತೆಗೆಯಲು ಸುರಂಗ ಮಾರ್ಗಗಳನ್ನು ಸಹ ಕೊರೆಯಬೇಕಾಗುತ್ತದೆ. ಆಧುನಿಕ ಯಾಂತ್ರಿಕ ಗಣಿ ಕೈಗಾರಿಕೆಗೆ ವಿದ್ಯುಚ್ಛಕ್ತಿಯ ಸನಿಕೆಗಳು, ಕೊರೆಯುವ ಯಂತ್ರಗಳು, ಲಿಫ್ಟ ಸೌಕರ್ಯಗಳು, ಭೂಮಿಯ ಒಳಗಡೆ ಓಡಾಡುವ ರೈಲುಗಳು, ಖನಿಜಗಳನ್ನು ರಾಶಿ ಹಾಕುವ ಯಂತ್ರಗಳು, ದೀಪದ ಸೌಕರ್ಯ ಮತ್ತು ತಂಪಾಗಿಡುವ ಉಪಕರಣಗಳು ಇವು ಆಧುನಿಕ ಗಣಿ ಕೆಲಸಕ್ಕೆ ಬೇಕಾದ ಮುಖ್ಯ ಸಲಕರಣೆಗಳು.

**ಅಥವಾ**

– ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳಿಗಿರುವ ವ್ಯತ್ಯಾಸ ವೇನು ?

ಉತ್ತರಕ್ಕೆ ಅಕ್ಟೋಬರ್ 1984 ರ 1 ನೇ ಪ್ರಶ್ನೆಯ ಉತ್ತರ ನೋಡಿರಿ.

2) ಸಾಗಾಣಿಕೆಯ ವಿವಿಧ ರೀತಿಗಳಾವವು ? ಜಲ ಮಾರ್ಗ ಸಾಗಾಣಿಕೆ ಅತ್ಯಂತ ಅಗ್ಗವಾದುದು ಏಕೆ ?

ಉತ್ತರಕ್ಕೆ ಎಪ್ರಿಲ್ 1985 ರ ಪ್ರಶ್ನೆ [ಅಥವಾ] II ರ ಉತ್ತರ ನೋಡಿರಿ.

**ಅಥವಾ**

ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳನ್ನು ನಿರ್ಧರಿಸುವ ಅಂಶಗಳಾವವು.

ಉತ್ತರಕ್ಕೆ 1985 ರ ಎಪ್ರಿಲ್ ಪ್ರಶ್ನೆ ಪತ್ರಿಕೆಯ 2 ನೇ ಪ್ರಶ್ನೆಯ ಉತ್ತರ ನೋಡಿರಿ.

III. ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ವಾಕ್ಯಕ್ಕೆ ಮೀರದಂತೆ ಉತ್ತರ ಬರೆಯಿರಿ.

1) ತಿರುವೆ ಮನೆ ಪದ್ಧತಿಯನ್ನು ವಿವರಿಸಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ III (5) ರ ಉತ್ತರ ನೋಡಿರಿ.

2) ರೇವು ಪಟ್ಟಣ ಮತ್ತು ಬಂದರುಗಳಿಗಿರುವ ವ್ಯತ್ಯಾಸವೇನು ?

**ಉತ್ತರ :** ಬಂದರುಗಳಲ್ಲಿ ಹಡಗುಗಳು ಸಾಮಾನುಗಳನ್ನು ಖಾಲಿಮಾಡುವದು ಮತ್ತು ಭರ್ತಿ ಮಾಡುವದು ಈ

ಕಾರ್ಯವು ನಡೆಯುತ್ತದೆ. ರೇವು ಪಟ್ಟಣಕ್ಕೆ ಬಂದರು ಅತಿ ಮುಖ್ಯವಾಗಿರಬೇಕು. ಅಲ್ಲಿ ಜಲ ಮತ್ತು ರಸ್ತೆ ಮಾರ್ಗಗಳು ಸುವ್ಯವಸ್ಥಿತವಾಗಿರಬೇಕು.

3) ಭಾರತದಲ್ಲಿ ವೃತ್ತ ಪತ್ರಿಕೆಗಳ ಪ್ರಾಮುಖ್ಯತೆ.

ಉತ್ತರ : ವೃತ್ತಪತ್ರಿಕೆ ಭಾರತದಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಪ್ರಜಾಪ್ರಭುತ್ವವು ಪತ್ರಿಕಾ ಸ್ವಾತಂತ್ರ್ಯವನ್ನು ಅವಲಂಬಿಸಿರುತ್ತದೆ. ಪ್ರಜಾಪ್ರಭುತ್ವದ ಸ್ಥಾಪನೆಗೆ ಪತ್ರಿಕೆಗಳ ಪಾತ್ರ ಕೇಂದ್ರ ಬಿಂದುವಾಗಿದೆ. ಸ್ವಾತಂತ್ರ್ಯದ ಸಮಯದಲ್ಲಿ ಇದು ಬಹುಮುಖ್ಯವಾದ ಸಂಪರ್ಕ ಮಾಧ್ಯಮವಾಗಿತ್ತು. ಇಂದಿಗೂ ಜನರಿಗೆ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸುದ್ದಿ ಸಮಾಚಾರಗಳನ್ನು ಜನರಿಗೆ ತಿಳಿಸಲು ಅತಿ ಕಡಿಮೆ ವೆಚ್ಚದ ಏಕ ಮಾತ್ರ ಸಾಧನ.

4) ಆಮದು ಮತ್ತು ರಫ್ತುಗಳ ವ್ಯತ್ಯಾಸವೇನು ?

ಉತ್ತರ : ಒಂದು ದೇಶದಲ್ಲಿ ಹೆಚ್ಚು ಉತ್ಪಾದನೆಯಾಗುವ ಪದಾರ್ಥಗಳನ್ನು ಮತ್ತೊಂದು ದೇಶವು ತರಿಸಿಕೊಳ್ಳುತ್ತದೆ. ಅಂತಹ ಪದಾರ್ಥಗಳನ್ನು ರಫ್ತು ಎನ್ನುತ್ತಾರೆ. ಹಾಗೆ ಆ ಪದಾರ್ಥಗಳನ್ನು ತರಿಸಿಕೊಳ್ಳುವ ದೇಶಕ್ಕೆ ಅವು ಆಮದು ಪದಾರ್ಥಗಳಾಗುತ್ತವೆ.

5) ಕೈಗಾರಿಕಾ ಕೇಂದ್ರೀಕರಣದಲ್ಲಿ ಸರಕಾರ ಹೇಗೆ ಸಹಾಯ ಮಾಡಬಹುದು ?

ಉತ್ತರ : ಅನೇಕ ಕೈಗಾರಿಕೆಗಳು ಕೆಲವು ಅನುಕೂಲ ಕರವಾದ ಪ್ರದೇಶದಲ್ಲಿ ಒಂದುಗೂಡುವದಕ್ಕೆ ಕೈಗಾರಿಕಾ ಕೇಂದ್ರೀಕರಣ ಎನ್ನುವರು. ಕಚ್ಚಾ ವಸ್ತುಗಳು, ಇಂಧನ ಮತ್ತು ಶಕ್ತಿ, ಕೆಲಸಗಾರರು, ಸಾಗಾಣಿಕೆ, ಮಾರುಕಟ್ಟೆ ಈ ಎಲ್ಲ ಅಂಶಗಳು ಕೈಗಾರಿಕಾ ಕೇಂದ್ರೀಕರಣಕ್ಕೆ ಸಹಾಯಕವಾಗಿವೆ. ಅದರಲ್ಲಿ ಸರಕಾರದ ನೀತಿಯೂ ಒಂದು ಅಂಶ. ಸರಕಾರವು ಹಿಂದುಳಿದ ದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆಗೆ ಉತ್ತೇಜನ ಕೊಡಲು ತೆರಿಗೆ ರಿಯಾಯತಿ; ಕಡಿಮೆ ದರದ ಬಡ್ಡಿಯಲ್ಲಿ ಸಾಲ ವನ್ನು ಒದಗಿಸುವದು, ರಸ್ತೆಗಳು ಮತ್ತು ರೈಲುಗಳನ್ನು ನಿರ್ಮಿಸುವದು ನೀರು ಮತ್ತು ವಿದ್ಯುಚ್ಛಕ್ತಿಯನ್ನು ರಿಯಾಯತಿ ದರದಲ್ಲಿ ಒದಗಿಸುವದು ಇವುಗಳ ಮೂಲಕ ಸರಕಾರವು ಕೈಗಾರಿಕಾ ಕೇಂದ್ರೀಕರಣಕ್ಕೆ ಸಹಾಯ ಮಾಡುತ್ತದೆ.

IV. ಇವುಗಳಿಗೆ ಕಾರಣ ಕೊಡಿ.

1) ಪ್ರತಿಯೊಂದು ರಾಷ್ಟ್ರಕ್ಕೂ ವಿದೇಶಿ ವಿನಿಮಯದ ಅವಶ್ಯಕತೆ ಇದೆ.

ಉತ್ತರ : ಎಪ್ರಿಲ್ 1985 ರ ಪ್ರಶ್ನೆ IV (5) ರ ಉತ್ತರ ನೋಡಿರಿ.

2) ಮಹಾರಾಷ್ಟ್ರದಲ್ಲಿ ಹತ್ತಿ ಗಿರಣಿಗಳು ಹೆಚ್ಚಾಗಿವೆ.

ಉತ್ತರ : ಮಹಾರಾಷ್ಟ್ರ ಕಪ್ಪು ಮಣ್ಣಿನಿಂದ ಕೂಡಿದ ಡೆಕ್ಕನ್ ಲಾವಾ ಪ್ರದೇಶದಲ್ಲಿದೆ. ಹತ್ತಿ ಬೆಳೆಗೆ ಅನುಕೂಲಕರವಾದ ಹವೆ ಇರುತ್ತದೆ. ಆದ್ದರಿಂದ ಅಲ್ಲಿ ಹತ್ತಿ ವಿಶೇಷವಾಗಿ ಬೆಳೆಯುತ್ತದೆ ಮತ್ತು ಆಧುನಿಕ ಸಂಚಾರ ಸಂಪರ್ಕ ಚೆನ್ನಾಗಿದೆ.

3) ಸ್ವಿಟ್ಜರ್ಲಂಡ್ ಅತ್ಯಂತ ಬೆಲೆಬಾಳುವ ವಸ್ತುಗಳನ್ನು ತಯಾರಿಸುತ್ತದೆ.

ಉತ್ತರ : ಸ್ವಿಟ್ಜರ್ಲಂಡ್ ಅತ್ಯಂತ ಬೆಲೆ ಬಾಳುವ ವಸ್ತುಗಳನ್ನು ತಯಾರಿಸುತ್ತದೆ. ಯಾಕೆಂದರೆ ಆ ದೇಶ ಗುಡ್ಡ ಕೊಳ್ಳಗಳಿಂದ ಕೂಡಿದೆ. ಸಾರಿಗೆ ಸಂಪರ್ಕ ಅನುಕೂಲವಿಲ್ಲ. ದೊಡ್ಡ ಪ್ರಮಾಣದ ಯಾಂತ್ರಿಕ ಉತ್ಪಾದನೆ ಸಾಧ್ಯವಿಲ್ಲ. ಕುಶಲ ಕೆಲಸದ ವಸ್ತುಗಳು ತಯಾರಾಗುತ್ತವೆ. ಕಲ್ಲಿದ್ದಲು ಇಲ್ಲದಿದ್ದರೂ, ವಿದ್ಯುಚ್ಛಕ್ತಿಯನ್ನು ವಿಶೇಷವಾಗಿ ಬಳಸುತ್ತಾರೆ. ಅಲ್ಲಿ ಕುಶಲ ಕರ್ಮಿಗಳು ವಿಶೇಷವಾಗಿ ಬೆಲೆ ಬಾಳುವ ವಸ್ತುಗಳನ್ನು ತಯಾರಿಸುತ್ತಾರೆ.

4) ಉತ್ತರ ಅಮೇರಿಕದ ಉತ್ತರ ಭಾಗದಲ್ಲಿ ಜನಸಂಖ್ಯೆ ಕಡಿಮೆ.

ಉತ್ತರ : ಅಮೇರಿಕದ ಉತ್ತರ ಭಾಗವು ಶೀತ ವಲಯದ ಪ್ರದೇಶದಲ್ಲಿದೆ. ಅಲ್ಲಿ ಯಾವಾಗಲೂ ಮಂಜುಗಡ್ಡೆ ಕಟ್ಟಿರುತ್ತದೆ. ಜನಗಳ ವಾಸಕ್ಕೆ ಯೋಗ್ಯವಾಗಿಲ್ಲ.

5) ಮಧ್ಯ ಏಷ್ಯಾದಲ್ಲಿ ವಿಶಾಲವಾದ ರಸ್ತೆಗಳಿಲ್ಲ.

ಉತ್ತರಕ್ಕಾಗಿ ಎಪ್ರಿಲ್ 1984 ರ ಪ್ರಶ್ನೆ IV (3) ರ ಉತ್ತರ ನೋಡಿ.

6) ವಾಯು ಪ್ರಯಾಣ ಹೆಚ್ಚು ವೆಚ್ಚ ತಗಲುತ್ತದೆ. ಉತ್ತರಕ್ಕಾಗಿ ಅಕ್ಟೋಬರ 1985 ರ ಪ್ರಶ್ನೆ IV [5] ರ ಉತ್ತರ ನೋಡಿರಿ.

V. ಅ) ಖಾಲಿ ಬಿಟ್ಟಿರುವ ಜಾಗಗಳಲ್ಲಿರಬೇಕಾದ ಸರಿ ಉತ್ತರಗಳನ್ನು ಬರೆಯಿರಿ.

(ಉತ್ತರಗಳನ್ನು ಆವರಣದಲ್ಲಿ ಕೊಟ್ಟಿದೆ)

1] ಭಾರತದಲ್ಲಿ ಮೊಟ್ಟಮೊದಲನೆಯ ವಿದ್ಯುಚ್ಛಕ್ತಿ ಉತ್ಪಾದನಾ ಕೇಂದ್ರವನ್ನು........ದಲ್ಲಿ ಸ್ಥಾಪಿಸಲಾಯಿತು. [ಶಿವಸಮುದ್ರ]

2] ಭೂಮಧ್ಯ ಸಮುದ್ರದ ವಾಯುಗುಣವಿರುವ ಪ್ರದೇಶದಲ್ಲಿ......ಗಳನ್ನು ಬೆಳೆಯಲು ಅನುಕೂಲವಾಗಿದೆ. [ಹಣ್ಣು].

3] ......ಇಟಲಿಯ ಹೆದ್ದಾರಿಗಳಾಗಿವೆ. [ಆಟೋಸ್ಟ್ರೇಡ್]

4] ಕ್ಲಿಷ್ಟವಾದ ಮಾರ್ಗವಿಲ್ಲದೆ ಸ್ಥಳದಿಂದ ಸ್ಥಳಕ್ಕೆ ಸಂಚರಿಸುವ ದೋಣಿಗಳಿಗೆ……ಎಂದು ಹೆಸರು. [ಟ್ರಾಂಪ್ಸ್].

5) ಅಂಚೆ ಸೂಚಿ ಸಂಖ್ಯೆಯನ್ನು……ರಲ್ಲಿ ಪ್ರಾರಂಭಿಸಲಾಯಿತು. (1972)

6) ಹಣವಿಲ್ಲದೆ ಪದಾರ್ಥಗಳನ್ನು ವಿನಿಮಯ ಮಾಡುವದಕ್ಕೆ……ಎಂದು ಹೆಸರು. (ಬಾರ್ಟರ್)

7) ಪರಿಣತೆಯು……ಕೈಗಾರಿಕೆಯ ಮುಖ್ಯ ಲಕ್ಷಣವಾಗಿದೆ. (ಸಣ್ಣ)

8) ಜಾನ್‌ಕೇ……ಯನ್ನು ಕಂಡು ಹಿಡಿದನು. [ಫ್ಲೈಯಿಂಗ್ ಷಟಲ್]

ಬಿ] ಸರಿ ಹೊಂದಿಸಿ ಬರೆಯಿರಿ.

| ಎ | ಬಿ |
|---|---|
| 1) ಜೇಮ್ಸ್ ಹಾರ್‌ಗ್ರೀವ್ಸ | a] ಕಬ್ಬಿಣ ಮತ್ತು ಕಲ್ಲಿದ್ದಲು |
| 2) ಜೇಮಷೇಡ್‌ಪುರ | b] ಹಿನ್ನಾಡಿನ ಹೆಬ್ಬಾಗಿಲು |
| 3) ಪಾಲು | c] ಸ್ಪಿನ್ನಿಂಗ ಜನ್ನಿ |
| 4) ಕಾಫಿ | d] ಜೋಹಾನ್ಸ ಬರ್ಗ |
| 5) ರೇವು ಪಟ್ಟಣ | e] ಬ್ರೇಜಿಲ್ |
| 6) ಆಫ್ರಿಕ | f] ದೆಹಲಿ |

ಉತ್ತರ : 1–c, 2–a, 3–f, 4–e, 5–b, 6–d.

…O…

# ಸಮಾಜ ಪಾಠಗಳು

## ಅಕ್ಟೋಬರ–1986 ಪ್ರಥಮ–ಪತ್ರಿಕೆ

## ( ಚರಿತ್ರೆ ಮತ್ತು ಪೌರನೀತಿ )

A. ಖಾಲಿ ಇರುವ ಜಾಗಗಳಲ್ಲಿ ಸೂಕ್ತ ಉತ್ತರಗಳನ್ನು ಬರೆಯಿರಿ [ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ]

1] ವೇದಗಳ ಕಾಲದಲ್ಲಿ……ಯು ನೂರು ಗ್ರಾಮಗಳ ಒಂದು ಗುಂಪಿಗೆ ಯಜಮಾನನಾಗಿದ್ದನು. [ಶತಪತಿ]

2] ಕಾನಿಷ್ಕನ ರಾಜಧಾನಿಯು……ಆಗಿದ್ದಿತು. [ಪುರುಷಪುರ]

3] ಚಂದ್ರಗುಪ್ತನು……ಎಂಬ ಬಿರುದನ್ನು ಹೊಂದಿದ್ದನು. [ವಿಕ್ರಮಾದಿತ್ಯ]

4] ……ದೇವಾಲಯವು 1 ನೇ ರಾಜ ಚೋಳನಿಂದ ಕಟ್ಟಲ್ಪಟ್ಟಿತು. (ಬೃಹದೇಶ್ವರ)

5] ಅಶ್ವಘೋಷನು ಬರೆದ ಪ್ರಸಿದ್ಧ ಗ್ರಂಥ…… [ಬುದ್ಧಚರಿತ]

6] ಮಯೂರ ವರ್ಮನು……ವಂಶವನ್ನು ಸ್ಥಾಪಿಸಿದನು [ಕದಂಬ]

7] ಉಚ್ಚ ನ್ಯಾಯಾಲಯದ ನ್ಯಾಯಾಧೀಶರನ್ನು……ನೇಮಿಸುತ್ತಾರೆ. [ರಾಷ್ಟ್ರಾಧ್ಯಕ್ಷರು]

8] ……ಭಾರತದಲ್ಲಿ ಮೊಗಲರ ವಂಶ ಸ್ಥಾಪಕ [ಬಾಬರ್]

9] ……ಖಿಲ್ಜಿಯು ದೆಹಲಿಯಲ್ಲಿ ದ್ರಾಕ್ಷಾರಸ ತಯಾರಿಸುವದನ್ನು ಮತ್ತು ಮಾರುವದನ್ನು ನಿಷೇಧಿಸಿದನು [ಅಲ್ಲಾವುದ್ದೀನ]

10) ರಾಮಾನುಜರ ಅನುಯಾಯಿಗಳಿಗೆ……ಎಂದು ಹೆಸರು. (ಶ್ರೀ ವೈಷ್ಣವರು)

11] ……ಕೃಷ್ಣದೇವರಾಯನ ಆಸ್ಥಾನದಲ್ಲಿ ಪ್ರಸಿದ್ಧ ತೆಲುಗು ಕವಿ. (ಅಲ್ಲಸಾನಿ ಪೆದ್ದನ್)

12] "ಯಂಗ ಇಟಲಿ" ಎಂಬ ಪಕ್ಷವನ್ನು ಸ್ಥಾಪಿಸಿದವನು (ಜೋಸೆಫ್ ಮ್ಯಾಜಿನಿ)

13] ……ಭಾರತದ ವಿದೇಶದ ವ್ಯವಹಾರದ ಶಿಲ್ಪಿ (ಜವಾಹರಲಾಲ್ ನೆಹರು)

B. ಕೆಳಗಿನ ಪ್ರಶ್ನೆಗಳಿಗೆ ಉತ್ತರಗಳು ನಾಲ್ಕು ವಾಕ್ಯಗಳಿಗಿಂತ ಮೀರಬಾರದು.

14] ಈಸ್ಟ ಇಂಡಿಯಾ ಕಂಪನಿಯು ಮುಂಬಯಿಯನ್ನು ಹೇಗೆ ಪಡೆಯಿತು ?

ಉತ್ತರ : ಇಂಗ್ಲಂಡಿನ ದೊರೆಯಾದ ಎರಡನೆ ಚಾರ್ಲ್ಸ್‌ನು ಪೋರ್ತುಗೀಜ್ ರಾಜಕುಮಾರಿ ಕ್ಯಾಥರಿನ್ ಭ್ರಂಗಾಜ್ ಎಂಬವಳನ್ನು ವಿವಾಹವಾದನು. ಆಗ ಪೋರ್ತುಗೀಜ್‌ದೊರೆ ಆವನಿಗೆ ಮುಂಬಯಿಯನ್ನು ಬಳುವಳಿಯಾಗಿ ಕೊಟ್ಟನು. 2 ನೇ ಚಾರ್ಲ್ಸ್‌ನು ಅದನ್ನು 10 ಪೌಂಡುಗಳ ವಾರ್ಷಿಕ ಬಾಡಿಗೆಯ ಮೇಲೆ ಈಸ್ಟ ಇಂಡಿಯಾ ಕಂಪನಿಗೆ ವಹಿಸಿಕೊಟ್ಟನು.

15] "ಎರಡು ಧ್ರುವಗಳ" ರಾಜಕೀಯ ಎಂದರೇನು ?

**ಉತ್ತರ** : ಎರಡನೆ ಪ್ರಪಂಚ ಯುದ್ಧದ ನಂತರ ಉತ್ತರ ಅಟ್ಲಾಂಟಿಕ್ ಒಪ್ಪಂದ ಕೂಟ [ನ್ಯಾಟೊ]ದ ಮೂಲಕ ಅಮೇರಿಕೆಯ ಮಿಲಿಟರಿ ಬಣ ಸಿದ್ಧವಾಯಿತು. ಇದಕ್ಕೆ ಪ್ರತ್ಯುತ್ತರವಾಗಿ ರಷ್ಯ ಹಲವು ಕಮ್ಯುನಿಸ್ಟ ರಾಜ್ಯಗಳನ್ನೊಳಗೊಂಡಂತೆ ವಾರ್ಸಾ ಒಪ್ಪಂದವೆಂಬ ಒಂದು ವಿರೋಧಿ ಮಿಲಿಟರಿ ಬಣವನ್ನು ರಚಿಸಿತು. ಎರಡೂ ಬಣಗಳು ತಮ್ಮ ಸ್ಥಾನಗಳನ್ನು ಭದ್ರಪಡಿಸಿಕೊಳ್ಳಲು ಪ್ರಯತ್ನಿಸ ತೊಡಗಿದವು. ಇದಕ್ಕೆ ಎರಡು ಧ್ರುವಗಳ ರಾಜಕೀಯ ಎನ್ನುವರು.

16) ಲಾರ್ಡ್‌ಮಿಂಟೋ ಸಾಧಿಸಿದ ಕಾರ್ಯಗಳಾವವು ?

ಉತ್ತರ : i) ನೆರೆಯ ರಾಜ್ಯಗಳಾದ ಪರ್ಷಿಯಾ, ಅಫಗಾನಿಸ್ಥಾನ, ಪಂಜಾಬಗಳೊಡನೆ ಸ್ನೇಹ ಸಂಬಂಧ ಬೆಳೆಸಿದನು. ii] 1809 ರಲ್ಲಿ ರಣಜಿತ್ ಸಿಂಗನೊಡನೆ ಒಪ್ಪಂದ ಮಾಡಿಕೊಂಡನು. iii) ಪಿಂಡಾರಿಯವರನ್ನು ಅಡಗಿಸಿದನು. iv) ಕಂಪನಿಯ ಆರ್ಥಿಕ ಪರಿಸ್ಥಿತಿಯನ್ನು ಉತ್ತಮ ಪಡಿಸಿದನು.

17) 1919 ರ ಮಾಂಟೆಗ್ಯೂ ಚೇಮ್ಸ್ ಫೋರ್ಡ್ ಸುಧಾರಣೆಗಳ ಉದ್ದೇಶಗಳೇನು ?

ಉತ್ತರ : i) ಭಾರತವನ್ನು ಬ್ರಿಟಿಷ್ ಚಕ್ರಾಧಿಪತ್ಯದಲ್ಲೇ ಉಳಿಸಿಕೊಳ್ಳುವದು. ii) ದೇಶದ ಆಡಳಿತದಲ್ಲಿ ಭಾರತೀಯರನ್ನು ಹೆಚ್ಚು ಸಂಖ್ಯೆಯಲ್ಲಿ ಭಾಗಸ್ಥರನ್ನಾಗಿ ಮಾಡಿದರು. iii) ಸ್ವಯಂ ಆಡಳಿತ ಸಂಸ್ಥೆಗಳನ್ನು ಬೆಳೆಸುವದು, iv) ಭಾರತಕ್ಕೆ ಕ್ರಮೇಣ ಜವಾಬ್ದಾರಿ ಸರಕಾರವನ್ನು ಕೊಡುವದು.

18) ವಿಳಂಬ ನೀತಿಯ ಸಮಾಜವಾದದ ಗುರಿ ಏನು ? ಅದರ ನಾಯಕರುಗಳು ಯಾರು ?

ಉತ್ತರ : ವಿಳಂಬ ನೀತಿಯ ಸಮಾಜವಾದಿಗಳು ಸಾಮಾಜಿಕ ಮತ್ತು ಆರ್ಥಿಕ ಸಮಾನತೆ ತರುವಲ್ಲಿ ಹಿಂಸಾಚಾರ ಮತ್ತು ರಕ್ತಪಾತದಲ್ಲಿ ನಂಬಿಕೆ ಪಡೆದಿರಲಿಲ್ಲ. ಈ ನೀತಿಯು 1884 ರಲ್ಲಿ ಇಂಗ್ಲೆಂಡದಲ್ಲಿ ರೂಪುಗೊಂಡಿತು, ಅದರ ಸದಸ್ಯರು ಪತ್ರಿಕೋದ್ಯಮಿಗಳು, ಕುಶಲಕರ್ಮಿಗಳು, ವಿದ್ವಾಂಸರು, ಸಮಾಜ ಕಾರ್ಯಕರ್ತರು ಮತ್ತು ಅಧ್ಯಾಪಕರುಗಳಿದ್ದರು. ಬಂಡವಾಳವು ಕಾರ್ಮಿಕರಿಂದ ಕಳವು ಮಾಡಿದ ನಿಧಿಯಲ್ಲವೆಂದು ಅವರು ಭಾವಿಸುತ್ತಾರೆ.

19) ಭದ್ರತಾ ಸಮಿತಿಯ ಕರ್ತವ್ಯಗಳಾವವು ?

ಉತ್ತರ : ಇದು ಶಾಂತಿ ಮತ್ತು ಭದ್ರತೆಯನ್ನು ಕಾಪಾಡುವ ಏಕಮಾತ್ರ ಅಂಗ. ಆಕ್ರಮಣಕಾರರ ವಿರುದ್ಧ ಈ ಸಮಿತಿಯು ಕಾರ್ಯೋನ್ಮುಖವಾಗಿರುತ್ತದೆ. ಇದು ರಾಷ್ಟ್ರಗಳ ಸಂಘಕ್ಕಿಂತ ಉತ್ತಮವಾದುದಾಗಿದೆ. ಖಾಯಂ ಸದಸ್ಯರು ವಿಟೋ (ನಿರಾಕರಣೆಯ) ಅಧಿಕಾರವನ್ನು ಪಡೆದಿರುತ್ತಾರೆ. ಇವರ ಎಲ್ಲಾ ಕಾರ್ಯಾಚರಣೆಗಳಿಗೂ ಖಾಯಂ ಸದಸ್ಯರ ಅನುಮತಿ ಅತ್ಯಾವಶ್ಯಕ.

20) ಶೀತಲ ಯುದ್ಧವೆಂದರೇನು ?
ಉತ್ತರಕ್ಕಾಗಿ ಎಪ್ರಿಲ್ 1985 ರ ಪ್ರಶ್ನೆ III (1) ರ ಉತ್ತರ ಓದಿರಿ.

21) ಚೀನಾ ದೇಶದಲ್ಲಿ ಸಾಂಸ್ಕೃತಿಕ ಕ್ರಾಂತಿಯಾಗಲು ಕಾರಣವೇನು ? ಇದರಲ್ಲಿ ಪ್ರಮುಖ ಪಾತ್ರ ವಹಿಸಿದವರು ಯಾರು ?

ಉತ್ತರ : ಮಾವೋತ್ಸೆತುಂಗನ ನೇತೃತ್ವದಲ್ಲಿ ಕಮ್ಯುನಿಸ್ಟ ಪಕ್ಷವು ಚ್ಯೆಂಗ-ಕೈಶೇಕನನ್ನು ಹೊರಗಟ್ಟಿ ಕಮ್ಯುನಿಸ್ಟ ಆಡಳಿತೆಯನ್ನು ತಂದಿತು. ಮಾವೋತ್ಸೆ ತುಂಗರ ನೇತೃತ್ವದಲ್ಲಿ ಕೃಷಿಯಲ್ಲಿ ಕ್ರಾಂತಿಕಾರಕ ಬದಲಾವಣೆಯಾಯಿತು. ದೇಶದಲ್ಲಿ ಐಕ್ಯವು ಬಂದಿತು. ಪ್ರತಿಯೊಬ್ಬನೂ ದುಡಿಯಲೇಬೇಕಾಯಿತು. ಹಸಿವು ರೋಗ ಅಜ್ಞಾನಗಳ ನಿವಾರಣೆಗೆ ಸೂಕ್ತ ಕ್ರಮ ಕೈಕೊಳ್ಳಲಾಯಿತು. ಪಂಚವಾರ್ಷಿಕ ಯೋಜನೆಗಳನ್ನು ಪ್ರಾರಂಭಿಸಿ ಕೈಗಾರಿಕರಣವನ್ನು ತರಲಾಯಿತು. ಅನಕ್ಷರತೆ ನಿರ್ಮೂಲಗೊಳಿಸಲಾಯಿತು. ಔದ್ಯೋಗಿಕ ವಿಜ್ಞಾನಕ್ಕೆ ಹೆಚ್ಚು ಮಹತ್ವ ಕೊಡಲಾಯಿತು. 1954 ರೆಡ್‌ಗಾರ್ಡ್ಸ್ ಎಂದು ಹೆಸರು ಪಡೆದ ಯುವಕರು ಈ ಕ್ರಾಂತಿಯಲ್ಲಿ ಪ್ರಮುಖ ಪಾತ್ರ ವಹಿಸಿದರು. ಹೊಸ ಸಂವಿಧಾನವನ್ನು ಜಾರಿಗೆ ತರಲಾಯಿತು.

22) "ಗೃಹರಕ್ಷಕ" ದಳದ ಮುಖ್ಯ ಕರ್ತವ್ಯಗಳೇನು. ಉತ್ತರಕ್ಕಾಗಿ ಮಾರ್ಚ 1986 ರ ಪ್ರಶ್ನೆ B (21) ರ ಉತ್ತರ ಓದಿರಿ.

23) ವಿಶ್ವ ಆರೋಗ್ಯ ಸಂಸ್ಥೆಯ ಸೇವೆಗಳೇನು ?

ಉತ್ತರ : ವಿಶ್ವ ಆರೋಗ್ಯ ಸಂಸ್ಥೆಯು ಜನತೆಯ ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಅಂತರರಾಷ್ಟ್ರೀಯ ಸಹಕಾರದ ಮೂಲಕ ಉತ್ತಮಗೊಳಿಸಲು ಪ್ರಯತ್ನಿಸುವ ತಜ್ಞ ಸಂಸ್ಥೆ 1948 ರಲ್ಲಿ ಸ್ಥಾಪಿಸಲ್ಪಟ್ಟಿತು. ಸಿಡುಬು, ಪ್ಲೇಗು, ಕಾಲರಾಗಳಂತಹ ಅಂಟು ಜಾಡ್ಯಗಳ ಹರಡುವಿಕೆಯ ಬಗ್ಗೆ ಸಮಾಚಾರ ನೀಡುವ ವಿಭಾಗವನ್ನು ಹೊಂದಿದೆ. ಖಾಯಿಲೆ, ಗಾಯ ಮತ್ತು ಸಾವಿನ ಕಾರಣಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. ಜಗತ್ತಿನ ಯಾವದೇ ಭಾಗದಲ್ಲಿ ಸಾಂಕ್ರಾಮಿಕ ರೋಗ ಕಾಣಿಸಿಕೊಂಡರೆ ಮುನ್ನೆಚ್ಚರಿಕೆ ನೀಡುತ್ತದೆ, ಅದಕ್ಕೆ ಸಂಬಂಧಿಸಿದ ಔಷಧಿ, ಚುಚ್ಚು ಮದ್ದುಗಳು ಮತ್ತು ಲಸಿಕೆಗಳ ಅಂತರರಾಷ್ಟ್ರೀಯ ಗುಣಮಟ್ಟವನ್ನು ನಿರ್ಧರಿಸುತ್ತದೆ. ಮಾನವ ಸಂತಾನೋತ್ಪತ್ತಿ, ಹೃದಯ ರೋಗಗಳು ಮತ್ತು ಕ್ಯಾನ್ಸರ್‌ಗಳ ಬಗ್ಗೆ ವೈದ್ಯಕೀಯ ಸಂಶೋಧನೆಗೆ ಪ್ರೋತ್ಸಾಹ ನೀಡುತ್ತದೆ.

24) "ರಾಷ್ಟ್ರ ಸಂಘ" (ಲೀಗ ಆಫ್‌ನೇಶನ್)ದ ವಿಫಲತೆಗಳಾವವು ?

ಉತ್ತರ : 1) ವಾಷಿಂಗ್‌ಟನ್ ನೌಕಾ ಸಮ್ಮೇಳನ ಸಾಧಿಸಿದ ವಿಜಯ ಮತ್ತು ವಿಶ್ವ ನಿಃಶಸ್ತ್ರೀಕರಣ ಸಮ್ಮೇಳನ ಇವುಗಳು ಸಂಘವು ಉಪಯುಕ್ತ ಸೇವೆಯನ್ನು ಸಲ್ಲಿಸುತ್ತಿದೆಯೆಂಬ ಆಶಯವನ್ನು ಹುಟ್ಟಿಸಿದವು. ಆದರೆ 1931 ರಲ್ಲಿ ಜಪಾನ್ ಮಂಚೂರಿಯನ್ನು ಆಕ್ರಮಿಸಿ ವಶಪಡಿಸಿಕೊಂಡುದನ್ನು ತಡೆಯಲು ಸಂಘ ಅಶಕ್ತವಾದದ್ದು ಈ ಆಶಯವನ್ನು ನಿರರ್ಥಕಗೊಳಿಸಿತು. 2) ಪಾಣಾಮಾಂತಿಯಾದ ಸೈನ್ಯವನ್ನು ಹೊಂದದೇ

M. Udaya Kumar

ಇದ್ದದ್ದು ವಿಫಲತೆಗೆ ಕಾರಣ. 3) ಇಥಿಯೋಪಿಯಾದ ಮೇಲೆ ಮುಸೋಲಿನಿ ಆಕ್ರಮಣ ಮಾಡಿದಾಗಲೂ ಸಂಘ ನಿಸ್ಸಹಾಯಕ ವಾಗಿತ್ತು. 4) ಸದಸ್ಯ ರಾಷ್ಟ್ರಗಳು ಆಕ್ರಮಣಕಾರರೊಂದಿಗೆ ಸಂಬಂಧ ತ್ಯಜಿಸುವಂತೆ ಮಾಡಲೂ ಅದಕ್ಕೆ ಸಾಧ್ಯವಾಗಲಿಲ್ಲ. 5) ಅಮೇರಿಕದ ಸಂಯುಕ್ತ ಸಂಸ್ಥಾನಗಳು ಸಂಘವನ್ನು ಸೇರಲಿಲ್ಲ.

25) ಆರ್ಯ ಸಮಾಜದ ಗುರಿಗಳಾವವು ?

1) ಆರ್ಯ ಸಮಾಜವು ವಿಶೇಷವಾಗಿ ಶುದ್ಧೀಕರಣ ಚಳುವಳಿಯಾಗಿದ್ದಿತು. ಅದು ಭಾರತೀಯ ಸಮಾಜವನ್ನು ವೇದಗಳ ಮಾದರಿಯಲ್ಲಿ ಸ್ಥಾಪಿಸಲು ಅಪೇಕ್ಷಿಸಿತು.
2) ಜಾತಿ ಪದ್ಧತಿಯ ತೀವ್ರತೆಯನ್ನು ತೆಗೆದು ಹಾಕುವದು ಮತ್ತು ಬಾಲ್ಯವಿವಾಹ ಮತ್ತು ಬಹುಪತ್ನಿತ್ವಗಳ ರದ್ದಿಯಾತಿಯಂತಹ ಸುಧಾರಣೆಗಳ ಗುರಿ ಹೊಂದಿತ್ತು.
3) ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳಿಗೆ ಮತಾಂತರಗೊಂಡಿದ್ದ ಜನರನ್ನು ಶುದ್ಧೀಕರಣ ಕ್ರಿಯೆಯ ಮೂಲಕ ಹಿಂದೂ ಧರ್ಮಕ್ಕೆ ಪುನಃ ಸೇರಿಸಿಕೊಳ್ಳಲು ಅಪೇಕ್ಷಿಸಿತು.

ಈ ಚಳುವಳಿಯ ಮೂಲ ಪುರುಷ ಗುಜರಾತಿನ ಬ್ರಾಹ್ಮಣ ದಯಾನಂದ ಸರಸ್ವತಿ.

26) "ಅಲಿಪ್ತ ನೀತಿ" ಎಂದರೇನು ? ಭಾರತದಲ್ಲಿ ಈ ನೀತಿಯ ಶಿಲ್ಪಿ ಯಾರು ?

**ಉತ್ತರ :** ಎರಡನೇ ಪ್ರಪಂಚ ಯುದ್ಧದ ನಂತರ ಇಡೀ ವಿಶ್ವವು ಎರಡು ಪ್ರಬಲ ಶಕ್ತಿ ಬಣಗಳಾಗಿ ವಿಭಜನೆಗೊಂಡಿತು. ಈ ವಿಭಜನೆಗೆ ಪ್ರಜಾಪ್ರಭುತ್ವ ಸಿದ್ಧಾಂತ ಹಾಗೂ ಕಮ್ಯೂನಿಜಂ ಸಿದ್ಧಾಂತಗಳು ಆಧಾರವಾಗಿದ್ದವು. ಉತ್ತರ ಅಟ್ಲಾಂಟಿಕ್ (NATO), ಆಗ್ನೇ ಏಷ್ಯಾ ಒಪ್ಪಂದ ಸಂಘಟನೆ (SEATO) ವಾರ್ಸಾ ಮುಂತಾದ ಮಿಲಿಟರಿ ಕೂಟಗಳು ಜಗತ್ತಿನಲ್ಲಿ ರಚಿತವಾದವು. ಇಂತಹ ಅಹಿತಕರ ಸ್ಪರ್ಧೆಯನ್ನು ತಪ್ಪಿಸುವದು ಹಾಗೂ ವಿಶ್ವದಲ್ಲಿ ಶಾಂತಿಯನ್ನು ನೆಲೆಗೊಳಿಸುವದು ನೆಹರೂರವರ ಆಶಯವಾಗಿತ್ತು. ಮೇಲಿನ ಯಾವುದೇ ಮಿಲಿಟರಿ ಬಣಕ್ಕೆ ಸೇರದೇ ಇರುವುದೇ ಅಲಿಪ್ತ ನೀತಿಯ ಗುರಿ. ಪಂಡಿತ ಜವಾಹರಲಾಲ ನೆಹರೂರವರು ಅಲಿಪ್ತ ನೀತಿಯ ಶಿಲ್ಪಿ ಪ್ರಪಂಚದ ಅನೇಕ ರಾಷ್ಟ್ರಗಳು ಈ ಅಲಿಪ್ತ ನೀತಿಯನ್ನು ಒಪ್ಪಿ ಅಲಿಪ್ತ ನೀತಿಯ ಬಣಕ್ಕೆ ಸೇರಿವೆ. ಭಾರತವು ಈ ಸಂಸ್ಥೆಯ ಕಾರ್ಯಾಧ್ಯಕ್ಷವಾಗಿ ಕಾರ್ಯ ಮಾಡುತ್ತಿದೆ.

I. ಕೆಳಗಿನ ಪ್ರಶ್ನೆಗಳಿಗೆ ಉತ್ತರಗಳು ಒಂದು ಪುಟಕ್ಕೆ ಮೀರದಂತೆ ಇರಬೇಕು.

27) 1857 ರ ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಣವಾದ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಕಾರಣಗಳಾವವು ?

**ಉತ್ತರ :** 1857 ರಲ್ಲಿ ಭಾರತೀಯರು ಸ್ವಾತಂತ್ರ್ಯಕ್ಕಾಗಿ ದಂಗೆ ಎದ್ದರು. ಇದನ್ನು ಭಾರತದ ಸ್ವಾತಂತ್ರ್ಯ ಸಂಗ್ರಾಮದ ಪ್ರಥಮ ಹೆಜ್ಜೆ ಎನ್ನುತ್ತಾರೆ. ಈ ಸಂಗ್ರಾಮಕ್ಕೆ ಅನೇಕ ಸಾಮಾಜಿಕ ರಾಜಕೀಯ ಹಾಗೂ ಧಾರ್ಮಿಕ ಕಾರಣಗಳಿದ್ದವು.

1) **ಸಾಮಾಜಿಕ ಕಾರಣಗಳು :** 1857 ರಲ್ಲಿ ಲಾರ್ಡಡಾಲ್‌ಹೌಸಿಯ ಅನೇಕ ಸಾಮಾಜಿಕ ಸುಧಾರಣೆಗಳು ಭಾರತೀಯರನ್ನು ಉದ್ರೇಕಗೊಳಿಸಿದವು. ಅಂಚೆ ಮತ್ತು ತಂತಿಯನ್ನು ಪ್ರಾರಂಭಿಸಿದ ರಿಂದ ಅವು ತಮ್ಮನ್ನು ಮತ ಕೆಡಿಸಲು ಬಂದಿರುವ ಸಾಧನಗಳೆಂದು ಭಾರತೀಯರು ಅಭಿಪ್ರಾಯಪಟ್ಟರು. ಸತಿಯ ಪದ್ಧತಿಯ ರದ್ದು, ಶಿಶು ವಿವಾಹ ಮತ್ತು ಆಂಗ್ಲ ವಿದ್ಯಾಭ್ಯಾಸದ ಪ್ರಾರಂಭ ಇವು ಭಾರತೀಯರ ಮನಸ್ಸನ್ನು ಕೆಡಿಸಿದವು.

2) **ರಾಜಕೀಯ ಕಾರಣಗಳು :** ಡಾಲಹೌಸಿಯ ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂಬ ನೀತಿಯು ಯುದ್ಧಗಳು, ಬಿರುದುಗಳು ಮತ್ತು ವಿಶ್ರಾಂತಿ ವೇತನಗಳ ರದ್ದು ಪಡಿಸುವಿಕೆಯಂತಹ ನ್ಯಾಯ ಬಾಹಿರ ನೀತಿಗಳು ದೇಶೀಯ ರಾಜರುಗಳಲ್ಲಿ ಅಸಂತೃಪ್ತಿಯನ್ನುಂಟು ಮಾಡಿದವು. ಬ್ರಿಟಿಷರು ದೆಹಲಿ ಸಿಂಹಾಸನದ ಅಡಿಯಾಳುಗಳಾಗಿರುವ ಚಿನ್ಹೆಯಾಗಿ ನಜರುಗಳನ್ನು ಅಥವಾ ಉಡುಗೊರೆಗಳನ್ನು ಒಪ್ಪಿಸುತ್ತಿದ್ದರು. ಈ ವರ್ತನೆಯಲ್ಲಿ ಕ್ರಮೇಣ ಬದಲಾವಣೆ ಕಂಡು ಬಂದಿತು. ಡಾಲಹೌಸಿಯು ಅವಧವನ್ನು ಬ್ರಿಟಿಶ್ ಸಾಮ್ರಾಜ್ಯಕ್ಕೆ ಸೇರಿಸಿಕೊಂಡದ್ದು ಹಿಂದುಗಳೂ ಮತ್ತು ಮುಸ್ಲಿಂರಿಬ್ಬರಿಗೂ ಅಸಮಾಧಾನವನ್ನುಂಟು ಮಾಡಿತು. ಇವನು ನಾನಾಸಾಹೇಬ ಮತ್ತು ಅಜಂಖಾನರವರಿಗೆ ಕೊಟ್ಟಿದ್ದ ಬಿರುದುಗಳು ಮತ್ತು ವಿಶ್ರಾಂತಿ ವೇತನಗಳನ್ನು ರದ್ದುಗೊಳಿಸಿದನು. ಇದರಿಂದ ಅವರು ಬ್ರಿಟಿಷರ ಮೇಲೆ ಅತೃಪ್ತಿಗೊಂಡರು. ಭಾರತೀಯರ ರಾಜರು ಕಲೆ ಮತ್ತು ಸಾಹಿತ್ಯಗಳ ಪೋಷಕರಾಗಿದ್ದರು. ಬ್ರಿಟಿಷರು ಮೊದಲಿದ್ದ ರಾಜಾಶ್ರಯವನ್ನು ಬಂದು ಮಾಡಿದರು. ಇದರಿಂದ ಪಂಡಿತರು ಮೌಲ್ವಿಗಳು, ಕಲಾಕಾರರು ಬ್ರಿಟಿಷರ ಮೇಲೆ ಕೋಪಗೊಂಡರು.

3) **ಧಾರ್ಮಿಕ ಕಾರಣಗಳು :** ಕ್ರೈಸ್ತ ಮತದ ಪ್ರಚಾರಕರು ಕ್ರೈಸ್ತ ಮತದ ತತ್ವಗಳನ್ನು ಹರಡಲು ಪ್ರಾರಂಭಿಸಿದರು. ಹಿಂದುಗಳಿಗೆ ಅಧಿಕ ಮೊತ್ತದ ಹಣವನ್ನು ಕೊಟ್ಟು ಅವರನ್ನು ಕ್ರೈಸ್ತ ಮತಕ್ಕೆ ಮತಾಂತರ ಮಾಡಲು ಪ್ರಾರಂಭಿಸಿದರು. ಶಾಲೆಗಳು, ವೈದ್ಯಶಾಲೆಗಳು ಮತ್ತು ಸೆರೆಮನೆಗಳಲ್ಲಿ ತಮ್ಮ ಕಾರ್ಯಕ್ರಮವನ್ನು ಪ್ರಾರಂಭಿಸಿದರು. ದೇವಾಲಯ

ಗಳು, ಮಸೀದಿಗಳಿಗೆ ಸೇರಿದ ಭೂಮಿಯ ಮೇಲೆ ತೆರಿಗೆಗಳನ್ನು ಹಾಕಿದರು. ಇವೆಲ್ಲವೂ ಭಾರತೀಯರನ್ನು ದಂಗೆ ಏಳಲು ಪ್ರಚೋದಿಸಿದವು.

28) ಪ್ರಾರ್ಥನಾ ಸಮಾಜದ ಗುರಿ ಮತ್ತು ಉದ್ದೇಶಗಳಾವವು ? ಇದರಲ್ಲಿ ನ್ಯಾಯಮೂರ್ತಿ ರಾನಡೆಯವರು ವಹಿಸಿದ ಪಾತ್ರವೇನು ?

**ಉತ್ತರ :** ಸಾಮಾಜಿಕ ಸುಧಾರಣಾ ಚಳುವಳಿಯಲ್ಲಿ ಪ್ರಾರ್ಥನಾ ಸಮಾಜವು ತನ್ನದೇ ಆದ ಪಾತ್ರವನ್ನು ಹೊಂದಿದೆ, 1867 ರಲ್ಲಿ ಆತ್ಮಾರಾಮ ಪಾಂಡುರಂಗ ಅವರ ನೇತೃತ್ವದಲ್ಲಿ ಪ್ರಾರ್ಥನಾ ಸಮಾಜವು ಪ್ರಾರಂಭವಾಯಿತು. 1] ವಿಗ್ರಹಾರಾಧನೆಯನ್ನು ತಡೆಗಟ್ಟುವದು 2] ಜಾತಿ ಪದ್ಧತಿಯನ್ನು ರದ್ದುಗೊಳಿಸುವದು 3) ವಿಧವಾ ವಿವಾಹವನ್ನು ಜಾರಿಗೆ ತರುವದು 4] ಬಾಲ್ಯ ವಿವಾಹವನ್ನು ತಡೆಗಟ್ಟುವದು 5] ಸ್ತ್ರೀಯರ ಸ್ಥಾನಮಾನಗಳನ್ನು ಉತ್ತಮಪಡಿಸುವದು ಮತ್ತು 6] ಜನಸಮೂಹದಲ್ಲಿ ಸಾಕ್ಷರತೆಯನ್ನು ಹರಡುವದು ಇವೇ ಈ ಸಮಾಜದ ಮುಖ್ಯ ಉದ್ದೇಶಗಳು ಈ ಸಂಸ್ಥೆಯು ಕಾರ್ಮಿಕರ ಅನುಕೂಲಕ್ಕಾಗಿ ಒಂದು ರಾತ್ರಿ ಶಾಲೆಯನ್ನು ತೆರೆಯಿತು. ವಿಧವಾ ವಿವಾಹ, ಅಸ್ಪೃಶ್ಯತೆ ನಿವಾರಣೆಗೆ ಶ್ರಮಿಸಿತು. ಸಮಾಜ ಕಲ್ಯಾಣವನ್ನು ಪ್ರೋತ್ಸಾಹಿಸಲು ಆಶ್ರಯ ಸ್ಥಾನಗಳನ್ನೂ ಅನಾಥಾಲಯಗಳನ್ನೂ ವಿಧವಾ ಗೃಹಗಳನ್ನೂ ಸ್ಥಾಪಿಸಿತು.

ಮಹಾರಾಷ್ಟ್ರ ದೇಶದಲ್ಲಿ ಪ್ರಾರ್ಥನಾ ಸಮಾಜವು ಹೆಚ್ಚು ಜನಪ್ರಿಯವಾಯಿತು ಆರ್. ಜಿ. ಭಂಡಾರ್ಕರ್, ಎಸ್. ಪಿ. ಕೇಳ್ಕರ್, ನ್ಯಾಯಮೂರ್ತಿ ಎಮ್. ಜಿ. ರಾನಡೆ ಮೊದಲಾದ ದೊಡ್ಡ ವಿದ್ವಾಂಸರುಗಳು ಆದರ ಸದಸ್ಯರಾದರು.

ಈ ದಿಶೆಯಲ್ಲಿ ರಾನಡೆಯವರ ಪಾತ್ರವು ಅತ್ಯಂತ ಹಿರಿಯದಾಗಿದೆ. ನ್ಯಾಯ ಶಾಸ್ತ್ರವನ್ನು ಅಭ್ಯಾಸ ಮಾಡಿ ಬೊಂಬಾಯಿ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರಾದರು. ಅವರೊಬ್ಬ ದೇಶಪ್ರೇಮಿ ಸಾಮಾಜಿಕ ಮತ್ತು ಶೈಕ್ಷಣಿಕ ಸುಧಾರಣೆಗಳಲ್ಲಿ ನಿಜವಾದ ಆಸಕ್ತಿಯನ್ನು ಹೊಂದಿದ್ದರು. ಅವರ ಮಾರ್ಗದರ್ಶನದಲ್ಲಿ ಡೆಕ್ಕನ್ ಎಜುಕೇಶನ್ ಸೊಸೈಟಿಯು ಸ್ಥಾಪಿತವಾಗಿ ಒಂದು ಶಾಲೆಯನ್ನು ಪ್ರಾರಂಭಿಸಿತು. ಇದು ಮುಂದೆ ಹೆಸರಾಂತ ಪೂನಾದ ಫರ್ಗ್ಯುಸನ್ ಕಾಲೇಜಿನ ಸ್ಥಾಪನೆಗೆ ದಾರಿಯಾಯಿತು.

ಗೋಖಲೆ, ಬಾಲಗಂಗಾಧರ ತಿಲಕರಂಥ ನಾಯಕರನ್ನು ಹುರಿದುಂಬಿಸಿದರು. ಪ್ರಾರ್ಥನಾ ಸಮಾಜದ ಸದಸ್ಯರಾದ ರಾನಡೆಯವರು ಮಹಾರಾಷ್ಟ್ರದಲ್ಲಿ ಜನಪ್ರಿಯರಾದರು. ಕೈಗಾರಿಕಾ ಕಾರ್ಮಿಕರ ವಿದ್ಯಾಭ್ಯಾಸಕ್ಕಾಗಿ ಒಂದು ರಾತ್ರಿ–ಶಾಲೆಯನ್ನು ತೆರೆಯಲು ರಾನಡೆಯವರು ಸಹಕರಿಸಿದರು.

ರಾನಡೆಯವರು ಸಮಾಜ ಕಲ್ಯಾಣವನ್ನು, ಪ್ರೋತ್ಸಾಹಿಸಲು ಅನಾಥಾಲಯಗಳನ್ನೂ ವಿಧವಾ ಗೃಹಗಳನ್ನೂ, ಮತ್ತಿತರ ಸಂಸ್ಥೆಗಳನ್ನು ಸ್ಥಾಪಿಸಲು ಸಹಕರಿಸಿದರು. ನ್ಯಾಯಾಧೀಶರಾಗಿದ್ದರೂ ಸಹ ಯಾವ ಅಹಂಭಾವವಿಲ್ಲದೇ ಸಮಾಜದ ಕಾರ್ಯವಿಧಾನಗಳಲ್ಲಿ ಪಾಲುಗೊಳ್ಳುತ್ತಿದ್ದರು. ಹೀಗೆ ನ್ಯಾಯಮೂರ್ತಿ ರಾನಡೆಯವರು ಪ್ರಾರ್ಥನಾ ಸಮಾಜದ ಉದ್ದೇಶಗಳನ್ನು ಈಡೇರಿಸುವದರಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಶ್ರೀಯುತರು ಸಮಾಜ ಸುಧಾರಣಾ ಚಳುವಳಿಯ ಕೇಂದ್ರ ಬಿಂದುವಾಗಿದ್ದರು.

29) ರೆಗ್ಯೂಲೇಟಿಂಗ ಶಾಸನವನ್ನು ಜಾರಿಗೆ ತರಲು ಕಾರಣಗಳೇನು ? ಆ ಶಾಸನದ ಮುಖ್ಯ ಅಂಶಗಳಾವವು ?

**ಉತ್ತರ :** 1773 ರಲ್ಲಿ ಬ್ರಿಟಿಷ್ ಪಾರ್ಲಿಮೆಂಟು, ಈಸ್ಟ ಇಂಡಿಯಾ ಕಂಪನಿಯ ವ್ಯವಹಾರಗಳನ್ನು ಕ್ರಮಪಡಿಸಲೋಸುಗ ರೆಗ್ಯೂಲೇಟಿಂಗ ಆ್ಯಕ್ಟನ್ನು ಪಾಸುಮಾಡಿತು. ಈಸ್ಟ ಇಂಡಿಯಾ ಕಂಪನಿ ಅದಕ್ಷತೆಯಿಂದಲೂ ಮತ್ತು ಲಂಚಗುಳಿತನದಿಂದಲೂ ಕೂಡಿತ್ತು. ಜನರ ಮೇಲಿನ ತೆರಿಗೆ ಹೆಚ್ಚಾಗಿತ್ತು. ಕಂಪನಿಯ ಸೇವಕರು ತಮ್ಮ ಅಧಿಕಾರವನ್ನು ದುರುಪಯೋಗಿಸಿಕೊಂಡು ಜನರನ್ನು ಸ್ವಪ್ರಯೋಜನಕ್ಕೆ ಉಪಯೋಗಿಸಿಕೊಂಡರು. ಕಂಪನಿಯ ಎಲ್ಲ ಕೆಲಸ ಕಾರ್ಯಗಳೂ ಸಮರ್ಪಕವಾಗಿಲ್ಲವೆಂದು ಬ್ರಿಟಿಷ್ ಸರಕಾರ ಮನಗಂಡಿತು. ಅದು ಕಂಪನಿಯ ವ್ಯವಹಾರಗಳನ್ನು ಶೋಧಿಸಲು ಒಂದು ರಹಸ್ಯ ಸಮಿತಿಯನ್ನು ನಿಯಮಿಸಿತು. ಅದರ ವರದಿಯ ಮೇಲೆ ಈ ಶಾಸನವನ್ನು ಬ್ರಿಟಿಷ್ ಸರಕಾರ ಪಾಸುಮಾಡಿತು.

ಶಾಸನದ ಮುಖ್ಯ ಅಂಶಗಳು : 1) ಡೈರೆಕ್ಟರುಗಳ ಅಧಿಕಾರದ ಅವಧಿ ಒಂದು ವರ್ಷದಿಂದ ನಾಲ್ಕು ವರ್ಷಗಳಿಗೆ ಏರಿಸಲ್ಪಟ್ಟಿತು. ಮುಂಬಯಿ, ಮದ್ರಾಸು ಮತ್ತು ಬಂಗಾಲಗಳಲ್ಲಿನ ಗವರ್ನರುಗಳು, ಬ್ರಿಟನ್ನಿನಲ್ಲಿದ್ದ ಡೈರೆಕ್ಟರುಗಳ ಸಮಿತಿಗೆ ಜವಾಬ್ದಾರರಾದರು.

2) ಬಂಗಾಳದ ಗವರ್ನರನ ಸ್ಥಾನಮಾನಗಳನ್ನು ಉನ್ನತ ಮಟ್ಟಕ್ಕೆ ಏರಿಸಿ ಅವನನ್ನು ಗೇವರ್ನರ್ ಜನರಲ್ ಎಂದು ಕರೆದು ಬಂಗಾಲ ಸರ್ಕಾರವನ್ನು ಸುಪ್ರೀಂ ಗವರ್ನಮೆಂಟ ಎಂದು ಕರೆಯಲಾಯಿತು. ಅವನಿಗೆ ಸಹಾಯ ಮಾಡಲು ನಾಲ್ಕು ಜನರ ಒಂದು ಸಮಿತಿಯು ನೇಮಿಸಲ್ಪಟ್ಟಿತು.

3) ಬಂಗಾಲದಲ್ಲಿ ಒಂದು ಉಚ್ಚತಮ ನ್ಯಾಯಾಲಯವು ಸ್ಥಾಪಿಸಲ್ಪಟ್ಟಿತು. ಇದರಲ್ಲಿ ಮುಖ್ಯ ನ್ಯಾಯಾಧೀಶ ಮತ್ತು ಇತರ ಮೂವರು ನ್ಯಾಯಾಧೀಶರು ಇರಲು ನಿರ್ಧಾರವಾಯಿತು. ಈ ನ್ಯಾಯಾಲಯ ಸಿವಿಲ್ ಮತ್ತು ಕ್ರಿಮಿನಲ್ ದೂರುಗಳನ್ನು ವಿಚಾರಣೆ ಮಾಡುವ ಅಧಿಕಾರ ಹೊಂದಿತು.

4) . ಗವರ್ನರ್ ಜನರಲ್, • ಗವರ್ನರುಗಳು ಮತ್ತು ನ್ಯಾಯಾಧೀಶರುಗಳ ಸಂಬಳಗಳನ್ನು ನಿಗದಿ ಮಾಡಿತು.

30) ಹಿಟ್ಲರನು ತನ್ನ ದೇಶದ ಆಂತರಿಕ ಸಮಸ್ಯೆಗಳನ್ನು ಹೇಗೆ ಎದುರಿಸಿದನು ?

ಉತ್ತರಕ್ಕೆ ಎಪ್ರಿಲ್ 1985 ರ ಪ್ರಶ್ನೆ ಪತ್ರಿಕೆಯ ಪ್ರಶ್ನೆ V (3) ರ ಉತ್ತರ ನೋಡಿರಿ.

...●....

# ಸಮಾಜ ಪಾಠಗಳು

## ಅಕ್ಟೋಬರ–1986 2 ನೆಯ ಪತ್ರಿಕೆ

ಅವಧಿ : 2|| ಗಂಟೆ ಗುಣಗಳು : 65

## [ ಭೂಗೋಳ ]

1) ಆಧುನಿಕ ತಯಾರಿಕಾ ಕೈಗಾರಿಕೆ ಎಂದರೇನು ? ಆ ಕೈಗಾರಿಕೆಯ ಲಕ್ಷಣಗಳೇನು ?

ಉತ್ತರಕ್ಕೆ 1984 ರ ಎಪ್ರಿಲ್ ತಿಂಗಳ 1 ನೇ ಪ್ರಶ್ನೆಗೆ ಉತ್ತರ ನೋಡಿರಿ.

ಅಥವಾ

ಪ್ರಪಂಚದ ಅತಿ ಮುಖ್ಯವಾದ ಕೈಗಾರಿಕಾ ಪ್ರದೇಶಗಳನ್ನು ತಿಳಿಸಿ ಅಲ್ಲಿ ಕೈಗಾರಿಕೆಗಳು ಅಭಿವೃದ್ಧಿ ಹೊಂದಲು ಸಹಾಯಕವಾಗಿರುವ ಅಂಶಗಳಾವವು ?

ಉತ್ತರ : ಪ್ರಪಂಚದ ಮುಖ್ಯ ಕೈಗಾರಿಕಾ ಕ್ಷೇತ್ರಗಳಾವುವೆಂದರೆ— 1) ಅಮೇರಿಕಾ ಸಂಯುಕ್ತ ಸಂಸ್ಥಾನಗಳ ಈಶಾನ್ಯಭಾಗ. 2) ಕೆನಡಾದ ಆಗ್ನೇಯ ಭಾಗಗಳು. 3) ಪಶ್ಚಿಮ ಯುರೋಪ 4) ಸೋವಿಯತ್ ಒಕ್ಕೂಟ 5) ಜಪಾನ 6) ಚೀನ 7) ಭಾರತ 8) ಬ್ರೆಜಿಲ್‌ನ ಆಗ್ನೇಯ ಭಾಗ 9) ಅರ್ಜೆಂಟೈನಾದ ಈಶಾನ್ಯಭಾಗ 10) ಮಧ್ಯಚಿಲಿ 11) ದಕ್ಷಿಣ ಆಫ್ರಿಕಾದ ಒಕ್ಕೂಟ 12) ಆಸ್ಟ್ರೇಲಿಯಾದ ಆಗ್ನೇಯ ಭಾಗ.

ಈ ಎಲ್ಲ ಭಾಗಗಳಲ್ಲಿ ಭೌಗೋಲಿಕ ಸೌಕರ್ಯಗಳು, ಸಂಪನ್ಮೂಲಗಳು ಬಂದರಗಳು ಸಾಗಿಗೆ ಸಂಪರ್ಕ, ಖನಿಜ ಸಂಪತ್ತಿನ ಅನುಕೂಲತೆಗಳು ಕೈಗಾರಿಕಾ ಬೆಳವಣಿಗೆಗೆ ಅನುಕೂಲವಾಗಿವೆ. ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಉಪಯುಕ್ತವಾದ ಜಲ ಮಾರ್ಗಗಳು ಬಂದರಗಳು ಇವೆ. ಮೇಲೆ ಹೇಳಿದ ಎಲ್ಲ ಸ್ಥಳಗಳಲ್ಲಿ ಕೈಗಾರಿಕಾ ಬೆಳವಣಿಗೆಗೆ ಅವಶ್ಯವಾದ ಸಾರಿಗೆ ಸಂಪರ್ಕಗಳು ಸುವ್ಯವಸ್ಥಿತವಾಗಿವೆ. ಬ್ರಿಟನ್ ಮತ್ತು ಜಪಾನಗಳಲ್ಲಿ ತೀರ ಪ್ರದೇಶವು ಅನೇಕ ಸ್ವಾಭಾವಿಕ ಬಂದರಗಳುಂಟಾಗಿ ಹಡಗುಗಳ ಸಂಚಾರಕ್ಕೆ ಅನುಕೂಲವಾಗಿವೆ. ಕೈಗಾರಿಕೆಗಳಿಗೆ ಬೇಕಾದ ಕಬ್ಬಿಣ ಮತ್ತು ಕಲ್ಲಿದ್ದಲು ಧಾರಾಳವಾಗಿ ದೊರೆಯುತ್ತವೆ. ಪ್ರಪಂಚದ ಪ್ರಮುಖ ಕೈಗಾರಿಕಾ ಪ್ರದೇಶಗಳಲ್ಲಿ ಕಚ್ಚಾ ವಸ್ತುಗಳು ದೊರೆಯುತ್ತವೆ. ಇಂಧನ ಶಕ್ತಿ ಮತ್ತು ವಿದ್ಯುಚ್ಛಕ್ತಿ ಪೂರೈಕೆ, ಕೆಲಸಗಾರರು, ಸಾಗಾಣಿಕ ಸೌಲಭ್ಯ ಮಾರುಕಟ್ಟೆಗಳ ಅನುಕೂಲತೆ, ನೀರಿನ ಪೂರೈಕೆ, ಬಂಡವಾಳ ಒದಗಿಸುವ ಸಂಸ್ಥೆಗಳಿರುವದರಿಂದ ಆ ಪ್ರದೇಶಗಳಲ್ಲಿ ಕೈಗಾರಿಕೆಗಳು ಬೆಳೆದಿವೆ.

II. ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಕಂಡು ಬರುವ ಮುಖ್ಯ ಅಂಶಗಳಾವವು?

ಉತ್ತರಕ್ಕೆ 1985 ರ ಎಪ್ರಿಲ್‌ದ II ನೇ ಪ್ರಶ್ನೆಗೆ ಉತ್ತರ ನೋಡಿರಿ.

ಅಥವಾ

ಒತ್ತಾಯ ಜನಸಂಖ್ಯೆಯುಳ್ಳ ಮೂರು ವಲಯಗಳನ್ನು ತಿಳಿಸಿ. ಅವು ಪ್ರಪಂಚದ ಯಾವ ಭಾಗಗಳಲ್ಲಿವೆ ?

ಉತ್ತರ : ನಾವು ಪ್ರಪಂಚವನ್ನು ಮೂರು ಮುಖ್ಯ ಜನಸಾಂದ್ರತಾ ವಲಯಗಳನ್ನಾಗಿ ವಿಂಗಡಿಸಬಹುದು.

1) ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳು, 2) ತಕ್ಕಮಟ್ಟಿಗೆ ಜನ ಸಾಂದ್ರತೆಯುಳ್ಳ ಪ್ರದೇಶಗಳು. 3) ಕಡಿಮೆ ಜನಸಾಂದ್ರತೆಯುಳ್ಳ ಪ್ರದೇಶಗಳು.

1] ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳು: ಒಂದು ಚದುರ ಕಿಲೋ ಮೀಟರಿಗೆ 80 ಕ್ಕಿಂತ ಹೆಚ್ಚು ಜನರನ್ನು ಹೊಂದಿರುವ ಪ್ರದೇಶಗಳನ್ನು ಹೆಚ್ಚು ಜನ ಸಾಂದ್ರತೆಯುಳ್ಳ ಪ್ರದೇಶಗಳು ಪೂರ್ವ ಏಷ್ಯಾದಲ್ಲಿ ಪ್ರಪಂಚದ ಶೇಕಡ 30 ಕ್ಕಿಂತ ಹೆಚ್ಚು ಜನರು ಇಲ್ಲಿ ವಾಸಿಸುತ್ತಾರೆ. ಯಾಂಗಟೀ ಕಡಿಮೆ ಮತ್ತು ಉತ್ತರ ಚೀನಾ ಮೈದಾನ ಪ್ರಪಂಚದಲ್ಲಿ ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳು– ಭಾರತ, ದಕ್ಷಿಣ ಏಷ್ಯಾ ರಾಷ್ಟ್ರಗಳು ಇಲ್ಲಿ ಗಂಗಾ ಬಯಲು ಪೆಂಕಾಂಗ ಬಯಲಿನಲ್ಲಿ ಜನಸಂಖ್ಯೆ ಹೆಚ್ಚು ಪಶ್ಚಿಮ ಯುರೋಪು ಮತ್ತು ಅಮೇರಿಕ ಸಂಯುಕ್ತ ಸಂಸ್ಥಾನಗಳ ಈಶಾನ್ಯದ ಕೊನೆಯಲ್ಲಿ ಯುರೋಪದಲ್ಲಿ ಕೈಗಾರಿಕೆಯ ಅಭಿವೃದ್ಧಿಯಿಂದ ಪಟ್ಟಣಗಳಲ್ಲಿ ಹೆಚ್ಚು ಜನಸಂಖ್ಯೆ.

2) ತಕ್ಕ ಮಟ್ಟಿಗೆ ಜನಸಾಂದ್ರತೆಯುಳ್ಳ ಪ್ರದೇಶಗಳು– ಈ ಪ್ರದೇಶದಲ್ಲಿ ಜನಸಂಖ್ಯೆ ಒಂದು ಚದುರ ಕಿ. ಮೀ. ಗೆ 10–80. ಅಮೇರಿಕಾ ಸಂಸ್ಥಾನಗಳ ಮಧ್ಯ ಭಾಗಗಳು, ದಕ್ಷಿಣ ಅಮೇರಿಕಾ, ಪಶ್ಚಿಮ ಆಫ್ರಿಕದ ಉಷ್ಣವಲಯ, ಯುರೋಪಿಯನ್ ರಷ್ಯಾ, ಮಧ್ಯಚೀನ, ಇಂಡಿಯಾದ ದಕ್ಷಿಣ ಪ್ರಸ್ಥಭೂಮಿ ಇಸ್ರೇಲ್, ಲೆಬನಾನ್, ಟರ್ಕಿ, ಇರಾಕ್, ಇರಾನಿನ ಉತ್ತರ ಭಾಗ, ರಷ್ಯಾದ ಓಸಾಸ್. ತುರ್ಕಸ್ತಾನ, ವೆನಿಜೂಲಾ, ಚಿಲಿ.

3] ಕಡಿಮೆ ಜನಸಾಂದ್ರತೆಯುಳ್ಳ ಪ್ರದೇಶಗಳು– ಇವು ವಿರಳ ಜನಸಂಖ್ಯೆಯುಳ್ಳ ಪ್ರದೇಶಗಳು. ಇಲ್ಲಿ ಒಂದು ಚದುರ

ಕಿ. ಮಿ. ಗೆ 10 ಕ್ಕಿಂತ ಜನಸಂಖ್ಯೆ ಕಡಿಮೆ. ಉತ್ತರ ಆಫ್ರಿಕದ ಅಟ್ಲಾಂಟಿಕ್ ತೀರಗಳನ್ನೊಳಗೊಂಡ, ಆಫ್ರಿಕನ್, ಏಷ್ಯನ್ ನಿರ್ಜನ ಪ್ರದೇಶ, ಸಹರಾ ಮರುಭೂಮಿ, ಅರೇಬಿಯಾ, ಅಫಗಾನಿಸ್ತಾನ, ಮಧ್ಯ ಏಷ್ಯಾ, ಟಿಬೆಟ್ ಮತ್ತು ಮಂಗೋಲಿಯಾದ ಪ್ರಸ್ಥಭೂಮಿ, ಉತ್ತರ ಯುರೇಸಿಯಾ, ಐಸ್‌ಲ್ಯಾಂಡ, ಉತ್ತರ ಸ್ಕ್ಯಾಂಡಿನೇವಿಯಾ, ಉತ್ತರ ಅಮೇರಿಕದ ಉತ್ತರ ಭಾಗ ಮತ್ತು ಅಂಟಾರ್ಟಿಕ್.

III. ಈ ಕೆಳಗಿನ ಪ್ರಶ್ನೆಗಳಿಗೆ 4 ವಾಕ್ಯ ಮೀರದಂತೆ ಉತ್ತರ ಬರೆಯಿರಿ.

1] ಕಾರ್ಖಾನೆ ಪದ್ಧತಿ ಹೇಗೆ ಪ್ರಾರಂಭವಾಯಿತು ?

ಉತ್ತರ : ಕ್ರಿ. ಶ. 19 ನೇ ಶತಮಾನದಲ್ಲಿ ಯುರೋಪಿನಲ್ಲಿ ವ್ಯಾಪಾರಿ ಮಾಲೀಕರ ಉದಯವಾಯಿತು. ಆದರೆ ಉತ್ಪನ್ನಗಳ ಗುಣಮಟ್ಟದ ಮೇಲೆ ಅವರಿಗೆ ಹತೋಟಿ ಇರಲಿಲ್ಲ. ಇದರ ಪರಿಣಾಮವಾಗಿ ಶ್ರೀಮಂತರು ಕರ ಕುಶಲಕರ್ಮಿಗಳಿಗೆ ಕೂಲಿ ಕೊಟ್ಟು ವಿಶೇಷವಾಗಿ ನೂಲುಗಾರರು ಮತ್ತು ನೇಕಾರರನ್ನು ನೇಮಕಮಾಡಿಕೊಂಡು ಕಾರ್ಖಾನೆಗಳೆಂದು ಕರೆಯಲಾಗುತ್ತಿದ್ದ ಒಂದೇ ಕಟ್ಟಡದಲ್ಲಿ ಕೆಲಸಮಾಡಿಸುತ್ತಿದ್ದರು. ಹೀಗೆ ಕಾರ್ಖಾನೆ ಪದ್ಧತಿ ಪ್ರಾರಂಭವಾಯಿತು.

2) ಗಣಿ ಕೈಗಾರಿಕೆಯ ಎರಡು ವಿಧಗಳಾವವು ? ಉದಾಹರಣೆ ಕೊಡಿ.

ಉತ್ತರ : 1984 ಎಪ್ರಿಲ್ ತಿಂಗಳ ಪ್ರಶ್ನೆ III (5) ರ ಉತ್ತರ ನೋಡಿರಿ.

3) ಪ್ರಪಂಚದ ಕೆಲವು ಅತ್ಯಂತ ಉದ್ದವಾದ ರೈಲು ಮಾರ್ಗಗಳನ್ನು ತಿಳಿಸಿ.

ಉತ್ತರ : i) ದಿ. ಟ್ರಾನ್ಸ್ ಸೈಬೇರಿಯನ್ ರೇಲ್ವೆ ರಶಿಯಾ ದೇಶವನ್ನು ಅತಿ ಪೂರ್ವದೊಂದಿಗೆ ಜೋಡಿಸುತ್ತದೆ. ಬಾಲ್ಟಿಕ್ ಸಮುದ್ರ ತೀರದಲ್ಲಿರುವ ಲೆನಿನ್ ಗ್ರಾಡದಿಂದ ಫ್ಯಾಸಿಫಿಕ್ ಸಮುದ್ರ ತೀರದಲ್ಲಿರುವ ವ್ಲಾಡಿವೋಸ್ಟಾಕ್ ಬಂದರದವರೆಗೆ ಈ ರೈಲು ಪ್ರಪಂಚದಲ್ಲಿಯೇ ಅತಿ ದೀರ್ಘವಾದ ರೈಲು [8940 ಕಿ. ಮಿ.]

ii] U. S. A. ದಲ್ಲಿ ನಾರ್ಥ ಫ್ಯಾಸಿಫಿಕ್ ಮತ್ತು ಸೌಥ ಫ್ಯಾಸಿಫಿಕ್ ರೇಲ್ವೆಗಳು ಮಹತ್ವವಾದವುಗಳು, ನಾರ್ಥ ಫ್ಯಾಸಿಫಿಕ್ ರೇಲ್ವೆಯು ಚಿಕ್ಯಾಗೋದಿಂದ ಹೊರಟು ಗೋದಿ ಬೆಳೆಯುವ ಪ್ರದೇಶದಲ್ಲಿ ಹಾಯ್ದು ರಾಕಿ ಪರ್ವತಗಳ ಅಡ್ಡಿಗೆ ಹೋಗುವದು. ಸೌಥ ಫ್ಯಾಸಿಫಿಕ್ ರೇಲ್ವೆಯು ಬಾಲ್ಟಿಮೋರದಿಂದ ಲಾಸ್‌ಎಂಜಲೀಸ್ ಮತ್ತು ಸ್ಯಾನ್‌ಫ್ರಾನ್ಸಿಸ್ಕೊದವರೆಗೆ ಬೆಳೆಸಲಾಗಿದೆ.

4) ಭಾರತದಲ್ಲಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಗಳನ್ನು ಹೆಸರಿಸಿ.

ಉತ್ತರಕ್ಕಾಗಿ 1985 ಎಪ್ರಿಲ್ ತಿಂಗಳ ಪ್ರಶ್ನೆ III [5] ರ ಉತ್ತರ ನೋಡಿರಿ.

5) ವಿದೇಶಿ ವಿನಿಮಯದಲ್ಲಿ ಅಂತರರಾಷ್ಟ್ರೀಯ ದ್ರವ್ಯ ನಿಧಿಯ ಪಾತ್ರವೇನು ?

ಉತ್ತರ : ಅಂತರ್‌ರಾಷ್ಟ್ರೀಯ ದ್ರವ್ಯನಿಧಿಯು ವಿದೇಶಿ ವಿನಿಮಯದ ವ್ಯವಹಾರದಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಈ ಸಂಸ್ಥೆಯು ಪಾವತಿ ಮಾಡುವ ಗೃಹ ಪದ್ಧತಿ [ತೀರುವ ಮನೆಯ]ಯ ಕಾರ್ಯವನ್ನು ನಿರ್ವಹಿಸುತ್ತದೆ ಮತ್ತು ಈ ಸಂಸ್ಥೆಯಲ್ಲಿ ಸದಸ್ಯತ್ವವನ್ನು ಹೊಂದಿರುವ ಎಲ್ಲಾ ದೇಶಗಳಿಗೂ ನೆರವು ನೀಡುತ್ತದೆ. ವಿದೇಶಿ ವಿನಿಮಯದ ಸಮಸ್ಯೆಗಳನ್ನು ಎದುರಿಸುತ್ತಿರುವ ದೇಶಗಳಿಗೂ ಸಹಾಯವನ್ನು ಮಾಡುತ್ತವೆ.

IV. ಕಾರಣಗಳನ್ನು ಕೊಡಿ :

1) ವೃತ್ತಾಂತ ಪತ್ರಿಕೆಗಳು ಸಾರ್ವಜನಿಕ ಅಭಿಪ್ರಾಯಗಳನ್ನು ರೂಪಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತವೆ.

ಉತ್ತರ : ಪತ್ರಿಕೆಯಲ್ಲಿ ಸಂಪಾದಕೀಯವಲ್ಲದೇ ಗಮನಿಸಲು ಯೋಗ್ಯವಾದ ಇನ್ನೂ ಇತರ ವಿಷಯಗಳಿರುತ್ತವೆ. "ವಾಚಕರ ವಾಣಿ" ಇಂತಹ ಒಂಸು ವಿಷಯವಾಗಿರುತ್ತದೆ. ಇದು ಕೆಲವು ವಿವಾದಾಂಶಗಳ ಬಗ್ಗೆ ಓದುಗರ ಅಭಿಪ್ರಾಯವನ್ನು ವ್ಯಕ್ತಪಡಿಸಲು ಮಾಧ್ಯಮವಾಗಿದೆ.

2) ಎರಡನೆ ಪಂಚವಾರ್ಷಿಕ ಯೋಜನೆಯನ್ನು ಕೈಗಾರಿಕಾ ಯೋಜನೆ ಎಂದು ಕರೆಯಲಾಯಿತು.

ಉತ್ತರ : ಎರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಕೈಗಾರಿಕೆಗೆ ಆದ್ಯತೆ ನೀಡಿ ಹೆಚ್ಚು ಕೈಗಾರಿಕೆಗಳನ್ನು ಸ್ಥಾಪಿಸಲಾಯಿತು.

3) ಕೈಗಾರಿಕಾಕರಣದಿಂದ ಕಪ್ಪು ನಗರಗಳು ಹೆಚ್ಚಾಗಿವೆ.

ಉತ್ತರ : ಕಾರಖಾನೆಗಳು ಕೆಲಸ ಮಾಡುವಾಗ ಅಧಿಕ ಪ್ರಮಾಣದಲ್ಲಿ ಹೊಗೆಯನ್ನು ಬಿಡುತ್ತವೆ. ಈ ಹೊಗೆ ನಗರಗಳ ವಾಯು ಮಾಲಿನ್ಯಕ್ಕೆ ಕಾರಣವಾಗಿದೆ. ಮತ್ತು ಹೊಗೆ ವಾಯು ಮಂಡಲವನ್ನು ವ್ಯಾಪಿಸುತ್ತದೆ.

4) ಭಾರತದ ಒಳನಾಡಿನ ವ್ಯಾಪಾರವು ಹೊರನಾಡಿನ ವ್ಯಾಪಾರಕ್ಕಿಂತ ಹೆಚ್ಚಾಗಿದೆ.

ಉತ್ತರ : ಭಾರತದಲ್ಲಿ ಜನಸಾಂದ್ರತೆ ಹೆಚ್ಚಾಗಿದ್ದು ಇಲ್ಲಿ ಉತ್ಪತ್ತಿಯಾಗುವ ಪದಾರ್ಥಗಳು ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಸಾಗುತ್ತವೆ. ಇಲ್ಲಿ ಸ್ಥಾನುಭಾವಕ್ಕೆ

... ಹೋಗುವುದರಿಂದ ಹೊರದೇಶಗಳೊಡನೆ ವ್ಯಾಪಾರ ಕಡಿಮೆ.

5) ಧೃವ ಪ್ರದೇಶಗಳಲ್ಲಿ ಯಾವಾಗಲೂ ಚಳಿಯಾಗಿರುತ್ತದೆ.

ಉತ್ತರ : ಸೂರ್ಯನ ಕಿರಣಗಳು ಧೃವ ಪ್ರದೇಶಗಳ ಕಡೆಗೆ ನೇರವಾಗಿ ಬೀಳದೆ. ಆರುತಿಂಗಳಿಗೊಮ್ಮೆ ಒಂದೊಂದು ಧೃವದ ಕಡೆಗೆ ಹಾಯುತ್ತವೆ.

6) ಲೋಹದ ಗಣಿಗಳು ಮುಗಿದು ಹೋಗುವ ಆಧಾರಗಳಾಗಿವೆ.

ಉತ್ತರ : ಗಣಿಗಳಿಂದ ಲೋಹಗಳನ್ನು ತೆಗೆಯುತ್ತಾ ಹೋದಂತೆ ಅವು ಪುನಃ ಉತ್ಪತ್ತಿಯಾಗುವದಿಲ್ಲ. ಆದುದರಿಂದ ಅವು ಮುಗಿದು ಹೋದ ಆಧಾರಗಳು.

V. A. ಖಾಲಿ ಬಿಟ್ಟಿರುವ ಜಾಗಗಳನ್ನು ಭರ್ತಿಮಾಡಿ [ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ.)

1] ಪ್ರಪಂಚದಲ್ಲಿ ಕಾಫಿಯ ರಾಜ........ [ಬ್ರೆಜಿಲ್]

2] ........ಎಂಬಲ್ಲಿ ಸಮುದ್ರದ ತಳಭಾಗದಲ್ಲಿ ಪೆಟ್ರೋಲಿಯಮ್ ದೊರೆಯುತ್ತದೆ. (ಮುಂಬಯಿ ಹೈ)

3] .......ಸೂರ್ಯ ಮಂಡಲದ ಅತ್ಯಂತ ದೊಡ್ಡ ಗ್ರಹ [ಜುಪಿಟರ]

4] ಭಾರತಕ್ಕೆ......ಮಾರುತಗಳಿಂದ ಮಳೆ ಬರುತ್ತದೆ. [ನೈಋತ್ಯ ಮನ್ಸೂನ]

5] ದಕ್ಷಿಣ ರೇಲ್ವೆಯ ಕೇಂದ್ರ ಕಚೇರಿಯು.......ನಲ್ಲಿದೆ [ಮದ್ರಾಸಿ]

6] ಜೇಮ್ಸ ಹಾರುಗ್ರೀವ್ಸ.......ಯನ್ನು ಕಂಡು ಹಿಡಿದನು. [ಸ್ಪಿನ್ನಿಂಗ ಜನ್ನಿ]

7] ಶಾಖದಿಂದ ಉರಿಯುವ ಕಲ್ಲಿದ್ದಲು.......ವಿದ್ಯುಚ್ಛಕ್ತಿಯನ್ನು ಉತ್ಪಾದಿಸುತ್ತದೆ. [ಥರ್ಮಲ್]

8] ಪ್ರಪಂಚದ ಅತ್ಯಂತ ದೊಡ್ಡ ಮರಭೂಮಿ........ [ಸಹರಾ]

B ಇವುಗಳನ್ನು ಸರಿಹೊಂದಿಸಿ ಬರೆಯಿರಿ.

| | A | | B |
|---|---|---|---|
| 1] | ಚಿಕ್ಯಾಗೊ | ಎ] | ಔಷಧೋಪಚಾರಗಳ ಕೇಂದ್ರ |
| 2] | ಮಾರ್ಸಿಲ್ಸ್ | ಬಿ] | ಜಪಾನಿನ ಕೈಗಾರಿಕಾ ಕೇಂದ್ರ |
| 3] | ವಾರಣಾಸಿ | ಸಿ] | ಪರ್ಷಿಯದ ಎಣ್ಣೆ ಬಂದರು |
| 4] | ಕುವೇತ್ | ಡಿ] | ಕಬ್ಬಿಣ ಮತ್ತು ಉಕ್ಕಿನ ಕಾರಖಾನೆ |
| 5] | ರಿಷಿಕೇಶ್ | ಇ] | ಮೆಡಿಟರೇನಿಯನ್ ತೀರದ ಒಂದು ಬಂದರು. |
| 6] | ಟೋಕಿಯೋ | ಎಫ್] | ಸಂಯುಕ್ತ ಸಂಸ್ಥಾನಗಳ ಮಾಂಸ ತುಂಬುವ ಕೇಂದ್ರ |
| | | ಜಿ] | ಡೀಜಲ್ ಹೊಗೆ ಬಂಡಿಗಳು |

ಉತ್ತರ : 1—ಎಫ್, 2—ಇ, 3—ಜಿ, 4—ಸಿ, 5—ಎ, 6—ಬಿ.

....O....

# ಸಮಾಜ ಪಾಠಗಳು

**ಎಪ್ರಿಲ್–1987 1 ನೆಯ–ಪತ್ರಿಕೆ**

## ( ಚರಿತ್ರೆ ಮತ್ತು ಪೌರನೀತಿ )

A. ಬಿಟ್ಟ ಸ್ಥಳಗಳಲ್ಲಿ ಸರಿಯಾದ ಉತ್ತರ ಬರೆಯಿರಿ [ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ.]

1) ಭಾರತದ ಮೂಲ ನಿವಾಸಿಗಳು——[ದ್ರಾವಿಡರು]

2] ವೇದಗಳ ಕಾಲದಲ್ಲಿ ರಚಿತವಾದ ಎರಡು ಮಹಾಕಾವ್ಯಗಳು—— ಮತ್ತು ——[ರಾಮಾಯಣ, ಮಹಾಭಾರತ]

3) ಬುದ್ಧ ಚರಿತ ಗ್ರಂಥದ ಬರಹಗಾರನು—— (ಅಶ್ವಘೋಷ)

4) ರಾಜ್ಯದ ಅತ್ಯುನ್ನತ ಅಧಿಕಾರ ಪಡೆದ ನ್ಯಾಯಾಲಯ——(ಉಚ್ಚ ನ್ಯಾಯಾಲಯ]

5) ವಿಜಯನಗರ ಸಾಮ್ರಾಜ್ಯ ಸ್ಥಾಪಿಸಿದ ಇಬ್ಬರು ಸಂಗಮ ವಂಶದ ಸಹೋದರರು——ಮತ್ತು—— [ಹರಿಹರ; ಬುಕ್ಕ]

6) ಮಾರ್ಟಿನ್ ಲ್ಯೂಥರನು ಸ್ಥಾಪಿಸಿದ ಧಾರ್ಮಿಕ ಚಳುವಳಿಯನ್ನು——ಎಂದು ಕರೆಯುವರು. (ಧರ್ಮ ಸುಧಾರಣಾ)

7) ಪ್ರತಿಯೊಬ್ಬನು ಎಲ್ಲರಿಗಾಗಿ, ಎಲ್ಲರೂ ಪ್ರತಿಯೊಬ್ಬನಿಗಾಗಿ ಎಂಬುದು————ಸಂಘದ ಮೂಲತತ್ವ. (ಸಹಕಾರ)

B. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ಪದ ಇಲ್ಲವೇ ಒಂದು ವಾಕ್ಯದಲ್ಲಿ ಉತ್ತರ ಬರೆಯಿರಿ.

8) ಗೋಮಟೇಶ್ವರ ವಿಗ್ರಹವನ್ನು ಮಾಡಿಸಿದವನು ಯಾರು ? ಗೋಮಟೇಶ್ವರ ವಿಗ್ರಹವನ್ನು ಮಾಡಿಸಿದವನು ಚಾವುಂಡರಾಯ.

9) ಕ್ರೈಸ್ತ ಮತದ ಸ್ಥಾಪಕನು ಯಾರು ? ಕ್ರೈಸ್ತ ಧರ್ಮಗ್ರಂಥವನ್ನು ಏನೆಂದು ಕರೆಯುವರು ? ಕ್ರೈಸ್ತ ಮತದ ಸ್ಥಾಪಕ ಏಸುಕ್ರಿಸ್ತ. ಕ್ರೈಸ್ತ ಧರ್ಮಗ್ರಂಥ ಬೈಬಲ್.

10) ರಾಜ್ಯದ ಎರಡು ಶಾಸನ ಸಭೆಗಳು ಯಾವವು ?

i) ವಿಧಾನ ಸಭೆ, ii) ವಿಧಾನ ಪರಿಷತ್ತು

11) ಅಕ್ಬರನ ಆಳಿಕೆಯಲ್ಲಿದ್ದ ವಿಶಿಷ್ಟ ಪದ್ಧತಿಯನ್ನು ಏನೆಂದು ಕರೆಯುತ್ತಾರೆ ?

ಮನ್ಸಬ್ದಾರಿ ಎಂದು ಕರೆಯುತ್ತಾರೆ.

12) ಯಾವಾಗ ಅಸ್ಪೃಶ್ಯತೆ ನಿಷೇಧಿಸುವ ಕಾಯಿದೆ ಯನ್ನು ಜಾರಿಗೆ ತರಲಾಯಿತು ?

1955 ರಲ್ಲಿ.

13) ಯಾರು ನೀರಿನ ಚೌಕಟ್ಟು ಕಂಡು ಹಿಡಿದರು ?

ರಿಚರ್ಡ ಆರ್ಕರೈಟ್.

C. ಈ ಪ್ರಶ್ನೆಗಳಿಗೆ ಉತ್ತರಗಳು ನಾಲ್ಕು ವಾಕ್ಯಗಳಿಗೆ ಮೀರ ದಂತಿರಲಿ.

14) ಭಾರತದಲ್ಲಿ ಡಚ್ಚರ ಅವನತಿಗೆ ಎರಡು ಕಾರಣ ಕೊಡಿರಿ.

i) ಭಾರತದಲ್ಲಿ ಬ್ರಿಟಿಷರ ಪ್ರಾಬಲ್ಯ ಹೆಚ್ಚಿದುದು.

ii) ಆಗ್ನೇಯ ಏಷ್ಯಾದಲ್ಲಿ ಡಚ್ಚರು ಹೊಸ ದ್ವೀಪಗಳನ್ನು ಆಕ್ರಮಿಸಿದುದು.

15) ಯಾವಾಗ 4 ನೇ ಆಂಗ್ಲೋ ಮೈಸೂರು ಕದನ ವಾಯಿತು ? ಯಾರು ಯಾರಿಗೆ ಯುದ್ಧವಾಯಿತು.

ಉತ್ತರ : 1799 ರಲ್ಲಿ 4 ನೇ ಆಂಗ್ಲೋ ಮೈಸೂರು ಯುದ್ಧವಾಯಿತು. ಈ ಯುದ್ಧವು ಬ್ರಿಟಿಷರು ಮತ್ತು ಮೈಸೂ ರಿನ ಟೀಪು ಸುಲ್ತಾನನ ನಡುವೆ ಆಯಿತು.

16) ಏಕೆ ರೆಗ್ಯುಲೇಟಿಂಗ ಶಾಸನವನ್ನು ಜಾರಿಗೆ ತಂದದ್ದು ? ಹೇಗೆ ಅದನ್ನು ಪ್ರಾಮುಖ್ಯ ಎಂದು ಪರಿಗಣಿಸಲಾಗಿದೆ ?

ಉತ್ತರಕ್ಕಾಗಿ ಅಕ್ಟೋಬರ 1986 ರ ಪ್ರಶ್ನೆ D [30] ಮೊದಲಿನ ಪ್ಯಾರಾ ನೋಡಿರಿ.

17) ತಾತ್ಯಾಟೋಪಿ ಯಾರು ? ಸ್ವಾತಂತ್ರ್ಯ ಸಮರ ದಲ್ಲಿ ಅವನ ಪಾತ್ರವೇನು ?

ಉತ್ತರ : ತಾತ್ಯಾಟೋಪಿ ನಾನಾ ಸಾಹೇಬನ ಪ್ರಸಿದ್ಧ ದಂಡನಾಯಕ. ಅವನು ಬಿರೂರ್, ಫತ್ತೆಪೂರ ಮತ್ತು ಕಾಲ್ಪಿ ಯುದ್ಧಗಳಲ್ಲಿ ತೀವ್ರತೆಯಿಂದ ಭಾಗವಹಿಸಿದನು. ಅವನು ಝಾನ್ಸಿಯ ರಾಣಿ ಲಕ್ಷ್ಮೀಬಾಯಿಯ ಸೈನ್ಯದೊಡನೆ ಸೇರಿ ಮಧ್ಯ ಭಾರತದಲ್ಲಿ ಧೀರ ಹೋರಾಟ ನಡೆಸಿದನು. ದಂಗೆ ಎಬ್ಬಿಸಿದ ಆಪಾದನೆಗಳ ಮೇಲೆ ಗಲ್ಲಿಗೇರಿಸಲ್ಪಟ್ಟನು.

18) "ಲೋಕಮಾನ್ಯ" ಎಂದು ಪ್ರಖ್ಯಾತರಾಗಿರುವರು ಯಾರು ? ಅವರ ಘೋಷಣೆ ಯಾವದು ?

ಉತ್ತರ : ಬಾಲಗಂಗಾಧರ ತಿಲಕರನ್ನು "ಲೋಕ ಮಾನ್ಯ" ಎಂದು ಕರೆಯುತ್ತಿದ್ದರು. ಅವರು ತಮ್ಮ ಕೇಸರಿ ಪತ್ರಿಕೆಯ ಮೂಲಕ ಭಾರತೀಯರನ್ನು ಸ್ವಾತಂತ್ರ್ಯ ಸಮರಕ್ಕೆ ಸಜ್ಜುಗೊಳಿಸಿದರು. "ಸ್ವಾತಂತ್ರ್ಯ ನನ್ನ ಜನ್ಮಸಿದ್ಧ ಹಕ್ಕು" ಎಂಬುದೇ ಅವರ ಘೋಷಣೆ.

19) ಭಾರತವು ಏಕೆ ಬಲವಾದ ರಕ್ಷಣಾ ದಳವನ್ನು ಹೊಂದಿರಬೇಕು ? ಕಾರಣ ಕೊಡಿರಿ.

ಉತ್ತರ . ನಾವು ಸ್ವಾತಂತ್ರ್ಯ ಸಂಪಾದಿಸಿದ ನಂತರ ರಾಷ್ಟ್ರ ರಕ್ಷಣೆಯು ಒಂದು ಸಮಸ್ಯೆಯಾಯಿತು. ಅನಿರೀಕ್ಷಿತ ಆಕ್ರಮಣದಿಂದ ರಕ್ಷಿಸಬೇಕಾದ ವ್ಯಾಪಕ ಗಡಿನಾಡನ್ನು ನಾವು ಪಡೆದಿದ್ದೇವೆ. ಪಾಕಿಸ್ತಾನ ಮತ್ತು ಚೀನ ದೇಶಗಳು ನಮ್ಮ ಸರಹದ್ದಿನ ಶಾಂತಿಯನ್ನಾಗಲೇ ಕದಡಿವೆ. ಅಂತರ ರಾಷ್ಟ್ರೀಯ ರಾಜಕಾರಣದಲ್ಲಿ ವಿಪತ್ತು ಎತ್ತಕಡೆಯಿಂದಾದರೂ ಬರಬಹುದು. ಆದ್ದರಿಂದ ನಿರಂತರ ಜಾಗರೂಕತೆ ಮತ್ತು ಸದಾ ಸಿದ್ಧತೆಯು ಅತ್ಯಗತ್ಯ.

20) ಯಾರನ್ನು ಫ್ರಾನ್ಸಿನಲ್ಲಿ ಸಮಾಜವಾದದ ಪಿತ ನೆಂದು ಕರೆಯುವರು ? ಅವನ ಸಮರ್ಥನೆ ಏನು?

ಉತ್ತರ : ಫ್ರಾನ್ಸ ದೇಶದಲ್ಲಿ "ಬೆಬಫ್" ಎಂಬುವವ ನನ್ನು ಸಮಾಜವಾದದ ಪಿತನೆಂದು ಕರೆಯುತ್ತಾರೆ. ಸಂಪತ್ತಿನ ರಾಷ್ಟ್ರೀಕರಣ, ಸಮಾಜದಲ್ಲಿ ಸಮಾನತೆ ಮತ್ತು ಎಲ್ಲಾ ವ್ಯಕ್ತಿ ಗಳ ಆಸ್ತಿಯ ನಿಷೇಧವನ್ನು ಸಮರ್ಥಿಸಿದನು

21) ಭಾರತಕ್ಕೆ ಆಹಾರ ಮತ್ತು ಕೃಷಿ ಸಂಸ್ಥೆಯ (FAO) ಸೇವೆ ಏನು ?

ಉತ್ತರಕ್ಕೆ ಅಕ್ಟೋಬರ 1985 ರ ಪ್ರಶ್ನೆ VIII [2] ರ ಉತ್ತರ ನೋಡಿರಿ.

22) ಅಂತರರಾಷ್ಟ್ರೀಯ ಶಾಂತಿಗೆ ಗಹನವಾದ ಬೆದರಿಕೆ ಯಾಗಿರಲು ಕಾರಣವೇನು ? ಅದನ್ನು ಪರಿಹರಿ ಸುವ ಬಗೆಹೇಗೆ ?

ಉತ್ತರ : ಜಗತ್ತಿನ ರಾಷ್ಟ್ರಗಳು ಆಧುನಿಕ ಶಸ್ತ್ರಾಸ್ತ್ರ ಗಳನ್ನು, ಪರಮಾಣು ಅಸ್ತ್ರಗಳನ್ನು ಹೊಂದಿರುವದು ಅಂತರಾ ಷ್ಟ್ರೀಯ ಶಾಂತಿಗೆ ಒಂದು ಗಹನವಾದ ಬೆದರಿಕೆಯಾಗಿದೆ. ಪರ ಮಾಣು ಅಸ್ತ್ರಗಳನ್ನು ಶಾಂತಯುತ ಹಾಗೂ ಫಲಕಾರಿ ಕಾರ್ಯ ಗಳಿಗೆ ಬಳಲಾಯಿಸಬೇಕು ಮತ್ತು ನಿಶಸ್ತ್ರೀಕರಣ ಜಗತ್ತಿನಲ್ಲಿ ಉಂಟುಮಾಡುವದೇ ಈ ಬೆದರಿಕೆಗೆ ಪರಿಹಾರ.

D. ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಗಳು ಆರು ವಾಕ್ಯಕ್ಕೆ ಮೀರದಂತಿರಲಿ.

24) ರಾಜಾರಾಮ್ ಮೋಹನರಾಯ್ "ಆಧುನಿಕ ಭಾರತದ ಪಿತ" ಎಂದು ಕರೆಯಲ್ಪಡುತ್ತಾರೆ ಕಾರಣವೇನು ?

ಉತ್ತರಕ್ಕೆ 1985 ಎಪ್ರಿಲ್ ಪ್ರಶ್ನೆ 4 [4] ರ ಉತ್ತರ ನೋಡಿರಿ.

25) ಯಾವ ಸೇವೆಗೆ ಕಮಾಲಪಾಷ್‌ನು ಟರ್ಕಿಯ "ಅಟಾಟರ್ಕ" ಎಂದು ಕರೆಯುವರು ? ತಿಳಿಸಿ.

ಉತ್ತರಕ್ಕಾಗಿ ಸೆಪ್ಟೆಂಬರ 1984 ರ ಪ್ರಶ್ನೆ 10ರ ಉತ್ತರ ನೋಡಿರಿ.

26) ಅಲಿಪ್ತ ನೀತಿಯು ಪಂಚಶೀಲ ತತ್ವಗಳ ಮೇಲೆ ಅವಲಂಬಿಸಿದೆ. ಪಂಚಶೀಲದ ಐದು ತತ್ವಗಳು ಯಾವವು ?

ಉತ್ತರಕ್ಕೆ 1984 ಸೆಪ್ಟೆಂಬರ ಪ್ರಶ್ನೆ 4 [1] ರ ಉತ್ತರ ನೋಡಿರಿ.

27) ಜನಾಂಗವಾದ ನೀತಿ ಎಂದರೇನು ? ಯಾವ ರಾಷ್ಟ್ರದಲ್ಲಿ ಇದನ್ನು ಕಾಣುವಿರಿ ? ಇದರ ವಿರುದ್ಧ ಹೋರಾಡಿದ ಭಾರತದ ನಾಯಕನು ಯಾರು ?

**ಉತ್ತರ :** ಬಿಳಿ ಜನಾಂಗ ಹಾಗೂ ಇತರ ಜನಾಂಗಗಳ ನಡುವೆ ಭೇಧ ಎಣಿಸಿ ಜಾತೀಯತೆಯನ್ನು ಎತ್ತಿ ಹಿಡಿಯುವ ನೀತಿಗೆ ಜನಾಂಗವಾದ ನೀತಿ ಎನ್ನುವರು. ಅಲ್ಪ ಸಂಖ್ಯಾತರಾದ ಬಿಳಿಯರು ಇತರ ಜನಾಂಗದವರೊಡನೆ ಅಧಿಕಾರ ಹಂಚಿಕೊಳ್ಳಲು ಸಿದ್ಧರಿಲ್ಲ. ದಕ್ಷಿಣ ಆಫ್ರಿಕಾ ಮತ್ತು ರ್‍ಹೊಡೇಶಿಯಾಗಳಲ್ಲಿ ಈ ಪದ್ಧತಿ ಇನ್ನೂ ಜಾರಿಯಲ್ಲಿದೆ. ಇದರ ವಿರುದ್ಧವಾಗಿ ಹೋರಾಡಿದ ಭಾರತದ ನಾಯಕ ಪಂಡಿತ್ ಜವಾಹರಲಾಲ್ ನೆಹರು.

E. ಈ ಕೆಳಗಿನ ಪ್ರಶ್ನೆಗಳಿಗೆ ಒಂದೂವರೆ ಪುಟಗಳಿಗೆ ಮೀರದಂತೆ ಉತ್ತರಗಳನ್ನು ಬರೆಯಿರಿ.

28) 1) ಯಾವ ಅಂಶಗಳು ಉಗ್ರಗಾಮಿಗಳ ಉದಯಕ್ಕೆ ಕಾರಣವಾದವು ?

2) ರಾಷ್ಟ್ರೀಯ ಚಳುವಳಿಯ ಪ್ರಮುಖ ಉಗ್ರಗಾಮಿಗಳು ಯಾರ್‍ಯಾರು ?

**ಉತ್ತರ :** ಕಾಂಗ್ರೆಸ್ ಸಂಸ್ಥೆಯು ಪ್ರಾರಂಭದಲ್ಲಿ ಮಂದಗಾಮಿಗಳಾದ ದಾದಾಭಾಯ್ ನವರೋಜಿ, ಜಿ. ಕೆ. ಗೋಖಲೆ, W. C. ಬ್ಯಾನರ್ಜಿ ಮೊದಲಾದವರ ನಾಯಕತ್ವದಲ್ಲಿ ಪ್ರಬಲವಾಗಿತ್ತು. ಕ್ರಮೇಣ ಉಗ್ರಗಾಮಿಗಳು ಪ್ರಬಲರಾದರು. ಇದಕ್ಕೆ ಅನೇಕ ಕಾರಣಗಳಿದ್ದವು.

I. 1) 1892 ಇಂಡಿಯನ್ ಕೌನ್ಸಿಲ್ ಆ್ಯಕ್ಟ ಜನರ ಆಶೆ ಆಕಾಂಕ್ಷೆಗಳನ್ನು ತೃಪ್ತಿಪಡಿಸಲಿಲ್ಲ.

2) 1898 ರಲ್ಲಿ. ಘೋರ ಕ್ಷಾಮ ತಲೆದೋರಿದಾಗ ಅದರ ಪರಿಹಾರ ಕ್ರಮಗಳಿಗೆ ಗಮನ ಕೊಡದೆ ಬ್ರಿಟಿಷ್ ಸರಕಾರ ವಿಕ್ಟೋರಿಯಾ ರಾಣಿಯ ಜ್ಯುಬಿಲಿ ಮಹೋತ್ಸವ ವ್ಯವಸ್ಥೆಯಲ್ಲಿ ತೊಡಗಿತ್ತು.

3) ಮುಂಬಯಿಯಲ್ಲಿ ಪ್ಲೇಗ ರೋಗ ತಲೆದೋರಿದಾಗ ಪ್ಲೇಗ ಕಮೀಷನರರಾಂಡ ಪರಿಸ್ಥಿತಿಯನ್ನು ಹತೋಟಿಯಲ್ಲಿ ತರಲು ಯಾವ ಉಪಾಯಗಳನ್ನು ಕೈಕೊಳ್ಳದೇ ಇದ್ದದ್ದು ಜನರನ್ನು ಸಿಟ್ಟಿಗೆಬ್ಬಿಸಿತು.

4) ಲಾರ್ಡ ಕರ್ಜನ್ನನ ಭಾರತ ವಿರುದ್ಧ ನೀತಿಯು ಮತ್ತೊಂದು ಅಂಶವಾಗಿತ್ತು. ಇವೆಲ್ಲವುಗಳಿಗಿಂತ ಬಂಗಾಳದ ವಿಭಜನೆ ಹೆಚ್ಚಿನ ಉಗ್ರಸ್ವರೂಪನ್ನು ಉಂಟುಮಾಡಿತು.

2) ಬಂಗಾಳದ ವಿಭಜನೆ ವಿರುದ್ಧ ಚಳುವಳಿ ಪ್ರಾರಂಭವಾಯಿತು. ಬಾಲ ಗಂಗಾಧರ ತಿಲಕ ಲಾಲಾಲಜಪತ್‌ರಾಯ್, ಬಿಪಿನ್‌ಚಂದ್ರ ಪಾಲ್ ಮತ್ತು ಅರವಿಂದರು ಉಗ್ರಗಾಮಿಗಳ ನಾಯಕರಾಗಿ ಚಳುವಳಿ ಪ್ರಾರಂಭಿಸಿದರು.

29) ಎರಡನೆ ಜಾಗತಿಕ ಯುದ್ಧದ ಕಾರಣಗಳನ್ನು ಫಲಿತಾಂಶಗಳನ್ನು ತಿಳಿಸಿ.

**ಉತ್ತರ :** ಯುದ್ಧವು ಮೊದಲಿಗೆ ಮಾನವನ ಮನಸ್ಸಿನಲ್ಲಿ ಉದ್ಭವಿಸುತ್ತದೆ. ಮಹಾತ್ವಾಕಾಂಕ್ಷೆ, ವಿರೋಧ, ವೈರ ಸಾಧನೆ ಮತ್ತು ತೀವ್ರ ಅಸಮಾಧಾನ ಒಂದು ಕಡೆ, ಮತ್ತೊಂದು ಕಡೆ ರಾಷ್ಟ್ರೀಯ ಪ್ರತಿಷ್ಠೆ ಮತ್ತು ಯಶಸ್ಸಿನ ಅನ್ವೇಷಣೆ- ಇವುಗಳು ಮಿಲಿಟರಿ ನಾಯಕರನ್ನು ಯುದ್ಧ ಹೂಡುವಂತೆ ಪ್ರಚೋದಿಸುತ್ತದೆ. ಕೆಲವು ವೇಳೆ ಆರ್ಥಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಭಿನ್ನತೆಗಳಿಂದ ಸಮಸ್ಯೆಗಳು ಎದ್ದು ಯುದ್ಧದಲ್ಲಿ ಪರಿಣಮಿಸುತ್ತವೆ. ಅನೇಕ ವೇಳೆ ಕೆಲವು ಮುಖಂಡರ ವೈಯಕ್ತಿಕ ಮಹತ್ವಾಕಾಂಕ್ಷೆ ಮತ್ತು ಕಯಾಲಿ ಯುದ್ಧಕ್ಕೆ ಮೂಲವಾಗುತ್ತವೆ. ಈ ಎಲ್ಲಾ ಅಂಶಗಳೂ ಎರಡನೆ ಪ್ರಪಂಚಕ್ಕೆ ಹೊಣೆಯಾದವು. 1939 ರಲ್ಲಿ ಯುರೋಪು ಮತ್ತು ಪ್ರಪಂಚ ಸ್ಫೋಟಕ ಸ್ಥಿತಿಯಲ್ಲಿತ್ತು. ಇಟಲಿ, ಜರ್ಮನಿ ಮತ್ತು ಜಪಾನಗಳಲ್ಲಿ ಸರ್ವಾಧಿಕಾರಿಗಳು ತಲೆ ಎತ್ತಿದರು. ಇವರು ಸಶಸ್ತ್ರರಾಗಿ ಅನೇಕ ರಾಜ್ಯಗಳನ್ನು ಆಕ್ರಮಿಸಲು ಪ್ರಾರಂಭಿಸಿದರು.

ಜಪಾನು ಬಹಿರಂಗವಾಗಿ ರಾಷ್ಟ್ರಗಳ ಸಂಘವನ್ನು ಉಲ್ಲಂಘಿಸಿ ಮಂಚೂರಿಯಾಕ್ಕೆ ಮುತ್ತಿಗೆ ಹಾಕಿತು.

ಇಟಲಿ ಅಲ್ಬೇನಿಯಾ ಮತ್ತು ಇಥಿಯೋಪಿಯಾಗಳನ್ನು ಆಕ್ರಮಿಸಿಕೊಂಡಿತು.

ಹಿಟ್ಲರ್, ಜೆಕೋಸ್ಲವಾಕಿಯಾ ಮತ್ತು ಆಸ್ಟ್ರಿಯಾದ ಮೇಲೆ ದಾಳಿ ಮಾಡಿ ಫ್ರಾನ್ಸ ಪಕ್ಷವಹಿಸಿ ಸ್ಪೇನ್ ವ್ಯವಹಾರದಲ್ಲಿ ಮಧ್ಯೆ ಪ್ರವೇಶಿಸಿದನು.

ರಾಷ್ಟ್ರ ಸಂಘ ಇದನ್ನು ತಡೆಯಲು ಅಸಮರ್ಥವಾಯಿತು. ಬ್ರಿಟನ್ ಮತ್ತು ಫ್ರಾನ್ಸ್ ಇದನ್ನು ತಡೆಗಟ್ಟಲು ತಯಾರಾಗಿರಲಿಲ್ಲ.

ಪ್ರಪಂಚದ ಮೊದಲನೆ ಯುದ್ಧದಲ್ಲಿ ನಷ್ಟ ಹೊಂದಿದ್ದ ಜರ್ಮನಿ ಮಿತ್ರ ರಾಷ್ಟ್ರಗಳ ವಿರುದ್ಧ ಸೇಡುತೀರಿಸಿಕೊಳ್ಳಲು ಹಿಟ್ಲರನಿಗೆ ಸಾಧನೆಯಾಯಿತು. ಹಿಟ್ಲರ್ ಅತಿ ಆಕ್ರಮಣಕಾರಿ ಹಾಗೂ ಮಹಾತ್ವಾಕಾಂಕ್ಷೆಯ ನಾಜಿವಾದ ನಾಝಿ ಪಕ್ಷ ಜರ್ಮನಿಯಲ್ಲಿ ಎಲ್ಲಾ ವಿರೋಧವನ್ನು ಕೊನೆಗಾಣಿಸಿ ಯುದ್ಧಕ್ಕೆ ದಾರಿ ಮಾಡಿ ಕೊಟ್ಟಿತು. ಮಿಲಿಟರಿ ಪ್ರಾಬಲ್ಯದ ಶ್ರೇಷ್ಠತೆ ರಾಷ್ಟ್ರೀಯತೆ ಪ್ರತಿಷ್ಠೆಯನ್ನು ಉದ್ರೇಕಿಸಿ ಯುದ್ಧಕ್ಕೆ ಪ್ರಚೋದಿಸಿತು.

ಹಿಟ್ಲರನು ಡ್ಯಾನ್‌ಜಿಗ್ ಮೇಲೆ ದಾಳಿಮಾಡಿದನು. ಇದರಿಂದ ಯುದ್ಧವು ಸ್ಫೋಟಗೊಂಡಿತು. ಪೋಲೆಂಡ ಮೇಲೆ ಆವನು ದಾಳಿ ಮಾಡಿದನು. ಇದರಿಂದ ಜಗತ್ತಿನ ರಾಷ್ಟ್ರಗಳು ಯುದ್ಧದಲ್ಲಿ ಭಾಗವಹಿಸಿದವು.

ಪರಿಣಾಮಗಳು— ಎರಡನೆಯ ಪ್ರಪಂಚ ಯುದ್ಧವು 1939 ರಿಂದ 1945 ರ ವರೆಗೆ ನಡೆಯಿತು. ಈ ಯುದ್ಧದಲ್ಲಿ ಅಪಾರ ಪ್ರಾಣ ಹಾನಿಯುಂಟಾಯಿತು. ಪರಿಣಾಮದ ದೃಷ್ಟಿಯಿಂದ ಜಾಗತಿಕ ಇತಿಹಾಸದಲ್ಲಿ ಇದೊಂದು ಮೈಲುಗಲ್ಲು ಎನ್ನಬಹುದು.

ನಾಜಿಸಂ, ಫ್ಯಾಸಿಜಂ ಪಾಶ್ಚಿಮಾತ್ಯ ಪ್ರಭುತ್ವ ಮತ್ತು ನಾಡಿನ ಪದ್ಧತಿ ಇವುಗಳು ಸಂಪೂರ್ಣ ನಾಶಹೊಂದಿದವು.

ಬಂಧ ವಿಮೋಚನೆಯ ಒಂದೇ ಹೊಸ ಅಲೆ ಏಷ್ಯಾ ಮತ್ತು ಆಫ್ರಿಕಾ ಖಂಡಗಳಲ್ಲಿ ಪ್ರಾರಂಭವಾಯಿತು.

ಇದರಂತೆ ಈ ಯುದ್ಧವು ಆರ್ಥಿಕ ದೃಷ್ಟಿಯಿಂದ ಅತ್ಯಂತ ಪ್ರಭಾವಶಾಲಿ ಪ್ರಭಾವವನ್ನು ಬೀರಿದವು.

ಶಾಂತಿಯ ಉದ್ದೇಶಕ್ಕಾಗಿ ಅರ್ಥ ವ್ಯವಸ್ಥೆಯನ್ನು ಸಜ್ಜುಗೊಳಿಸಬೇಕಾಯಿತು. ಫ್ರಾನ್ಸ್, ಪಶ್ಚಿಮ ಜರ್ಮನಿ, ಇಟಲಿ ಮೊದಲಾದ ರಾಷ್ಟ್ರಗಳು ಯುರೋಪಿನ ಆರ್ಥಿಕ ಸಮುದಾಯದ ಬಗೆಗೆ ಯೋಚಿಸಿದವು. ಸಾಧನ, ಸಂಪತ್ತು ಕ್ರೋಢೀಕರಿಸಲು ನಿರುದ್ಯೋಗ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸಿದವು. ಈ ದೇಶಗಳು ಸುಂಕದ ಪ್ರತಿಬಂಧಕಗಳನ್ನು ಸಡಿಲುಗೊಳಿಸಿ ಪರಸ್ಪರ ಸಹಕಾರಕ್ಕೆ ಉತ್ತೇಜನ ನೀಡಿದವು.

ಅಮೇರಿಕ ಮಾತ್ರ ತನ್ನ ಸಂಪತ್ತಿನಿಂದ ಪ್ರಪಂಚದಲ್ಲಿ ಅಗ್ರಮಾನ ರಾಷ್ಟ್ರವಾಯಿತು. ಜಪಾನ ತನ್ನದೇ ಆದ ಪುನರ್ರಚನೆ ಕಾರ್ಯಕ್ರಮಗಳನ್ನು ಅಧಿಕ ಪ್ರಮಾಣದಲ್ಲಿ ಕೈಗೊಂಡಿತು. ಹೊಸದಾಗಿ ವಿಮೋಚನೆಗೊಂಡ ಏಷ್ಯ ಮತ್ತು ಆಫ್ರಿಕದ ರಾಜ್ಯಗಳು ಅರ್ಥ ವ್ಯವಸ್ಥೆಯನ್ನು ಪುನರ್ರಚಿಸಲು ತಮ್ಮ ಸ್ವಂತ ಯೋಜನೆಗಳನ್ನು ಪ್ರಾರಂಭಿಸಿದವು. ಹೀಗೆ ಎರಡನೆ ಪ್ರಪಂಚ ಯುದ್ಧವು ವ್ಯಾಪಕವಾದ ಆರ್ಥಿಕ ಮತ್ತು ರಾಜಕೀಯ ಪರಿಣಾಮಗಳನ್ನು ಉಂಟುಮಾಡಿತು.

ಕೊನೆಯದಾಗಿ ಈ ಯುದ್ಧದ ಪರಿಣಾಮವಾಗಿ ವಿಶ್ವ ಸಂಸ್ಥೆಯ ಜನನವಾಯಿತು. ಒಂದು ಯುಗದ ಅಂತ್ಯವಾಗಿ ಮತ್ತೊಂದು ಯುಗವು ಪ್ರಾರಂಭವಾಯಿತೆನ್ನಬಹುದು.

30) 1. 1917 ರಷ್ಯಾದ ಕ್ರಾಂತಿಗೆ ಯಾವ ರಾಜಕೀಯ, ಆರ್ಥಿಕ ಮತ್ತು ತರ್ತಕ್ಷಣದ ಅಂಶಗಳು ಕಾರಣವಾದವು?

ಉತ್ತರ : 1) ಸಾಮಾಜಿಕ ಕಾರಣಗಳು : ಸಮಾಜವು ಬಹಳ ದುಃಸ್ಥಿತಿಯಲ್ಲಿತ್ತು. ಹೆಚ್ಚು ವಿದ್ಯಾಪಂತರಾಗಿದ್ದ ಆದರೆ ಹತಾಶರಾಗಿದ್ದ ಅತ್ಯುಗ್ರ ಕ್ರಾಂತಿಕಾರಿಗಳು (ನಿಹಿಲಿಸ್ಟ) ಪ್ರಚಲಿತ ಸಮಾಜದ ದುರಾಚಾರಗಳನ್ನು ತೊಡೆದು ಹಾಕಬೇಕೆಂದು ಆಶಿಸಿತ್ತು. ರಷ್ಯದ ಸಮಾಜವನ್ನು ಕುಲೀನರು [ಶ್ರೀಮಂತರು], ಜಮೀನುದಾರರು ಮತ್ತು ಜೀತದಾಳುಗಳು ಅಥವಾ ಶ್ರೀ ಸಾಮಾನ್ಯರು ಎಂದು ವರ್ಗೀಕರಿಸಿದ್ದುದು ಮತ್ತೊಂದು ಅಡಚಣೆಯಾಗಿತ್ತು. ಈ ಅತ್ಯುಗ್ರ ಕ್ರಾಂತಿಕಾರಿಗಳು ಕಾರ್ಮಿಕ ವರ್ಗಗಳ ಚಕ್ರಾಧಿಪತ್ಯವನ್ನು ಕಟ್ಟಲು ಆಶಿಸಿದ್ದರು.

2) ಆರ್ಥಿಕ ಕಾರಣಗಳು :- ರಷ್ಯದಲ್ಲಿ ಜಮೀನುದಾರರು-ರೈತರು ಅಥವಾ ಜೀತದ ಆಳುಗಳನ್ನು ತಮ್ಮ ಸ್ವಪ್ರಯೋಜನಕ್ಕಾಗಿ ದುಡಿಸಿಕೊಳ್ಳುತ್ತಿದ್ದರು. ರೈತ ಉತ್ಪಾದಿಸಿದುದರ ಅರ್ಧಭಾಗವನ್ನು ಜಮೀನುದಾರರು ಕಸಿಮುಕೊಳ್ಳುತ್ತಿದ್ದರು. ಒಕ್ಕಲತನ ಹಿಂದುಳಿದಿತ್ತು. ಕಾರ್ಮಿಕರ ಸ್ಥಿತಿ ಚಿಂತಾಜನಕವಾಗಿತ್ತು. ರಷ್ಯ ಕೈಗಾರಿಕಾ ಕ್ಷೇತ್ರದಲ್ಲಿ ಬಹಳ ಹಿಂದುಳಿದಿತ್ತು. ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದ ಹೆಂಗಸರು ಮತ್ತು ಮಕ್ಕಳು ದಾರುಣ ಸ್ಥಿತಿಯಲ್ಲಿದ್ದರು. ಸರಕಾರವು ಕಾರ್ಮಿಕರೊಂದಿಗೆ ಕ್ರೂರವಾಗಿ ವರ್ತಿಸುತ್ತಿತ್ತು. ಮುಷ್ಕರಗಳನ್ನು ನಿಷೇಧಿಸಲಾಗಿತ್ತು ಮತ್ತು ಕಾರ್ಮಿಕ ಸಂಘಗಳು ಬಹಿಷ್ಕರಿಸಲ್ಪಟ್ಟಿದ್ದವು.

3) ರಾಜಕೀಯ ಕಾರಣಗಳು :- ರಷ್ಯವನ್ನು ಆಳುತ್ತಿದ್ದ ಸಾರ್ ಚಕ್ರವರ್ತಿಗಳ ಸರ್ಕಾರ ಭ್ರಷ್ಟಾಚಾರ, ಅಸಮರ್ಥತೆ ಮತ್ತು ದಬ್ಬಾಳಿಕೆಗೆ ಹೆಸರಾಗಿತ್ತು; ಸಣ್ಣ ತಪ್ಪುಗಳಿಗೂ ಕಠೋರ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಊಳಿಗ ಮಾನ್ಯ ಪದ್ಧತಿ ಮುಂದುವರೆದಿತ್ತು. ರಾಜಕುಟುಂಬ ಹಾಗೂ ಆಸ್ಥಾನಿಕರ ಭೋಗ ಜೀವನ ಬೊಕ್ಕಸವನ್ನು ಬರಿದು ಮಾಡಿತ್ತು. ರಷ್ಯಾದಲ್ಲಿ ಗಂಭೀರವಾದ ರಾಜಕೀಯ ಪರಿಸ್ಥಿತಿ ತಲೆದೋರಿತು. ಎರಡನೆಯ ನಿಕೊಲಾಸ್ (1894-1917) ಉದಾರವಾದಿ ಸುಧಾರಣೆಗಳ ವಿರೋಧಿಯಾಗಿದ್ದನು. ಸಮಾನವಾದ ನ್ಯಾಯ, ಸಮಾನ ಅಧಿಕಾರ ಮತ್ತು ಪ್ರಜಾಪ್ರಭುತ್ವಗಳನ್ನು ಪ್ರತಿಪಾದಿಸಿದವರು ಶಿಕ್ಷೆಗೆ ಗುರಿಯಾಗುತ್ತಿದ್ದರು.

ಫ್ರಾನ್ಸಿನ 14 ನೇ ಲೂಯಿಯಂತೆ ಸಾರ್ ಎರಡನೆಯ ನಿಕೊಲಾಸ್ ಸಹ ತನ್ನ ರಾಣಿ ಅಲೆಗ್ಸಾಂಡ್ರಿಯಾಳ ಪ್ರಭಾವಕ್ಕೆ

ಸಿಲುಕಿದ್ದಳು. ಆಡಳಿತದಲ್ಲಿ ಮಧ್ಯ ಪ್ರವೇಶಿಸುತ್ತಿದ್ದಳು, ಆಕೆಯು ದುರ್ಮಾರ್ಗಿಯಾಗಿ ರಾಸ್ ಪುಟಿನ್ನನ ಪ್ರಭಾವಕ್ಕೆ ಒಳಗಾದಳು, ರಾಣಿಯ ಮೂಲಕ ಅವನು ರಾಜ್ಯದ ಪ್ರತಿ ವಿಭಾಗ ವನ್ನೂ ನಿಯಂತ್ರಿಸುತ್ತಿದ್ದನು. ಅವನ ಅಧಿಕಾರವು ಸಹಿಸಲ ಸಾಧ್ಯವಾದಾಗ ಕ್ರಾಂತಿಯು ಅನಿವಾರ್ಯವಾಯಿತು.

ಈ ಕಾರಣಗಳ ಜೊತೆಗೆ ಪ್ರಗತಿಪರ ಬರಹಗಾರರಾದ ಲಿಯೋ ಟಾಲ್ಸ್ ಟಾಯ್, ಮ್ಯಾಕ್ಸಿಂ ಗಾರ್ಕಿ ಮತ್ತು ಫಾದರ್ ಗೊವೆನ್ ತಮ್ಮ ಬರವಣಿಗೆಗಳ ಮೂಲಕ ರಷ್ಯದ ಜನತೆಯನ್ನು ಕ್ರಾಂತಿಗೆ ಪ್ರಚೋದಿಸಿದರು.

2) ರಷ್ಯಕ್ಕೆ ಸ್ಟಾಲಿನ್ನನ ಕೊಡುಗೆ ಏನು ?

ಉತ್ತರಕ್ಕೆ 1985 ಎಪ್ರಿಲ್‌ದ ಪ್ರಶ್ನೆ IV (1)ರ ಉತ್ತರ ನೋಡಿರಿ.

3) ರಾಷ್ಟ್ರವೆಂದರೇನು ? ರಾಷ್ಟ್ರಮನೋಭಾವ ಬೆಳವಣಿ ಗೆಗೆ ಕಾರಣವಾಗುವ ಅಂಶಗಳಾವವು ? ಯಾವುದಾದರೂ ಎರಡು ವಿವರಿಸಿ.

**ಉತ್ತರ :** ರಾಷ್ಟ್ರ ಎಂಬ ಪದದ ಅರ್ಥ ವಿವರಣೆ ಅಷ್ಟೇನು ಸರಳವಿಲ್ಲ ಒಂದು ಅರ್ಥದಲ್ಲಿ ಒಂದೇ ಬುಡಕಟ್ಟಿಗೆ ಸೇರಿದಂತಹ ಜನತೆಯ ಗುಂಪು ಒಂದೇ ಭೂ ಪ್ರದೇಶದಲ್ಲಿ ವಾಸಿ ಸುತ್ತಿದ್ದರೆ ಅದು ರಾಷ್ಟ್ರವಾಗಿ ಪರಿಣಮಿಸುತ್ತದೆ. 1] ಏಕ ಬುಡಕಟ್ಟು, 2) ಏಕಭಾಷೆ, 3) ಏಕ ಮತಧರ್ಮ, 4) ಒಂದೇ ರೀತಿಯ ರೂಢಿಗಳು, ಸಂಪ್ರದಾಯಗಳು, 5) ಸಮಾನ ಸಂಸ್ಕೃತಿ ಮತ್ತು ಇತಿಹಾಸ ಇವು ರಾಷ್ಟ್ರೀಯತೆ ಮನೋಭಾವವನ್ನು ಪ್ರಚೋದಿಸುವ ಅಂಶಗಳು.

ಏಕಬುಡಕಟ್ಟು : ಒಂದು ಗುಂಪು ಒಂದೇ ಬುಡಕಟ್ಟಿಗೆ ಸೇರಿದವರಾಗಿದ್ದರೆ ಅವರಲ್ಲಿ ತಾವೆಲ್ಲ ಒಂದು ಎಂಬ ಭಾವನೆ ಬರು ತ್ತದೆ. ಅನೇಕ ಆಧುನಿಕ ರಾಷ್ಟ್ರಗಳು ವಿಭಿನ್ನ ಬುಡಕಟ್ಟುಗಳ ಜನರನ್ನು ಒಳಗೊಂಡಿವೆ. ಬ್ರಿಟನ್, ಅಮೇರಿಕಾ, ರಷ್ಯಾ ಮತ್ತು ಭಾರತ ಹಲವಾರು ಬುಡಕಟ್ಟುಗಳಿಂದಾದ ಕೆಲವು ರಾಷ್ಟ್ರ ಗಳು. ಪರ್ಯಾಯವಾಗಿ ಒಂದೇ ಬುಡಕಟ್ಟಿನ ಜನರು ವಿವಿಧ ರಾಷ್ಟ್ರಗಳಲ್ಲಿ ಹಂಚಿ ಹೋಗಿರಬಹುದು ಮೂಲದಲ್ಲಿ ಆಂಗ್ಲರು ಮತ್ತು ಫ್ರೆಂಚರು ಆಂಗ್ಲೊ–ಸ್ಯಾಕ್ಸನ್ ಬುಡಕಟ್ಟಿಗೆ ಸೇರಿದ್ದರೂ ಸಹ ಇಂದು ಅವರು ವಿಭಿನ್ನ ರಾಷ್ಟ್ರಗಳಾಗಿದ್ದಾರೆ.

**ಮಾತೃಭೂಮಿ ಅಥವಾ ಒಂದೇ ವಾಸಸ್ಥಳ :** ಒಂದೇ ಪ್ರದೇಶದ ಮೇಲೆ ದೀರ್ಘಕಾಲ ವಾಸಿಸುವಂತಹ ಜನತೆ ಅದನ್ನು ತನ್ನ ಮಾತೃಭೂಮಿಯಾಗಿ ಪರಿಗಣಿಸುತ್ತದೆ. ಅಲ್ಲಿಯ ದೀರ್ಘ ಕಾಲದ ವಾಸದಿಂದಾಗಿ ಅವರಲ್ಲಿ ಏಕರೂಪದ ಸಂಸ್ಕೃತಿ ಮತ್ತು ಅನುಭವ ಬೆಳೆದು ಬರುತ್ತದೆ. ಮಾತೃಭೂಮಿಯ ಮೇಲಿನ ದೀರ್ಘಕಾಲದ ನೆಲಸುವಿಕೆಯು ಆ ಜನರಲ್ಲಿ ರಾಷ್ಟ್ರೀಯ ಭಾವನೆ ಯನ್ನು ಬಲಯುತವಾಗಿ ಬೆಳೆಸುತ್ತದೆ.

....O...

# ಸಮಾಜ ಪಾಠಗಳು

**ಎಪ್ರಿಲ್–1987** **2 ನೆಯ ಪತ್ರಿಕೆ**

ಅವಧಿ : 2 ಗಂಟೆ ಗುಣಗಳು : 35

## [ ಭೂಗೋಳ ]

I. ವೃತ್ತಿ ಸಂಘಗಳು ಎಂದರೇನು ? ವೃತ್ತಿ ಸಂಘಗಳ ಪಾತ್ರ ವನ್ನು ವಿವರಿಸಿ.

**ಉತ್ತರ :** 15 ಮತ್ತು 16 ನೆಯ ಶತಮಾನಗಳಲ್ಲಿ ಯುರೋಪದಲ್ಲಿ ಮತ್ತಿತರ ಕಡೆಗೆ ಒಂದೇ ವೃತ್ತಿಯಲ್ಲಿ ತೊಡಗಿದ್ದ ಕೆಲಸಗಾರರು ತಮ್ಮ ಕಸಬಿನ ಅಭಿವೃದ್ಧಿಯನ್ನು ಸಾಧಿಸಲಿಕ್ಕೆ ಒಂದು ಸಂಘಟನೆಯನ್ನು ಮಾಡಿದರು. ಇವರ ಈ ಸಂಘಟನೆಗೆ ವೃತ್ತಿ ಸಂಘವೆನ್ನುವರು.

ಈ ವೃತ್ತಿ ಸಂಘಗಳಲ್ಲಿಯ ಪರಿಣತರಾದ ಕುಶಲ ಕಾರ್ಮಿ ಕರು ಈ ವೃತ್ತಿ ಸಂಘಗಳನ್ನು ನಿರ್ವಹಿಸುತ್ತಿದ್ದರು.

ಉದಾ : ದ. ಫ್ರಾನ್ಸದಲ್ಲಿ - ರೇಷ್ಮೆ ಕಾರ್ಮಿಕರ ಸಂಘ; ಭಾರತದಲ್ಲಿ ಡಾಕಾ ಮಸ್ಲಿನ್ ಬಟ್ಟೆಯ ಕಾರ್ಮಿಕರ ಸಂಘ. i) ಇವುಗಳ ಕಾರ್ಯ ಬೇರೆ ಬೇರೆ ವೃತ್ತಿಗಳನ್ನು ಸಂಘಟಿಸುವದು, ii) ಕುಶಲತೆಯನ್ನು ಹೆಚ್ಚಿಸುವದು, iii) ವೃತ್ತಿಗಳಲ್ಲಿ ತರ ಬೇತಿ ಕೊಡುವದು, iv) ವೃತ್ತಿಗಳಿಗೆ ಕಚ್ಚಾ ಮಾಲು, ಪೇಟಿ, ಹಣ ಒದಗಿಸುವದು.

ಅಥವಾ

ಅಂತರ ರಾಷ್ಟ್ರೀಯ ಕಾಲುವೆಗಳು ಯಾವವು ? ಒಂದು ಕಾಲುವೆಯ ಮಹತ್ವ ವಿವರಿಸಿ.

ಉತ್ತರಕ್ಕೆ 1985 ಅಕ್ಟೋಬರ ಪ್ರಶ್ನೆ II ರ ಉತ್ತರ ನೋಡಿರಿ.

II. ಭಾರತದಿಂದ ನಿರ್ಯಾತವಾಗುವ ಮಹತ್ವದ ಸರಕುಗಳನ್ನು ಹೆಸರಿಸಿ. ರಫ್ತುಗಳನ್ನು ಹೆಚ್ಚಿಸಲು ಕೈಗೊಂಡಿರುವ ಕ್ರಮ ಗಳಾವವು ?

ಉತ್ತರಕ್ಕಾಗಿ 1984 ಎಪ್ರಿಲ್‌ದ III (4) ರ ಉತ್ತರ ನೋಡಿರಿ ಮತ್ತು ರಫ್ತನ್ನು ಹೆಚ್ಚಿಸಲು ಕೈಗೊಂಡಿರುವ ಕ್ರಮಗಳು : ಭಾರತವು ಆಮದನ್ನು ಮಿತಗೊಳಿಸಿ ರಫ್ತನ್ನು ಹೆಚ್ಚಿಸಲು ಪ್ರೋತ್ಸಾಹಿಸುವ ನೀತಿಯನ್ನು ಅಳವಡಿಸಿಕೊಂಡಿದೆ.

ಇದು ಅನೇಕ ದೇಶಗಳೊಂದಿಗೆ ವ್ಯಾಪಾರ ಸಂಬಂಧವನ್ನು ಅಭಿವೃದ್ಧಿಪಡಿಸಿಕೊಳ್ಳುತ್ತದೆ. ಕಚ್ಚಾ ವಸ್ತುಗಳಲ್ಲಿ ಮತ್ತು ಪ್ರಮುಖ ಉಪಕರಣಗಳೆರಡರಲ್ಲೂ ಸ್ವಾವಲಂಬನೆಯನ್ನು ಸಾಧಿಸುವದೇ ನಮ್ಮ ವ್ಯಾಪಾರದ ಪ್ರಧಾನ ಉದ್ದೇಶ. ಸಾರಿಗೆ ಸೌಕರ್ಯವನ್ನು ಅಭಿವೃದ್ಧಿಪಡಿಸಿ ರಫ್ತುಮಾಡುವವರಿಗೆ ಹಣಕಾಸಿನ ಸಹಾಯ ಮಾಡಿ ತಾಂತ್ರಿಕ ಜ್ಞಾನದ ಬೆಳವಣಿಗೆಗೆ ಪ್ರೋತ್ಸಾಹ ನೀಡಿ, ಹೆಚ್ಚುತ್ತಿರುವ ಸುಂಕವನ್ನು ಹತೋಟಿಗೆ ತಂದು, ಸರಕಾರವು ರಫ್ತನ್ನು ಅಭಿವೃದ್ಧಿಗೊಳಿಸುತ್ತದೆ.

ಅಥವಾ

ಭಾರತದ ಅತಿ ಹೆಚ್ಚಾದ ಜನಸಂಖ್ಯೆಯಿಂದ ಉಂಟಾಗಿರುವ ಸಮಸ್ಯೆಗಳಾವವು? ಹೆಚ್ಚುತ್ತಿರುವ ಜನಸಂಖ್ಯೆಯನ್ನು ತಡೆಯಲು ಯಾವ ಕ್ರಮಗಳನ್ನು ಕೈಕೊಳ್ಳಲಾಗಿದೆ?

ಉತ್ತರ : ಭಾರತವು ಜಗತ್ತಿನಲ್ಲಿ ಜನಸಂಖ್ಯೆಯ ದೃಷ್ಟಿಯಿಂದ ಎರಡನೇ– ದೊಡ್ಡ ದೇಶ. ಪ್ರಪಂಚದ ಜನಸಂಖ್ಯೆಯಲ್ಲಿ 1/7 ಭಾಗದಷ್ಟು ಜನರಿಗೆ ಆಶ್ರಯವಾಗಿದೆ, ಇಲ್ಲಿ ಪ್ರತಿ ಹತ್ತು ವರ್ಷಕ್ಕೆ ಒಂದು ಬಾರಿ ಜನಗಣತಿ ಮಾಡುತ್ತಾರೆ. 1971 ರ ಜನಗಣತಿಯ ರೀತಿಯಾಗಿ 547 ದಶಲಕ್ಷ ಜನರಿದ್ದರು. ಇದು 1981 ರಲ್ಲಿ 610 ದಶಲಕ್ಷಕ್ಕೂ ಹೆಚ್ಚಿತು. ಈ ರೀತಿಯ ಬೆಳವಣಿಗೆಗೆ ಜನನ ಪ್ರಮಾಣಕ್ಕಿಂತ ಮರಣ ಪ್ರಮಾಣ ಕಡಿಮೆಯಾಗಿರುವದು ಕಾರಣವಾಗಿದೆ.

ಭಾರತದಲ್ಲಿ ಜನಸಾಂದ್ರತೆ ಒಂದೇ ಸಮನಾಗಿಲ್ಲ. ಆರ್ಥಿಕ ಮತ್ತು ಭೌಗೋಲಿಕ ವೈವಿಧ್ಯತೆಯಿಂದ ಇದು ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸವನ್ನು ಹೊಂದುತ್ತಿದೆ. ಕಡಿಮೆ ಉಷ್ಣಾಂಶವನ್ನು ಹೊಂದಿರುವ ಫಲವತ್ತಾದ ಮೈದಾನಗಳು ಮತ್ತು ಸಾಕಷ್ಟು ನೀರಾವರಿ ಸೌಲಭ್ಯಗಳು ಜನಸಂಖ್ಯೆ ಹೆಚ್ಚಲು ಆಧಾರವಾಗಿವೆ. ಹೆಚ್ಚು ಪರ್ವತಗಳಿರುವ ಪ್ರದೇಶಗಳಲ್ಲಿ ಭೂಮಿ, ಹಳ್ಳ ತಿಟ್ಟನಿಂದ ಕೂಡಿರುವದರಿಂದಲೂ ವಾಯುಗುಣ ಹಿತಕರವಾಗಿಗದೆ ಇರುವದರಿಂದಲೂ ಆ ಪ್ರದೇಶದಲ್ಲಿ ಜನಸಂಖ್ಯೆ ವಿರಳವಾಗಿರುತ್ತದೆ.

ನಮ್ಮ ದೇಶದಲ್ಲಿ ಶೇಕಡ 80 ರಷ್ಟು ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಅತಿಯಾಗಿ ಜನಸಂಖ್ಯೆ ಬೆಳವಣಿಗೆಗೆ ಅನೇಕ ಸಮಸ್ಯೆಗಳು ಉದ್ಭವಿಸಿವೆ. ಮುಖ್ಯವಾದ ಸಮಸ್ಯೆ ಎಂದರೆ ನಿರುದ್ಯೋಗ ಸಮಸ್ಯೆ, ಭಾರತದಲ್ಲಿ ಜನಸಂಖ್ಯೆಯ ಬೆಳವಣಿಗೆಗೆ ತಕ್ಕಂತೆ ಸ್ವಾಭಾವಿಕ ಸಂಪನ್ಮೂಲಗಳ ಉಪಯೋಗ ಆಗಿಲ್ಲ, ಇದರಿಂದ ಅನೇಕ ತರುಣರು ಉದ್ಯೋಗವಿಲ್ಲದೆ ಬಡತನವನ್ನು ಅನುಭವಿಸಬೇಕಾಗಿದೆ. ಅದರಂತೆ ಆಹಾರ, ಬಟ್ಟೆ, ವಸತಿ ಸಮಸ್ಯೆಗಳು ಉದ್ಭವಿಸಿವೆ. ಇದನ್ನು ನಿವಾರಿಸಲು ಸ್ವಾಭಾವಿಕ ಸಂಪನ್ಮೂಲಗಳನ್ನು ಉಪಯೋಗಿಸಬೇಕು. ಅದಕ್ಕಾಗಿ ಹೆಚ್ಚಿನ ಪ್ರಮಾಣದಲ್ಲಿ ಕೈಗಾರಿಕೆಗಳನ್ನು ಪ್ರಾರಂಭಿಸಬೇಕು. ಜನಸಂಖ್ಯೆಯ ಬೆಳವಣಿಗೆಯ ಪ್ರಮಾಣವನ್ನು ಕುಟುಂಬ ಯೋಜನೆಗಳ ಮುಖಾಂತರ ನಿಯಂತ್ರಿಸಬೇಕು. ಆಹಾರ ಉತ್ಪಾದನೆಯನ್ನು ಹೆಚ್ಚಿಸಲು ಕ್ರಾಂತಿಯಾಗಬೇಕು. ಜನಸಂಖ್ಯೆಯನ್ನು ಒಂದೇ ಸಮನಾಗಿ ಹಂಚುವದರಿಂದ ಈ ಸಮಸ್ಯೆಗಳನ್ನು ನಿವಾರಿಸಬಹುದು.

III. ಈ ಕೆಳಗಿನ ಪ್ರಶ್ನೆಗಳಿಗೆ 4 ವಾಕ್ಯಗಳು ಮೀರದಂತೆ ಉತ್ತರಿಸಿ.

1) ಜಪಾನಿನ ಎರಡು ಕೈಗಾರಿಕಾ ಪ್ರದೇಶಗಳನ್ನು ಹೆಸರಿಸಿ.

ಉತ್ತರ : ಜಪಾನಿನ ಮುಖ್ಯ ಕೈಗಾರಿಕಾ ಪ್ರದೇಶಗಳಾವವೆಂದರೆ ಟೋಕಿಯೊ, ಯಾಕೋಹಾಮಾ ಪ್ರದೇಶ, ನಗೋಯ ಪ್ರದೇಶ.

2] ರೇವು ಪಟ್ಟಣದ ಸಮೀಪದಲ್ಲಿ ಸಮತಟ್ಟಾದ ಬಯಲುಗಳು ಏಕೆ ಅವಶ್ಯಕ?

ಉತ್ತರ : ಬಂದರವನ್ನು ಹೊಂದಿರುವ ಪಟ್ಟಣಕ್ಕೆ ರೇವು ಪಟ್ಟಣ ಎಂದು ಅನ್ನುವರು. ರೇವು ಪಟ್ಟಣವು ಜಲಮಾರ್ಗ ಮತ್ತು ಭೂಮಾರ್ಗಗಳನ್ನು ಸಂಧಿಸುವ ಒಂದು ಸ್ಥಳ, ಸರಕುಗಳನ್ನು ತುಂಬಲು ಮತ್ತು ಖಾಲಿ ಮಾಡಲು ಹಡಗುಗಳಿಗೆ ಬಂದರು ಅವಶ್ಯ. ಹಡಗುಗಳು ಬಂದು ನಿಲ್ಲುವ ಸ್ಥಳಕ್ಕೆ ಬಂದರು ಎನ್ನುತ್ತಾರೆ. ರೇವು ಪಟ್ಟಣಗಳನ್ನು ಅಭಿವೃದ್ಧಿಪಡಿಸಲು ಕೆಲವು ಅನುಕೂಲತೆಗಳು ಬೇಕು. ರೇವು ಪಟ್ಟಣದ ಸಮೀಪದಲ್ಲಿ ವಿಶಾಲವಾದ ಸಮ ಮಟ್ಟದ ಪ್ರದೇಶವಿರಬೇಕು. ಅಲ್ಲಿ ಮಳಿಗೆಗಳನ್ನು ಮತ್ತು ಗಡಂಗುಗಳನ್ನು ಕಟ್ಟಲು ಅನುಕೂಲವಾಗುತ್ತದೆ ತೀರ ಪ್ರದೇಶವು ಛಿನ್ನ ವಿಛಿನ್ನವಾಗಿರಬೇಕು. ರೇವು ಪಟ್ಟಣದಲ್ಲಿ ನೀರು-ಮಂಜುಗಡ್ಡೆ ಕಟ್ಟದಂತೆ ಇರಬೇಕು.

ರೇವು ಪಟ್ಟಣದ ಅಭಿವೃದ್ಧಿ ಹಿನ್ನಾಡಿನ ಮೇಲೆ ಅವಲಂಬಿಸಿದೆ. ಬಂದರಿನ ಆಳವಿನಲ್ಲಿರುವ ಸುತ್ತಮುತ್ತಲಿನ ಪ್ರದೇಶಕ್ಕೆ ಹಿನ್ನಾಡು (Hinterland) ಎನ್ನುವರು. ರಫ್ತಾಗುವ ಸರಕುಗಳನ್ನು ಒದಗಿಸುವದು ಮತ್ತು ಆಮದಿನ ಸರಕುಗಳನ್ನು ಒಳನಾಡಿನಲ್ಲಿ ಹಂಚಲು ಹಿನ್ನಾಡು ಮುಖ್ಯ. ಹಿನ್ನಾಡಿನಲ್ಲಿ ಸಹಜ ಸಂಪತ್ತಿರಬೇಕು. ವ್ಯವಸಾಯ ಅಥವಾ ಖನಿಜ ಸಂಪತ್ತು ತುಂಬಿರಬೇಕು. ಸಂಚಾರ ಸೌಕರ್ಯಗಳಿರಬೇಕು. ರೇವು ಪಟ್ಟಣಗಳಲ್ಲಿ ಸ್ವಾಭಾವಿಕ ಮತ್ತು ಕೃತಕ ಬಂದರು ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಭಾರತದಲ್ಲಿ ಮುಂಬಯಿ ಅತಿ ಮುಖ್ಯವಾದ ಸ್ವಾಭಾವಿಕ ಬಂದರು. ಹತ್ತಿ, ಖನಿಜ, ಎಣ್ಣೆಕಾಳು ಸಕ್ಕರೆ ಇವುಗಳು ಹಿನ್ನಾಡು ಸರಕುಗಳು. ಬಟ್ಟೆ ಕೈಗಾರಿಕೆ ಅಭಿವೃದ್ಧಿಯಲ್ಲಿ ರೈಲು ಮತ್ತು ವಾಯು ಮಾರ್ಗ, ಉತ್ತಮ ರಸ್ತೆ

ಸಂಪರ್ಕ ಸಾಕಷ್ಟು ಅಂತರರಾಷ್ಟ್ರೀಯ ವ್ಯಾಪಾರ ನಡೆಯುತ್ತದೆ.

3) ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಪಾಲು ಎಷ್ಟು ?

**ಉತ್ತರ :** ಈಗ ಅಂದಾಜು ಮಾಡಿರುವಂತೆ ಕಮ್ಯುನಿಸ್ಟ ರಾಷ್ಟ್ರಗಳನ್ನು ಬಿಟ್ಟು ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಅಂತರ ರಾಷ್ಟ್ರೀಯ ವ್ಯಾಪಾರದಲ್ಲಿ ಸುಮಾರು ಶೇಕಡ 74 ರಷ್ಟು ವ್ಯಾಪಾರ ನಿರ್ವಹಿಸುತ್ತವೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು ಶೇಕಡ 26 ರಷ್ಟು ಮಾತ್ರ ಸಾಧಿಸಿವೆ.

4), ಅಂಟಾರ್ಟಿಕ್ ಒಂದು ದೊಡ್ಡ ನಿರ್ಜನ ಪ್ರದೇಶ ಏಕೆ ?

**ಉತ್ತರ :** ಅಂಟಾರ್ಟಿಕ ಪ್ರದೇಶದಲ್ಲಿ ಜನರು ವಸತಿ ಮಾಡಿಕೊಂಡಿರಲು ಸಾಧ್ಯವಿಲ್ಲ. ಅದು ಸಂಪೂರ್ಣವಾಗಿ ಮಂಜುಗಡ್ಡೆ, ಹಿಮದಿಂದ ಕೂಡಿದೆ. ವ್ಯವಸಾಯ ಸಾಧ್ಯವಿಲ್ಲ.

5) ಹಿಮಾಲಯದ ಎರಡು ಗಿರಿಧಾಮಗಳನ್ನು ತಿಳಿಸಿ.

**ಉತ್ತರ :** ಹಿಮಾಲಯದಲ್ಲಿ ಅನೇಕ ಗಿರಿಧಾಮಗಳಿವೆ. ಡಾರ್ಜಿಲಿಂಗ್, ನೈನಿತಾಲ್, ಮುಸ್ಸೂರಿ, ಸಿಮ್ಲಾ, ಡೆಹರಾಡೂನ್ ಮುಂತಾದವು.

IV. ಸೂಕ್ತ ಕಾರಣ ಕೊಡಿ.

1) ದ್ವಿತೀಯ ಪಂಚವಾರ್ಷಿಕ ಯೋಜನೆಯನ್ನು "ಕೈಗಾರಿಕಾ ಯೋಜನೆ" ಎಂದು ಕರೆಯಲಾಗಿದೆ.

ಉತ್ತರಕ್ಕೆ ಅಕ್ಟೋಬರ 1986 ಪ್ರಶ್ನೆ IV (2) ರ ಉತ್ತರ ನೋಡಿರಿ.

2) ಮಧ್ಯ ಏಷ್ಯಾ, ಆಸ್ಟ್ರೇಲಿಯಾ, ಆಫ್ರಿಕಾ ಮತ್ತು ದಕ್ಷಿಣ ಅಮೇರಿಕದ ಬಹುಭಾಗಗಳಲ್ಲಿ ವಿಶಾಲವಾದ ರಸ್ತೆಗಳಿಲ್ಲ.

ಉತ್ತರಕ್ಕಾಗಿ ಎಪ್ರಿಲ್ 1984 ರ ಪ್ರಶ್ನೆ IV [3] ರ ಉತ್ತರ ನೋಡಿರಿ.

3) ಭಾರತದಲ್ಲಿ ಜನಸಂಖ್ಯೆ ತೀವ್ರಗತಿಯಲ್ಲಿ ಬೆಳೆಯುತ್ತಲಿದೆ.

**ಉತ್ತರ :** ಜನನ ಪ್ರಮಾಣವು ಮರಣ ಪ್ರಮಾಣಕ್ಕಿಂತ ಬಹಳ ಹೆಚ್ಚಾಗಿದೆ. ಬದುಕುವ ಅವಧಿ ಗಮನಾರ್ಹವಾಗಿ ಹೆಚ್ಚುತ್ತಿದೆ. ಇದಕ್ಕೆ ಉತ್ತಮವಾದ ವೈದ್ಯಕೀಯ ಸೌಲಭ್ಯಗಳು ಕಾರಣ.

4) ಪ್ರತಿದೇಶಕ್ಕೂ ವಿದೇಶಿ ವಿನಿಮಯ ಅವಶ್ಯಕ.

ಉತ್ತರಕ್ಕೆ ಎಪ್ರಿಲ್ 1985 ರ ಪ್ರಶ್ನೆ IV [5] ರ ಉತ್ತರ ನೋಡಿರಿ.

5) ಭೂ ಭಾಗದ ಎಲ್ಲಾ ಭಾಗಗಳಲ್ಲಿ ಉಷ್ಣಾಂಶದ ಹಂಚಿಕೆ ಸಮನಾಗಿಲ್ಲ.

ಉತ್ತರಕ್ಕೆ ಅಕ್ಟೋಬರ 1985 ರ ಪ್ರಶ್ನೆ IV (1) ನೋಡಿರಿ.

6) ಕ್ಯೂಬಾವು ಸಕ್ಕರೆ ಉತ್ಪಾದನೆಯಲ್ಲಿ ಪರಿಣತಿ ಹೊಂದಿದೆ.

**ಉತ್ತರ :** ಪ್ರಪಂಚದ ಉತ್ಪಾದನೆಯಲ್ಲಿ ಕ್ಯೂಬಾ ಒಂದೇ ಶೇ. 12 ರಷ್ಟು ಕಬ್ಬನ್ನು ಉತ್ಪಾದಿಸುತ್ತದೆ. ಅಲ್ಲಿ ಸಕ್ಕರೆ ಕಾರಖಾನೆಗಳು ವಿಶೇಷವಾಗಿವೆ.

V. A) ಖಾಲಿ ಜಾಗಗಳಲ್ಲಿ ಸೂಕ್ತ ಉತ್ತರವನ್ನು ಬರಿಯಿರಿ. ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ.

1) ಹಿಮಾಲಯ ಪರ್ವತವು.......ಪರ್ವತದ ಉದಾಹರಣೆ. (ಪಕ್ಷೀಕೃತ)

2) ಮಳೆಯನ್ನು ಅಳೆಯುವ ಸಾಧನ......(ರೇನ್ ಗಾಜ್)

3) ಮೆಡಿಟರೇನಿಯನ್ ವಾಯುಗುಣವು.......ಬೆಳೆಯಲು ಆದರ್ಶಪ್ರಾಯವಾಗಿದೆ. (ಹಣ್ಣುಗಳು)

4) .......ಎಂಬುದು ಒಂದಕ್ಕೊಂದು ಸಂಬಂಧ ಹೊಂದಿರುವ ಅನೇಕ ಕೈಗಾರಿಕೆಗಳ ಸಿಬಿಡ ಪ್ರದೇಶ. ಕಾಂಪ್ಲೆಕ್ಸ್ (ಸಂಕೀರ್ಣ)

5) ........ಪಶ್ಚಿಮ ಜರ್ಮನಿಯ ಹೆದ್ದಾರಿಗಳು. [ಆಟೋಬಾನ್ಸ್]

6) ಪ್ರಪಂಚದಲ್ಲಿ ಅತ್ಯಂತ ಉದ್ದವಾದ ರೈಲುಮಾರ್ಗ .......[ಟ್ರಾನ್ಸ್ ಸೈಬೇರಿಯನ್]

7) ನಾಣ್ಯದ ಚಲಾವಣೆಯು......ಸಮಸ್ಯೆಯನ್ನು ಬಗೆಹರಿಸಿದೆ. [ವಸ್ತುಗಳ ವಿನಿಮಯ]

8) ಕಾಳಿ ಯೋಜನೆಯು........ರಾಜ್ಯದಲ್ಲಿದೆ. [ಕರ್ನಾಟಕ]

B) ಹೊಂದಿಸಿ ಬರೆಯಿರಿ.

| | A | | B |
|---|---|---|---|
| 1] | ಮಿಸ್ಸಿಸ್ಸಿಪಿ | ಅ] | ಈಜಿಪ್ತ |
| 2] | ಅಮೆಜಾನ್ | ಬ] | ಬರ್ಮಾ |
| 3] | ನೈಲ್ | ಕ] | ಇಂಗ್ಲಂಡ |
| 4] | ಹೋಅಂಗಹೊ | ಡ] | ಬ್ರೆಜಿಲ್ |
| 5] | ಇರಾವತಿ | ಇ] | ಅಮೇರಿಕದ ಸಂಯುಕ್ತ ಸಂಸ್ಥಾನ |
| 6] | ಥೇಮ್ಸ | ಫ] | ಚೀನಾ |
| | | ಗ] | ಭಾರತ |

**ಉತ್ತರ :** 1–ಇ, 2–ಡ, 3–ಅ, 4–ಫ, 5–ಬ, 6–ಕ.

...●....

# ಸಮಾಜ ಪಾಠಗಳು

## ಅಕ್ಟೋಬರ-1987 1 ನೆಯ-ಪತ್ರಿಕೆ

ಅವಧಿ : 2½ ಗಂಟೆ ಗುಣಗಳು : 65

## ( ಚರಿತ್ರೆ ಮತ್ತು ಪೌರನೀತಿ )

ಅ. ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಸ್ಥಳವನ್ನು ಸೂಕ್ತ ಶಬ್ದಗಳಿಂದ ಭರ್ತಿಮಾಡಿರಿ.

1) ಮೂಲನಿವಾಸಿ ಬುಡಕಟ್ಟಿನವರು ವಾಸಿಸುವ ಎಲ್ಲೆಯ ಪ್ರಾಂತ್ಯವನ್ನು....ನೋಡಿಕೊಳ್ಳುತ್ತಿದ್ದನು. (ಸ್ತ್ರಪತಿ) 1

2) ಫಾಹಿಯಾನನು ತನ್ನ ಅನುಭವಗಳನ್ನು........ ಎಂಬ ಪುಸ್ತಕ ರೂಪದಲ್ಲಿ ಬರೆದನು. (ಫೊ. ಕೊ. ಕಿ.) 1

3) .......ಅಲೆಗ್ಸಾಂಡರನ ಗುರು.(ಅರಿಸ್ಟಾಟಲ್) 1

4) ಮಹಾವೀರನು....... ಎಂಬಲ್ಲಿ ಸಿದ್ಧಾರ್ಥ ಮತ್ತು ತ್ರಿಸುಲಾರ ಮಗನಾಗಿ ಜನಿಸಿದನು. (ವೈಶಾಲಿ) 1

5) ಕುಮಾರಗುಪ್ತನು.......ಎಂಬವರ ದಾಳಿಯನ್ನು ಎದುರಿಸಬೇಕಾಯಿತು. (ಪುಷ್ಯಮಿತ್ರರು) 1

6) ರಾಜ್ಯಪಾಲರ ಅಧಿಕಾರಾವಧಿ ......(ಐದು ವರ್ಷ) 1

7) ರಾಜ್ಯವಿಧಾನ ಸಭೆಗೆ ಸ್ಪರ್ಧಿಸುವ ಸ್ಪರ್ಧಾಳುವಿಗೆ ಕನಿಷ್ಟ.........ವಯಸ್ಸಾಗಿರಬೇಕು. (25) 1

ಬ. ಕೆಳಗಿನ ಪ್ರಶ್ನೆಗಳಿಗೆ ಒಂದು ಶಬ್ದದಲ್ಲಿ ಉತ್ತರಿಸಿರಿ.

8) ಇಂಗ್ಲೀಷರು ಮದ್ರಾಸಿನಲ್ಲಿ ಕಟ್ಟಿಸಿದ ಕೋಟೆಯ ಹೆಸರೇನು ? 1

ಉತ್ತರ : ಸೇಂಟ್ ಡೇವಿಡ್‌ಕೋಟೆ.

9) ಅಕ್ಬರನು ಹೊಸ ರಾಜಧಾನಿಯನ್ನು ಎಲ್ಲಿ ಕಟ್ಟಿಸಿದನು ? 1

ಉತ್ತರ : ಫತೆಪುರ ಸಿಕ್ರಿ.

10) ಗ್ರಾಮ ಪಂಚಾಯತಿಯ ಸದಸ್ಯರ ಸಂಖ್ಯೆ ಎಷ್ಟು ? 1

ಉತ್ತರ : ೧೧ ರಿಂದ ೧೯.

11) ಕೆಂಪಂಗಿ ಸೈನ್ಯವನ್ನು ಸಂಘಟಿಸಿದವರು ಯಾರು? 1

ಉತ್ತರ : ಗೆರಿಬಾಲ್ಡಿ.

12) ರಾಜ್ಯದ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರನ್ನು ಯಾರು ನೇಮಿಸುತ್ತಾರೆ ? 1

ಉತ್ತರ : ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶ ಮತ್ತು ಆ ರಾಜ್ಯದ ರಾಜ್ಯಪಾಲ ಇವರ ಸಲಹೆಯನ್ನು ಪಡೆದು ರಾಷ್ಟ್ರಪತಿಯು ನೇಮಿಸುತ್ತಾನೆ.

13) ಭಾರತದ ಅಲಿಪ್ತ ನೀತಿಯ ಶಿಲ್ಪಿ ಯಾರು ? 1

ಉತ್ತರ : ಪಂಡಿತ ಜವಾಹರಲಾಲ ನೆಹರು.

ಕ. ಕೆಳಗಿನ ಪ್ರಶ್ನೆಗಳಿಗೆ ಉತ್ತರವು ನಾಲ್ಕು ವಾಕ್ಯಕ್ಕೆ ಮೀರದಂತಿರಲಿ.

14) ಸಿರಾಜುದ್ದೌಲನೆಂದರೆ - ಯಾರು ? ಇವನು ಇಂಗ್ಲೀಷರ ಮೇಲೆ ಏಕೆ ಏರಿ ಹೋದನು ? 2

ಉತ್ತರ : ಸಿರಾಜುದ್ದೌಲನು ಬಂಗಾಲದ ನವಾಬನಾಗಿದ್ದನು. ಅವನಿಗೆ ಇಂಗ್ಲೀಷರ ಚಟುವಟಿಕೆಗಳಲ್ಲಿ ಸಂದೇಹ ಉಂಟಾಯಿತು. ಇಂಗ್ಲೀಷರು ವಿಶೇಷ ರಿಯಾಯತಿಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದರು. ನವಾಬನ ಅಪ್ಪಣೆ ಪಡೆದುಕೊಳ್ಳದೆ ಕೋಟೆಗಳನ್ನು ಭದ್ರಪಡಿಸಿಕೊಳ್ಳುತ್ತಿದ್ದರು. ಸಿರಾಜುದ್ದೌಲ ಕೋಪಗೊಂಡು ಇಂಗ್ಲೀಷರ ಮೇಲೆ ಏರಿ ಹೋದನು.

15) ರಣಜಿತಸಿಂಗನನ್ನು ಪಂಜಾಬದ ಸಿಂಹ ಎಂದು ಏಕೆ ಕರೆಯುತ್ತಾರೆ ? 2

ಉತ್ತರ : ರಣಜಿತ್‌ಸಿಂಗನು ಸಿಕ್ಖ ರಾಜ್ಯದ ಸಂಸ್ಥಾಪಕ. ಅವನು ಒಂದು ಸಣ್ಣ ಒಕ್ಕೂಟ ರಾಜ್ಯದ ಮುಖ್ಯಸ್ಥನಾಗಿದ್ದನು. ಜನ್ಮತಃ ಒಬ್ಬ ನಾಯಕ, ಚಾಣಾಕ್ಷ ರಾಜನೀತಿಯ ಎಲ್ಲ ದುರ್ಬಲ ಮತ್ತು ಸ್ವತಂತ್ರ ಸಿಕ್ಖ ರಾಜ್ಯಗಳನ್ನು ಒಂದುಗೂಡಿಸಿ 1801 ರಲ್ಲಿ ಅವನು ಮಹಾರಾಜ ಎಂಬ ಬಿರುದನ್ನು ಧರಿಸಿದನು. ಇವನ ಸಾಹಸವನ್ನು ಕಂಡು ಸಿಖ್ಖರೆಲ್ಲರೂ ಅವನಿಗೆ ಪಂಜಾಬಿನ ಸಿಂಹ ಎಂಬ ಬಿರುದನ್ನು ಕೊಟ್ಟರು.

16) "ರೆಗ್ಯೂಲೇಟಿಂಗ್ ಆ್ಯಕ್ಟಿನ ನ್ಯೂನತೆಗಳೇನು ? 2

ಉತ್ತರಕ್ಕಾಗಿ ಮಾರ್ಚ 1986 ರ B ಭಾಗದ 17ನೇ ಪ್ರಶ್ನೆಯ ಉತ್ತರ ನೋಡಿರಿ.

17) "ಆರ್ಯ ಸಮಾಜದ" ಉದ್ದೇಶಗಳೇನು ? 2

ಉತ್ತರಕ್ಕಾಗಿ ಅಕ್ಟೋಬರ 1986ರ 26ನೇ ಪ್ರಶ್ನೆಯ ಉತ್ತರ ನೋಡಿರಿ.

18) ಆದರ್ಶ (Utopian) ಸಮಾಜವಾದವನ್ನು ವಿವರಿಸಿ. 2

ಉತ್ತರಕ್ಕಾಗಿ ಸೆಪ್ಟೆಂಬರ 1986 ರ 9 ನೇ ಪ್ರಶ್ನೆಯ 3 ನೇ ಉಪಪ್ರಶ್ನೆಗೆ ಉತ್ತರ ನೋಡಿರಿ.

19) ಸ್ವರಾಜ್ಯ ಪಕ್ಷದ ನಾಯಕರು ಯಾರು ? ಈ ಪಕ್ಷದ ನೀತಿ ಯಾವುದಾಗಿತ್ತು ? 2

ಉತ್ತರಕ್ಕಾಗಿ ಮಾರ್ಚ 1986 ರ "ಬಿ" ಭಾಗದ 16ನೇ ಪ್ರಶ್ನೆ ಉತ್ತರ ನೋಡಿರಿ.

20) "ಪ್ರಾದೇಶಿಕ" ಸೈನ್ಯದ ಕಾರ್ಯಗಳೇನು ? 2

ಉತ್ತರ : 1) ನಿಯತ ಸೈನ್ಯವನ್ನು ಅದರ ಸಾಮಾನ್ಯ ಕರ್ತವ್ಯಗಳಿಂದ ಬಿಡುಗಡೆ ಮಾಡುವದು. 2) ನೈಸರ್ಗಿಕ ಆಪತ್ತು

ಗಳ ಸಮಯದಲ್ಲಿ ಪೌರ ಅಧಿಕಾರಿಗಳಿಗೆ ಸಹಾಯ ನೀಡುವದು. 3) ತುರ್ತುಪರಿಸ್ಥಿತಿಯ ವೇಳೆಯಲ್ಲಿ ಅತ್ಯವಶ್ಯ ಸೇವಾ ವಿಭಾಗಗಳನ್ನು ನಿರ್ವಹಿಸುವದು. 4) ಅವಶ್ಯಕತೆ ಬಿದ್ದಾಗ ನಿಯತ ಸೈನ್ಯಕ್ಕೆ ಸೈನಿಕ ವಿಭಾಗಗಳನ್ನು ಒದಗಿಸುವದು. ಇವು ಪ್ರಾದೇಶಿಕ ಸೈನ್ಯದ ಕಾರ್ಯಗಳು.

21) ಆಫ್ರಿಕವು ಕಪ್ಪುಖಂಡವೆಂದು ಕರೆಯಲ್ಪಡುತ್ತದೆ? ಅದು ಹೇಗೆ ಬದಲಾವಣೆ ಹೊಂದಿತ್ತು ? 2

ಉತ್ತರ : ಆಫ್ರಿಕದ ಅನೇಕ ಭಾಗಗಳು ಪರಿಶೋಧಿಸಿದೆ ಇದ್ದುದರಿಂದ ಅದನ್ನು ಬಹಳ ಕಾಲದ ವರೆಗೆ ಕಪ್ಪು [ಕತ್ತಲೆಯ] ಖಂಡವೆಂದು ಕರೆಯುತ್ತಿದ್ದರು. ಯುರೋಪಿನ ಸಾಹಸಿಗಳು, ಧರ್ಮ ಪ್ರಚಾರಕರು ವಿಜ್ಞಾನಿಗಳು ಮತ್ತು ಪರಿಶೋಧಕರು ಅದರ ಅಪರಿಮಿತ ಸಾಧನ ಸಂಪತ್ತನ್ನು ಕಂಡುಹಿಡಿದರು. ಯುರೋಪಿಯನ್ನರು ನೆಲಸುನಾಡುಗಳನ್ನು ಸ್ಥಾಪಿಸಿದ್ದರಿಂದ ಬದಲಾವಣೆ ಹೊಂದಿತು.

22) ಭಾರತಕ್ಕೆ "ಅಂತರ್‌ರಾಷ್ಟ್ರೀಯ ಹಣಕಾಸು ಸಂಸ್ಥೆ" [I. M. F.] ಯ ಕೊಡುಗೆಗಳೇನು ? 2

ಉತ್ತರ : 1947 ರಲ್ಲಿ ಭಾರತವು ಅಂತರ್‌ರಾಷ್ಟ್ರೀಯ ಹಣಕಾಸಿನ ನಿಧಿಯ ಸದಸ್ಯ ರಾಷ್ಟ್ರವಾಯಿತು. ತನ್ನ ಅತ್ಯಗತ್ಯ ಅಭಿವೃದ್ಧಿ ಯೋಜನೆಗೆ 1961 ರ ಡಿಶೆಂಬರ ತನಕ 373 ಕೋಟಿ ರೂಪಾಯಿಗಳನ್ನು ನಿಧಿಯಿಂದ ಸಾಲಪಡೆಯಲು ಸಾಧ್ಯವಾಯಿತು ತನ್ನ ದೇಶದ ಆರ್ಥಿಕ ವ್ಯವಸ್ಥೆಯ ಸ್ಥಿತಿಗತಿಯನ್ನು ಸ್ಥಿರಗೊಳಿಸಲು ಅಂತರ್‌ರಾಷ್ಟ್ರೀಯ ಹಣಕಾಸು ನಿಧಿಯ ಪರಿಣಿತರ ಸಹಾಯವನ್ನು ಭಾರತವು ಪಡೆದಿದೆ. ನಿಧಿಯ ಸದಸ್ಯತ್ವದಿಂದ ವಿಶ್ವ ಬ್ಯಾಂಕಿನ ಸದಸ್ಯತ್ವ ಪಡೆದಿದೆ. ಕೃಷಿ, ಕೈಗಾರಿಕೆ, ವಿದ್ಯುಚ್ಛಕ್ತಿ, ದೂರ ವಾರ್ತಾಸಂತಿ, ಬಂದರುಗಳು ಮತ್ತು ಅಕಾಶಯಾನದ ವಿವಿಧ ಯೋಜನೆಗಳಿಗೆ ದೀರ್ಘಕಾಲಾವಧಿಯ ಸಹಾಯನೀಡುವ ಮೂಲಕ ವಿಶ್ವಬ್ಯಾಂಕ ಭಾರತಕ್ಕೆ ಸಹಾಯ ಮಾಡುತ್ತದೆ.

23) ಇರಾಣದ ರೆಝಾ ಷಾನ ಎರಡು ಸಾಧನೆಗಳನ್ನು ತಿಳಿಸಿರಿ.

ಉತ್ತರಕ್ಕಾಗಿ ಅಕ್ಟೋಬರ 198 ಪ್ರಶ್ನೆ VIII ರ ಉಪಪ್ರಶ್ನೆ 3 ರ ಉತ್ತರ ನೋಡಿರಿ.

ಡ. ಕೆಳಗಿನ ಪ್ರಶ್ನೆಗಳಿಗೆ ಉತ್ತರವು ಆರು ವಾಕ್ಯಗಳಿಗೆ ಮೀರದಂತಿರಲಿ.

24) ಮುಸಲೋನಿಯ ಸಾಧನಗಳೇನು ? 3

ಉತ್ತರಕ್ಕಾಗಿ ಅಕ್ಟೋಬರ 1985 ಪ್ರಶ್ನೆ VII ರ ಉತ್ತರ ನೋಡಿರಿ.

25) ರಾಷ್ಟ್ರಗಳ ಒಕ್ಕೂಟದ [League of Nations] ಧ್ಯೇಯೋದ್ದೇಶಗಳೇನು ? 3

ಉತ್ತರಕ್ಕಾಗಿ ಮಾರ್ಚ 1986 ರ C ವಿಭಾಗದ 25 ನೇ ಪ್ರಶ್ನೆಯ ಉತ್ತರ ನೋಡಿರಿ.

26) ಸ್ಟಾಲಿನ್ನನ ಸಾಧನೆಗಳೇನು ?

ಉತ್ತರಕ್ಕಾಗಿ ಎಪ್ರಿಲ್ 1985 ರ (IV) 1 ಪ್ರಶ್ನೆಯ ಉತ್ತರ ನೋಡಿರಿ.

27) ಗಡಿಭದ್ರತಾ ಪಡೆಯ ಕರ್ತವ್ಯಗಳನ್ನು ತಿಳಿಸಿ. 3

ಉತ್ತರ : ಗಡಿಭದ್ರತಾ ಪಡೆಯು 1965 ರಲ್ಲಿ ಅಸ್ತಿತ್ವಕ್ಕೆ ಬಂದಿತು. ಶಾಂತಿ ಸಮಯದಲ್ಲಿ ನಮ್ಮ ಗಡಿಗಳನ್ನು ರಕ್ಷಿಸುವದು ಇದರ ಮುಖ್ಯ ಕೆಲಸ ಯುದ್ಧದ ಸಮಯದಲ್ಲಿ ಯುದ್ಧ ರೇಖೆಯ ಹಿಂದುಗಡೆ ಕಾನೂನು ಮತ್ತು ಶಿಸ್ತನ್ನು ಕಾಪಾಡುವದರಲ್ಲಿ ಸೈನ್ಯಕ್ಕೆ ನೆರವಾಗುವದು. ಅದಕ್ಕೆ ಕೆಲವು ನಿಯತ ಕರ್ತವ್ಯಗಳಿವೆ.

1) ಸೈನ್ಯೋದ್ದೇಶಗಳಿಗಾಗಿ ಸುದ್ದಿ ಸಂಗ್ರಹಿಸುವದು
2) ಶತ್ರುವಿನ ಆಕ್ರಮಣದಿಂದ ಪ್ರಾಣ ಮತ್ತು ಆಸ್ತಿಪಾಸ್ತಿಗಳನ್ನು ಸಂರಕ್ಷಿಸುವದು.
3) ಶತ್ರುವಿನ ಕಡೆಯಿಂದ ಕಳ್ಳ ಸಾಗಾಣೆ ಮತ್ತು ನುಸುಳಿ ಬರುವದನ್ನು ತಡೆಯುವದು.
4) ಸಣ್ಣ ಪ್ರಮಾಣದ ಆಕ್ರಮಣದಿಂದ ರಾಷ್ಟ್ರವನ್ನು ರಕ್ಷಿಸುವದು. ಮುಷ್ಕರ, ಪ್ರವಾಹ ಮತ್ತು ಚುನಾವಣೆಗಳ ಸಮಯದಲ್ಲಿ ಗಡಿ ಭದ್ರತಾಪಡೆಯು ಉಪಯುಕ್ತ ಸೇವೆಯನ್ನು ಸಲ್ಲಿಸುತ್ತದೆ.

ಇ. ಕೆಳಗಿನ ಪ್ರಶ್ನೆಗಳಿಗೆ ಉತ್ತರಗಳು ಒಂದು ಪುಟಕ್ಕೆ ಮೀರದಂತಿರಲಿ

28) 1942 ರ ಆಂದೋಲನವು ವಿಫಲವಾಗಲು ಕಾರಣಗಳೇನು? ಉತ್ತರಕ್ಕಾಗಿ ಎಪ್ರಿಲ್ 1985 ರ III (5) ಪ್ರಶ್ನೆಯ ಉತ್ತರ ನೋಡಿರಿ 5

29) ಸಂಯುಕ್ತ ರಾಷ್ಟ್ರ ಸಂಘದ ಕೆಳಗಿನ ಸಂಸ್ಥೆಗಳು ಭಾರತಕ್ಕೆ ನೀಡಿದ ಸೇವೆಗಳೇನು ?

i) ವಿಶ್ವಸಂಸ್ಥೆಯ ಅಂತರ್‌ರಾಷ್ಟ್ರೀಯ ಮಕ್ಕಳ ತುರ್ತು ನಿಧಿ [UNICEF]

ii) ಆಹಾರ ಮತ್ತು ಕೃಷಿ ಸಂಸ್ಥೆ [FAO]

ಉತ್ತರ : i] ವಿಶ್ವಸಂಸ್ಥೆಯ ಅಂತರ್‌ರಾಷ್ಟ್ರೀಯ ಮಕ್ಕಳ ತುರ್ತುನಿಧಿ 1] 1949 ರಲ್ಲಿ ಭಾರತಕ್ಕೆ 150 ಟನ್ನುಗಳ ಹಾಲಿನ ಪುಡಿ ನೀಡಿ ಸಹಾಯ ಸಲ್ಲಿಸಿದೆ. 2) ಮಲೇರಿಯ, ಕ್ಷಯ, ಕುಷ್ಟ, ಕಣ್ಣಿನ ರೋಗಗಳಿಗೆ ಔಷಧಿಗಳು, ಲಸಿಕೆಗಳನ್ನು ಒದಗಿಸಿದೆ. 3) ಗ್ರಾಮಗಳಲ್ಲಿ ಪುಷ್ಟಿದಾಯಕ ಆಹಾರದ ಬಗೆಗಿನ ಪ್ರದರ್ಶನಗಳಿಗಾಗಿ ಆಹಾರ ಉತ್ಪಾದನೆಯ ಬೀಜಗಳು, ತೋಟದ ಸಲಕರಣೆಗಳು, ಮೀನು ಬಲೆಗಳು, ಮತ್ತು ಕೋಳಿ

ಸಾಕಾಣಿಕೆಯ ಸಲಕರಣೆಗಳನ್ನು ಒದಗಿಸಿದೆ. 4) ಭೂಜಲದ ಬಳಕೆಗಾಗಿ ಕೊಳವೆ ಭಾವಿಗಳನ್ನು ಕೊರೆಯುವ ಯಂತ್ರಗಳು, ಮತ್ತು ಧನ ಸಹಾಯವನ್ನು ಒದಗಿಸಿದೆ. 5) ಮಾಧ್ಯಮಿಕ, ತರಬೇತಿ ಕಾಲೇಜ ಮತ್ತು ಪ್ರಾಥಮಿಕ ಶಾಲೆಗಳಿಗೆ ವೈಜ್ಞಾನಿಕ ಸಲಕರಣೆಗಳನ್ನು ಒದಗಿಸುತ್ತದೆ 6) ಶಾಲಾ ವೈಜ್ಞಾನಿಕ ಸಂಟಗಳನ್ನು [School Science kits] ಮತ್ತು ವೈಜ್ಞಾನಿಕ ಪಠ್ಯ ಪುಸ್ತಕಗಳಿಗಾಗಿ ಮುದ್ರಣ ಕಾಗದವನ್ನು ಸರಬರಾಜು ಮಾಡುತ್ತದೆ.

ii) ಆಹಾರ ಮತ್ತು ಕೃಷಿ ಸಂಸ್ಥೆಯು ಭಾರತದಲ್ಲಿ ನಿರ್ವಹಿಸುತ್ತಿರುವ ಕಾರ್ಯಗಳು ಅಸಂಖ್ಯಾತವಾಗಿವೆ. 1) ಹೈದರಾಬಾದಿನಲ್ಲಿರುವ ಸಸ್ಯಸಂರಕ್ಷಣಾ ತರಬೇತಿ ಸಂಸ್ಥೆಗೆ ಸಹಾಯ ನೀಡಿದೆ. 2) ಫರೀದಾಬಾದಿನಲ್ಲಿ ಮಾರುಕಟ್ಟೆ ಯೋಜನೆ ಮತ್ತು ವಿನ್ಯಾಸ ಕೇಂದ್ರವೊಂದನ್ನು ಸ್ಥಾಪಿಸಲಾಗಿದೆ. 3) ಭಾರತದ ಹುಲ್ಲುಗಾವಲು ಮತ್ತು ಮೇವಿನ ಸಂಶೋಧನಾ ಸಂಸ್ಥೆ ಮತ್ತು ಎಂಟು ವಲಯ ಪ್ರದರ್ಶನ ಸಂಸ್ಥೆಗಳು ಆಹಾರ ಮತ್ತು ಕೃಷಿ ಸಂಸ್ಥೆಯ ಸಹಾಯ ಪಡೆದಿವೆ 4) ಕಾಶ್ಮೀರದ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಕಾರ್ಯಕ್ರಮಗಳು ಸಹಾಯ ಪಡೆದಿವೆ. 5) ಹಿಮಾಚಲ ಪ್ರದೇಶದಲ್ಲಿ ಆಣೆಬೆಯ ಉತ್ಪಾದನೆಗೆ ಸಹಾಯ ಮಾಡಿದೆ. 6) ಹಿಮಾಚಲ ಪ್ರದೇಶದಲ್ಲಿ ಸೇಬು ಹಣ್ಣಿನ ಸಂಸ್ಕರಣ ಮತ್ತು ಮಾರುಕಟ್ಟೆ ಯೋಜನೆಗಳಿಗೆ ಸಹಾಯ.

30) ದೇಶ ರಕ್ಷಣೆಗಾಗಿ ಪೌರನು ಯಾವ ಯಾವ ರೀತಿಯಿಂದ ಸಹಾಯ ಸಲ್ಲಿಸಬಲ್ಲನು ? 5

ಉತ್ತರ : i) ಕೃಷಿ ಮತ್ತು ಕೈಗಾರಿಕಾ ಉತ್ಪನ್ನಗಳು ಹೆಚ್ಚುವಂತೆ ಪ್ರತಿಯೊಬ್ಬನೂ ಮನಮುಟ್ಟಿ ದುಡಿಯಬೇಕು.

ii) ಕಳ್ಳ ಸಂತೆಯವರನ್ನು ಲಂಚಕೋರರನ್ನು ನಿರ್ಮೂಲನ ಮಾಡುವಲ್ಲಿ ಸರಕಾರಕ್ಕೆ ನೆರವಾಗುವದು.

iii) ಪ್ರಾದೇಶಿಕ ಸೈನ್ಯಕ್ಕೆ ಸೇರಲಿಕ್ಕೆ ಅರ್ಹರಾದವರೆಲ್ಲರೂ ಇದಕ್ಕೆ ಸೇರಿಕೊಳ್ಳಬೇಕು.

vi) ವಿಮಾನ ದಾಳಿಯಲ್ಲಿ ಕೈಕೊಳ್ಳಬೇಕಾದ ಕ್ರಮಗಳ ಬಗೆಗೆ ತರಬೇತಿ ಪಡೆಯಬೇಕು.

v) ಅಲ್ಲಲ್ಲಿ ನಾಗರಿಕ ರಕ್ಷಣಾ ಸಂಸ್ಥೆಗಳು ನಿರ್ಮಾಣವಾಗಬೇಕು. ಪ್ರಥಮ ಚಿಕಿತ್ಸೆಯಲ್ಲಿ ತರಬೇತು ಪಡೆಯಬೇಕು. ಗಾಯಾಳುಗಳಿಗೆ ರಕ್ತದಾನ ಮಾಡಬೇಕು.

vi) ನಾಗರಿಕ ಸರ್ಕಾರದಿಂದ ಹೆಚ್ಚಿನದನ್ನು ಅಪೇಕ್ಷಿಸಬಾರದು ಅವನು ರಾಷ್ಟ್ರಕ್ಕಾಗಿ ಯಾವದೇ ಕಷ್ಟವನ್ನೇ ಆಗಲಿ ಎದುರಿಸಲು ಸಿದ್ಧನಾಗಬೇಕು. ಸ್ವ-ಸಹಕಾರದ ಮೂಲಕ ರಾಷ್ಟ್ರವನ್ನು ಬಲಪಡಿಸಬೇಕು.

31) ಟರ್ಕಿಯನ್ನು ಆಧುನೀಕರಣಗೊಳಿಸಲು ಕಮಾಲ ಪಾಶಾನ ಕೊಡುಗೆಗಳೇನು ? 5

ಉತ್ತರಕ್ಕಾಗಿ ಸೆಪ್ಟೆಂಬರ 1984 ರ ಪ್ರಶ್ನೆ III [10] ರ ಉತ್ತರ ನೋಡಿರಿ.

...○...

# ಸಮಾಜ ಪಾಠಗಳು

## ಅಕ್ಟೋಬರ್-1987 2 ನೆಯ-ಪತ್ರಿಕೆ

ಅವಧಿ : 2 ಗಂಟೆ ಗುಣಗಳು : 35

1. ಭಾರತದ ಮುಖ್ಯ ಕೈಗಾರಿಕಾ ಪ್ರದೇಶಗಳು (ಕ್ಷೇತ್ರಗಳು) ಯಾವು ?
ಅವುಗಳ ಬೆಳವಣಿಗೆಗೆ ಕಾರಣಗಳನ್ನು ಕೊಡಿರಿ. 4

ಉತ್ತರ : ಭಾರತದಲ್ಲಿ ಪ್ರಪಂಚದ ಎರಡು ಮಹಾಯುದ್ಧಗಳ ಕಾಲದಲ್ಲಿ ಅನೇಕ ಕೈಗಾರಿಕೆಗಳು ಸ್ಥಾಪಿತವಾದವು.

ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಯು ಆಧುನಿಕ ಕೈಗಾರಿಕೆಯ ಆರ್ಥಿಕ ಬೆನ್ನೆಲುವಾಗಿದೆ. ಸ್ವಾತಂತ್ರ್ಯಕ್ಕೆ ಮೊದಲು-ಬಿಹಾರದ ಜಮಶೆಡ್‌ಪುರದ ಟಾಟಾರವರ ಕಾರ್ಖಾನೆ, ಬಂಗಾಲದ ಬರ್ನಾಪುರದ ಕಬ್ಬಿಣ ಮತ್ತು ಉಕ್ಕಿನ ಕಂಪನಿ ಮತ್ತು ಭದ್ರಾವತಿಯಲ್ಲಿ ವಿಶ್ವೇಶ್ವರಯ್ಯ ಮತ್ತು ಉಕ್ಕಿನ ಕಾರ್ಖಾನೆ, ಪಂಚವಾರ್ಷಿಕ ಯೋಜನೆಗಳ ನಂತರ ರೂರ್ಕೆಲಾ (ಓರಿಸ್ಸಾ), ಭಿಲೈ [ಮಧ್ಯಪ್ರದೇಶ], ದುರ್ಗಾಪುರ [ಪಶ್ಚಿಮ ಬಂಗಾಳ] ಬೊಕಾರೊ [ಬಿಹಾರ]ಗಳಲ್ಲಿ ನಾಲ್ಕು ಹೊಸ ಕಬ್ಬಿಣದ ಕಾರ್ಖಾನೆಗಳು ಸ್ಥಾಪಿತವಾಗಿವೆ. ಇಲ್ಲಿ ಕೈಗಾರಿಕೆಗಳು ಅಭಿವೃದ್ಧಿ ಹೊಂದಲು 1] ಖನಿಜಗಳ ನಿಕ್ಷೇಪ b] ಸಂಚಾರ ಸೌಲಭ್ಯ c] ಬಂದರುಗಳು d) ಕಚ್ಚಾಮಾಲು ಈ ಸೌಲಭ್ಯಗಳಿವೆ.

ಮುಂಬೈ ಅಹಮ್ಮದಾಬಾದ ಕ್ಷೇತ್ರದಲ್ಲಿ ಹತ್ತಿ ಬೆಳೆಯುವದರಿಂದ ಬಟ್ಟೆ ಕೈಗಾರಿಕೆಗಳು ಬೆಳೆದಿವೆ- ಮುಂಬೈ, ಅಹಮ್ಮದಾಬಾದ, ಸೂರತ್, ಬರೋಡ್, ಸೋಲಾಪುರಗಳಲ್ಲಿ ಕೇಂದ್ರೀಕೃತವಾಗಿವೆ. ಕರ್ನಾಟಕದಲ್ಲಿಯೂ ಹತ್ತಿಗಿರಣಿಗಳಿವೆ.

ಗಂಗಾನದಿಯ ಮಧ್ಯಬಯಲು ಅನೇಕ ಕೈಗಾರಿಕೆಗಳ ಕೇಂದ್ರವಾಗಿದೆ- ಕಬ್ಬು ಕಚ್ಚಾಮಾಲು- ಉತ್ತಮ ಸಾರಿಗೆ ಸೌಕರ್ಯ ಮತ್ತು ಜನಸಾಂದ್ರತೆ ಕೈಗಾರಿಕೆಗಳ ಬೆಳವಣಿಗೆಗೆ ಕಾರಣಗಳಾಗಿವೆ. ಇಲ್ಲಿಯ ಕೈಗಾರಿಕಾ ಕೇಂದ್ರಗಳು, ಲುಧಿಯಾನಾ, ಅಂಬಾಲಾ, ಕಾನಪುರ, ವಾರಣಾಸಿ, ಗೋರಖಪುರ. ಪಶ್ಚಿಮ ಬಂಗಾಳದಲ್ಲಿ ಸೆಣಬನ್ನು ವಿಶೇಷವಾಗಿ ಬೆಳೆಯುತ್ತಾರೆ. ಆದ್ದರಿಂದ ಅಲ್ಲಿ ಸೆಣಬಿನ ಕಾರ್ಖಾನೆಗಳು ವಿಶೇಷವಾಗಿವೆ.

ರಾಸಾಯನಿಕ ಪದಾರ್ಥಗಳ ಉತ್ಪಾದನೆ ಭಾರತದಲ್ಲಿ ಹೆಚ್ಚಾಗಿದೆ. ಮುಂಬೈ, ಕಲ್ಕತ್ತ, ದೆಹಲಿ ಮತ್ತು ಮದ್ರಾಸು ಗಳಲ್ಲಿ ರಾಸಾಯನಿಕ ಪದಾರ್ಥಗಳನ್ನು ತಯಾರಿಸುತ್ತಾರೆ. ಗಣಿ ಕೈಗಾರಿಕೆ ಕೋಲಾರದಲ್ಲಿ ಚಿನ್ನ ಮತ್ತು ಬಿಹಾರದ ರಾಣಿಗಂಜ್ ಮತ್ತು ಸಿಂಗ್‌ಭಂಗಗಳಲ್ಲಿ ಕಲ್ಲಿದ್ದಲು ಗಣಿ ಕೈಗಾರಿಕೆ ಅಭಿವೃದ್ಧಿ ಯಾಗಿದೆ. ದಕ್ಷಿಣ ಭಾರತದಲ್ಲಿ ಕೈಗಾರಿಕಾ ಕೇಂದ್ರಗಳು—ಬೆಂಗಳೂರು, ಮದ್ರಾಸ್, ಮುಂಬೈ ಮತ್ತು ಕೊಯಿಮತ್ತೂರು

ಅಥವಾ

ಜನಸಂಖ್ಯೆಯ ಹಂಚಿಕೆಯು ಸಮಾನವಾಗಿ ಆಗದಿರುವ ದಕ್ಕೆ ಕಾರಣವಾದ ನಾಲ್ಕು ಅಂಶಗಳನ್ನು ಚರ್ಚಿಸಿರಿ.

ಉತ್ತರಕ್ಕಾಗಿ ಎಪ್ರಿಲ್ 1984 ಪ್ರಶ್ನೆ I (ಅಥವಾ) ಇದರ ಉತ್ತರ ನೋಡಿರಿ.

II. ರೇವು ಪಟ್ಟಣಗಳ ಅಭಿವೃದ್ಧಿಗೆ ಅಗತ್ಯವಾದ ಸೌಲಭ್ಯ ಗಳು ಯಾವವು ? 4

ಉತ್ತರಕ್ಕಾಗಿ ಎಪ್ರಿಲ್ 1987 ರ ಪ್ರಶ್ನೆ III [2] ರ ಉತ್ತರ ನೋಡಿರಿ.

ಅಥವಾ

ದೇಶದ ಆರ್ಥಿಕ ಅಭಿವೃದ್ಧಿಗೆ ಕೈಗಾರಿಕೆಗಳು ಹೇಗೆ ಸಹಾಯವಾಗಿವೆ ?

ಉತ್ತರಕ್ಕಾಗಿ ಅಕ್ಟೋಬರ 1985 ಪ್ರಶ್ನೆ I ಅಥವಾ ನೋಡಿರಿ.

III. ಇವುಗಳಿಗೆ ನಾಲ್ಕು ವಾಕ್ಯಕ್ಕೆ ಮೀರದಂತೆ ಉತ್ತರಿಸಿರಿ.

1] ಸುಯೇಜ ಕಾಲುವೆಯಿಂದ ಜೋಡಿಸಲ್ಪಟ್ಟ ಎರಡು ಸಮುದ್ರಗಳನ್ನು ಹೆಸರಿಸಿರಿ.

ಉತ್ತರ : ಕೆಂಪು ಸಮುದ್ರ ಮತ್ತು ಮೆಡಿಟರೇನಿಯನ್ [ಭೂಮಧ್ಯ] ಸಮುದ್ರ.

2[ ಕೈಗಾರಿಕಾ ನಗರಗಳ ಸಮಸ್ಯೆಗಳಾವವು ? 2

ಉತ್ತರಕ್ಕಾಗಿ ಅಕ್ಟೋಬರ 1984 ರ III [2] ರ ಉತ್ತರ ನೋಡಿರಿ.

3] "ಟೆಲಿವ್ಹಿಜನ್" [ದೂರದರ್ಶನ] ದಿಂದಾಗುವ ಅನ್ನು ಕೂಲತೆಗಳನ್ನು ವಿವರಿಸಿರಿ. 2

ಉತ್ತರಕ್ಕಾಗಿ ಎಪ್ರಿಲ್ 1985 ಪ್ರಶ್ನೆ III [4] ರ ಉತ್ತರ ನೋಡಿರಿ.

4] ಹಿಮಾಲಯ ಪರ್ವತದಿಂದಾಗುವ ಎರಡು ಪ್ರಯೋಜನಗಳನ್ನು ಹೇಳಿರಿ. 2

ಉತ್ತರ : ಹಿಮಾಲಯ ಪರ್ವತ ಇರದಿದ್ದರೆ ಭಾರತ ಒಂದು ಮರಭೂಮಿ ಆಗುತ್ತಿತ್ತು.

1] ಉತ್ತರದಿಂದ ಬೀಸುವ ಚಳಿಗಾಳಿಗಳನ್ನು ತ[ಡೆ] ಯುತ್ತದೆ.

2] ನೈಋತ್ಯ ಮಾನ್ಸೂನ ಗಾಳಿಗಳನ್ನು ತಡೆದು ಮ[ಳೆ] ಯನ್ನು ಒದಗಿಸುತ್ತದೆ. ಗಂಗಾ, ಯಮುನಾ, ಬ್ರಹ್ಮಪುತ್ರಾ, ಸಿಂಧೂ ನದಿಗಳು ಹರಿಯ[ಲು] ಕಾರಣವಾಗಿದೆ.

5] ಕರ್ನಾಟಕದಲ್ಲಿ ಸಿಮೆಂಟ್ ಕಾರ್ಖಾನೆಗಳಿ[ರುವ] ಪ್ರದೇಶಗಳನ್ನು ಹೆಸರಿಸಿರಿ.

ಉತ್ತರ . ಶಿವಮೊಗ್ಗ ಜಿಲ್ಲೆಯಲ್ಲಿರುವ ಭದ್ರಾವತಿ, ತುಮಕೂರ ಜಿಲ್ಲೆಯಲ್ಲಿರುವ "ಅಮ್ಮಸಂದ್ರದಲ್ಲಿ" ದೊಡ್ಡ ಸಿಮೆಂಟು ಕಾರ್ಖಾನೆಗಳಿವೆ.

IV. ಸೂಕ್ತ ಕಾರಣ ಕೊಡಿರಿ

1] ಧೃವ ಪ್ರದೇಶದಲ್ಲಿ ಕಾರ್ಖಾನೆಗಳು ಸ್ಥಾಪಿಸಲ್ಪ ಟ್ಟಿಲ್ಲ. 1

ಉತ್ತರ : ಯಾಕೆಂದರೆ ಧೃವ ಪ್ರದೇಶಗಳಲ್ಲಿ ಯಾವಾ ಗಲೂ ಹಿಮ ಬಿದ್ದಿರುತ್ತದೆ. ಕಾರ್ಖಾನೆಗಳನ್ನು ಸ್ಥಾ[ಪಿ] ಸಲು ಬೇಕಾದ ಕಚ್ಚಾಮಾಲು, ಸಾರಿಗೆ ಸಂಪರ್ಕ ಅನು ಕೂಲತೆ, ಜನಸಾಂದ್ರತೆ ಅಲ್ಲಿ ದೊರೆಯುವದಿಲ್ಲ.

2] ಕಲ್ಕತ್ತಾ ಉತ್ತಮವಾದ ರೇವು ಪಟ್ಟಣಕ್ಕೆ ಉದಾ[ಹ] ಹರಣೆಯಾಗಿದೆ. 1

ಉತ್ತರ : ಯಾಕಂದರೆ ಕಲ್ಕತ್ತಾ ಬಂದರದ ಹಿನ್ನಾಡಿ ನಲ್ಲಿ ಚಹಾ, ಸೆಣಬು, ಸಿದ್ಧವಸ್ತುಗಳು, ಮೈಕಾ, ಕಲ್ಲಿ ದ್ದಲು, ಕಬ್ಬಿಣ, ಸಂಚಾರ ಸೌಕರ್ಯ, ಅಂತರ ರಾಷ್ಟ್ರೀಯ ಸಂಪರ್ಕ—ಎಂಜನೀಯರಿಂಗ ಸಾಮಗ್ರಿಗಳ ಉತ್ಪಾದನೆ. ಆದ್ದರಿಂದ ಇದು ಉತ್ತಮವಾದ ರೇವು ಪಟ್ಟಣ.

3) ಹೈನುಗಾರಿಕೆ ಡೆನ್ಮಾರ್ಕದ ಮುಖ್ಯ ಕೈಗಾರಿಕೆ ಯಾಗಿದೆ. 1

ಉತ್ತರಕ್ಕಾಗಿ ಎಪ್ರಿಲ್ 1984 ರ ಪ್ರಶ್ನೆ IV [1] ರ ಉತ್ತರ ನೋಡಿರಿ.

4] ಗಂಗಾನದಿಯ ಬಯಲು ಹೆಚ್ಚು ಜನಸಾಂದ್ರತೆಗೆ ಹೆಸರುವಾಸಿಯಾಗಿದೆ. 1

ಉತ್ತರಕ್ಕಾಗಿ ಎಪ್ರಿಲ್ 1985 ರ ಪ್ರಶ್ನೆ IV [2] ರ ಉತ್ತರ ನೋಡಿರಿ.

5] ದಕ್ಷಿಣ ಭಾರತದಲ್ಲಿ ಹೇಳಿಕೊಳ್ಳುವಂತ ಜಲಮಾರ್ಗ ಗಳಿಲ್ಲ. 1

ಉತ್ತರ : ದಕ್ಷಿಣ ಭಾರತದಲ್ಲಿ ಹರಿಯುವ ನದಿಗಳು ಸಮಾವ

ರಭಸದಿಂದ ಗುಡ್ಡ—ತಿಟ್ಟುಗಳಲ್ಲಿ ಹರಿಯುತ್ತವೆ. ಆವು ಆಳವಾಗಿಲ್ಲ ಬೇಸಿಗೆಯಲ್ಲಿ ಬತ್ತುತ್ತವೆ.

6] ಜಪಾನ್ "ಸೂರ್ಯ ಉದಯಿಸುವ ನಾಡು"ಎಂದು ಕರೆಯಲ್ಪಡುತ್ತದೆ."

ಉತ್ತರ : ಜಪಾನವು ಪ್ರಪಂಚದ ಅತಿಪೂರ್ವದ ದೇಶ. ಸೂರ್ಯನು ಪೂರ್ವದಲ್ಲಿ ಹುಟ್ಟಿ ಪಶ್ಚಿಮದಲ್ಲಿ ಮುಳುಗುತ್ತಾನೆ. ಆದ್ದರಿಂದ ಜಪಾನ್ "ಸೂರ್ಯ ಉದಯಿಸುವ ನಾಡು."

V. A) ಬಿಟ್ಟ ಜಾಗಗಳನ್ನು ತುಂಬಿರಿ.

1) ಭಾರತದಲ್ಲಿ.........ರಾಜ್ಯದಲ್ಲಿ ರಬ್ಬರ್ ಬೆಳೆಯಲಾಗುತ್ತದೆ.

ಉತ್ತರ : ಕೇರಳ.

2) .........ಪ್ರಪಂಚದ ಅತಿ ಎತ್ತರವಾದ ಶಿಖರ.

ಉತ್ತರ : ಗೌರೀಶಂಕರ [ಮೌಂಟ ಎವ್ಹರೆಸ್ಟ).

3) ಸುಯೇಜ್ ಕಾಲುವೆಯನ್ನು.........ರಲ್ಲಿ ರಾಷ್ಟ್ರೀಕರಣ ಮಾಡಲಾಯಿತು.

ಉತ್ತರ : 1956.

4) ......ಸಾಗಾಣಿಕೆಯಲ್ಲಿ ತೀರ ಅಗ್ಗದ ಸಾಧನವಾಗಿದೆ.

ಉತ್ತರ : ಜಲಮಾರ್ಗ.

5) ತಂಪಾದ ಸಮಶೀತೋಷ್ಣ ವಾಯುಗುಣವು........ ಅನುಕೂಲವಾಗಿದೆ.

ಉತ್ತರ : ದುಡಿಮೆಯಲ್ಲಿ ದಕ್ಷತೆಯನ್ನು ಬೆಳೆಸಲು.

6) ಪರಿಣತೆಯು........ಕೈಗಾರಿಕೆಯ ಒಂದು ಲಕ್ಷಣ.

ಉತ್ತರ : ಸಣ್ಣ.

7) ........ಜರ್ಮನಿಯ ಹೆದ್ದಾರಿಗಳು.

ಉತ್ತರ : ಆಟೋಬಾನ್ಸ್

8) ಕಬ್ಬಿಣ ಕರಗಿಸುವದು........ಕೈಗಾರಿಕೆಯಾಗಿದೆ.

ಉತ್ತರ : ಬೃಹತ್.

V. B) ಹೊಂದಿಸಿ ಬರೆಯಿರಿ.

| | A | | B |
|---|---|---|---|
| 1] | ಋಷಿಕೇಶ | a] | ಸೆಣಬು 3 |
| 2] | ಪವರ್‌ಲೂಮ್ | b] | ಸಿಡ್ನಿ 4 |
| 3] | ಪಶ್ಚಿಮ ಬಂಗಾಳ | c] | ಅಮ್ಮಸಂದ್ರ 6 |
| 4] | ಆಸ್ಟ್ರೇಲಿಯಾ | d] | ಆರ್ಕ್‌ರೈಟ್ 2 |
| 5] | ಮೀನಂಬಾಕಮ್ | e] | ಔಷಧಗಳು 1 |
| 6] | ಸಿಮೆಂಟ್ | f] | ಮದ್ರಾಸ 5 |

ಉತ್ತರ : 1] ಋಷಿಕೇಶ [ರಿಶಿಕೇಶ] e] ಔಷಧಗಳು
2] ಪವರ್‌ಲೂಮ್ d] ಆರ್ಕ್‌ರೈಟ್
3] ಪಶ್ಚಿಮ ಬಂಗಾಳ a] ಸೆಣಬು
4] ಆಸ್ಟ್ರೇಲಿಯ b] ಸಿಡ್ನಿ
5] ಮೀನಂಬಾಕಮ್ f] ಮದ್ರಾಸ
6] ಸಿಮೆಂಟ್ c] ಅಮ್ಮಸಂದ್ರ

VI. ಭಾರತದ ನಕ್ಷೆಯನ್ನು ಬರೆದು ಇವುಗಳನ್ನು ತುಂಬಿರಿ.

1] 82|| ಪೂರ್ವ ರೇಖಾಂಶ
2] ಮುಂಬಯಿ
3] ದೆಹಲಿ
4] ಕಾವೇರಿ ನದಿ

...●....

# ಸಮಾಜ ಪಾಠಗಳು

## ಮಾರ್ಚ-1988 1 ನೆಯ ಪತ್ರಿಕೆ

ಗುಣಗಳು : 65

## ( ಚರಿತ್ರೆ ಮತ್ತು ಪೌರನೀತಿ )

A. ಕೆಳಗಿನ ವಾಕ್ಯಗಳಲ್ಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಶಬ್ದಗಳಿಂದ ಭರ್ತಿ ಮಾಡಿರಿ.

1] "ಸಕಲ ಕವಿ ಶಿರೋಮಣಿ" ಎಂದು ಬಿರುದಾಂಕಿತನಾದ ಸುಪ್ರಸಿದ್ಧ ಕವಿ ಹಾಗೂ ನಾಟಕಕಾರ.......... ಆಸ್ಥಾನದಲ್ಲಿದ್ದನು. [ಇಮ್ಮಡಿ ಚಂದ್ರಗುಪ್ತ]

2] ಕದಂಬರ ರಾಜಧಾನಿ.....ಯಾಗಿದ್ದಿತು [ತಲಕಾಡು]

3] ನಗರ ಸಭೆಯ ಮುಖ್ಯಾಧಿಕಾರಿ......(ಆಯುಕ್ತರು ಅಥವಾ ಕಮೀಷನರ)

4] ಹುಡ್ಕೋ (HUDCO) ದ ಗುರಿ ಬಡವರಿಗೆ ......ಒದಗಿಸುವದು [ಮನೆಗಳನ್ನು]

5] ಗಾಂಧಾರ ಕಲೆಯು......ರವರ ಕೊಡುಗೆಯಾಗಿದೆ. [ಕುಶಾನರು]

6] ಶಿವಾಜಿಯ ಕಿರೀಟಧಾರಣ.......ದಲ್ಲಿ.........ಇಸವಿಯಲ್ಲಿ ನಡೆಯಿತು. [ರಾಯಗಡ, 1674ನೇ]

7] ಪ್ರತಿ ಸುಧಾರಣಾ ಚಳುವಳಿಯ ನಾಯಕನು........ [ಇಗ್ನೈಶಿಯಸ್ ಲೋಯಲಾ]

B. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ಪದ ಇಲ್ಲವೇ ಒಂದು ವಾಕ್ಯದಲ್ಲಿ ಬರೆಯಿರಿ.

8] ಯಾವ ಎರಡು ನದಿಗಳ ಕಣಿವೆಗಳಲ್ಲಿ ಮೆಸೊಪೊಟೆಮಿಯಾದ ನಾಗರಿಕತೆ ಬೆಳೆಯಿತು ?

ಉತ್ತರ : ಯೂಪ್ರೆಟೀಸ್ ಮತ್ತು ಟೈಗ್ರಿಸ್ ನದಿಗಳ ಕಣಿವೆ.

9] "ಕವಿರಾಜ ಮಾರ್ಗ"ವನ್ನು ಬರೆದವನು ಯಾರು ? ಅವನು ಯಾವ ವಂಶಕ್ಕೆ ಸೇರಿದವನು.

ಉತ್ತರ : "ಕವಿರಾಜ ಮಾರ್ಗವನ್ನು" ಬರೆದವನು ಅನೋಘ ವರ್ಷ. ಅವನು ರಾಷ್ಟ್ರಕೂಟ ವಂಶಕ್ಕೆ ಸೇರಿದವನು.

10) ಫ್ರೆಂಚ್ ಪಾರ್ಲಿಮೆಂಟನ್ನು ಏನೆಂದು ಕರೆಯುವರು ?

ಉತ್ತರ : ಸ್ಟೇಟ್ಸ್ ಜನರಲ್

11) ಭಾರತೀಯ ಹಾಗೂ ಮುಹಮ್ಮದೀಯ ವಾಸ್ತು ಶಿಲ್ಪದ ಶೈಲಿಗಳ ಸಂಯೋಜನೆಯನ್ನು ಏನೆಂದು ಕರೆಯಲಾಗಿದೆ ?

ಉತ್ತರ : ಇಂಡೋಸರಾಸೆನಿಕ್.

12) ಯಾರನ್ನು "ಭಾರತದ ಪಿತಾಮಹ" ಎಂದು ಕರೆಯುವರು ?

ಉತ್ತರ : ದಾದಾಭಾಯಿ ನವರೋಜಿ.

13) ನಮ್ಮ ಭಾರತ ಸಂವಿಧಾನದ ಪಿತ ಎಂದು ಯಾರನ್ನು ಕರೆಯುತ್ತಾರೆ ?

ಉತ್ತರ : ಡಾ. ಬಿ. ಆರ್. ಅಂಬೇಡಕರ.

C. ಈ ಪ್ರಶ್ನೆಗಳಿಗೆ ಉತ್ತರಗಳು ನಾಲ್ಕು ವಾಕ್ಯಗಳಿಗೆ ಮೀರದಂತಿರಲಿ.

14) ಡೂಪ್ಲೆ ಯಾರು ? ಚಂದಾಸಾಹೇಬನು ಕರ್ನಾಟಕದ ನವಾಬನಾಗಲು ಅವನು ಹೇಗೆ ಸಹಾಯ ಮಾಡಿದನು ?

ಉತ್ತರ : ಡುಪ್ಲೆಯು ಭಾರತದಲ್ಲಿಯ ಫ್ರೆಂಚ್ ಗವ್ಹರ್ನರ. ಕರ್ನಾಟಕದ ಸಿಂಹಾಸಕ್ಕೆ ಅನ್ವರುದ್ದೀನನಿಗೂ ಚಂದಾಸಾಹೇಬನಿಗೂ ಹೋರಾಟ ನಡೆದಾಗ ಧೂರ್ತನಾದ ಡುಪ್ಲೆಯು ಚಂದಾಸಾಹೇಬನೊಡನೆ ಗುಪ್ತ ಒಪ್ಪಂದ ಮಾಡಿಕೊಂಡು ಅನ್ವರುದ್ದೀನನ ಸಂಗಡ ಯುದ್ಧ ಮಾಡಿ ಅವನನ್ನು ಕೊಂದು ಚಂದಾ ಸಾಹೇಬನಿಗೆ ಸಿಂಹಾಸನ ಕೊಡಿಸಿದನು.

15) ಯಾಂಡಬೂ ಕೌಲಿಗೆ ಸಹಿ ಹಾಕಿದವರು ಯಾರು? ಅಂದಿನ ಗೌರ್ನರ ಜನರಲ್ ಯಾರು ?

ಉತ್ತರ : ಯಾಂಡಬೂ ಕೌಲಿಗೆ ಸಹಿ ಹಾಕಿದವರು ಇಂಗ್ಲಿಷರು ಮತ್ತು ಬರ್ಮಿಯರು. ಅಂದಿನ ಗವ್ಹರ್ನರ್ ಜನರಲ್ ಲಾರ್ಡ ಅಮಹರ್ಸ್ಟನ್.

16) "ವೇದಗಳಿಗೆ ಹಿಂತಿರುಗಿ" ಎಂಬುದು ಯಾರ ಸೂತ್ರ ? ಅವರು ಸ್ಥಾಪಿಸಿದ ಸಮಾಜ ಯಾವುದು ?

ಉತ್ತರ : "ವೇದಗಳಿಗೆ ಹಿಂತಿರುಗಿ" ಎಂಬುದು ದಯಾನಂದ ಸರಸ್ವತಿಯವರ ಸೂತ್ರ. ಅವರು ಸ್ಥಾಪಿಸಿದ ಸಮಾಜ— "ಆರ್ಯಸಮಾಜ"

17) 1935 ರ ಶಾಸನವು ಭಾರತ ಸಂವಿಧಾನದ ಇತಿಹಾಸದಲ್ಲಿ ದೊಡ್ಡ ಹೆಜ್ಜೆ ಎಂದು ಏಕೆ ಪರಿಗಣಿಸಲಾಗಿದೆ.

ಉತ್ತರ : 1935 ರ ಶಾಸನವು ಸ್ವತಂತ್ರ ಭಾರತದಲ್ಲಿ ರಚನೆಯಾದ ಭಾರತ ರಾಜ್ಯಾಂಗಕ್ಕೆ ಆಧಾರವಾಗಿ ಪರಿಣಮಿಸಿತು. ಅದು ಸಂವಿಧಾನದ ಯಂತ್ರದ ವಿವರಗಳನ್ನೆಲ್ಲ ಪೂರ್ಣವಾಗಿ ವಿವೇಚಿಸಿತ್ತು. ಅದರಲ್ಲಿ ಅನೇಕ ಲೋಪದೋಷಗಳಿದ್ದಾಗ್ಯೂ ಭಾರತದ ಸಂವಿಧಾನದ ಇತಿಹಾಸದಲ್ಲಿ ಒಂದು ದೊಡ್ಡ ಹೆಜ್ಜೆಯಾಗಿದೆ.

18) ಏಕೆ ನೆಲಸು ನಾಡುಗಳನ್ನು ನೆಲಸುನಾಡಿನ ರಾಷ್ಟ್ರಗಳು ಅಪೇಕ್ಷಿಸಿದವು ?

ಉತ್ತರ : ಪ್ರತಿಯೊಂದು ವಸಹಾತು ರಾಜ್ಯವೂ ಸಾರ್ವಭೌಮ ರಾಜಕೀಯ ಸ್ಥಾಪನೆಗಾಗಿ ಮತ್ತು ಆರ್ಥಿಕ ಶೋಷಣೆಗಾಗಿ ಇಷ್ಟ ಪಟ್ಟವು. ಆದುದರಿಂದ ಅವು ವಸಹಾತುಗಳಿಗಾಗಿ ಆಶಿಪಟ್ಟವು.

19) 1858 ರಲ್ಲಿ ಭಾರತೀಯ ರಾಜರಿಗೆ ಮತ್ತು ಪ್ರಜೆಗಳಿಗೆ ಪುಕಟ ಪತ್ರವನ್ನು ಯಾರು ಘೋಷಿಸಿದರು ? ಇದು ಏನನ್ನು ತಿಳಿಸಿತು.

ಉತ್ತರ : 1858 ನೇ ನವ್ಹೆಂಬರ ಒಂದರಂದು ವಿಕ್ಟೋರಿಯಾ ರಾಣಿಯು ಒಂದು ಪುಕಟ ಪತ್ರವನ್ನು ಘೋಷಿಸಿದಳು. ಅದರ ಪ್ರಕಾರ ಭಾರತೀಯರಿಗೆ ಒಳ್ಳೆಯ ಸರ್ಕಾರವನ್ನು ಕೊಡುವದಾಗಿ ಆಶ್ವಾಸನೆ ಇತ್ತಳು. ಭಾರತೀಯರ ಧಾರ್ಮಿಕ ನಂಬಿಕೆಗಳಲ್ಲಿ ಬ್ರಿಟಿಷ್ ಸರಕಾರ ಕೈಹಾಕುವದಿಲ್ಲವೆಂದು ಘೋಷಿಸಿದಳು.

20) ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಳೆಸಲು ಕೇಂದ್ರ ಲೋಕಸೇವಾ ಆಯೋಗವು ಕಾರ್ಯವನ್ನು ಹೇಗೆ ನಿರ್ವಹಿಸುತ್ತದೆ ?

ಉತ್ತರ : ಕೇಂದ್ರ ಲೋಕಸೇವಾ ಆಯೋಗವು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಕೇಂದ್ರ ಸರ್ಕಾರದ ಇಲಾಖೆಗಳ ಸ್ಥಾನಗಳಿಗೆ ಅಭ್ಯರ್ಥಿಗಳನ್ನು ಆರಿಸುತ್ತದೆ. ಯಾವೊಂದು ಪ್ರಾಂತ್ಯ, ಜಾತಿ, ವರ್ಗ, ಗುಂಪು ಅಥವಾ ಪಕ್ಷಕ್ಕೆ ವಿಶೇಷ ಒಲವು ತೋರಿಸುತ್ತದೆ ಎಂದು ಯಾರೂ ಅನುಮಾನ ಪಡಲು ಕಾರಣವಿಲ್ಲ. ಹೀಗೆ ಈ ಸಂವಿಧಾನಾತ್ಮಕ ಸಂಸ್ಥೆಯು ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಳೆಸುವ ಒಂದು ಪ್ರಮುಖ ಸಾಧನವಾಗಿದೆ.

21) ಜವಾಬ್ದಾರಿ ಪ್ರಜೆಯಾಗಿ ಈ ಸಂದರ್ಭದಲ್ಲಿ ಏನು ಮಾಡುವಿರಿ ?

1) ದೇಶದಲ್ಲಿ ತುರ್ತು ಪರಿಸ್ಥಿತಿ (ಯುದ್ಧ) ಇರುವಾಗ.
2) ವಿಮಾನ ದಾಳಿಯ ವೇಳೆಯಲ್ಲಿ.

ಉತ್ತರ : 1) ದೇಶದಲ್ಲಿ ತುರ್ತು ಪರಿಸ್ಥಿತಿ (ಯುದ್ಧ) ಇರುವಾಗ ನಾಗರಿಕರು ಸಕ್ರಿಯ ಸಹಾಯ ನೀಡಬಹುದು. ಆಹಾರ ಪೂರೈಕೆ, ಆಸ್ತಿಪಾಸ್ತಿಯ ರಕ್ಷಣೆ, ಐಕ್ಯತೆ, ಸಮ ಗ್ರತೆ ಕಾಪಾಡುವದು— ಯುದ್ಧಕ್ಕಾಗಿ ತಮ್ಮ ಅಮೂಲ್ಯ ವಸ್ತುಗಳನ್ನು ಕಾಣಿಕೆಯಾಗಿ ಕೊಡುವದು. ಅವಶ್ಯಬಿದ್ದರೆ ಪ್ರತಿಯೊಬ್ಬನು ಸೈನ್ಯದಳ ಸೇರಲು ಸನ್ನದ್ಧನಿರಬೇಕು. 2) ವಿಮಾನ ದಾಳಿಯ ವೇಳೆ ಕೈಗೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆ ಪ್ರಜೆಗಳಿಗೆ ತರಬೇತಿ ನೀಡಬೇಕು. ಜನರು ಬೆಳಕು ರಹಿತ (Black Outs.) ವೇಳೆಗಳಿಗೆ ಸಿದ್ಧರಾಗಿರಬೇಕು. ವಿಮಾನ ದಾಳಿಯಾದಾಗ ರಕ್ಷಣೆಗಾಗಿ ಧಾವಿಸಬಹುದಾದ ಕ್ಷೇಮಕರ ಸ್ಥಳವೊಂದನ್ನು ಪ್ರತಿಯೊಂದು ಮನೆಯೂ ಹೊಂದಿರಬೇಕು.

22) ವಿಶ್ವಸಂಸ್ಥೆ ಅಂತರರಾಷ್ಟ್ರೀಯ ಮಕ್ಕಳ ತುರ್ತು ನಿಧಿ (UNICEF) ಯಿಂದ ಭಾರತಕ್ಕೆ ಹೇಗೆ ಸಹಾಯ ದೊರಕಿದೆ ?

ಉತ್ತರ : 1) 1949 ರಲ್ಲಿ ಭಾರತಕ್ಕೆ 150 ಟನ್ನುಗಳ ಹಾಲಿನ ಪುಡಿ ನೀಡಿ ಸಹಾಯ ಸಲ್ಲಿಸಿದೆ 2) ಮಲೇರಿಯ, ಕ್ಷಯ, ಕುಷ್ಟ, ಕಣ್ಣಿನ ರೋಗಗಳಿಗೆ ಔಷಧಿಗಳು, ಲಸಿಕೆಗಳನ್ನು ಒದಗಿಸಿದೆ. 5) ಬೀಜಗಳು, ತೋಟದ ಸಲಕರಣೆಗಳು, ಮೀನು ಬಲೆಗಳು ಕೋಳಿ ಸಾಗಾಣಿಕೆಯ ಸಲಕರಣೆಗಳನ್ನು ಒದಗಿಸಿದೆ. 4) ಶಾಲೆ, ಕಾಲೇಜುಗಳಿಗೆ ವೈಜ್ಞಾನಿಕ ಸಲಕರಣೆಗಳನ್ನು ಒದಗಿಸುತ್ತದೆ.

23) ಭಾರತವು 1971 ರಲ್ಲಿ ಬಂಗ್ಲಾದೇಶದ ವಿಷಯದಲ್ಲಿ ಮಧ್ಯ ಪ್ರವೇಶ ಮಾಡುವಂತಾಯಿತು ಕಾರಣವೇನು ? ಪರಿಣಾಮವೇನು ?

ಉತ್ತರ : ವಿಶ್ವ ರಾಜಕೀಯದಲ್ಲಿ ಭಾರತ ಅಲಿಪ್ತ ನೀತಿಯನ್ನು ಅನುಸರಿಸುತ್ತಲಿದೆ. ಆದರೆ ಅದರ ವಿದೇಶ ನೀತಿ ಕ್ರಿಯಾತ್ಮಕ ಅಲಿಪ್ತ ನೀತಿಯಾಗಿದೆ. ವಿಶ್ವಶಾಂತಿಗೆ ಭಂಗ ಬರುವಂತಹ ಘಟನೆಗಳನ್ನು ಭಾರತ ಪ್ರತಿಭಟಿಸುತ್ತದೆ. ಇನ್ನೊಂದು ದೇಶದ ಸ್ವಾತಂತ್ರ್ಯ ರಕ್ಷಣೆಗೆ ಅದು ತನ್ನ ಸಹಾಯ ಸಹಕಾರಗಳನ್ನು ನೀಡುತ್ತಲಿದೆ. ಪಾಕಿಸ್ತಾನ ಬಂಗ್ಲಾದೇಶದ ಸ್ವಾತಂತ್ರ್ಯ ಹರಣಕ್ಕಾಗಿ ಪ್ರಯತ್ನಿಸಿ, ಹಿಂಸಾಚಾರ ನಡೆಸಿದಾಗ ಭಾರತ ಮಧ್ಯ ಪ್ರವೇಶ ಮಾಡಲೇಬೇಕಾಯಿತು. ಇದರ ಪರಿಣಾಮವಾಗಿ ಬಂಗ್ಲಾದೇಶ ಸ್ವತಂತ್ರವಾಯಿತು.

D. ಈ ಪ್ರಶ್ನೆಗಳಿಗೆ ಉತ್ತರಗಳು ಆರು ವಾಕ್ಯಗಳಿಗೆ ಮೀರದಂತಿರಲಿ.

24) ಡಾ. ಅನಿಬಿಸೆಂಟರು ಭಾರತಕ್ಕೆ ಸಲ್ಲಿಸಿರುವ ಸೇವೆಗಳಲ್ಲಿ ನೀವು ಮೆಚ್ಚುವ ಯಾವುದಾದರೂ ಮೂರನ್ನು ತಿಳಿಸಿರಿ.

ಉತ್ತರ : 1) ಭಾರತದಲ್ಲಿ ಕೆಳವರ್ಗದವರ ಸ್ಥಿತಿಗತಿಗಳನ್ನು ಉತ್ತಮ ಪಡಿಸಲು ಪ್ರಯತ್ನಿಸಿದರು. ಆಕೆಯ ನಾಯಕತ್ವದಲ್ಲಿ "ದಿವ್ಯಜ್ಞಾನ" ಸಭೆಯು ಭಾರತದಲ್ಲಿ ಒಂದು ಶಕ್ತಿಯಾಯಿತು. 2) ಬನಾರಸ್ಸಿನಲ್ಲಿ ಕೇಂದ್ರ ಹಿಂದೂ ಶಾಲೆ (Central Hindu School) ಯನ್ನು ಪ್ರಾರಂಭಿಸಿದರು. 3) ಕೆಳಗೆ ತುಳಿಯಲ್ಪಟ್ಟವರನ್ನು ಮೇಲಕ್ಕೆತ್ತಲು ಅವರು ಮಾಡಿದ ನಿಸ್ವಾರ್ಥ ಸೇವೆಯು ಗಮನಾರ್ಹವಾಗಿದೆ. ಸ್ವಾತಂತ್ರ್ಯ ಹೋರಾಟವನ್ನು ತೀವ್ರಗೊಳಿಸಿದ "ಹೋಂರೂಲ್ ಲೀಗ್"ಗೂ ಅವರು ಜವಾಬ್ದಾರರಾಗಿದ್ದಾರೆ.

25) ಲೆನಿನ್ನನು ಜಾರಿಗೆ ತಂದ ಹೊಸ ಆರ್ಥಿಕ ನೀತಿಯು ಆಧುನಿಕ ರಷ್ಯಾ ಕಟ್ಟಲು ಹೇಗೆ ಸಹಾಯಕವಾಯಿತು ?

ಉತ್ತರ : Ref Q C (28)
March 1986 2 ನೇ ಪ್ಯಾರಾ ಮಾತ್ರ ಓದಿರಿ.

26) ಸ್ವತಂತ್ರ ಭಾರತ ವಿಭಜನೆಯಿಂದ ಎದುರಿಸಬೇಕಾದ ಯಾವುದಾದರೂ ಮೂರು ಸಮಸ್ಯೆಗಳನ್ನು ತಿಳಿಸಿರಿ. ಅವುಗಳನ್ನು ಹೇಗೆ ಪರಿಹರಿಸಲಾಯಿತು ?

ಉತ್ತರ : i) ನಿರಾಶ್ರಿತರ ಸಮಸ್ಯೆ ii) ಹೊಸ ರಾಜ್ಯಾಂಗವನ್ನು ರಚಿಸುವದು. iii) ರಕ್ಷಣಾ ಸಮಸ್ಯೆ 1) ವಿಭಜನೆಯಿಂದ ಗಡಿಪ್ರದೇಶಗಳಲ್ಲಿ ವಾಸಿಸುತ್ತಿದ್ದ ಅಲ್ಪ ಸಂಖ್ಯಾತ ಕೋಮಿನವರು ತಮ್ಮ ಮೇಲೆ ನಡೆದ ದುಷ್ಕರ್ಮಗಳ ಪರಿಣಾಮದಿಂದ ನಿರಾಶ್ರಿತರಾಗಿ ತಮ್ಮ ಮನೆಗಳನ್ನು ತೊರೆದು ಭಾರತಕ್ಕೆ ಬಂದರು. ಸರಕಾರ ಪ್ರಯತ್ನ ಮಾಡಿ ಅವರಿಗೆ ಪುನರ್ವಸತಿ ಕಲ್ಪಿಸಿಕೊಟ್ಟಿತು. ii) ಎರಡನೆಯದಾಗಿ ಒಂದು ಹೊಸ ರಾಜ್ಯಾಂಗವನ್ನು ತಯಾರಿಸಬೇಕಿತ್ತು. ರಾಜ್ಯಾಂಗ ಸಭೆಯು ಮೂರು ವರ್ಷ ಕೆಲಸ ಮಾಡಿತು. ರಾಜೇಂದ್ರ ಪ್ರಸಾದರ ಅಧ್ಯಕ್ಷತೆಯಲ್ಲಿನ ರಾಜ್ಯಾಂಗ ರಚನಾ ಸಭೆಯು 1949 ರ ನವಂಬರ್‌ನಲ್ಲಿ ರಾಜ್ಯಾಂಗಕ್ಕೆ ಅಂತಿಮರೂಪ ಕೊಟ್ಟಿತು. iii) ರಕ್ಷಣಾ ಸಮಸ್ಯೆ ಹೊಸ ರಾಜ್ಯ ಪಾಕಿಸ್ತಾನದ ರಚನೆಯಿಂದ ಇಂಡಿಯಾದ ವಾಯುವ್ಯ ಸರಹದ್ದುಗಳು ಭೇದ್ಯವಾಗುವಂತಹುಗಳಾಗಿದ್ದವು. 15200 ಕಿ. ಮೀ. ಗಳಷ್ಟು ಭೂಸರಹದ್ದು, 5700 ಕಿ. ಮಿ. ಸಮುದ್ರ ತೀರ ಮತ್ತು 3800 ಕಿ. ಮೀ.ಗಳಷ್ಟು ಹಿಮಾಲಯದ ಸರ

ಹದ್ದು ವಿದೇಶೀ ದಾಳಿಗಳಿಂದ ರಕ್ಷಿಸಲ್ಪಡಬೇಕಾಗಿತ್ತು ಕ್ರಮೇಣ ಭಾರತ ಸರಕಾರವು ರಕ್ಷಣಾ ಸಾಮುಗ್ರಿಗಳನ್ನು ಹೆಚ್ಚಿಸಿತಲ್ಲದೆ ತರಬೇತಿ ಪಡೆದ ಸಿಬ್ಬಂದಿ ಪಡೆಯಲು ಪ್ರಯತ್ನಿಸಿತು.

27) ಭಾರತದ ವಿದೇಶಾಂಗ ನೀತಿಯನ್ನು ಏನೆಂದು ಕರೆಯುವರು ? ಆದರ ಪ್ರಮುಖ ಶಿಲ್ಪಿ ಯಾರು ? ಅದು ಭಾರತಕ್ಕೆ ಹೇಗೆ ಸಹಾಯ ಮಾಡುತ್ತದೆ.

ಉತ್ತರ : Ref Q No III [1] of April 1984.

E. ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಗಳು ಒಂದೂವರೆ ಪುಟಕ್ಕೆ ಮೀರದಂತಿರಲಿ.

28) 1857 ರ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವನ್ನು ಕೆಳಕಂಡ ಅಂಶಗಳಿಂದ ವಿವರಿಸಿ.

1) ರಾಜಕೀಯ ಮತ್ತು ಸೈನಿಕ ಕಾರಣಗಳು 2) ದಂಗೆಯು ವಿಫಲವಾಗಲು ಕಾರಣವೇನು ?

ಉತ್ತರ : Ref Q No 28 of Oct, 1986 ಮತ್ತು ಕೆಳಗಿನ ಉತ್ತರ ಓದಿರಿ.

ಸೈನಿಕ ಕಾರಣಗಳು ಬ್ರಿಟಿಶ್ ಸೈನ್ಯದಲ್ಲಿದ್ದ ಭಾರತೀಯ ಸಿಪಾಯಿಗಳಲ್ಲಿ ಅಸಂತೃಪ್ತಿ ಮೂಡಿತ್ತು. ಇಂಗ್ಲೀಷರಿಗೆ ಕೊಡುವಂತೆ ಅವರಿಗೆ ಚೆನ್ನಾಗಿ ಸಂಬಳ ಕೊಡುತ್ತಿರಲಿಲ್ಲ. ಬಡ್ತಿಗಳು ಇಂಗ್ಲಿಷರಿಗಷ್ಟೇ ಮೀಸಲಾಗಿದ್ದವು. 1856 ರ ಶಾಸನದಿಂದ ಎಲ್ಲ ಸಿಪಾಯಿಗಳೂ ಎಲ್ಲಿಗೆ ವರ್ಗಾಯಿಸಿದರೆ, ಅಲ್ಲಿಗೆ, ಕೆಲವು ವೇಳೆ ಸಮುದ್ರದಾಚೆಗೂ, ಹೋಗುವದು ಕಡ್ಡಾಯವಾಯಿತು. ಇದರಿಂದ ಸಿಪಾಯಿಗಳಿಗೆ ಬಹಳ ನೋವುಂಟಾಯಿತು. ಏಕೆಂದರೆ ಆ ಕಾಲದಲ್ಲಿ ಸಮುದ್ರ ಪ್ರಯಾಣ ಮಾಡುವದು ವಾಡಿಕೆಗೆ ವಿರುದ್ಧವಾಗಿತ್ತು. ಲಾರ್ಡ ಕ್ಯಾನಿಂಗನು ಸೇನಾಪಡೆಯವರೂ ಅಂಚೆ ಶುಲ್ಕವನ್ನು ಕೊಡಬೇಕೆಂದು ಕಾನೂನು ಮಾಡಿದನು, ಕಡೆಯದಾಗಿ ಸೈನಿಕರಿಗೆ ಹೊಸ ಮಾದರಿಯ ತೋಪುಗಳನ್ನು ಸರಬರಾಜು ಮಾಡಲಾಯಿತು. ಇದಕ್ಕೆ ದನದ ಮತ್ತು ಹಂದಿಯ ಕೊಬ್ಬನ್ನು ಸವರಿದ್ದಾರೆಂಬ ಶಂಕೆ ಸಿಪಾಯಿಗಳಲ್ಲಿ ಉಂಟಾಯಿತು. ಇದು ಹಿಂದೂಗಳಿಗೂ ಮತ್ತು ಮುಸಲ್ಮಾನರಿಗೂ ಕೋಪವನ್ನುಂಟು ಮಾಡಿತು.

**ದಂಗೆ ವಿಫಲವಾಗಲು ಕಾರಣಗಳು :** ಮುಖ್ಯವಾಗಿ ಹಲವು ದೇಶದ್ರೋಹಿಗಳು ಮಾಡಿದ ವಿಶ್ವಾಸಘಾತ ತನದಿಂದ ಮತ್ತು ದಂಗೆಕೋರರ ಕಡೆ ಶ್ರೇಷ್ಠರಾದ ಮತ್ತು ಅನುಭವಿ ದಂಡನಾಯಕರಿಲ್ಲದಿದ್ದುದರಿಂದ ದಂಗೆಯು ವಿಫಲವಾಯಿತು. ಹೈದರಾಬಾದ, ಗ್ವಾಲಿಯರ್ ಮತ್ತು ಪಂಜಾಬ ರಾಜ್ಯಗಳು ಇಂಗ್ಲಿಷರಿಗೆ ನಿಷ್ಠೆಯಿಂದ ಉಳಿದವು.

29) ಮೊದಲನೆ ಜಾಗತಿಕ ಯುದ್ಧದ ಕಾರಣಗಳು ಯಾವವು ? ಆದರ ಪರಿಣಾಮಗಳೇನು ?

ಉತ್ತರ : Ref Q No D [29] of March 1986.

30) ಭಾರತದ ವಾಯು ಪಡೆಯನ್ನು ಹೇಗೆ ವ್ಯವಸ್ಥೆಗೊಳಿಸಲಾಗಿದೆ ? ವಾಯುಬಲದ ಪ್ರಮುಖ ಕಾರ್ಯಗಳಾವವು?

ಉತ್ತರ : ಆಧುನಿಕ ಕಾಲದಲ್ಲಿ ರಾಷ್ಟ್ರ ರಕ್ಷಣೆಯಲ್ಲಿ ವಾಯು ಪಡೆಯ ಕಾರ್ಯಭಾರ ಹೆಚ್ಚುತ್ತಲೆ ಇದೆ. ವಾಯುದಳಕ್ಕೆ ಶ್ರೇಷ್ಠ ಸೇನಾಧಿಪತಿ ಅಥವಾ ಪ್ರಧಾನ ಎಂದು ಕರೆಯಲಾಗುವ ಏರ್ ಚೀಫ್ ಮಾರ್ಶಲ್ ಅಂತಸ್ತಿನ ಒಬ್ಬ ಸಮಗ್ರ ನಾಯಕನಿರುತ್ತಾನೆ. ಮೂವರು ಪ್ರಮುಖ ದಳನಾಯಕರುಗಳು ಈತನಿಗೆ ಸಹಾಯಕರಾಗಿರುತ್ತಾರೆ. ವಾಯುದಳದ ಮುಖ್ಯ ಕಚೇರಿ ನವದೆಹಲಿಯಲ್ಲಿ ಇರುತ್ತದೆ. ಭಾರತದ ವಾಯು ಪಡೆಯನ್ನು ಐದು ವಲಯದಳಗಳಾಗಿ ಮತ್ತು ಒಂದು ಸ್ವತಂತ್ರ ಕಾರ್ಯಸಮುದಾಯವನ್ನಾಗಿ ವ್ಯವಸ್ಥೆಗೊಳಿಸಲಾಗಿದೆ. 1) ನವದೆಹಲಿಯಲ್ಲಿರುವ ಪಶ್ಚಿಮ ವಾಯುದಳ 2) ಶಿಲ್ಲಾಂಗನಲ್ಲಿರುವ ಪೂರ್ವವಾಯುದಳ 3) ಅಲಹಾಬಾದ್‌ನಲ್ಲಿರುವ ಕೇಂದ್ರೀಯ ವಾಯುದಳ 4) ನಾಗಪುರದಲ್ಲಿರುವ ಸಂರಕ್ಷಣಾ ದಳ 5) ಬೆಂಗಳೂರಿನಲ್ಲಿರುವ ತರಬೇತಿ ದಳ.

ವಾಯುದಳದ ಹೋರಾಟ ಪಡೆಯು 45 ವಿಮಾನದಳ ಘಟಕಗಳಿಂದ ಕೂಡಿದೆ. ಇಂದು ಇದು ವಿಶ್ವದ ಅತ್ಯಂತ ದೊಡ್ಡ ವಾಯು ಬಲಗಳಲ್ಲಿ ಒಂದಾಗಿದೆ. ಇದು ಅನೇಕ ಬಗೆಯ ಹೋರಾಟ ವಿಮಾನಗಳು, ಛಿಗಂಗಿ ಅಳವಡಿತ ವಿಮಾನಗಳು ಅಂತರ್ಭೇಧನಾಶಕ್ತಿ ವಿಮಾನಗಳು ಸಾರಿಗೆ ವಿಮಾನಗಳು ಮತ್ತು ಸಹಾಯಕ ವಿಮಾನಗಳನ್ನು ಒಳಗೊಂಡಿದೆ.

ವಾಯುಬಲದ ಪ್ರಮುಖ ಕಾರ್ಯಗಳು 1) ಯುದ್ಧಕಾಲದಲ್ಲಿ ಶತ್ರುವಿನ ನೆಲದಲ್ಲಿರುವ ದೂರದ ಮಿಲಿಟರಿ ಮತ್ತು ಕೈಗಾರಿಕಾ ನೆಲೆಗಳ ಮೇಲೆ ಗುಂಡಿನ ಮಳೆ ಸುರಿಸುವದರ ಮೂಲಕ ಭೂಸೇನೆಗೆ ಸಹಾಯ ಮಾಡುವದು 2) ಆಕ್ರಮಣಕಾರಿ ವಿಮಾನಗಳನ್ನು ನಾಶಮಾಡುವದು 3) ಸಾಮುಗ್ರಿ ಮತ್ತು ಮುದ್ದುಗುಂಡುಗಳನ್ನು ಸಾಗಿಸುವದು; ಪ್ಯಾರಟ್ರೂಪರ್‌ಗಳನ್ನು ಇಳಿಸುವದು ಮತ್ತು ಗಾಯಾಳುಗಳನ್ನು ಕರೆತರುವದು, 4) ಅತಿವೃಷ್ಟಿ, ಅನಾವೃಷ್ಟಿ ಮತ್ತು ಭೂಕಂಪಗಳಂತಹ ನೈಸರ್ಗಿಕ ದುರಂತಗಳಲ್ಲಿ ಪೌರ ಅಧಿಕಾರಿಗಳಿಗೆ ಸಹಾಯ ನೀಡುವದು.

31) ವಿಶ್ವಸಂಸ್ಥೆಯು ಅಸ್ತಿತ್ವಕ್ಕೆ ಬಂದಿದ್ದು ಯಾವಾಗ ? ಆದರ ಉದ್ದೇಶಗಳೇನು ?

ವಿಶ್ವಸಂಸ್ಥೆಯ ಯಾವುದಾದರೂ ಎರಡೂ ಸಾಧನೆಗಳನ್ನು ತಿಳಿಸಿ.

ಉತ್ತರ : ಅಂತರ್ ರಾಷ್ಟ್ರೀಯ ಶಾಂತಿ ಮತ್ತು ಶಿಸ್ತನ್ನು ಕಾಪಾಡುವಲ್ಲಿ ರಾಷ್ಟ್ರಗಳ ಸಂಘ ವಿಫಲಗೊಂಡಿತು. ಎರಡನೆಯ ಪ್ರಪಂಚ ಯುದ್ಧ ಹೆಚ್ಚು ನಾಶಕಾರಕವಾಗಿ ಪರಿಣಮಿಸಿತು. ವಿಶ್ವಶಾಂತಿ ಸ್ಥಾಪನೆಗೆ ಹೆಚ್ಚು ಪರಿಣಾಮಕಾರಿಯಾದ ಸಂಸ್ಥೆಯ ಅವಶ್ಯಕತೆಯನ್ನು ವಿಶ್ವದೆಲ್ಲೆಡೆಯ ಜನರು ಅರಿತರು. ಅಮೇರಿಕದ ಸಾನ್ ಫ್ರಾನ್ಸಿಸ್ಕೊ ನಗರದಲ್ಲಿ ಎಪ್ರಿಲ್ 1945 ರಲ್ಲಿ 50 ರಾಷ್ಟ್ರಗಳು ಸೇರಿ ವಿಶ್ವಸಂಸ್ಥೆಯ ಶಾಸನವನ್ನು ರಚಿಸಿದವು. ಈ ಸಂಸ್ಥೆಯು ಅಕ್ಟೋಬರ 24, 1945 ರಲ್ಲಿ ಅಸ್ತಿತ್ವಕ್ಕೆ ಬಂದಿತು.

ಮುಂದಿನ ಉತ್ತರಕ್ಕೆ Ref Q No 2 [1] of Sept, 1984 ಮತ್ತು Q No 3 [3] of April 1985

# ಸಮಾಜ ಪತ್ರಿಕೆಗಳು

## ಮಾರ್ಚ-1988 2 ನೆಯ-ಪತ್ರಿಕೆ

ಗುಣಗಳು : 35

### [ ಭೂ ವಿವರಣೆ ]

I. "ಆಧುನಿಕ ತಯಾರಿಕಾ ಕೈಗಾರಿಕೆ" ಅಂದರೇನು ? ಅದರ ಲಕ್ಷಣಗಳು ಯಾವವು ?

ಉತ್ತರ : Ref Q No I Of April 1984

ಅಥವಾ

"ರೇವು ಪಟ್ಟಣ" ಅಂದರೇನು ? ರೇವು ಪಟ್ಟಣಗಳ ಅಭಿವೃದ್ಧಿಗೆ ಅಗತ್ಯವಾದ ಸೌಲಭ್ಯಗಳು ಯಾವವು ?

ಉತ್ತರ : ಬಂದರನ್ನು ಹೊಂದಿರುವ ಪಟ್ಟಣಕ್ಕೆ ರೇವು ಪಟ್ಟಣ ಎಂದು ಹೆಸರು. ಇದು ಜಲಮಾರ್ಗ ಮತ್ತು ಭೂ ಮಾರ್ಗಗಳನ್ನು ಸಂಧಿಸುವ ಒಂದು ಸ್ಥಳ ಸರಕುಗಳನ್ನು ತುಂಬಲು ಮತ್ತು ಖಾಲಿ ಮಾಡಲು ಹಡಗುಗಳಿಗೆ ಬಂದರು ಬೇಕು. ಹಡಗುಗಳು ಹಾಗೆ ಬಂದು ನಿಲ್ಲುವ ಸ್ಥಳಕ್ಕೆ ಬಂದರು ಎನ್ನುತ್ತಾರೆ. ರೇವು ಪಟ್ಟಣಗಳನ್ನು ಅಭಿವೃದ್ಧಿಪಡಿಸಲು ಕೆಲವು ಅನುಕೂಲತೆಗಳು ಬೇಕು. ಮಳಿಗೆ ಮತ್ತು ಗುಡಾರಗಳನ್ನು ಕಟ್ಟಲು ರೇವು ಪಟ್ಟಣದ ಸುತ್ತಲೂ ಸಮ ಮಟ್ಟವಾದ ದೊಡ್ಡ ಮೈದಾನ ಪ್ರದೇಶವಿರಬೇಕು. ತೀರ ಪ್ರದೇಶ ಒಡೆದಿರಬೇಕು. ರೇವು ಪಟ್ಟಣದಲ್ಲಿ ನೀರು ಮಂಜುಗಡ್ಡೆ ಕಟ್ಟದಂತೆ ಇರಬೇಕು. ಅಧಿಕ ಉತ್ಪನ್ನ ಒದಗಿಸುವ ಮತ್ತು ಅನುಭೋಗಿಸುವ ಹಿನ್ನಾಡನ್ನು ರೇವು ಪಟ್ಟಣ ಹೊಂದಿರಬೇಕು. ರೇವು ಪಟ್ಟಣ ನದಿಗಳ ಮುಖಜ ಭೂಮಿಯು ಹತ್ತಿರ ಸ್ಥಾಪಿತವಾಗಿದ್ದರೆ ವ್ಯಾಪಾರಕ್ಕೆ ಅನುಕೂಲ. ರೇವು ಪಟ್ಟಣಗಳನ್ನು ಸ್ವಾಭಾವಿಕ ಮತ್ತು ಕೃತಕ ಬಂದರು ಎಂದು ಎರಡು ವಿಧವಾಗಿ ವಿಂಗಡಿಸಬಹುದು ಭಾರತದಲ್ಲಿ ಮುಂಬಯಿ ಅತಿಮುಖ್ಯವಾದ ಸ್ವಾಭಾವಿಕ ಬಂದರು. ರೇವು ಪಟ್ಟಣಗಳು ಮಧ್ಯಮ ಮತ್ತು ಸಣ್ಣ ರೇವು ಪಟ್ಟಣಗಳಾಗಿರಬಹುದು.

II. ಪ್ರಪಂಚದಲ್ಲಿ ಜನಸಂಖ್ಯೆಯ ಅಸಮಾನ ಹಂಚಿಕೆಗೆ ಕಾರಣವಾದ ಅಂಶಗಳು ಯಾವವು ? ಹೆಚ್ಚು ಜನಸಾಂದ್ರತೆ ಹೊಂದಿದ ನಾಲ್ಕು ಪ್ರದೇಶಗಳನ್ನು ಹೆಸರಿಸಿರಿ.

ಉತ್ತರ : ಭೂಗೋಲದ ಅಧ್ಯಯನದಲ್ಲಿ ಮಾನವ ಕೇಂದ್ರ ಸ್ಥಾನವನ್ನು ಆಕ್ರಮಿಸಿದ್ದಾನೆ. ಆದ್ದರಿಂದ ಭೂಮಿಯ ಮೇಲೆ ಜನಸಂಖ್ಯೆಯ ಹಂಚಿಕೆಯು ವಿಷಯವಾಗಿ ಅಧ್ಯಯನ ಮಾಡುವದು ಒಂದು ವೈಶಿಷ್ಟ್ಯ. ಆದರೆ ಭೂಗೋಳದಲ್ಲಿ ಮಾನವನ ಹಂಚಿಕೆ ಎಲ್ಲಾ ಕಡೆಗಳಲ್ಲಿಯೂ ಸಮವಾಗಿಲ್ಲ. ಇದಕ್ಕೆ ಭೌಗೋಳಿಕ ಮತ್ತು ಆರ್ಥಿಕ ಅಂಶಗಳು ಕಾರಣವಾಗಿವೆ.

ಭೌಗೋಳಿಕ ಕಾರಣಗಳಲ್ಲಿ ಮೇಲ್ಮೈ ಲಕ್ಷಣ, ನದಿ ಕಣಿವೆಗಳು ವಾಯುಗುಣ ಮತ್ತು ಮಳೆಯ ಹಂಚಿಕೆ ಮುಖ್ಯಾಂಶಗಳಾಗಿವೆ. ಬೆಟ್ಟ ಗುಡ್ಡಗಳಿಂದ ಕೂಡಿದ ಪ್ರದೇಶಗಳು, ಫಲವತ್ತಾಗಿಲ್ಲದ ಭೂಮಿ, ಸಾಗಾಣಿಕೆಯಲ್ಲಿ ಅಸಮರ್ಪಕತೆ ಇವು ಅಸಮ ಹಂಚಿಕೆಗೆ ಕಾರಣವಾಗಿವೆ. ಹಾಗೆಯೇ ನದಿ ಕಣಿವೆಯಲ್ಲಿ, ಫಲವತ್ತಾದ ಭೂಮಿ, ಅನುಕೂಲವಾದ ಹವಾಮಾನ, ನೀರಾವರಿ ಸೌಲಭ್ಯಗಳಿರುವದರಿಂದ ಅಲ್ಲಿ ಜನಸಂಖ್ಯೆ ಹೆಚ್ಚಾಗಿರುತ್ತದೆ. ಆರ್ಕ್ಟಿಕ್ ಮತ್ತು ಅಂಟಾರ್ಕ್ಟಿಕ್ ಪ್ರದೇಶಗಳಲ್ಲಿ ಚಳಿ, ಹಿಮ ಜಾಸ್ತಿಯಾಗಿದ್ದು ಅಲ್ಲಿ ಜನ ವಾಸ ಮಾಡಲು ಸಾಧ್ಯವಾಗಿಲ್ಲ. ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲಿ ಜನಸಂಖ್ಯೆಯ ಹಂಚಿಕೆ ಕಡಿಮೆ.

ಇವುಗಳ ಜೊತೆ ಆರ್ಥಿಕ ಅಂಶಗಳೂ ಅಸಮ ಹಂಚಿಕೆಗೆ ಕಾರಣವಾಗುತ್ತದೆ. ಕೈಗಾರಿಕಾ ಕೇಂದ್ರಗಳು, ವ್ಯವಸಾಯ ಪ್ರಾಂತ್ಯಗಳು ಗಣಿ ಕೇಂದ್ರಗಳು ಮೀನು ಹಿಡಿಯುವ ಕೇಂದ್ರಗಳು ಹೆಚ್ಚು ಜನಸಂಖ್ಯೆಯನ್ನು ಹೊಂದಿವೆ.

ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳು : ಒಂದು ಚದುರ ಕಿಲೋ ಮೀಟರಿಗೆ 80 ಕ್ಕಿಂತ ಹೆಚ್ಚು ಜನರನ್ನು ಹೊಂದಿರುವ ಪ್ರದೇಶಗಳನ್ನು ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳೆನ್ನುವರು. ಪೂರ್ವ ಏಷ್ಯಾದಲ್ಲಿ ಪ್ರಪಂಚದ ಶೇಕಡ 30ಕ್ಕಿಂತ ಹೆಚ್ಚು ಜನರು ಇಲ್ಲಿ ವಾಸಿಸುತ್ತಾರೆ. ಯಾಂಗಟೀ ಕಣಿವೆ ಮತ್ತು ಉತ್ತರ ಚೀನಾ ಮೈದಾನ ಪ್ರಪಂಚದಲ್ಲೆ ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳು ಭಾರತ, ದಕ್ಷಿಣ ಏಷ್ಯಾ ರಾಷ್ಟ್ರಗಳು, ಇಲ್ಲಿ ಗಂಗಾ ಬಯಲು ಪೆಂಕಾಂಗ ಬಯಲಿನಲ್ಲಿ ಜನಸಂಖ್ಯೆ ಹೆಚ್ಚು. ಪಶ್ಚಿಮ ಯುರೋಪು ಮತ್ತು ಅಮೇರಿಕ ಸಂಯುಕ್ತ ಸಂಸ್ಥಾನಗಳ ಈಶಾನ್ಯದ ಕೊನೆಯಲ್ಲಿ ಯುರೋಪದಲ್ಲಿ ಕೈಗಾರಿಕೆಯ ಅಭಿವೃದ್ಧಿಯಿಂದ ಪಟ್ಟಣಗಳಲ್ಲಿ ಹೆಚ್ಚು ಜನಸಂಖ್ಯೆ.

ಅಥವಾ

"ವಸ್ತುಗಳ ವಿನಿಮಯ ಪದ್ಧತಿ" ಅಂದರೇನು ? ನಮ್ಮ ವಿನಿಮಯ ಪದ್ಧತಿಯಲ್ಲಿಯ ದೋಷಗಳು ಯಾವವು ? ಈ ದೋಷಗಳನ್ನು ನಿವಾರಿಸುವ ಬಗೆ ಹೇಗೆ ?

**ಉತ್ತರ :** ಉತ್ಪಾದಕರಿಗೆ ಅನುಕೂಲವಾಗಲು ಅಧಿಕ ಉತ್ಪನ್ನಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವದು ವ್ಯಾಪಾರದ ಆರಂಭ. ಹಿಂದೆ ವ್ಯಾಪಾರವು ಹಣದ ರೂಪದಲ್ಲಿರದೇ ವಸ್ತುಗಳ ವಿನಿಮಯ ಪದ್ಧತಿಗೆ ಮಾತ್ರ ಸೀಮಿತವಾಗಿತ್ತು. ಹಣ ವನ್ನು ಕೊಟ್ಟು ಕೊಂಡುಕೊಳ್ಳದೆ ಪದಾರ್ಥಗಳನ್ನು ಪರಸ್ಪರ ಬದಲಾಯಿಸಿಕೊಳ್ಳುವದಕ್ಕೆ "ವಸ್ತುಗಳ ವಿನಿಮಯ" ಎಂದು ಕರೆಯುತ್ತಾರೆ.

ಅವಶ್ಯಕತೆಗಳು ಮತ್ತು ಪೂರೈಕೆಗಳು ಸದಾ ಒಂದೇ ರೀತಿ ಇಲ್ಲದಿರುವದರಿಂದ ಹೆಚ್ಚುಕಾಲ "ವಸ್ತುಗಳ ವಿನಿಮಯ ಪದ್ಧತಿ"ಯ ನಿರ್ವಹಣೆ ಹಾಗೂ ಅದನ್ನು ಮುಂದುವರಿಸುವದು ಸಾಧ್ಯವಿಲ್ಲ. ಆದುದರಿಂದ ಈ ಪದ್ಧತಿಯಲ್ಲಿ ಅನೇಕ ತೀವ್ರ ತೆರನಾದ ದೋಷಗಳಿವೆ. 1) ಇದು ಇಬ್ಬರ ಅವಶ್ಯಕತೆಗಳನ್ನು ಪೂರೈಸಲು ಪರಸ್ಪರ ಅವಲಂಬಿಸಿರುತ್ತದೆ. ಉದಾಹರಣೆಗೆ ಒಂದು ಆಡಿಗಾಗಿ ಒಂದು ಆಕಳನ್ನು ವಿನಿಮಯ ಮಾಡುವದು ಸಾಧ್ಯವಿಲ್ಲ. ಏಕೆಂದರೆ ಅವುಗಳ ಬೆಲೆ ಒಂದೇ ಸಮನಾಗಿರುವದಿಲ್ಲ 2) ವ್ಯವಹಾರ ಮಾಡುವದಕ್ಕೆ ಮೊದಲೇ ವಿನಿಮಯದ ದರವನ್ನು ನಿರ್ಧರಿಸಬೇಕಾಗುತ್ತದೆ. 3) ಸಾಧಾರಣ ಬೆಲೆ ಬಾಳುವ ಪದಾರ್ಥಗಳನ್ನು ಹೆಚ್ಚು ಬೆಲೆ ಬಾಳುವ ಪದಾರ್ಥಗಳೊಡನೆ ವಿನಿಮಯ ಮಾಡುವದು ಬಹಳ ಕಷ್ಟ.

ವಸ್ತು ವಿನಿಮಯದಲ್ಲಿ ಒದಗುತ್ತಿದ್ದ ತೊಂದರೆಗಳನ್ನು ನಿವಾರಿಸಲು ಬೇರೊಂದು ವಿನಿಮಯ ಮಾಧ್ಯಮವನ್ನು ಬಳಸಲಾಯಿತು. ಈ ವಿನಿಮಯ ಮಾಧ್ಯಮವನ್ನೆ ಹಣ ಎಂದು ಕರೆಯುತ್ತೇವೆ. ಕಾಲಕ್ರಮೇಣ ನಾಣ್ಯಗಳು ಮತ್ತು ನೋಟುಗಳು ಹಣದ ರೂಪದಲ್ಲಿ ಚಲಾವಣೆಗೆ ಬಂದವು. ಹಣದ ಚಲಾವಣೆಯಿಂದ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಹೆಚ್ಚು ಅನುಕೂಲವಾಯಿತು. ಹೆಚ್ಚುವರಿ ವಸ್ತುಗಳನ್ನು ಮಾರಾಟ ಮಾಡುವದು ಸುಲಭವಾಯಿತು.

III. ನಾಲ್ಕು ವಾಕ್ಯಕ್ಕೆ ಮೀರದಂತೆ ಉತ್ತರಿಸಿ.

1) ಗಣಿಗಾರಿಕೆಯ ಎರಡು ವಿಧಗಳು ಯಾವವು.

**ಉತ್ತರ :** ಗಣಿಗಾರಿಕೆಯಲ್ಲಿ ಭೂಮಿಯ ಮೇಲ್ಭಾಗದ ಅಥವಾ ತೆರೆದ ಗುಂಡಿಗಳ ಗಣಿಗಾರಿಕೆ ಮತ್ತು ಭೂಮಿಯನ್ನು ಆಳವಾಗಿ ಅಗೆದು ತೆರೆಯುವ ಗಣಿಗಾರಿಕೆ ಎಂಬ ಎರಡು ಪ್ರಕಾರಗಳು ಇವೆ.

2) ದೂರದರ್ಶನದ ಲಾಭಗಳನ್ನು ಹೇಳಿರಿ.

**ಉತ್ತರ :** Ref Q III [4] Of April 1985

3) ಭಾರತದ ಸ್ವಾಭಾವಿಕ ವಿಭಾಗಗಳು ಯಾವವು ?

**ಉತ್ತರ :** 1) ಹಿಮಾಲಯದ ಪರ್ವತ ಪ್ರದೇಶ 2) ಗಂಗಾಯಮುನಾ ನದಿಗಳ ಬಯಲು 3) ಡೆಕ್ಕನ್ ಪ್ರಸ್ಥಭೂಮಿ 4) ಕರಾವಳಿ ಪ್ರದೇಶ. 5) ಅಟ್ಲಾಂಟಿಕ್ ಮಹಾಸಾಗರದಲ್ಲಿಯ ಎರಡು ಉಷ್ಣ ಪ್ರವಾಹಗಳನ್ನು ಹೆಸರಿಸಿ.

1) ಗಲ್ಫಸ್ಟ್ರೀಂ 2) ಫ್ಲಾರಿಡಾ ಉಷ್ಣೋದಕ ಪ್ರವಾಹ.

3) ಭಾರತದ ವ್ಯವಸಾಯವು ಮನ್ಸೂನ್ ಮಳೆಯೊಡನೆ ಆಡುವ ಜೂಜಾಟ.

**ಉತ್ತರ :** ಭಾರತದ ಹೆಚ್ಚಿನ ಭಾಗಕ್ಕೆ ನೈರುತ್ಯ ಮನ್ಸೂನ್ ಮಾರುತಗಳಿಂದ ಮಳೆ ಬರುತ್ತದೆ. ಆದರೆ ಅನೇಕ ಸಂದರ್ಭಗಳಲ್ಲಿ ಅನಾವೃಷ್ಟಿಯಾಗಿ ಬೆಳೆಗಳಿಗೆ ಸಾಕಾಗುವಷ್ಟು ಮಳೆ ಬೀಳದೆ ಬೆಳೆಗಳು ಹಾಳಾಗುತ್ತವೆ. ಕೆಲವು ಬಾರಿ ಅತಿವೃಷ್ಟಿಯಾಗಿ ಪ್ರಾಣಿ ಮತ್ತು ಪ್ರಾಣ ಹಾನಿಯಾಗುವದಲ್ಲದೆ ಬೆಳೆಗಳೂ ನಾಶವಾಗುತ್ತವೆ ಹೀಗಾಗಿ ಭಾರತದ ವ್ಯವಸಾಯವು ಮನ್ಸೂನ್ ಮಳೆಯೊಡನೆ ಆಡುವ ಜೂಜಾಟ.

IV. ಕಾರಣ ಕೊಡಿರಿ.

1) ಕಲಕತ್ತಾ ಇದು ಉತ್ತಮ ರೇವು ಪಟ್ಟಣದ ಉದಾಹರಣೆ.

**ಉತ್ತರ :** ಹಿನ್ನಾಡಿನಲ್ಲಿ, ಚಹಾ, ಸೆಣಬು, ಬೆಳೆಯುವವು, ಮೈಕಾ, ಕಲ್ಲಿದ್ದಲಿ ಮತ್ತು ಕಬ್ಬಿಣದಂತಹ ಖನಿಜ ಸಂಪತ್ತು ದೊರೆಯುತ್ತದೆ— ಸಂಚಾರ ಸೌಕರ್ಯ— ಅಂತರ್ ರಾಷ್ಟ್ರೀಯ ಸಂಪರ್ಕ, ಎಂಜನಿಯರಿಂಗ ಸಾಮುಗ್ರಿಗಳ ಉತ್ಪಾದನೆ— ಈ ಕಾರಣಗಳಿಂದ ಕಲಕತ್ತಾ ಉತ್ತಮ ರೇವು ಪಟ್ಟಣದ ಉದಾಹರಣೆ

2) ಆಧುನಿಕ ಜೀವನದಲ್ಲಿ ಟೆಲಿಫೋನ್ ಹಾಗೂ ಟೆಲಿಗ್ರಾಫ್‌ಗಳು ಅತ್ಯವಶ್ಯ ಸಾಧನಗಳಾಗಿವೆ.

**ಉತ್ತರ :** ತಂತಿಗಳು ಮತ್ತು ದೂರವಾಣಿಗಳು ತ್ವರಿತ ಸಾಧನೆಯ ಸಂಶೋಧನೆಯ ಫಲವಾಗಿವೆ ಇವು ಸಾರ್ವಜನಿಕರಿಗೆ ಹೆಚ್ಚಿನ ಸೌಲಭ್ಯವನ್ನು ಕಲ್ಪಿಸಿದೆ. ವ್ಯಾಪಾರ ಮತ್ತು ವಾಣಿಜ್ಯಗಳಿಗೆ ಅತ್ಯಧಿಕ ಅನುಕೂಲವನ್ನು ಒದಗಿಸಿವೆ. ತಂತಿ ಮತ್ತು ದೂರವಾಣಿಗಳಿಗೆ ಮೇಲ್ದರ್ಜೆಯ ತಂತಿಗಳು, ಭೂಮಿಯೊಳಗೆ ಹಾಕುವ ಕೇಬಲ್ಲುಗಳ ಮತ್ತು ನಿರೋಧಕ ಜಲಾಂತರ್ಗಾಮಿ ಕೇಬಲ್ಲುಗಳ ವ್ಯಾಪಕವಾದ ಅವಶ್ಯಕತೆಯಿದೆ.

3) ಇಂಗ್ಲಂಡಿನ ಪಶ್ಚಿಮ ತೀರ ಪ್ರದೇಶವು ಚಳಿಗಾಲದಲ್ಲಿಯೂ ಕೂಡ ಬೆಚ್ಚಗಿರುತ್ತದೆ.

**ಉತ್ತರ :** ಯಾಕೆಂದರೆ ಇಂಗ್ಲಂಡಿನ ಪಶ್ಚಿಮ ತೀರದ ಮಹಾಸಾಗರದಲ್ಲಿ ಗಲ್ಫಸ್ಟ್ರೀಂ ಉಷ್ಣಪ್ರವಾಹ ಹಾಯ್ದು ಹೋಗಿರುವದರಿಂದ ಇಂಗ್ಲಂಡಿನ ಪಶ್ಚಿಮ ತೀರ ಪ್ರದೇಶವು ಚಳಿಗಾಲದಲ್ಲಿಯು ಕ ಡ ಬೆಚ್ಚಗಿರುತ್ತದೆ.

4) ದಖನ್ ಪ್ರಸ್ಥಭೂಮಿಯು ಸಾಧಾರಣ ಮಳೆ ಪಡೆಯುತ್ತದೆ.

**ಉತ್ತರ :** ನೈಋತ್ಯ ಮನ್ಸೂನ ಗಾಳಿಗಳು ಪಶ್ಚಿಮದ ಸಹ್ಯಾದ್ರಿ ಬೆಟ್ಟದಾಟಿ ಬರುವದರೊಳಗೆ ಅಲ್ಲಿ ಮಳೆ ಸುರಿಸಿ ದಖನ್ ಪ್ರಸ್ಥಭೂಮಿಗೆ ಬರುತ್ತವೆ. ಹೀಗೆ ದಖನ್ ಪ್ರಸ್ಥಭೂಮಿಯು ಮಳೆಯ ನೆರಳಿನ ಭಾಗದಲ್ಲಿ ಬರುವದರಿಂದ ಅದು ಸಾಧಾರಣ ಮಳೆ ಪಡೆಯುತ್ತದೆ.

5) ವ್ಯಾಪಾರ ಸಮತೋಲನ ಪ್ರತಿಕೂಲ ಸಮಸ್ಯೆಯು ಎಂದು ಉದ್ಭವಿಸುತ್ತದೆ.

**ಉತ್ತರ :** ಒಂದು ದೇಶವು ಹೆಚ್ಚು ಬೆಲೆ ಬಾಳುವ ವಸ್ತುಗಳನ್ನು ಆಮದು ಮಾಡಿಕೊಂಡು ಕಡಿಮೆ ಬೆಲೆ ಬಾಳುವ ವಸ್ತುಗಳನ್ನು ರಫ್ತು ಮಾಡಿದರೆ ವ್ಯಾಪಾರ ಸಮತೋಲನ ಪ್ರತಿಕೂಲ ಸಮಸ್ಯೆಯು ಉದ್ಭವಿಸುತ್ತದೆ.

6) ಭಾರತದಲ್ಲಿ ಒಳನಾಡಿನ ವ್ಯಾಪಾರವು ಬಹಳ ಮಹತ್ವದ ಸ್ಥಾನ ಪಡೆದಿದೆ.

**ಉತ್ತರ :** ಭಾರತದ ಒಳನಾಡಿನ ವ್ಯಾಪಾರ ಅದರ ಹೊರದೇಶದ ವ್ಯಾಪಾರಗಳಿಗಿಂತ ಬಹುಪಾಲು ಹೆಚ್ಚಾಗಿದೆ. ಹೆಚ್ಚು ಜನರು ಒಳನಾಡಿನ ಅಥವಾ ದೇಶೀಯ ವ್ಯಾಪಾರದಲ್ಲಿ ತೊಡಗಿದ್ದಾರೆ. ದೇಶದ ವಿಸ್ತೀರ್ಣ ಮತ್ತು ಜನಸಂಖ್ಯೆಗೆ ಅನುಸಾರವಾಗಿ ಒಳನಾಡಿನ ವ್ಯಾಪಾರವು ಸ್ವಾಭಾವಿಕವಾಗಿಯೇ ಹೆಚ್ಚು ಪ್ರಾಮುಖ್ಯತೆ ಪಡೆದಿದೆ.

V. A) ಬಿಟ್ಟ ಸ್ಥಳ ಭರ್ತಿಮಾಡಿರಿ.

1) ........ಎಂಬುದು ಜ್ವಾಲಾಮುಖಿಗಳು ಸ್ಫೋಟಗೊಂಡಾಗ ಹೊರಕ್ಕೆ ಬರುವ ದ್ರವ ಪದಾರ್ಥ.

**ಉತ್ತರ :** ಲಾವಾರಸ.

2) ........ಜನರು ಟಂಡ್ರಾ ಪ್ರದೇಶದಲ್ಲಿ ವಾಸಿಸುವರು

**ಉತ್ತರ :** ಎಸ್ಕಿಮೊ

3) ತಂಪಾದ ಸಮಧಾತು ವಾಯುಗುಣವು........ಅನುಕೂಲವಾಗಿರುತ್ತದೆ.

**ಉತ್ತರ :** ದುಡಿಮೆಯಲ್ಲಿ ದಕ್ಷತೆ ಬೆಳೆಸಲು.

4) ಪರಿಣತಿಯು........ಕೈಗಾರಿಕೆಯ ಒಂದು ಲಕ್ಷಣ

**ಉತ್ತರ :** ಸಣ್ಣ.

5) ಕರ್ನಾಟಕದಲ್ಲಿ ಅತಿ ಹೆಚ್ಚು ಮಳೆ ಪಡೆಯುವ ಸ್ಥಳ... ....

**ಉತ್ತರ :** ಆಗುಂಬಾ ಬೆಟ್ಟ.

6) ........ರೈಲುಗಳು ಪರ್ವತ ಪ್ರದೇಶಗಳಲ್ಲಿ ಉಪಯುಕ್ತವಾಗಿವೆ.

**ಉತ್ತರ :** ನ್ಯಾರೋಗೇಜ್.

7) ಆಮದು ಮತ್ತು ರಫ್ತು ಸಮವಾಗಿದ್ದರೆ ಆ ಸ್ಥಿತಿಗೆ ನಾವು........ಎಂದು ಕರೆಯುತ್ತೇವೆ.

**ಉತ್ತರ :** ಸಮಸ್ಥಿತಿ.

8) ಸೂರ್ಯನಿಗೆ ಅತಿ ಸಮೀಪದಲ್ಲಿರುವ ಗ್ರಹ... ....

**ಉತ್ತರ :** ಬುಧ.

B. ಹೊಂದಿಸಿ ಬರೆಯಿರಿ.

| | |
|---|---|
| 1) ಮಲೇಶಿಯಾ | a) ಕಾಫಿ |
| 2) ರಷ್ಯಾ | b) ಉಣ್ಣೆ |
| 3) ಈಜಿಪ್ತ | c) ಟೀ |
| 4) ಬ್ರೆಜಿಲ್ | d) ಕಬ್ಬಿಣ |
| 5) ಭಾರತ | e) ರಬ್ಬರ |
| 6) ಆಸ್ಟ್ರೇಲಿಯಾ | f) ಗೋಧಿ |
| | g) ಹತ್ತಿ |

**ಉತ್ತರ :**
1) ಮಲೇಶಿಯಾ — e) ರಬ್ಬರ
2) ರಷ್ಯಾ — d) ಕಬ್ಬಿಣ
3) ಈಜಿಪ್ತ — g) ಹತ್ತಿ
4) ಬ್ರೆಜಿಲ್ — a) ಕಾಫಿ
5) ಭಾರತ — c) ಟೀ
6) ಆಸ್ಟ್ರೇಲಿಯಾ — b) ಉಣ್ಣೆ

VI. ಭಾರತದ ನಕ್ಷೆ ಬರೆದು ಇವುಗಳನ್ನು ಗುರುತಿಸಿ.

1) ವಿಶಾಖಪಟ್ಟಣ 2) 82½ ಪೂ. ರೇ. 3) ಕಾರವಾರ 4) ಗಂಗಾನದಿ.

....○....

# ಸಮಾಜ ಪಾಠಗಳು

**ಜೂನ್–1988** **1 ನೆಯ–ಪತ್ರಿಕೆ**

ಗುಣಗಳು : 65

## ( ಚರಿತ್ರೆ ಮತ್ತು ಪೌರನೀತಿ )

I. ಕೆಳಗಿನ ವಾಕ್ಯಗಳಲ್ಲಿಯ ಬಿಟ್ಟ ಶಬ್ದಗಳನ್ನು ಪೂರ್ತಿ ಮಾಡಿರಿ [ಉತ್ತರಗಳನ್ನು ಆವರಣದಲ್ಲಿ ಕೊಟ್ಟಿದೆ.]

1) ಹರ್ಷನ ಆಸ್ಥಾನದಲ್ಲಿದ್ದ ಪ್ರಮುಖ ಕವಿ ಬಾಣನು ........ಮತ್ತು........ಬರೆದನು.

[ ಹರ್ಷಚರಿತೆ, ಕಾದಂಬರಿ ]

2) ಈಜಿಪ್ತಿನ ದೊರೆಯನ್ನು........ಎಂದು ಕರೆಯುತ್ತಿದ್ದರು. [ ಫೇರೋಆ ]

3) ವಿಧಾನ ಪರಿಷತ್ತಿನ ಸದಸ್ಯತ್ವಕ್ಕೆ ಸ್ಪರ್ಧಿಸಲು ಭಾರತೀಯ ಪ್ರಜೆಗೆ........ವಯಸ್ಸಿಗಿಂತ ಮೇಲ್ಪಟ್ಟಿರಬೇಕು. [ 30 ವರ್ಷ ]

4) ಶಿವಾಜಿಯು ವಸೂಲು ಮಾಡುತ್ತಿದ್ದ ಎರಡು ತೆರಿಗೆಗಳು.......ಮತ್ತು.......[ ಚೌಥಾಯಿ, ಸರದೇಶಮುಖಿ ]

5) ಅಮೇರಿಕಾದ ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಅದರ ದಂಡನಾಯಕ ರಾಗಿದ್ದವರು.......[ಜಾರ್ಜ ವಾಷಿಂಗ–ಟನ್]

6) 1978 ರ ತಿದ್ದುಪಡಿ ಶಾಸನವು ವಿವಾಹದ ವಯಸ್ಸನ್ನು ಹೆಣ್ಣು ಮಕ್ಕಳಿಗೆ.......ವರ್ಷಗಳಿಗೂ ಗಂಡು ಮಕ್ಕಳಿಗೆ ....... ವರ್ಷಗಳಿಗೂ ಹೆಚ್ಚಿಸಿದೆ. [18 ವರ್ಷಗಳು, 21 ವರ್ಷಗಳು]

7) ಆಧುನಿಕ ಜಪಾನಿನ ಶಿಲ್ಪಿ.....—[ಮೆಜಿ ಚಕ್ರವರ್ತಿ ಮುಕ್ಸೋಹಿಟೋ]

B ಈ ಕೆಳಗಿನ ಪ್ರಶ್ನೆಗಳಿಗೆ ಒಂದು ಪದ ಇಲ್ಲವೇ ಒಂದು ವಾಕ್ಯದಲ್ಲಿ ಬರೆಯಿರಿ.

8) ಗ್ರೀಸ್ ದೇಶದ ಇಬ್ಬರು ಪ್ರಸಿದ್ಧರಾದ ತತ್ವಜ್ಞಾನಿಗಳು ಯಾರು ?

ಉತ್ತರ : ಸಾಕ್ರೆಟಿಸ್, ಪ್ಲಾಟೋ.

9) ತರೈನ್ ಕದನದಲ್ಲಿ ಮಹಮ್ಮದ ಘೋರಿಯ ವಿರುದ್ಧ ಯಾರು ಯುದ್ಧ ಮಾಡಿದರು ?

ಉತ್ತರ : ಪೃಥ್ವಿರಾಜ್ ಚವ್ಹಾಣ.

10) ಕಬೀರನ ಶಿಷ್ಯರನ್ನು ಏನೆಂದು ಕರೆಯುವರು ?

ಉತ್ತರ : "ಕಬೀರ ಪಂಥಿಗಳೆಂದು" ಕರೆಯುವರು.

11) ಒಡೆಯರ ವಂಶದ ಕೊನೆಯ ಅರಸ ಯಾರು ?

ಉತ್ತರ : ಜಯಚಾಮರಾಜ ಒಡೆಯರ.

12) ವೈಜ್ಞಾನಿಕ ಸಮಾಜವಾದವನ್ನು ಸ್ಥಾಪಿಸಿದವನ ಹೆಸರನ್ನು ತಿಳಿಸಿರಿ ?

ಉತ್ತರ : ಕಾರ್ಲಮಾರ್ಕ್ಸ

13) ಎಲ್ಲಿ ಅಂತರ ರಾಷ್ಟ್ರೀಯ ನ್ಯಾಯಾಲಯವನ್ನು ಸ್ಥಾಪಿಸಲಾಗಿದೆ ?

ಉತ್ತರ : ಹೇಗ್ ಪಟ್ಟಣದಲ್ಲಿ

C. ಈ ಪ್ರಶ್ನೆಗಳಿಗೆ ಉತ್ತರಗಳು ನಾಲ್ಕು ವಾಕ್ಯಗಳಿಗೆ ಮೀರದಿರಲಿ.

14) ದ್ವಿಮುಖ ಸರ್ಕಾರ ಎಂದರೇನು ? ಇದನ್ನು ಜಾರಿಗೆ ತಂದವರು ಯಾರು ?

ಉತ್ತರ : ದ್ವಿಮುಖ ಸರಕಾರವೆಂದರೆ ಭೂಕಂದಾಯವನ್ನು ವಸೂಲು ಮಾಡುವ ಹಕ್ಕಾದ ದಿವಾನಿಯು ಕಂಪನಿಗೆ ಕೊಡಲ್ಪಟ್ಟಿತು. ಸೈನ್ಯಾಡಳಿತೆ ನಡೆಸುವ ಅಧಿಕಾರವು ನವಾಬನಿಗೆ ಉಳಿಯಿತು. ಇದನ್ನು ಬಂಗಾಲದ ಗವರ್ನರ ರಾಬರ್ಟ ಕ್ಲೈವನು ಜಾರಿಗೆ ತಂದನು.

15) ಯಾರು ಸಹಾಯಕ ಸೈನ್ಯ ಪದ್ಧತಿ ಜಾರಿಗೆ ತಂದರು ? ಇದು ಭಾರತೀಯ ರಾಜರ ಮೇಲೆ ಯಾವ ಪರಿಣಾಮ ಬೀರಿತು ?

ಉತ್ತರ : ಸಹಾಯಕ ಸೈನ್ಯ ಪದ್ಧತಿಯನ್ನು ಲಾರ್ಡ ವೆಲ್ಲೆಸ್ಲಿಯು ಜಾರಿಗೆ ತಂದನು.

ಉತ್ತರ : ಸಹಾಯಕ ಸೈನ್ಯ ಪದ್ಧತಿಯ ನೀತಿಗೆ ಒಳಗಾಗುವ ದೇಶೀಯ ರಾಜ್ಯವು ಇತರ ರಾಜ್ಯಗಳ ಮೇಲೆ ಯುದ್ಧ ಹೂಡುವದಾಗಲೀ ಅಥವಾ ಒಪ್ಪಂದ ಮಾಡಿಕೊಳ್ಳುವದಾಗಲಿ ಮಾಡಕೂಡದಾಗಿತ್ತು. ಇವಕ್ಕೆ ಒಳಗಾಗುವ ರಾಜ್ಯವು ಇಂಗ್ಲಿಷ ಸೈನ್ಯದ ಒಂದು ದೊಡ್ಡ ತುಕುಡಿಯನ್ನು ಇಟ್ಟುಕೊಂಡು ಅದರ ಖರ್ಚನ್ನೆಲ್ಲ ವಹಿಸಬೇಕಾಗಿತ್ತು. ಒಬ್ಬ ರೆಸಿಡೆಂಟನನ್ನು ನೇಮಿಸಲಾಗುತ್ತಿತ್ತು. ಈ ನಿಯಮಕ್ಕೆ ಒಳಗಾದ ದೇಶೀಯ ರಾಜರುಗಳು ತಮ್ಮ ಸ್ವಾತಂತ್ರವನ್ನು ಕಳೆದುಕೊಂಡರು.

16) 1919 ರ ಶಾಸನದ ಗುರಿಗಳನ್ನು ತಿಳಿಸಿ.

ಉತ್ತರ : 1) ಭಾರತವನ್ನು ಬ್ರಿಟಿಷ್ ಚಕ್ರಾಧಿಪತ್ಯದಲ್ಲೇ ಉಳಿಸಿಕೊಳ್ಳುವದು. 2) ದೇಶದ ಆಡಳಿತದಲ್ಲಿ ಭಾರತೀಯರನ್ನು ಹೆಚ್ಚು ಸಂಖ್ಯೆಯಲ್ಲಿ ಭಾಗ್ಯಸ್ಥರನ್ನಾಗಿ ಮಾಡುವದು 3) ಸ್ವಯಂಮಾಡಳಿತ ಸಂಸ್ಥೆಗಳನ್ನು ಬೆಳೆಸುವದು. ಮತ್ತು 4) ಭಾರತಕ್ಕೆ ಕ್ರಮೇಣ ಜವಾಬ್ದಾರಿ ಸರ್ಕಾರವನ್ನು ಕೊಡುವದು.

17) ಕಾರ್ಮಿಕ ಸಂಘದ ಚಳುವಳಿಗೆ ಯಾವ ಸ್ಥಿತಿಗತಿಗಳು ಕಾರಣವಾದವು ?

ಉತ್ತರ : ಶಾಸನಗಳನ್ನು ಮಾಡಿ ಅದರ ಮೂಲಕ ಕಾರ್ಮಿಕ ಬವಣೆಗಳನ್ನು ನಿವಾರಿಸುವ ಸರ್ಕಾರದ ಯತ್ನಗಳು ಕಾರ್ಮಿಕ ವರ್ಗದವರಿಗೆ ತೃಪ್ತಿಯುಂಟು ಮಾಡಲಿಲ್ಲ. ಈ ಕಾಯಿದೆಗಳಿಂದ ತಪ್ಪಿಸಿಕೊಳ್ಳಲು ಯಜಮಾನರು ಸಂಚು ನಡೆಸಿ ಸ್ವಪ್ರಯೋಜನಕ್ಕಾಗಿ ಕಾರ್ಮಿಕರಿಂದ ದುಡಿಸಿಕೊಳ್ಳುತ್ತಿದ್ದರು. ಈ ಅನುಭವಗಳಿಂದ ಕಾರ್ಮಿಕರು ಸಂಘಗಳನ್ನು ರಚಿಸಿಕೊಳ್ಳುವದರ ಮೂಲಕ ತಮ್ಮ ಹಕ್ಕು ಬಾಧ್ಯತೆಗಳನ್ನು ರಕ್ಷಿಸಿಕೊಳ್ಳಬಹುದೆಂಬುದನ್ನು ಕಲಿತರು. ಹೀಗೆ ವೃತ್ತಿ ಸಂಘ ಚಳವಳಿ ಪ್ರಾರಂಭವಾಯಿತು.

18) ರಾಷ್ಟ್ರಗಳ ಸಂಘ [ಲೀಗ ಆಫ್ ನೇಷನ್ಸ್] ಎಂಬ ಹೆಸರನ್ನು ಸೂಚಿಸಿದವರು ಯಾರು ? ಇದರ ಎರಡು ಸಾಧನೆಗಳೇನು ?

ಉತ್ತರ : ರಾಷ್ಟ್ರಗಳ ಸಂಘ [ಲೀಗ ಆಫ್ ನೇಷನ್ಸ್] ಎಂಬ ಹೆಸರನ್ನು ಸೂಚಿಸಿದವರು ಆಗಿನ ಅಮೇರಿಕದ ಅಧ್ಯಕ್ಷ ವಿಲ್ಸನ್.

ಸಾಧನೆಗಳು : 1) ದೊಡ್ಡ ರಾಷ್ಟ್ರಗಳ ನೌಕಾಪಡೆಯ ಪರಿಮಿತಿಯನ್ನು 1921 ರಲ್ಲಿ ಸಮಾವೇಶಗೊಂಡ ವಾಷಿಂಗಟನ್ ನೌಕಾ ಸಮ್ಮೇಳನ ನಿರ್ಧರಿಸಿತು.

2) 1928 ರ ವಿಶ್ವ ನಿಶಸ್ತ್ರೀಕರಣ ಸಮ್ಮೇಳನದಲ್ಲಿ ಭಾಗವಹಿಸಿದ ಐವತ್ತು ರಾಷ್ಟ್ರಗಳು ಯುದ್ಧವನ್ನು ತ್ಯಜಿಸುವ ಒಪ್ಪಂದಕ್ಕೆ ಸಹಿ ಹಾಕಿದವು.

3) ಹನ್ನೆರಡಕ್ಕೂ ಹೆಚ್ಚು ಅಂತರ್‌ರಾಷ್ಟ್ರೀಯ ವಿವಾದಗಳನ್ನು ಬಗೆಹರಿಸಿತು.

19) ಶಾಂತಿ ಸಮಯದಲ್ಲಿ ರಕ್ಷಣಾ ಪಡೆಗಳ ಪಾತ್ರ ವೇನು ?

ಉತ್ತರ : ಯಾವದೇ ಬಗೆಯ ದಂಗೆ ಅಥವಾ ಪ್ರತಿಕೂಲ ಚಟುವಟಿಕೆಗಳಂತಹ ಆತಂಕಕಾರಿ ಆಂತರಿಕ ಅಶಾಂತಿಯ ಸಮಯದಲ್ಲಿ ಪೋಲೀಸರು ಪರಿಸ್ಥಿತಿಯನ್ನು ಹತೋಟಿಗೆ ತರುವಲ್ಲಿ ಅಸಮರ್ಥರಾದಾಗ ಶಾಂತಿ ಸಮಯದ ಕಾರ್ಯದ ಅಂಗವಾಗಿ ಸೈನಿಕರುಗಳು ಪೌರ ಆಧಿಕಾರಿಗಳಿಗೆ ಸಹಾಯ ಮಾಡುತ್ತವೆ. ಪ್ರವಾಹ, ಬರಗಾಲ, ಭೂಕಂಪ ಮತ್ತು ಬೆಂಕಿಯೇ ಮುಂತಾದ ನೈಸರ್ಗಿಕ ವಿಕೋಪಗಳಿಂದ ದೇಶದ ವಿವಿಧ ಭಾಗದಲ್ಲಿ ಉಂಟಾಗುವ ಕ್ಷೋಭೆಯನ್ನು ನಿವಾರಿಸುವಲ್ಲಿ ಅವು ಶ್ರಮಿಸುತ್ತವೆ.

20) ಡಾ|| ಸನ್‌ಯತ್ ಸೇನರು ಆಧುನಿಕ ಚೀನಾದ ಪ್ರಬಲನಾಯಕ ವಿವರಿಸಿ.

ಉತ್ತರ : Ref Q No II [23] of March 1986.

21) ಇವುಗಳು ಏನು 1) ಸಿಯಾಟೊ [SEATO] ಮತ್ತು ನಾಟೊ [NATO] ಇವುಗಳನ್ನು ರಚಿಸಲು ಕಾರಣ ವೇನು ?

ಉತ್ತರ : SEATO— ಎಂದರೆ [ಸೌಥ ಈಸ್ಟ ಏಸಿಯಾ ಟ್ರೆಟಿ ಆರ್ಗನೈಝೇಶನ್]— ಆಗ್ನೇಯ ಏಸಿಯಾದ ಒಪ್ಪಂದಕೂಟ.

ಉತ್ತರ : NATO— ಅಟ್ಲಾಂಟಿಕ್ ಒಪ್ಪಂದಕೂಟ. ಇವು ಮಿಲಿಟರಿ ಬಣಗಳು ಅನಿರೀಕ್ಷಿತ ದಾಳಿಯ ವಿರುದ್ಧವಾಗಿ ನಿಲ್ಲುವದು ಈ ಸಾಮುದಾಯಕ ಭದ್ರತೆಯ ಉದ್ದೇಶವಾಗಿತ್ತು. ಮೇಲಿನ ಮಿಲಿಟರಿ ಬಣಗಳು ಕಮ್ಯುನಿಜಂ ತಡೆಗಟ್ಟಲು ರಚಿಸಲ್ಪಟ್ಟವು.

22) ಭಾರತೀಯ ಪ್ರಜೆಯು ಹೊಂದಿರುವ ಯಾವುದಾದರೂ ನಾಲ್ಕು ಮೂಲಭೂತ ಹಕ್ಕುಗಳನ್ನು ತಿಳಿಸಿ.

ಉತ್ತರ : 1) ಸಮಾನತೆಯ ಹಕ್ಕು 2) ಸ್ವಾತಂತ್ರ್ಯದ ಹಕ್ಕು 3) ಶೋಷಣೆಯನ್ನು ವಿರೋಧಿಸುವ ಹಕ್ಕು 4) ಧಾರ್ಮಿಕ ಸ್ವಾತಂತ್ರ್ಯದ ಹಕ್ಕು.

23) "ಬ್ಲಾಕ್ ಶರ್ಟ್ಸ್" ಎಂಬ ಯೋಧರ ಪಕ್ಷವನ್ನು ವ್ಯವಸ್ಥೆಗೊಳಿಸಿದವರು ಯಾರು ? ಯಾವ ದೇಶದಲ್ಲಿ ಅದನ್ನು ಸ್ಥಾಪಿಸಲಾಯಿತು ?

ಉತ್ತರ : ಬೆನಿಟೊ ಮುಸೊಲಿನಿ 1919 ರಲ್ಲಿ ಯೋಧರ ಸಂಘವೆಂಬ ಒಂದು ಪಕ್ಷವನ್ನು ಸ್ಥಾಪಿಸಿದನು. ಅದು ಸರ್ವಾಧಿಕಾರಿ [ಫ್ಯಾಸಿಸ್ಟ] ಪಕ್ಷವೆಂದು ಜನಪ್ರಿಯವಾಯಿತು. ಕಮ್ಯುನಿಜಂ ದ್ವೇಷಿಸುವದು, ಪ್ರಜಾಪ್ರಭುತ್ವವನ್ನು ವಿರೋಧಿಸುವದು ಮತ್ತು ತೀವ್ರವಾದ ರಾಷ್ಟ್ರೀಯತೆ ಈ ಮೂರು ಅಂಶಗಳ ಕಾರ್ಯಕ್ರಮವನ್ನು ಅದು ಹೊಂದಿತ್ತು. "ಬ್ಲಾಕ್‌ಶರ್ಟ್ಸ್" ಎಂಬ ಯೋಧರ ಪಕ್ಷವನ್ನು ವ್ಯವಸ್ಥೆಗೊಳಿಸಿ ಮುಸೊಲಿನಿಯು 1922 ರಲ್ಲಿ ಅಧಿಕಾರವನ್ನು ಸ್ವಾಧೀನಪಡಿಸಿಕೊಂಡನು.

D. ಈ ಪ್ರಶ್ನೆಗಳಿಗೆ ಉತ್ತರಗಳು ಆರು ವಾಕ್ಯಗಳಿಗೆ ಮೀರದಂತಿರಲಿ.

24) ರಾಮಕೃಷ್ಣ ಮಿಷನ್ ಸ್ಥಾಪಿಸಿದವರು ಯಾರು ? ಮಿಷನ್ ಸಲ್ಲಿಸಿರುವ ಧಾರ್ಮಿಕ ಮತ್ತು ಸಾಮಾಜಿಕ ಸೇವೆಗಳಾವವು ?

ಉತ್ತರ : ರಾಮಕೃಷ್ಣ ಮಿಷನ್‌ನ್ನು ಸ್ವಾಮಿ ವಿವೇಕಾನಂದರು ಸ್ಥಾಪಿಸಿದರು. ಈ ಸಂಸ್ಥೆಯು ಪ್ರಾಚೀನ ಭಾರತದ ಸಂಸ್ಕೃತಿಯಿಂದ ಸ್ಫೂರ್ತಿ ಪಡೆಯಿತು. ಇದು ಅಂಧ ವಿಶ್ವಾಸ ಗಳನ್ನು, ಮೂಢ ನಂಬಿಕೆಗಳನ್ನು ಖಂಡಿಸಿ ತರ್ಕಬದ್ಧವಾದ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಿತು. ಇದು ಶಾಲೆಗಳು, ಆಸ್ಪತ್ರೆಗಳು, ಗ್ರಂಥ ಭಂಡಾರಗಳು ಮತ್ತು ಅನಾಥ ನಿಲಯಗಳನ್ನು ತೆರೆದು ಸಾಮಾಜಿಕ ಮತ್ತು ಮಾನವೀಯ ಕ್ಷೇತ್ರಗಳಲ್ಲಿ ಮಹತ್ವವಾದ ಕಾರ್ಯ ಮಾಡಿತು.

25) ವಾರೆನ್ ಹೇಸ್ಟಿಂಗ್ಸನ ಸುಧಾರಣೆಗಳನ್ನು ತಿಳಿಸಿ.

ಉತ್ತರ : 1) ಬಂಗಾಳ, ಬಿಹಾರಗಳ ನಾಯಕ ನವಾಬನ ಹುದ್ದೆಯನ್ನು ರದ್ದು ಪಡಿಸಿದನು, ನವಾಬನಿಗೆ ಕೊಡಲಾಗು ತ್ತಿದ್ದ ವರ್ಷಾಶನವನ್ನು 32 ಲಕ್ಷಗಳಿಂದ 16ಲಕ್ಷಕ್ಕೆ ಇಳಿಸಿದನು. 2) ಕ್ಲೈವನು ಜಾರಿಗೆ ತಂದಿದ್ದ ದ್ವಿಮುಖ ಸರ್ಕಾರವನ್ನು ರದ್ದು ಪಡಿಸಿದನು ಮತ್ತು ಅಮೀಲರ ಸ್ಥಾನದಲ್ಲಿ ಕಲೆಕ್ಟರುಗಳನ್ನು ನೇಮಿಸಿದನು. ಅವರಿಗೆ ನ್ಯಾಯಾಧೀಶರ ಅಧಿಕಾರವನ್ನು ವಹಿಸಿ ದನು. 3) ಕಂದಾಯದ ಆಡಳಿತವೆಲ್ಲವನ್ನೂ "ಬೋರ್ಡ್ ಆಫ್ ರೆವ್ಹೆನ್ಯೂ"ವಿನ ನಿಯಂತ್ರಣಕ್ಕೆ ಒಳಪಡಿಸಿದನು. 4) ನ್ಯಾಯಾಂಗದಲ್ಲಿ ಸುಧಾರಣೆಗಳನ್ನೂ ಮಾಡಿದನು. ಇದರಿಂದ ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯಾಲಯಗಳ ಸ್ಥಾಪನೆಯಾಯಿತು.

26) ವಿಶ್ವ ಆರೋಗ್ಯ ಸಂಸ್ಥೆಯು ( W. H. O. ) ಜನಗ ಆರೋಗ್ಯ ಸುಧಾರಿಸಲು ಹೇಗೆ ಸೇವೆ ಸಲ್ಲಿಸುತ್ತಿದೆ ? ಇದರ ಕೇಂದ್ರ ಕಛೇರಿ ಎಲ್ಲಿದೆ ?

**ಉತ್ತರ :** ವಿಶ್ವ ಆರೋಗ್ಯ ಸಂಸ್ಥೆಯು ಜನತೆಯ ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಅಂತರ್‌ರಾಷ್ಟ್ರೀಯ ಸಹಕಾರದ ಮೂಲಕ ಉತ್ತಮಗೊಳಿಸಲು ಪ್ರಯತ್ನಿಸುತ್ತಿರುವ ತಜ್ಞ ಸಂಸ್ಥೆಯಾಗಿದೆ. ಸಿಡುಬು, ಪ್ಲೇಗು, ಕಾಲರ ಇತ್ಯಾದಿ ಗಂಡಾಂತರಕಾರಿ ಮತ್ತು ಅಂಟು ಜಾಡ್ಯಗಳ ಹರಡುವಿಕೆಯ ಬಗ್ಗೆ ಅನುದಿನದ ಸಮಾಚಾರ ನೀಡುವ ವಿಭಾಗವನ್ನು ಹೊಂದಿದೆ. ಹಾಮಿಲೆ, ಗಾಯ ಮತ್ತು ಸಾವಿನ ಕಾರಣಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. ಎಲ್ಲಿಯೇ ಸಾಂಕ್ರಾಮಿಕ ರೋಗ ಕಾಣಿಸಿಕೊಂಡರೆ ಅದರ ಬಗ್ಗೆ ಮುನ್ನೆಚ್ಚರಿಕೆ ನೀಡುತ್ತದೆ. ಅದಕ್ಕೆ ಸಂಬಂಧಿಸಿದ ಔಷಧಿ, ಚುಚ್ಚು ಮದ್ದುಗಳು ಮತ್ತು ಲಸಿಕೆಗಳ ಅಂತರರಾಷ್ಟ್ರೀಯ ಗುಣಮಟ್ಟವನ್ನು ನಿರ್ಧರಿಸುತ್ತದೆ. ಮಾನವ ಸಂತಾನೋತ್ಪತ್ತಿ, ಹೃದಯರೋಗಗಳು ಮತ್ತು ಕ್ಯಾನ್ಸರ್‌ಗಳ ಬಗ್ಗೆ ವೈದ್ಯಕೀಯ ಸಂಶೋಧನೆಗೆ ಪ್ರೋತ್ಸಾಹ ನೀಡುತ್ತದೆ. ಇದರ ಕೇಂದ್ರ ಕಚೇರಿಯು ಜಿನೀವಾದಲ್ಲಿದೆ.

27] ಗಡಿ ಭದ್ರತಾ ಪಡೆಗಳ ಕರ್ತವ್ಯಗಳಾವವು

**ಉತ್ತರ :** ಉತ್ತರಕ್ಕಾಗಿ ಅಕ್ಟೋಬರ 1987 ರ ಪ್ರಶ್ನೆ ಡ [27] ನೋಡಿರಿ.

E. ಈ ಪ್ರಶ್ನೆಗಳಿಗೆ ಉತ್ತರಗಳು ಒಂದೂವರೆ ಪುಟಕ್ಕೆ ಮೀರದಂತಿರಲಿ.

28) ಪ್ರಾರ್ಥನಾ ಸಮಾಜದ ಧ್ಯೇಯಗಳೇನು ? ನ್ಯಾಯಮೂರ್ತಿ ರಾನಡೆಯವರು. ಸಾಮಾಜಿಕ ಸುಧಾರಣೆ ಪಡೆದ ಬಗೆ ಹೇಗೆ ?

ಉತ್ತರಕ್ಕೆ ಅಕ್ಟೋಬರ 1986 ರ ಪ್ರಶ್ನೆ D [27] ನೋಡಿರಿ.

29] ಮಹಾತ್ಮಾಗಾಂಧಿಯವರು ದೇಶಕ್ಕೆ ಸಲ್ಲಿಸಿರುವ ಸೇವೆಗಳನ್ನು ಕೆಳಕಂಡ ಅಂಶಗಳಿಂದ ವಿವರಿಸಿ. 1] ಬ್ರಿಟಿಶರ ವಿರುದ್ಧ ಉಪಯೋಗಿಸಿದ ಆಯುಧಗಳು 2] ಮತೀಯ ಐಕ್ಯತೆಗೆ ಹೋರಾಟ 3] ಅವರ ಶಿಕ್ಷಣ ತತ್ವ 4] ಅವರು ಮತ್ತು ಹರಿಜನರು. **ಉತ್ತರ:** 1] ಗಾಂಧೀಜಿಯವರು ಬ್ರಿಟಿಶ್‌ರ ವಿರುದ್ಧ ಉಪಯೋಗಿಸಿದ ಅಸ್ತ್ರಗಳು "ಅಹಿಂಸೆ" ಮತ್ತು "ಸತ್ಯಾಗ್ರಹ" ಇವು ನೈತಿಕ ಆಯುಧಗಳು. ಸತ್ಯಾಗ್ರಹವೆಂದರೆ ಯಾರಿಗೂ ನೋವನ್ನುಂಟು ಮಾಡದೆ ಶಾಂತಿಯುತವಾಗಿ ಚಳವಳಿ ನಡೆಸುವದು. ಅಂದರೆ ಆತ್ಮ ಸಂಯಮ, ಶಿಸ್ತು ಮತ್ತು ನೈತಿಕ ಒತ್ತಡಗಳ ಮೂಲಕ ಚುರುಕಾಗಿ ಭಾಗವಹಿಸುವದು.

2] ಮತೀಯ ಐಕ್ಯತೆಗೆ ಹೋರಾಟ : ಅವರಿಗೆ ಮತೀಯ ಐಕ್ಯತೆಯು ಧರ್ಮಕ್ಕೆ ಸಂಬಂಧಪಟ್ಟ ವಸ್ತುವಾಗಿತ್ತು. ವರ್ಣ ಭೇದ ನೀತಿ, ಪ್ರತ್ಯೇಕತೆಯ ಕಾನೂನುಗಳು ಮತ್ತು ಅಸ್ಪೃಶ್ಯತೆ ಇವುಗಳನ್ನು ತೊಡೆದುಹಾಕಬೇಕೆಂದು ಅವರ ನಿಲುಮೆಯಾಗಿತ್ತು. ಅದಕ್ಕಾಗಿ ಖಿಲಾಫತ್ ಚಳುವಳಿಯನ್ನು ಬೆಂಬಲಿಸಿದರು. 1947 ಆಗಸ್ಟ 15 ರಂದು ಸ್ವಾತಂತ್ರ್ಯ ಸಮಾರಂಭದಲ್ಲಿ ಭಾಗವಹಿಸುವದಕ್ಕೆ ಬದಲಾಗಿ ಹಿಂದು ಮತ್ತು ಮುಸಲ್ಮಾನರಲ್ಲಿ ಶಾಂತಿ ಸ್ಥಾಪಿಸಲು ನೌಖಾಲಿಯಲ್ಲಿಯೇ ಉಳಿಯಲು ನಿರ್ಧರಿಸಿದರು. ಅವರು ಬರಿಕಾಲಿನಲ್ಲಿ ಹಳ್ಳಿಯಿಂದ ಹಳ್ಳಿಗೆ ಚಲಿಸುತ್ತ ಮಾನವನ ಸಹೋದರ ಭಾವದ ಪ್ರಾಮುಖ್ಯತೆಯನ್ನು ಬೋಧಿಸಿದರು.

3] ಅವರ ಶಿಕ್ಷಣ ತತ್ವ : ಅವರು ಉತ್ತೇಜನಾತ್ಮಕ ಚಟುವಟಿಕೆಯನ್ನು ಆಧರಿಸಿದ ಒಂದು ಹೊಸ ಮಾದರಿಯ ಶಿಕ್ಷಣವನ್ನು ಪ್ರತಿಪಾದಿಸಿದರು. ಇದು ಮೂಲ ಶಿಕ್ಷಣ ಎಂದು ಜನಪ್ರಿಯವಾಗಿದೆ. ಇದಕ್ಕೆ ವಾರ್ಧಾ ಶಿಕ್ಷಣ ವಿಧಾನ ಎಂದೂ ಹೆಸರು. 1] ಉತ್ಪನ್ನಕಾರಕ ಚಟುವಟಿಕೆ 2] ಪ್ರಾದೇಶಿಕ ಅಥವಾ ಮಾತೃ ಭಾಷೆಯ ಪ್ರಾಮುಖ್ಯತೆ 3] ವೃತ್ತಿಗೆ ಪ್ರಾಮುಖ್ಯತೆ 4] ಸ್ವಸಹಾಯ ಮತ್ತು ದುಡಿಮೆಯ ಗೌರವ.

4] ಅವರು ಮತ್ತು ಹರಿಜನರು : ಗಾಂಧೀಜಿಯವರು ಒಬ್ಬ ದೊಡ್ಡ ಸಮಾಜ ಸುಧಾರಕರು ಎಲ್ಲ ಮಾನವೀಯ ಸಂಬಂಧಗಳೂ ದ್ವೇಷದ ಆಧಾರದ ಮೇಲಲ್ಲ ಪ್ರೀತಿಯ ಆಧಾರದ ಮೇಲೆ ಇರಬೇಕೆಂದುನಂಬಿದ್ದರು.ಅವರು ನಿಮ್ನ ವರ್ಗದವರನ್ನು ಪ್ರೀತಿಸುತ್ತಿದ್ದರು.ಮತ್ತು ಅವರನ್ನು "ಹರಿಜನರು" ಎಂದರೆ ದೇವರ ಮಕ್ಕಳು ಎಂದು ಕರೆದರು. ಹರಿಜನರನ್ನು ಸಮಾನತೆಯ ದೃಷ್ಟಿಯಿಂದ ನೋಡಿಕೊಳ್ಳಬೇಕೆಂದೂ, ತಮ್ಮ ಪ್ರಾರ್ಥನಾಗೃಹಗಳನ್ನು ಅವರಿಗೆ ತೆರೆಯಬೇಕೆಂದೂ ಮತ್ತು ಅವರನ್ನು ಅಣ್ಣ ತಮ್ಮಂದಿರಂತೆ ಪ್ರೀತಿಸಬೇಕೆಂದೂ ಹಿಂದುಗಳನ್ನು ಪ್ರಾರ್ಥಿಸಿದರು.

30] ನಾಜಿ ಪಕ್ಷವನ್ನು ಜರ್ಮನಿಯಲ್ಲಿ ಸ್ಥಾಪಿಸಿದವರು ಯಾರು ? ಅವನ ವಿದೇಶಾಂಗ ನೀತಿಯ ಗುರಿಯೇನು ? ಅವನ ಸಾಧನೆಗಳೇನು ?

**ಉತ್ತರ :** ಉತ್ತರಕ್ಕಾಗಿ ಎಪ್ರಿಲ್ 1985 ರ ಪ್ರಶ್ನೆ 5 [3]ನ್ನು ನೋಡಿರಿ.

31] ರಾಷ್ಟ್ರೀಯ ಭಾವೈಕ್ಯತೆ ಎಂದರೇನು ? ರಾಷ್ಟ್ರೀಯ ಭಾವೈಕ್ಯತೆಗೆ ಇವುಗಳು ಹೇಗೆ ಸಹಾಯಕವಾಗಿವೆ ?

1] ರಾಷ್ಟ್ರೀಯ ಐಕ್ಯತೆಯ ಚಿಹ್ನೆಗಳು 2] ರಾಷ್ಟ್ರೀಯ ಸಂಘ ಸಂಸ್ಥೆಗಳು.

**ಉತ್ತರ :** ರಾಷ್ಟ್ರೀಯ ಭಾವೈಕ್ಯತೆಯು ಪ್ರಜೆಗಳಲ್ಲಿ ತಾವೆಲ್ಲರೂ ಒಂದು ಎಂಬ ಮನೋಭಾವವನ್ನು ಸೂಚಿಸುತ್ತದೆ. ತಾವೆಲ್ಲರೂ ಒಂದು ರಾಷ್ಟ್ರದ ಸದಸ್ಯರು ಮತ್ತು ತಮ್ಮ ನಡುವೆ ಅನೇಕ ಸರಿಸಮಾನ ಗುಣಲಕ್ಷಣಗಳಿವೆ ಎಂಬ ಭಾವನೆಯನ್ನು ಉಂಟು ಮಾಡುತ್ತದೆ. ಅವರೊಳಗೆ ಒಗ್ಗಟ್ಟು, ಸಹಿ

ಸ್ನೃತಿ, ಪರಸ್ಪರ ಗೌರವ ಭಾವನೆ ಮತ್ತು ಪ್ರೀತಿಯನ್ನು ಅಧು ವೃದ್ಧಿಸುತ್ತದೆ. ಜಾತೀಯತೆ, ಕೋಮುವಾರ ಭಾವನೆ, ಪ್ರಾಂತೀಯತೆ, ಭಾಷಾ ದುರಾಭಿಮಾನಗಳನ್ನು ರಾಷ್ಟ್ರೀಯ ಭಾವೈಕ್ಯತೆಯಿಂದ ನಿವಾರಿಸಬಹುದು. ರಾಷ್ಟ್ರೀಯ ಭಾವೈಕ್ಯತೆಯು ಪ್ರತಿಯೊಬ್ಬ ವ್ಯಕ್ತಿಗೆ ತನ್ನ ವ್ಯಕ್ತಿತ್ವವನ್ನು ತನಗೆ ಸಾಧ್ಯವಿರುವಷ್ಟು ಬೆಳೆಸಿಕೊಳ್ಳಲು ಮತ್ತು ರಾಷ್ಟ್ರಕ್ಕೆ ತನಗೆ ಸಾಧ್ಯವಿರುವ ಅಮೋಘ ಸೇವೆ ಸಲ್ಲಿಸಲು ಸಹಾಯ ಮಾಡುತ್ತದೆ.

ರಾಷ್ಟ್ರೀಯ ಐಕ್ಯತೆಯ ಚಿಹ್ನೆಗಳು :— ರಾಷ್ಟ್ರಧ್ವಜ, ರಾಷ್ಟ್ರಗೀತೆ ಮತ್ತು ರಾಷ್ಟ್ರ ಲಾಂಛನ ಇವು ರಾಷ್ಟ್ರೀಯ ಐಕ್ಯತೆಯ ಚಿಹ್ನೆಗಳು. ಪ್ರತಿಯೊಂದು ರಾಷ್ಟ್ರವೂ ತನ್ನದೇ ಆದ ಧ್ವಜವನ್ನು ಹೊಂದಿದೆ. ಅದು ಆ ದೇಶದ ಆದರ್ಶಗಳು ಮತ್ತು ಮೌಲ್ಯಗಳ ಪ್ರತೀಕವಾಗಿದೆ. ರಾಷ್ಟ್ರಧ್ವಜವು ದೇಶದ ಬಗ್ಗೆ ಅತೀವ ಪ್ರೇಮ ಮತ್ತು ಹೆಮ್ಮೆಯನ್ನು ಮೂಡಿಸುತ್ತದೆ. ರಾಷ್ಟ್ರಗೀತೆಯು ಉದಾತ್ತ ಸಂದೇಶ ಸಾರುತ್ತದೆ ರಾಷ್ಟ್ರೀಯ ಲಾಂಛನವು ಕಣ್ಣಿಗೆ ಕಾಣುವ ಒಂದು ಚಿಹ್ನೆ ಅದು ರಾಷ್ಟ್ರೀಯ ಭಾವೈಕ್ಯತೆಯ ವೃದ್ಧಿಗೆ ಸಹಾಯ ಮಾಡುತ್ತದೆ. ನಮ್ಮ ರಾಷ್ಟ್ರ ಲಾಂಛನವನ್ನು ಸಾರನಾಥ ಸ್ತೂಪದಿಂದ ತೆಗೆದುಕೊಳ್ಳಲಾಗಿದೆ. ಅದು ಭಾರತೀಯ ಸಂಸ್ಕೃತಿಯ ಒಂದು ಲಕ್ಷಣವಾದ ವೈವಿಧ್ಯತೆಯೊಳಗೆ ಅಖಂಡತೆಯನ್ನು ಪ್ರತಿನಿಧಿಸುತ್ತದೆ. ಅದು ಸರ್ವಕಾಲಿಕ ಸತ್ಯವೊಂದನ್ನು ಸಾರಿದೆ. ಅದೆಂದರೆ ಅಂತಿಮವಾಗಿ ಯಾವಾಗಲೂ ಸತ್ಯಕ್ಕೆ ಜಯ. ಇಂತಹ ಉದಾತ್ತ ತತ್ವಗಳು ನಮ್ಮನ್ನು ರಾಷ್ಟ್ರೀಯ ಭಾವೈಕ್ಯತೆಯ ದಾರಿಯಲ್ಲಿ ಕೊಂಡೊಯ್ಯುತ್ತವೆ.

ರಾಷ್ಟ್ರೀಯ ಸಂಘ ಸಂಸ್ಥೆಗಳು :— ರಾಷ್ಟ್ರೀಯ ಸಾಹಿತ್ಯ ವಿದ್ವನ್ಮಂಡಲಿ, ಸಂಗೀತ ನಾಟಕ ವಿದ್ವನ್ಮಂಡಲಿ ಮತ್ತು ಲಲಿತ ಕಲಾ ವಿದ್ವನ್ಮಂಡಲಿಗಳು ಜ್ಞಾನಾರ್ಜನೆ ಮತ್ತು ಕಲೆಗಳನ್ನು ಪ್ರೋತ್ಸಾಹಿಸುವದಲ್ಲದೆ ವಿವಿಧ ಪ್ರಾಂತ್ಯಗಳ, ವಿವಿಧ ವೃತ್ತಿಗಳ ವಿದ್ವಾಂಸರನ್ನು ಒಂದೆಡೆ ಕೂಡಿಸುತ್ತದೆ. ಸಹಜವಾಗಿಯೇ ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಳೆಸುತ್ತದೆ. ಭಾರತೀಯ ವೈಜ್ಞಾನಿಕ ಸಂಸ್ಥೆ, ಭಾರತೀಯ ತಾಂತ್ರಿಕ ಶಿಕ್ಷಣ ಸಂಸ್ಥೆ, ಹಲವಾರು ಅಖಿಲ ಭಾರತ ವಿದ್ಯಾಸಂಸ್ಥೆಗಳು ದೇಶಾದ್ಯಂತ ಬರುವ ವಿಜ್ಞಾನಿಗಳಿಗೆ ಮತ್ತು ವಿದ್ವಾಂಸರಿಗೆ ತರಬೇತಿ ನೀಡುತ್ತವೆ. ರಾಷ್ಟ್ರೀಯ ಕ್ರೀಡಾ ಸ್ಪರ್ಧೆಗಳು, ರಾಷ್ಟ್ರೀಯ ಸೇವಾ ಯೋಜನೆಯ ಶಿಬಿರಗಳು, ರಾಷ್ಟ್ರೀಯ ಯುವ ಸೇನಾದಳ ಶಿಬಿರಗಳು ಮತ್ತು ಯುವ ಸಮ್ಮೇಳನಗಳು ಏಕತೆಯನ್ನು ಯುವ ಜನರು ಮನಗಾಣುವಂತೆ ಮಾಡಿವೆ.

....O...

# ಸಮಾಜ ಪಾಠಗಳು

**ಜೂನ–1988 ದ್ವಿತೀಯ ಪತ್ರಿಕೆ**

## [ ಭೂ ವಿವರಣೆ ]

I. ನಮ್ಮ ದೇಶದ ಆರ್ಥಿಕ ಪ್ರಗತಿಯಲ್ಲಿ ರಸ್ತೆಗಳ ಪಾತ್ರವನ್ನು ವಿವರಿಸಿ.

ಉತ್ತರ : ಭಾರತದ ಆರ್ಥಿಕ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ರಸ್ತೆ ಸಾರಿಗೆ ಅತಿ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಹಳ್ಳಿಗಾಡುಗಳಲ್ಲಿ ಜನ ಮತ್ತು ಪದಾರ್ಥಗಳ ಸಾಗಾಣಿಕೆ ರಸ್ತೆಯಿಂದಲೇ ಆಗಬೇಕು. ಭಾರತದ ಎಲ್ಲಾ ಹಳ್ಳಿಗಳೂ ಜಲ ಅಥವಾ ರೈಲು ಸಂಪರ್ಕ ಹೊಂದಿಲ್ಲ. ಆದ್ದರಿಂದ ಆರ್ಥಿಕತೆಯಲ್ಲಿ ರಸ್ತೆಗಳು ಬಹು ಮುಖ್ಯ ಪಾತ್ರವನ್ನು ವಹಿಸುತ್ತವೆ. ರಸ್ತೆ ಸಾರಿಗೆಗೆ ಅನೇಕ ವಿಧವಾದ ವಾಹನಗಳಿವೆ. ಎತ್ತಿನ ಬಂಡಿಯಿಂದ ಹಿಡಿದು ಆಧುನಿಕ ಮೋಟಾರು ಲಾರಿಗಳವರೆಗೆ ಖಾಸಗಿ ಸಾರಿಗೆ ಸಂಸ್ಥೆಗಳು ಅನೇಕ ವಾಹನಗಳನ್ನು ಪಡೆದಿದ್ದು ಪದಾರ್ಥಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುತ್ತವೆ.

ಹಿಂದಿನ ಕಾಲದಲ್ಲಿ ರಸ್ತೆಗಳು ಉತ್ತಮ ಸ್ಥಿತಿಯಲ್ಲಿರಲಿಲ್ಲ. ನಂತರ ಉತ್ತಮ ರಸ್ತೆಗಳು ನಿರ್ಮಾಣವಾದವು. ಹೆದ್ದಾರಿಗಳು ಸರಕುಗಳನ್ನು ಸಾಗಿಸಲು ಬಹಳ ಸಹಾಯಕಾರಿಯಾದವು. ಮಾರುಕಟ್ಟೆಗಳನ್ನು ಸಮೀಪ ತಂದವು. ಹಳ್ಳಿಗಳಿಂದ ಉತ್ಪಾದನಾ ವಸ್ತುಗಳು ನೇರವಾಗಿ ಮಾರುಕಟ್ಟೆ ಸೇರುವಂತಾಯಿತು.

ಸ್ವಾತಂತ್ರ್ಯ ನಂತರ ಒಂದು ರಾಷ್ಟ್ರೀಯ ಯೋಜನಾ ಆಯೋಗವು ರಸ್ತೆಯ ಪ್ರಾಮುಖ್ಯತೆಯನ್ನು ಅರಿಯಿತು. ಭಾರತದ ರಸ್ತೆಗಳನ್ನು ರಾಷ್ಟ್ರೀಯ ಹೆದ್ದಾರಿಗಳು, ರಾಜ್ಯ ಹೆದ್ದಾರಿಗಳು, ಜಿಲ್ಲಾ ಮತ್ತು ಹಳ್ಳಿ ರಸ್ತೆಗಳು ಎಂದು ನಾಲ್ಕು ಗುಂಪುಗಳಾಗಿ ಮಾಡಬಹುದು. ಭಾರತದಲ್ಲಿ ರಾಷ್ಟ್ರೀಯ ಹೆದ್ದಾರಿಗಳು ಮುಂಬಯಿ, ಕಲ್ಕತ್ತಾ, ಮದ್ರಾಸ, ದೆಹಲಿ, ಬೆಂಗಳೂರ, ಪುಣೆ, ಅಮೃತಸರ ಮುಂತಾದ ಮುಖ್ಯ ನಗರಗಳನ್ನು ಸೇರಿಸುತ್ತವೆ. ಬೆಂಗಳೂರಿನ ಮೂಲಕ ಮುಂಬಯಿಯಿಂದ ಮದ್ರಾಸಿಗೆ ಹೋಗುವದೊಂದು ರಾಷ್ಟ್ರೀಯ ಹೆದ್ದಾರಿ. ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ ರಸ್ತೆಯ ಬೆಳವಣಿಗೆ ಅಷ್ಟೊಂದು ಆಗಲಿಲ್ಲ. ಎರಡು ಮತ್ತು ಮೂರನೆಯ ಪಂಚವಾರ್ಷಿಕ ಯೋಜನೆಗಳು ರಸ್ತೆ ಸಾರಿಗೆಗೆ ಅತಿ ಮುಖ್ಯವಾಗಿ ಗಮನ ಕೊಟ್ಟವು. ಇದರ ಪರಿಣಾಮವಾಗಿ 1975 ರ ವೇಳೆಗೆ 12·15 ಲಕ್ಷ ಕಿಲೋಮೀಟರುಗಳಷ್ಟು ಹೆಚ್ಚಿತು. ನಾಲ್ಕು ಮತ್ತು ಐದನೆ ಯೋಜನೆಗಳಲ್ಲಿ ರಸ್ತೆಗಳನ್ನು ಅಗಲ ಮಾಡುವದು ಮತ್ತು ರಸ್ತೆಗಳ ಅಭಿವೃದ್ಧಿಗೆ ಗಮನ ಕೊಡಲಾಯಿತು.

ಗಡಿ ರಸ್ತೆಗಳ ಅಭಿವೃದ್ಧಿ ಅಧಿಕಾರ ಉತ್ತರ ಈಶಾನ್ಯ ಗಡಿ ಪ್ರದೇಶಗಳಲ್ಲಿ ರಸ್ತೆಗಳ ಉಸ್ತುವಾರಿ ನೋಡಿಕೊಳ್ಳುತ್ತದೆ.

ಅಥವಾ

ಕೈಗಾರಿಕಾ ಕೇಂದ್ರೀಕರಣ ಎಂದರೇನು ? ಕೈಗಾರಿಕಾ ಕೇಂದ್ರೀಕರಣಕ್ಕೆ ಸಹಾಯಕವಾದ ಅಂಶಗಳು ಯಾವವು ? ಒಂದು ಅಂಶವನ್ನು ವಿವರಿಸಿರಿ.

**ಉತ್ತರ :** ಎಪ್ರಿಲ್ 1985ರ ಪ್ರಶ್ನೆ 1 ನೋಡಿರಿ. ಒಂದು ಅಂಶವನ್ನು ವಿವರಿಸಲಾಗಿದೆ. ಕಚ್ಚಾ ವಸ್ತುಗಳು : ಆ ಕೈಗಾರಿಕೆಗೆ ಸಂಬಂಧ ಪಟ್ಟ ಕಚ್ಚಾ ವಸ್ತುಗಳ ದೊರವಿಕೆಯು ಬಹು ಮುಖ್ಯ ಅಂಶವಾಗಿವೆ. ಇವುಗಳು ಅಗ್ಗನಾಗಿ ಅಧಿಕ ಪ್ರಮಾಣದಲ್ಲಿ ದೊರೆಯಬೇಕು. ಇದರಿಂದ ಸಂಬಂಧಪಟ್ಟ ಕೈಗಾರಿಕೆಗಳು ಕೇಂದ್ರೀಕೃತವಾಗಿರುತ್ತವೆ.

II. ಅಂಚೆ ಕಛೇರಿಗಳು ಸಲ್ಲಿಸುವ ಸೇವೆಗಳು ಯಾವವು? ವಿಶ್ವದ ಅಂಚೆ ಸಂಘದ ಸಂಸ್ಥೆಯ ಸ್ಥಾಪನೆಯ ಉದ್ದೇಶವೇನು ?

ಉತ್ತರಕ್ಕೆ ಅಕ್ಟೋಬರ 1985 ಪ್ರಶ್ನೆ II [ಅಥವಾ] ನೋಡಿರಿ ಮತ್ತು ವಿಶ್ವದ ಅಂಚೆ ಸಂಘದ ಸಂಸ್ಥೆಯ ಸ್ಥಾಪನೆಯ ಉದ್ದೇಶಗಳು. :—

ಅಂತರ್‌ರಾಷ್ಟ್ರೀಯ ಅಂಚೆ ಸೇವೆಗಳಿಗೆ ತನ್ನುದ್ದೇ ಆದ ಸ್ವಾರಸ್ಯಕರ ಇತಿಹಾಸವಿದೆ. ಅಂಚೆ ಸೇವೆಯ ಆರ್ಥಿಕ, ತಾಂತ್ರಿಕ ಮತ್ತು ಕಾರ್ಯ ನಿರ್ವಹಣೆಯಲ್ಲಿ ಉದ್ಭವಿಸಬಹುದಾದ ಸಮಸ್ಯೆಗಳನ್ನು ಅಧ್ಯಯನ ಮಾಡುವುದಕ್ಕಾಗಿ ಸ್ವಿಟ್ಜರ್‌ಲೆಂಡಿನ ಬರ್ನ ನಗರದಲ್ಲಿ ವಿಶ್ವದ ಅಂಚೆ ಸಂಘದ ಸಂಸ್ಥೆಯು)ಯು.ಪಿ.ಯು.ಓ) 1876 ರಲ್ಲಿ ಸ್ಥಾಪಿತವಾಯಿತು. ಬೇರೆ ಬೇರೆ ದೇಶಗಳಿಗೆ ಅಂಚೆಯನ್ನು ತ್ವರಿತವಾಗಿ ಹಾಗೂ ಸುಗಮವಾಗಿ ಕಳುಹಿಸುವದು ನಿಜಕ್ಕೂ ಮುಖ್ಯವಾದ ಹಾಗೂ ಮಹತ್ವಪೂರ್ಣವಾದ ಕಾರ್ಯವಾಗಿದೆ.

ಅಥವಾ

ವಿದೇಶಿ ವಿನಿಮಯ ಅಂದರೇನು ? ವಿದೇಶಿ ವಿನಿಮಯದಲ್ಲಿರುವ ತೊಂದರೆಗಳನ್ನು ನಿವಾರಿಸುವ ಕ್ರಮಗಳನ್ನು ಹೆಸರಿಸಿ. ಅನುಕೂಲ ವ್ಯಾಪಾರ ಸಮತೋಲನ ಎಂದರೇನು ತಿಳಿಸಿರಿ.

**ಉತ್ತರ :** ಒಂದು ದೇಶದಲ್ಲಿ ಚಲಾವಣೆಯಲ್ಲಿರುವ ನಾಣ್ಯವನ್ನು ಇನ್ನೊಂದು ದೇಶದಲ್ಲಿ ಚಲಾವಣೆಯಲ್ಲಿರುವ ನಾಣ್ಯಕ್ಕೆ ಬದಲಾಯಿಸುವ ಅಥವಾ ವಿನಿಮಯ ಮಾಡುವ ಪದ್ಧತಿಗೆ ವಿದೇಶಿ ವಿನಿಮಯ ಎನ್ನುತ್ತಾರೆ. ಪ್ರತಿಯೊಂದು ದೇಶಕ್ಕೂ ವಿದೇಶಿ ವಿನಿಮಯದ ಅವಶ್ಯಕತೆ ಇದೆ. ನಮ್ಮ ದೇಶದ ಗಡಿಯನ್ನು ದಾಟಿ ಬೇರೆ ದೇಶಕ್ಕೆ ಹೋಗಬೇಕಾದ ಸಂದರ್ಭದಲ್ಲಿ ನಾವು ಚಲಾವಣೆಯ ಪ್ರಬಲವಾದ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಡಾಲರ ಚಲಾವಣೆಯಲ್ಲಿ ಇರುವ ನಾಣ್ಯ ನಮ್ಮ ದೇಶದಲ್ಲಿ ಚಲಾವಣೆಯಲ್ಲಿ ಇರುವ ನೋಟುಗಳು ಅಲ್ಲಿ ಉಪಯೋಗಕ್ಕೆ ಬರುವದಿಲ್ಲ. ಆದ್ದರಿಂದ ನಾವು ವಿದೇಶಕ್ಕೆ ಹೋಗಬೇಕಾದರೆ ಅಥವಾ ನಮ್ಮ ಸರಕುಗಳನ್ನು ವಿದೇಶಕ್ಕೆ ಕಳುಹಿಸಬೇಕಾದರೆ ಅವರಲ್ಲಿ ಚಲಾವಣೆಯಲ್ಲಿರುವ ಹಣದ ರೂಪದಲ್ಲಿ ನಾವು ಅವರಿಗೆ ಕೊಡಬೇಕಾಗುತ್ತದೆ. ಅದೇ ರೀತಿ ಅವರೂ ಸಹ ನಮ್ಮ ದೇಶದಲ್ಲಿ ಚಲಾವಣೆಯಲ್ಲಿರುವ ಹಣದ ರೂಪದಲ್ಲಿ ನಮಗೆ ಕೊಡಬೇಕಾಗುತ್ತದೆ, ಆದ್ದರಿಂದ ವಿದೇಶಿ ವಿನಿಮಯ ಅತ್ಯಂತ ಅವಶ್ಯವಾಗಿವೆ.

ವಿದೇಶಿ ವಿನಿಮಯ ಇಲ್ಲದಿದ್ದರೆ ಅಂತರ ರಾಷ್ಟ್ರೀಯ ವ್ಯಾಪಾರ ಸಾಧ್ಯವಿಲ್ಲ. ಅಂತೆಯೇ ಇಂದು ವಿದೇಶಿ ವಿನಿಮಯದ ಬಗ್ಗೆ ಇರುವ ಅನೇಕ ಸಮಸ್ಯೆಗಳನ್ನು ನಿವಾರಿಸಲು ಕ್ರಮ ಕೈಕೊಳ್ಳಲಾಗುತ್ತಿದೆ. ಕಂದಾಯ ಸಮತೋಲನ, ಪಾವತಿ ಮಾಡುವ ಗೃಹಪದ್ಧತಿ ಮುಂತಾದ ಕ್ರಮಗಳಿಂದ ವಿನಿಮಯದ ಸಮಸ್ಯೆಗಳಿಗೆ ಪರಿಹಾರ ದೊರಕಿಸಲಾಗುತ್ತದೆ.

**ಅನುಕೂಲ ವ್ಯಾಪಾರ ಸಮತೋಲನ :** ಒಂದು ದೇಶವು ವ್ಯಾಪಾರದ ಸಮತೋಲನ ಅನುಕೂಲ ಅಥವಾ ಪ್ರತಿಕೂಲವನ್ನು ಅನುಭವಿಸುತ್ತಿರುತ್ತದೆ. ಅನುಕೂಲವೆಂದರೆ ಆಮದಿಗಿಂತ ರಫ್ತು ಹೆಚ್ಚಾಗಿರುವದು ಒಂದು ವೇಳೆ ಭಾರತವು ಹೆಚ್ಚು ಬೆಲೆ ಬಾಳುವ ವಸ್ತುಗಳನ್ನು ರಫ್ತು ಮಾಡಿ ಕಡಿಮೆ ಬೆಲೆ ಬಾಳುವ ವಸ್ತುಗಳನ್ನು ಆಮದು ಮಾಡಿಕೊಂಡು ಅದು ಹೆಚ್ಚು ಹಣವನ್ನು ಪಡೆದು ಕಡಿಮೆ ಹಣವನ್ನು ಕೊಡುತ್ತದೆ. ಇದನ್ನು ವ್ಯಾಪಾರ ಸಮತೋಲನ ಅನುಕೂಲವೆಂದು ಕರೆಯುತ್ತಾರೆ.

III. ನಾಲ್ಕು ವಾಕ್ಯಗಳಿಗೆ ಮೀರದಂತೆ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿ.

1) ಆಸ್ಟ್ರೇಲಿಯಾದಲ್ಲಿ ಕ್ರಿಸ್‌ಮಸ್ ಹಬ್ಬವನ್ನು ಬೇಸಿಗೆ ಕಾಲದಲ್ಲಿ ಆಚರಿಸುತ್ತಾರೆ ಏಕೆ ?

**ಉತ್ತರ :** ಆಸ್ಟ್ರೇಲಿಯಾ ಖಂಡವು ದಕ್ಷಿಣ ಗೋಲಾರ್ಧದಲ್ಲಿ ಬರುತ್ತದೆ. ಡಿಶೆಂಬರ ತಿಂಗಳಲ್ಲಿ ಸೂರ್ಯನ ಕಿರಣಗಳು ನೇರವಾಗಿ ಬಿದ್ದು ಆಗ ಅಲ್ಲಿ ಬೇಸಿಗೆ ಕಾಲವಿರುತ್ತದೆ. ಆಗ ಉತ್ತರ ಗೋಲಾರ್ಧದಲ್ಲಿ ಚಳಿಗಾಲವಿರುತ್ತದೆ. ಕ್ರಿಸ್‌ಮಸ್ ಕ್ರಿಸ್‌ಮಸ್ ಹಬ್ಬವು ಡಿಶೆಂಬರ 25 ರಂದು ಬರುತ್ತದೆ. ಆದ್ದರಿಂದ ಕ್ರಿಸ್‌ಮಸ್ ಹಬ್ಬವನ್ನು ಆಸ್ಟ್ರೇಲಿಯಾದಲ್ಲಿ ಬೇಸಿಗೆಯಲ್ಲಿ ಆಚರಿಸುತ್ತಾರೆ.

2) ಭಾರತದಲ್ಲಿ ಅತಿ ಹೆಚ್ಚು ಜನಸಾಂದ್ರತೆ ಹೊಂದಿದ ಎರಡು ರಾಜ್ಯಗಳನ್ನು ಹೆಸರಿಸಿ.

**ಉತ್ತರ :** ಕೇರಳದಲ್ಲಿ ಜನಸಾಂದ್ರತೆ ಹೆಚ್ಚು. ಅದು ಒಂದು ಚದುರ ಕಿಲೋಮೀಟರಿಗೆ 654 ಮಂದಿಯನ್ನು ಹೊಂದಿದೆ.

ಪಶ್ಚಿಮ ಬಂಗಾಳ ಒಂದು ಚದುರ ಕಿಲೋಮೀಟರಿಗೆ 620 ಮಂದಿಯನ್ನು ಹೊಂದಿದೆ.

3) ಮಳೆಯ ವಿಧಗಳು ಯಾವವು ?

**ಉತ್ತರ :** ಮಳೆಯಲ್ಲಿ ಮೂರು ವಿಧಗಳುಂಟು.

1) ಪರ್ವತಜನಿತ ಅಥವಾ ಭೂ ಮುಕ್ತ ಮಳೆ.

2) ಪರಿಸರಣ ಮಳೆ.

3) ಆವರ್ತ ಅಥವಾ ಸಂಘರ್ಷ ಮಳೆ.

4) ಇತ್ತೀಚೆಗೆ "ಅಂತರರಾಷ್ಟ್ರೀಯ ಹಣಕಾಸು ನಿಧಿ"ಯ ಪಾತ್ರವು ಹೆಚ್ಚುತ್ತಲಿದೆ. ಹೇಗೆ ?

**ಉತ್ತರ :** ಅಂತರ್‌ರಾಷ್ಟ್ರೀಯ ಹಣಕಾಸಿನ ನಿಧಿಯು ಇತ್ತೀಚೆಗೆ ವಿದೇಶೀ ವಿನಿಮಯದ ವ್ಯವಹಾರದಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಈ ಸಂಸ್ಥೆಯು ಪಾವತಿ ಮಾಡುವ ಗೃಹ ಪದ್ಧತಿಯ ಕಾರ್ಯವನ್ನು ನಿರ್ವಹಿಸುತ್ತದೆ. ಮತ್ತು ಈ ಸಂಸ್ಥೆಯಲ್ಲಿ ಸದಸ್ಯತ್ವವನ್ನು ಹೊಂದಿರುವ ಎಲ್ಲಾ ದೇಶಗಳಿಗೂ ನೆರವು ನೀಡುತ್ತದೆ. ವಿದೇಶಿ ವಿನಿಮಯದ ಸಮಸ್ಯೆಗಳನ್ನು ಎದುರಿಸುತ್ತಿರುವ ದೇಶಗಳಿಗೂ ಸಹಾಯವನ್ನು ಮಾಡುತ್ತದೆ.

5) ವ್ಯಾಪಾರವು ಸಹಕಾರವನ್ನು ವೃದ್ಧಿಸುತ್ತದೆ. ವಿವರಿಸಿ.

**ಉತ್ತರ :** ವ್ಯಾಪಾರದ ಅಭಿವೃದ್ಧಿ ಮತ್ತು ಗಾತ್ರ ಒಂದು ದೇಶದ ಆರ್ಥಿಕ ಸಾಧನೆಯ ನಿಜವಾದ ಸೂಚನೆಗಳಾಗಿವೆ. ವ್ಯಾಪಾರವು ದೇಶದ ಪ್ರಾಕೃತಿಕ ಸಂಪನ್ಮೂಲಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳಲು ಸಹಾಯ ಮಾಡುತ್ತ. ಮತ್ತು ಪ್ರತಿಯೊಂದು ದೇಶವು ಸಾಧ್ಯವಾದಷ್ಟು ಹೆಚ್ಚು ಪದಾರ್ಥಗಳನ್ನು ಉತ್ಪಾದಿಸಲು ಪ್ರಯತ್ನಿಸಿ ತನ್ನ ರಾಷ್ಟ್ರೀಯ ಸಂಪತ್ತನ್ನು ಹೆಚ್ಚಿಸುತ್ತದೆ.

ಹೀಗೆ ಅಂತರ್‌ರಾಷ್ಟ್ರೀಯ ವ್ಯಾಪಾರವು ಪರಸ್ಪರಾವಲಂಬನೆ ಭಾವನೆಯನ್ನು ಪರಸ್ಪರ ಸಹಕಾರವನ್ನು, ಶಾಂತಿಯುತ ಸಹಬಾಳ್ವೆಯನ್ನು ಮತ್ತು ರಾಷ್ಟ್ರೀಯ ಸಂಪತ್ತನ್ನು ಅಭಿವೃದ್ಧಿಗೊಳಿಸುತ್ತದೆ. ವ್ಯಾಪಾರವು ಅಂತರ್ ರಾಷ್ಟ್ರೀಯ ಸಾಮರಸ್ಯವನ್ನು ಮತ್ತು ವಿಶ್ವದ ಏಕತೆಯ ಕಲ್ಪನೆಯನ್ನು ಸ್ಥಾಪಿಸಲು ಸಹಾಯಕವಾಗುತ್ತದೆ.

## IV. ಕಾರಣ ಕೊಡಿ.

1) ಬೊಂಬಾಯಿಯು ಭಾರತದ ಹೆಬ್ಬಾಗಿಲು.

**ಉತ್ತರ :** ಬೊಂಬಾಯಿಯು ಇದು ಒಂದು ರೇವು ಪಟ್ಟಣ ಸ್ವಾಭಾವಿಕ ಬಂದರ ಇದೆ. ಇದಕ್ಕೆ ಬಲವಾದ ಹಿನ್ನಾಡು ಇದೆ. ಇಲ್ಲಿಂದ ವಿದೇಶಿ ವ್ಯಾಪಾರವನ್ನು ಸಮುದ್ರದ ಮೂಲಕ ನಡೆಯಿಸಲಾಗುವದು. ಇದರಿಂದ ವಿದೇಶಕ್ಕೆ ಹಿನ್ನಾಡಿನಲ್ಲಿ ದೊರೆಯುವ ಸರಕುಗಳು ರಫ್ತು ಆಗುವವು. ಆದುದರಿಂದ ಬೊಂಬಾಯಿಯು ಭಾರತದ ಹೆಬ್ಬಾಗಿಲು ಆಗಿದೆ.

2) ಸಾಮಾನ್ಯವಾಗಿ ಕೈಗಾರಿಕೆಗಳು ಬಂದರುಗಳ ಸಮೀಪ ಸ್ಥಾಪಿತವಾಗಿರುತ್ತವೆ.

**ಉತ್ತರ :** ಕೈಗಾರಿಕೆಗಳ ಸ್ಥಾಪನೆ, ಬಹುಮಟ್ಟಿಗೆ ಅಗ್ಗದ ಮತ್ತು ಸಾಗಾಣಿಕೆಯ ಸಮರ್ಥ ಸಾಧನ ಸೌಕರ್ಯಗಳನ್ನು ಅವಲಂಬಿಸಿದೆ. ಸಿದ್ಧ ವಸ್ತುಗಳನ್ನು ಸಮೀಪದ ಮತ್ತು ದೂರದ ಮಾರುಕಟ್ಟೆಗಳಿಗೆ ಸಾಗಿಸುವಿಕೆ, ಕೈಗಾರಿಕೆಗಳ ಸ್ಥಾಪನೆಗೆ ಸಂಬಂಧಿಸಿದ ಮತ್ತೊಂದು ಮುಖ್ಯ ಅಂಶ. ಜಲಮಾರ್ಗ ಸಾಗಾಣಿಕೆಗೆ ಅತ್ಯಂತ ಕಡಿಮೆ ವೆಚ್ಚವುಳ್ಳದ್ದಾಗಿದೆ. ಆದ್ದರಿಂದ ಆಳವಾದ ನೀರಿನಿಂದ ಕೂಡಿರುವ ಬಂದರಗಳುಳ್ಳ ಸಮುದ್ರ ತೀರ ಪ್ರದೇಶಗಳಲ್ಲಿ ಕೈಗಾರಿಕೆಗಳು ಸ್ಥಾಪಿತವಾಗಿವೆ.

3) ಹಣವು ವಸ್ತುಗಳ ವಿನಿಮಯ ಸಮಸ್ಯೆಗಳನ್ನು ನಿವಾರಿಸಿದೆ.

**ಉತ್ತರ :** ಅವಶ್ಯಕತೆಗಳು ಮತ್ತು ಪೂರೈಕೆಗಳು ಸದಾ ಒಂದೇ ರೀತಿ ಇಲ್ಲದಿರುವದರಿಂದ ಹೆಚ್ಚು ಕಾಲ "ವಸ್ತುಗಳ ವಿನಿಮಯ ಪದ್ಧತಿ"ಯ ನಿರ್ವಹಣೆ ಹಾಗೂ ಅದನ್ನು ಮುಂದುವರಿಸುವದು ಸಾಧ್ಯವಿಲ್ಲ ಆದ್ದರಿಂದ ಈ ಪದ್ಧತಿಯಲ್ಲಿ ಅನೇಕ ತೀವ್ರ ತೆರನಾದ ಲೋಪದೋಷಗಳಿವೆ. ಈ ತೊಂದರೆಗಳನ್ನು ನಿವಾರಿಸಲು ಬೇರೊಂದು ವಿನಿಮಯ ಮಾಧ್ಯಮವನ್ನು ಬಳಸಲಾಯಿತು. ಇದನ್ನೇ ಹಣವೆಂದು ಕರೆಯುತ್ತೇವೆ. ಹಣದ ಚಲಾವಣೆಯಿಂದ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಹೆಚ್ಚು ಅನುಕೂಲವಾಯಿತು. ಹೆಚ್ಚುವರಿ ವಸ್ತುಗಳನ್ನು ಮಾರಾಟ ಮಾಡುವದು ಸುಲಭವಾಯಿತು.

4) ಜಲಸಾರಿಗೆಯು ಹೆಚ್ಚು ಅನುಕೂಲಕರ.

**ಉತ್ತರ :** ಜಲಮಾರ್ಗ ಸಾಗಾಣಿಕೆ ಮಿಕ್ಕೆಲ್ಲ ವಿಧವಾದ ಸಾಗಾಣಿಕೆಗಳಿಗಿಂತ ತೀರ ಅಗ್ಗವಾದದ್ದು. ಜಲಮಾರ್ಗದ ಸಾಗಾಣಿಕೆಗೆ ಭಾರಿ ಬಂಡವಾಳ ಹೂಡಬೇಕಾಗಿಲ್ಲ. ಅಲ್ಲದೇ ಸಾಮಾನುಗಳನ್ನು ಸಾಗಿಸುವ ಶಕ್ತಿ ಉಳಿದೆಲ್ಲ ಸಾಗಾಣಿಕೆಗಿಂತ ಆಧುನಿಕ ಹಡಗುಗಳಿಗೆ ಹೆಚ್ಚಾಗಿದೆ.

5) ಆಸ್ಟ್ರೇಲಿಯಾ ದೇಶವು ವಾಯು ಮಾರ್ಗಗಳನ್ನು ಅವಲಂಬಿಸಿದೆ.

**ಉತ್ತರ :** ಆಸ್ಟ್ರೇಲಿಯಾ ದೇಶಕ್ಕೆ ಕೆಲವೇ ಬಂದರುಗಳಿವೆ. ಅವುಕೂಡ ಪೂರ್ವ ಮತ್ತು ದಕ್ಷಿಣ ತೀರದಲ್ಲಿವೆ. ಉಳಿದ ಕಡೆ ಉತ್ತಮ ಬಂದರಗಳಿಲ್ಲದ್ದರಿಂದ ಜಲಮಾರ್ಗಗಳು ಕಡಿಮೆ. ಆದ್ದರಿಂದ ಆಸ್ಟ್ರೇಲಿಯಾ ದೇಶವು ತನ್ನ ನಗರಗಳ ಮತ್ತು ರೇವು ಪಟ್ಟಣಗಳ ಸಂಪರ್ಕ ಪಡೆಯಲು ವಾಯು ಮಾರ್ಗಗಳನ್ನು ಅವಲಂಬಿಸಿದೆ.

6. ಗಂಗಾ ನದಿಯ ಬಯಲು ಹೆಚ್ಚು ಜನಸಾಂದ್ರತೆಗೆ ಹೆಸರು ಪಡೆದಿದೆ.

ಉತ್ತರ : ಗಂಗಾ ನದಿಯು ಇಡೀ ವರ್ಷ ತುಂಬಿ ಹರಿಯುತ್ತದೆ. ಈ ನದಿಯ ಮೈದಾನವು ಅತಿ ಫಲವತ್ತಾದ ಪ್ರದೇಶವಾಗಿದ್ದು, ವ್ಯವಸಾಯ, ಉದ್ದಿಮೆ ಮತ್ತು ಸಾರಿಗೆ ಸಂಪರ್ಕಗಳಿಗೆ ಹೆಚ್ಚು ಅನುಕೂಲತೆ ಪಡೆದಿದೆ.

V. A. ಬಿಟ್ಟ ಸ್ಥಳಗಳನ್ನು ಭರ್ತಿ ಮಾಡಿ. (ಉತ್ತರಗಳನ್ನು ಆವರಣಗಳಲ್ಲಿ ಕೊಟ್ಟಿದೆ.)

1) ಟನ್ನು ಮಾನದಲ್ಲಿ............ ವಸ್ತುಗಳ ಗುಂಪು ಅಂತರ್ ರಾಷ್ಟ್ರೀಯ ವ್ಯಾಪಾರದಲ್ಲಿ ಪ್ರಥಮ ಸ್ಥಾನ ಹೊಂದಿದೆ. [ಖನಿಜ]

2) ಕಬ್ಬಿಣ ಕರಗಿಸುವದು......... ಕೈಗಾರಿಕೆ[ಬೃಹತ್]

3) ಸೌರವ್ಯೂಹದಲ್ಲಿ ಸೂರ್ಯನು.......... [ಗ್ರಹ]

4) ಅತಿ ಚಿಕ್ಕ ಖಂಡ............[ಆಸ್ಟ್ರೇಲಿಯಾ]

5) ಪ್ರಪಂಚದಲ್ಲಿಯೇ ಅತ್ಯಂತ ಎತ್ತರವಾದ ಶಿಖರ ............[ಮೌಂಟ ಎವ್ಹರೆಸ್ಟ] [ಗೌರೀಶಂಕರ]

6) ಬ್ರಿಟನ್.............ಮೂಲ ಖನಿಜ ಸಂಪದ್ಭರಿತವಾಗಿದೆ. [ಕಬ್ಬಿಣ, ಕಲ್ಲಿದ್ದಲಿ]

7) ............ಭಾರತದ ಸ್ವಿಟ್ಜರ್‌ಲೆಂಡ್ ಎಂದು ಕರೆಯಲಾಗಿದೆ. [ಕಾಶ್ಮೀರ]

8) ಉತ್ಪಾದನಾ.........ಕಡಿಮೆ ಮಾಡಲು ಕಂಪ್ಯೂಟರಗಳನ್ನು ಉಪಯೋಗಿಸಲಾಗಿದೆ. [ವೆಚ್ಚ]

B. ಹೊಂದಿಸಿ ಬರೆಯಿರಿ :

| | |
|---|---|
| 1] ಸಂಟಲಾರೆನ್ಸ್ | a] ಕಾಲುವೆ |
| 2] ಸುಯೇಜ | b] ಅಲ್ಯುಮಿನಿಯಂ |
| 3] ಅಂಥ್ರಸೈಟ್ | c] ನದಿ |
| 4] ಬಾಕ್ಸೈಟ್ | d] ಕಬ್ಬಿಣ |
| 5] ಮಾಗ್ನೆಟೈಟ್ | e] ಚಿನ್ನ |
| 6] ಮಿಚಿಗನ್ | f] ಸರೋವರ |
| | g] ಕಲ್ಲಿದ್ದಲು. |

ಉತ್ತರ : 1-c, 2-a, 3-g, 4-b, 5-d, 6-f.

VI. ಭಾರತದ ನಕ್ಷೆ ಬರೆದು ಈ ಕೆಳಗಿನವುಗಳನ್ನು ಗುರುತಿಸಿರಿ.

1] ಕೋಲಾರ 2] ಕಲಕತ್ತಾ 3] ಹಿಮಾಲಯ 4] ಕೃಷ್ಣಾನದಿ.

**ಎಸ್.ಎಸ್.ಎಲ್.ಸಿ. ಪರೀಕ್ಷೆ ಎಪ್ರಿಲ್ 1989**

**I ನೆಯ ಪತ್ರಿಕೆ (ಇತಿಹಾಸ ಮತ್ತು ಪೌರನೀತಿ)**

**ಅತಿ ಸಂಭವನೀಯ ಪ್ರಶ್ನೆ ಪತ್ರಿಕೆ [ಉತ್ತರ ಸಹಿತ]**

ಪ್ರಶ್ನೆ I. (1 ಅಂಕಿನ ಪ್ರಶ್ನೆಗಳು)

ಬೇಕಾದ 7ನ್ನು ಬಿಡಿಸಿರಿ. [7 ಅಂಕಗಳು].

ಕೆಳಗಿನ ವಾಕ್ಯಗಳಲ್ಲಿಯ ಬಿಟ್ಟ ಶಬ್ದಗಳನ್ನು ಪೂರ್ತಿ ಮಾಡಿರಿ. [ಆವರಣದಲ್ಲಿ ಉತ್ತರ ಕೊಡಲಾಗಿದೆ.]

1) ಅಲೆಗ್ಸಾಂಡರನ ಗುರು.........(ಅರಿಸ್ಟಾಟಲ್)

2) ರಾಷ್ಟ್ರಕೂಟರ ದೊರೆ ಮೊದಲನೆಯ ಕೃಷ್ಣನು ಪ್ರಖ್ಯಾತವಾದ ಕೈಲಾಸನಾಥನ ದೇವಾಲಯವನ್ನು.........ದಲ್ಲಿ ಕಟ್ಟಿಸಿದನು. [ಎಲ್ಲೋರ]

3] ಪುರಾತನ ಈಜಿಪ್ತ ದೊರೆಗಳನ್ನು.........ಎಂದು ಕರೆಯುತ್ತಿದ್ದರು. [ಫ್ಯಾರೊ]

4] ಚಲಿಸುವ ಅಚ್ಚುಗಳನ್ನು ಉಪಯೋಗಿಸಿ ಮುದ್ರಿಸುವ ಯಂತ್ರವನ್ನು ಕಂಡು ಹಿಡಿದವನು...... [ಗೆಟೆನ್‌ಬರ್ಗ]

5] ಮೈಸೂರಿನಲ್ಲಿ ನವರಾತ್ರಿ ಮಹೋತ್ಸವವನ್ನು ಆರಂಭಿಸಿದವರು....... (ರಾಜಒಡೆಯರ)

6] ಸುಪ್ರಸಿದ್ಧನಾದ ವಿದ್ವಾಂಸನಾದ ಯಜ್ಞ್ಯವಲ್ಕ್ಯನು ........ಆಸ್ಥಾನದಲ್ಲಿದ್ದನು. [ಜನಕರಾಜ]

7] ಆರ್ಯರ ಕಾಲದಲ್ಲಿ ಗ್ರಾಮಗಳ ಗುಂಪನ್ನು........ ಎಂದು ಕರೆಯುತ್ತಿದ್ದರು. (ವಿಶ)

8] ಬುದ್ಧ ಚರಿತೆ ಎಂಬ ಗ್ರಂಥವನ್ನು.........ರಚಿಸಿದನು. [ಅಶ್ವಘೋಷ]

9] ಚಂದ್ರಗುಪ್ತನ ಆಸ್ಥಾನದಲ್ಲಿಯ ಗ್ರೀಕ ರಾಯಭಾರಿ .......(ಮೆಗಸ್ತನೀಸ್)

10] ಫಾಹಿಯಾನ್ ಪಾಟಲೀ ಪುತ್ರದಲ್ಲಿ ಬರೆದ ಗ್ರಂಥ .......[ಫೋಕೋಕಿ]

11] ಜಯದೇವನ ಸುಪ್ರಸಿದ್ಧ ಕಾವ್ಯ........... (ಗೀತ ಗೋವಿಂದ)

12) ಘಜನಿ ಮಹಮ್ಮದನ ಆಸ್ಥಾನದಲ್ಲಿರುವ ಅರಬ ಪ್ರವಾಸಿ........(ಅಲ್‌ಬೆರೂನಿ).

13) ಸುಮೇರಿಯಾ ಕಾಲದ ದೇವಾಲಯದ ಗೋಪುರಗಳಿಗೆ........ಎನ್ನುವರು. (ಜುಗ್ಗುರಾಟ್ಸ್)

14) ಈಜಿಪ್ತದ ಬರವಣಿಗೆಯ ಹೆಸರು........ (ಹೈರೋಗ್ಲಿಫಿಕ್)

15) ಕನಿಷ್ಕನ ರಾಜಧಾನಿಯು...........ಆಗಿದ್ದಿತು. (ಪುರುಷಪುರ)

16) .........ನು ಪರಮಾಣುವಿನಲ್ಲಿ ಅಣು ಅಂಶಗಳಿವೆ ಎಂಬುದನ್ನು ಕಂಡು ಹಿಡಿದನು. (ಕಪಿಲ)

17/ ವೇದಗಳ ಕಾಲದಲ್ಲಿ.........ಯು ನೂರು ಗ್ರಾಮಗಳ ಒಂದು ಗುಂಪಿಗೆ ಯಜಮಾನನಾಗಿದ್ದನು. (ಶತಪತಿ)

18) ........ಅಕಬರನು ಸ್ಥಾಪಿಸಿದ ಧರ್ಮದ ಹೆಸರು ( ದೀನ್-ಎ-ಇಲಾಹಿ )

19) .......ದೆಹಲಿಯಿಂದ ದೇವಗಿರಿಗೆ ರಾಜಧಾನಿಯನ್ನು ಬದಲಾಯಿಸಿ ಅದಕ್ಕೆ........ಎಂದು ಹೆಸರಿಟ್ಟನು. (ಮಹಮ್ಮದ ಬಿನ್ ತಘಲಕ, ದೌಲತಾಬಾದ)

20) ರಕ್ತಪಾತವಿಲ್ಲದ ಕ್ರಾಂತಿ........ರಲ್ಲಿ ನಡೆಯಿತು. (1688)

21) ಫ್ರಾನ್ಸಿನ ಮಹಾಕ್ರಾಂತಿಯ ಕಾಲದಲ್ಲಿ———ಫ್ರಾನ್ಸಿನ ದೊರೆಯಾಗಿದ್ದನು. ( 16 ನೇ ಲುಯಿ )

22) ಶಿವಾಜಿಯು———ದಲ್ಲಿ——ರಲ್ಲಿ ಸಿಂಹಾಸನವನ್ನೇರಿದನು. [ ರಾಯಗಡ, 1674 ]

23) ಚಾಮರಾಜೋಕ್ತಿ ವಿಲಾಸವನ್ನು ಬರೆದವರು—. [ ಚಾಮರಾಜ ಒಡೆಯರ್ ]

24) ಜರ್ಮನಿಯ ಐಕ್ಯತೆಯ ಶಿಲ್ಪಿ........(ಬಿಸ್ಮಾರ್ಕ)

25) ಗ್ಯಾರಿಬಾಲ್ಡಿ........ಎಂಬ ಒಂದು ಹೊಸ ಗುಂಪನ್ನು ರಚಿಸಿದನು [. ಕೆಂಪಂಗಿ ]

26) "ಯುಂಗ ಇಟಲಿ" ಎಂಬ ಪಕ್ಷವನ್ನು ಸ್ಥಾಪಿಸಿದವನು:.....[ ಯಂಗ್ಗ ಇಟಲಿ ]

27) ವಿಜಯ ನಗರ ಸಾಮ್ರಾಜ್ಯ ಸ್ಥಾಪಿಸಿದ ಇಬ್ಬರು ಸಂಗಮ ವಂಶದ ಸಹೋದರರು......ಮತ್ತು.....[ ಹರಿಹರ, ಬುಕ್ಕ ]

28) ಮಾರ್ಟಿನ್ ಲ್ಯೂಥರನು ಸ್ಥಾಪಿಸಿದ ಧಾರ್ಮಿಕ ಚಳುವಳಿಯನ್ನು......ಎಂದು ಕರೆಯುವರು. [ ಧರ್ಮಸುಧಾರಣಾ ]

29) ಶಿಲ್ಪ ಕಲೆಯಲ್ಲಿ ಭಾರತೀಯ ಮತ್ತು ಮಹಮ್ಮದೀಯ ಶೈಲಿಗಳ ಸಂಯೋಜನೆಗೆ......ಎನ್ನುವರು. [ ಇಂಡೋ ಸರಾಸೆನಿಕ್ ]

30) ಕೃಷ್ಣ ದೇವರಾಯನ ಅಷ್ಟದಿಗ್ಗಜ ಕವಿಗಳಲ್ಲಿ ಹೆಸರು ಪಡೆದ ಶ್ರೇಷ್ಠ ಕವಿ.... ...[ ಅಲ್ಲಾಸಾನಿ ಪೆದ್ದಣ್ಣ ]

31) ಸ್ಪಿನ್ನಿಂಗ ಜನ್ನಿ ಕಂಡು ಹಿಡಿದವನು........... [ಜೇಮ್ಸ ಹಾರಗ್ರೀವ್ಸ]

32) ಅಮೇರಿಕದ ಸ್ವಾತಂತ್ರ್ಯ ಸಂಗ್ರಾಮವು.........ರಲ್ಲಿ ಪ್ರಾರಂಭವಾಯಿತು. [ 17 6 ]

33) ಅಮೇರಿಕದ ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಅದರ ದಂಡನಾಯಕನಾಗಿದ್ದವನು.........[ಜಾರ್ಜವಾಷಿಂಗಟನ್]

34) ಗುಲಾಮಗಿರಿಯನ್ನು ತೊಡೆದು ಹಾಕಲು ಪ್ರಯತ್ನಿಸಿದ ಅಮೇರಿಕದ ಪ್ರಥಮ ಮುಂದಾಳು..........[ ಅಬ್ರಾಹಿಂ ಲಿಂಕನ್ ]

35) ಮುಸಲೋನಿಯ ಅನುಯಾಯಿಗಳನ್ನು.......ಎಂದು ಕರೆಯುವರು. [ ಬ್ಲಾಕ್ ಶರ್ಟ್ಸ ]

36) ಕ್ರಿ. ಶ.......ರಲ್ಲಿ ಜಾನ್ ದೊರೆ ಮ್ಯಾಗ್ನಾ ಕಾರ್ಟಕ್ಕೆ ಸಹಿ ಹಾಕಿದನು. [ 1215 ]

37) ಅಸ್ಪೃಶ್ಯರ ಸಮಸ್ಯೆಗಳನ್ನು ವಿವರಿಸಲು ಗಾಂಧೀಜಿ ಪ್ರಾರಂಭಿಸಿದ ವೃತ್ತ ಪತ್ರಿಕೆ......[ ಹರಿಜನ ]

38) ಕುಟುಂಬ ಯೋಜನೆಯ ಮುಖ್ಯ ಉದ್ದೇಶ....... ( ಜನಸಂಖ್ಯೆ ನಿಯಂತ್ರಣ)

39) ಒಬ್ಬನಿಗಾಗಿ ಎಲ್ಲರೂ ಎಲ್ಲರಿಗಾಗಿ ಒಬ್ಬನು ಎಂಬುದೆ.......ಯ ಮುಖ್ಯ ತತ್ವ. ( ಸಹಕಾರಿ ಚಳುವಳಿ )

40) ವರದಕ್ಷಿಣೆಯನ್ನು ನಿರ್ಮೂಲಗೊಳಿಸುವ ಶಾಸನ.......ರಲ್ಲಿ ಜಾರಿಗೆ ಬಂತು ( 1961 )

41) ಮಾಂಟೆಗೊ ಚೇಮ್ಸ್ ಫರ್ಡ ಸುಧಾರಣೆಗಳು......ರಲ್ಲಿ ಆಚರಣೆಗೆ ಬಂದವು. ( 1919 )

42) ರಾಷ್ಟ್ರೀಯ ರಕ್ಷಣಾ ಮಹಾವಿದ್ಯಾಲಯ.......ಯಲ್ಲಿದೆ ( ದೆಹಲಿ )

43) ಭಾರತದಲ್ಲಿ ಇಂಗ್ಲೀಷು ವಿಧ್ಯಾಭ್ಯಾಸವನ್ನು ಪ್ರಾರಂಭಿಸಿದವನು..........(ಲಾರ್ಡ ವಿಲಿಯಂ ಬೆಂಟಿಂಕ್)

44) ಭಾರತದಲ್ಲಿ ಸಿಖ್ಖರ ರಾಜ್ಯ ಸ್ಥಾಪಕ............. (ರಣಜಿತ್‌ಸಿಂಗ್)

45) ಭಾರತದ ಕಾರ್ಯಾಂಗದ ಮುಖ್ಯಸ್ಥ.......... ( ರಾಷ್ಟ್ರಾಧ್ಯಕ್ಷರು )

46) ಭಾರತದ ವಿದೇಶಾಂಗ ನೀತಿಯನ್ನು ರೂಪಿಸಿದ ಶಿಲ್ಪಿ.......(ಜವಾಹರಲಾಲ್‌ನೆಹರು)

47) ........ಬ್ಯಾಂಕು ರಾಜ್ಯ ಮಟ್ಟದ ಸಹಕಾರಿ ಬ್ಯಾಂಕು. ( ಅಪೆಕ್ಸ್ )

48) ಉಚ್ಚತಮ ನ್ಯಾಯಾಲಯದ ನ್ಯಾಯ ಮೂರ್ತಿಗಳನ್ನು.......ನೇಮಿಸುತ್ತಾರೆ. (ರಾಷ್ಟ್ರಾಧ್ಯಕ್ಷರು)

49) ದಾಸ್ ಕ್ಯಾಪಿಟಲ್ ಬರೆದವರು........[ ಕಾರ್ಲ ಮಾರ್ಕ್ಸ ]

50) ಅಟೊಮನ್ ತುರ್ಕರು........ರಲ್ಲಿ ಕಾನಸ್ಟಾಂಟಿನೋಪಲ್ ವಶಪಡಿಸಿಕೊಂಡರು ( 1453 )

51) ಆಧುನಿಕ ಟರ್ಕಿಯ ನಿರ್ಮಾಪಕ——(ಕಮಾಲ ಪಾಶ್)

52) ನಮ್ಮ ರಾಷ್ಟ್ರಗೀತೆಯನ್ನು ರಚಿಸಿದವರು........ (ರವೀಂದ್ರನಾಥ ಟ್ಯಾಗೋರ)

ಪ್ರಶ್ನೆ ೨ (1 ಅಂಕಿನ ಪ್ರಶ್ನೆಗಳು)
ಬೇಕಾದ ರನ್ನು ಬಿಡಿಸಿರಿ (6 ಅಂಕಗಳು)

ಕೆಳಗಿನ ಪ್ರಶ್ನೆಗಳಿಗೆ ಉತ್ತರಗಳನ್ನು ಒಂದು ಶಬ್ದ ಅಥವಾ ಒಂದು ವಾಕ್ಯದಲ್ಲಿ ಬರೆಯಿರಿ.

1) ಜೀವವಿಕಾಸ ಎಂದರೇನು ?

ಉತ್ತರ : ಎಲ್ಲಾ ಜೀವಿಗಳೂ ಬದಲಾವಣೆಯಾಗುತ್ತ ವೃದ್ಧಿ ಹೊಂದುತ್ತವೆ. ಈ ಬದಲಾವಣೆಗೆ ಜೀವ ವಿಕಾಸ ಎನ್ನುವರು.

2) ಬುದ್ಧನ ಮೂಲ ಹೆಸರು ಏನು ?

ಉತ್ತರ : ಸಿದ್ಧಾರ್ಥ.

3) ಕರ್ನಾಟಕದಲ್ಲಿ ಪುರಾತನ ಚಿತ್ರಕಲೆಯ ಕೃತಿಗಳು ಎಲ್ಲಿವೆ ?

ಉತ್ತರ : ರಾಯಚೂರ ಜಿಲ್ಲೆಯ ಪಿಕ್ಲಿಹಾಲ್ ಮತ್ತು ಹಿರೆಬೆಣಕಲ್ ಎಂಬಲ್ಲಿ ಪುರಾತನ ಚಿತ್ರಕಲೆಯ ಕೃತಿಗಳು ಇವೆ.

4) ಗೋಮಟೇಶ್ವರ ವಿಗ್ರಹವನ್ನು ಮಾಡಿಸಿದವನು ಯಾರು ?

ಉತ್ತರ : ಗೋಮಟೇಶ್ವರ ವಿಗ್ರಹವನ್ನು ಮಾಡಿಸಿದವನು ಚಾವುಂಡರಾಯ.

5) ಸಮಾಜದ ಪ್ರಾಥಮಿಕ ಸಂಸ್ಥೆ ಯಾವದು ?

ಉತ್ತರ : ಕುಟುಂಬ.

6) ಆರ್ಯರ ಮೂಲ ನಿವಾಸ ಯಾವದು ?

ಉತ್ತರ . ಮಧ್ಯಏಶಿಯಾ

7) ಜೈನ ಧರ್ಮದಲ್ಲಿ ಉಂಟಾದ ಎರಡು ಪಂಗಡಗಳಾವವು?

ಉತ್ತರ : ಶ್ವೇತಾಂಬರ, ದಿಗಂಬರ

8) ವಿಧಾನ ಸಭೆಯ ಸದಸ್ಯರ ವಯಸ್ಸು ತೀರ ಕಡಿಮೆ ಎಂದರೆ ಎಷ್ಟು ವರುಷದವನಿರಬೇಕು.

ಉತ್ತರ : 25 ವರುಷ.

9) ಕಲೀಫರು ಯಾರು ?

ಉತ್ತರ : ಮುಹಮ್ಮದ ಪೈಗಂಬರರ ನಂತರ ಬಂದ ಅವರ ಉತ್ತರಾಧಿಕಾರಿಗಳಿಗೆ ಕಲೀಫರು ಎಂದು ಕರೆಯುವರು.

10) ವಿವಾಹವಾಗಲು ಹೆಣ್ಣು, ಗಂಡು ಮಕ್ಕಳಿಗೆ ಈಗ ಇರುವ ಕನಿಷ್ಟ ವಯೋಮಿತಿ ಎಷ್ಟು ?

ಉತ್ತರ . ವಿವಾಹವಾಗಲು ಹೆಣ್ಣು ಮಕ್ಕಳಿಗೆ 18 ವರ್ಷ ಮತ್ತು ಗಂಡಿಗೆ 21 ವರ್ಷಗಳಾಗಿರಬೇಕು.

11) ಬಂಗಾಲದಲ್ಲಿ ವೈಷ್ಣವ ಪಂಥವನ್ನು ಸ್ಥಾಪಿಸಿದವರು ಯಾರು ?

ಉತ್ತರ : ಚೈತನ್ಯರು ಬಂಗಾಳದಲ್ಲಿ ವೈಷ್ಣವ ಪಂಥವನ್ನು ಸ್ಥಾಪಿಸಿದರು.

12) ರಾಜ್ಯದ ಗೃಹರಕ್ಷಕ ದಳದ ಮುಖ್ಯಸ್ಥನನ್ನು ಏನೆಂದು ಕರೆಯುವರು ?

ಉತ್ತರ : ಕಮಾಂಡಂಟ್ ಜನರಲ್

13) ರಾಜ್ಯದ ಎರಡು ಶಾಸನ ಸಭೆಗಳು ಯಾವವು ?

i) ವಿಧಾನ ಸಭೆ ii) ವಿಧಾನ ಪರಿಷತ್ತು

14) ಅಕ್ಬರನ ಆಳಿಕೆಯಲ್ಲಿದ್ದ ವಿಶಿಷ್ಟ ಕಂದಾಯ ಪದ್ಧತಿಯನ್ನು ಏನೆಂದು ಕರೆಯುತ್ತಾರೆ.

ಉತ್ತರ : "ಮನ್ಸಬ್ದಾರಿ" ಎಂದು ಕರೆಯುತ್ತಾರೆ.

15) ಯಾರು ನೀರಿನ ಚೌಕಟ್ಟು ಕಂಡು ಹಿಡಿದರು ?

ಉತ್ತರ : ರಿಚರ್ಡ ಆರ್ಕರೈಟ್.

16) ಇಂಗ್ಲೀಷರು ಮದ್ರಾಸಿನಲ್ಲಿ ಕಟ್ಟಿಸಿದ ಕೋಟೆಯ ಹೆಸರೇನು ?

ಉತ್ತರ : ಸೇಂಟ್ ಡೇವಿಡ್ ಕೋಟೆ.

17) ಅಕ್ಬರನು ಹೊಸ ರಾಜಧಾನಿಯನ್ನು ಎಲ್ಲಿ ಕಟ್ಟಿಸಿದನು ?

ಉತ್ತರ : ಫತೆಪುರ ಸಿಕ್ರಿ.

18) ಭಾರತದ ಸಂವಿಧಾನದ ಶಿಲ್ಪಿ ಯಾರು ?

ಉತ್ತರ : ಡಾ. ಅಂಬೇಡ್ಕರ.

19) ಅಸ್ಪೃಶ್ಯತೆಯ ಕಾನೂನು ಎಂದು ಅಂಗೀಕಾರವಾಯಿತು ?

ಉತ್ತರ : 1955.

20) ಭಾರತದ ಪಿತಾಮಹರು ಯಾರು ?

ಉತ್ತರ : ದಾದಾಬಾಯಿ ನವರೋಜಿ.

21) ದಿವ್ಯಜ್ಞಾನ ಮುಖ್ಯ ಕಾರಸ್ಥಾನ ಭಾರತದಲ್ಲಿ ಎಲ್ಲಿದೆ ?

ಉತ್ತರ : ಮದ್ರಾಸಿನ ಆಡಿಯಾರದಲ್ಲಿ.

22) ಜಗತ್ತಿನಲ್ಲಿಯ ಚಿಕ್ಕ ಮಕ್ಕಳ ಕಲ್ಯಾಣಕ್ಕಾಗಿ ಶ್ರಮಿಸುತ್ತಿರುವ ವಿಶೇಷ ಅಂಗ. ಯಾವದು ?

ಉತ್ತರ : (ಯುನಿಸೆಫ್—UNICEF)

23) ವಿಶ್ವಸಂಸ್ಥೆ ಎಂದು ಸ್ಥಾಪಿತವಾಯಿತು ?

ಉತ್ತರ : (24 ಆಕ್ಟೋಬರ 1945)

24) ಹಿಟ್ಲರನು ರಚಿಸಿದ ಪ್ರಸಿದ್ಧ ಗ್ರಂಥ ಯಾವದು ?

ಉತ್ತರ : ಮೈನ್‌ಕೆಂಫ್.

25) ಗುಪ್ತಸಂತತಿಯ ಪ್ರಸಿದ್ಧ ದೊರೆ

ಉತ್ತರ : ಸಮುದ್ರಗುಪ್ತ.

26) ಬ್ರಹ್ಮ ಸಮಾಜವನ್ನು ಯಾರು ಸ್ಥಾಪಿಸಿದರು ? ರಾಜಾರಾಮ ಮೋಹನ ರಾಯರು.

27) ಗ್ರೀಕರು ಯಾವ ವೈದ್ಯ ಶಾಸ್ತ್ರಜ್ಞನನ್ನು ವೈದ್ಯಕೀಯ ಶಾಸ್ತ್ರದ ಪಿತಾಮಹ ಎಂದು ಕರೆಯುವರು ?

ಉತ್ತರ : ಹಿಪೊಕ್ರೆಟಿಸ್.

28) ಭಾರತದಲ್ಲಿ ಪೋರ್ತುಗೀಜ್ ಅಧಿಕಾರಕ್ಕೆ ನಿಜವಾದ ತಳಹದಿಯನ್ನು ಹಾಕಿದ ವೈಸ್‌ರಾಯನು ಯಾರು ?

ಉತ್ತರ : ಅಲ್ಪಾನೊಡಿ ಅಲ್ಬುಕರ್ಕ.

29) ಅಲ್ಲಾವುದ್ದೀನ ಖಿಲ್ಜಿಯ ದಕ್ಷ ಸೈನಿಕ ಅಧಿಕಾರಿ ಯಾರು ?

ಉತ್ತರ : ಮಲ್ಲಿಕಾಫರ್.

30) ಗದುಗಿನ ಭಾರತವನ್ನು ರಚಿಸಿದವರು ಯಾರು ?

ಉತ್ತರ : ಕುಮಾರ ವ್ಯಾಸ.

ಪ್ರಶ್ನೆ 3 [ ಪ್ರಶ್ನೆಯೊಂದಕ್ಕೆ 2 ಅಂಕಗಳು ] ಬೇಕಾದ 10 ಕೆಳಗಿನ ಪ್ರಶ್ನೆಗಳಿಗೆ 2–3 ವಾಕ್ಯಗಳಲ್ಲಿ ಉತ್ತರಿಸಿರಿ.

1) ಎರಡನೆ ಕರ್ನಾಟಕ ಯುದ್ಧದಲ್ಲಿ ಚಂದಾಸಾಹೇಬನನ್ನು ಸೋಲಿಸಲು ರಾಬರ್ಟ ಕ್ಲೈವನು ಹೂಡಿದ ಉಪಾಯವೇನು ?

ಉತ್ತರ : ಎರಡನೇ ಕರ್ನಾಟಕ ಯುದ್ಧದಲ್ಲಿ ಚಂದಾಸಾಹೇಬನು ತಿರುಚಿನಾಪಳ್ಳಿಯನ್ನು ಆಕ್ರಮಿಸಿದನು. ಆಗ ರಾಬರ್ಟ ಕ್ಲೈವನು ಸೈನ್ಯ ರಹಿತವಾಗಿದ್ದ ಅರ್ಕಾಟನ್ನು ಮುತ್ತಿದರೆ ಜಯ ಲಭಿಸುವದೆಂದು ಸೂಚಿಸಿದನು. ಅದರಂತೆ ಬ್ರಿಟಿಶ್ ಸೈನ್ಯವು ಅರ್ಕಾಟನ್ನು ಮುತ್ತಿಗೆ ಹಾಕಿ ಅದನ್ನು ಸುಲಭವಾಗಿ ವಶಪಡಿಸಿಕೊಂಡಿತು.

2) ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಾನಾಸಾಹೇಬನ ಪಾತ್ರವೇನು ?

ಉತ್ತರ : "ನಾನಾಸಾಹೇಬನು" ದಂಗೆಯ ಚೈತನ್ಯದ ಅವತಾರವೇ ಆಗಿದ್ದನು. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಅತಿಮುಖ್ಯ ವ್ಯಕ್ತಿ ನಾನಾಸಾಹೇಬ ಇವನು ತನ್ನ ವೇಷ ಬದಲಿಸಿಕೊಂಡು ಭಾರತವನ್ನೆಲ್ಲ ಸಂಚರಿಸಿ ಚಳುವಳಿಯನ್ನು ಸುವ್ಯವಸ್ಥಿತ ರೀತಿಯಲ್ಲಿ ವ್ಯವಸ್ಥೆಗೊಳಿಸಿದನು. ದೆಹಲಿಯ ಬಹಾದ್ದೂರ್‌ಷಾನನ್ನು ಸಂಧಿಸಿ ಅವನನ್ನು ಚಳುವಳಿಗೆ ಪ್ರೋತ್ಸಾಹಿಸಿದನು.

3) ಡುಪ್ಲೆ ಯಾರು ? ಅವನ ಸಾಧನೆಗಳೇನು ?

ಉತ್ತರ : ಡುಪ್ಲೆ ಫ್ರೆಂಚ್ ಗವ್ಹರ್ನರ ಅವನು ಫ್ರೆಂಚ್ ಸಾಮ್ರಾಜ್ಯವನ್ನು ಕಟ್ಟುವ ಧ್ಯೇಯವನ್ನಿಟ್ಟುಕೊಂಡಿದ್ದನು. ಚಂದಾಸಾಹೇಬನನ್ನು ಅರ್ಕಾಟದ ನವಾಬನನ್ನಾಗಿ ಮಾಡಿದನು ಮುಜಫರ್‌ಜಂಗನನ್ನು ಹೈದರಾಬಾದದ ಪಟ್ಟಕ್ಕೆ ಕೂಡ್ರಿಸಿದನು. ನಾರ್ದರ್ನ್ ಸರಕಾರದ ಪ್ರದೇಶಗಳನ್ನು ಫ್ರೆಂಚರ ವಶದಲ್ಲಿ ತೆಗೆದುಕೊಂಡನು. ದೇಶೀಯ ಅರಸರ ನ್ಯಾಯದಲ್ಲಿ ಕೈ ಹಾಕಿ ತನ್ನ ದೇಶಕ್ಕೆ ಲಾಭ ಪಡೆಯಲು ಹೆಣಗಿದನು.

4) ಸಿಖ್ ಸಂಸ್ಥಾನದ ಮೂಲಪುರುಷನಾರು ? ಅವನು ಬ್ರಿಟಿಷ್ ವಿಷಯದಲ್ಲಿ ಅನುಸರಿಸಿದ ನೀತಿ ಏನು ?

ಉತ್ತರ : ರಣಜಿತ ಸಿಂಗನು ಸಿಖ್ ಸಂಸ್ಥಾನದ ಮೂಲ ಪುರುಷ, ಇವನಿಗೆ ಪಂಜಾಬದ ಸಿಂಹ ಎಂಬ ಬಿರುದಿತ್ತು. ಅವನು ಬ್ರಿಟಿಷ್‌ರೊಡನೆ ಸಾಯುವವರೆಗೂ ಸ್ನೇಹ ಸೌಹಾರ್ದತೆಗಳನ್ನು ಅನುಸರಿಸಿದನು.

5) ರೆಗ್ಯುಲೇಟಿಂಗ ಆ್ಯಕ್ಟ ಜಾರಿಯಲ್ಲಿ ತರಲು ಕಾರಣಗಳನ್ನು ಕುರಿತು ಬರೆಯಿರಿ.

ಉತ್ತರ : ಕ್ಲೈವನು ಸ್ಥಾಪಿಸಿದ ದ್ವಿಮುಖ ಸರಕಾರದಿಂದ ಅದಕ್ಷತೆ, ಲಂಚಗುಳಿತನ ಬೆಳೆದವು. ಈಸ್ಟ ಇಂಡಿಯಾ ಕಂಪನಿಯ ಸೇವಕರು ಅಧಿಕಾರದ ದುರುಪಯೋಗ ಮಾಡುತ್ತಿದ್ದರು. ಇದರ ಬಗೆಗೆ ಬ್ರಿಟಿಷ್ ಪಾರ್ಲಿಮೆಂಟ ರಹಸ್ಯವಾಗಿ ವಿಚಾರಣೆ ನಡೆಸಿ ಕಂಪನಿ ಸರಕಾರದ ದುರಾಡಳಿತೆಯ ಬಗ್ಗೆ ಅಧಿಕೃತ ವರದಿ ಪಡೆದರು. ಕಂಪನಿಯ ಆಡಳಿತ ವರ್ಗದವರನ್ನು ತರಲು ಈ ಆ್ಯಕ್ಟ ಜಾರಿಗೆ ತರಬೇಕಾಯಿತು.

6) 1935 ರ ಸರ್ಕಾರಿ ಶಾಸನವು ಭಾರತದ ಸಂವಿಧಾನದ ಇತಿಹಾಸದಲ್ಲಿ ಒಂದು ಮೈಲುಗಲ್ಲು ಎನ್ನಲು ಕಾರಣವೇನು?

ಉತ್ತರ : ಬ್ರಿಟಿಷ್ ಪಾರ್ಲಿಮೆಂಟು 1935 ರಲ್ಲಿ ಒಂದು ಶಾಸನವನ್ನು ಜಾರಿಗೆ ತಂದಿತು. ಇದರಲ್ಲಿ ಪ್ರಾಂತ್ಯಾಡಳಿತಕ್ಕೆ ಅವಕಾಶ ದೊರೆಯಿತು. ಭಾರತದ ಫೆಡರೇಷನ್ ಸ್ಥಾಪಿತವಾಗಿ ಭಾರತದ ಸಂವಿಧಾನಕ್ಕೆ ಅಡಿಪಾಯ ಹಾಕಿದಂತಾಯಿತು.

7) ಸರ್ ಸಯ್ಯದ ಅಹಮ್ಮದಖಾನರು ಮುಸ್ಲಿಂ ಜನಾಂಗಕ್ಕೆ ಸಲ್ಲಿಸಿದ ಸೇವೆ ಏನು ?

ಉತ್ತರ : ಅಕ್ಟೋಬರ 1985 ರ ಪ್ರಶ್ನೆ VI (1) ರ ಉತ್ತರ ನೋಡಿರಿ.

8] ರಾಮಕೃಷ್ಣ ಮಠವು ಮಾಡಿದ ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಣೆಗಳಾವವು ?

ಉತ್ತರ : ಉತ್ತರಕ್ಕಾಗಿ ಮಾರ್ಚ 1986 ರ ಪ್ರಶ್ನೆ C. [24] ರ ಉತ್ತರ ನೋಡಿರಿ.

9] ಲಾರ್ಡ ವಿಲಿಯಂ ಬೆಂಟಿಂಕನ ಯಾವುದಾದರೂ ಎರಡು ಸಾಮಾಜಿಕ ಸುಧಾರಣೆಗಳನ್ನು ತಿಳಿಸಿ.

ಉತ್ತರ : 1] ಸತಿ ಅಥವಾ ಸಹಗಮನವನ್ನು ರದ್ದುಗೊಳಿಸಿದನು. [2] ಹೊಸ ವಿದ್ಯಾಭ್ಯಾಸ ಕ್ರಮವನ್ನು ಪ್ರಾರಂಭಿಸಿ ಇಂಗ್ಲೀಷನ್ನು ಅಧಿಕಾರಿ ಭಾಷೆಯಾಗಿ ಮಾಡಿದುದು ಮುಖ್ಯವಾಗಿದೆ.

10] ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳೇನು ?

ಉತ್ತರ : 1] ಸುಶಿಕ್ಷಿತ ಜಾಗ್ರುತ ಭಾರತೀಯರಿಗೆ ತಮ್ಮ ಭಾವನೆಗಳನ್ನು ವ್ಯಕ್ತ ಮಾಡಲಿಕ್ಕೆ ಆಸ್ಪದ ಮಾಡುವದು 2] ಇಂಗ್ಲೆಂಡಿನ ಪಾರ್ಲಿಮೆಂಟಿನಲ್ಲಿ ವಿರೋಧಿ ಪಕ್ಷದ ಕಾರ್ಯ ಪದ್ಧತಿಯಂತೆ ಭಾರತದಲ್ಲಿಯೂ ವಿಧಾಯಕ ರೂಪದಲ್ಲಿ ತಮ್ಮ ಸಲಹೆ ಸೂಚನೆಗಳನ್ನು ಕೋರುವ ಸುಶಿಕ್ಷಿತ ಪಕ್ಷವನ್ನು ರಚಿಸುವದು.

3] ಬ್ರಿಟಿಷ್ ಆಡಳಿತೆಯ ಕುಂದುಕೊರತೆಗಳನ್ನು ಎತ್ತಿ ತೋರಿಸಿ ಅವುಗಳ ಸುಧಾರಣೆಗಾಗಿ ಸಲಹೆ ಸೂಚನೆಗಳನ್ನು ಪ್ರತಿವರ್ಷವೂ ಕೊಡಲು ಸುಶಿಕ್ಷಿತರ ಪಕ್ಷವನ್ನು ರಚಿಸುವದು. 4] ಜನಾಂಗ, ಜಾತಿ, ಮತ ವರ್ಣಬೇಧಗಳನ್ನು ತೊರೆದು ಹಾಕಿ ಭಾರತೀಯರಲ್ಲಿ ಐಕ್ಯತೆಯನ್ನು ತರುವದು.

11) ಕ್ವಿಟ್ ಇಂಡಿಯಾ ಚಳುವಳಿಯು ಸಫಲವಾಗದಿರಲು ಕಾರಣಗಳೇನು ?

ಉತ್ತರ : 1942ರಲ್ಲಿ ಗಾಂಧೀಜಿಯವರು ಪ್ರಾರಂಭಿಸಿದ ಕ್ವಿಟ್ ಇಂಡಿಯಾ ಚಳುವಳಿ ಸಫಲವಾಗದೆ ಇರಲು ಅನೇಕ ಕಾರಣಗಳು 1) ಶ್ರೀಮಂತರು ಮತ್ತು ಅಧಿಕಾರಿಗಳು ಬ್ರಿಟಿಷರಿಗೆ ವಿಧೇಯರಾಗಿ ಅವರಿಗೆ ಸಹಾಯ ಮಾಡಿದರು 2) ಈ ಚಳುವಳಿಗೆ ಸಮರ್ಥನೆ ನೀಡದಂತೆ ಮುಸ್ಲಿಂರನ್ನು ಜಿನ್ನಾ ತಡೆದರು.

12). ಡಾ. ಸನ್‌ಯತ್ ಸೇನರು ಚೀನಕ್ಕೆ ಸಲ್ಲಿಸಿದ ಸೇವೆಯನ್ನು ಬರೆಯಿರಿ.

ಉತ್ತರ : ಉತ್ತರಕ್ಕಾಗಿ ಮಾರ್ಚ 1986ರ B (18)ರ ಉತ್ತರ ನೋಡಿರಿ.

13) ಕಮಾಲ್‌ಪಾಷಾನು ತುರ್ಕಿ ದೇಶವನ್ನು ಹೇಗೆ ಆಧುನಿಕ ರಾಷ್ಟ್ರವನ್ನಾಗಿ ಮಾಡಿದನು.

ಉತ್ತರ : ಉತ್ತರಕ್ಕಾಗಿ ಸೆಪ್ಟೆಂಬರ 1984ರ ಪ್ರಶ್ನೆ III (10)ರ ಉತ್ತರ ನೋಡಿರಿ.

14) ಸಹಾಯಕ ಸೈನ್ಯ ಪದ್ಧತಿಯನ್ನು ಜಾರಿಗೆ ತಂದವರು ಯಾರು ? ಅದರ ಮುಖ್ಯ ಅಂಶಗಳೇನು ?

ಉತ್ತರ : ಭಾರತದ ಗವರ್ನರ ಜನರಲ್ ಆಗಿ ಬಂದ ಲಾರ್ಡ ವೆಲ್ಲಸ್ಲಿ ಸಹಾಯಕ ಸೈನ್ಯ ಪದ್ಧತಿಯನ್ನು ಜಾರಿಗೆ ತಂದನು. ಈ ಪದ್ಧತಿಗೆ ಸೇರಲು ಇಚ್ಛಿಸುವ ದೇಶಿಯ ರಾಜನು ತನ್ನ ಖರ್ಚಿನಲ್ಲಿ ಒಂದು ಬ್ರಿಟಿಷ್ ಸೈನ್ಯವನ್ನು ಇಟ್ಟುಕೊಳ್ಳಬೇಕಾಯಿತು. ಅಲ್ಲದೆ ರೆಸಿಡೆಂಟ ಎಂಬ ಒಬ್ಬ ಅಧಿಕಾರಿ ಆ ರಾಜ್ಯದಲ್ಲಿದ್ದು ಆ ರಾಜ್ಯದ ಆಡಳಿತವನ್ನು ನಡೆಸತಕ್ಕದ್ದು ದೇಶಿಯ ರಾಜರು ರೆಸಿಡೆಂಟನ ಅಪ್ಪಣೆ ಇಲ್ಲದೆ ಯುದ್ಧವನ್ನು ಮಾಡುವಂತಿಲ್ಲ ಒಪ್ಪಂದ ಮಾಡಿಕೊಳ್ಳುವಂತಿಲ್ಲ.

15) ಲಕ್ನೋ ಕಾಂಗ್ರೆಸ್ಸಿನ ಮಹತ್ವವೇನು ?

ಉತ್ತರ : ಎಪ್ರಿಲ್ 1984ರ ಪ್ರಶ್ನೆ III (5)ರ ಉತ್ತರ ನೋಡಿರಿ.

16] ಬರ್ಲಿನ್ ಗೋಡೆಯ ಬಗ್ಗೆ 3 ವಾಕ್ಯಗಳನ್ನು ಬರೆಯಿರಿ.

ಉತ್ತರ : ಎಪ್ರಿಲ್ 1984ರ ಪ್ರಶ್ನೆ II [1]ರ ಉತ್ತರ ನೋಡಿರಿ.

17] ಶೀತಲ ಯುದ್ಧವೆಂದರೇನು ?

ಉತ್ತರ : ಪ್ರಪಂಚದ ಎರಡನೆ ಮಹಾಯುದ್ಧಾ ನಂತರ ರಾಷ್ಟ್ರೀಯ ವಲಯದಲ್ಲಿ ರಷ್ಯಾ ಮತ್ತು ಅಮೇರಿಕಗಳ ಎರಡು

ಮಿಲಿಟರಿ ಬಣ್ಣಗಳಾಗಿವೆ. ಅಮೇರಿಕ ನ್ಯಾಟೋ ಒಪ್ಪಂದ ಕೂಟ ರಚಿಸಿ ಗ್ರೀಸ್, ಟರ್ಕಿ ಮತ್ತು ಕೆನಡ ದೇಶಗಳನ್ನು ಸೇರಿಸಿ ಕೊಂಡಿತು. ಇದಕ್ಕೆ ಪ್ರತಿಯಾಗಿ ರಷ್ಯಾ ವಾರ್ಸಾ ಒಪ್ಪಂದ ಮಾಡಿಕೊಂಡಿತು. ಈ ಎರಡೂ ಬಣಗಳು ತಮ್ಮಲ್ಲಿರುವ ಅಣ್ವಸ್ತ್ರ ಗಳ ಉಪಯೋಗಕ್ಕೆ ಹೆದರಿ ಪೈಪೋಟಿ ನಡೆಸುತ್ತದೆ. ಇದಕ್ಕೆ ಶೀತಲ ಯುದ್ಧವೆಂದು ಹೆಸರು.

18] ಪ್ರಾದೇಶಿಕ ಸೈನ್ಯದ ಮೂರು ಉದ್ದೇಶಗಳನ್ನು ಹೇಳಿರಿ.

ಉತ್ತರ : ಎಪ್ರಿಲ್ 1984ರ ಪ್ರಶ್ನೆ IV (2)ರ ಉತ್ತರ ನೋಡಿರಿ.

19] "ವರ್ಣಭೇದ ನೀತಿ" ಎಂದರೇನು ? ಇದು ಇನ್ನೂ ಯಾವ ದೇಶದಲ್ಲಿ ಆಚರಿಸಲ್ಪಡುತ್ತದೆ.

ಉತ್ತರ : ಎಪ್ರಿಲ್ 1984ರ ಪ್ರಶ್ನೆ III [6]ರ ಉತ್ತರ ನೋಡಿರಿ.

20) ಅಂತರ್‌ರಾಷ್ಟ್ರೀಯ ಶಾಂತಿಗೆ ಗಹನವಾದ ಬೆದರಿಕೆಯಾಗಿರಲು ಕಾರಣವೇನು ? ಅದನ್ನು ಪರಿಹರಿಸುವ ಬಗೆ ಹೇಗೆ ?

ಉತ್ತರ : ಪರಮಾಣು ಅಸ್ತ್ರಗಳನ್ನು ಹೊಂದಿರುವದು ಅಂತರ ರಾಷ್ಟ್ರೀಯ ಶಾಂತಿಗೆ ಒಂದು ಗಹನವಾದ ಬೆದರಿಕೆ ಯಾಗಿದೆ. ಪರಮಾಣು ಶಕ್ತಿಯನ್ನು ಶಾಂತಿಯುತ ಹಾಗೂ ಫಲ ಕಾರಿ ಉಪಯೋಗಗಳಿಗೆ ಬದಲಾಯಿಸಲು ನಿಃಶಸ್ತ್ರೀಕರಣ ಒಂದೇ ಪರಿಹಾರವಾಗಿದೆ.

21) ಆಹಾರ ಮತ್ತು ಕೃಷಿ ಸಂಸ್ಥೆಯ ಮೂರು ಮುಖ್ಯ ಉದ್ದೇಶಗಳನ್ನು ಹೇಳಿರಿ.

ಉತ್ತರ : ಅಕ್ಟೋಬರ 1985 ರ VIII [2] ರ ಉತ್ತರ ನೋಡಿರಿ.

22] "ಅಲಿಪ್ತ ನೀತಿ" ಎಂದರೇನು ? ಅದನ್ನು ಬೋಧಿಸಿದವರು ಯಾರು ?

ಉತ್ತರ : ಅಲಿಪ್ತ ನೀತಿ ಎಂದರೆ ಯಾವ ಮಿಲಿಟರಿ ಬಣಕ್ಕೂ ಸೇರದೆ ಸ್ವತಂತ್ರವಾದ ತೀರ್ಮಾನವನ್ನು ತೆಗೆದು ಕೊಳ್ಳುವ ಹಕ್ಕು ಹೊಂದಿರುವದು. ಮತ್ತು ಇತರ ರಾಷ್ಟ್ರಗಳೊಡನೆ ಸ್ನೇಹದಿಂದ ವರ್ತಿಸುವದು. ಈ ನೀತಿಯ ಮೂಲ ವ್ಯಕ್ತಿ ಪಂಡಿತ ಜವಾಹರಲಾಲ್ ನೆಹ್ರೂರವರು.

23) ರೇಜಾಷಾನ ಎರಡು ಮುಖ್ಯ ಸಾಧನೆಗಳೇನು ?

ಉತ್ತರ : ರೇಜಾಷಾನು ಇರಾನಿನ ರಾಜನಾಗಿ ಅನೇಕ ಸಾಧನೆಗಳನ್ನು ಮಾಡಿದನು. ಇರಾನಿನ ಪ್ರಜೆಗಳಲ್ಲಿ ರಾಷ್ಟ್ರೀಯತಾ ಮನೋಭಾವವನ್ನು ಹೆಚ್ಚಿಸಿದನು. ಅನೇಕ ಹೊರ ದೇಶ ಗಳೊಡನೆ ಒಪ್ಪಂದ ಮಾಡಿಕೊಂಡನು.

24] ಕೇಂದ್ರ ಸಾರ್ವಜನಿಕ ಆಯೋಗವು ರಾಷ್ಟ್ರೀಯ ಐಕ್ಯತೆಗೆ ಹೇಗೆ ಸಹಾಯ ಮಾಡುತ್ತದೆ ?

ಉತ್ತರ : ಕೇಂದ್ರ ಸಾರ್ವಜನಿಕ ಆಯೋಗವು ಉನ್ನತ ಹುದ್ದೆಗಳಿಗೆ ಎಂದರೆ ಐ. ಎ. ಎಸ್, ಐ. ಡಿ. ಎಸ್, ಐ. ಎಫ್. ಎಸ್. ಮೊದಲಾದ ಸ್ಥಾನಗಳಿಗೆ ಪರೀಕ್ಷೆಗಳನ್ನು ನಡೆಸುತ್ತದೆ. ತೇರ್ಗಡೆಯಾದ ವ್ಯಕ್ತಿಗಳನ್ನು ದೇಶದ ನಾನಾ ಭಾಗಗಳಿಗೆ ಕೆಲಸ ಕ್ಕಾಗಿ ನೇಮಿಸುತ್ತದೆ. ಇದರಿಂದ ಗುಜರಾತಿನವನು ಕರ್ನಾಟಕಕ್ಕೆ ಅಧಿಕಾರಿಯಾಗಬಹುದು. ಹೀಗೆ ಯಾವ ರಾಜ್ಯದವನಾದರೂ ಬೇರೆ ರಾಜ್ಯಕ್ಕೆ ಹೋಗುವದರಿಂದ ರಾಷ್ಟ್ರೀಯ ಐಕ್ಯತೆಗೆ ಸಹಾಯ ವಾಗುತ್ತದೆ.

25) ಗಡಿ ಭದ್ರತಾ ಪಡೆಗಳ ಕಾರ್ಯಗಳನ್ನು ವಿವರಿಸಿ.

**ಉತ್ತರ :** ಭದ್ರತಾ ಪಡೆಗಳು 1956 ರಲ್ಲಿ ಅಸ್ತಿತ್ವಕ್ಕೆ ಬಂದವು. ಶಾಂತಿ ಸಮಯದಲ್ಲಿ ನಮ್ಮ ರಾಷ್ಟ್ರದ ಗಡಿಗಳನ್ನು ರಕ್ಷಿಸುವದು ಅವರ ಮುಖ್ಯ ಕೆಲಸ ಇದರ ಜೊತೆಗೆ ಸೈನ್ಯೋದ್ದೇಶ ಗಳಿಗೆ ಸುದ್ದಿ ಸಂಗ್ರಹಿಸುವದು. 2) ಶತ್ರುವಿನ ಆಕ್ರಮಣ ದಿಂದ ಪ್ರಾಣ ಮತ್ತು ಆಸ್ತಿ ಪಾಸ್ತಿಗಳನ್ನು ಸಂರಕ್ಷಿಸುವದು. 3) ಶತ್ರುವಿನ ಕಡೆಯಿಂದ ಕಳ್ಳಸಾಗಾಣಿಕೆ ಮತ್ತು ನುಸುಳಿ ಬರುವದನ್ನು ತಡೆಯುವದು. 4) ಸಣ್ಣ ಪ್ರಮಾಣದ ಆಕ್ರಮಣದಿಂದ ರಾಷ್ಟ್ರವನ್ನು ರಕ್ಷಿಸುವದು ಮೊದಲಾದ ಕರ್ತವ್ಯ ಗಳನ್ನು ನಿರ್ವಹಿಸುತ್ತದೆ.

26. ಭಾರತವು 1971 ರಲ್ಲಿ ಬಂಗ್ಲಾದೇಶದ ವಿಷಯ ದಲ್ಲಿ ಮಧ್ಯ ಪ್ರವೇಶ ಮಾಡುವಂತಾಯಿತು. ಕಾರಣವೇನು ? ಅದರ ಪರಿಣಾಮವೇನು ?

**ಉತ್ತರ :** ಮಾರ್ಚ 1988 ರ ಪ್ರ. (23) ಇದರ ಉತ್ತರ ನೋಡಿರಿ.

ಪ್ರಶ್ನೆ 4 [ಬೇಕಾದ 4] ಪ್ರತಿಯೊಂದಕ್ಕೆ 3 ಅಂಕಗಳು ಕೆಳಗಿನ ಪ್ರಶ್ನೆಗಳಿಗೆ 5 ಅಥವಾ 6 ವಾಕ್ಯಗಳಲ್ಲಿ ಉತ್ತರಿಸಿರಿ.

1) ಯುರೋಪಿಯನ್ನರು ಭಾರತಕ್ಕೆ ಹೊಸ ಜಲ ಮಾರ್ಗವನ್ನು ಹುಡುಕಬೇಕಾಗಲು ಕಾರಣವೇನು? 1498ರಲ್ಲಿ ಕಲ್ಲಿಕೋಟೆಯಲ್ಲಿ ಬಂದಿಳಿದವರು ಯಾರು ?

**ಉತ್ತರ :** ಕ್ರಿ. ಶ. 1453 ರಲ್ಲಿ ತುರುಕರು ಕಾನ್ಸ್‌ಸ್ಟಾಂಟಿನೋಪಲ್ ನಗರವನ್ನು ವಶಪಡಿಸಿಕೊಂಡು ಪೂರ್ವ ಮತ್ತು ಪಾಶ್ಚಾತ್ಯ ರಾಷ್ಟ್ರಗಳ ನಡುವೆ ಇದ್ದ ವ್ಯಾಪಾರಮಾರ್ಗ ವನ್ನು ಬಂಧಿಸಿದರು. ಇದರಿಂದ ತಮಗೆ ಬೇಕಾದ ಸಾಂಬಾರದ ಪದಾರ್ಥಗಳಿಗಾಗಿ ಪೂರ್ವ ರಾಷ್ಟ್ರಗಳನ್ನೇ ನಂಬಿದ್ದ ಪಾಶ್ಚಾತ್ಯರು ಹೊಸ ಸಮುದ್ರ ಮಾರ್ಗವನ್ನು ಹುಡುಕಬೇಕಾಯಿತು. 1497 ರಲ್ಲಿ ಪೋರ್ತುಗೀಜರ ನಾವಿಕನಾದ ವಾಸ್ಕೊಡಿಗಾಮಾ ಆಫ್ರಿಕಾಖಂಡದ ಪಶ್ಚಿಮದಿಂದ ಹೊರಟು ಕೇಪ್ ಆಫ್ ಗುಡ್ ಹೋಪ್ ಮಾರ್ಗವಾಗಿ ಬಂದು 1498 ರಲ್ಲಿ ಕಲ್ಲಿಕೋಟೆಯಲ್ಲಿ ಬಂದಿಳಿದನು.

2) ಕಾರ್ನವಾಲೀಸನು ಆಚರಣೆಗೆ ತಂದ ದೇಶೀಯ ಸುಧಾರಣೆಗಳಾವವು ?

**ಉತ್ತರ :** 1876 ರಲ್ಲಿ ಕಾರ್ನವಾಲಿಸ್ ಭಾರತದ ಗವರ್ನರ್ ಜನರಲ್ ಆಗಿ ನೇಮಕಗೊಂಡನು. ಭಾರತಕ್ಕೆ ಬಂದ ನಂತರ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. 1) ಈಸ್ಟ ಇಂಡಿಯಾ ಸಂಸ್ಥೆಯ ನೌಕರರು ಸ್ವಂತ ವ್ಯಾಪಾರ ಮಾಡದಂತೆ ಮಾಡಿ ಅವರ ವೇತನಗಳನ್ನು ಹೆಚ್ಚಿಸಿದನು. 2) ಉನ್ನತ ಹುದ್ದೆಗಳನ್ನು ಬ್ರಿಟಿಷರಿಗೆಂದೇ ಮೀಸಲಾಗಿಟ್ಟನು. 3) ನ್ಯಾಯಾಂಗವನ್ನು ಕಾರ್ಯಾಂಗದಿಂದ ಬೇರ್ಪಡಿಸಿದನು. 4) ಖಾಯಂ ಜಮೀನುದಾರಿ ಪದ್ಧತಿಯನ್ನು ಜಾರಿಗೆ ತಂದು ಕಂಪನಿಯ ಆದಾಯವನ್ನು ಹೆಚ್ಚಿಸಿದನು.

3) ಪ್ಲಾಸಿ ಕದನದ ಕಾರಣಗಳು ಮತ್ತು ಪರಿಣಾಮ ಗಳನ್ನು ಹೇಳಿರಿ.

**ಉತ್ತರ :** ಕಾರಣಗಳು– ಸಿರಾಜ–ಉದ್–ದೌಲನು ಬಂಗಾಲದ ನವಾಬನಾದ ಕೂಡಲೇ ಅವನಿಗೆ ಇಂಗ್ಲೀಷರ ಚಟುವಟಿಕೆಗಳಲ್ಲಿ ಸಂದೇಹ ಉಂಟಾಯಿತು. ಇಂಗ್ಲೀಷರು ವಿಶೇಷ ರಿಯಾಯತಿಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದರು. ನವಾಬನ ಅಪ್ಪಣೆ ಪಡೆದುಕೊಳ್ಳದೇ ಕೋಟೆಗಳನ್ನು ಭದ್ರಪಡಿಸಿ ಕೊಳ್ಳುತ್ತಿದ್ದರು.

ಸಿರಾಜ್ ಉದ್ದೌಲನು ಇಂಗ್ಲೀಷರ ಮೇಲೆ ಕೋಪ ಗೊಂಡು ಕಾಸಿಂ ಬಜಾರ್, ಮತ್ತು ಫೋರ್ಟ ವಿಲಿಯಂಗಳ ಮೇಲೆ ದಾಳಿ ಮಾಡಿ ಅವುಗಳನ್ನು ಕೈವಶಪಡಿಸಿಕೊಂಡನು. ಇದರಿಂದ ಇಂಗ್ಲೀಷರು ಅವನ ಮೇಲೆ ಪ್ರತಿಕಾರ ತೆಗೆದುಕೊಳ್ಳಲು ನಿರ್ಧರಿಸಿದರು. ಕ್ಲೈವನು ನವಾಬನ ಸೇನಾಪತಿ ಮೀರಜಾಫರ್ ಮತ್ತು ಶ್ರೀಮಂತ ವರ್ತಕರೊಡನೆ ಒಳಸಂಚು ನಡೆಸಿದನು. ಇದರಿಂದ ಪ್ಲಾಸಿಕದನದಲ್ಲಿ ಇಂಗ್ಲೀಷರಿಗೆ ಗೆಲವು ದೊರೆಯಿತು.

**ಪರಿಣಾಮಗಳು :** ಸಿರಾಜ ಉದ್ದೌಲನು ಕೊಲ್ಲಲ್ಪಟ್ಟನು. ಇಂಗ್ಲಿಷರಿಗೆ ಭಾರತದಲ್ಲಿ ತಳ ಊರಲು ಭದ್ರ ನೆಲೆ ದೊರೆಯಿತು. ಮೀರ ಜಾಫರ ಬಂಗಾಲದ ನವಾಬನಾದನು. ಅವನು ಇಂಗ್ಲಿಷರಿಗೆ ಅಪಾರ ಹಣವನ್ನು ಮತ್ತು ಬಂಗಾಲ ದಕ್ಷಿಣ 24 ಪರಗಣಗಳನ್ನು ನೀಡಿದನು.

4) ಸ್ವಾತಂತ್ರ್ಯದ ನಂತರ ಭಾರತವು ಎದುರಿಸಬೇಕಾಗಿ ಬಂದ ಯಾವುದಾದರೂ ಮೂರು ಸಮಸ್ಯೆಗಳನ್ನು ತಿಳಿಸಿ.

5) "ರಾಷ್ಟ್ರೀಯ ಭಾವೈಕ್ಯತೆ ಅಂದರೇನು ? ಕೆಳಗಿನ ಅಂಶಗಳು ರಾಷ್ಟ್ರೀಯ ಭಾವೈಕ್ಯತೆಗೆ ಹೇಗೆ ಬೆಂಬಲ ನೀಡಿವೆ ? 1) ಭಾರತದ ರಾಜ್ಯಾಂಗ 2) ಪಂಚಾಯತಿ ರಾಜ್ಯ.

**ಉತ್ತರ :** ಪ್ರಜೆಗಳಲ್ಲಿ ತಾವೆಲ್ಲರೂ ಒಂದೇ ರಾಷ್ಟ್ರದ ಸದಸ್ಯರು ತಮ್ಮ ನಡುವೆ ಅನೇಕ ಸರಿಸಮಾನ ಗುಣಲಕ್ಷಣಗಳಿವೆ ಎಂಬ ಭಾವನೆಯನ್ನುಂಟು ಮಾಡಿ ಅವರಲ್ಲಿ ಒಗ್ಗಟ್ಟು ಸಹಿಷ್ಣುತೆ ಪರಸ್ಪರ ಗೌರವ ಭಾವನೆ ಮತ್ತು ಪ್ರೀತಿಯನ್ನುಂಟು ಮಾಡುವುದೇ ಭಾವೈಕ್ಯ.

ಈ ಭಾವೈಕ್ಯತೆಯನ್ನು ವೃದ್ಧಿಗೊಳಿಸಲು ಅನೇಕ ಅಂಶಗಳಿವೆ ಅವುಗಳಲ್ಲಿ ಭಾರತದ ಸಂವಿಧಾನ, ಪಂಚಾಯತಿ ರಾಜ್ಯ, ಪ್ರಗತಿಗಾಮಿ ಆರ್ಥಿಕ ಧೋರಣೆ, ರಾಷ್ಟ್ರೀಯ ಐಕ್ಯತೆಯ ಚಿಹ್ನೆಗಳು ಮುಖ್ಯವಾದವು.

ರಾಷ್ಟ್ರೀಯ ಭಾವೈಕ್ಯತೆಯನ್ನು ವೃದ್ಧಿಸುವ ಅತಿ ಮುಖ್ಯವಾದ ಮೊದಲನೆ ಅಂಶ ಉದಾರತಾ ಪ್ರಜಾಸತ್ತಾತ್ಮಕ ಸಮಾಜವಾದಿ ಜಾತ್ಯಾತೀತ ಮತ್ತು ಗಣರಾಜ್ಯದ ಲಕ್ಷಣಗಳನ್ನೊಳಗೊಂಡ ನಮ್ಮ ಸಂವಿಧಾನ. ಇದು ಎಲ್ಲರಿಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯವನ್ನು ವ್ಯಕ್ತಿಗೌರವ ಮತ್ತು ರಾಷ್ಟ್ರದ ಏಕತೆಯನ್ನು ಸಾಧಿಸುವ ಆಶ್ವಾಸನೆ ನೀಡಿದೆ.

ರಾಜ್ಯಾಂಗವು ಸಂಯುಕ್ತ ರೂಪವುಳ್ಳದ್ದಾಗಿ ರಾಷ್ಟ್ರೀಯ ಏಕತೆ ಮತ್ತು ರಾಜ್ಯಗಳ ಸ್ವಯಮಾಧಿಕಾರಗಳೆರಡನ್ನು ಪೂರೈಸುತ್ತದೆ. ಕೇಂದ್ರ ಸರಕಾರ ರಾಷ್ಟ್ರೀಯ ಪ್ರಾಮುಖ್ಯತೆ ಪಡೆದಂತಹ ಅಂಶಗಳಾದ ರಕ್ಷಣೆ, ವಿದೇಶಾಂಗ ನೀತಿ, ಸಂಪರ್ಕ ಮಾಧ್ಯಮಗಳು ಮತ್ತು ಯೋಜನೆಗಳ ಜವಾಬ್ದಾರಿಯನ್ನು ಹೊಂದಿದೆ.

ಯಾವ ರಾಜ್ಯವೂ ಭಾರತದಿಂದ ಬೇರ್ಪಡದಂತೆ ನೋಡಿಕೊಳ್ಳಲು ಕೇಂದ್ರ ಸರಕಾರಕ್ಕೆ ಅಧಿಕಾರವಿದೆ. ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳ ನಡುವೆ ಅಧಿಕಾರಗಳ ವಿಂಗಡಣೆ ಸೂಚಿಸುವ ಕೇಂದ್ರ ಪಟ್ಟಿ, ರಾಜ್ಯಪಟ್ಟಿ ಮತ್ತು ಸಮವರ್ತಿ ಪಟ್ಟಿಗಳು ರಾಜ್ಯಾಂಗದಲ್ಲಿದೆ.

ರಾಜ್ಯಾಂಗ ಏಕ ಪೌರತ್ವ ಮತ್ತು ಕಾನೂನಿನ ದೃಷ್ಟಿಯಲ್ಲಿ ಸರ್ವರೂ ಸಮಾನರು ಎಂಬ ಅಂಶಗಳು ಅತಿಮುಖ್ಯವಾದವು. ಮೂಲಭೂತಹಕ್ಕುಗಳು ಮತ್ತು ಅವು ಉಲ್ಲಂಘನೆಯಾದಾಗ ನ್ಯಾಯಾಲಯದಲ್ಲಿ ಅದನ್ನು ಪ್ರಶ್ನಿಸುವ ಅಧಿಕಾರವೂ ಇದೆ. ರಾಜ್ಯ ಧೋರಣೆಯ ನಿರ್ದೇಶಾತ್ಮಕ ತತ್ವಗಳು ನಮ್ಮ ರಾಜ್ಯಾಂಗದ ವಿಶಿಷ್ಟ ಲಕ್ಷಣಗಳು.

ಹಾಗೆಯೇ ಪಂಚಾಯತಿ ರಾಜ್ಯ ಮತ್ತು ಸಹಕಾರಿ ಚಳುವಳಿಗಳು ರಾಷ್ಟ್ರೀಯ ಭಾವೈಕ್ಯತೆಯ ಬಲವೃದ್ಧಿಗೆ ಸಹಾಯ ಮಾಡುತ್ತವೆ. ಸರ್ಕಾರವು ಪಂಚಾಯತಿ ರಾಜ್ಯ ಮತ್ತು ಸಹಕಾರಿ ಆಂದೋಲನದ ಮೂಲಕ ಗ್ರಾಮಾಭ್ಯುದಯದ ಕಡೆ ಗಮನ ಕೊಟ್ಟಿದೆ.

6) ರಷ್ಯ ದೇಶದ ಮಹಾಕ್ರಾಂತಿಗೆ ಕಾರಣವಾದ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕಾರಣಗಳನ್ನು ತಿಳಿಸಿರಿ.

**ಉತ್ತರ :** ಏಪ್ರಿಲ್ 1987 ರ ಪ್ರಶ್ನೆ E (30)ರ ಉತ್ತರ ನೋಡಿರಿ.

7) ಪ್ರಪಂಚದ ಎರಡನೇ ಮಹಾಯುದ್ಧಕ್ಕೆ ಕಾರಣಗಳೇನು ? ಮತ್ತು ಫಲಿತಾಂಶಗಳೇನು ?

**ಉತ್ತರ :** ಯುದ್ಧವು ಮೊದಲಿಗೆ ಮಾನವನ ಮನಸ್ಸಿನಲ್ಲಿ ಉದ್ಭವಿಸುತ್ತದೆ. ಮಹಾತ್ವಾಕಾಂಕ್ಷೆ, ವಿರೋಧ ಮತ್ತು ತೀವ್ರ ಅಸಮಾಧಾನ ಒಂದು ಕಡೆ, ಮತ್ತೊಂದು ಕಡೆ ರಾಷ್ಟ್ರೀಯ ಪ್ರತಿಷ್ಠೆ ಮತ್ತು ಯಶಸ್ಸಿನ ಅನ್ವೇಷಣೆ ಇವುಗಳು ಮಿಲಿಟರಿ ನಾಯಕರನ್ನು ಯುದ್ಧ ಹೂಡುವಂತೆ ಪ್ರಚೋದಿಸುತ್ತದೆ. ಕೆಲವು ವೇಳೆ ಆರ್ಥಿಕ, ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಭಿನ್ನತೆಗಳಿಂದ ಸಮಸ್ಯೆಗಳು ಎದ್ದು ಯುದ್ಧದಲ್ಲಿ ಪರಿಣಮಿಸುತ್ತವೆ. ಅನೇಕ ವೇಳೆ ಕೆಲವು ಮುಖಂಡರ ವೈಯಕ್ತಿಕ ದ್ವೇಷ ಯುದ್ಧಕ್ಕೆ ಮೂಲವಾಗುತ್ತದೆ. ಈ ಎಲ್ಲಾ ಅಂಶಗಳೂ ಎರಡನೆ ಪ್ರಪಂಚ ಯುದ್ಧಕ್ಕೆ ಹೊಣೆಯಾದವು. 1939ರಲ್ಲಿ ಯುರೋಪು ಮತ್ತು ಪ್ರಪಂಚ ಸ್ಫೋಟಕ ಸ್ಥಿತಿಯಲ್ಲಿತ್ತು. ಇಟಲಿ, ಜರ್ಮನಿ ಮತ್ತು ಜಪಾನಗಳಲ್ಲಿ ಸರ್ವಾಧಿಕಾರಿಗಳು ತಲೆ ಎತ್ತಿದರು. ಇವರು ಸಶಸ್ತ್ರರಾಗಿ ಅನೇಕ ರಾಜ್ಯಗಳನ್ನು ಆಕ್ರಮಿಸಲು ಪ್ರಾರಂಭಿಸಿದರು.

ಜಪಾನು ಬಹಿರಂಗವಾಗಿ ರಾಷ್ಟ್ರಗಳ ಸಂಘವನ್ನು ಉಲ್ಲಂಘಿಸಿ ಮಂಚೂರಿಯಾಕ್ಕೆ ಮುತ್ತಿಗೆ ಹಾಕಿತು. ಇಟಲಿ ಅಲ್ಬೇನಿಯಾ ಮತ್ತು ಇಥಿಯೋಪಿಯಾಗಳನ್ನು ಆಕ್ರಮಿಸಿಕೊಂಡಿತು. ಹಿಟ್ಲರ್ ಝುಕೋಸ್ಲಾಕಿಯಾ ಮತ್ತು ಆಸ್ಟ್ರಿಯಾದ ಮೇಲೆ ದಾಳಿಮಾಡಿ ಫ್ರಾನ್ಸ್ ಪಕ್ಷವಹಿಸಿ ಸ್ಪೇನ ವ್ಯವಹಾರದಲ್ಲಿ ಮಧ್ಯೆ ಪ್ರವೇಶಿಸಿದನು. ರಾಷ್ಟ್ರ ಸಂಘ ಇದನ್ನು ತಡೆಯಲು ಅಸಮರ್ಥವಾಯಿತು. ಬ್ರಿಟನ್ ಮತ್ತು ಫ್ರಾನ್ಸ್ ಇದನ್ನು ತಡೆಗಟ್ಟಲು ತಯಾರಾಗಿರಲಿಲ್ಲ.

ಪ್ರಪಂಚದ ಮೊದಲನೆ ಯುದ್ಧದಲ್ಲಿ ನಷ್ಟ ಹೊಂದಿದ್ದ ಜರ್ಮನಿ ಮಿತ್ರ ರಾಷ್ಟ್ರಗಳ ವಿರುದ್ಧ ಸೇಡು ತೀರಿಸಿಕೊಳ್ಳಲು

ಅಧಿಕಾರಿಯಾಗಿ ಲೋಕಸಭೆಯನ್ನು ಕರೆಯುವ, ವಿಸರ್ಜಿಸುವ ಅಥವಾ ತಳ್ಳಿ ಹಾಕುವ ಅಧಿಕಾರ ಹೊಂದಿರುತ್ತಾನೆ. ರಾಜ್ಯಗಳಲ್ಲಿ ಸರ್ಕಾರಗಳು ಪ್ರಜಾನುರಾಗ ಕಳೆದುಕೊಂಡ ಸಮಯದಲ್ಲಿ ಅಂತಹ ರಾಜ್ಯಗಳನ್ನು ತಮ್ಮ ಅಧಿಕಾರದ ಅಳ್ವಿಕೆಗೆ ಒಳಪಡಿಸಿಕೊಳ್ಳುತ್ತಾನೆ. ಸುಗ್ರೀವಾಜ್ಞೆ ಹೊರಡಿಸುವ, ಕ್ಷಮಾದಾನ ಅಧಿಕಾರಗಳನ್ನು ಪಡೆದಿರುತ್ತಾನೆ.

**ಪ್ರಶ್ನೆ 5.** (ಪ್ರತಿಯೊಂದು ಪ್ರಶ್ನೆಗಳಿಗೆ 5 ಅಂಕಗಳು) ಕೆಳಗಿನ ಪ್ರಶ್ನೆಗಳಿಗೆ ಒಂದು ಪುಟಕ್ಕೆ ಮೀರದಂತೆ ಉತ್ತರ ಬರೆಯಿರಿ.

1) ಕೆಳಗಿನ ರಾಷ್ಟ್ರೀಯ ಚಳುವಳಿಗಳು ಸ್ವಾತಂತ್ರ್ಯ ಸಾಧನೆಯಲ್ಲಿ ವಹಿಸಿದ ಪಾತ್ರವೇನು ?
   a) ಸ್ವದೇಶಿ ಮತ್ತು ಬಹಿಷ್ಕಾರ ಚಳುವಳಿ.
   b) ಕ್ವಿಟ್ ಇಂಡಿಯಾ ಚಳುವಳಿ.

**ಉತ್ತರ :** ಭಾರತೀಯರು ಸ್ವಾತಂತ್ರ್ಯ ಹೋರಾಟವನ್ನು ಪ್ರಾರಂಭಿಸಿದ ನಂತರ ಅನೇಕ ಚಳುವಳಿಗಳು ಪ್ರಾರಂಭವಾದವು. ಅವುಗಳಲ್ಲಿ ಸ್ವದೇಶಿ ಮತ್ತು ಬಹಿಷ್ಕಾರ ಚಳುವಳಿಗಳು ಮುಖ್ಯವಾದವು. ಕ್ರಿ. ಶ. 1905ರಲ್ಲಿ ಬ್ರಿಟಿಷರು ಬಂಗಾಲವನ್ನು ಕೋಮುವಾರ ಆಧಾರದ ಮೇಲೆ ಇಬ್ಭಾಗ ಮಾಡಿದರು. ಕಾಂಗ್ರೆಸ್ಸು ಇದರ ವಿರುದ್ಧ ಸರ್ಕಾರವನ್ನು ಬಹಿರಂಗವಾಗಿ ವಿರೋಧಿಸಿತು. ಬ್ರಿಟಿಷ ವಸ್ತುಗಳ ಬಹಿಷ್ಕಾರ ಮತ್ತು ಸ್ವದೇಶಿ ವಸ್ತುಗಳ ಉಪಯೋಗ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳ ತೆರೆಯುವಿಕೆ ಮೊದಲಾದ ತಂತ್ರಗಳನ್ನು ಉಪಯೋಗಿಸಿತು. ತಿಲಕ್, ಬಿಪಿನ್‌ಚಂದ್ರಪಾಲ್, ಲಜಪತರಾಯ್ ಮೊದಲಾದ ಉಗ್ರಗಾಮಿ ನಾಯಕರು ದೊಡ್ಡ ಸಭೆಯಲ್ಲಿ ಭಾಗವಹಿಸಿದರು. ಇದು ಅನೇಕ ಭಾರತೀಯ ಕೈಗಾರಿಕೆಗಳಿಗೆ ಉತ್ತೇಜನ ನೀಡಿತು. ಅನೇಕ ರಾಷ್ಟ್ರೀಯ ಬ್ಯಾಂಕುಗಳು, ಜೀವವಿಮಾ ಸಂಸ್ಥೆಗಳು ಮತ್ತು ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು ತೆರೆಯಲ್ಪಟ್ಟವು. ವಿದ್ಯಾರ್ಥಿಗಳು ಈ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದರು, ಅನೇಕ ನಾಯಕರುಗಳು ಸೆರೆಮನೆ ಸೇರಿದರು. ಈ ಚಳುವಳಿ ನಿಲ್ಲದೆ ಮತ್ತಷ್ಟು ಉಗ್ರವಾಯಿತು.

ಕ್ವಿಟ್ ಇಂಡಿಯಾ ಚಳುವಳಿ : ಸ್ವಾತಂತ್ರ್ಯ ಸಂಗ್ರಾಮವು 1942 ರ ವೇಳೆಗೆ ಕೊನೆಯ ಹಂತವನ್ನು ಮುಟ್ಟಿತು. 1941ರಲ್ಲಿ ಬ್ರಿಟಿಷರು ಕ್ರಿಪ್ಸ್ ಆಯೋಗವನ್ನು ಕಳುಹಿಸಿ ಭಾರತಕ್ಕೆ ಕೆಲವು ರಿಯಾಯತಿಗಳನ್ನು ಕೊಟ್ಟು ಸೀಮಿತ ಸ್ವಾತಂತ್ರ್ಯ ಕೊಡುವ ಸಲಹೆ ನೀಡಿದರು. ಆದರೆ ಇವರ ಸಲಹೆಗಳು ಭಾರತೀಯ ಕಾಂಗ್ರೆಸ್ ಅಥವಾ ಮುಸ್ಲಿಂಲೀಗ್ ಸದಸ್ಯರಿಗೆ ಒಪ್ಪಿಗೆಯಾಗಲಿಲ್ಲ. 1942 ಅಗಸ್ಟ 8 ರಂದು ಬೊಂಬಾಯಿಯಲ್ಲಿ ಸಭೆ ಸೇರಿದ ಕಾಂಗ್ರೆಸ್ಸು "ಬ್ರಿಟಿಷರೇ ಭಾರತದಿಂದ ತೊಲಗಿ" ಠರಾವನ್ನು ಅಂಗೀಕರಿಸಿತು. ಕಾಂಗ್ರೆಸ್ಸು ಅಹಿಂಸಾ ತತ್ವದ ಮೇಲೆ ರಾಷ್ಟ್ರಾದ್ಯಂತ ಹೋರಾಟವನ್ನು ಪ್ರಾರಂಭಿಸಲು ನಿರ್ಧರಿಸಿತು. ಗಾಂಧೀಜಿಯವರ ನೇತೃತ್ವದಲ್ಲಿ ಈ ಚಳುವಳಿಗೆ ಹೆಚ್ಚು ಪ್ರೋತ್ಸಾಹ ದೊರೆಯಿತು. ಈ ಚಳುವಳಿಗೆ ಜಪಾನ ಆಗ್ನೇಯ ಏಷ್ಯಾದಲ್ಲಿ ಜಯಗಳಿಸಿದುದು, ಸುಭಾಷಚಂದ್ರ ಬೋಸರು ಭಾರತದಿಂದ ತಪ್ಪಿಸಿಕೊಂಡು ಹೋದುದು ಮತ್ತು ಭಾರತೀಯ ರಾಷ್ಟ್ರ ಸೈನ್ಯವನ್ನು ಕಟ್ಟಿದುದು, ಬರ್ಮಾದಿಂದ ಓಡಿ ಬಂದ ಭಾರತೀಯರನ್ನು ಬ್ರಿಟಿಷರು ನಡೆಸಿಕೊಂಡ ರೀತಿ ಮೊದಲಾದವು ಸಹಾಯ ಮಾಡಿದವು. ಈ ಚಳುವಳಿಯ ಪರಿಣಾಮವಾಗಿ ಗಾಂಧೀಜಿಯವರೇ ಮೊದಲಾದ ನಾಯಕರು ಸೆರೆಯಾಳುಗಳಾದರು. ಹಿಂಸಾಚಾರ ಪ್ರಾರಂಭವಾಗಿ ಅನೇಕರು ಕೊಲೆಯಾದರು. ಸಮಾಜದ ಎಲ್ಲಾ ವರ್ಗದವರು ಚಳುವಳಿಯಲ್ಲಿ ಭಾಗವಹಿಸಿದರು. "ಮಾಡು ಇಲ್ಲವೆ ಮಡಿ" ಎಂಬ ಕೂಗು ರಾಷ್ಟ್ರದಲ್ಲೆಲ್ಲಾ ಹರಡಿತು.

ಆದರೆ ಈ ಚಳುವಳಿಯಲ್ಲಿ ಸರಕಾರಿ ಅಧಿಕಾರಿಗಳು ಬ್ರಿಟಿಷರಿಗೆ ವಿಧೇಯರಾಗಿ ನಡೆದುಕೊಂಡರು. ಜಮೀನುದಾರರು, ರಾಜಕುಮಾರರುಗಳು ತಟಸ್ಥರಾದರು. ಜಿನ್ನಾ ಪಾಕಿಸ್ತಾನ ಬೇಕೆಂಬ ತಮ್ಮ ಹಟವನ್ನು ಮುಂದುವರಿಸಿದರು. ಆದ್ದರಿಂದ ಈ ಚಳುವಳಿ ವಿಫಲವಾಯಿತು.

2. 1851ರ ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಣವಾದ ಸಾಮಾಜಿಕ, ರಾಜಕೀಯ ಹಾಗೂ ಧಾರ್ಮಿಕ ಕಾರಣಗಳಾವವು ?

**ಉತ್ತರ :** ಅಕ್ಟೋಬರ 1986 ರ 28 ನೇ ಪ್ರಶ್ನೆಗೆ ಉತ್ತರ ನೋಡಿರಿ.

3) ರಾಜಾರಾಮ ಮೋಹನರಾಯರ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳನ್ನು ವಿವರಿಸಿ.

**ಉತ್ತರ :** ಮಾರ್ಚ 1986 ರ ಪ್ರಶ್ನೆ d (30)ರ ಉತ್ತರ ನೋಡಿರಿ.

4) ಪ್ರಪಂಚದ ಮೊದಲನೆ ಯುದ್ಧಕ್ಕೆ ಕಾರಣಗಳನ್ನೂ ಮತ್ತು ಅದರ ಪರಿಣಾಮಗಳನ್ನೂ ತಿಳಿಸಿರಿ.

**ಉತ್ತರ :** ಮಾರ್ಚ 1986 ರ ಪ್ರಶ್ನೆ d (29)ರ ಉತ್ತರ ನೋಡಿರಿ.

**ಉತ್ತರ :** 1) ನಮ್ಮ ಸಂವಿಧಾನದ ಜಾತ್ಯಾತೀತ, ಸಮಾಜವಾದಿ ಪ್ರಜಾಸತ್ತಾತ್ಮಕ ಸ್ವರೂಪ.

2) ನಮ್ಮ ಸರಕಾರದ ಸಂಯುಕ್ತ ಸ್ವರೂಪವು ಭಾವೈಕ್ಯತೆಗೆ ಪೂರಕವಾಗಿರುತ್ತದೆ.

3) ಪ್ರಗತಿಗಾಮಿ ಆರ್ಥಿಕ ಧೋರಣೆ.

4) ರಾಷ್ಟ್ರೀಯ ರಾಜಕೀಯ ಪಕ್ಷಗಳು.

5) ರಾಷ್ಟ್ರೀಯ ಕಾರ್ಮಿಕ ಸಂಘಟನೆ.

6) ರಾಷ್ಟ್ರೀಯ ಲಾಂಛನಗಳು.

7) ವಿದ್ವನ್ಮಂಡಲ.

8) ಕೇಂದ್ರ ಲೋಕಸೇವಾ ಆಯೋಗ.

9) ಸಾಂಸ್ಕೃತಿಕ ಸಂಸ್ಥೆಗಳು.

10) ರಾಷ್ಟ್ರೀಯ ವೈಜ್ಞಾನಿಕ ಪ್ರಯೋಗ ಶಾಲೆಗಳು ಇವು ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಂಬಲಿಸುವ ಅಂಶಗಳು.

12) ವಿಶ್ವ ಆರೋಗ್ಯ ಸಂಸ್ಥೆ ನೀಡುತ್ತಿರುವ ಸೇವೆಗಳೇನು ?

**ಉತ್ತರ :** ಜೂನ 1988 ರ ಪ್ರಶ್ನೆ d (26) ರ ಉತ್ತರ ನೋಡಿರಿ.

13) ವಿಮಾನ ದಳದ ಕರ್ತವ್ಯಗಳೇನು ?

**ಉತ್ತರ :** 1) ಯುದ್ಧ ಸಮಯದಲ್ಲಿ ಭೂಸೈನ್ಯಗಳಿಗೆ ಸಹಾಯಕವಾಗಿ, ಶತ್ರು ರಾಜ್ಯದಲ್ಲಿ ಸೈನ್ಯ ಮತ್ತು ಕೈಗಾರಿಕಾ ಕ್ಷೇತ್ರಗಳ ಮೇಲೆ ಬಾಂಬಿನ ದಾಳಿ ನಡೆಸುವದು. 2) ವೈರಿಗಳ ವಿಮಾನಗಳನ್ನು ಉರುಳಿಸುವದು. 3) ವಿಮಾನ ಯುದ್ಧದಲ್ಲಿ ಗಾಯಗೊಂಡವರನ್ನು ಬೇರೆ ಸ್ಥಳಕ್ಕೆ ಕರೆದುಕೊಂಡು ಹೋಗುವದು. 4) ಸೇನೆಗಳಿಗೆ ಅವಶ್ಯಕ ಪದಾರ್ಥಗಳನ್ನು ಒದಗಿಸುವದು. 5) ಸ್ವಾಭಾವಿಕ ತೊಂದರೆಗಳ ಸಮಯದಲ್ಲಿ-(ಪ್ರವಾಹ, ಭೂಕಂಪ) ನಾಗರಿಕ ಅಧಿಕಾರಿಗಳಿಗೆ ಸಹಾಯ ಮಾಡುವದು ಇವೇ ವಿಮಾನದಳದ ಕರ್ತವ್ಯಗಳು.

14) ಮಾರ್ಕ್ಸನ ಸಮಾಜವಾದದ ವಿಶೇಷ ಲಕ್ಷಣಗಳೇನು ?

**ಉತ್ತರ :** ಸೆಪ್ಟೆಂಬರ 1984 ರ ಪ್ರಶ್ನೆ III (1)ರ ಉತ್ತರ ನೋಡಿರಿ.

15) ನಮಗೆ ರಾಷ್ಟ್ರಧ್ವಜ ಏಕೆಬೇಕು ? ನಮ್ಮ ರಾಷ್ಟ್ರಧ್ವಜದಲ್ಲಿ ಮೂರು ಬಣ್ಣಗಳ ವೈಶಿಷ್ಟ್ಯವನ್ನು ವಿವರಿಸಿ.

**ಉತ್ತರ :** ನಮ್ಮಲ್ಲಿ ರಾಷ್ಟ್ರೀಯ ಐಕ್ಯತೆಯ ಭಾವನೆಯನ್ನು ಹುಟ್ಟಿಸಲು ರಾಷ್ಟ್ರಧ್ವಜವು ಬೇಕು. ರಾಷ್ಟ್ರಧ್ವಜದ ಮೇಲ್ಭಾಗದಲ್ಲಿರುವ ಕೇಸರಿ ಬಣ್ಣವು ಧೈರ್ಯ, ತ್ಯಾಗ ಮತ್ತು ವೈರಾಗ್ಯಗಳನ್ನು ಪ್ರತಿನಿಧಿಸುತ್ತದೆ. ಅದು ಅತ್ಯುನ್ನತ ನೈತಿಕ ಜೀವನ ನಡೆಸಲು ಕರೆ ಕೊಡುತ್ತದೆ. ಶ್ವೇತ ವರ್ಣವು ನಮ್ಮ ಆಲೋಚನೆಗಳು, ಸತ್ಯತೆ ಮತ್ತು ಸ್ವಚ್ಛತೆಗಳಿಂದ ಕೂಡಿರಬೇಕೆಂಬುದನ್ನು ಪ್ರತಿನಿಧಿಸುತ್ತದೆ. ಮೂರನೆಯದಾಗಿ ಹಸಿರು ಬಣ್ಣವು ಜೀವನ ಸಮೃದ್ಧಿ ಮತ್ತು ಉಚ್ಛ್ರಾಯ ಸ್ಥಿತಿಯನ್ನು ಪ್ರತಿನಿಧಿಸುತ್ತದೆ. ಅದು ಫಲವತ್ತಾದ ಭೂಮಿ ಮತ್ತು ಸಮೃದ್ಧ ಜಲಸಂಪತ್ತನ್ನು ಸೂಚಿಸುತ್ತದೆ.

16) ರಾಷ್ಟ್ರರಕ್ಷಣೆಗೆ ಪ್ರತಿಯೊಬ್ಬ ನಾಗರಿಕನು ಯಾವ ರೀತಿ ಸಹಾಯ ಸಲ್ಲಿಸಬಹುದು.

**ಉತ್ತರ :** ಅಕ್ಟೋಬರ 1987 ರ ಪ್ರಶ್ನೆ 30 ರ ಉತ್ತರ ನೋಡಿರಿ.

17) ತನ್ನ ದೇಶದ ಆಂತರಿಕ ಸಮಸ್ಯೆಗಳನ್ನು ಹಿಟ್ಲರನು ಹೇಗೆ ಬಗೆಹರಿಸಿದನು ?

**ಉತ್ತರ :** ಎಪ್ರಿಲ್ 1985 ರ ಪ್ರಶ್ನೆ V (3) ರ ಉತ್ತರ ನೋಡಿರಿ.

18) ಮುಸೋಲಿನಿಯ ಸಾಧನೆಗಳು ಯಾವವು ?

**ಉತ್ತರ :** ಅಕ್ಟೋಬರ 1985 ರ ಪ್ರಶ್ನೆ VII ರ ಉತ್ತರ ನೋಡಿರಿ.

19) ಯುನೆಸ್ಕೊ (UNESCO)ವಿನ ಕಾರ್ಯಗಳಾವವು ?

**ಉತ್ತರ :** ಎಪ್ರಿಲ್ 1985 ರ ಪ್ರಶ್ನೆ 4 (2)ರ ಉತ್ತರ ನೋಡಿರಿ.

20) ರಾಷ್ಟ್ರಾಧ್ಯಕ್ಷರ ಅಧಿಕಾರ ಮತ್ತು ಕರ್ತವ್ಯಗಳನ್ನು ತಿಳಿಸಿ.

**ಉತ್ತರ :** ಭಾರತ ರಾಜ್ಯಾಂಗದ ಪ್ರಕಾರ ಭಾರತದ ನಾಯಕನನ್ನು ರಾಷ್ಟ್ರಾಧ್ಯಕ್ಷ ಎಂದು ಕರೆಯುತ್ತಾರೆ. ರಾಷ್ಟ್ರಾಧ್ಯಕ್ಷರು ಕಾರ್ಯಾಂಗ, ನ್ಯಾಯಾಂಗ ಹಾಗೂ ಶಾಸಕಾಂಗದ ಅಧಿಕಾರಿ, ಕಾರ್ಯಾಂಗದ ಅಧಿಕಾರಿಯಾಗಿ ಪ್ರಧಾನ ಮಂತ್ರಿ ಮತ್ತು ಇತರ ಮಂತ್ರಿಗಳನ್ನು ನೇಮಿಸುತ್ತಾನೆ. ಶಾಸಕಾಂಗದ

**ಉತ್ತರ :** ಮಾರ್ಚ 1988 ರ ಪ್ರಶ್ನೆ d (26)ರ ಉತ್ತರ ನೋಡಿರಿ.

5) "ದತ್ತು ಮಕ್ಕಳಿಗೆ ಹಕ್ಕಿಲ್ಲ'' ಎಂಬ ನೀತಿಯಿಂದ ಲಾರ್ಡ ಡಾಲಹೌಸಿ ಬ್ರಿಟಿಷ್ ಸಾಮ್ರಾಜ್ಯ ಹೇಗೆ ವಿಸ್ತರಿಸಿದನು ?

**ಉತ್ತರ :** ಗಂಡು ಮಕ್ಕಳಿಲ್ಲದ ದೇಶೀಯ ರಾಜ್ಯಗಳನ್ನು ಬ್ರಿಟಿಷ್ ಆಡಳಿತದಲ್ಲಿ ತರುವದಕ್ಕಾಗಿ ಲಾರ್ಡ ಡಾಲಹೌಸಿಯು ಅನುಸರಿಸಿದ ಪದ್ಧತಿಯು ದತ್ತು ಮಕ್ಕಳಿಗೆ ಹಕ್ಕು ನಿರಾಕರಣೆ ನೀತಿ ಹಿಂದೆ ದೇಶೀಯ ರಾಜನೊಬ್ಬನಿಗೆ ಗಂಡು ಮಕ್ಕಳಿಲ್ಲದಿದ್ದರೆ ಅವನು ತನ್ನ ಮರಣಾನಂತರ ಹಕ್ಕುದಾರನಾಗಲು ಒಂದು ಮಗುವನ್ನು ದತ್ತಕ ತೆಗೆದುಕೊಳ್ಳುತ್ತಿದ್ದರು. ಲಾರ್ಡ ಡಾಲ ಹೌಸಿಯು ಅಂತಹ ದತ್ತು ಸ್ವೀಕಾರವನ್ನು ಮಾನ್ಯಮಾಡಲು ನಿರಾಕರಿಸಿದನು. ಈ ಪದ್ಧತಿಗೆ ಮೊದಲು ಗುರಿಯಾದವನು ಸತಾರದ ರಾಜ. ಈ ನೀತಿಯಿಂದ ಲಾರ್ಡ ಡಾಲಹೌಸಿಯು ಬಘಾಟ್, ಸಂಭಲ್ಪುರ, ಉದಯಪೂರ, ನಾಗಪುರ ಮತ್ತು ಜೈಪುರ ಮುಂತಾದ ರಾಜ್ಯಗಳನ್ನು ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿಸಿಕೊಂಡು ಸಾಮ್ರಾಜ್ಯವನ್ನು ವಿಸ್ತರಿಸಿದನು.

6) 1935ರ ಶಾಸನದ ಮುಖ್ಯ ವಿಧಿಗಳನ್ನು ಹೇಳಿರಿ.

**ಉತ್ತರ :** 1) ಈ ಶಾಸನವು ಅಖಿಲ ಭಾರತೀಯ ಫೆಡರಲ್ ರಾಜ್ಯಕ್ಕೆ ಅನುವು ಮಾಡಿಕೊಟ್ಟಿತು. ದೇಶೀಯ ಸಂಸ್ಥಾನಗಳು ಬ್ರಿಟಿಷ್ ಸರಕಾರದೊಡನೆ ಒಪ್ಪಂದಕ್ಕೆ ರುಜು ಹಾಕುವದರ ಮೂಲಕ ಸಂಯುಕ್ತ ರಾಜ್ಯದಲ್ಲಿ ಸೇರಿಕೊಳ್ಳಬೇಕಾಯಿತು.

2) ಫೆಡರಲ್ ಅಸೆಂಬ್ಲಿಗೆ ಬ್ರಿಟಿಷ್ ಪ್ರಾಂತಗಳು ಮತ್ತು ದೇಶೀಯ ಸಂಸ್ಥಾನಗಳು ತಮ್ಮ ಪ್ರತಿನಿಧಿಗಳನ್ನು ಕಳಿಸುವ ಅಧಿಕಾರ ಪಡೆದವು.

3) ಈ ಶಾಸನವು ಕೇಂದ್ರ ಸೂಚಿ, ಪ್ರಾಂತೀಯ ಸೂಚಿ ಮತ್ತು ಸಮವರ್ತಿ ಸೂಚಿ ಎಂಬ ಮೂರು ಪಟ್ಟಿಗಳಿಗೆ ಅವಕಾಶ ಮಾಡಿಕೊಟ್ಟಿತು.

4) ಪ್ರಾಂತಗಳಲ್ಲಿ ರದ್ದಾದ ದ್ವಿಮುಖ ಸರಕಾರವು ಕೇಂದ್ರದಲ್ಲಿ ಜಾರಿಗೆ ಬಂತು.

5) ಪ್ರಾಂತಗಳಲ್ಲಿ ಜವಾಬ್ದಾರಿ ಸರಕಾರ ಜಾರಿಗೆ ಬಂದಿತು. ಪ್ರಾಂತಗಳ ಆಡಳಿತವನ್ನು ಚುನಾಯಿತ ಮಂತ್ರಿಗಳೇ ನಡೆಸುವಂತಾಯಿತು.

6) ಈ ಶಾಸನವು ದೇಶೀಯ ಸಂಸ್ಥಾನಗಳ ಮತ್ತು ಪ್ರಾಂತ್ಯಗಳ ಮೇಲೆ ವ್ಯಾಪ್ತಿಯುಳ್ಳ ಒಂದು ಕೇಂದ್ರ ನ್ಯಾಯಾಲಯಕ್ಕೆ ಅವಕಾಶ ಮಾಡಿಕೊಟ್ಟಿತು.

7) ರಶಿಯಾಕ್ಕೆ ಲೆನಿನ್ ಸಲ್ಲಿಸಿದ ಸೇವೆಯನ್ನು ವಿವರಿಸಿ.

**ಉತ್ತರ :** ಮಾರ್ಚ 1986 ರ ಪ್ರಶ್ನೆ 28 ರ ಉತ್ತರ ನೋಡಿರಿ.

8) ಭಾರತಕ್ಕೆ ಅನಿಬೆಸೆಂಟರ ಯಾವ ಸೇವೆಗಳನ್ನು ಮೆಚ್ಚುವಿರಿ.

**ಉತ್ತರ :** ಮಾರ್ಚ 1988 ರ ಪ್ರಶ್ನೆ d (24)ರ ಉತ್ತರ ನೋಡಿರಿ.

9) ರಾಮಕೃಷ್ಣ ಸಂಸ್ಥೆಯ ಸ್ಥಾಪಕರು ಯಾರು ? ಈ ಸಂಸ್ಥೆ ನಡೆಸಿರುವ ಸಾಮಾಜಿಕ ಸೇವೆಗಳಾವವು ?

**ಉತ್ತರ :** ಶ್ರೀ ರಾಮಕೃಷ್ಣ ಪರಮಹಂಸರು ಬಂಗಾಳದವರು. ಇವರ ಶಿಷ್ಯರಾದ ಸ್ವಾಮಿ ವಿವೇಕಾನಂದರು ರಾಮಕೃಷ್ಣ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆಯವರು ಅಂಧ ವಿಶ್ವಾಸಗಳನ್ನು ಮತ್ತು ಮೂಢ ನಂಬಿಕೆಗಳನ್ನು ಖಂಡಿಸಿ ತರ್ಕಬದ್ಧವಾದ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಿದರು. ಶಾಲೆಗಳು, ಆಸ್ಪತ್ರೆಗಳು, ಗ್ರಂಥ ಭಂಡಾರಗಳು ಮತ್ತು ಅನಾಥಾಲಯಗಳನ್ನು ತೆರೆದು ಸಾಮಾಜಿಕ ಮತ್ತು ಮಾನವೀಯ ಕ್ಷೇತ್ರಗಳಲ್ಲಿ ಭವ್ಯ ಕೆಲಸ ಮಾಡಿದರು. ಶೈಕ್ಷಣಿಕ ಮತ್ತು ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ತರಬೇತಿ ನೀಡಿದರು.

10) ಪಂಚಶೀಲ ತತ್ವಗಳು ಯಾವವು ?

**ಉತ್ತರ :** ಭಾರತದ ಮೊದಲನೆ ಪ್ರಧಾನಿಯಾಗಿದ್ದ ಪಂಡಿತ ಜವಾಹರಲಾಲ್ ನೆಹ್ರೂರವರು ತಮ್ಮ ವಿದೇಶಿ ವ್ಯವಹಾರವನ್ನು ಪಂಚಶೀಲ ತತ್ವಗಳ ಆಧಾರದ ಮೇಲೆ ನಡೆಸಿದರು. 1) ಭೂ ಸಮಗ್ರತೆ ಮತ್ತು ಸಮಾನ ಅಧಿಕಾರಕ್ಕೆ ಪರಸ್ಪರ ಗೌರವ ಕೊಡುವದು. 2) ಪರಸ್ಪರ ಯುದ್ಧ ನಿಷೇಧ ನಿಲುವು. 3) ಪರಸ್ಪರ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡದಿರುವದು. 4) ಸಮಾನತೆ ಮತ್ತು ಪರಸ್ಪರ ಅನುಕೂಲಗಳು, 5) ಶಾಂತಿಯುತ ಸಹಬಾಳ್ವೆ– ಇವು ಪಂಚಶೀಲ ತತ್ವಗಳು.

11) ರಾಷ್ಟ್ರೀಯ ಭಾವೈಕ್ಯತೆಗೆ ಅನುಕೂಲವಾಗುವ ಅಂಶಗಳಾವವು ?

ಹಿಟ್ಲರನಿಗೆ ಸಾಧನೆಯಾಯಿತು. ಹಿಟ್ಲರ ಅತಿ ಆಕ್ರಮಣಕಾರಿ ಹಾಗೂ ಮಹಾತ್ವಾಕಾಂಕ್ಷಿಯಾಗಿದ್ದನು. ನಾಝಿ ಪಕ್ಷ ಜರ್ಮನಿಯಲ್ಲಿ ಎಲ್ಲಾ ವಿರೋಧವನ್ನು ಕೊನೆಗಾಣಿಸಿ ಯುದ್ಧಕ್ಕೆ ದಾರಿ ಮಾಡಿಕೊಟ್ಟಿತು. ಮಿಲಿಟರಿ ಪ್ರಾಬಲ್ಯದ ಶ್ರೇಷ್ಠತೆ, ರಾಷ್ಟ್ರೀಯತೆ ಪ್ರತಿಷ್ಠೆಯನ್ನು ಉದ್ದೇಶಿಸಿ ಯುದ್ಧಕ್ಕೆ ಪ್ರಚೋದಿಸಿತು.

ಹಿಟ್ಲರನು ಡ್ಯಾನ್‌ಜಿಗ್ ಮೇಲೆ ದಾಳಿಮಾಡಿದನು. ಇದರಿಂದ ಯುದ್ಧ ಸ್ಫೋಟಗೊಂಡಿತು. ಪೋಲಂಡ ಮೇಲೆ ಅವನು ದಾಳಿ ಮಾಡಿದನು. ಇದರಿಂದ ಜಗತ್ತಿನ ರಾಷ್ಟ್ರಗಳು ಯುದ್ಧದಲ್ಲಿ ಭಾಗವಹಿಸಿದವು.

**ಪರಿಣಾಮಗಳು :** ಈ ಯುದ್ಧದಲ್ಲಿ ಅಪಾರ ಪ್ರಾಣ ಹಾನಿ ಉಂಟಾಯಿತು. ಪರಿಣಾಮದ ದೃಷ್ಟಿಯಿಂದ ಜಾಗತಿಕ ಇತಿಹಾಸದಲ್ಲಿ ಇದೊಂದು ಮೈಲುಗಲ್ಲು ಎನ್ನಬಹುದು. ಈ ಯುದ್ಧವು 1939 ರಿಂದ 1945 ರ ವರೆಗೆ ನಡೆಯಿತು.

ನಾಜಿಸಂ, ಫ್ಯಾಸಿಜಂ, ಪಾಶ್ಚಿಮಾತ್ಯ ಪ್ರಭುತ್ವ ಇವುಗಳು ಸಂಪೂರ್ಣ ನಾಶಹೊಂದಿದವು. ಬಂಧ ವಿಮೋಚನೆಯ ಒಂದೇ ಹೊಸ ಅಲೆ ಏಷ್ಯಾ ಮತ್ತು ಆಫ್ರಿಕಾ ಖಂಡಗಳಲ್ಲಿ ಪ್ರಾರಂಭವಾಯಿತು. ಈ ಯುದ್ಧವು ಆರ್ಥಿಕ ದೃಷ್ಟಿಯಿಂದ ಅತ್ಯಂತ ಮಹತ್ವದ ಪ್ರಭಾವವನ್ನು ಬೀರಿತು.

ಶಾಂತಿಯ ಉದ್ದೇಶಕ್ಕಾಗಿ ಅರ್ಥ ವ್ಯವಸ್ಥೆಯನ್ನು ಸಜ್ಜುಗೊಳಿಸಬೇಕಾಯಿತು. ಫ್ರಾನ್ಸ್, ಪಶ್ಚಿಮ ಜರ್ಮನಿ, ಇಟಲಿ ಮೊದಲಾದ ರಾಷ್ಟ್ರಗಳು ಯುರೋಪಿನ ಆರ್ಥಿಕ ಸಮುದಾಯದ ಬಗೆಗೆ ಯೋಚಿಸಿದವು. ಸಾಧನ, ಸಂಪತ್ತನ್ನು ಕ್ರೋಢೀಕರಿಸಲು, ನಿರುದ್ಯೋಗ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸಿದವು. ಈ ದೇಶಗಳು ಸುಂಕದ ಪ್ರತಿಬಂಧಕಗಳನ್ನು ಸಡಿಲುಗೊಳಿಸಿ ಪರಸ್ಪರ ಸಹಕಾರಕ್ಕೆ ಉತ್ತೇಜನ ನೀಡಿದವು.

ಅಮೇರಿಕಾ ಮಾತ್ರ ತನ್ನ ಸಂಪತ್ತಿನಿಂದ ಪ್ರಪಂಚದಲ್ಲಿ ಅಗ್ರಮಾನ ರಾಷ್ಟ್ರವಾಯಿತು. ಜಪಾನ ತನ್ನದೇ ಆದ ಪುನರ್ರಚನೆ ಕಾರ್ಯಕ್ರಮವನ್ನು ಅಧಿಕ ಪ್ರಮಾಣದಲ್ಲಿ ಕೈಗೊಂಡಿತು. ಹೊಸದಾಗಿ ವಿಮೋಚನೆಗೊಂಡ ಏಷ್ಯಾ ಮತ್ತು ಆಫ್ರಿಕದ ರಾಜ್ಯಗಳು ಅರ್ಥ ವ್ಯವಸ್ಥೆಯನ್ನು ಪುನರ್ರಚಿಸಲು ತಮ್ಮ ಸ್ವಂತ ಯೋಜನೆಗಳನ್ನು ಪ್ರಾರಂಭಿಸಿದವು. ಹೀಗೆ ಎರಡನೆ ಪ್ರಪಂಚ ಯುದ್ಧವು ವ್ಯಾಪಕವಾದ ಆರ್ಥಿಕ ಮತ್ತು ರಾಜಕೀಯ ಪರಿಣಾಮಗಳನ್ನು ಉಂಟುಮಾಡಿತು.

ಕೊನೆಯದಾಗಿ ಈ ಯುದ್ಧದ ಪರಿಣಾಮವಾಗಿ ವಿಶ್ವಸಂಸ್ಥೆಯ ಜನನವಾಯಿತು. ಒಂದು ಯುಗದ ಅಂತ್ಯವಾಗಿ ಮತ್ತೊಂದು ಯುಗವು ಪ್ರಾರಂಭವಾಯಿತೆನ್ನಬಹುದು.

8) ಭಾರತದ ವಿದೇಶಾಂಗ ನೀತಿಯಲ್ಲಿ ಅಳವಡಿಸಿರುವ ಮುಖ್ಯ ತತ್ವಗಳನ್ನು ತಿಳಿಸಿರಿ.

**ಉತ್ತರ :** ಎಪ್ರಿಲ್ 1984 ರ III (1) ಪ್ರಶ್ನೆಯ ಉತ್ತರವನ್ನು ನೋಡಿರಿ.

9) ವಿಶ್ವಸಂಸ್ಥೆಯು ಅಸ್ತಿತ್ವಕ್ಕೆ ಬಂದದ್ದು ಯಾವಾಗ? ಅದರ ಉದ್ದೇಶಗಳೇನು ? ವಿಶ್ವ ಸಂಸ್ಥೆಯ ಯಾವದಾದರೂ ಎರಡು ಸಾಧನೆಗಳನ್ನು ತಿಳಿಸಿರಿ.

**ಉತ್ತರ :** ಮಾರ್ಚ 1988 ರ ಪ್ರಶ್ನೆ E (31)ರ ಉತ್ತರ ನೋಡಿರಿ.

10) ಭಾರತೀಯ ಪೌರನು ರಾಷ್ಟ್ರ ರಕ್ಷಣೆಯಲ್ಲಿ ಹೇಗೆ ಪಾತ್ರವಹಿಸಬಹುದು ?

**ಉತ್ತರ :** ಅಕ್ಟೋಬರ 1987 ರ ಇ (30) ರ ಉತ್ತರ ನೋಡಿರಿ.

11) ಪ್ರಾರ್ಥನಾ ಸಮಾಜದ ಉದ್ದೇಶಗಳೇನು ? ಇದರಲ್ಲಿ ನ್ಯಾಯಮೂರ್ತಿ ನಾನಡೆಯವರ ಪಾತ್ರವೇನು ?

**ಉತ್ತರ :** ಅಕ್ಟೋಬರ 1986 ರ ಪ್ರಶ್ನೆ D (30)ರ ಉತ್ತರ ನೋಡಿರಿ.

12) ರೆಗ್ಯುಲೇಟಿಂಗ ಶಾಸನವನ್ನು ಜಾರಿಗೆ ತರಲು ಕಾರಣಗಳೇನು ? ಆ ಶಾಸನದ ಮುಖ್ಯ ಅಂಶಗಳಾವವು ?

**ಉತ್ತರ :** ಅಕ್ಟೋಬರ 1986 ರ ಪ್ರಶ್ನೆ D (30)ರ ಉತ್ತರ ನೋಡಿರಿ.

# ಎಪ್ರಿಲ್ 1989

## ಭೂಗೋಳ

ಮಾರ್ಕ್ಸ್ : 35

**ಅತಿ ಸಂಭವನೀಯ ಪ್ರಶ್ನೆಗಳು – ಉತ್ತರ ಸಹಿತ**

**ಪ್ರಶ್ನೆ I ಮತ್ತು II**

**4 ಅಂಕಗಳ ಪ್ರಶ್ನೆಗಳು**

ಕೆಳಗಿನವುಗಳಿಗೆ ಬೇಕಾದ ಎರಡನ್ನು ಕುರಿತು ಬರೆಯಿರಿ.

1) ವೃತ್ತಿ ಸಂಘಗಳೆಂದರೇನು ? ಅವು ಕೈಗಾರಿಕಾಭಿವೃದ್ಧಿಯಲ್ಲಿ ವಹಿಸಿದ ಪಾತ್ರವೇನು ?

**ಉತ್ತರ :** ಎಪ್ರಿಲ್ 1987 ರ ಪ್ರಶ್ನೆ 1 ರ ಉತ್ತರ ನೋಡಿರಿ.

2) ಕೈಗಾರಿಕಾ ಕೇಂದ್ರೀಕರಣವೆಂದರೇನು ? ಕೇಂದ್ರೀಕರಣಕ್ಕೆ ಸಹಾಯಕವಾಗುವ ಅಂಶಗಳನ್ನು ತಿಳಿಸಿ ಯಾವದಾದರೂ ಎರಡು ಅಂಶಗಳನ್ನು ಸಂಕ್ಷೇಪವಾಗಿ ವಿವರಿಸಿ.

**ಉತ್ತರ :** ಎಪ್ರಿಲ್ 1985 ರ 1 ನೇ ಪ್ರಶ್ನೆಯ ಉತ್ತರ ನೋಡಿರಿ.

3) ಆಧುನಿಕ ಕೈಗಾರಿಕೆಗಳ ಲಕ್ಷಣಗಳನ್ನು ಹೇಳಿ, ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳಲ್ಲಿರುವ ವ್ಯತ್ಯಾಸವನ್ನು ಹೇಳಿರಿ ?

**ಉತ್ತರ :** ಅಕ್ಟೋಬರ 1984 ರ 1 ನೇ ಪ್ರಶ್ನೆಯ ಉತ್ತರ ನೋಡಿರಿ.

4) ಭಾರತದ ಪ್ರಮುಖ ಕೈಗಾರಿಕಾ ಪ್ರದೇಶಗಳಾವವು? ಭಾರತದಲ್ಲಿ ಕೈಗಾರಿಕೆಯ ಬೆಳವಣಿಗೆಗೆ ಕಾರಣಗಳೇನು ?

**ಉತ್ತರ :** ಅಕ್ಟೋಬರ 1987 ಪ್ರಶ್ನೆ I ರ ಉತ್ತರ ನೋಡಿರಿ.

5) ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವವ ದೇಶ ಎಂಬುಹನ್ನು ಯಾವ ಅಂಶಗಳು ನಿರ್ಧರಿಸುತ್ತವೆ.

**ಉತ್ತರ :** ಎಪ್ರಿಲ್ 1985 ರ ಪ್ರಶ್ನೆ II ರ ಉತ್ತರ ನೋಡಿರಿ.

6) ಸಾಗಾಣಿಕೆಯ ವಿವಿಧ ರೀತಿಗಳನ್ನು ವಿವರಿಸಿ.

**ಉತ್ತರ :** ಎಪ್ರಿಲ್ 1985 ರ ಪ್ರಶ್ನೆ II ರ ಉತ್ತರ ನೋಡಿರಿ.

7) ಹಿನ್ನಾಡು ಎಂದರೇನು ? ಅವು ರೇವು ಪಟ್ಟಣಗಳ ಅಭಿವೃದ್ಧಿಗೆ ಹೇಗೆ ಸಹಾಯ ಮಾಡುತ್ತವೆ ?

**ಉತ್ತರ :** ಬಂದರಿನ ಸುತ್ತ ಮುತ್ತಲೂ ಇರುವ ಫಲವತ್ತಾದ, ಚಪ್ಪಟೆಯಾದ ಭೂಮಿಯನ್ನು ಹಿನ್ನಾಡು ಎನ್ನುತ್ತಾರೆ. ಒಂದು ರೇವು ಪಟ್ಟಣದ ಆರ್ಥಿಕ ಅಭಿವೃದ್ಧಿಯು ಅದರ ಹಿನ್ನಾಡಿನ ಉತ್ಪಾದನಾ ಶಕ್ತಿಯನ್ನು ಮತ್ತು ಸಾಗಾಣಿಕೆಯ ಅನುಕೂಲತೆಯನ್ನು ಅವಲಂಬಿಸಿದೆ. ಹಿನ್ನಾಡಿನಲ್ಲಿ ವ್ಯವಸಾಯ, ಖನಿಜಗಳು, ಕೈಗಾರಿಕೆಗಳು ಮತ್ತು ಸಿದ್ಧ ವಸ್ತುಗಳ ಉತ್ಪನ್ನ ಅಧಿಕವಾಗಿದ್ದರೆ ಅಂತಹ ಹಿನ್ನಾಡನ್ನು ಹೊಂದಿರುವ ರೇವು ಪಟ್ಟಣಗಳು ಅಭಿವೃದ್ಧಿ ಹೊಂದುತ್ತವೆ. ಹಿನ್ನಾಡಿಗೆ ಉತ್ತಮವಾಗಿ ಅಭಿವೃದ್ಧಿ ಹೊಂದಿರುವ ಶಾಖೋಪಶಾಖವಾಗಿ ಹರಡಿರುವ ರಸ್ತೆಗಳು, ರೈಲು ಮತ್ತು ಒಳ ಜಲನಾಡಿನ ಸೌಲಭ್ಯವಿರಬೇಕು.

ಹಿನ್ನಾಡು ಹಂಚಿಕೆಯ ಹಿನ್ನಾಡಾಗಲಿ ಸಹಾಯಕ ಹಿನ್ನಾಡಾಗಲೀ ಆಗಬಹುದು. ಇತರ ಪ್ರದೇಶಗಳಿಂದ ಅವಶ್ಯ ವಸ್ತುಗಳನ್ನು ಆಮದು ಮಾಡಿಕೊಂಡು ಜನರಿಗೆ ಒದಗಿಸುವದು ಅಥವಾ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳನ್ನು ಒದಗಿಸುವದೇ ಹಂಚಿಕೆಯ ಹಿನ್ನಾಡು. ಇತರ ದೇಶಗಳಿಗೆ ಕಚ್ಚಾ ವಸ್ತುಗಳನ್ನಾದರೂ ಸಿದ್ಧ ವಸ್ತುಗಳನ್ನಾದರೂ ರಫ್ತು ಮಾಡುವದೇ ಸಹಾಯಕ ಹಿನ್ನಾಡು. ಆದ್ದರಿಂದ ರೇವು ಪಟ್ಟಣದ ಅಭಿವೃದ್ಧಿಯು ಅದರ ಹಿನ್ನಾಡನ್ನು ಅವಲಂಬಿಸಿದೆ.

8) ಅಂತರ್ ರಾಷ್ಟ್ರೀಯ ಕಾಲುವೆಗಳಾವವು ? ಪ್ರತಿಯೊಂದು ಕಾಲುವೆಯ ಎರಡು ಅನುಕೂಲತೆಗಳನ್ನು ತಿಳಿಸಿ.

**ಉತ್ತರ :** ಅಕ್ಟೋಬರ 1985 ಪ್ರಶ್ನೆ II ರ ಉತ್ತರ ನೋಡಿರಿ.

9) ಪ್ರಪಂಚದಲ್ಲಿ ಜನಸಂಖ್ಯೆಯ ಅಸಮಾನ ಹಂಚಿಕೆಗೆ ಕಾರಣವಾದ ಅಂಶಗಳು ಯಾವವು ? ಹೆಚ್ಚು ಜನಸಾಂದ್ರತೆ ಹೊಂದಿದ ನಾಲ್ಕು ಪ್ರದೇಶಗಳನ್ನು ಹೆಸರಿಸಿರಿ.

**ಉತ್ತರ :** ಮಾರ್ಚ 1988 ರ ಪ್ರಶ್ನೆ IIರ ಉತ್ತರ ನೋಡಿರಿ.

10) ಉಪಗ್ರಹ ಯೋಜನೆಗಳು ಅಂದರೇನು ? ಸಂಪರ್ಕ ವಿಧಾನದಲ್ಲಿ ಅದರ ಪಾತ್ರವೇನು ?

**ಉತ್ತರ :** ಅಕ್ಟೋಬರ 1984 ರ ಪ್ರಶ್ನೆ 1(ಅಥವಾ) ಅದರ ಉತ್ತರ ನೋಡಿರಿ.

11) ಅಂಚೆ ಮತ್ತು ತಂತಿ ಕಚೇರಿಗಳು ಸಲ್ಲಿಸುವ ಸೇವೆಯನ್ನು ವಿವರಿಸಿ.

**ಉತ್ತರ :** ಅಕ್ಟೋಬರ 1985 ರ ಪ್ರಶ್ನೆ II(ಅಥವಾ) ಇದರ ಉತ್ತರ ನೋಡಿರಿ.

12) ಕೈಗಾರಿಕಾ ಕ್ರಾಂತಿಯಿಂದ ಉಂಟಾದ ಪರಿಣಾಮಗಳೇನು ?

**ಉತ್ತರ :** ಕೈಗಾರಿಕೆ ಗೃಹಮಟ್ಟದಲ್ಲಿ ಪ್ರಾರಂಭವಾಗಿ ವೃತ್ತಿ ಸಂಘಗಳಲ್ಲಿ ಬೆಳೆದು ಮಾಲಿಕ, ಕಾರ್ಮಿಕರ ಸಂಬಂಧದಲ್ಲಿ ಮುಂದುವರಿಯಿತು. ಕ್ರಮೇಣ ಕೈಗಾರಿಕೆಯಲ್ಲಿ ಪದಾರ್ಥಗಳ ಉತ್ಪಾದನೆಯಲ್ಲಿ ಯಂತ್ರಗಳ ಉಪಯೋಗ ಪ್ರಾರಂಭವಾಯಿತು. ಇದು ಕೈಗಾರಿಕಾ ಕ್ರಾಂತಿಯ ಪರಿಣಾಮ.

ಕೈಗಾರಿಕೆಯ ಕ್ರಾಂತಿ ಕ್ರಿ. ಶ. 1700–1800ರಲ್ಲಿ ಬ್ರಿಟನ್ನಿನಲ್ಲಿ ಪ್ರಾರಂಭವಾಯಿತೆನ್ನಬಹುದು. ಲೋಹಗಳನ್ನು ಕರಗಿಸುವದು, ಅದಿರುಗಳ ಶುದ್ಧೀಕರಣ, ಮರ ಕಡಿಯುವದು, ಮುದ್ರಣ, ಗಾಜಿನ ಕೈಗಾರಿಕೆ ಮೊದಲಾದ ಉದ್ಯಮಗಳಲ್ಲಿ ಹೊಸ ಬಗೆಯ ಸಲಕರಣೆಗಳು ಬಳಕೆಗೆ ಬಂದವು. ಈ ಕ್ಷಿಪ್ರ ಬದಲಾವಣೆಗಳು ಹತ್ತಿ ಕೈಗಾರಿಕೆಯಿಂದ ಪ್ರಾರಂಭವಾದವು.

1800ಕ್ಕೆ ಮೊದಲು ಬ್ರಿಟನ್ನಿನಲ್ಲಿ ಹೊಸ ಸಂಶೋಧನೆಗಳು ಪ್ರಾರಂಭವಾದವು. ಇದಕ್ಕೆ ಹೆಚ್ಚು ಪ್ರೋತ್ಸಾಹ ಮತ್ತು ಉತ್ತೇಜನಗಳು ದೊರೆತವು. 1733ರಲ್ಲಿ ಜಾನ್‌ಕೆ ಫ್ಲೈಷಟಲ್ ಎಂಬ ಯಂತ್ರವನ್ನು ಕಂಡು ಹಿಡಿದನು. 1738 ರಲ್ಲಿ ವಾಟ್ ಎಂಬುವನು ನೂಲು ತೆಗೆಯುವ ರೋಲರ್ ಸ್ಪಿನ್ನಿಂಗ್ ಯಂತ್ರವನ್ನು ಕಂಡು ಹಿಡಿದನು. 1785 ರಲ್ಲಿ ಎಡ್ಮಂಡ ಕಾರ್ಟರೈಟ್ ವಿದ್ಯುತ್ತಿನ ಮಗ್ಗವನ್ನು ಕಂಡು ಹಿಡಿದನು. ಫ್ರಾನ್ಸ ದೇಶದಲ್ಲಿ ನೀರಿನ ಟರ್ಬೈನ್ ಮತ್ತು ರೇಷ್ಮೆದಾರ ತೆಗೆಯುವ ಯಂತ್ರಗಳನ್ನು ಕಂಡು ಹಿಡಿಯಲಾಯಿತು.

ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಸಾರಿಗೆ ಮತ್ತು ಸಂಪರ್ಕಗಳಲ್ಲಿ ಕ್ರಾಂತಿಕಾರಿ ಬದಲಾವಣೆಗಳಾದವು. ಭೂ ಮತ್ತು ಜಲಮಾರ್ಗಗಳ ಮೇಲೆ ಸಾಗಾಣಿಕೆ, ಆವಿಶಕ್ತಿಯ ಬಳಕೆಯಿಂದ ಪ್ರಪಂಚದ ನಾನಾಭಾಗಗಳೊಡನೆ ಆರ್ಥಿಕ ಸಾಮೀಪ್ಯತೆ ಉಂಟಾಯಿತು. ರೈಲು ಮತ್ತು ಆವಿಯ ಹಡಗುಗಳು ವಾಣಿಜ್ಯ ಮತ್ತು ಕೈಗಾರಿಕೆಯಲ್ಲಿ ಕ್ರಾಂತಿ ಉಂಟುಮಾಡಿದವು.

13) ವಿದೇಶಿ ವಿನಿಮಯ ಎಂದರೇನು ? ಅದರ ಅವಶ್ಯಕತೆಗಳನ್ನು ವಿವರಿಸಿರಿ. ಮತ್ತು ಅನುಕೂಲ ವ್ಯಾಪಾರ ಸಮತೋಲನ ಎಂದರೇನು ತಿಳಿಸಿರಿ.

**ಉತ್ತರ :** ಜೂನ 1988 ಪ್ರಶ್ನೆ II (ಅಥವಾ) ಇದರ ಉತ್ತರ ನೋಡಿರಿ.

**ಪ್ರಶ್ನೆ III (3 ಅಂಕಗಳ ಪ್ರಶ್ನೆಗಳು)**

ಬೇಕಾದ ಐದಕ್ಕೆ ಉತ್ತರ ಬರೆಯಿರಿ.

ನಾಲ್ಕು ವಾಕ್ಯಗಳಿಗೆ ಮೀರದಂತೆ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸಿರಿ.

1) ಐಸೋಬಾರ್ ಮತ್ತು ಐಸೋಥರ್ಮ್ ಎಂಬ ಪದಗಳ ಅರ್ಥವೇನು ?

**ಉತ್ತರ :** ಪ್ರಪಂಚದ ಭೂಪಟದ ಮೇಲೆ ಒಂದೇ ಮಟ್ಟದ ವಾಯು ಒತ್ತಡವನ್ನು ಹೊಂದಿರುವ ಪ್ರದೇಶಗಳನ್ನು ಸೇರಿಸುವಂತೆ ಎಳೆದಿರುವ ಊಹಾರೇಖೆಗಳಿಗೆ ಐಸೋಬಾರ್ ಎನ್ನುತ್ತಾರೆ. ಹಾಗೆಯೇ ಒಂದೇ ಮಟ್ಟದ ಉಷ್ಣಾಂಶವುಳ್ಳ ಪ್ರದೇಶಗಳನ್ನು ಸೇರಿಸುವಂತೆ ಎಳೆದಿರುವ ಊಹಾರೇಖೆಗಳಿಗೆ ಐಸೋಥರ್ಮ್ ಎನ್ನುತ್ತಾರೆ.

2) ಭೂಮಿಯ ಎರಡು ರೀತಿಯ ಚಲನೆಗಳನ್ನು ತಿಳಿಸಿರಿ.

**ಉತ್ತರ :** ಭೂಮಿಯು ಸೂರ್ಯನ ಸುತ್ತಲೂ ತಿರುಗುತ್ತದೆ. ಹೀಗೆ ಅದು ತನ್ನ ಒಂದು ಮೈಸುತ್ತು ತನ್ನ ಅಕ್ಷದ ಮೇಲೆ ಸುತ್ತಲು 24 ಗಂಟೆ ತೆಗೆದುಕೊಳ್ಳುತ್ತದೆ ಇದಕ್ಕೆ ದೈನಂದಿನ ಚಲನೆ ಎನ್ನುತ್ತಾರೆ. ತನ್ನ ಅಕ್ಷದ ಮೇಲೆ ಸುತ್ತುತ್ತಾ ಸೂರ್ಯನ ಸುತ್ತಲೂ ತಿರುಗಲು 365 ದಿನ 6 ಘಂಟೆ ತೆಗೆದುಕೊಳ್ಳುತ್ತದೆ ಇದಕ್ಕೆ ವಾರ್ಷಿಕ ಚಲನೆ ಎನ್ನುತ್ತಾರೆ.

3) ಭಾರತದಲ್ಲಿ ಬೇಸಾಯದ ಎರಡು ಸಮಸ್ಯೆಗಳನ್ನು ತಿಳಿಸಿರಿ.

**ಉತ್ತರ :** 1) ನಮ್ಮ ದೇಶದ ಜನಸಂಖ್ಯೆಯು ವೇಗವಾಗಿ ಹೆಚ್ಚುತ್ತಿದೆ. ಜಮೀನುಗಳು ತುಂಡಾಗಿ ಬಿಟ್ಟಿವೆ. 2) ನಮ್ಮ ದೇಶದಲ್ಲಿ ಬೆಳೆಯಬೇಕಾದ ಬೆಳೆಯು ಮನ್ಸೂನ

ಮಳೆಯನ್ನು ಅವಲಂಬಿಸಿದೆ. ಮನ್ಸೂನ ಮಳೆ ಸಕಾಲದಲ್ಲಿ ಬೀಳದಿದ್ದರೆ ವ್ಯವಸಾಯಕ್ಕೆ ತೊಂದರೆಯಾಗುತ್ತದೆ.

4) ಹಿಮಾಲಯ ಪರ್ವತದ ಎರಡು ಅನುಕೂಲತೆಗಳನ್ನು ತಿಳಿಸಿ.

**ಉತ್ತರ :** ಹಿಮಾಲಯ ಪರ್ವತಗಳು ಪ್ರಪಂಚದಲ್ಲಿಯೇ ಅತ್ಯಂತ ಎತ್ತರವಾದವು. ಇವು ಉತ್ತರ ಸಾಗರದ ಕಡೆಯಿಂದ ಬೀಸುವ ಶೀತಗಾಳಿಗಳನ್ನು ತಡೆದು ಭಾರತಕ್ಕೆ ಅನುಕೂಲ ಮಾಡುತ್ತವೆ. ದಕ್ಷಿಣದ ಕಡೆಯಿಂದ ಬೀಸುವ ಮುಂಗಾರು ಮಾರುತಗಳನ್ನು ತಡೆದು ಭಾರತಕ್ಕೆ ಸಾಕಾದಷ್ಟು ಮಳೆ ಬರುವಂತೆ ಮಾಡುತ್ತದೆ ಹಾಗೂ ಅನೇಕ ನದಿಗಳಿಗೆ ಉಗಮಸ್ಥಾನವಾಗಿದೆ.

5) ಲಾಕ್ಸ್ ವ್ಯವಸ್ಥೆ ಎಂದರೇನು ? ಈ ವ್ಯವಸ್ಥೆ ಎಲ್ಲಿದೆ ?

**ಉತ್ತರ :** 'ಲಾಕ್ಸ' ಎಂದರೆ ಹಡಗುಗಳು ಚಲಿಸುವಂತೆ ನೀರನ್ನು ಹೆಚ್ಚಿಸುವ ಅಥವಾ ಇಳಿಸುವ ವ್ಯವಸ್ಥೆ. ಈ ವ್ಯವಸ್ಥೆ ಪನಾಮಾ ಕಾಲುವೆಯಲ್ಲಿದೆ.

6) ಕರ್ನಾಟಕದಲ್ಲಿ ಕಬ್ಬಿಣದ ಅದಿರು ದೊರೆಯುವ ಎರಡು ಪ್ರದೇಶಗಳನ್ನು ಹೆಸರಿಸಿ.

**ಉತ್ತರ :** ಕರ್ನಾಟಕದಲ್ಲಿ ಭದ್ರಾವತಿಯ ಬಳಿ ಇರುವ ಕೆಮ್ಮಣ್ಣು ಗುಂಡಿ ಮತ್ತು ಬಳ್ಳಾರಿ ಜಿಲ್ಲೆಯಲ್ಲಿರುವ ಹೊಸಪೇಟೆ ಕಬ್ಬಿಣದ ಅದಿರು ದೊರೆಯುವ ಗಣಿಗಳು ವಿಶೇಷವಾಗಿವೆ.

7) ವಿಶ್ವದ ಅಂಚೆ ಸಂಘದ ಸಂಸ್ಥೆಯು ಎಲ್ಲಿ ಮತ್ತು ಏಕೆ ಸ್ಥಾಪಿತವಾಯಿತು ?

**ಉತ್ತರ :** ಅಂತರ್‌ರಾಷ್ಟ್ರೀಯ ಅಂಚೆ ಸೇವೆಯ ಆರ್ಥಿಕ, ತಾಂತ್ರಿಕ ಮತ್ತು ಕಾರ್ಯ ನಿರ್ವಹಣೆಯಲ್ಲಿ ಉದ್ಭವಿಸಬಹುದಾದ ಸಮಸ್ಯೆಗಳನ್ನು ಅಧ್ಯಯನ ಮಾಡುವದಕ್ಕಾಗಿ ಈ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಇದನ್ನು 1876ರಲ್ಲಿ ಸ್ವಿಟ್ಜರ್‌ಲಂಡಿನ ಬರ್ನ ನಗರದಲ್ಲಿ ಸ್ಥಾಪಿಸಲಾಯಿತು.

8) ಗಣಿ ಕೈಗಾರಿಕೆಗಳು ಎದುರಿಸುತ್ತಿರುವ ಎರಡು ಅಪಾಯಕಾರಕ ಸಮಸ್ಯೆಗಳು ಯಾವವು ?

**ಉತ್ತರ :** ಮೇಲ್ಛಾವಣಿಗಳು ಕುಸಿಯುವದು, ವಿಷಪೂರಿತ ಗಾಳಿಗಳ ಬಿಡುಗಡೆ, ಗಣಿಗಳಿಗೆ ಪ್ರವಾಹ ನುಗ್ಗುವದು ಮೊದಲಾದ ಸಮಸ್ಯೆಗಳಿವೆ.

9) ಕೈಗಾರಿಕೆ ಕೇಂದ್ರೀಕೃತವಾಗಲು ಕಾರಣವಾದ ನಾಲ್ಕು ಮುಖ್ಯ ಅಂಶಗಳನ್ನು ಹೇಳಿರಿ.

**ಉತ್ತರ :** ಕೈಗಾರಿಕೆ ಕೇಂದ್ರೀಕೃತವಾಗಲು ಕಾರಣಗಳು 1) ಕಚ್ಚಾ ವಸ್ತುಗಳು ದೊರೆಯುವಿಕೆ 2) ಇಂಧನ ಮತ್ತು ವಿದ್ಯುಚ್ಛಕ್ತಿ 3) ನೀರಿನ ಪೂರೈಕೆ 4) ಸಾಗಾಣಿಕೆ ಸೌಕರ್ಯ.

10) ಸುಯೆಜ್ ಕಾಲುವೆಯ ಉತ್ತರ ಮತ್ತು ದಕ್ಷಿಣದ ತುದಿಗಳಲ್ಲಿರುವ ಎರಡು ಬಂದರಗಳನ್ನು ಹೆಸರಿಸಿ.

**ಉತ್ತರ :** ಸುಯೆಜ್ ಕಾಲುವೆ ಕೆಂಪು ಸಮುದ್ರ ಮತ್ತು ಮೆಡಿಟರೇನಿಯನ್ ಸಮುದ್ರಗಳನ್ನು ಸೇರಿಸುತ್ತದೆ. ಇದರ ಉತ್ತರದ ತುದಿಯಲ್ಲಿ ಸೆಡ್ ಮತ್ತು ದಕ್ಷಿಣದ ಕೊನೆಯಲ್ಲಿ ಸುಯೆಜ್ ಬಂದರುಗಳಿವೆ. ಆ ಕಾಲುವೆಯನ್ನು 1956 ರಲ್ಲಿ ರಾಷ್ಟ್ರೀಕರಣ ಮಾಡಲಾಯಿತು.

11) ಪ್ರಪಂಚದಲ್ಲಿ ಅತಿ ಉದ್ದವಾದ ಎರಡು ರೇಲ್ವೆ ಮಾರ್ಗಗಳನ್ನು ಹೇಳಿ.

**ಉತ್ತರ :** a) ದಿ ಟ್ರಾನ್ಸ ಸೈಬೇರಿಯನ್ ರೇಲ್ವೆ : ರಸಿಯಾ ದೇಶವನ್ನು ಅತಿ ಪೂರ್ವದೊಂದಿಗೆ ಜೋಡಿಸುತ್ತದೆ. ಬಾಲ್ಟಿಕ್ ಸಮುದ್ರ ತೀರದಲ್ಲಿರುವ ಲೆನಿನ್‌ಗ್ರಾಡದಿಂದ ಫ್ಯಾಸಿಫಿಕ್ ತೀರದಲ್ಲಿರುವ ವ್ಲಾಡಿವೊಸ್ಟಾಕ್ ಬಂದರದ ವರೆಗೆ. ಪ್ರಪಂಚದಲ್ಲಿಯೇ ಅತಿ ದೀರ್ಘವಾದ ರೈಲು 8940 ಕಿ. ಮಿ.

(b) U.S.A.ದಲ್ಲಿ ನಾರ್ಥ ಫ್ಯಾಸಿಫಿಕ್ ಮತ್ತು ಸೌಥ್ ಫ್ಯಾಸಿಫಿಕ್ ರೇಲ್ವೆಗಳು ಮಹತ್ವವಾದವು. ನಾರ್ಥ ಫ್ಯಾಸಿಫಿಕ್ ರೇಲ್ವೆಯು ಚಿಕ್ಯಾಗೋದಿಂದ ಹೊರಟು ಗೋದಿ ಬೆಳೆಯುವ ಪ್ರದೇಶದಲ್ಲಿ ಹಾಯ್ದು ರಾಕೀ ಪರ್ವತಗಳ ಅಡಿಗೆ ಹೋಗುವದು. ಸೌಥ ಫ್ಯಾಸಿಫಿಕ್ ರೇಲ್ವೆಯು ಬಾಲ್ಟಿಮೋರದಿಂದ ಲಾಸ್ ಎಂಜಲೀಸ್‌ಗೆ ಮತ್ತು ಸ್ಯಾನ್ ಫ್ರಾನ್ಸಿಸ್ಕೊದವರೆಗೆ ಬೆಳೆಸಲಾಗಿದೆ.

12) ಭಾರತದಲ್ಲಿ ಜನಸಂಖ್ಯೆಯ ನಿಯಂತ್ರಣ ಮಾಡುವ ಎರಡು ಕ್ರಮಗಳನ್ನು ತಿಳಿಸಿ.

**ಉತ್ತರ :** ಭಾರತದಲ್ಲಿ ಜನಸಂಖ್ಯೆ ಅತಿ ಹೆಚ್ಚಾಗಿದೆ. ಪ್ರಪಂಚದ ಜನಸಂಖ್ಯೆಯಲ್ಲಿ ಇದು 1/7 ಭಾಗ ಜನಕ್ಕೆ ಆಶ್ರಯ ನೀಡಿದೆ. ಜನಸಂಖ್ಯೆಯನ್ನು ಕಡಿಮೆ ಮಾಡುವದಕ್ಕೆ ಜನಸಂಖ್ಯೆಯ ನಿಯಂತ್ರಣ ಮತ್ತು ಆಹಾರ ಉತ್ಪನ್ನಗಳನ್ನು ಹೆಚ್ಚಿಸುವದು. ಜನಸಂಖ್ಯೆಯನ್ನು ಒಂದೇ ಸಮನಾಗಿ ಹಂಚುವದರಿಂದ ಜನಸಂಖ್ಯೆಯ ಸಮಸ್ಯೆಯನ್ನು ನಿವಾರಿಸಬಹುದು.

13) ಪಾವತಿ ಮಾಡುವ ಗೃಹಪದ್ಧತಿ ಎಂದರೇನು ?

**ಉತ್ತರ :** ಎಲ್ಲ ದೇಶಗಳೂ ಪ್ರತಿಯೊಂದು ವ್ಯವಹಾರಕ್ಕೂ ಹಣ ಪಾವತಿ ಮಾಡುವದಿಲ್ಲ. ಆದರೆ ವರುಷದ ಕೊನೆಯಲ್ಲಿ ಆಮದು ರಫ್ತುಗಳ ಲೆಕ್ಕ ಮಾಡಿಕೊಂಡು ಬಾಕಿಯನ್ನು ಸಂದಾಯ ಮಾಡುತ್ತದೆ. ಇದಕ್ಕೆ ಪಾವತಿ ಮಾಡುವ ಗೃಹ ಪದ್ಧತಿ ಎನ್ನುವರು.

14) ಬಂಡೆಗಳನ್ನು ಯಾವ ಗುಂಪುಗಳಾಗಿ ಮಾಡಬಹುದು.

**ಉತ್ತರ :** ಬಂಡೆಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. 1) ಅಗ್ನಿಶಿಲಾಬಂಡೆಗಳು, 2) ಸೆಡಿಮೆಂಟರಿ ಬಂಡೆಗಳು ಮತ್ತು 3) ಮೆಟಮಾರ್ಫಿಕ್ ಬಂಡೆಗಳು.

15) "ಸಮಭಾರ ರೇಖೆ" ಇದರ ಅರ್ಥವೇನು ?

**ಉತ್ತರ :** ಸಮಭಾರ ರೇಖೆ ಎಂದರೆ ಹವಾಮಾನದ ನಕ್ಷೆಗಳಲ್ಲಿ ಗಾಳಿಯ ಒತ್ತಡವನ್ನು ಮತ್ತು ಸಮಉಷ್ಣತೆಯನ್ನು ಗೆರೆಗಳ ಮೂಲಕ ತೋರಿಸುವದು. ಈ ಊಹಾರೇಖೆಗಳನ್ನು ಸಮಭಾರ ರೇಖೆಗಳೆಂದು ಕರೆಯುತ್ತಾರೆ.

16) ಸ್ವಾತಂತ್ರ್ಯದ ನಂತರ ಸ್ಥಾಪಿಸಿದ ನಾಲ್ಕು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳ ಕೇಂದ್ರಗಳನ್ನು ತಿಳಿಸಿ:

**ಉತ್ತರ :** ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ನಾಲ್ಕು ಮುಖ್ಯವಾದ ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕಾ ಕೇಂದ್ರಗಳನ್ನು ಭಾರತದ ವಿವಿಧ ಭಾಗದಲ್ಲಿ ಸ್ಥಾಪಿಸಲಾಗಿದೆ. ಓರಿಸ್ಸಾದಲ್ಲಿರುವ ರೂರ್ಕೇಲಾ, ಮಧ್ಯ ಪ್ರದೇಶದಲ್ಲಿಯ ಭಿಲಾಯಿ, ಪಶ್ಚಿಮ ಬಂಗಾಲದಲ್ಲಿರುವ ದುರ್ಗಾಪೂರ ಮತ್ತು ಬಿಹಾರದಲ್ಲಿರುವ ಬೊಕಾರೊ.

17) ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳೆಂದರೇನು ? ಪ್ರಪಂಚದ ಕೆಲವು ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳ ಹೆಸರುಗಳನ್ನು ಬರೆಯಿರಿ.

**ಉತ್ತರ :** ಒಂದು ಚದುರ ಕಿ.ಮೀ.ಗೆ 80ಕ್ಕಿಂತ ಹೆಚ್ಚು ಜನರನ್ನು ಹೊಂದಿರುವ ಪ್ರದೇಶಗಳನ್ನು ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳೆಂದು ಕರೆಯುತ್ತಾರೆ. ಪ್ರಪಂಚದಲ್ಲಿ ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳೆಂದರೆ ಪೂರ್ವ ಏಷ್ಯಾ, ಇಂಡೋಚೀನ, ಜಪಾನ್, ಕೋರಿಯಾ, ಫಿಲಿಪೈನ್, ಮತ್ತು ವಿಯಟ್‌ನಾಮ್.

18) ಭಾರತದಲ್ಲಿರುವ ಎರಡು ಸಾರ್ವಜನಿಕ ಕ್ಷೇತ್ರದ ವಿಮಾನ ಸಂಸ್ಥೆಗಳನ್ನು ತಿಳಿಸಿ.

**ಉತ್ತರ :** ಭಾರತದಲ್ಲಿ ವಾಯುಮಾರ್ಗ ಅತಿಮುಖ್ಯವಾದ ಸಾರಿಗೆಯಾಗಿದೆ. "ಏರ್‌ಇಂಡಿಯಾ" ಮತ್ತು "ಇಂಡಿಯನ್ ಏರ್‌ಲೈನ್ ಎಂಬ ಎರಡು ಸಾರ್ವಜನಿಕ ಕ್ಷೇತ್ರದ ಕಾರ್ಪೋರೇಶನ್‌ಗಳಿವೆ.

19) ಹಿಮಾಲಯದಲ್ಲಿರುವ ಎರಡು ಗಿರಿಧಾಮಗಳನ್ನು ತಿಳಿಸಿ.

**ಉತ್ತರ :** a) ದಾರ್ಜಿಲಿಂಗ b) ನೈನಿತಾಲ.

20) ಅಂಚೆ ಕಚೇರಿಗಳು ನಡೆಸುವ ಮುಖ್ಯ ಸೇವೆಗಳಾವವು ?

**ಉತ್ತರ :** ಅಂಚೆ ಮತ್ತು ತಂತಿ ಮುಖ್ಯವಾದ ಸಂಪರ್ಕ ಸಾಧನಗಳು. ಅಂಚೆ ಕಚೇರಿಗಳು ಕಡಿಮೆ ಬೆಲೆಗೆ ಕಾಗದ ಮತ್ತು ಕಟ್ಟುಗಳನ್ನು ಬಟವಾಡೆ ಮಾಡುವದೇ ಅಲ್ಲದೆ ಕಾರ್ಡು, ಕವರುಗಳು, ಸ್ಟ್ಯಾಂಪುಗಳು, ಮನಿಯಾರ್ಡರುಗಳು ಮೊದಲಾದ ಬರವಣಿಗೆ ಸಾಧನಗಳನ್ನು ಮಾರುತ್ತವೆ. ಉಳಿತಾಯ ಲೆಖ್ಖಗಳು ಮತ್ತು ರಾಷ್ಟ್ರೀಯ ಸರ್ಟಿಫಿಕೇಟುಗಳನ್ನು ಮಾರುವದರಿಂದ ಮಿತವ್ಯಯ ಮತ್ತು ಉಳಿತಾಯವನ್ನು ಪ್ರೋತ್ಸಾಹಿಸುತ್ತವೆ.

## ಪ್ರಶ್ನೆ IV

1 ಅಂಕಿನ ಪ್ರಶ್ನೆಗಳು (ಬೇಕಾದ 6)

(6 ಅಂಕಗಳು)

**ಕಾರಣ ಕೊಡಿರಿ.**

1) ಭಾರತೀಯ ಗೃಹ ಕೈಗಾರಿಕೆಗಳ ಪತನ.

**ಉತ್ತರ :** ಬ್ರಿಟಿಷರು ಯಂತ್ರಗಳಿಂದ ಉತ್ಪನ್ನವಾದ ಪದಾರ್ಥಗಳನ್ನು ಭಾರತಕ್ಕೆ ತಂದು ಮಾರಾಟಮಾಡಲು ಪ್ರಾರಂಭಿಸಿದರು. ಅವು ಚನ್ನಾಗಿದ್ದು ಬಹುಕಡಿಮೆ ಬೆಲೆಗೆ ದೊರೆಯುತ್ತಿದ್ದವು. ಇದರಿಂದ ಗೃಹ ಕೈಗಾರಿಕೆಗಳಿಗೆ ಪ್ರೋತ್ಸಾಹ ದೊರೆಯದೆ ಅವು ಪತನ ಹೊಂದಿದವು.

2) ಪರ್ವತ ಪ್ರದೇಶದಲ್ಲಿ ಜನಸಂಖ್ಯೆ ವಿರಳವಾಗಿರುತ್ತದೆ.

**ಉತ್ತರ :** ಪರ್ವತಮಯ ಪ್ರದೇಶಗಳಲ್ಲಿ ಫಲವತ್ತಾಗಿಲ್ಲದ ಭೂಮಿ, ಅನಾರೋಗ್ಯಕರವಾದ ಹವೆ ಮತ್ತು ಸಾರಿಗೆ, ಸಂಪರ್ಕದ ಅನಾನುಕೂಲತೆಗಳು ಇರುವದರಿಂದ ಅಲ್ಲಿ ಜನಸಂಖ್ಯೆ ವಿರಳವಾಗಿರುತ್ತದೆ.

3) ಬಂದರಿನ ಸಮೀಪದಲ್ಲಿ ಚಪ್ಪಟೆಯಾದ ಮತ್ತು ವಿಶಾಲವಾದ ಭೂಮಿಯು ಅವಶ್ಯಕತೆ ಇದೆ.

**ಉತ್ತರ :** ಬಂದರಿನ ಬಳಿ ವಸ್ತುಗಳನ್ನು ಶೇಖರಿಸುವ ಸೌಕರ್ಯಕ್ಕೂ ಮತ್ತು ಪದಾರ್ಥಗಳನ್ನು ದಾಸ್ತಾನುಮಾಡಲು ಅನುಕೂಲವಾದ ಕಟ್ಟಡಗಳನ್ನು ಕಟ್ಟುವದಕ್ಕೂ ವಿಶಾಲವಾದ ಭೂಮಿಯು ಅವಶ್ಯಕತೆ ಇದೆ.

4) ಡೆನ್ಮಾರ್ಕ ಹೈನುಗಾರಿಕೆಗೆ ಹೆಸರಾಗಿದೆ.

**ಉತ್ತರ :** ಡೆನ್ಮಾರ್ಕದಲ್ಲಿಯ ಭೂಮಿ ಹುಲ್ಲುಗಾವಲಿಗೆ ಬಹು ಅನುಕೂಲ. ಆದ್ದರಿಂದ ಅಲ್ಲಿ ಹಸುಗಳನ್ನು ಸಾಕಲು ಅನುಕೂಲವಿದೆ. ಆದ್ದರಿಂದ ಡೆನ್ಮಾರ್ಕ ದೇಶವು ಬೆಣ್ಣೆ, ಹಾಲಿನ ಪುಡಿ, ತಯಾರಿಸಿ ವಿದೇಶಗಳಿಗೆ ಕಳಿಸಿಕೊಡುವದು.

5) ಬ್ರಿಟನ್ನು ಪ್ರಪಂಚದ ಕೈಗಾರಿಕಾ ರಾಷ್ಟ್ರಗಳಲ್ಲಿ ಒಂದಾಗಿದೆ.

**ಉತ್ತರ :** ಬ್ರಿಟನ್ನಿನಲ್ಲಿ ದೊರೆಯುವ ಕಬ್ಬಿಣ ಮತ್ತು ಕಲ್ಲಿದ್ದಲು, ಸಮಶೀತೋಷ್ಣ ವಾಯುಗುಣ, ಅನುಕೂಲವಾದ ಸಾಗಾಣಿಕೆ ಸೌಕರ್ಯ ಮತ್ತು ತೀರದಲ್ಲಿರುವ ಸ್ವಾಭಾವಿಕ ಬಂದರಗಳು ಬ್ರಿಟನ್ನನ್ನು ಪ್ರಪಂಚದ ಕೈಗಾರಿಕಾ ರಾಷ್ಟ್ರಗಳಲ್ಲಿ ಒಂದಾಗುವಂತೆ ಮಾಡಿದೆ.

6) ಆಸ್ಟ್ರೇಲಿಯಾದಿಂದ ಉಣ್ಣೆ ನಿರ್ಯಾತವಾಗುವದು.

**ಉತ್ತರ :** ಆಸ್ಟ್ರೇಲಿಯಾದಲ್ಲಿ ಹುಲ್ಲುಗಾವಲು ಪ್ರದೇಶಗಳು ಹೆಚ್ಚು ಇದ್ದಲ್ಲದೆ ಕುರಿಸಾಕಲು ಅನುಕೂಲ ಹವಾಮಾನ. ಹೀಗಾಗಿ ಆಸ್ಟ್ರೇಲಿಯಾದಿಂದ ಉಣ್ಣೆ ನಿರ್ಯಾತವಾಗುವದು.

7) ಧ್ರುವ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆ ಯಾಗಿಲ್ಲ.

**ಉತ್ತರ :** ಧ್ರುವ ಪ್ರದೇಶಗಳಲ್ಲಿ ಮಂಜು ಯಾವಾಗಲೂ ಗಡ್ಡೆ ಕಟ್ಟಿರುತ್ತದೆ. ಅಲ್ಲಿ ಮಂಜು ಮತ್ತು ಹಿಮ ಬಿಟ್ಟರೆ ಬೇರೆ ಏನೂ ಇರುವದಿಲ್ಲ ಅಲ್ಲಿ ಯಾವ ಪದಾರ್ಥಗಳನ್ನೂ ಬೆಳೆಯಲಾಗುವದಿಲ್ಲ ಹಾಗೂ ಕೈಗಾರಿಕೆಗಳನ್ನು ಸ್ಥಾಪಿಸಲಾಗುವದಿಲ್ಲ.

8) ಕಾಡುಗಳನ್ನು ಅಭಿವೃದ್ಧಿಗೊಳಿಸುವದು ಸಂರಕ್ಷಿಸುವದು ಅಗತ್ಯವಾಗಿದೆ.

**ಉತ್ತರ :** ಕಾಡುಗಳು ಮಳೆಯನ್ನು ತರುವ ಮುಖ್ಯ ಸಾಧನಗಳಾಗಿವೆ. ವಿಶ್ವವು ಶೀಘ್ರವಾಗಿ ಅಥವಾ ನಿಧಾನವಾಗಿ ನೀರಿನ ಕೊರತೆಯ ಸಮಸ್ಯೆಯನ್ನು ಎದುರಿಸಬೇಕಾಗುವದು. ಇದರಿಂದ ಮಾನವನಿಗೆ ತೊಂದರೆಯಾಗುತ್ತದೆ. ಇದನ್ನು ನಿವಾರಿಸಲು ಕಾಡುಗಳ ಸಂರಕ್ಷಣೆ ಅವಶ್ಯ.

9) ಬ್ರಿಟನ್ನಿನ ಪಶ್ಚಿಮ ತೀರದಲ್ಲಿ ಚಳಿಗಾಲದಲ್ಲಿಯೂ ಹವೆ ಬೆಚ್ಚಗಿರುತ್ತದೆ.

**ಉತ್ತರ :** ಗಲ್ಫಸ್ಟ್ರೀಂ ಎಂಬ ಉಷ್ಣೋದಕ ಪ್ರವಾಹವು ಅಲ್ಲಿ ಹರಿಯುವದರಿಂದ ಬ್ರಿಟನ್ನಿನ ಪಶ್ಚಿಮ ತೀರ ಚಳಿಗಾಲದಲ್ಲಿ ಬೆಚ್ಚಗಿರುತ್ತದೆ.

10) ಸಕ್ಕರೆ ತಯಾರಿಕೆಯಲ್ಲಿ ಕ್ಯೂಬಾ ಪರಿಣತಿಯನ್ನು ಹೊಂದಿದೆ.

**ಉತ್ತರ :** ಕಬ್ಬನ್ನು ಬೆಳೆಯಲು ಶಾಖ ಮತ್ತು ತೇವಾಂಶದಿಂದ ಕೂಡಿದ ವಾಯುಗುಣ ಇರಬೇಕು. 100 ರಿಂದ 175 ಸೆಂ. ಮೀ. ಮಳೆಬೇಕು. ಸಮತಟ್ಟಾದ ಭೂಮಿಬೇಕು. ಕ್ಯೂಬಾದಲ್ಲಿ ಈ ಎಲ್ಲ ಅನುಕೂಲತೆಗಳು ಇರುವದರಿಂದ ಅಲ್ಲಿ ಹೆಚ್ಚು ಕಬ್ಬನ್ನು ಬೆಳೆಯುತ್ತಾರೆ ಮತ್ತು ಸಕ್ಕರೆಯನ್ನು ತಯಾರಿಸಲು ಅನುಕೂಲವಾಗಿದೆ.

11) ಪ್ರಪಂಚದಲ್ಲೆಲ್ಲಾ ಉತ್ತರ ಅಟ್ಲಾಂಟಿಕ್ ಸಾಗರದ ಜಲಮಾರ್ಗ ಅತ್ಯಂತ ಹೆಚ್ಚು ಮುಖ್ಯವಾದುದು.

**ಉತ್ತರ :** ಉತ್ತರ ಅಟ್ಲಾಂಟಿಕ್ ಸಾಗರದ ಪೂರ್ವ ತೀರದಲ್ಲಿ ಅಮೇರಿಕದ ಹಡಗು ನಿಲ್ದಾಣಗಳಿವೆ. ಹಾಗೂ ಯುರೋಪಿನ ಪಶ್ಚಿಮ ತೀರದಲ್ಲಿ ಹಡಗು ನಿಲ್ದಾಣಗಳಿವೆ. ಇಲ್ಲಿ ಜನಸಾಂದ್ರತೆ ಅತ್ಯಂತ ಹೆಚ್ಚಾಗಿದೆ.

12) ಚಿಕ್ಯಾಗೋ ಪಟ್ಟಣದಲ್ಲಿ ಆಹಾರ ಸಂಸ್ಕರಣ ಮತ್ತು ಮಾಂಸವನ್ನು ಡಬ್ಬಿಯಲ್ಲಿ ತುಂಬುವ ಕೈಗಾರಿಕೆಗಳಿವೆ.

ಚಿಕ್ಯಾಗೋ ಪಟ್ಟಣದ ಹಿನ್ನೆಲೆಯಲ್ಲಿ ಪ್ರೇಯರಿ ಹುಲ್ಲುಗಾವಲು ಪ್ರದೇಶಗಳುಂಟು. ಹಿನ್ನಾಡು ಗೋದಿಯ ಕಣಜವಾಗಿದೆ. ದನಕರುಗಳನ್ನು ಮೇಯಿಸಲು ಅನುಕೂಲ ಸ್ಥಳವಿದೆ. ಆದ್ದರಿಂದ ಆಕಳನ್ನು ಕೊಬ್ಬಿಸಿ ಅದರ ಮಾಂಸವನ್ನು ಡಬ್ಬಿಗಳಲ್ಲಿ ತುಂಬುವ ಕೈಗಾರಿಕೆಗಳಿವೆ. ಇದರಂತೆ ಗೋವಿನಜೋಳ, ಗೋದಿ ಇವುಗಳ ಆಹಾರ ಸಂಸ್ಕರಣ ಮಾಡುವ ಕೈಗಾರಿಕೆಗಳು ಇಲ್ಲಿವೆ.

13) ಬೆಂಗಳೂರು ಮತ್ತು ಮದ್ರಾಸು ಒಂದೇ ಅಕ್ಷಾಂಶದಲ್ಲಿದ್ದರೂ ಬೆಂಗಳೂರಿನ ಹವೆ ತಂಪಾಗಿದೆ.

**ಉತ್ತರ :** ಬೆಂಗಳೂರು ಮತ್ತು ಮದ್ರಾಸು ಒಂದೇ ಅಕ್ಷಾಂಶದಲ್ಲಿದ್ದರೂ, ಬೆಂಗಳೂರು ಮದ್ರಾಸಿನ ಸಮುದ್ರಮಟ್ಟಕ್ಕಿಂತ ಎತ್ತರವಾಗಿದೆ. ಸಮುದ್ರ ಮಟ್ಟಕ್ಕಿಂತ ಎತ್ತರ ಹೋದಷ್ಟು ಹವೆ ತಂಪಾಗುತ್ತದೆ.

14) ಭಾರತ ವ್ಯವಸಾಯ ಮನ್‌ಸೂನ ಜೊತೆಯ ಜೂಜಾಟವಾಗಿದೆ.

**ಉತ್ತರ :** ಭಾರತ ಕೃಷಿ ಪ್ರಧಾನ ದೇಶ. ಭಾರತದಲ್ಲಿಯ ವ್ಯವಸಾಯ ಮನ್ಸೂನ ಮಳೆಗಳ ಮೇಲೆ ಅವಲಂಬಿಸಿದೆ. ಭಾರತದಲ್ಲಿ ಮಳೆ ಅನಿಶ್ಚಿತ ಮತ್ತು ಅನಿಯಮಿತವಾಗಿದೆ. ಮಳೆಯ ಹಂಚಿಕೆಯು ಕಾಲದಿಂದ ಕಾಲಕ್ಕೆ ವ್ಯತ್ಯಾಸವನ್ನು ಹೊಂದುತ್ತದೆ. ಒಂದು ವರ್ಷ ಒಂದು ಪ್ರದೇಶದಲ್ಲಿ ಭಾರಿ ಮಳೆ ಬೀಳುತ್ತದೆ. ಮತ್ತೊಂದು ವರ್ಷ ಮಳೆ ಬೀಳುವದೇ ಇಲ್ಲ. ಆದ್ದರಿಂದ ಮಳೆಯ ಮೇಲೆ ಅವಲಂಬಿಸಿದ ಭಾರತದ ವ್ಯವಸಾಯ ಮನ್ಸೂನ ಜೊತೆಯ ಜೂಜಾಟವಾಗಿದೆ.

15) ದಕ್ಷಿಣ ಭಾರತದಲ್ಲಿ ಹೆಸರಿಸಬಹುದಾದ ಒಳಜಲ ಮಾರ್ಗಗಳಿಲ್ಲ.

**ಉತ್ತರ :** ದಕ್ಷಿಣ ಭಾರತದ ನದಿಗಳೆಲ್ಲವೂ ಆಳವಿಲ್ಲದ ಹಳ್ಳದಿಣ್ಣೆಯಿಂದ ಕೂಡಿದ ಮಾರ್ಗದಲ್ಲಿ ಹರಿಯುತ್ತವೆ. ಅವು ಬೇಸಿಗೆ ಕಾಲದಲ್ಲಿ ನೀರಿಲ್ಲದೆ ಹೋಗುತ್ತವೆ.

16) ಸ್ವಿಟ್ಜರ್‌ಲಂಡವು ಉಚ್ಚಮೌಲ್ಯದ ಚಿಕ್ಕ ಸಾಮುಗ್ರಿಗಳನ್ನು ಮಾತ್ರ ಉತ್ಪಾದಿಸುವದು.

**ಉತ್ತರ :** ಸ್ವಿಟ್ಜರ್‌ಲಂಡವು ಪರ್ವತಮಯ ಪ್ರದೇಶ. ಆದ್ದರಿಂದ ಸಂಚಾರ ಸೌಕರ್ಯ ಕಷ್ಟದಾಯಕ ಖನಿಜ ಸಂಪತ್ತು ತೀರ ಕಡಿಮೆ. ಆದ್ದರಿಂದ ಭಾರವಲ್ಲದ ಚಿಕ್ಕ ಚಿಕ್ಕ ವಸ್ತುಗಳನ್ನು ವಿಶೇಷವಾಗಿ ಗಡಿಯಾರಗಳನ್ನು ಸಿದ್ಧಪಡಿಸಿ ಪರ ದೇಶಗಳಿಗೆ ಕಳಿಸುತ್ತದೆ.

17) ಕಲ್ಕತ್ತಾ ಒಂದು ಒಳ್ಳೆಯ ರೇವು ಪಟ್ಟಣಕ್ಕೆ ಉದಾಹರಣೆ.

**ಉತ್ತರ :** ಕಲ್ಕತ್ತಾ ಹೂಗ್ಲಿ ನದಿಯ ದಂಡೆಯಲ್ಲಿರುವ ಒಂದು ಉತ್ತಮವಾದ ಬಂದರು. ಇದಕ್ಕೆ ಅತ್ಯಂತ ಫಲವತ್ತಾದ ಹಿನ್ನಾಡು ಇದೆ. ಸೆಣಬು, ಕಲ್ಲಿದ್ದಲಿ ಮೊದಲಾದವುಗಳನ್ನು ರಫ್ತು ಮಾಡಿ ಯಂತ್ರೋಪಕರಣಗಳು ರಾಸಾಯನಿಕ ಪದಾರ್ಥಗಳು ಹಾಗೂ ಆಹಾರ ಪದಾರ್ಥಗಳನ್ನು ಆಮದು ಮಾಡಿಕೊಳ್ಳುತ್ತದೆ.

18) ಅಂತರ್‌ರಾಷ್ಟ್ರೀಯ ವ್ಯಾಪಾರವು ಪ್ರಪಂಚದ ದೇಶಗಳಲ್ಲಿ ಪರಸ್ಪರ ಸಹಕಾರ ಮನೋಭಾವನೆಯನ್ನು ಬೆಳೆಸುತ್ತದೆ.

**ಉತ್ತರ :** ಪ್ರತಿಯೊಂದು ದೇಶಕ್ಕೂ ಅನೇಕ ವಸ್ತುಗಳ ಅಗತ್ಯ ಇದೆ. ಪ್ರಪಂಚದ ಯಾವದೇ ದೇಶವು ತನ್ನ ಎಲ್ಲ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವಷ್ಟು ಸ್ವಾವಲಂಬಿಯಾಗಿಲ್ಲ. ಎಲ್ಲ ದೇಶಗಳು ಪರಸ್ಪರ ವಿನಿಮಯದಿಂದ ತಮ್ಮ ಬೇಡಿಕೆಗಳನ್ನು ಪೂರೈಸಿಕೊಳ್ಳುತ್ತವೆ. ಇದರಿಂದ ಅಂತರ್‌ರಾಷ್ಟ್ರೀಯ ವ್ಯಾಪಾರವು ಪ್ರಪಂಚದ ರಾಷ್ಟ್ರಗಳಲ್ಲಿ ಪರಸ್ಪರ ಸಹಕಾರ ಮನೋಭಾವನೆಯನ್ನು ಬೆಳೆಸುತ್ತದೆ.

19) ಅಂಟಾರ್ಟಿಕ್ ಒಂದು ದೊಡ್ಡ ಖಾಲಿಜಾಗ.

**ಉತ್ತರ :** ಅಂಟಾರ್ಟಿಕ್ ಖಂಡವು ಸಂಪೂರ್ಣವಾಗಿ ಮಂಜಿನಿಂದ ಕೂಡಿದೆ. ಅಲ್ಲಿ ವಾಸ ಮಾಡುವದಕ್ಕೂ, ವ್ಯವಸಾಯಕ್ಕೂ ಯಾವ ಸೌಕರ್ಯಗಳೂ ಇಲ್ಲ.

20) ಬೃಹತ್ ಪ್ರಮಾಣದ ಉತ್ಪನ್ನಗಳನ್ನು ಸಾಗಿಸಲು ಜಲಮಾರ್ಗಗಳ ಸಾಗಾಣಿಕೆ ವಿಶೇಷ ಅನುಕೂಲವಾದದ್ದು.

**ಉತ್ತರ :** ಜಲಮಾರ್ಗ ಸಾಗಾಣಿಕೆ ಮಿಕ್ಕೆಲ್ಲ ವಿಧವಾದ ಸಾಗಾಣಿಕೆಗಳಿಗಿಂತ ತೀರ ಅಗ್ಗವಾದದ್ದು. ಜಲಮಾರ್ಗಗಳ ಸಾಗಾಣಿಕೆಗೆ ಭಾರೀ ಬಂಡವಾಳ ಹೂಡಬೇಕಿಲ್ಲ. ಅಲ್ಲದೇ ಸಾಮಾನುಗಳನ್ನು ಸಾಗಿಸುವ ಶಕ್ತಿ ಉಳಿದೆಲ್ಲ ಸಾಗಾಣಿಕೆಗಿಂತ ಆಧುನಿಕ ಹಡಗುಗಳಿಗೆ ಹೆಚ್ಚಾಗಿದೆ.

## ಪ್ರಶ್ನೆ 5. A

(ಬೇಕಾದ 8) $\frac{1}{2} \times 8 = 4$ ಅಂಕಗಳು

ತೆರವಿದ್ದ ಸ್ಥಳಗಳನ್ನು ತುಂಬಿರಿ. (ಉತ್ತರಗಳನ್ನು ಆವರಣದಲ್ಲಿ ಕೊಟ್ಟಿದೆ.)

1) ಪದಾರ್ಥಗಳ ಉತ್ಪಾದನಾ........ಕಡಿಮೆಮಾಡಲು ಕಂಪ್ಯೂಟರಗಳನ್ನು ಉಪಯೋಗಿಸಲಾಗುತ್ತದೆ. (ವೆಚ್ಚವನ್ನು)

2) ಭಾರತದಲ್ಲಿ ರಬ್ಬರನ್ನು........ರಾಜ್ಯದಲ್ಲಿ ಬೆಳೆಯುತ್ತಾರೆ. (ಕೇರಳ)

3) ನಿಸ್ಸ್ ಎಂಬುದು........ಶಿಲೆಗೆ ಉದಾಹರಣೆ. (ರೂಪಾಂತರ)

4) ಭೂಮಿ ತನ್ನ ಅಕ್ಷದ ಮೇಲೆ ಒಂದು ಸುತ್ತು ಸುತ್ತಲು......ಮತ್ತು......ವೇಳೆಬೇಕು. (23 ಘಂಟೆ 56 ನಿಮಿಷ 4 ಸೆಕೆಂಡುಗಳು)

5) ಬ್ರಿಟನ್......ಮೂಲ ಖನಿಜಗಳಿಂದ ಧನಿಕವಾಗಿದೆ (ಕಬ್ಬಿಣ ಮತ್ತು ಕಲ್ಲಿದ್ದಲಿ)

6) ಭೂಮಿಯ........ಚಲನೆಯಿಂದ ಹಗಲು ರಾತ್ರಿಗಳು ಉಂಟಾಗುವವು. (ದೈನಂದಿನ)

7) ಋತುಮಾನಗಳು ಉಂಟಾಗುವದು.......ದಿಂದ. (ಪೃಥ್ವಿಯ ವಾರ್ಷಿಕಚಲನೆ)

8) ಪ್ರಪಂಚದಲ್ಲಿ ಅತಿ ಎತ್ತರವಾದ ಶಿಖರ....... (ಗೌರೀಶಂಕರ)

9) ಪ್ರಪಂಚದಲ್ಲೆಲ್ಲಾ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಮೈಕಾವನ್ನು ಉತ್ಪಾದಿಸುವ ರಾಷ್ಟ್ರ...... (ಭಾರತ)

10) ವಿಶ್ವದ ಅಂಚೆ ಸಂಘದ ಸಂಸ್ಥೆಯು.......ರಲ್ಲಿ ಸ್ಥಾಪಿಸಲ್ಪಟ್ಟಿತು. (1878)

11) ವಾಯು ಮಂಡಲದ ಒತ್ತಡವನ್ನು.......ನಲ್ಲಿ ಅಳೆಯುವರು. (ಮಿಲಿಬಾರ್)

12) ಗಂಗಾನದಿಯ ಮುಖಜಭೂಮಿಯಲ್ಲಿ ಕಂಡು ಬರುವ ಮ್ಯಾಂಗ್ರೋಜ್ ಕಾಡುಗಳನ್ನು....... ಎಂದು ಕರೆಯುತ್ತಾರೆ. (ಸುಂದರ ಬನ)

13) ಆಫ್ರಿಕಾ ಮತ್ತು ಏಷ್ಯಾಗಳನ್ನು ಬೇರ್ಪಡಿಸುವ ಕಾಲುವೆ........ (ಸುಯೇಜ್)

14) ಪ್ರಪಂಚದಲ್ಲಿ ಅತ್ಯಂತ ಹೆಚ್ಚು ಪ್ರಮಾಣದಲ್ಲಿ ಟೀ ಉತ್ಪತ್ತಿ ಮಾಡುವ ರಾಷ್ಟ್ರ....... (ಭಾರತ)

15) ಗ್ರೆಸೈಟ್........ಶಿಲೆಗೆ ಉದಾಹರಣೆ (ಅಗ್ನಿಜನ್ಯ)

16) ವ್ಯಾಟ್.......ಕಂಡು ಹಿಡಿದನು. (ರೋಲರ್ ಸ್ಪಿನ್ನಿಂಗ ಯಂತ್ರ)

17) ಟಂಡ್ರಾ ಪ್ರದೇಶದಲ್ಲಿ ವಾಸಿಸುವ ಜನರನ್ನು.... ........ಎನ್ನುತ್ತಾರೆ. (ಎಸ್ಕಿಮೊ)

18) ಲೈನರುಗಳು........ (ವೇಗವಾಗಿ ಚಲಿಸುವ ಹಡಗಗಳು)

19) ಅಂತರ್ ರಾಷ್ಟ್ರೀಯ ವ್ಯಾಪಾರದಲ್ಲಿ ಅತ್ಯಂತ ಹೆಚ್ಚಿನ ಭಾಗವನ್ನು ಹೊಂದಿರುವ ರಾಷ್ಟ್ರ........ (ಅಮೇರಿಕಾ ಸಂಯುಕ್ತ ಸಂಸ್ಥಾನ)

20) ........ಎಂಬುದು ಜ್ವಾಲಾಮುಖಿಗಳು ಸ್ಫೋಟಗೊಂಡಾಗ ಹೊರಕೆ ಬರುವ ದ್ರವ ಪದಾರ್ಥ. (ಲಾವಾರಸ)

21) ವಾಣಿಜ್ಯ ತೋಟಗಾರಿಕೆ ಮತ್ತು ಹಣ್ಣುಗಳನ್ನು ಬೆಳೆಯುವ ವಿಧಾನಕ್ಕೆ........ಎನ್ನುತ್ತಾರೆ. (ಟ್ರಕ್ ಫಾರ್ಮಿಂಗ)

22) ಪರಿಣತೆಯು.......ಕೈಗಾರಿಕೆಯ ಲಕ್ಷಣ. (ಲಘು)

23) ತಂಪಾದ ಸಿಮಶೀತೋಷ್ಣ ವಲಯ........ಗೆ ಸಹಾಯಕವಾಗಿದೆ (ಕೆಲಸದಲ್ಲಿ ದಕ್ಷತೆ)

24) ಜರ್ಮನಿಯ ಹೆದ್ದಾರಿಗಳು........ (ಆಟೋಬಾನ್ಸ್)

25) ಪ್ರಪಂಚದಲ್ಲಿ ಅತ್ಯಂತ ಉದ್ದವಾದ ರೈಲು ಮಾರ್ಗ........ (ಟ್ರಾನ್ಸಸೈಬೇರಿಯನ್ ರೇಲ್ವೆ)

26) ಬೆಂಗ್ವೆಲಾ ಎಂಬುದು........ಪ್ರವಾಹ. (ಶೀತೋದಕ)

27) ಇಟಲಿಯ ಹೆದ್ದಾರಿಗಳಿಗೆ....... (ಆಟೋಸ್ಟ್ರಡ್)

28) ........ವಿಶ್ವದಲ್ಲಿಯೇ ಗಿಣ್ಣು ಮಾರಾಟದಲ್ಲಿ ಪ್ರಥಮ ಸ್ಥಾನ ಪಡೆದಿದೆ. (ನ್ಯೂಝಿಲಂಡ)

29) ಸಾಗರಗಳ ಆಳವನ್ನು ತೋರಿಸುವ ನಕ್ಷೆಗಳನ್ನು.... ....ಎಂದು ಕರೆಯುತ್ತಾರೆ. (ಅಥೋಮಾಸೀಯ)

30) ಏಷ್ಯಾದಲ್ಲಿ ಜಲವಿದ್ಯುತ್ ಯೋಜನೆ ಆರಂಭವಾದದ್ದು...........(ಕರ್ನಾಟಕದ ಶಿವಸಮುದ್ರ ಯೋಜನೆ)

31) ಲೆಬ್ರಿಡಾರ ಒಂದು........ಪ್ರವಾಹ (ಶೀತೋದಕ)

32) ........ರೈಲುಗಳು ಬೆಟ್ಟಗುಡ್ಡ ಪ್ರದೇಶಗಳಲ್ಲಿ ಉಪಯುಕ್ತವಾಗಿವೆ. (ನ್ಯಾರೋಗೇಜ)

33) ಮೆಡಿಟರೇನಿಯನ್ ವಾಯುಗುಣ........ಬೆಳೆಗೆ ಅನುಕೂಲವಾಗಿದೆ. (ಹಣ್ಣು ಹಂಪಲು)

34) ಉಷ್ಣವಲಯದ ಪ್ರದೇಶದಲ್ಲಿ........ಮಳೆ ಬೀಳುತ್ತದೆ. (ಕನ್‌ವೆನ್ಶನಲ್)

35) ........ಎಂಬುದು ಒಂದಕ್ಕೊಂದು ಸಂಬಂಧ ಹೊಂದಿರುವ ಅನೇಕ ಕೈಗಾರಿಕೆಗಳ ನಿಬಿಡ. (ಕಾಪ್ಲೆಕ್ಸ್ ಅಥವಾ ಸಂಕೀರ್ಣ)

36] ಕರ್ನಾಟಕ ರಾಜ್ಯದ........ದಲ್ಲಿ ಪ್ಯಾಕೇಜ್ ಕಾರ್ಯಕ್ರಮದ ಕೇಂದ್ರವಿದೆ. (ಮಂಡ್ಯ)

37] ಹಣವು........ಉಂಟಾದ ಸಮಸ್ಯೆಯನ್ನು ಬಗೆ ಹರಿಸಿತು (ವಸ್ತುಗಳ ವಿನಿಮಯದಲ್ಲಿ)

38] ಸೂರ್ಯನಿಗೆ ಅತಿ ಸಮೀಪದಲ್ಲಿರುವ ಗ್ರಹ........ [ಬುಧ]

39] ಸೂಯೆಜ್ ಕಾಲುವೆಯನ್ನು........ರಲ್ಲಿ ರಾಷ್ಟ್ರೀಕರಣ ಮಾಡಲಾಯಿತು [1956]

40] ಕಬ್ಬಿಣವನ್ನು ಕರಗಿಸುವದು........ಕೈಗಾರಿಕೆ. [ಬೃಹತ್]

**ಪ್ರಶ್ನೆ V B ಹೊಂದಿಸಿ ಬರೆಯಿರಿ :** [3 ಅಂಕಗಳು]

ಬೇಕಾದ ಒಂದನ್ನು ಬಿಡಿಸಿರಿ

1]

| | |
|---|---|
| 1] ಜಿಯಾಯ್ಡ್ | a] ಉಷ್ಣವಲಯದ ಹೆಚ್ಚು ಒತ್ತಡದ ಪ್ರದೇಶ. |
| 2] ಅಮೃತಶಿಲೆ | b] ಹತ್ತಿ |
| 3] ಕುದುರೆಯ ಅಕ್ಷಾಂಶ | c] ಮಡಿಕೆಯ ಪರ್ವತ |
| 4] ಡೆನ್ಮಾರ್ಕ್ | d] ಭೂಮಿಯ ಆಕಾರ |
| 5] ಆಫ್ರಿಕಾ | e] ರೇವು ಪಟ್ಟಣ |
| 6] ಸಿಂದ್ರಿ | f] ಪ್ರಪಂಚದ ಅತ್ಯಂತ ಉದ್ದವಾದ ರೈಲುಮಾರ್ಗ |
| 7] ಅಟೋಬಾನ್ಸ | g] ರೂಪಾಂತರಗೊಂಡ |
| 8] ಟ್ರಾನ್ಸ ಸೈಬೇರಿಯಾ | h] ಜೋಹಾನ್ಸ ಬರ್ಗ |
| 9] ಹ್ಯಾಂಬರ್ಗ | i] ಕೃತಕ ಗೊಬ್ಬರದ ಕಾರಖಾನೆ |
| 10] ಈಜಿಪ್ತ | j] ಜರ್ಮನಿಯ ಹೆದ್ದಾರಿ |
| | k] ಹೈನುಗಾರಿಕೆಗೆ ಪ್ರಸಿದ್ಧವಾಗಿದೆ. |

ಉತ್ತರ : 1-d, 2-g, 3-a, 4-k, 5-h, 6-i, 7-j, 8-f, 9-e, 10-b.

2.

| A | B |
|---|---|
| 1] ಅಹಮ್ಮದಾಬಾದು | a] ಸಲ್ಫ್ಯುರಿಕ್ |
| 2] ಹೌರಾ | b] ರಸಗೊಬ್ಬರಗಳು |
| 3] ಗೋರಖಪುರ | c] ರೈಲು ಇಂಜಿನ್ನುಗಳು |
| 4] ಅಮ್ಮಸಂದ್ರ | d] ಸಕ್ಕರೆ |
| 5] ರಿಷಿಕೇಷ | e] ಸಿಮೆಂಟು |
| 6] ಸಿಂದ್ರಿ | f] ಫಾರ್ಮಸಿಟಿಕಲ್ಸ್ |
| 7] ಚಿತ್ತರಂಜನ್ | g] ಹತ್ತಿ |
| 8] ಬರೋಡ | h] ಸಣಬು |

ಉತ್ತರ : A 1-B (g), A 2-B (h), A3-B (d), A 4-B(e), A 5-B (f), A 6-B (b) A 7-B(c), A 8-B (a).

3.

| A | B |
|---|---|
| 1] ಬ್ರೆಸಿಲ್ | a] ಹತ್ತಿ |
| 2] ಪಶ್ಚಿಮ ಆಫ್ರಿಕ | b] ರಬ್ಬರ್ |
| 3] ಈಜಿಪ್ತ | c] ಆಹಾರ ಪದಾರ್ಥಗಳು |
| 4] ಮಲಯ | d] ಡೇರಿ ಪದಾರ್ಥಗಳು |
| 5] ಅರ್ಜೆಂಟೈನ್ | e] ಅಕ್ಕಿ |
| 6] ಡೆನ್ಮಾರ್ಕ್ | f] ಕಾಫಿ |
| | g] ರೇಷ್ಮೆ |
| | h] ಕೊಕೊ |

ಉತ್ತರ : A 1-B (f), A 2-B (h), A 3-B (a), A 4-B (b), A 5-B (e), A 6-B (d).

4.

| | |
|---|---|
| 1] ಕೇರಳ | a] ಕಗ್ಗತ್ತಲೆಯ ಖಂಡ |
| 2] ಜಪಾನ್ | b] ಹಡಗು ನಿರ್ಮಾಣ |
| 3] ಆಫ್ರಿಕಾ | c] ರಬ್ಬರ ಬೆಳೆ |
| 4] ಬ್ರೆಝಿಲ್ | d] ಪೆಟ್ರೋಲಿಯಂ |
| 5] ಆಸ್ಟ್ರೇಲಿಯಾ | e] ಕಾಫಿ |
| 6] ಸೌದಿ ಅರೇಬಿಯಾ | f] ಉಣ್ಣೆ |
| | g] ಅತಿ ಹೆಚ್ಚಿನ ಜನಸಂಖ್ಯೆ |

ಉತ್ತರ : 1-c, 2-g, 3-a, 4-e, 5-f, 6-d.

| | A | | B |
|---|---|---|---|
| 1) | ಉಷ್ಣಾಂಶವು ಒಂದು ಮುಖ್ಯವಾದ | a) | ಕಡಿಮೆ ಒತ್ತಡದಿಂದಾಗುತ್ತದೆ. |
| 2) | ಆರೋಗ್ರಾಫಿಕ್ ಮಳೆ | b) | ಹೆಚ್ಚು ಒತ್ತಡದಿಂದ ಆಗುತ್ತದೆ. |
| 3) | ಚಂಡಮಾರುತಗಳು | c) | ಉಷ್ಣವಲಯದ ಪ್ರದೇಶ. |
| 4) | ಪ್ರತಿಚಂಡ ಮಾರುತಗಳು | d) | ವಾಯುಗುಣದ ಒಂದು ಅಂಶ |
| 5) | ಕನ್‌ವೆನ್ಶನಲ್ ಮಳೆ | e) | ಕಡಿಮೆ ಒತ್ತಡ |
| 6) | ಹೆಚ್ಚಿನ ಉಷ್ಣಾಂಶ | f) | ಬೆಟ್ಟಗುಡ್ಡಗಳಿಂದಾಗುತ್ತದೆ. |

A 1-B(d), A 2-B (f), A 3-B (a), A 4-B (b), A 5-B (c), A 6- B (e)

6.

| | | | |
|---|---|---|---|
| 1) | ಪರ್ವತಜನಿತ ಮಳೆ | a) | ಶೀತೋದಕ ಪ್ರವಾಹ |
| 2) | ಪ್ರತ್ಯಾವರ್ತಗಾಳಿಗಳು | b) | ಟಂಡ್ರಾ ಸಸ್ಯವರ್ಗ |
| 3) | ಸ್ಟೆಪಿಸ್ | c) | ಹೆಚ್ಚು ಒತ್ತಡ ಪ್ರದೇಶದಲ್ಲಿ ಹುಟ್ಟುವವು. |
| 4) | ಲೆಬ್ರಡಾರ್ | d) | ಬೆಟ್ಟಗುಡ್ಡಗಳ ಪ್ರಭಾವದಿಂದ |
| 5) | ಪಾಚಿ ಶಿಲಾವಲ್ಕ | e) | ಸಮಶೀತೋಷ್ಣ ಹುಲ್ಲುಗಾವಲು. |

ಉತ್ತರ: 1-d, 2-c, 3-e, 4-a, 5-b.

**V C** ಈ ಕೆಳಗಿನ ಪದ ಸಮೂಹಗಳಲ್ಲಿನ ಸಂಬಂಧವನ್ನು ಗುರುತಿಸಿ ನಂತರ ಖಾಲಿ ಇರುವ ಜಾಗಗಳಲ್ಲಿ ಸೂಕ್ತ ಉತ್ತರವನ್ನು ಬರೆಯಿರಿ.

(ಉತ್ತರಗಳನ್ನು ಆವರಣದಲ್ಲಿ ಕೊಡಲಾಗಿದೆ)

1) ಬ್ರೆಜಿಲ್ : ಕಾಫಿ : : ಈಜಿಪ್ತ— (ಹತ್ತಿ)
2) ಸೂರ್ಯ : ನಕ್ಷತ್ರ : : ಭೂಮಿ— (ಗ್ರಹ)
3) ಅತ್ಯಂತ ದೊಡ್ಡ ಖಂಡ : ಏಷ್ಯಾ : : ಅತ್ಯಂತ ಚಿಕ್ಕಖಂಡ— (ಆಸ್ಟ್ರೇಲಿಯಾ)
4) ತೈಗಾ : ತಂಪಾದ ಸಮಶೀತೋಷ್ಣ ವಲಯ ಕಾಡುಗಳು : : ನಿತ್ಯ ಹರಿದ್ವರ್ಣದ ಕಾಡುಗಳು— (ಉಷ್ಣವಲಯದ ಕಾಡುಗಳು)
5) ಲೋಕೋಮೋಟಿವ್ ಕಾರ್ಖಾನೆ : ಚಿತ್ತರಂಜನ್ : : ರೈಲುಗಳ ಕಾರ್ಖಾನೆ— (ಪೆರಂಬೂರ್)
6) ಜಾನ್‌ಕೇ : ಫ್ಲೈಷಟಲ್ : : ಎಡ್ಮಂಡ್ ಕಾರ್ಟ್‌ರೈಟ್— (ವಿದ್ಯುತ್ ಮಗ್ಗ)
7) ಗೌರೀಶಂಕರ : ಶಿಖರ : : ಮುಸ್ಸೂರಿ—— (ಗಿರಿಧಾಮ)
8) ಹಿರಾಕುಡ್ ಯೋಜನೆ : ಮಹಾನದಿ : : ಶಿವಸಮುದ್ರ— (ಶಿಂಷಾ)
9) ಕುರೋಶಿವೋ : ಉತ್ತರ ಫೆಸಿಫಿಕ್ ಸಾಗರ : : ಗಲ್ಫಸ್ಟ್ರೀಂ— (ಉತ್ತರ ಅಟ್ಲಾಂಟಿಕ್ ಸಾಗರ)
10) ಘಟ್ಟಗಳು : ಪರ್ವತಜನಿತ ಮಳೆ : : ಸಮಭಾಜಕ ವೃತ್ತ— (ಪರಿಸರದ ಮಳೆ)
11) ಹೆಮಟೈಟ್ : ಕಬ್ಬಿಣದ ಅದಿರು : : ಬಾಕ್ಸೈಟ್— (ಅಲ್ಯೂಮಿನಿಯಂ ಅದಿರು)
12) ಸವನ್ನ : ಉಷ್ಣವಲಯದ ಹುಲ್ಲುಗಾವಲು : : ಪಂಪಾಸ್— (ಸಮಶೀತೋಷ್ಣ ಹುಲ್ಲುಗಾವಲು)

———

ಪ್ರಶ್ನೆ VI. (4 ಅಂಕಗಳು) : ಭಾರತದ ಬಾಹ್ಯರೇಷೆಯ ನಕಾಶವನ್ನು ಬರೆದು ಕೆಳಗಿನಸಂಗತಿಗಳನ್ನು ಗುರುತಿಸಿರಿ.

I. 1) ಬ್ರಹ್ಮಪುತ್ರಾನದಿ, 2) ಪಾಟ್ನಾ, 3) ಚಿತ್ತರಂಜನ್, 4) ಜಮಶೆಡ್‌ಪುರ, 5) ಕಲ್ಕತ್ತಾ, 6) ಸಾತ್ಪುಡಾಬೆಟ್ಟಗಳು, 7) ತಾಪಿನದಿ, 8) ಭಿಲಾಯಿ, 9) ವಿಶಾಖಪಟ್ಟಣ, 10) ನಾಗಾರ್ಜುನಸಾಗರ, 11) ದಾವಣಗೆರೆ, 12) ಶಿವಸಮುದ್ರ.

ಉತ್ತರ :




II. 1) ಶ್ರೀನಗರ, 2) ದೆಹಲಿ, 3) ಗಂಗಾನದಿ, 4) ಕಾಂಡ್ಲಾ, 5) ವಿಂಧ್ಯಬೆಟ್ಟ, 6) ರೂರ್ಕೇಲಾ 7) ಬೊಂಬಾಯಿ, 8) ಕೆ. ಜಿ. ಎಫ್., 9) ಮಂಗಳೂರು, 10) ಕಾವೇರಿ ನದಿ, 11) ದಿಗ್ಬೊಯಿ, 12) $82\frac{1}{2}°$ ರೇಖಾಂಶ.

ಉತ್ತರ :



III. 1) ಹಿಮಾಲಯ ಪರ್ವತಗಳು, 2) ಅಹಮ್ಮದಾಬಾದ, 3) ದುರ್ಗಾಪೂರ್, 4) ನರ್ಮದಾನದಿ, 5) ನಾಗಪುರ, 6) ಹೈದ್ರಾಬಾದ, 7) ಕೃಷ್ಣಾನದಿ, 8) ಗೋವಾ, 9) ಬೆಂಗಳೂರು, 10) ಪೆರಂಬೂರ್, 11) ಮದ್ರಾಸ, 12) ಮಧುರೆ.

ಉತ್ತರ :



# ವಿಜ್ಞಾನ

## ಪರಿವಿಡಿ

**ಎಪ್ರಿಲ್ 1984** **1 ನೇ ಪತ್ರಿಕೆ**

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : $2\frac{1}{2}$ ಗಂಟೆ ] [ ಗುಣಗಳು : 65

ಪ್ರಶ್ನೆ 1. a) ಒಂದು ಪರ್ಯಾಯ ವಿದ್ಯುಜ್ಜನಕದ ಅಂದವಾದ ಚಿತ್ರವನ್ನು ಬರೆದು ಭಾಗಗಳನ್ನು ಗುರುತಿಸಿ, ಅದರ ರಚನೆ ಕಾರ್ಯವನ್ನು ಸಂಕ್ಷಿಪ್ತವಾಗಿ ವಿವರಿಸಿ.

ಅಥವಾ

ಚಲಿಸುವ ಸುರುಳಿಯ ವಿದ್ಯುತ್ಪ್ರವಾಹ ಮಾಪಕದ (Moving coil galvanometer) ಅಂದವಾದ ಚಿತ್ರ–ವನ್ನು ಬರೆದು ಅದರ ರಚನೆ ಮತ್ತು ವಿದ್ಯುತ್ಪ್ರವಾಹ ಅಳೆಯಲು ಹೇಗೆ ಉಪಯೋಗಿಸುವರು ಎಂದು ವಿವರಿಸಿ.

**ಉತ್ತರ : ಪರ್ಯಾಯ ವಿದ್ಯುಜ್ಜನಕದ ರಚನೆ :** ಪರ್ಯಾಯ ವಿದ್ಯುಜ್ಜನಕದಲ್ಲಿ ಶಕ್ತಿಶಾಲಿಯಾದ ಒಂದು ಕ್ಷೇತ್ರ ಕಾಂತ (Field Magnet) N S ಇರುತ್ತದೆ. ಅದರ ಧ್ರುವಗಳ (N. S) ನಡುವೆ ABCD ಆರ್ಮೇಚರ ಇರುತ್ತದೆ. ಆರ್ಮೇಚರ ಸುರುಳಿಯ ತುದಿಗಳನ್ನು ಆರ್ಮೇಚರದ ಅಕ್ಷದ ಮೇಲಿರುವ ಲೋಹದ ಎರಡು ಉಂಗುರಗಳಿಗೆ ಸೇರಿಸಿರುತ್ತಾರೆ. ಈ ಉಂಗುರಗಳಿಗೆ ಒತ್ತಿಕೊಂಡಿರುವಂತೆ ಕಾರ್ಬನ್‌ನ ಎರಡು $B_1$, $B_2$ ಬ್ರಷ್‌ಗಳಿರುತ್ತವೆ. ಈ ಬ್ರಷ್‌ಗಳನ್ನು ಹೊರ ಮಂಡಲಕ್ಕೆ ಸೇರಿಸಿರುತ್ತಾರೆ.




**ಕಾರ್ಯ ವಿಧಾನ :** ಚಿತ್ರದಲ್ಲಿ ತೋರಿಸಿದಂತೆ ಆರ್ಮೇಚರವು ಪ್ರದಕ್ಷಿಣ ದಿಕ್ಕಿನಲ್ಲಿ ಅರ್ಧ ಸುತ್ತು ಸುತ್ತುವಷ್ಟರಲ್ಲಿ AB ಬಾಹುವು ಕಾಂತದ S ಧ್ರುವದ ಮುಂದೆ ಮೇಲಕ್ಕೆ ಚಲಿಸುತ್ತದೆ. CD ಬಾಹುವು ಕಾಂತದ N ಧ್ರುವದ ಮುಂದೆ ಕೆಳಕ್ಕೆ ಚಲಿಸುತ್ತದೆ. ಫ್ಲೆಮಿಂಗ ಬಲಗೈ ನಿಯಮದ ಪ್ರಕಾರ ಈ ಅರ್ಧ ಸುತ್ತಿನಲ್ಲಿ ಪ್ರೇರಿತ ವಿದ್ಯುತ್ತು ABCD ದಿಕ್ಕಿನಲ್ಲಿ ಹರಿಯುತ್ತದೆ. ಆಗ ಆರ್ಮೇಚರದ ಹೊರಗೆ ಪ್ರವಾಹವು $B_1$ ಬ್ರಷ್‌ದ ಮೂಲಕ ಲೈನ್ ತಂತಿಯಲ್ಲಿ ಹರಿದು. $B_2$ ಬ್ರಷ್‌ದ ಮೂಲಕ ಆರ್ಮೇಚರದಲ್ಲಿ ಸೇರುತ್ತದೆ. ಮುಂದಿನ ಅರ್ಧ ಸುತ್ತಿನಲ್ಲಿ AB ಯು N ಧ್ರುವದ ಮುಂದೆ ಕೆಳಕ್ಕೂ CD ಯು S ಧ್ರುವದ ಮುಂದೆ ಮೇಲಕ್ಕೂ ಚಲಿಸುತ್ತದೆ. ಈಗ ಸುರುಳಿಯಲ್ಲಿ ಪ್ರವಾಹವು ABCD ದಿಕ್ಕಿನಲ್ಲಿ ಹರಿಯುತ್ತದೆ. ಆದರಿಂದ ಪ್ರವಾಹವು $B_2$ ದ ಮೂಲಕ ಹೊರಕ್ಕೆ ಹರಿದು $B_1$ ದ ಮೂಲಕ ಆರ್ಮೇಚರನ್ನು ಸೇರುತ್ತದೆ.

ಈ ಪ್ರಕಾರ ವಿದ್ಯುತ್‌ಪ್ರವಾಹವು ಆರ್ಮೇಚರದ ಅರ್ಧ ಸುತ್ತಿನಲ್ಲಿ ಒಂದು ದಿಕ್ಕಿನಲ್ಲಿಯೂ, ಉಳಿದ ಅರ್ಧ ಸುತ್ತಿನಲ್ಲಿ ಇದಕ್ಕೆ ವಿರುದ್ಧವಾದ ದಿಕ್ಕಿನಲ್ಲಿಯೂ ಹರಿಯುತ್ತದೆ. ಆದ್ದರಿಂದ ವಿದ್ಯುಜ್ಜನಕವು ಕೊಡುವ ವಿದ್ಯುತ್ಪ್ರವಾಹವು ಪರ್ಯಾಯ (ಎ. ಸಿ.) ಪ್ರವಾಹವಾಗಿರುತ್ತದೆ.

ಅಥವಾ

### a) ಚಲಿಸುವ ಸುರಳಿಯ ವಿದ್ಯುತ್ಪ್ರವಾಹ ಮಾಪಕ ( Moving Coil Galvanometer )

ರಚನೆ : ಚಲಿಸುವ ಸುರಳಿಯ ವಿ. ಪ್ರ. ಮಾಪಕದಲ್ಲಿ ಅವಾಹಕ ಕವಚದಿಂದ ಆವೃತ್ತವಾದ ಅತ್ಯಂತ ತೆಳುವಾದ ತಾಮ್ರದ ತಂತಿಯನ್ನು ಅನೇಕ ಸುತ್ತುಗಳಲ್ಲಿ ಸುತ್ತಿರುತ್ತಾರೆ.



ಇದು ಈ ಉಪಕರಣದ ಅತ್ಯಂತ ಸೂಕ್ಷ್ಮವಾದ ಮತ್ತು ಅಷ್ಟೇ ಮುಖ್ಯವಾದ ಭಾಗವಾಗಿದೆ. ನಾಲಿನಾಕಾರದ ಪ್ರಬಲ ಕಾಂತದ ಧ್ರುವಗಳ ಮಧ್ಯ ವಜ್ರದ ಬೇರಿಂಗುಗಳನ್ನು ಕೂಡ್ರಿಸಿ, ಅವುಗಳ ಮೇಲೆ ಈ ತಂತಿಯ ಸುರುಳಿಯನ್ನು ಅಳವಡಿಸಿರುತ್ತಾರೆ. ತಂತಿಯ ಸುರುಳಿಯ ಅಪಸರಣವನ್ನು ತೋರಿಸಲು ಒಂದು ದರ್ಶಕವನ್ನು ಕೂಡ್ರಿಸಿದ್ದು, ಅದು ಒಂದು ಸ್ಕೇಲಿನ ಮೇಲೆ ಚಲಿಸುತ್ತಿರುತ್ತದೆ. ತಂತಿಯ ಸುರುಳಿಗೆ ಪ್ರವಾಹವನ್ನು ಒದಗಿ–ಸಲು ಸ್ಪ್ರಿಂಗುಗಳಿರುತ್ತವೆ.

**ಕಾರ್ಯ :** ತಂತಿಯ ಸುರುಳಿಗೆ ವಿದ್ಯುತ್ಪ್ರವಾಹವನ್ನು ಒದಗಿಸಲು ಸುರುಳಿಯು ಅಪಸರಣವಾಗುವದು. ಈ ಅಪಸರಣವನ್ನು ದರ್ಶಕವು ಸೂಚಿಸುತ್ತದೆ. ಮಂಡಲದಲ್ಲಿ ಹರಿಯುವ ಪ್ರವಾಹದ ಪ್ರಮಾಣವನ್ನು ದರ್ಶಕವು ಸ್ಕೇಲಿನ ಮೇಲೆ ತೋರಿಸುವ ಸಂಖ್ಯೆ (ಅಳತೆ)ಯಿಂದ ತಿಳಿಯಲು ಬರುವುದು. ಮಿಲಿ ಆಂಪಿಯರ್‌ಗಳಂತಹ ಕಡಿಮೆ ಪ್ರಮಾಣದ ವಿದ್ಯುತ್ಪ್ರವಾಹವನ್ನು ಅಳತೆ ಮಾಡಲು ಚಲಿಸುವ ಸುರುಳಿಯ ವಿದ್ಯುತ್ಪ್ರವಾಹ ಮಾಪಕವು ಉಪಯೋಗವಾಗುತ್ತದೆ.

b) ಒಂದು ಪ್ರದೇಶದ "ದಿಕ್ಸೂಚಿ" ಮತ್ತು "ದಿಕ್ಪಾತ" ಎಂದರೇನು ? ಸ್ಪಷ್ಟಪಡಿಸಿ.

**ಉತ್ತರ :** ದಿಕ್ಸೂಚಿ : ಸ್ವತಂತ್ರವಾಗಿ ತೂಗುಬಿಟ್ಟ ಕಾಂತದ ಉತ್ತರ ದಿಕ್ಕು ಮತ್ತು ಭೌಗೋಲಿಕ ಉತ್ತರ ದಿಕ್ಕು ಇವುಗಳ ನಡುವಿನ ಕೋನವನ್ನು ಆ ಸ್ಥಳದ ದಿಕ್ಸೂಚಿ ಕೋನ ಅಥವಾ ದಿಕ್ಸೂಚಿ ಎನ್ನುವರು. ಭೂಗೋಳದ ಮೇಲೆ ಬೇರೆ ಬೇರೆ ಸ್ಥಳಗಳ ದಿಕ್ಸೂಚಿಗಳು ಬೇರೆ ಬೇರೆಯಾಗಿರುತ್ತವೆ.

**ದಿಕ್ಪಾತ :** ಒಂದು ಕಾಂತ ಸೂಜಿಯನ್ನು ಕ್ಷಿತಿಜ ಲಂಬ ಸಮತಲದಲ್ಲಿ ತಿರುಗುವಂತೆ ಅಳವಡಿಸಿದಾಗ, ಅದು ಒಂದು ನಿರ್ದಿಷ್ಟ ದಿಕ್ಕಿನಲ್ಲಿ ನಿಲ್ಲುತ್ತದೆ. ಈ ಕಾಂತದ ಅಕ್ಷ ಮತ್ತು ಕ್ಷಿತಿಜ ಸಮಾಂತರ ದಿಕ್ಕುಗಳ ನಡುವಿನ ಕೋನವನ್ನು ದಿಕ್ಪಾತ ಕೋನ ಅಥವಾ ದಿಕ್ಪಾತ ಎನ್ನುವರು. ಭೂಗೋಳದ ಮೇಲೆ ಬೇರೆ ಬೇರೆ ಸ್ಥಳಗಳ ದಿಕ್ಪಾತಗಳು ಬೇರೆ ಬೇರೆಯಾಗಿರುತ್ತವೆ. ಸಮಭಾಜಕ ವೃತ್ತದ ಸಮೀಪದಲ್ಲಿ ದಿಕ್ಪಾತವು $0^\circ$ ಇದ್ದರೆ, ಭೂಮಿಯ ಕಾಂತಧ್ರುವಗಳ ಹತ್ತಿರ $90^\circ$ ಇರುತ್ತದೆ.

c) ಚಲಿಸುವ ಸುರುಳಿಯ ವಿದ್ಯುತ್‌ಪ್ರವಾಹ ಮಾಪಕವು ಅಧಿಕ ಪ್ರಮಾಣದ ವಿದ್ಯುತ್ ಪ್ರವಾಹವನ್ನು ಅಳೆಯಲು ಉಪಯೋಗವಾಗುವದಿಲ್ಲ ಏಕೆ ?

**ಉತ್ತರ :** ಚಲಿಸುವ ಸುರಳಿಯ ವಿದ್ಯುತ್ಪ್ರವಾಹ ಮಾಪಕದಲ್ಲಿ ಉಪಯೋಗಿಸಿದ ತಂತಿಯ ಸುರುಳಿಯು ಅತ್ಯಂತ ಸೂಕ್ಷ್ಮವಾಗಿರುವದರಿಂದ, ಅಧಿಕ ಪ್ರಮಾಣದ ವಿದ್ಯುತ್ಪ್ರವಾಹವನ್ನು ಹಾಯಿಸಿದರೆ, ತಂತಿಯ ಸುರುಳಿಯು ಸುಟ್ಟು ಹೋಗುವುದು. ಆದ್ದರಿಂದ ಅಧಿಕ ಪ್ರಮಾಣ ವಿದ್ಯುತ್‌ಪ್ರವಾಹವನ್ನು ಅಳೆಯಲು ಚಲಿಸುವ ಸುರುಳಿಯ ವಿದ್ಯುತ್ಪ್ರವಾಹ ಮಾಪಕವನ್ನು ಉಪಯೋಗಿಸುವುದಿಲ್ಲ.

**ಪ್ರಶ್ನೆ 2.** a) ಫ್ಯಾರಡೆಯ ವಿದ್ಯುದ್ವಿಭಜನೆಯ ನಿಯಮಗಳನ್ನು ತಿಳಿಸಿ. ಮತ್ತು ಅದರಲ್ಲಿಯ ಎರಡನೆಯ ನಿಯಮವನ್ನು ಪ್ರಮಾಣೀಕರಿಸಲು ಚಿತ್ರದ ಮೂಲಕ ಪ್ರಯೋಗ ತಿಳಿಸಿ.

ಅಥವಾ

ಬೀಜ ಪ್ರತಿಕ್ರಿಯಾ ಯಂತ್ರವೆಂದರೇನು ? ಅದರ ಚಿತ್ರವನ್ನು ಬರೆದು ಮುಖ್ಯ ಭಾಗಗಳನ್ನು ಹೆಸರಿಸಿ. ಅದರ ರಚನೆಯನ್ನು ವಿವರಿಸಿ.

**ಉತ್ತರ :** ಫ್ಯಾರಡೆಯ ವಿದ್ಯುದ್ವಿಭಜನೆಯ ನಿಯಮಗಳು—

**ಒಂದನೆಯ ನಿಯಮ :** ವಿದ್ಯುತ್ ವಿಶ್ಲೇಷಣ ಕ್ರಿಯೆಯಲ್ಲಿ ಬಿಡುಗಡೆಯಾದ ವಸ್ತುವಿನ ದ್ರವ್ಯರಾಶಿಯು ವಿದ್ಯುನ್ಮಂಡಲದಲ್ಲಿ ಹರಿಯುವ ವಿದ್ಯುದಾವೇಶದ ಪರಿಮಾಣಕ್ಕೆ ಅನುಲೋಮವಾಗಿರುವುದು.

**ಎರಡನೆಯ ನಿಯಮ :** ಬೇರೆ ಬೇರೆ ವಿದ್ಯುತ್, ವಿಶ್ಲೇಷಕಗಳ ಮೂಲಕ ಒಂದೇ ಪರಿಮಾಣದ ವಿದ್ಯುತ್ ಪ್ರವಾಹವನ್ನು ಹರಿಸಿದರೆ, ಬಿಡುಗಡೆಯಾಗುವ ವಸ್ತುಗಳ ದ್ರವ್ಯರಾಶಿಗಳು, ಆ ವಸ್ತುಗಳ ವಿದ್ಯುತ್ ರಾಸಾಯನಿಕ ಸಮಾನತೆಗೆ ಅನುಲೋಮಾನುಪಾತದಲ್ಲಿರುತ್ತವೆ.




ಎರಡನೆಯ ನಿಯಮದ ಪ್ರಮಾಣೀಕರಣ : ಪ್ರಯೋಗ :

ತಾಮ್ರದ ವೋಲ್ಟಾಮೀಟರ, ಬೆಳ್ಳಿಯ ವೋಲ್ಟಾಮೀಟರ ಮತ್ತು ನೀರಿನ ವೋಲ್ಟಾಮೀಟರುಗಳನ್ನು ತೆಗೆದುಕೊಂಡು, ಚಿತ್ರದಲ್ಲಿ ತೋರಿಸಿದಂತೆ ಅವುಗಳನ್ನು ಬ್ಯಾಟರಿ ಮತ್ತು ರಿಯೋಸ್ಟಾಟ್‌ಗಳೊಡನೆ ಸರಣಿಯಲ್ಲಿ ಜೋಡಿಸಬೇಕು. ನಿರ್ದಿಷ್ಟ ಕಾಲಾವಧಿಯವರೆಗೆ ಸೂಕ್ತ ಪ್ರಮಾಣದ ವಿದ್ಯುತ್ಪ್ರವಾಹವನ್ನು ಹರಿಯಬಿಡಬೇಕು. ನಂತರ ಋಣಾಗ್ರಗಳ ಮೇಲೆ ಸಂಗ್ರಹವಾದ ತಾಮ್ರ ಬೆಳ್ಳಿ ಮತ್ತು ಜಲಜನಕಗಳ ದ್ರವ್ಯರಾಶಿಗಳನ್ನು ಕಂಡುಕೊಳ್ಳಬೇಕು. ಅವುಗಳ ಫಲಿತಾಂಶವು ಕೆಳಗಿನಂತಿದೆ ಎಂದು ಕಲ್ಪಿಸಿ.

ಸಂಗ್ರಹವಾದ ಜಲಜನಕದ ದ್ರವ್ಯರಾಶಿ $=m_1=0.02$ ಗ್ರಾಂ.
ಸಂಗ್ರಹವಾದ ತಾಮ್ರದ ದ್ರವ್ಯರಾಶಿ $=m_2=0.64$ ಗ್ರಾಂ.
ಸಂಗ್ರಹವಾದ ಬೆಳ್ಳಿಯ ದ್ರವ್ಯರಾಶಿ $=m_3=2.18$ ಗ್ರಾಂ.

$$\therefore m_1 : m_2 : m_3 = 0.02 : 0.64 : 2.18$$
$$= 2 : 64 : 218$$
$$= 1 : 32 : 109$$

ಜಲಜನಕ, ತಾಮ್ರ ಮತ್ತು ಬೆಳ್ಳಿಗಳ ವಿದ್ಯುತ್ ರಾಸಾಯನಿಕ ಸಮಾನತೆಗಳು : 1 : 32 : 109 ಇರುತ್ತವೆ.

ಅಥವಾ

**ಬೀಜ ಪ್ರತಿಕ್ರಿಯಾ ಯಂತ್ರ :** ಪರಮಾಣು ಶಕ್ತಿಯನ್ನು ಶಾಖ ಇಲ್ಲವೆ ವಿದ್ಯುತ್ ಶಕ್ತಿಯನ್ನಾಗಿ ಪರಿವರ್ತಿಸುವ ಸಾಧನವನ್ನು ಬೀಜ ಪ್ರತಿಕ್ರಿಯಾ ಯಂತ್ರ ಎನ್ನುವರು.




**ಬೀಜ ಪ್ರತಿಕ್ರಿಯಾ ಯಂತ್ರ**

F–ಇಂಧನ, C–ನಿಯಂತ್ರಣ ಸರಳುಗಳು, S–ಕವಚ.

ಬೀಜ ಪ್ರತಿಕ್ರಿಯಾ ಯಂತ್ರದಲ್ಲಿ F–ಇಂಧನವನ್ನು ನ್ಯೂಟ್ರಾನುಗಳಿಂದ ತಾಡಿಸಿದಾಗ, ವಿದಳನೆಯುಂಟಾಗುತ್ತದೆ. ವಿದಳನದಿಂದ ಅಪಾರವಾದ ಶಕ್ತಿಯು ಬಿಡುಗಡೆಯಾಗುತ್ತದೆ. ಹೀಗೆ ಬಿಡುಗಡೆಯಾದ ಶಕ್ತಿಯನ್ನು, ಶಾಖ ಶಕ್ತಿಯಾಗಿ ಪರಿವರ್ತಿಸುತ್ತಾರೆ. ಶಾಖ ಶಕ್ತಿಯಿಂದ ನೀರನ್ನು ಆವಿಯಾಗಿಸುವರು. ಆವಿಯಿಂದ ಟರ್ಬೈನ್‌ನ್ನು ತಿರುಗಿಸಿ ವಿದ್ಯುತ್ ಶಕ್ತಿಯನ್ನು ಪಡೆಯುವರು. ವಿದಳನ ಕ್ರಿಯೆಯು ಸರಪಳಿ ಕ್ರಿಯೆಯಾದ್ದರಿಂದ, ಅತ್ಯಂತ ತೀವ್ರ ಗತಿಯಲ್ಲಿ ಶಕ್ತಿಯ ಬಿಡುಗಡೆಯಾಗುತ್ತದೆ. ಆದ್ದರಿಂದ ವಿದಳನ ಕ್ರಿಯೆಯನ್ನು ನಿಯಂತ್ರಿಸಲು ನಿಯಂತ್ರಕ ಸರಳುಗಳನ್ನು ಉಪಯೋಗಿಸುವರು. ಇವುಗಳನ್ನು ಕ್ರಿಯಾಕಾರಿಯಲ್ಲಿ ಸೇರಿಸಿದರೆ, ವಿದಳನ ಕ್ರಿಯೆಯು ನಿಧಾನವಾಗಿ ಸಾಗುವುದು.

b) ಶುಷ್ಕ ಕೋಶವು ಮೂಲ ಕೋಶ (Primary Cell) ಮತ್ತು ಸಂಚಯ ಕೋಶವು ಸೆಕೆಂಡರಿ ಕೋಶ (Secondary Cell) ಇದಕ್ಕೆ ಕಾರಣವೇನು ?

**ಉತ್ತರ :** ಶುಷ್ಕಕೋಶದಲ್ಲಿ ರಾಸಾಯನಿಕ ಶಕ್ತಿಯನ್ನು ವಿದ್ಯುತ್ ಶಕ್ತಿಯನ್ನಾಗಿ ಪರಿವರ್ತಿಸುವ ವಿಧಾನವು ಏಕಮುಖವಾಗಿರುತ್ತದೆ. ವಿದ್ಯುದ್ವಿಶ್ಲೇಷಕವು ಸಂಪೂರ್ಣವಾಗಿ ಒಣಗಿದ ಮೇಲೆ, ಕೋಶವು ಕೆಲಸ ಮಾಡುವುದಿಲ್ಲ. ವಿದ್ಯುದ್ವಿಶ್ಲೇಷಕವನ್ನು ಬದಲಾಯಿಸಲು ಬರುವುದಿಲ್ಲ. ಆದ್ದರಿಂದ ಕೋಶವು ನಿರುಪಯೋಗಿ. ಆದ್ದರಿಂದ ಶುಷ್ಕಕೋಶವು ಒಂದು ಮೂಲ ಕೋಶ.

ಆದರೆ ಸಂಚಯ ಕೋಶವು ರಾಸಾಯನಿಕ ಕ್ರಿಯೆಯನ್ನು ವಿದ್ಯುತ್‌ಶಕ್ತಿಯನ್ನಾಗಿ ಪರಿವರ್ತಿಸುವ ವಿಧಾನವು ದ್ವಿಮುಖವಾಗಿದೆ. ವಿದ್ಯುದ್ವಿಶ್ಲೇಷಕವು ನಿಷ್ಕ್ರಿಯವಾದರೆ, ಅದನ್ನು ಬದಲಾಯಿಸಿ, ಕೋಶವು ಪುನಃ ಕ್ರಿಯಾಶೀಲವಾಗುವಂತೆ ಮಾಡಬಹುದು. ಆದ್ದರಿಂದ ಸಂಚಯ ಕೋಶವು ಸೆಕೆಂಡರಿ ಕೋಶ.

c) ನೀರಿನೊಳಗಿನ ಜಲಾಂತರ್ಗಾಮಿಯ (Submarine) ಇರುವಿಕೆಯನ್ನು ಗೊತ್ತುಮಾಡುವ ಸಾಧನವನ್ನು ಹೆಸರಿಸಿ.

**ಉತ್ತರ :** ಜಲಾಂತರ್ಗಾಮಿಯನ್ನು ಗೊತ್ತುಮಾಡುವ ಸಾಧನ : ಸೋನಾರ್.

**ಪ್ರಶ್ನೆ 3.** a) "ಕೃತಕ" ಅಥವಾ "ಪ್ರೇರಿತ ತೇಜೋವಿಕಿರಣ" ಕಾರ್ಯ ಎಂದರೇನು ? ವಿವರಿಸಿ.

**ಉತ್ತರ :** ನೈಸರ್ಗಿಕ ವಿಕಿರಣಶೀಲವಲ್ಲದ ವಸ್ತುಗಳನ್ನು ಆಲ್ಫಾ ಇಲ್ಲವೆ ಇತರ ಯಾವುದೇ ಕಣಗಳಿಂದ ತಾಡಿಸಿ, ವಿಕಿರಣಶೀಲ ವಸ್ತುಗಳನ್ನಾಗಿ ಮಾರ್ಪಡಿಸುವುದಕ್ಕೆ ಕೃತಕ ಅಥವಾ ಪ್ರೇರಿತ ತೇಜೋವಿಕಿರಣ ಕಾರ್ಯ ಎನ್ನುವರು.

ಉದಾ : ವಿಕರಣ ಶೀಲವಲ್ಲದ ಬೋರಾನನ್ನು ಆಲ್ಫಾ ಕಣಗಳಿಂದ ತಾಡಿಸಿದಾಗ, ವಿಕಿರಣಶೀಲ ನೈಟ್ರೋಜನ್ ರೂಪುಗೊಳ್ಳುತ್ತದೆ.

b) ವಿದ್ಯುದಂಶಗಳ ಇರುವಿಕೆಯನ್ನು ಪತ್ತೆಹಚ್ಚಲು ಉಪಯೋಗಿಸುವ ಸಾಧನವನ್ನು ಹೆಸರಿಸಿ.

**ಉತ್ತರ :** ವಿದ್ಯುದಂಶಗಳ ಇರುವಿಕೆಯನ್ನು ಪತ್ತೆಹಚ್ಚಲು ಉಪಯೋಗಿಸುವ ಸಾಧನವು ವಿದ್ಯುದ್ದರ್ಶಕ.

**ಪ್ರಶ್ನೆ 4.** a) ಬೀಜ ವಿದಳನಕ್ಕೂ ಮತ್ತು ಬೀಜ ಯುಕ್ತತೆಗೂ (Nuclear fusion and Nuclear fusion) ಇರುವ ವ್ಯತ್ಯಾಸಗಳನ್ನು ತಿಳಿಸಿ.

**ಉತ್ತರ :**

| | ಬೀಜ ವಿದಳನ | | ಬೀಜ ಯುಕ್ತತೆ |
|---|---|---|---|
| 1) | ಬೀಜ ವಿದಳನದಲ್ಲಿ ಒಂದು ಮೂಲವಸ್ತುವಿನ ನ್ಯೂಕ್ಲಿಯಸ್ಸು ವಿಭಜನೆಗೊಂಡು ಎರಡು ಹೊಸ ಮೂಲ ವಸ್ತುಗಳೂ ರೂಪು | 1) | ಬೀಜ ಯುಕ್ತತೆಯಲ್ಲಿ ಒಂದೇ ಮೂಲವಸ್ತುವಿನ ಎರಡು ನೂಕ್ಲಿಯಸ್ಸುಗಳು ಸಂಯೋಗಗೊಂಡು, |

| | |
|---|---|
| ಗೊಳ್ಳುತ್ತವೆ. | ಒಂದು ಹೊಸ ಮೂಲ ವಸ್ತುವಿನ ನ್ಯೂಕ್ಲಿಯಸ್ಸಾಗುವುದು. |
| 2) ಬೀಜ ವಿದಳನದಲ್ಲಿ ಭಾರ ಮೂಲ ವಸ್ತುಗಳು ಮಾತ್ರ ಭಾಗವಹಿಸುತ್ತವೆ | 2) ಬೀಜಯುಕ್ತತೆಯಲ್ಲಿ ಹಗುರ ಮೂಲವಸ್ತುಗಳು ಮಾತ್ರ ಭಾಗ ವಹಿಸುತ್ತವೆ. |

---

b) ಕ್ಷ-ಕಿರಣಗಳ ಯಾವುವಾದರೂ ಎರಡು ಗುಣಗಳನ್ನು ತಿಳಿಸಿ.

**ಉತ್ತರ :** ಕ್ಷ-ಕಿರಣಗಳು ಎರಡು ಗುಣಗಳು :

1) ಕ್ಷ-ಕಿರಣಗಳು ಕೆಲವು ಘನ ವಸ್ತುಗಳ ಮೂಲಕ ತೂರಿಕೊಂಡು ಹೋಗುತ್ತವೆ.

2) ಕೆಲವು ರಾಸಾಯನಿಕ ವಸ್ತುಗಳಲ್ಲಿ ಸ್ಫುರಣ (ಪ್ರತಿದೀಪ್ತಿ)ವನ್ನು ಉಂಟು ಮಾಡುತ್ತವೆ.

**ಪ್ರಶ್ನೆ 5. a)** ವಿದ್ಯುತ್ಪ್ರವಾಹದ ರಾಸಾಯನಿಕ ಪರಿಣಾಮವನ್ನು ಅಳವಡಿಸಿಕೊಂಡಿರುವ ಯಾವುದಾದರೂ ನಾಲ್ಕು ಉದಾಹರಣೆಗಳನ್ನು ತಿಳಿಸಿ.

**ಉತ್ತರ :** ನಾಲ್ಕು ಉದಾಹರಣೆಗಳು 1) ವಿದ್ಯುಲ್ಲೇಪನ 2) ತಾಮ್ರದ ಶುದ್ಧೀಕರಣ 3) ಲೋಹಗಳ ತಯಾರಿಕೆ 4) ವಿದ್ಯುನ್ಮುದ್ರಣ.

b) 4 ವೋಲ್ಟ್ ವಿದ್ಯುತ್ ಚಾಲಕ ಬಲವುಳ್ಳ ಕೋಶದಿಂದ 2 ಆಂಪೇರ್ ವಿದ್ಯುತ್ ಪ್ರವಾಹವನ್ನು ಎಳೆದಿದೆ. ಒಂದು ನಿಮಿಷದಲ್ಲಿ ಅದು ಒದಗಿಸುವ ಶಕ್ತಿಯ ಪ್ರಮಾಣವೆಷ್ಟು ?

**ರೀತಿ :** ವಿದ್ಯುತ್ ಶಕ್ತಿಯ ಬಲ = VI……(V–ವಿ.ಚಾ.ಬ. I ಪ್ರವಾಹ) $= 4 \times 2 = 8$ ವಾಟ್‌ಗಳು.

**ಪ್ರಶ್ನೆ 6. a)** ಒಂದು ಗಾಜಿನ ಕಡ್ಡಿಯನ್ನು ರೇಷ್ಮೆಯ ಮೇಲೆ ತೀಡುವುದರಿಂಥ ಉಂಟಾಗುವ ವಿದ್ಯುತ್ಕರಣವನ್ನು ಎಲೆಕ್ಟ್ರಾನ್ ವಾದದ ಆಧಾರದ ಮೇಲೆ ವಿವರಿಸಿ.

**ಉತ್ತರ :** ಎರಡು ವಸ್ತುಗಳನ್ನು ಪರಸ್ಪರ ಉಜ್ಜಿದಾಗ ಎಲೆಕ್ಟ್ರಾನುಗಳು ಒಂದು ವಸ್ತುವಿನಿಂದ ಇನ್ನೊಂದು ವಸ್ತುವಿಗೆ ವರ್ಗಾಯಿಸಲ್ಪಡುತ್ತವೆ. ಎಲೆಕ್ಟ್ರಾನುಗಳನ್ನು ಕಳೆದುಕೊಂಡ ವಸ್ತುವು ಧನ ವಿದ್ಯುದಾವೇಶಪೂರಿತವಾಗಿಯೂ, ಎಲೆಕ್ಟ್ರಾನುಗಳನ್ನು ಗಳಿಸಿದ ವಸ್ತುವು ಋಣ ವಿದ್ಯುದಾವೇಶಪೂರಿತವಾಗಿಯೂ ಆಗುತ್ತವೆ.

ಒಂದು ಗಾಜಿನ ಕಡ್ಡಿಯನ್ನು ರೇಷ್ಮೆಯ ಮೇಲೆ ತೀಡುವುದರಿಂದ ಗಾಜು ಎಲೆಕ್ಟ್ರಾನುಗಳನ್ನು ರೇಷ್ಮೆಗೆ ವರ್ಗಾಯಿಸುವದು. ಆದರಿಂದ ಗಾಜಿನಲ್ಲಿ ಎಲೆಕ್ಟ್ರಾನುಗಳ ಸಂಖ್ಯೆಯು ಕಡಿಮೆಯಾಗುವದರಿಂದ ಅದು ಧನ ವಿದ್ಯುದಾವೇಶಪೂರಿತವಾಗುವುದು. ರೇಷ್ಮೆಯಲ್ಲಿ ಎಲೆಕ್ಟ್ರಾನುಗಳ ಸಂಖ್ಯೆ ಹೆಚ್ಚಾಗುವುದರಿಂದ ಅದು ಋಣ ವಿದ್ಯುದಾವೇಶಪೂರಿತವಾಗುವುದು.

b) ಲೇಸರ್ ಎಂದರೇನು ?

**ಉತ್ತರ : ಲೇಸರ್ :** ಅತಿ ಹೆಚ್ಚಿನ ತೀವ್ರತೆಯುಳ್ಳ ಪರಿಪೂರ್ಣ ಸಮಾಂತರವಾಗಿರುವ ಬೆಳಕಿನ ಕಿರಣಗಳನ್ನು ಹೊರಸೂಸುವ ಸಾಧನವನ್ನು ಲೇಸರ್ ಎನ್ನುವರು.

**ಪ್ರಶ್ನೆ 7. a)** ಒಂದು ವಸ್ತುವಿನ ಪ್ರಚ್ಛನ್ನ ಶಕ್ತಿ ಮತ್ತು ಚಲನ ಶಕ್ತಿಗಳಿಗಿರುವ ವ್ಯತ್ಯಾಸವನ್ನು ತಿಳಿಸಿ.

**ಉತ್ತರ :** ತನ್ನ ಸ್ಥಾನಬಲದಿಂದ ವಸ್ತುವು ಗಳಿಸಿಕೊಂಡ ಶಕ್ತಿಯು ಪ್ರಚ್ಛನ್ನ ಶಕ್ತಿಯಾದರೆ, ಚಲನ ಶಕ್ತಿಯು ವಸ್ತುವಿನ ಚಲನೆಯ ಕಾರಣವಾಗಿ ಅದರಲ್ಲಿ ಬಂದಿರುತ್ತದೆ.

d) ನಿಮಗೆ ಗೊತ್ತಿರುವ ಯಾವುದಾದರೂ ಎರಡು ಚಾಕ್ಷುಷೋಪಕರಣಗಳನ್ನು (Optical Instruments) ತಿಳಿಸಿ.

**ಉತ್ತರ :** 1) ಸಂಯೋಜಿತ ಸೂಕ್ಷ್ಮದರ್ಶಕ, 2) ದೂರದರ್ಶಕ.

**ಪ್ರಶ್ನೆ 8. a)** ನ್ಯೂಟನ್ನನ ಗುರುತ್ವಾಕರ್ಷಣ ನಿಯಮವನ್ನು ನಿರೂಪಿಸಿ.

**ಉತ್ತರ :** ನ್ಯೂಟನ್ನನ ಗುರುತ್ವಾಕರ್ಷಣ ನಿಯಮ :

ಎರಡು ವಸ್ತುಗಳ ನಡುವಿನ ಆಕರ್ಷಣ ಬಲವು ಅವುಗಳ ದ್ರವ್ಯರಾಶಿಗಳ ಗುಣ ಲಬ್ಧಕ್ಕೆ ಅನುಲೋಮಾನುಪಾತದಲ್ಲಿಯೂ ಮತ್ತು ಅವುಗಳ ನಡುವಿನ ದೂರದ ವರ್ಗಕ್ಕೆ ವಿಲೋಮಾನುಪಾತದಲ್ಲಿಯೂ ಇರುತ್ತದೆ.

b) ಸರಳ ಲೋಲಕದ ಆವರ್ತ ಕಾಲವು ಅವಲಂಬಿಸಿರುವ ಎರಡು ಅಂಶಗಳನ್ನು ತಿಳಿಸಿ.

**ಉತ್ತರ :** 1) ಲೋಲಕದ ಉದ್ದ 2) ಗುರುತ್ವಾಕರ್ಷಣ ಬಲ.

c) ಯಾವುದಾದರೂ ಎರಡು ವೇಗವರ್ಧಕಗಳನ್ನು ಹೆಸರಿಸಿ.

**ಉತ್ತರ :** 1) ಮ್ಯಾಂಗನೀಸ್ ಡೈಆಕ್ಸೈಡ್ (ಆಮ್ಲ ಜನಕ ತಯಾರಿಕೆಯಲ್ಲಿ)

2) ಪ್ಲಾಟಿನಮ್‌ಯುಕ್ತ ಕಲ್ನಾರು (Platimised Asbestos) ($SO_2$ ದಿಂದ $SO_3$ ತಯಾರಿಸುವಾಗ)

**ಪ್ರಶ್ನೆ 9.** a) ಸಮಾಂಗೀಯ (Homogeneous) ಮತ್ತು ವಿಷಮಾಂಗೀಯ (Heterogeneous) ರಾಸಾಯನಿಕ ಕ್ರಿಯೆಗಳೆಂದರೇನು ? ಪ್ರತಿಯೊಂದಕ್ಕೂ ಒಂದೊಂದು ಉದಾಹರಣೆ ಕೊಡಿ. ಈ ಕ್ರಿಯೆಗಳಿಗೆ ಸಮೀಕರಣವನ್ನು ಬರೆಯಿರಿ.

**ಉತ್ತರ : ಸಮಾಂಗೀಯ ರಾಸಾಯನಿಕ ಕ್ರಿಯೆ :** ಕ್ರಿಯಾ ವಸ್ತುಗಳು ಮತ್ತು ಉತ್ಪನ್ನಗಳು ಒಂದೇ ಭೌತಿಕ ಅವಸ್ಥೆಯಲ್ಲಿರುವ ರಾಸಾಯನಿಕ ಕ್ರಿಯೆಯನ್ನು ಸಮಾಂಗೀಯ ರಾಸಾಯನಿಕ ಕ್ರಿಯೆ ಎನ್ನುವರು.

ಉದಾ : ಅಮೋನಿಯಾ ತಯಾರಿಕೆಯಲ್ಲಿ ಜಲಜನಕ ಮತ್ತು ಸಾರಜನಕಗಳು ವರ್ತಿಸುವವು: ಈ ಮೂರು ವಸ್ತುಗಳು ಅನಿಲರೂಪದಲ್ಲಿರುವವು: ಆದ್ದರಿಂದ ಇದು ಸಮಾಂಗೀಯ ರಾಸಾಯನಿಕ ಕ್ರಿಯೆಯು.

$$N_2 + 3H_2 \rightarrow 2NH_3$$ (ಅಮೋನಿಯಾ)

[ಅನಿಲ] [ಅನಿಲ] [ಅನಿಲ]

**ವಿಷಮಾಂಗೀಯ ರಾಸಾಯನಿಕ ಕ್ರಿಯೆ :** ಕ್ರಿಯಾ ವಸ್ತುಗಳು ಮತ್ತು ಉತ್ಪನ್ನಗಳು ಬೇರೆ ಬೇರೆ ಭೌತಿಕ ಅವಸ್ಥೆಯಲ್ಲಿರುವ ರಾಸಾಯನಿಕ ಕ್ರಿಯೆಯನ್ನು ವಿಷಮಾಂಗೀಯ ರಾಸಾಯನಿಕ ಕ್ರಿಯೆ ಎನ್ನುವರು.

ಉದಾ : ಪೊಟ್ಯಾಷಿಯಂ ಕ್ಲೋರೇಟ ($KClO_3$ ಘನ ವಸ್ತು)ನ್ನು ಕಾಯಿಸಲು ಅದು ವಿಭಜನೆಗೊಂಡು ಪೊಟ್ಯಾಷಿಯಂ ಕ್ಲೋರೈಡ ($KCl$ ಘನವಸ್ತು) ಮತ್ತು ಆಮ್ಲಜನಕ ($O_2$ ಅನಿಲವಸ್ತು) ಬರುವವು.

$$2KClO_3 \rightarrow 2KCl + 3O_2$$

[ಘನ] [ಘನ] [ಅನಿಲ]

b) ಒಂದೊಂದು ಉದಾಹರಣೆಯ ಮೂಲಕ ಪ್ರಬಲ ಮತ್ತು ದುರ್ಬಲ ಆಮ್ಲಗಳಿಗಿರುವ ವ್ಯತ್ಯಾಸವನ್ನು ತಿಳಿಸಿ.

**ಉತ್ತರ :** ಯಾವ ಆಮ್ಲವು ದ್ರಾವಣದಲ್ಲಿ ಸಂಪೂರ್ಣವಾಗಿ ವಿಯೋಜನ ಹೊಂದುವುದೋ ಅದು ಪ್ರಬಲ ಆಮ್ಲವೆನಿಸುವುದು. ಆದರೆ ದುರ್ಬಲ ಆಮ್ಲಗಳು ದ್ರಾವಣದಲ್ಲಿ ಸಂಪೂರ್ಣವಾಗಿ ವಿಯೋಜನ ಹೊಂದುವುದಿಲ್ಲ.

ಉದಾ : ಗಂಧಕಾಮ್ಲ ಪ್ರಬಲ ಆಮ್ಲ, ಅಸಿಟಿಕ್ ಆಮ್ಲ, ದುರ್ಬಲ ಆಮ್ಲ.

**ಪ್ರಶ್ನೆ 10.** a) ವಿದ್ಯುತ್ ಕುಲುಮೆಯ (Electric Arc Furnace) ಅಂದವಾದ ಚಿತ್ರವನ್ನು ಬರೆದು ಅದರ ಎಲ್ಲ ಭಾಗಗಳನ್ನು ಗುರುತಿಸಿ.



**ಉತ್ತರ :** 1] ಚಲಿಸುವ ವಿದ್ಯುದಾಗ್ರಗಳು, 2] ಚಾಪ, 3] ದ್ರವರೂಪದ ಉಕ್ಕು, 4] ಮ್ಯಾಗ್ನಸೈಟ್, 5] ಕಾವಿಟ್ಟಿಗೆ, 6] ಬಾಗಿಲು.

b) ವಿದ್ಯುತ್ ಕುಲುಮೆಯ ವಿಧಾನದಿಂದ ಉಕ್ಕನ್ನು ತಯಾರಿಸುವ ಕ್ರಮವನ್ನು ವಿವರಿಸಿ.

**ಉತ್ತರ : ವಿದ್ಯುತ್ ಕುಲುಮೆಯ ವಿಧಾನ :** ಕುಲುಮೆಗೆ ಮೊದಲು ಸುಣ್ಣವನ್ನು ಹಾಕುತ್ತಾರೆ. ಇದು ಅಶುದ್ಧತೆಗಳೊಡನೆ ವರ್ತಿಸಿ ಕಿಟ್ಟವು ಉತ್ಪನ್ನವಾಗುವುದು. ನಂತರ ಕಳಪೆ ಉಕ್ಕನ್ನು ಸೇರಿಸುವರು. ನಂತರ ಉಕ್ಕು ಮತ್ತು ವಿದ್ಯುದ್ವಾರಗಳ ಮಧ್ಯೆ ವಿದ್ಯುಚ್ಛಾಪ ಏರ್ಪಡುವಂತೆ ಮಾಡುವರು. ಆದರಿಂದ ಹೆಚ್ಚಾದ ಶಾಖವು ಉತ್ಪನ್ನವಾಗುವುದು. ಗ್ರಾಸ [ಮಿಶ್ರಣ] ದ್ರವಿಸಿ ಅದರಲ್ಲಿಯ ಅಶುದ್ಧತೆಗಳು ಕಿಟ್ಟವಾಗಿ ರೂಪಾಂತರ ಹೊಂದುವವು. ಆ ಮೇಲೆ ಪ್ರಮಾಣ ಬದ್ಧ ಮಿಶ್ರ ಲೋಹವನ್ನು ಸೇರಿಸುವರು. ಆಗ ಉತ್ತಮ ಗುಣಮಟ್ಟದ ಉಕ್ಕು ಉತ್ಪನ್ನವಾಗುವುದು.

c) ಪ್ಲಾಸ್ಟಿಕ್‌ಗಳನ್ನು ವರ್ಗೀಕರಿಸಬಹುದಾದ ಎರಡು ಪ್ರಮುಖ ಗುಂಪುಗಳನ್ನು ತಿಳಿಸಿ.

**ಉತ್ತರ :** ಪ್ಲಾಸ್ಟಿಕ್‌ಗಳ ಎರಡು ಗುಂಪುಗಳು : 1] ಥರ್ಮೋಪ್ಲಾಸ್ಟಿಕ್, 2] ಥರ್ಮೋಸೆಟ್ಟಿಂಗ ಪ್ಲಾಸ್ಟಿಕ್.

**ಪ್ರಶ್ನೆ 11.** a] ನಿಮಗೆ ಗೊತ್ತಿರುವ ಯಾವುದಾದರೂ ನಾಲ್ಕು ಸಾವಯವ ಆಮ್ಲಗಳನ್ನು ಹೆಸರಿಸಿ.

**ಉತ್ತರ :** ನಾಲ್ಕು ಸಾವಯವ ಆಮ್ಲಗಳು : 1] ಅಸಿಟಿಕ್ ಆಮ್ಲ, 2] ಬೆಂಜೋಯಿಕ್ ಆಮ್ಲ, 3] ಟಾರ್ಟಾರಿಕ್ ಆಮ್ಲ, 4] ಸ್ಯಾಲಿಸಿಲಿಕ್ ಅಮ್ಲ.

b] ಪ್ರಬಲ ಸಲ್ಫ್ಯೂರಿಕ್ ಆಮ್ಲವನ್ನು ಸಕ್ಕರೆಗೆ ಸೇರಿಸಿದರೆ, ಸಕ್ಕರೆಯು ಸುಟ್ಟು ಕಪ್ಪಾಗುವುದು. ಕಾರಣವೇನು ?

**ಉತ್ತರ :** ಪ್ರಬಲ ಸಲ್ಫ್ಯೂರಿಕ್ ಆಮ್ಲವು ಸಕ್ಕರೆಯೊಳಗಿನ ಜಲಜನಕ ಆಮ್ಲ ಜನಕಗಳನ್ನು ನೀರಿನ ರೂಪದಲ್ಲಿ ಹೀರಿಕೊಳ್ಳುವುದು. ಆದರಿಂದ ಶಾಖವು ಬಿಡುಗಡೆಯಾಗುವುದಲ್ಲದೆ, ಸಕ್ಕರೆಯಲ್ಲಿಯ ಇಂಗಾಲವು ಮಾತ್ರ ಉಳಿಯುವುದು. ಆದರಿಂದ ದ್ರಾವಣವು ಕಪ್ಪುಬಣ್ಣದ್ದಾಗುವುದು.

**ಪ್ರಶ್ನೆ 12.** a] ಪೆಟ್ರೋ ರಾಸಾಯನಿಕಗಳೆಂದರೇನು? ಯಾವುದಾದರೂ ಎರಡು ಉದಾಹರಣೆ ಕೊಡಿ.

**ಉತ್ತರ : ಪೆಟ್ರೋ ರಾಸಾಯನಿಕಗಳು :** ಮೊದಲು ನೈಸರ್ಗಿಕ ಆಕರಗಳಿಂದ ದೊರೆಯುತ್ತಿದ್ದ ಕೆಲವು ವಸ್ತುಗಳನ್ನು ಈಗ ಪೆಟ್ರೋಲಿಯಂನಿಂದ ಉಂಟಾದ ವಸ್ತುಗಳಿಂದ ತಯಾರಿಸುತ್ತಾರೆ. ಕೈಗಾರಿಕೆಗಳಲ್ಲಿ ಈ ವಸ್ತುಗಳನ್ನು ಪೆಟ್ರೋ ರಾಸಾಯನಿಕಗಳೆನ್ನುವರು.

ಉದಾ : ಪ್ಲಾಸ್ಟಿಕ್ ಮತ್ತು ಕ್ರಿಮಿನಾಶಕಗಳು.

b) ಅಲ್ಯುಮಿನಿಯಂ ಲೋಹದ ಯಾವುದಾದರೂ ಎರಡು ಮಿಶ್ರಲೋಹಗಳನ್ನು ಬರೆಯಿರಿ.

**ಉತ್ತರ :** 1] ಮ್ಯಾಗ್ನ್ಯಾಲಿಯಂ,
2] ಡ್ಯುರಾಲ್ಯುಮಿನ್.

**ಪ್ರಶ್ನೆ 13.** a) ಪಾಲಿಸ್ಯಾಕರೈಡುಗಳು [ಬಹು ಶರ್ಕರಿಗಳು] ಹೇಗೆ ಉಂಟಾಗುತ್ತವೆ ? ಯಾವುದಾದರೂ ಎರಡು ಸಾಮಾನ್ಯ ಉದಾಹರಣೆಗಳನ್ನು ಕೊಡಿ.

**ಉತ್ತರ :** ಏಕಶರ್ಕರಿಗಳ ಅನೇಕ ಅಣುಗಳು ಸಂಯೋಗ ಹೊಂದಿ ಸ್ವಲ್ಪ ಪ್ರಮಾಣದ ನೀರನ್ನು ಹೊರಗೆ ಹಾಕುವುದರಿಂದ ಬಹುಶರ್ಕರಿಗಳು ಉತ್ಪನ್ನವಾಗುವವು.

ಉದಾ : ಪಿಷ್ಟ, ಸೆಲ್ಯುಲೋಸ್.

b) ಕಬ್ಬಿಣವನ್ನು ಗಂಧಕದೊಡನೆ ಕಾಯಿಸಿದಾಗ, ಉತ್ಪನ್ನವಾಗುವ ವಸ್ತುವನ್ನು ವಿವರಿಸಿ.

**ಉತ್ತರ :** ಕಬ್ಬಿಣವನ್ನು ಗಂಧಕದೊಡನೆ ಕಾಯಿಸಿದಾಗ ಅವು ರಾಸಾಯನಿಕ ಸಂಯೋಗ ಹೊಂದಿ ಕಬ್ಬಿಣದ ಸಲ್ಫೈಡ ಎಂಬ ಸಂಯುಕ್ತ ವಸ್ತು ದೊರೆಯುವುದು.

**ಪ್ರಶ್ನೆ 14.** a] ಈ ಕೆಳಗೆ ಕೊಟ್ಟಿರುವ ರಾಸಾಯನಿಕ ವಸ್ತುಗಳನ್ನು ಎಲೆಕ್ಟ್ರೊಲೈಟ್‌ಗಳು [ವಿದ್ಯುತ್ ವಿಭಾಜ್ಯಗಳು] ಮತ್ತು ನಾನ್ ಎಲೆಕ್ಟ್ರೊಲೈಟ್‌ಗಳು [ವಿದ್ಯುತ್ ಅವಿಭಾಜ್ಯಗಳು] ಎಂದು ವಿಂಗಡಿಸಿ.

1] ಅಡಿಗೆ ಉಪ್ಪಿನ ದ್ರಾವಣ, 2] ಸಕ್ಕರೆಯ ದ್ರಾವಣ, 3] ಸೋಡಿಯಂ ಹೈಡ್ರಾಕ್ಸೈಡ್ ದ್ರಾವಣ, 4] ದುರ್ಬಲ ಸಲ್ಫ್ಯೂರಿಕ್ ಆಮ್ಲ.

**ಉತ್ತರ : ಎಲೆಕ್ಟ್ರೊಲೈಟ್‌ಗಳು :** 1) ಅಡಿಗೆ ಉಪ್ಪಿನ ದ್ರಾವಣ, 2] ಸೋಡಿಯಂ ಹೈಡ್ರಾಕ್ಸೈಡ್ ದ್ರಾವಣ, 3] ದುರ್ಬಲ ಸಲ್ಫ್ಯೂರಿಕ್ ಆಮ್ಲ.

**ನಾನ್ ಎಲೆಕ್ಟ್ರೊಲೈಟ್‌ಗಳು :** ಸಕ್ಕರೆಯ ದ್ರಾವಣ.

b) ಇಥೇನಿನ ಅಣುಸೂತ್ರ ಮತ್ತು ರಚನಾ ಸೂತ್ರವನ್ನು ಬರೆಯಿರಿ.

**ಉತ್ತರ :** ಇಥೇನಿನ ಅಣುಸೂತ್ರ- $C_2H_6$.

ರಚನಾ ಸೂತ್ರ



**ಪ್ರಶ್ನೆ 15.** a] ಕ್ರೊಮೆಟೊಗ್ರಾಫಿ ಎಂದರೇನು ? ವಿವರಿಸಿ.

**ಉತ್ತರ :** ಅಲ್ಪ ಪ್ರಮಾಣದ ಸಾವಯವ ಮಿಶ್ರಣಗಳನ್ನು ಬೇರ್ಪಡಿಸುವ ವಿಧಾನವನ್ನು ಕ್ರೊಮೆಟೊಗ್ರಾಫಿ ಎನ್ನುವರು. ದ್ರಾವಣದ ರೂಪದಲ್ಲಿರುವ ಮಿಶ್ರಣಗಳನ್ನು ನಿಶ್ಚಲ ಹಂತದಲ್ಲಿ ಚಲಿಸುವಂತೆ ಮಾಡಲಾಗುತ್ತದೆ. ಮಿಶ್ರಣದ ಘಟಕಗಳು ಅವುಗಳು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯಕ್ಕನುಗುಣವಾಗಿ ಬೇರೆ ಬೇರೆ ದೂರಗಳಿಗೆ ಚಲಿಸುತ್ತವೆ. ಬೇರೆ ಬೇರೆ ಘಟಕಗಳನ್ನು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯವು ಬೇರೆ ಬೇರೆಯಾಗಿರುವುದರಿಂದ ಮಿಶ್ರಣವನ್ನು ಬೇರ್ಪಡಿಸಬಹುದು.

b] ಆಮ್ಲ ಜನಕದ ಪರಿಮಾಣುತೂಕ 16 ಇದರ ಸಮಾನ ತೂಕ 8, ಆದರೆ ಇದರ ಸಂಯೋಗ ಸಾಮರ್ಥ್ಯ [Valency] ಎಷ್ಟು ?

ರೀತಿ : ಸಂಯೋಗ ಸಾಮರ್ಥ್ಯ $= \frac{\text{ಪರಿಮಾಣು ತೂಕ}}{\text{ಸಮಾನ ತೂಕ}}$

$= \frac{16}{8} = 2$

∴ ಆಮ್ಲ ಜನಕದ ಸಂಯೋಗ ಸಾಮರ್ಥ್ಯ = 2.

**ಪ್ರಶ್ನೆ 16. a)** ವಸ್ತು ನಿತ್ಯತೆಯ ನಿಯಮ ತಿಳಿಸಿ. ಒಂದು ಉದಾಹರಣೆ ಕೊಡಿ.

**ಉತ್ತರ :** ವಸ್ತು ನಿತ್ಯತೆಯ ನಿಯಮ : ರಾಸಾಯನಿಕ ಬದಲಾವಣೆ ನಡೆದಾಗ ವಸ್ತುವು ಸೃಷ್ಟಿಯಾಗುವುದಿಲ್ಲ ಮತ್ತು ನಾಶವಾಗುವುದಿಲ್ಲ.

ಉದಾ : 12 ಗ್ರಾಂ. ಇಂಗಾಲವು 32 ಗ್ರಾಂ. ಆಮ್ಲ ಜನಕದೊಡನೆ ವರ್ತಿಸಿ 44 ಗ್ರಾಂ. ಇಂಗಾಲದ ಡೈಆಕ್ಸೈಡನ್ನು ಉಂಟುಮಾಡುತ್ತದೆ.

ಇಲ್ಲಿ ಪರಿವರ್ತಕಗಳ ತೂಕಗಳ ಮೊತ್ತ=12+32=44 ಗ್ರಾಂ.
ಉತ್ಪನ್ನದ ತೂಕ=44 ಗ್ರಾಂ.

ಇದರಿಂದ ವಸ್ತು ನಿತ್ಯತೆಯ ನಿಯಮದ ಸತ್ಯತೆಯು ತಿಳಿಯುತ್ತದೆ.

**b)** ಒಂದು ಲೀಟರ್ ಸಲ್ಫ್ಯೂರಿಕ್ಆಮ್ಲವು 49 ಗ್ರಾಂ. ಆಮ್ಲವನ್ನು ಹೊಂದಿದ್ದರೆ, ಅದರ ನಾರ್ಮ್ಯಾಲಿಟಿ ಎಷ್ಟು ?

**ಉತ್ತರ :** ಸಲ್ಫ್ಯೂರಿಕ್ ಆಮ್ಲದ ಸಮಾನ ತೂಕ 49.

∴ 49 ಗ್ರಾಂ. ಆಮ್ಲವು ಒಂದು ಲೀಟರ್ ದ್ರಾವಣದಲ್ಲಿ ಕರಗಿರುವುದರಿಂದ ದ್ರಾವಣದ ನಾರ್ಮ್ಯಾಲಿಟಿ 1N.

---

# ವಿಜ್ಞಾನ

**ಎಪ್ರಿಲ್ 1984** **2 ನೇ ಪತ್ರಿಕೆ**

## [ ಜೀವಶಾಸ್ತ್ರ ]

ವೇಳೆ : 2 ಗಂಟೆ ] [ ಗುಣಗಳು : 3

**ಪ್ರಶ್ನೆ 1.** ಮಾನವನ ಮೂತ್ರ ಜನಕಾಂಗದ ನೀಳಸ ಛೇದದ ಅಂದವಾದ ಚಿತ್ರ ಬರೆದು, ಅದರಲ್ಲಿ ಕಾರ್ಟೆಕ್ಸ್ ಮೆಡುಲ್ಲಾ, ಪೆಲ್ವಿಸ್, ಮೂತ್ರನಾಳ, ಪಿರಮಿಡ್‌ಗಳನ್ನು ಗುರ್ತಿಸಿ.

**d)** ಜೈವಿಕ ನಿಯಂತ್ರಣ ಎಂದರೇನು ? ಇದಕ್ಕಾಗಿ ಮಾನವನು ಅನುಸರಿಸಬೇಕಾದ ಕ್ರಮ ಯಾವುದು ?

**ಉತ್ತರ :** ಜೈವಿಕ ನಿಯಂತ್ರಣ : ಒಂದು ಜೀವಿಯಿಂದ ಆಗುವ ಮತ್ತೊಂದು ಜೀವಿಯ ನಿಯಂತ್ರಣವನ್ನು ಜೈವಿಕ ನಿಯಂತ್ರಣ ಎನ್ನುವರು.

ಜೈವಿಕ ನಿಯಂತ್ರಣದಲ್ಲಿ ಮಾನವನು ಕೆಲವು ನೈಸರ್ಗಿಕ ಶತ್ರುಗಳನ್ನು ಬೆಳೆಸಿ ಅವುಗಳನ್ನು ಎಲ್ಲೆಡೆ ಹರಡಬೇಕು.

**e)** ಕಪ್ಪು ವಿಥವಾ ಜೇಡದ ಸಂತಾನೋತ್ಪತ್ತಿ ಮಾಡುವಿಕೆಯನ್ನು ವಿವರಿಸಿ.

**ಉತ್ತರ :** ಸಂತಾನೋತ್ಪತ್ತಿಗೆ ಯೋಗ್ಯವಾದ ಹೆಣ್ಣು ಜೇಡವು ತನ್ನಗೂಡಿನ ಮಧ್ಯದಲ್ಲಿ ಕುಳಿತು ಗಂಡು ಜೇಡಕ್ಕಾಗಿ ಕಾಯುತ್ತಿರುತ್ತದೆ. ಅದು ಗೂಡಿನ ಒಂದು ಎಳೆಯನ್ನು ಹೊರ ಸೂಸುತ್ತದೆ. ಗಂಡು ಈ ಎಳೆಯನ್ನು ಮುಟ್ಟಿ ಅದರಗುಂಟ ಹೆಣ್ಣಿನತ್ತ ಜಾಗರೂಕತೆಯಿಂದ ಸಾಗುತ್ತದೆ. ಆ ಸಂದರ್ಭಕ್ಕೆ ಸಿದ್ಧವಾಗಿ ಗಂಡು ತನ್ನ ಜನನಾಂಗದಿಂದ ವೀರ್ಯದ ಚಂಡೊಂದನ್ನು ತೆಗೆದಿರಿಸಿಕೊಂಡಿರುತ್ತದೆ. ಅದು ಅನೇಕ ಸಲ ಹೆಣ್ಣಿನ ಹತ್ತಿರ ಹೋಗಿ ಹಿಂದಿರುಗುತ್ತದೆ. ಆದರೆ ಹೆಣ್ಣು ಗಂಡನ್ನು ಹಿಡಿಯಲು ಯತ್ನಿಸುವುದಿಲ್ಲ. ಕೊನೆಗೆ ಗಂಡು ಹೆಣ್ಣು ಜೇಡನ್ನು ಸಂಪರ್ಕಿಸಿ ಅದರ ರೇತಸ್ಸಿನ ಪಾತ್ರೆಯಲ್ಲಿ ತನ್ನ ವೀರ್ಯದ ಚಂಡನ್ನು ಸೇರಿಸಿ ಹೋಗಲೆತ್ನಿಸುತ್ತದೆ. ಆದರೆ ಹೆಣ್ಣು ಜೇಡವು ಆ ಗಂಡು ಜೇಡವನ್ನು ಹಿಡಿದು ತಿಂದುಬಿಡುತ್ತದೆ. ನಂತರ ಹೆಣ್ಣು ಜೇಡವು ಮೊಟ್ಟೆಗಳನ್ನಿಟ್ಟು ಅವುಗಳ ಸುತ್ತಲೂ ಒಂದು ಕವಚವನ್ನು ಹೆಣೆಯುತ್ತದೆ.

**f)** ಕಣ್ಣಿನ ಗುಡ್ಡೆಯಲ್ಲಿರುವ ಐರಿಸ್ ಕೃಷ್ಣಪಟಲ ನಿರ್ವಹಿಸುವ ಕಾರ್ಯವೇನು ?

**ಉತ್ತರ :** ಕಣ್ಣಿನ ಮುಂಭಾಗದಲ್ಲಿರುವ ಐರಿಸ್ [ಕೃಷ್ಣ ಪಟಲ]ವು ಕಣ್ಣಿಗೆ ಬಣ್ಣವನ್ನು ಕೊಡುತ್ತದೆ. ನೋಡಲು ಅಂದವಾಗಿ ಕಾಣುತ್ತದೆ.

**g)** ಪ್ಲಾಸ್ಮಾ ದ್ರವದಲ್ಲಿರುವ ಫೈಬ್ರಿನೋಜನ್‌ನ ಕಾರ್ಯವೇನು ?

**ಉತ್ತರ :** ರಕ್ತವು ಹೆಪ್ಪುಗಟ್ಟಲು ಸಹಾಯ ಮಾಡುತ್ತದೆ.

**ಪ್ರಶ್ನೆ 12.** ಕೆಳಗಿನ ಒಂದೊಂದು ಪ್ರಾಣಿಯೂ ಯಾವ ಪ್ರಾಣಿ ವಂಶಕ್ಕೆ ಸೇರಿದೆ ತಿಳಿಸಿ. a) ಜಿರಲೆ, b) ಜಗಣಿ,

**ಉತ್ತರ :** ನಾಲ್ಕು ಸಾವಯುವ ಆಮ್ಲಗಳು : 1] ಅಸಿಟಿಕ್ ಆಮ್ಲ, 2] ಬೆಂಜೋಯಿಕ್ ಆಮ್ಲ, 3] ಟಾರ್ಟಾರಿಕ್ ಆಮ್ಲ, 4] ಸ್ಯಾಲಿಸಿಲಿಕ್ ಆಮ್ಲ.

b] ಪ್ರಬಲ ಸಲ್ಫ್ಯೂರಿಕ್ ಆಮ್ಲವನ್ನು ಸಕ್ಕರೆಗೆ ಸೇರಿಸಿದರೆ, ಸಕ್ಕರೆಯು ಸುಟ್ಟು ಕಪ್ಪಾಗುವುದು. ಕಾರಣವೇನು ?

**ಉತ್ತರ :** ಪ್ರಬಲ ಸಲ್ಫ್ಯೂರಿಕ್ ಆಮ್ಲವು ಸಕ್ಕರೆಯೊಳಗಿನ ಜಲಜನಕ ಆಮ್ಲಜನಕಗಳನ್ನು ನೀರಿನ ರೂಪದಲ್ಲಿ ಹೀರಿಕೊಳ್ಳುವುದು. ಆದರಿಂದ ಶಾಖವು ಬಿಡುಗಡೆಯಾಗುವುದಲ್ಲದೆ, ಸಕ್ಕರೆಯಲ್ಲಿಯ ಇಂಗಾಲವು ಮಾತ್ರ ಉಳಿಯುವುದು. ಆದರಿಂದ ದ್ರಾವಣವು ಕಪ್ಪುಬಣ್ಣದ್ದಾಗುವುದು.

**ಪ್ರಶ್ನೆ 12.** a] ಪೆಟ್ರೋ ರಾಸಾಯನಿಕಗಳೆಂದರೇನು? ಯಾವುದಾದರೂ ಎರಡು ಉದಾಹರಣೆ ಕೊಡಿ.

**ಉತ್ತರ : ಪೆಟ್ರೋ ರಾಸಾಯನಿಕಗಳು :** ಮೊದಲು ನೈಸರ್ಗಿಕ ಆಕರಗಳಿಂದ ದೊರೆಯುತ್ತಿದ್ದ ಕೆಲವು ವಸ್ತುಗಳನ್ನು ಈಗ ಪೆಟ್ರೋಲಿಯಂನಿಂದ ಉಂಟಾದ ವಸ್ತುಗಳಿಂದ ತಯಾರಿಸುತ್ತಾರೆ. ಕೈಗಾರಿಕೆಗಳಲ್ಲಿ ಈ ವಸ್ತುಗಳನ್ನು ಪೆಟ್ರೋ ರಾಸಾಯನಿಕಗಳೆನ್ನುವರು.

ಉದಾ : ಪ್ಲಾಸ್ಟಿಕ್ ಮತ್ತು ಕ್ರಿಮಿನಾಶಕಗಳು.

b) ಅಲ್ಯುಮಿನಿಯಂ ಲೋಹದ ಯಾವುದಾದರೂ ಎರಡು ಮಿಶ್ರಲೋಹಗಳನ್ನು ಬರೆಯಿರಿ.

**ಉತ್ತರ :** 1] ಮ್ಯಾಗ್ನಾಲಿಯಂ,
2] ಡ್ಯುರಾಲ್ಯುಮಿನ್.

**ಪ್ರಶ್ನೆ 13.** a) ಪಾಲಿಸ್ಯಾಕರೈಡುಗಳು [ಬಹು ಶರ್ಕರಿಗಳು] ಹೇಗೆ ಉಂಟಾಗುತ್ತವೆ ? ಯಾವುದಾದರೂ ಎರಡು ಸಾಮಾನ್ಯ ಉದಾಹರಣೆಗಳನ್ನು ಕೊಡಿ.

**ಉತ್ತರ :** ಏಕಶರ್ಕರಿಗಳ ಅನೇಕ ಅಣುಗಳು ಸಂಯೋಗ ಹೊಂದಿ ಸ್ವಲ್ಪ ಪ್ರಮಾಣದ ನೀರನ್ನು ಹೊರಗೆ ಹಾಕುವುದರಿಂದ ಬಹುಶರ್ಕರಿಗಳು ಉತ್ಪನ್ನವಾಗುವವು.

ಉದಾ : ಪಿಷ್ಟ, ಸೆಲ್ಯುಲೋಸ್.

b) ಕಬ್ಬಿಣವನ್ನು ಗಂಧಕದೊಡನೆ ಕಾಯಿಸಿದಾಗ, ಉತ್ಪನ್ನವಾಗುವ ವಸ್ತುವನ್ನು ವಿವರಿಸಿ.

**ಉತ್ತರ :** ಕಬ್ಬಿಣವನ್ನು ಗಂಧಕದೊಡನೆ ಕಾಯಿಸಿದಾಗ ಅವು ರಾಸಾಯನಿಕ ಸಂಯೋಗ ಹೊಂದಿ ಕಬ್ಬಿಣದ ಸಲ್ಫೈಡ ಎಂಬ ಸಂಯುಕ್ತ ವಸ್ತು ದೊರೆಯುವುದು.

**ಏಲರಿ ಸ್ನಾಯುಗಳ ಕಾರ್ಯ :** ಚಿರಲೆಯ ಕೋಣ್ಣಯಾಕಾರದ ಹೃದಯವು ದೇಹದ ಮೇಲ್ಗೋಡೆಯ ಕೆಳಗೆ ಇರುತ್ತದೆ. ಹೃದಯದ ಎರಡೂ ಬದಿಗಳಲ್ಲಿಯೂ ತ್ರಿಕೋಣಾಕಾರದ ಏಲರಿ ಸ್ನಾಯುಗಳಿರುತ್ತವೆ. ಹೃದಯವು 13 ಕೋಣೆಗಳಲ್ಲಿ ವಿಭಾಗಿಸಲ್ಪಟ್ಟಿದೆ, ಏಲರಿ ಸ್ನಾಯುಗಳು ಸಂಕುಚಿಸಿದಾಗ, ಹೃದಯದ ಗೋಡೆಗಳು ಹೊರಮುಖವಾಗಿ ಎಳೆಯಲ್ಪಟ್ಟು ಹೃದಯವು ವಿಕಾಸವಾಗುವುದು. ಇದರಿಂದ ರಕ್ತವು ಹೃದಯವನ್ನು ಪ್ರವೇಶಿಸುವುದು. ಸ್ನಾಯುಗಳು ವಿಕಾಸವಾದಾಗ ರಕ್ತವು ಅಯೋರ್ಟಾದ ಮೂಲಕ ಮುಂದಕ್ಕೆ ತಳ್ಳಲ್ಪಡುವದು.

**ಪ್ರಶ್ನೆ 7.** ಜೀವಿಗಳ ದೇಹದ ಅಂಗಾಂಶಗಳ ಚಯಾಪಚಯ ಕ್ರಿಯೆ ನಡೆಯುವಾಗ ಉತ್ಪತ್ತಿಯಾಗುವ ಅನುಪಯುಕ್ತ ವಸ್ತುಗಳನ್ನು ಹೆಸರಿಸಿ.

**ಉತ್ತರ :** ಚಯಾಪಚಯ ಕ್ರಿಯೆಯಿಂದ ಉತ್ಪನ್ನವಾಗುವ ಅನುಪಯುಕ್ತ ವಸ್ತುಗಳು : ಇಂಗಾಲದ ಡೈಆಕ್ಸೈಡ್, ನೀರು, ಲವಣಗಳು, ಯುರಿಯಾ ಯುರಿಕ್ ಆಮ್ಲಗಳು, ಅಮೋನಿಯಾ ಮುಂತಾದವುಗಳು.

**ಪ್ರಶ್ನೆ 8.** ವಾಯು ಮಂಡಲದ ಸಾರಜನಕವನ್ನು ಸ್ಥಿರಗೊಳಿಸಲು ಮಿಂಚು ಹೇಗೆ ಸಹಾಯಕವಾಗಿದೆ ? ವಿವರಿಸಿ.

**ಉತ್ತರ :** ಮಿಂಚಿದಾಗ ವಾಯು ಮಂಡಲದಲ್ಲಿಯ ಸಾರಜನಕ ಆಮ್ಲಜನಕಗಳು ಸಂಯೋಗಗೊಂಡು ನೈಟ್ರಿಕ್ ಆಕ್ಸೈಡ (NO) ಉತ್ಪನ್ನವಾಗುವದು. ಇದು ಗಾಳಿಯಲ್ಲಿಯ ಹೆಚ್ಚಿನ ಆಮ್ಲಜನಕದೊಡನೆ ಸಂಯೋಗ ಹೊಂದಿ ನೈಟ್ರೋಜನ್ ಪೆರಾಕ್ಸೈಡ ($NO_2$) ಆಗುವುದು. ಇದು ಮಳೆಯ ನೀರಿನಲ್ಲಿ ಕರಗಿ ನೈಟ್ರಸ್ ಆಮ್ಲ ಮತ್ತು ನೈಟ್ರಿಕ್ ಆಮ್ಲಗಳು ಉತ್ಪನ್ನವಾಗುವವು. ಈ ಆಮ್ಲಗಳು ಭೂಮಿಯಲ್ಲಿಯ ಲವಣಗಳೊಡನೆ ವರ್ತಿಸಿ ನೈಟ್ರೈಟ್ ಮತ್ತು ನೈಟ್ರೇಟ್‌ಗಳಾಗಿ ಪರಿವರ್ತನಗೊಳ್ಳುವವು. ಈ ರೀತಿಯಾಗಿ ವಾಯುಮಂಡಲದಲ್ಲಿಯ ಸಾರಜನಕವು ಸ್ಥಿರೀಕರಿಸಲ್ಪಡುವುದು.

**ಪ್ರಶ್ನೆ 9.** ಜೇನು ಗೂಡಿನಲ್ಲಿ ಕಾರ್ಮಿಕ ಜೇನುಗಳು ನಿರ್ವಹಿಸುವ ನಾಲ್ಕು ವಿವಿಧ ಕೆಲಸಗಳಾವವು ?

**ಉತ್ತರ :** ಕಾರ್ಮಿಕ ಜೇನಿನ ನಾಲ್ಕು ಕೆಲಸಗಳು : 1) ಗೂಡಿನಲ್ಲಿಯ ಇತರ ಜೇನುಗಳಿಗೆ ಪರಾಗ ಮತ್ತು ಮಧುರಸವನ್ನು ಪೂರೈಸುವುದು, 2) ಗೂಡಿನಲ್ಲಿಯ ಕಶ್ಮಲಗಳನ್ನು ಹೊರಗೆ ಹಾಕುವುದು, 3) ಗೂಡುಗಳನ್ನು ಸದಾ ಕಾಯುವುದು, 4) ಗೂಡಿನೊಳಗೆ ಗಾಳಿಯನ್ನು ಬೀಸುವುದು.

**ಪ್ರಶ್ನೆ 10.** ಹೈಡ್ರಾ ಪ್ರಾಣಿಗೆ ಸಾಗಾಣಿಕಾ ವ್ಯೂಹ ಬೇಕಾಗಿಲ್ಲ. ಏತಕ್ಕಾಗಿ ?

**ಉತ್ತರ :** ಹೈಡ್ರಾದಲ್ಲಿ ಜೀವಕೋಶಗಳು ನೇರವಾಗಿ ಬಾಹ್ಯ ಮಧ್ಯವರ್ತಿಯಾದ ನೀರಿನ ಸಂಪರ್ಕವನ್ನು ಹೊಂದಿವೆ. ಆದ್ದರಿಂದ ಅನಿಲ ಮತ್ತು ತ್ಯಾಜ್ಯ ವಸ್ತುಗಳು ವಿಸರಣ ಕ್ರಿಯೆಯ ಮೂಲಕ ವಿನಿಮಯವಾಗುತ್ತವೆ. ಇವರಲ್ಲಿ ಜೀರ್ಣ ಕ್ರಿಯೆಯು ಕೋಶಬಾಹ್ಯ ಮತ್ತು ಅಂತರ್ಕೋಶವಾಗಿರುವುದು. ಒಳಪದರದಿಂದ ಹೊರಪದರಕ್ಕೆ ಜೀರ್ಣಿಸಿದ ಆಹಾರವು ವಿಸರಣಗೊಳ್ಳುವುದು. ಆದ್ದರಿಂದ ಹೈಡ್ರಾ ಇದಕ್ಕೆ ಸಾಗಾಣಿಕಾ ವ್ಯೂಹ ಬೇಕಾಗಿಲ್ಲ.

**ಪ್ರಶ್ನೆ 11.** a) ಲ್ಯೂಕಿಮಿಯಾ ರೋಗ ಉಂಟಾಗಲು ಕಾರಣವೇನು ?

**ಉತ್ತರ :** ಲ್ಯೂಕಿಮಿಯಾ ಅಂದರೆ ರಕ್ತದ ಕ್ಯಾನ್ಸರ ರೋಗ. ಅಸ್ಥಿಮಜ್ಜೆಯಲ್ಲಿ ಬಿಳಿಯ ರಕ್ತಕಣಗಳು ಹತೋಟಿ ಮೀರಿ ಉತ್ಪತ್ತಿಯಾದರೆ, ಲ್ಯೂಕಿಮಿಯಾ ಅಥವಾ ರಕ್ತದ ಕ್ಯಾನ್ಸರ ರೋಗ ಉಂಟಾಗುವದು.

b) ತದ್ರೂಪ ಅವಳಿಗಳೆಂದರೇನು ? ಹಾಗೆ ಕರೆಯಲು ಕಾರಣವೇನು ?

**ಉತ್ತರ : ತದ್ರೂಪ ಅವಳಿಗಳು :** ಒಂದೇ ಸೈಗೋಟಿನಿಂದ ರೂಪುಗೊಂಡ ಅವಳಿಗಳನ್ನು ತದ್ರೂಪ ಅವಳಿಗಳೆನ್ನುವರು. ಇಲ್ಲಿ ಒಂದೇ ಒಂದು ಸೈಗೋಟಿನಿಂದ ಎರಡು ಭ್ರೂಣಗಳು ಬೆಳೆಯುವುದರಿಂದ ಎರಡಕ್ಕೂ ಒಂದೇ ಅನುವಂಶೀಯ ರಚನೆ ಇರುತ್ತದೆ. ಆದ್ದರಿಂದ ತದ್ರೂಪ ಅವಳಿಗಳು ಒಂದನ್ನೊಂದು ಪೂರ್ಣವಾಗಿ ಹೋಲುವವು. ಆದ್ದರಿಂದ ಅವುಗಳನ್ನು ತದ್ರೂಪ ಅವಳಿಗಳೆಂದು ಕರೆಯುವರು.

c) ಹೀಮೋಸೀಲ್ ಎಂದರೇನು ? ಅದರಲ್ಲಿ ತುಂಬಿರುವ ದ್ರವದ ಕಾರ್ಯಗಳನ್ನು ತಿಳಿಸಿ.

**ಉತ್ತರ :** ಜಿರಲೆಯಲ್ಲಿ ತೆರೆದ ಸಾಗಾಣಿಕಾ ವ್ಯೂಹವಿರುತ್ತದೆ. ದೇಹದ ಅವಕಾಶವು ರಕ್ತದಿಂದ ತುಂಬಿರುತ್ತದೆ. ಮತ್ತು ದೇಹದ ಒಳ ಅಂಗಗಳನ್ನೆಲ್ಲಾ ಆವರಿಸಿದೆ. ಈ ರೀತಿಯಾಗಿ ರಕ್ತದಿಂದ ಕೂಡಿದ ದೇಹಾವಕಾಶವನ್ನು ರಕ್ತದೇಹಾವಕಾಶ ಅಥವಾ ಹೀಮೋಸೀಲ್ ಎನ್ನುವರು.

ಜಿರಲೆಯ ರಕ್ತಕ್ಕೆ ಬಣ್ಣವಿಲ್ಲ. ಆದ್ದರಿಂದ ರಕ್ತವು ಶ್ವಾಸ ಕಾರ್ಯದಲ್ಲಿ ಭಾಗಿಯಾಗುವುದಿಲ್ಲ. ಆದರೆ ಆಹಾರ ವಸ್ತುಗಳನ್ನೂ, ರಸವಿಶೇಷಗಳನ್ನೂ ದೇಹದ ತುಂಬೆಲ್ಲ ಸಾಗಿಸಿ ಕಶ್ಮಲಗಳನ್ನು ಹೊರಗೆ ಹಾಕುವುದು.

d) ಜೈವಿಕ ನಿಯಂತ್ರಣ ಎಂದರೇನು ? ಇದಕ್ಕಾಗಿ ಮಾನವನು ಅನುಸರಿಸಬೇಕಾದ ಕ್ರಮ ಯಾವುದು ?

**ಉತ್ತರ : ಜೈವಿಕ ನಿಯಂತ್ರಣ :** ಒಂದು ಜೀವಿಯಿಂದ ಆಗುವ ಮತ್ತೊಂದು ಜೀವಿಯ ನಿಯಂತ್ರಣವನ್ನು ಜೈವಿಕ ನಿಯಂತ್ರಣ ಎನ್ನುವರು.

ಜೈವಿಕ ನಿಯಂತ್ರಣದಲ್ಲಿ ಮಾನವನು ಕೆಲವು ನೈಸರ್ಗಿಕ ಶತ್ರುಗಳನ್ನು ಬೆಳೆಸಿ ಅವುಗಳನ್ನು ಎಲ್ಲೆಡೆ ಹರಡಬೇಕು.

e) ಕಪ್ಪೆ ಅಥವಾ ಜೇಡದ ಸಂತಾನೋತ್ಪತ್ತಿ ಮಾಡುವಿಯನ್ನು ವಿವರಿಸಿ.

**ಉತ್ತರ :** ಸಂತಾನೋತ್ಪತ್ತಿಗೆ ಯೋಗ್ಯವಾದ ಹೆಣ್ಣು ಜೇಡವು ತನ್ನಗೂಡಿನ ಮಧ್ಯದಲ್ಲಿ ಕುಳಿತು ಗಂಡು ಜೇಡಕ್ಕಾಗಿ ಕಾಯುತ್ತಿರುತ್ತದೆ. ಅದು ಗೂಡಿನ ಒಂದು ಎಳೆಯನ್ನು ಹೊರ ಸೂಸುತ್ತದೆ. ಗಂಡು ಈ ಎಳೆಯನ್ನು ಮುಟ್ಟಿ ಅದರಗುಂಟ ಹೆಣ್ಣಿನತ್ತ ಜಾಗರೂಕತೆಯಿಂದ ಸಾಗುತ್ತದೆ. ಆ ಸಂದರ್ಭಕ್ಕೆ ಸಿದ್ಧವಾಗಿ ಗಂಡು ತನ್ನ ಜನನಾಂಗದಿಂದ ವೀರ್ಯದ ಚಂಡೊಂದನ್ನು ತೆಗೆದಿರಿಸಿಕೊಂಡಿರುತ್ತದೆ. ಅದು ಅನೇಕ ಸಲ ಹೆಣ್ಣಿನ ಹತ್ತಿರ ಹೋಗಿ ಹಿಂದಿರುಗುತ್ತದೆ. ಆದರೆ ಹೆಣ್ಣು ಗಂಡನ್ನು ಹಿಡಿಯಲು ಯತ್ನಿಸುವುದಿಲ್ಲ. ಕೊನೆಗೆ ಗಂಡು ಹೆಣ್ಣು ಜೇಡನ್ನು ಸಂಪರ್ಕಿಸಿ ಅದರ ರೇತಸ್ಸಿನ ಪಾತ್ರೆಯಲ್ಲಿ ತನ್ನ ವೀರ್ಯದ ಚಂಡನ್ನು ಸೇರಿಸಿ ಹೋಗಲೆತ್ನಿಸುತ್ತದೆ. ಆದರೆ ಹೆಣ್ಣು ಜೇಡವು ಆ ಗಂಡು ಜೇಡವನ್ನು ಹಿಡಿದು ತಿಂದುಬಿಡುತ್ತದೆ. ನಂತರ ಹೆಣ್ಣು ಜೇಡವು ಮೊಟ್ಟೆಗಳನ್ನಿಟ್ಟು ಅವುಗಳ ಸುತ್ತಲೂ ಒಂದು ಕವಚವನ್ನು ಹೆಣೆಯುತ್ತದೆ.

f) ಕಣ್ಣಿನ ಗುಡ್ಡೆಯಲ್ಲಿರುವ ಐರಿಸ್ ಕೃಷ್ಣಪಟಲ ನಿರ್ವಹಿಸುವ ಕಾರ್ಯವೇನು ?

**ಉತ್ತರ :** ಕಣ್ಣಿನ ಮುಂಭಾಗದಲ್ಲಿರುವ ಐರಿಸ್ [ಕೃಷ್ಣ ಪಟಲ]ವು ಕಣ್ಣಿಗೆ ಬಣ್ಣವನ್ನು ಕೊಡುತ್ತದೆ. ನೋಡಲು ಅಂದವಾಗಿ ಕಾಣುತ್ತದೆ.

g) ಪ್ಲಾಸ್ಮಾ ದ್ರವದಲ್ಲಿರುವ ಫೈಬ್ರಿನೋಜನ್‌ನ ಕಾರ್ಯವೇನು ?

**ಉತ್ತರ :** ರಕ್ತವು ಹೆಪ್ಪುಗಟ್ಟಲು ಸಹಾಯ ಮಾಡುತ್ತದೆ.

**ಪ್ರಶ್ನೆ 12.** ಕೆಳಗಿನ ಒಂದೊಂದು ಪ್ರಾಣಿಯೂ ಯಾವ ಪ್ರಾಣಿ ವಂಶಕ್ಕೆ ಸೇರಿದೆ ತಿಳಿಸಿ. a) ಜಿರಲೆ, b) ಜಿಗಣೆ,

c) ಜಂತು ಹುಳು, d) ಬಸವನ ಹುಳು e) ನಕ್ಷತ್ರ ಮೀನು.

**ಉತ್ತರ :** a] ಜಿರಲೆ–ಸಂಧಿಪದಿ
b] ಜಿಗಣೆ–ವಲಯ ವಂತಗಳು
c] ಜಂತು ಹುಳು–ಆಸ್ಕೆಲ್ಮಿಂಥಿಸ್
d] ಬಸವನ ಹುಳು– ಮೃದ್ವಂಗಿಗಳು
e] ನಕ್ಷತ್ರ ಮೀನು– ಕಂಟಕ ಚರ್ಮಿಗಳು

**ಪ್ರಶ್ನೆ 13.** ಸೂಕ್ತವಾದ ಪದಗಳಿಂದ ಒಂದೊಂದು ವಾಕ್ಯವನ್ನು ಪೂರ್ತಿಗೊಳಿಸಿ (ಪೂರ್ತಿಗೊಳಿಸಿ ಬರೆದಿದೆ, ದಪ್ಪಕ್ಷರದ ಪದವು ತುಂಬಿದ ಪದವು)

**ಉತ್ತರ :** a] ಮನುಷ್ಯನ ವೈಜ್ಞಾನಿಕ ಹೆಸರು **ಹೋಮೋಸೆಪಿಯನ್**.
b] ಮೊಟ್ಟೆ ಹಾಕುವ ಒಂದು ಸಸ್ತನಿ **ಪ್ಲಾಟಿಪಸ್**.
c] ಎಲೆಯಲ್ಲಿ **ಪತ್ರ ಹರಿತು (ಕ್ಲೋರೋಫಿಲ್)** ಇರುವುದರಿಂದ ಹಸಿರಾಗಿದೆ.
d) **ಮೈಟೊಕಾಂಡ್ರಿಯ** ಜೀವಕೋಶದ ಶಕ್ತಿ ಉತ್ಪಾದನಾ ಕೇಂದ್ರ.
e] ಜೀವ ವಸ್ತುಗಳ ವರ್ಗೀಕರಣದ ಪಿತಾಮಹನೆಸಿದ ವಿಜ್ಞಾನಿ **ಕರೋಲಸ್ ಲಿನಿಯಸ್**.

**ಪ್ರಶ್ನೆ 14:** ಕೆಳಗಿನ ಒಂದೊಂದು ಉಪ ಪ್ರಶ್ನೆಯಲ್ಲಿ ಕೊಟ್ಟಿರುವ ಜೋಡಿಗಳಲ್ಲಿ ಒಂದು ಮುಖ್ಯವ್ಯತ್ಯಾಸವನ್ನು ತಿಳಿಸಿ.

a) ಏಕದಳ ಬೇರಿನ ಸಮೂಹ, ದ್ವಿದಳ ಬೇರಿನ ಸಮೂಹ.

**ಉತ್ತರ :** ಏಕದಳ ಸಸ್ಯದ ಬೇರಿನ ಸಮೂಹವು ತಂತು ಬೇರುಗಳಾಗಿದ್ದು, ದ್ವಿದಳ ಸಸ್ಯದ ಬೇರಿನ ಸಮೂಹದಲ್ಲಿ ತಾಯಿ ಬೇರು ಇರುತ್ತದೆ.

b) XX ವರ್ಣತಂತುಗಳನ್ನು ಹೊಂದಿರುವ ಸೈಗೋಟ್.
XY ವರ್ಣತಂತುಗಳನ್ನು ಹೊಂದಿರುವ ಸೈಗೋಟ್.

**ಉತ್ತರ :** XX ವರ್ಣತಂತುಗಳನ್ನು ಹೊಂದಿರುವ ಸೈಗೋಟ್ ಹೆಣ್ಣು ಮರಿಯನ್ನು ಉತ್ಪತ್ತಿ ಮಾಡಿದರೆ, XY ವರ್ಣತಂತುಗಳನ್ನು ಹೊಂದಿರುವ ಸೈಗೋಟ್ ಗಂಡು ಮರಿಯನ್ನು ಉತ್ಪತ್ತಿ ಮಾಡುವುದು.

c]· ಮೈಟಾಸಿಸ್ ಕೋಶವಿಭಜನೆ ಮತ್ತು ಮಿಯಾಸಿಸ್ ಕೋಶವಿಭಜನೆ.

**ಉತ್ತರ :** ಮೈಟಾಸಿಸ್ ಕೋಶ ವಿಭಜನೆಯಲ್ಲಿ ಅನುವಂಶೀಯವಾಗಿರುವ ಪಿತೃಕೋಶಕ್ಕೆ ಅನುರೂಪವಾಗಿರುವ ಮರಿ ಕೋಶಗಳು ಉತ್ಪನ್ನವಾಗುವವು. ಆದರೆ ಮಿಯಾಸಿಸ್‌ನಲ್ಲಿ ಕೋಶವಿಭಜನೆಯಿಂದ ಕ್ರೋಮೋಸೋಮ್‌ಗಳ ಸಂಖ್ಯೆಯು ಅರ್ಧಕ್ಕೆ ಇಳಿಯುವುದು.

d) ಅಂಗ ಮತ್ತು ಅಂಗವ್ಯೂಹ.

**ಉತ್ತರ :** ಒಂದು ನಿರ್ದಿಷ್ಟ ಕಾರ್ಯವನ್ನು ಮಾಡುವ ಭಾಗವನ್ನು ಅಂಗ ಎನ್ನುವರು. ಇಂತಹ ಅನೇಕ ಅಂಗಗಳು ಸೇರಿ ದೇಹದಲ್ಲಿ ಒಂದು ನಿರ್ದಿಷ್ಟ ಕಾರ್ಯವನ್ನು ಮಾಡುತ್ತವೆ. ಇಂತಹ ಅಂಗಗಳ ಗುಂಪನ್ನು ಅಂಗವ್ಯೂಹ ಎನ್ನುವರು.

---

# ವಿಜ್ಞಾನ

## ಅಕ್ಟೋಬರ್ 1984 — 1 ನೇ ಪತ್ರಿಕೆ

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : $2\frac{1}{2}$ ಗಂಟೆ ] [ ಗುಣಗಳು : 65

**ಪ್ರಶ್ನೆ 1. a)** ನೀಟಾದ ಆಕೃತಿಯೊಂದಿಗೆ ವಿದ್ಯುತ್ ತಂತುದೀಪ ವಿವರಿಸಿ. ಅದು ಹೇಗೆ ಪ್ರಕಾಶ ಕೊಡುವುದು ? ಅದರಲ್ಲಿ ಜಡ ಅನಿಲ ಏಕೆ ತುಂಬುವರು ?



**ಉತ್ತರ :** ವಿದ್ಯುದ್ದೀಪದಲ್ಲಿ ಸಾಮಾನ್ಯವಾಗಿ ಟಂಗಸ್ಟನ್ ತಂತಿಯನ್ನು ಉಪಯೋಗಿಸುತ್ತಾರೆ. ಉದ್ದವಾದ ತಂತಿಯನ್ನು ಸುರುಳಿಯಂತೆಮಾಡಿ ವಿದ್ಯುದ್ದೀಪದ ಹೊರಗಡೆ ಇರುವ ಎರಡು ವಿದ್ಯುದ್ದ್ವಾರಗಳಿಗೆ ಎರಡು ತಾಮ್ರದ ತಂತಿಗಳ ಮೂಲಕ ಜೋಡಿಸುವರು. ತಂತಿಯ ಈ ಸುರುಳಿಯು ಗಾಜಿನ ಬುರುಡೆಯಲ್ಲಿ ಬರುವಂತೆ ಅಳವಡಿಸುವರು. ನಂತರ ಗಾಜಿನ ಬುರುಡೆಯಲ್ಲಿಯ ಗಾಳಿಯನ್ನು ಹೊರತೆಗೆದು, ಅದರಲ್ಲಿ ಜಡ ಅನಿಲವನ್ನು ತುಂಬಿ, ಬುರುಡೆಯನ್ನು ವಾಯುಬದ್ಧ ಮಾಡುವರು.

ವಿದ್ಯುದ್ದ್ವಾರಗಳ ಮೂಲಕ ವಿದ್ಯುತ್ ಪ್ರವಾಹವನ್ನು ಹರಿಸಲು, ಟಂಗ್‌ಸ್ಟನ್ ತಂತಿಯು ಪ್ರವಾಹಕ್ಕೆ ಹೆಚ್ಚು ರೋಧವನ್ನುಂಟು ಮಾಡುವುದರಿಂದ, ಅದು ಹೆಚ್ಚು ಉಷ್ಣತೆಯವರೆಗೆ ಕಾಯ್ದು ಪ್ರಕಾಶವನ್ನು ಕೊಡುತ್ತದೆ.

ಒಂದು ವೇಳೆ ಬುರುಡೆಯಲ್ಲಿ ಗಾಳಿ ಇದ್ದದ್ದಾದರೆ ತಂತುವು ಹೆಚ್ಚಿನ ಉಷ್ಣತೆಯಲ್ಲಿ ಗಾಳಿಯಲ್ಲಿಯ ಆಮ್ಲಜನಕದೊಡನೆ ಸೇರಿ ಆಕ್ಸೈಡ್ ಆಗಿ ದೀಪವು ನಿರುಪಯೋಗಿಯಾಗುತ್ತಿತ್ತು. ಈ ಉತ್ಕರ್ಷಣವನ್ನು ತಪ್ಪಿಸಲು ಬುರುಡೆಯನ್ನು ನಿರ್ವಾತ ಮಾಡಿ ಅದರಲ್ಲಿ ಜಡ ಅನಿಲಗಳಾದ ಸಾರಜನಕ ಇಲ್ಲವೆ ಅರ್ಗಾನನ್ನು ತುಂಬುವರು.

ಇದರಿಂದ ಬುರುಡೆಯ ಒಳಗಿನ ಮತ್ತು ಹೊರಗಿನ ಅನಿಲಗಳ ಒತ್ತಡಗಳು ಪರಸ್ಪರ ಸಮವಾಗುವವು.

b) ರೇಡಾರ್ ಎಂದರೇನು ? ಅದು ಹೇಗೆ ಕಾರ್ಯ ಮಾಡುತ್ತದೆ ?

**ಉತ್ತರ :** ಅತಿ ದೂರದಲ್ಲಿರುವ ವಸ್ತುಗಳನ್ನು ಪತ್ತೆ ಮಾಡುವ, ಅವುಗಳು ಇರುವ ದಿಕ್ಕು ಮತ್ತು ವೀಕ್ಷಣಾ ಕೇಂದ್ರದಿಂದ ಅವುಗಳಿಗಿರುವ ದೂರವನ್ನು ನಿಖರವಾಗಿ ಗೊತ್ತುಮಾಡುವ ಸಾಧನವನ್ನು ರೇಡಾರ್ ಎನ್ನುವರು.

**ರೇಡಾರ್‌ದ ಕಾರ್ಯ :** ರೇಡಾರಿನಲ್ಲಿಯ ಪ್ರೇಷಕದಿಂದ ರೇಡಿಯೋ ತರಂಗಗಳ ಸ್ಪಂದನೆಯನ್ನು ವಿಮಾನ ಅಥವಾ ದೂರದ ವಸ್ತುವಿನೆಡೆಗೆ ಕಳಿಸುವರು. ಈ ಸ್ಪಂದನೆ ವಸ್ತುವಿಗೆ ಬಡಿದು ಪ್ರತಿಫಲಿಸಿ ಬಂದ ಸ್ಪಂದನೆಯನ್ನು, ಪ್ರೇಷಕದ ಬದಿಯಲ್ಲಿರುವ ಗ್ರಾಹಕವು ಗ್ರಹಿಸುತ್ತದೆ. ಸ್ಪಂದನೆಯನ್ನು ಕಳಿಸಿದ, ಅದು ತಿರುಗಿ ಬಂದು ಮುಟ್ಟಿದ ಸಮಯಗಳ ವ್ಯತ್ಯಾಸವನ್ನು ಕಂಡು ಹಿಡಿಯುವರು. ರೇಡಿಯೋ ತರಂಗಗಳ ಸ್ಪಂದನೆಯ ವೇಗ ತಿಳಿದಿರುವುದರಿಂದ ವಸ್ತುವು ಇರುವ ದೂರವನ್ನು ನಿಖರವಾಗಿ ಗೊತ್ತುಮಾಡಬಹುದು. ಗ್ರಾಹಕದ ಏರಿಯಲ್‌ದ ಸಹಾಯದಿಂದ ವಸ್ತುವು ಇರುವ ದಿಕ್ಕನ್ನು ಪತ್ತೆಮಾಡಬಹುದು.

c) ಕ್ರಿಯೆ ಮತ್ತು ಪ್ರತಿಕ್ರಿಯೆ ಯಾವಾಗಲೂ ಸಮವಾಗಿದ್ದು ವಿರುದ್ಧ ದಿಕ್ಕಿನಲ್ಲಿರುವವು. ಇದನ್ನು ತೋರಿಸಲು ಎರಡು ಉದಾಹರಣೆ ಕೊಡಿ.

**ಉತ್ತರ :** ಉದಾ : 1) ಬಂದೂಕಿನಿಂದ ಗುಂಡು ಹಾರಿಸಿದಾಗ ಬಂದೂಕು ಹಿಂದಕ್ಕೆ ಸರಿಯುತ್ತದೆ. 2) ಒಂದು ಚೆಂಡನ್ನು ಗಟ್ಟಿಯಾದ ನೆಲಕ್ಕೆ ಅಪ್ಪಳಿಸಿದಾಗ ಚೆಂಡು ಮೇಲಕ್ಕೆ ಪುಟಿಯುತ್ತದೆ.

**ಪ್ರಶ್ನೆ 2.** a) ಗಾಜು ಎಂದರೇನು ? ಸಾಮಾನ್ಯ ಗಾಜನ್ನು ಹೇಗೆ ತಯಾರಿಸುತ್ತಾರೆ ? ಅದಕ್ಕೆ ಬೇಕಾದ ಬಣ್ಣವನ್ನು ಹೇಗೆ ಕೊಡುವರು ?

**ಉತ್ತರ :** ಗಾಜು : ಸಿಲಿಕೇಟುಗಳ ಮಿಶ್ರಣವನ್ನು ಗಾಜು ಎನ್ನುವರು. ಗಾಜನ್ನು ಅತಿ ತಂಪಿತ ದ್ರವ ಎಂತಲೂ ಅನ್ನುವರು.

**ಸಾಮಾನ್ಯ ಗಾಜಿನ ತಯಾರಿಕೆ :** ಬಿಳಿ ಮರಳು 50%, ಸುಣ್ಣದ ಕಲ್ಲು 10%, ವಾಶಿಂಗ ಸೋಡಾ 15% ಮತ್ತು ಗಾಜಿನ ಚೂರು 25% ಇವುಗಳ ಮಿಶ್ರಣವನ್ನು ಕಡಾಯಿ ಕುಲುಮೆಯಲ್ಲಿ ಕಾಸುತ್ತಾರೆ. ಸುಮಾರು 1500°c ಉಷ್ಣತೆಯಲ್ಲಿ ಮಿಶ್ರಣವು ಕರಗಿ ಸೋಡಿಯಮ್ ಸಿಲಿಕೇಟ್ ಮತ್ತು ಕ್ಯಾಲ್ಸಿಯಮ್ ಸಿಲಿಕೇಟ್‌ಗಳ ಮಿಶ್ರಣವಾಗುತ್ತದೆ. ಇವನ್ನೇ ಸಾಮಾನ್ಯ ಗಾಜು ಎನ್ನುವರು.

ಗಾಜಿಗೆ ವಿಶಿಷ್ಟ ಬಣ್ಣ ಕೊಡಲು ದ್ರವರೂಪದಲ್ಲಿರುವ ಗಾಜಿಗೆ ವಿಶಿಷ್ಟವಾದ ಲೋಹದ ಆಕ್ಸೈಡ್‌ಗಳನ್ನು ಸೇರಿಸುವರು.

b) ನೈಲಾನ್ ಎಂದರೇನು ? ಅದರ ಎರಡು ಉಪಯೋಗ ಬರೆಯಿರಿ.

**ಉತ್ತರ : ನೈಲಾನ್ :** ಪಾಲಿ ಅಮೈಡ್‌ಗಳ ಗುಂಪಿಗೆ ಸೇರಿದ ಪ್ಲಾಸ್ಟಿಕ್‌ನ್ನು ನೈಲಾನ್ ಎನ್ನುವರು.

**ಉಪಯೋಗ :** 1) ಬಟ್ಟೆ ತಯಾರಿಕೆಯಲ್ಲಿ, 2) ಟೆನಿಸ್ ರ್‍ಯಾಕೆಟ್‌ಗಳ ಹುರಿಗಳನ್ನು ತಯಾರಿಸಲು ಉಪಯೋಗಿಸುವರು.

c) ದ್ರವರೂಪದಲ್ಲಿರುವ (ಸಾಮಾನ್ಯ ಉಷ್ಣತೆಯಲ್ಲಿ) 2 ಮೂಲ ವಸ್ತುಗಳನ್ನು ಬರೆಯಿರಿ.

**ಉತ್ತರ :** ಬ್ರೋಮಿನ್ ಮತ್ತು ಪಾದರಸಗಳು ಸಾಮಾನ್ಯ ಉಷ್ಣತೆಯಲ್ಲಿ ದ್ರವರೂಪದಲ್ಲಿರುವ ಮೂಲ ವಸ್ತುಗಳು.

**ಪ್ರಶ್ನೆ 3.** a) ರೇಡಿಯೋ ಗ್ರಾಹಕದ ಆಕೃತಿ ತೆಗೆಯಿರಿ. ಭಾಗಗಳನ್ನು ಗುರುತಿಸಿ. ಗ್ರಾಹಕದ ಕಾರ್ಯವೇನು ?




**ರೇಡಿಯೋ ಗ್ರಾಹಕ**

**ಉತ್ತರ :** ಭಾಗಗಳು : A–ಏರಿಯಲ್, R–ರೇಡಿಯೋ ಆವರ್ತ ಸಂಖ್ಯೆ ವರ್ಧಕ, D–ಡಿಟೆಕ್ಟರ (ಶೋಧಕ), B–ಶ್ರವಣ ಆವರ್ತಕ ಸಂಖ್ಯೆ ವರ್ಧಕ, L–ಧ್ವನಿ ವರ್ಧಕ, E–ಅರ್ಥಿಂಗ್.

**ಗ್ರಾಹಕದ ಕಾರ್ಯ :** ಮಾರ್ಪಡಿಸಿದ (ಪ್ರೇಷಕದಿಂದ ಬಂದ) ತರಂಗವನ್ನು ಗ್ರಾಹಕದ ಏರಿಯಲ್ಲು ಹೀರಿಕೊಂಡಾಗ ಅದರಲ್ಲಿ ಮಾರ್ಪಡಿಸಿದ ತರಂಗಕ್ಕೆ ಅನುರೂಪವಾದ ಅತ್ಯಂತ ಕ್ಷೀಣವಾದ ವಿದ್ಯುತ್ಪ್ರವಾಹವು ಉಂಟಾಗುತ್ತದೆ. ಈ ಕ್ಷೀಣ ತರಂಗವನ್ನು ರೇಡಿಯೋ ಆವರ್ತ ಸಂಖ್ಯೆ ವರ್ಧಕದಲ್ಲಿ ಪ್ರವರ್ಧಿಸಿದ ಬಳಿಕ ಶ್ರವಣ ಆವರ್ತ ಸಂಖ್ಯೆಯ ತರಂಗವನ್ನು ಡಿಟೆಕ್ಟರ (ಶೋಧಕ)ವು ಪ್ರತ್ಯೇಕಿಸುವುದು. ಪ್ರತ್ಯೇಕಗೊಂಡ ಶ್ರವಣ ಆವರ್ತ ತರಂಗವೂ ಸಹ ಕ್ಷೀಣವಾಗಿರುತ್ತದೆ. ಇದನ್ನು ಶ್ರವಣ ಆವರ್ತ ಸಂಖ್ಯೆ ವರ್ಧಕದಲ್ಲಿ ಪ್ರವರ್ಧಿಸಿದ ನಂತರ, ಧ್ವನಿವರ್ಧಕದ ಮೂಲಕ ವರ್ಧಿತ ಶಬ್ದದ ತರಂಗಗಳು ನಮಗೆ ಕೇಳಿಸುವವು.

b) ಮೂಲಕೋಶ, ಸೆಕೆಂಡರಿ ಕೋಶಗಳಾಗಿ ವರ್ಗೀಕರಿಸಿರಿ :

1) ಮೂಲಕೋಶ, 2) ಡೇನಿಯಲ್ ಕೋಶ, 3) ಸೀಸದ ಸಂಚಯ ಕೋಶ, 4) ಶುಷ್ಕಕೋಶ.

**ಉತ್ತರ :** **ಮೂಲಕೋಶ :** 1) ವೋಲ್ಟ್‌ಕೋಶ, 2) ಡೇನಿಯಲ್ ಕೋಶ, 3) ಶುಷ್ಕ ಕೋಶ.

**ಸೆಕೆಂಡರಿಕೋಶ :** 1) ಸೀಸದ ಸಂಚಯ ಕೋಶ.

c) ಒಂದು ವಸ್ತುವು 5 ಸೆಕೆಂಡಿನಲ್ಲಿ 20 ಮೀಟರ್‌ನಿಂದ 50 ಮೀಟರ್ ವೇಗಕ್ಕೆ ಬದಲಿಸುವುದು. ಅದರ ವೇಗೋತ್ಕರ್ಷ ವೆಷ್ಟು ?

ರೀತಿ : ಇಲ್ಲಿ ಆರಂಭದ ವೇಗ $u=20$ ಮೀ/ಸೆ

ಅಂತಿಮ ವೇಗ $v=50$ ಮೀ/ಸೆ

ಕಾಲ ವೇಗ $t=5$ ಸೆಕೆಂಡು

∴ ವಸ್ತುವಿನ ವೇಗೋತ್ಕರ್ಷ $a=\frac{v-u}{t}$

$$=\frac{50-20}{5}=\frac{30}{5}=6 \text{ ಮೀ/ಸೆ}^2$$

∴ ವೇಗೋತ್ಕರ್ಷ=6 ಮೀ/ಸೆ²

**ಪ್ರಶ್ನೆ 4.** a) ರಾಸಾಯನಿಕ ಕ್ರಿಯೆಯ ದರ ಎಂದರೇನು ? (Rate of Chemical reaction) ಸಮಾಂಗೀಯ, ವಿಷಮಾಂಗೀಯ ಕ್ರಿಯೆಗಳ ನಡುವಿನ ಅಂತರವೇನು ? ಪ್ರತಿಯೊಂದಕ್ಕೂ ಒಂದೊಂದು ಉದಾಹರಣೆಯನ್ನು ಕೊಡಿರಿ.

**ಉತ್ತರ :** **ರಾಸಾಯನಿಕ ಕ್ರಿಯೆಯ ದರ :** ಏಕಮಾನ ಕಾಲದಲ್ಲಿ ವಸ್ತುವಿನ ಪ್ರಬಲತೆಯಲ್ಲಿ ಉಂಟಾಗುವ ಬದಲಾವಣೆಯನ್ನು ರಾಸಾಯನಿಕ ಕ್ರಿಯೆಯ ದರ ಎನ್ನುವರು.

$$\text{ಕ್ರಿಯೆಯ ದರ}=\frac{\text{ಪರಿವರ್ತಿಸಲ್ಪಟ್ಟ ವಸ್ತುವಿನ ಪರಿಮಾಣ}}{\text{ಕಾಲ}}$$

**ಸಮಾಂಗೀಯ ಕ್ರಿಯೆ :** ಎಲ್ಲ ಕ್ರಿಯಾವಸ್ತು ಮತ್ತು ಉತ್ಪನ್ನಗಳು ಒಂದೇ ಭೌತಿಕ ಅವಸ್ಥೆಯಲ್ಲಿರುವ ರಾಸಾಯನಿಕ ಕ್ರಿಯೆಯನ್ನು ಸಮಾಂಗೀಯ ಕ್ರಿಯೆ ಎನ್ನುವರು.

ಉದಾ : $N_2 + 3H_2 \rightarrow 2NH_3$ (ಅಮೋನಿಯಾ)
[ಅನಿಲ] [ಅನಿಲ] [ಅನಿಲ]

**ವಿಷಮಾಂಗೀಯ ಕ್ರಿಯೆ :** ಒಂದು ಇಲ್ಲವೆ ಹೆಚ್ಚು ಕ್ರಿಯಾ ವಸ್ತುಗಳು ಇಲ್ಲವೆ ಉತ್ಪನ್ನಗಳು ಬೇರೆ ಬೇರೆ ಭೌತಿಕ ಅವಸ್ಥೆಯಲ್ಲಿರುವ ರಾಸಾಯನಿಕ ಕ್ರಿಯೆಯನ್ನು ವಿಷಮಾಂಗೀಯ ರಾಸಾಯನಿಕ ಕ್ರಿಯೆ ಎನ್ನುವರು.

ಉದಾ : $CaCO_3 \xrightarrow{\text{ಕಾಸಲು}} CaO + CO_2$
[ಘನ] [ಘನ] [ಅನಿಲ]

b) 1. ಮೀಥೇನ್, 2. ಎಥಿಲೀನ್ ಇವುಗಳ ರಚನೆ ತೋರಿಸುವ ಸೂತ್ರಗಳನ್ನು ಬರೆಯಿರಿ.

ಉತ್ತರ : 1) ಮೀಥೇನ್ ($CH_4$)
2) ಎಥಿಲೀನ್ ($C_2H_4$)





c) ಇದ್ದಿಲು ಕಬ್ಬಿಣ ಪುಡಿಗಳ ಮಿಶ್ರಣದಿಂದ ಕಬ್ಬಿಣ ಹೇಗೆ ಬೇರ್ಪಡಿಸುವಿರಿ ?

ಉತ್ತರ : ಇದ್ದಿಲು ಕಬ್ಬಿಣ ಪುಡಿಗಳ ಮಿಶ್ರಣದಲ್ಲಿ ಚೆನ್ನಾಗಿ ಅಯಸ್ಕಾಂತವನ್ನು ಆಡಿಸಬೇಕು. ಆಗ ಕಬ್ಬಿಣದ ಪುಡಿಯು ಅಯಸ್ಕಾಂತಕ್ಕೆ ಅಂಟಿಕೊಳ್ಳುವುದು. ಇದ್ದಲು ಪುಡಿಯು ಹಿಂದೆ ಉಳಿಯುವುದು. ಅಯಸ್ಕಾಂತದಿಂದ ಕಬ್ಬಿಣದ ಪುಡಿಯನ್ನು ಬೇರ್ಪಡಿಸಬೇಕು.

ಪ್ರಶ್ನೆ 5. a) ದಂಡಕಾಂತದ ಸುತ್ತಲೂ ಇರುವ ಕಾಂತೀಯ ಬಲರೇಖೆ ತೋರಿಸುವ ಆಕೃತಿ ಬರೆಯಿರಿ.

ಉತ್ತರ :




b) ಲೋಲಕದ ಆವರ್ತ ಕಾಲದ ಮೇಲೆ ಪರಿಣಾಮ ಮಾಡುವ ಅಂಶ ಯಾವುದು ?

ಉತ್ತರ : ಲೋಲಕದ ಉದ್ದ

ಪ್ರಶ್ನೆ 6. a) ಯಾವ ವಿಶಿಷ್ಟ ಉದ್ದೇಶಕ್ಕಾಗಿ ಕೆಳಗಿನ ಮಿಶ್ರಲೋಹಗಳು ಉಪಯೋಗಿಸಲ್ಪಡುತ್ತವೆ ? (ಒಂದೊಂದು)

1] ಇನ್ವಾರ್, 2] ಸಿಲಿಕಾನ್ ಉಕ್ಕು, 3] ಆಲ್ನಿಕೊ, 4] ಕಂಚು.

ಉತ್ತರ : ಉಪಯೋಗಗಳು :

1] ಇನ್ವಾರ್ : ಗಡಿಯಾರದ ಲೋಲಕ ತಯಾರಿಸಲು ಉಪಯೋಗಿಸುವರು.

2] ಸಿಲಿಕಾನ್ ಉಕ್ಕು : ಟ್ರಾನ್ಸಫಾರ್ಮರ ತಯಾರಿಸಲು ಉಪಯೋಗಿಸುವರು.

3] ಆಲ್ನಿಕೊ : ಸತ್ವಶಾಲಿಯಾದ ಅಯಸ್ಕಾಂತ ತಯಾರಿಸಲು ಉಪಯೋಗಿಸುವರು.

4] ಕಂಚು : ಪದಕ, ಪ್ರತಿಮೆಗಳನ್ನು ತಯಾರಿಸಲು ಉಪಯೋಗಿಸುವರು.

b) ದ್ವಿಶರ್ಕರಿಗಳು ಎಂದರೇನು ? ಒಂದು ಉದಾಹರಣೆ ಕೊಡಿ.

ಉತ್ತರ : ದ್ವಿಶರ್ಕರಿಗಳು : ಎರಡು ಏಕಶರ್ಕರಿ ಅಣುಗಳು ಒಂದು ನೀರಿನ ಅಣುವನ್ನು ಹೊರಹಾಕಿ ಸಂಯೋಗ ಹೊಂದುವುದರಿಂದ ದ್ವಿಶರ್ಕರಿಗಳು ಉತ್ಪನ್ನವಾಗುವವು.

ಉದಾ : ಸುಕ್ರೋಸ್.

ಪ್ರಶ್ನೆ 7. a) ವಿದ್ಯುತ್ ವಾಹಕ ಮತ್ತು ನಿರೋಧಕಗಳಲ್ಲಿಯ ವ್ಯತ್ಯಾಸ ತಿಳಿಸಿ. ಪ್ರತಿಯೊಂದಕ್ಕೂ ಒಂದೊಂದು ಉದಾಹರಣೆ ಕೊಡಿ.

ಉತ್ತರ : ಯಾವ ವಸ್ತುಗಳಲ್ಲಿ ವಿದ್ಯುತ್ಪ್ರವಾಹವು ಹರಿಯುವುದೋ ಆ ವಸ್ತುಗಳು ವಿದ್ಯುತ್ ವಾಹಕಗಳು. ವಿದ್ಯುತ್ ವಾಹಕ ವಸ್ತುಗಳಲ್ಲಿ ಅನೇಕ ಸ್ವತಂತ್ರ ಎಲೆಕ್ಟ್ರಾನುಗಳು ಇರುತ್ತವೆ.

ಉದಾ : ತಾಮ್ರ.

ಯಾವ ವಸ್ತುಗಳಲ್ಲಿ ವಿದ್ಯುತ್ ಪ್ರವಾಹವು ಹರಿಯುವುದಿಲ್ಲವೋ ಆ ವಸ್ತುಗಳು ವಿದ್ಯುತ್ ನಿರೋಧಕಗಳು. ವಿದ್ಯುತ್ ನಿರೋಧಕಗಳಲ್ಲಿ ಸ್ವತಂತ್ರ ಎಲೆಕ್ಟ್ರಾನುಗಳಿರುವುದಿಲ್ಲ.

ಉದಾ : ಒಣ ಮರ [ಕಟ್ಟಿಗೆ]

b] ಕಬ್ಬಿಣದ ಗುಂಡಿನ ಸರಿಯಾದ ವ್ಯಾಸ ಅಳೆಯಲು ಯಾವ ಉಪಕರಣ ಬೇಕು ?

ಉತ್ತರ : ಜಾರುವ ಕ್ಯಾಲಿಪರ್ಸ್.

ಪ್ರಶ್ನೆ 8. a) ನೀರಿನ ಸ್ಥಿರ ಕಠಿಣತ್ವಕ್ಕೆ ಕಾರಣವಾಗುವ ರಾಸಾಯನಿಕ ವಸ್ತುಗಳು ಯಾವವು ?

ಉತ್ತರ : ನೀರಿನ ಸ್ಥಿರ ಕಠಿಣತ್ವಕ್ಕೆ ಕಾರಣವಾಗುವ ವಸ್ತುಗಳು–

ಕ್ಯಾಲ್ಸಿಯಮ್ ಕ್ಲೋರೈಡ್, ಕ್ಯಾಲ್ಸಿಯಮ್ ಸಲ್ಫೇಟ, ಮ್ಯಾಗ್ನೇಷಿಯಂ ಕ್ಲೋರೈಡ್, ಮ್ಯಾಗ್ನೇಷಿಯಮ್ ಸಲ್ಫೇಟ.

b) ಸಾಮಾನ್ಯ ಉಪ್ಪಿನಲ್ಲಿರುವ ಮೂಲ ವಸ್ತುಗಳು ಯಾವುವು ?

**ಉತ್ತರ :** ಸೋಡಿಯಮ್ ಮತ್ತು ಕ್ಲೋರಿನ್.

**ಪ್ರಶ್ನೆ 9.** a) ವಿದ್ಯುತ್ ಪರಿವರ್ತಕ ಎಂದರೇನು ? ಅದರ ಉಪಯೋಗ ಬರೆಯಿರಿ.

**ಉತ್ತರ :** ವಿದ್ಯುತ್ ಪರಿವರ್ತಕ.: ಪರ್ಯಾಯ ವಿದ್ಯುತ್ ಪ್ರವಾಹದ ವೋಲ್ಟತೆಯನ್ನು ವ್ಯತ್ಯಾಸ ಮಾಡುವ ಸಾಧನವನ್ನು ವಿದ್ಯುತ್ಪರಿವರ್ತಕ ಎನ್ನುವರು.

**ಉಪಯೋಗ :** ಮನೆಯ ಉಪಯೋಗಕ್ಕೆ ಬೇಕಾಗುವಂತೆ ವಿದ್ಯುತ್ಪ್ರವಾಹದ ವೋಲ್ಟತೆಯನ್ನು ಕಡಿಮೆಮಾಡಲು ಮತ್ತು ವೋಲ್ಟತೆಯನ್ನು ಹೆಚ್ಚಿಸಲು ಉತ್ಪಾದನಾ ಕೇಂದ್ರಗಳಲ್ಲಿ ಉಪಯೋಗಿಸುವರು.

b) ಒಂದು ವಸ್ತುವು ಗಾಳಿಯಲ್ಲಿ 3 ಗ್ರಾಮ್ ಮತ್ತು ನೀರಿನಲ್ಲಿ 2.5 ಗ್ರಾಂ. ತೂಗಿದರೆ, ವಸ್ತುವಿನ ವಿಶಿಷ್ಟ ಗುರುತ್ವ ಲೆಕ್ಕಹಾಕಿ.

ರೀತಿ : ಗಾಳಿಯಲ್ಲಿ ವಸ್ತುವಿನ ತೂಕ=3 ಗ್ರಾಂ.
ನೀರಿನಲ್ಲಿ ವಸ್ತುವಿನ ತೂಕ=2.5 ಗ್ರಾಂ.

∴ ವಸ್ತುವು ನೀರಿನಲ್ಲಿ ಕಳೆದುಕೊಂಡ ತೂಕ= (3–2.5) ಗ್ರಾಂ. =0.5 ಗ್ರಾಂ.

$$\therefore \text{ವಸ್ತುವಿನ ವಿಶಿಷ್ಟ ಗುರುತ್ವ} = \frac{\text{ಗಾಳಿಯಲ್ಲಿಯ ತೂಕ}}{\text{ನೀರಿನಲ್ಲಿ ಕಳೆದುಕೊಂಡ ತೂಕ}}$$

$$= \frac{3}{0.5} = 6$$

∴ ವಸ್ತುವಿನ ವಿಶಿಷ್ಟ ಗುರತ್ವ=6 Ans.

**ಪ್ರಶ್ನೆ 10.** a) ಸಂಶ್ಲೇಷಿತ ಆರ್ಗ್ಯಾನಿಕ್ ಸಂಯುಕ್ತ ಎಂದರೇನು ? ಒಂದು ಉದಾಹರಣೆ ಕೊಡಿ.

**ಉತ್ತರ : ಸಂಶ್ಲೇಷಿತ ಆರ್ಗ್ಯಾನಿಕ್ ಸಂಯುಕ್ತ :** ಕೃತಕವಾಗಿ ತಯಾರಿಸಿದ ಸಾವಯವ ಸಂಯುಕ್ತ ವಸ್ತುಗಳನ್ನು ಸಂಶ್ಲೇಷಿತ ಆರ್ಗ್ಯಾನಿಕ್ ಸಂಯುಕ್ತಗಳೆನ್ನುವರು.

ಉದಾ : ಮೀಥೈಲ್ ಆಲ್ಕೊಹಾಲನ್ನು ಜಲಾನಿಲ ($CO-H_2$)ವನ್ನು ಅಪಕರ್ಷಿಸಿ ತಯಾರಿಸುವರು.

$$CO\text{-}H_2 \xrightarrow[\text{ವೇಗವರ್ಧಕ}]{H_2} CH_3OH \text{(ಮೀಥೈಲ್ ಆಲ್ಕೋಹಾಲ್)}$$
(ಜಲಾನಿಲ)

b) ನೈಟ್ರೇಟ್ ಮತ್ತು ಅಮೋನಿಯಾ ಇವುಗಳನ್ನು ಹೇಗೆ ಪರೀಕ್ಷಿಸುವಿರಿ ?

**ಉತ್ತರ : ನೈಟ್ರೇಟ್ ಪರೀಕ್ಷೆ :** (ಕಂದು ಉಂಗುರದ ಪರೀಕ್ಷೆ) ನೈಟ್ರೇಟ ಇರುವ ದ್ರಾವಣಕ್ಕೆ ಆದೇ ತಯಾರಿಸಿದ ಫೆರಸ್ ಸಲ್ಫೇಟ ದ್ರಾವಣವನ್ನು ಸೇರಿಸಿ ಚನ್ನಾಗಿ ಕಲುಕಿ. ನಂತರ ಪ್ರನಾಳದ ದಂಡೆಗುಂಟ ನಿಧಾನವಾಗಿ ಪ್ರಬಲ ಗಂಧಕಾಮ್ಲದ ಹನಿಗಳನ್ನು ಬಿಡಿ. ಪ್ರ. ಗಂಧಕಾಮ್ಲವು ಪ್ರನಾಳದ ತಳದಲ್ಲಿ ಸಂಗ್ರಹವಾಗುವುದು. ಪ್ರ. ಗಂಧಕಾಮ್ಲ ಮತ್ತು ದ್ರಾವಣದ ಮಿಶ್ರಣಗಳು ಕೂಡಿದ ಸ್ಥಾನದಲ್ಲಿ ಕಂದು ಬಣ್ಣದ ಉಂಗುರವು ಉತ್ಪನ್ನವಾಗುವುದು. ಇದು ನೈಟ್ರೇಟದ ಪರೀಕ್ಷೆ.

**ಅಮೋನಿಯಾದ ಪರೀಕ್ಷೆ :** ಅಮೋನಿಯಾ ಅನಿಲದಲ್ಲಿ ಪ್ರಬಲ ಹೈಡ್ರೋಕ್ಲೋರಿಕ್ ಆಮ್ಲದಲ್ಲಿ ಅದ್ದಿದ ಗಾಜಿನ ಕಡ್ಡಿಯನ್ನು ಹಿಡಿಯಬೇಕು. ಆಗ ದಟ್ಟವಾದ ಬಿಳಿಯ ಧೂಮವು ಉಂಟಾಗುವುದು. ಇದು ಅಮೋನಿಯಾದ ಪರೀಕ್ಷೆ.

**ಪ್ರಶ್ನೆ 11.** a) ವಾಹಕದ ನಿರೋಧ ಯಾವ ಅಂಶಗಳ ಮೇಲೆ ಅವಲಂಬಿಸಿದೆ.

**ಉತ್ತರ :** ವಾಹಕದ ನಿರೋಧವು ಕೆಳಗಿನ ಅಂಶಗಳ ಮೇಲೆ ಅವಲಂಬಿಸಿದೆ. 1) ವಾಹಕದ ಉದ್ದ, 2) ವಾಹಕದ ಅಡ್ಡಛೇದದ ಖಂಡವಿಸ್ತಾರ [ದಪ್ಪ] 3) ವಾಹಕದ ಉಷ್ಣತೆ 4) ವಾಹಕದ ವಸ್ತು.

b) ಉನ್ನತ ದರ್ಪಣದಲ್ಲಿ ಮೂಡುವ ಪ್ರತಿಬಿಂಬದ ವಿವರ ಏನು ?

**ಉತ್ತರ :** ಉನ್ನತ ದರ್ಪಣದಲ್ಲಿ ಮೂಡುವ ಪ್ರತಿಬಿಂಬವು ಯಾವಾಗಲೂ ವಸ್ತುವಿಗಿಂತ ಚಿಕ್ಕದು, ನೇರವಾದದ್ದು ಮತ್ತು ಮಿಥ್ಯಾ ಇರುವುದು. ವಸ್ತುವಿನ ಬದಿಯಲ್ಲಿಯೇ ಏರ್ಪಡುವುದು.

**ಪ್ರಶ್ನೆ 12.** a) ಕಾಂತತಾ ಮತ್ತು ಕಾಂತತಾ ಹೀನ ವಸ್ತುಗಳಲ್ಲಿಯ ಅಂತರವೇನು ? ಒಂದೊಂದು ಉದಾಹರಣೆ ಕೊಡಿ.

**ಉತ್ತರ :** ಕಾಂತತಾ ವಸ್ತುಗಳು ಕಾಂತದಿಂದ ಆಕರ್ಷಿಸಲ್ಪಡುವವಲ್ಲದೆ, ಕಾಂತಗಳನ್ನು ತಯಾರಿಸಲು ಉಪಯೋಗ

ಉತ್ತರ : a) ಇತ್ತೀಚಿನ ವರ್ಗೀಕರಣದ ಪ್ರಕಾರ ಎಲ್ಲ ಜೀವಿಗಳು ಐದು ರಾಜ್ಯಗಳಾಗಿ ವರ್ಗೀಕರಿಸಲ್ಪಟ್ಟಿವೆ.

b) ಸಾಮಾನ್ಯವಾಗಿ ಮಿಯಾಸಿಸ್ ಕೋಶ ವಿಭಜನೆ ಜನನ ಜೀವಕೋಶಗಳಲ್ಲಿ ಜರುಗುತ್ತದೆ.

c) ರಕ್ತವು ಒಂದು ರೂಪದ ಅಂಗಾಂಶ.

d) ಏಕದಳ ಸಸ್ಯಗಳು ತಂತು ಬೇರಿನ ಸಮೂಹವನ್ನು ಹೊಂದಿವೆ.

e) ಲಾಗ ಹಾಕುವ ಚಲನೆಯನ್ನು ಹೈಡ್ರಾ ಪ್ರಾಣಿಯು ಹೊಂದಿದೆ.

ಪ್ರಶ್ನೆ 13. ಕೆಳಗಿನ ಒಂದೊಂದೂ ಯಾವ ಪ್ರಾಣಿ ಸಂಕುಲಕ್ಕೆ ಸೇರಿವೆ ತಿಳಿಸಿ.

a) ಎರೆಹುಳು, b) ಕಡಲು ಕುದುರೆ, c) ನಕ್ಷತ್ರ ಮೀನು, d) ಚಿಟ್ಟೆ.

ಉತ್ತರ : a) ಎರೆಹುಳು– ವಲಯವಂತಗಳು
b) ಕಡಲು ಕುದುರೆ– ಮೂಳೆ ಮೀನುಗಳು
c) ನಕ್ಷತ್ರ ಮೀನು– ಕಂಟಕ ಚರ್ಮಿಗಳು
d) ಚಿಟ್ಟೆ– ಸಂಧಿಪದಿ

ಪ್ರಶ್ನೆ 14. ಕೆಳಗಿನ ಒಂದೊಂದಕ್ಕೂ ಉತ್ತರವಾಗಿ ಒಂದು ಮುಖ್ಯ ವ್ಯತ್ಯಾಸ ತಿಳಿಸಿ. a) ನೀರ್ಗೊಳವೆ ಮತ್ತು ಆಹಾರ ಕೊಳವೆ.

ಉತ್ತರ : ನೀರ್ಗೊಳವೆಗಳು ಸಸ್ಯಗಳ ಬೇರುಗಳು ಹೀರಿಕೊಂಡ ನೀರನ್ನು ಸಸ್ಯದ ಇತರ ಭಾಗಗಳಿಗೆ ಸಾಗಿಸುವವು. ಆದರೆ ಆಹಾರ ಕೊಳವೆಗಳು ಸಸ್ಯಗಳ ಎಲೆಗಳಲ್ಲಿ ತಯಾರಾದ ಆಹಾರವನ್ನು ಸಸ್ಯದ ಎಲ್ಲ ಭಾಗಗಳಿಗೆ ಮುಟ್ಟಿಸುವವು.

b) ಏಕದಳ ಸಸ್ಯದ ಎಲೆ ಮತ್ತು ದ್ವಿದಳ ಸಸ್ಯದ ಎಲೆ.

ಉತ್ತರ : ಏಕದಳ ಸಸ್ಯದ ಎಲೆಯಲ್ಲಿ ಮಧ್ಯದ ನರಕ್ಕೆ ಸಮಾಂತರವಾಗಿ ಉಪನರಗಳಿರುತ್ತವೆ. ಎಲೆಯು ಉದ್ದವಾಗಿರುತ್ತದೆ. ಆದರೆ ದ್ವಿದಳ ಸಸ್ಯದ ಎಲೆಯಲ್ಲಿ ಮಧ್ಯದ ಮುಖ್ಯ ನರದಿಂದ ನರಗಳ ಜಾಲವೇ ಪಸರಿಸಿರುತ್ತದೆ. ಎಲೆಯು ಉದ್ದವಾಗಿರುವುದಿಲ್ಲ.

c) ಮೃದ್ವಸ್ಥಿ ಮತ್ತು ಮೂಳೆ.

ಉತ್ತರ : ಮೃದ್ವಸ್ಥಿಗಳ ಮಾತ್ರಿಕೆಯಲ್ಲಿ ಕ್ಯಾಲ್ಸಿಯಂ ಲವಣಗಳಿರುವುದಿಲ್ಲವಾದ್ದರಿಂದ ಅವು ಮೆದುವಾಗಿರುವವು. ಮೂಳೆಯ ಮಾತ್ರಿಕೆಯಲ್ಲಿ ಕ್ಯಾಲ್ಸಿಯಂ ಲವಣಗಳಿರುವುದರಿಂದ ಅವು ಬಿರುಸಾ (ಪೆಡಸು)ಗಿರುವವು.

d) ಆಮ್ಲಜನಕ ಸಹಿತ ಉಸಿರಾಟ ಮತ್ತು ಆಮ್ಲಜನಕ ರಹಿತ ಉಸಿರಾಟ.

ಉತ್ತರ : ಆಮ್ಲಜನಕ ಸಹಿತ ಉಸಿರಾಟವು ಆಮ್ಲಜನಕದ ಸಂಪರ್ಕದಲ್ಲಿ ನಡೆಯುತ್ತದೆ. ಆದರೆ ಆಮ್ಲಜನಕ ರಹಿತ ಉಸರಾಟವು ಆಮ್ಲಜನಕ ಸಂಪರ್ಕ ಇಲ್ಲದೆ ನಡೆಯುತ್ತದೆ.

e) ಸ್ವಪೋಷಕ ಮತ್ತು ಪರಪೋಷಕ ಜೀವಿಗಳು.

ಉತ್ತರ : ಸ್ವಪೋಷಕ ಜೀವಿಗಳು ತಮ್ಮ ಪೋಷಣೆಗೆ ಬೇಕಾಗುವ ಆಹಾರವನ್ನು ತಾವೇ ಸ್ವತಃ ತಯಾರಿಸಿಕೊಳ್ಳುವವು. ಹಸಿರು ಸಸ್ಯಗಳು ಸ್ವಪೋಷಕಗಳು. ಉತ್ಪಾದಕ ಜೀವಿಯನ್ನು ಸ್ವಪೋಷಕ ಎನ್ನಬಹುದು. ಆದರೆ ಇತರ ಮೂಲಗಳಿಂದ ಆಹಾರವನ್ನು ಪಡೆಯುವ ಬಳಕೆದಾರರೇ ಪರಪೋಷಕ ಜೀವಿಗಳು. ಎಲ್ಲ ಪ್ರಾಣಿಗಳು ಸಾಮಾನ್ಯವಾಗಿ ಪರಪೋಷಕಗಳು.

---

# ವಿಜ್ಞಾನ

## ಎಪ್ರಿಲ್ 1985 1 ನೆಯ ಪತ್ರಿಕೆ

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : 2½ ಗಂಟೆ ] [ ಗುಣಗಳು : 65

ಪ್ರಶ್ನೆ 1. a) ವಿದ್ಯುತ್ ತಂತು ದೀಪವನ್ನು ಚಿತ್ರದೊಡನೆ ವಿವರಿಸಿ. ಅದು ಹೇಗೆ ಪ್ರಕಾಶ ಕೊಡುವುದು ? ಅದರಲ್ಲಿ ಏಕೆ ಜಡ ಅನಿಲವನ್ನು ತುಂಬುವರು ?

ಉತ್ತರಕ್ಕೆ : ಅಕ್ಟೋಬರ 1984 ರ 1 ನೇ ಪ್ರಶ್ನೆ (a) ನೋಡಿ.

b) ರೇಡಾರ್ ಎಂದರೇನು ? ಅದರ ಕಾರ್ಯ ವಿವರಿಸಿ.

ಉತ್ತರಕ್ಕೆ : ಅಕ್ಟೋಬರ 1984 ರ 1 ನೇ ಪ್ರಶ್ನೆ (b) ನೋಡಿ.

c) ಲೋಲಕದ ಆವರ್ತ ಕಾಲ ಎಂದರೇನು ?

**ಉತ್ತರ : ಲೋಲಕದ ಆವರ್ತ ಕಾಲ :** ಸಾಮಾನ್ಯ ಲೋಲಕವು ಒಂದು ಆಂದೋಲನವನ್ನು ಪೂರ್ಣಮಾಡಲು ತೆಗೆದು ಕೊಳ್ಳುವ ಕಾಲವನ್ನು ಆವರ್ತಕಾಲ ಎನ್ನುವರು.

**ಪ್ರಶ್ನೆ 2.** a) ಗಾಜು ಎಂದರೇನು ? ಗಾಜು ತಯಾರಿಕೆಯಲ್ಲಿ ಉಪಯೋಗಿಸುವ ವಸ್ತುಗಳಾವವು ? ಬಣ್ಣದ ಗಾಜನ್ನು ಹೇಗೆ ತಯಾರಿಸುವರು ?

**ಉತ್ತರ : ಗಾಜು :** ಸಿಲಿಕೇಟುಗಳ ಮಿಶ್ರಣವನ್ನು ಗಾಜು ಎನ್ನುವರು. ಗಾಜನ್ನು ಅತಿ ತಂಪಿತ ದ್ರವ ಎಂತಲೂ ಅನ್ನುವರು.

ಗಾಜು ತಯಾರಿಕೆಯಲ್ಲಿ ಮರಳು, ಸೋಡಿಯಮ್ ಕಾರ್ಬೊನೇಟ [ವಾಶಿಂಗ ಸೋಡಾ], ಸುಣ್ಣದ ಕಲ್ಲು ಮತ್ತು ಗಾಜಿನ ಚೂರುಗಳನ್ನು ಉಪಯೋಗಿಸುವರು.

ಬಣ್ಣದ ಗಾಜನ್ನು ತಯಾರಿಸಲು ದ್ರವರೂಪದಲ್ಲಿರುವ ಗಾಜಿಗೆ ಇಚ್ಛಿತ ಲೋಹದ ಆಕ್ಸೈಡನ್ನು ಸೇರಿಸುವರು.

b) ರಸಾಯನ ಶಾಸ್ತ್ರದ ಯಾವುದಾದರೂ ಎರಡು ಶಾಖೆಗಳನ್ನು ಹೆಸರಿಸಿ.

**ಉತ್ತರ :** 1) ಸಾವಯವ ರಸಾಯನ ಶಾಸ್ತ್ರ, 2) ಕೈಗಾರಿಕಾ ರಸಾಯನ ಶಾಸ್ತ್ರ.

c) ಕೋಕ್‌ನಿಂದ ಮೀಥೈಲ್ ಆಲ್ಕೊಹಾಲ್ ಹೇಗೆ ತಯಾರಿಸುವರು ?

**ಉತ್ತರ :** ಕೆಂಪಗೆ ಕಾಯ್ದಿರುವ ಕೋಕ್‌ನ ಮೇಲೆ ಹಬೆಯನ್ನು ಹಾಯಿಸಿದಾಗ ಜಲಾನಿಲವು ಉತ್ಪನ್ನವಾಗುವುದು.

$$C+H_2O \rightarrow CO+H_2 \text{ (ಜಲಾನಿಲ)}$$

ಕ್ರಿಯಾವರ್ಧಕದ ಸಾನ್ನಿಧ್ಯದಲ್ಲಿ ಈ ಜಲಾನಿಲವನ್ನು $(CO+H_2)$ ಜಲಜನಕದಿಂದ ಆಕರ್ಷಿಸಿದಾಗ ಮೀಥೈಲ್ ಆಲ್ಕೊಹಾಲ್ $(CH_3OH)$ ಉತ್ಪನ್ನವಾಗುವುದು.

$$CO+2H_2 \rightarrow CH_3OH \text{ (ಮೀಥೈಲ್ ಆಲ್ಕೊಹಾಲ್)}$$

**ಪ್ರಶ್ನೆ 3.** a) ಒಂದು ಪರ್ಯಾಯ ವಿದ್ಯುಜ್ಜನಕದ ಚಿತ್ರ ಬರೆದು, ಭಾಗವನ್ನು ಗುರ್ತಿಸಿ, ಅದರ ಕಾರ್ಯವನ್ನು ವಿವರಿಸಿ.

ಉತ್ತರಕ್ಕೆ : ಎಪ್ರಿಲ್ 1984 ರ ಪ್ರಶ್ನೆ 1. (a) ನೋಡಿ.

b) ದಂಡಕಾಂತದ ಸುತ್ತಲೂ ಇರುವ ಕಾಂತೀಯ ಬಲರೇಖೆಗಳನ್ನು ಚಿತ್ರದಲ್ಲಿ ತೋರಿಸಿ.

ಉತ್ತರಕ್ಕೆ : ಅಕ್ಟೋಬರ 1984 ರ ಪ್ರಶ್ನೆ 5. (a) ನೋಡಿ.

c) ವಿಮೋಚನಾ ವೇಗ ಎಂದರೇನು ?

**ಉತ್ತರ : ವಿಮೋಚನಾ ವೇಗ :** ಒಂದು ವಸ್ತುವನ್ನು ಯಾವ ವೇಗದಿಂದ ಮೇಲಕ್ಕೆ ಎಸೆದರೆ, ಅದು ಭೂಮಿಯ ಗುರುತ್ವಾಕರ್ಷಣೆಯಿಂದ ತಪ್ಪಿಸಿಕೊಂಡು ಹೋಗುವುದೋ ಆ ವೇಗಕ್ಕೆ ವಿಮೋಚನಾ ವೇಗ ಎನ್ನುವರು.

ವಿಮೋಚನಾ ವೇಗವು 12 ಕಿ. ಮೀ./ಸೆ. ಇರುತ್ತದೆ.

**ಪ್ರಶ್ನೆ 4.** a) ಕ್ರಿಯೆಯ ವೇಗ ಎಂದರೇನು ? ಸಮರೂಪ, ಬಹುರೂಪ ಕ್ರಿಯೆಗಳ ಅರ್ಥವನ್ನು ತಿಳಿಸಿ ಉದಾಹರಣೆ ಕೊಡಿ.

ಉತ್ತರಕ್ಕೆ : ಅಕ್ಟೋಬರ 1984 ರ ಪ್ರಶ್ನೆ 4. (a) ನೋಡಿ.

b) ಇವುಗಳ ರಚನೆಯ ಸೂತ್ರವನ್ನು ಬರೆಯಿರಿ. 1) ಮೀಥೇನ್, 2) ಎಥಿಲೀನ್.

ಉತ್ತರಕ್ಕೆ : ಅಕ್ಟೋಬರ್ 1984 ರ ಪ್ರಶ್ನೆ 4. [b] ನೋಡಿ.

c) ಗಂಧಕ, ಕಬ್ಬಿಣದ ಮಿಶ್ರಣದಿಂದ ಕಬ್ಬಿಣವನ್ನು ಹೇಗೆ ಬೇರ್ಪಡಿಸುವಿರಿ ?

**ಉತ್ತರ :** ಗಂಧಕ ಮತ್ತು ಕಬ್ಬಿಣದ ಮಿಶ್ರಣದಲ್ಲಿ ಶಕ್ತಿಯುತವಾದ ಒಂದು ಅಯಸ್ಕಾಂತವನ್ನು ಚನ್ನಾಗಿ ಆಡಿಸಬೇಕು. ಮಿಶ್ರಣದಲ್ಲಿಯ ಕಬ್ಬಿಣವು ಅಯಸ್ಕಾಂತದಿಂದ ಆಕರ್ಷಿಸಲ್ಪಡುವುದರಿಂದ ಅದಕ್ಕೆ ಅಂಟಿಕೊಳ್ಳುವುದು. ಅಯಸ್ಕಾಂತದಿಂದ ಕಬ್ಬಿಣವನ್ನು ಬೇರ್ಪಡಿಸಬೇಕು.

**ಪ್ರಶ್ನೆ 5.** a] ಅಯಸ್ಕಾಂತದ ಧ್ರುವಗಳ ವಿಲೋಮ ವರ್ಗನಿಯಮ ಎಂದರೇನು ?

**ಉತ್ತರ : ಅಯಸ್ಕಾಂತದ ಧ್ರುವಗಳ ವಿಲೋಮ ವರ್ಗನಿಯಮ :** ಎರಡು ಕಾಂತೀಯ ಧ್ರುವಗಳ ನಡುವೆ ವರ್ತಿಸುವ ಬಲವು, ಆ ಧ್ರುವಗಳ ಸಾಮರ್ಥ್ಯದ ಗುಣಲಬ್ಧಕ್ಕೆ ಸಮಾನುಪಾತದಲ್ಲಿಯೂ ಮತ್ತು ಅವುಗಳ ನಡುವಿನ ದೂರದ ವರ್ಗಕ್ಕೆ ವಿಲೋಮಾನುಪಾತದಲ್ಲಿಯೂ ಇರುತ್ತದೆ.

b] ವಿದ್ಯುದ್ವಿಭಜನೆ ಎಂದರೇನು ?

**ಉತ್ತರ : ವಿದ್ಯುದ್ವಿಭಜನೆ :** ವಿದ್ಯುತ್ಪ್ರವಾಹದ ಕಾರಣದಿಂದ ದ್ರವ ಇಲ್ಲವೆ ದ್ರಾವಣದಲ್ಲಿ ಆಗುವ ರಾಸಾಯನಿಕ ಬದಲಾವಣೆಯನ್ನು ವಿದ್ಯುದ್ವಿಭಜನೆ ಅಥವಾ ವಿದ್ಯುದ್ವಿಶ್ಲೇಷಣೆ ಎನ್ನುವರು.

**ಪ್ರಶ್ನೆ 6.** a) ಕೆಳಗಿನ ವಸ್ತುಗಳನ್ನು ಪದಗಳಲ್ಲಿ ಬರೆಯಿರಿ.

1) $Na_2CO_3$ 2) $NH_4Cl$

**ಉತ್ತರ :** 1) $Na_2CO_3$ — ಸೋಡಿಯಮ್ ಕಾರ್ಬೋನೇಟ್.

2) $NH_4Cl$ — ಅಮೋನಿಯಮ್ ಕ್ಲೋರೈಡ್.

b) ಸಾವಯುವ ರಸಾಯನ ಶಾಸ್ತ್ರ ಎಂದರೇನು ?

**ಉತ್ತರ : ಸಾವಯುವ ರಸಾಯನ ಶಾಸ್ತ್ರ :** ಇಂಗಾಲ ಸಂಯುಕ್ತಗಳ ರಸಾಯನ ಶಾಸ್ತ್ರವನ್ನು ಸಾವಯುವ ರಸಾಯನ ಶಾಸ್ತ್ರ ಎನ್ನುವರು.

**ಪ್ರಶ್ನೆ 7.** a] ವಿದ್ಯುತ್ ವಾಹಕ ಮತ್ತು ನಿರೋಧಕಗಳ ವ್ಯತ್ಯಾಸಗಳನ್ನು ತಿಳಿಸಿ ಒಂದೊಂದು ಉದಾಹರಣೆ ಕೊಡಿ.

ಉತ್ತರಕ್ಕೆ : ಅಕ್ಟೋಬರ 1984 ರ ಪ್ರಶ್ನೆ 7. (a) ನೋಡಿ.

b] ಪ್ಲಾಸ್ಮಾಸ್ಥಿತಿ ಎಂದರೇನು ?

**ಉತ್ತರ : ಪ್ಲಾಸ್ಮಾಸ್ಥಿತಿ :** ಒಂದು ವಸ್ತುವು ಪೂರ್ತಿಯಾಗಿ ಅಯಾನುಗಳ ರೂಪದಲ್ಲಿದ್ದರೆ, ಆ ಸ್ಥಿತಿಯನ್ನು ಪ್ಲಾಸ್ಮಾಸ್ಥಿತಿ ಎನ್ನುವರು.

**ಪ್ರಶ್ನೆ 8.** a] ಶಾಶ್ವತ ಗಡಸು ನೀರಿನಲ್ಲಿರುವ ರಸಾಯನ ವಸ್ತುಗಳಾವುವು ?

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 8 [a] ನೋಡಿ.

b] ಸೋಡಿಯಮ್ ಕ್ಲೋರೈಡ್‌ನಲ್ಲಿರುವ ಮೂಲವಸ್ತುಗಳನ್ನು ಹೆಸರಿಸಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 8 (b) ನೋಡಿ.

**ಪ್ರಶ್ನೆ 9.** a] ವಿದ್ಯುತ್ ಮಂಡಲದಲ್ಲಿ ಫ್ಯೂಜ್ ಏಕೆ ಬಳಸುವರು ? ಅದನ್ನು ಯಾವುದರಿಂದ ಮಾಡಿರುವರು.

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 16. (b) ನೋಡಿ.

ಫ್ಯೂಜ್ ತಂತಿಯನ್ನು ಕರಗುವ ಬಿಂದು ಕಡಿಮೆ ಇರುವ ಸೀಸ ಮತ್ತು ತವರಗಳ ಮಿಶ್ರಲೋಹದಿಂದ ತಯಾರಿಸುವರು.

b] ಗೋಳಾಕೃತಿಯ ದರ್ಪಣ ಎಂದರೇನು ?

**ಉತ್ತರ :** ದರ್ಪಣವು ಯಾವುದಾದರೊಂದು ಗೋಳದ ಭಾಗವಾಗಿದ್ದರೆ ಅದನ್ನು ಗೋಳಾಕೃತಿಯ ದರ್ಪಣ ಎನ್ನುವರು.

**ಪ್ರಶ್ನೆ 10.** a] ಫ್ರಕ್ಟೋಸ್ ಎಂದರೇನು ? ಇದರ ಮುಖ್ಯಗುಣಗಳನ್ನು ತಿಳಿಸಿ.

**ಉತ್ತರ :** ಸಿಹಿ ಹಣ್ಣುಗಳು ಮತ್ತು ಜೇನುತುಪ್ಪದಲ್ಲಿ ದೊರೆಯುವ ಏಕ ಶರ್ಕರಿಯನ್ನು ಫ್ರಕ್ಟೋಸ್ ಎನ್ನುವರು.

**ಗುಣಗಳು :** 1] ಫ್ರಕ್ಟೋಸ್ ಇದು ಬಿಳಿ ಬಣ್ಣದ ಹರಳು ರೂಪದ ವಸ್ತು.

2] ರುಚಿಯಲ್ಲಿ ಬಹಳ ಸಿಹಿಯಾಗಿದೆ.

b] ಕಾರ್ಬೋಹೈಡ್ರೇಟುಗಳನ್ನು ಸ್ಥೂಲವಾಗಿ ಹೇಗೆ ವರ್ಗೀಕರಿಸುತ್ತಾರೆ ?

**ಉತ್ತರ :** ಶರ್ಕರಗಳು ಮತ್ತು ಅಶರ್ಕರಗಳು ಎಂದು ಕಾರ್ಬೋಹೈಡ್ರೇಟುಗಳನ್ನು ಸ್ಥೂಲವಾಗಿ ವರ್ಗೀಕರಿಸುತ್ತಾರೆ.

**ಪ್ರಶ್ನೆ 11.** a] ವಾಹಕದ ನಿರೋಧವು ಯಾವ ಅಂಶಗಳನ್ನು ಅವಲಂಬಿಸಿದೆ ?

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 11 [a] ನೋಡಿ.

b] ಪ್ರಚ್ಛನ್ನ ಮಾಪಕ ಎಂದರೇನು ?

**ಉತ್ತರ :** ಒಂದು ವಾಹಕದ ತುದಿಗಳ ನಡುವೆ ಇರುವ ಪ್ರಚ್ಛನ್ನಾಂತರವನ್ನು ಅಳೆಯಲು ಉಪಯೋಗಿಸುವ ಉಪಕರಣ [ಸಾಧನ]ವನ್ನು ಪ್ರಚ್ಛನ್ನಮಾಪಕ [ವೋಲ್ಟ್‌ಮೀಟರ್] ಎನ್ನುವರು.

**ಪ್ರಶ್ನೆ 12.** a] ಲೋಹಗಳ ನಾಲ್ಕು ಮುಖ್ಯ ಗುಣಗಳನ್ನು ತಿಳಿಸಿ.

**ಉತ್ತರ :** ಲೋಹಗಳ ಮುಖ್ಯ ಲಕ್ಷಣಗಳು :

1] ಲೋಹಗಳಿಗೆ ವಿಶಿಷ್ಟ ಹೊಳಪು ಇರುತ್ತದೆ.

2] ಲೋಹಗಳು ಶಾಖ ಮತ್ತು ವಿದ್ಯುತ್ತಿನ ಸುವಾಹಕಗಳು.

3] ಲೋಹಗಳಿಗೆ ಕಾಂತವಶೆ ಹಾಗೂ ಪತ್ರಶೀಲತ್ವ ಇದೆ.

4] ಪಾದರಸದ ಹೊರತಾಗಿ ಉಳಿದ ಲೋಹಗಳು ಘನ ರೂಪದಲ್ಲಿರುತ್ತವೆ.

b] ದ್ರವರಾಜದ ಸಂಯೋಜನೆ ಹೇಗೆ ಉಂಟಾಗಿದೆ ?

**ಉತ್ತರ :** ಪ್ರಬಲ ಹೈಡ್ರೋಕ್ಲೋರಿಕ್ ಆಮ್ಲ ಮತ್ತು ಪ್ರಬಲ ನೈಟ್ರಿಕ್ ಆಮ್ಲಗಳನ್ನು ಕ್ರಮವಾಗಿ 3 : 1 ಪ್ರಮಾಣದಲ್ಲಿ ಸೇರಿಸಿ ದ್ರವರಾಜನ್ನು ತಯಾರಿಸುತ್ತಾರೆ.

**ಪ್ರಶ್ನೆ 13.** a) ಸುವರ್ಣ ಪರ್ಣ ವಿದ್ಯುದ್ದರ್ಶಕವೆಂದರೇನು ? ಇದರ ಉಪಯೋಗಗಳೇನು ?

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 14 (a) ನೋಡಿ.

b) ಕ್ಯಾಥೋಡ್ ಕಿರಣಗಳ ಎರಡು ಗುಣಗಳನ್ನು ಬರೆಯಿರಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 14 (b) ನೋಡಿ.

**ಪ್ರಶ್ನೆ 14.** a) ಉಕ್ಕನ್ನು ಹದಮಾಡುವುದು ಹೇಗೆ? ಉಕ್ಕಿನ ಗುಣದಲ್ಲಿ ಆಗುವ ಬದಲಾವಣೆ ಏನು ?

**ಉತ್ತರ :** ಉಕ್ಕನ್ನು ಕೆಂಪಗೆ ಕಾಯಿಸಿ ನಂತರ ಒಮ್ಮೆಲೆ ತಣ್ಣೀರಿನಲ್ಲಿ ಅದ್ದಿದರೆ, ಅದು ಬಹಳ ಕಠಿಣ ಹಾಗೂ ಪೆಡಸಾಗುತ್ತದೆ. ಒಂದು ವೇಳೆ ಉಕ್ಕನ್ನು ಬೇರೆ ಬೇರೆ ಉಷ್ಣತೆಗಳಿಗೆ ಕಾಯಿಸಿ, ನಿಧಾನವಾಗಿ ತಂಪುಗೊಳಿಸಿದರೆ, ಅದರ ಪೆಡಸುತನ ಕಡಿಮೆಯಾಗುವುದಲ್ಲದೆ, ಅದಕ್ಕೆ ಸ್ಥಿತಿಸ್ಥಾಪಕ ಗುಣ ಬರುತ್ತದೆ. ಅಲ್ಲದೆ ಕಠಿಣತೆಯು ಹಾಗೆ ಉಳಿಯುತ್ತದೆ. ನಿಧಾನವಾಗಿ ತಂಪುಗೊಳಿಸುವ ಈ ವಿಧಾನವನ್ನು ಹದಮಾಡುವುದು (Tempering) ಎನ್ನುವರು.

ಹದ ಮಾಡುವುದರಿಂದ ಉಕ್ಕಿನ ಪೆಡಸುತನ ಕಡಿಮೆಯಾಗುವುದು ಆದರೆ ಕಠಿಣತೆಯು ಹಾಗೆ ಅಂದರೆ ಮೊದಲಿನಂತೆ ಉಳಿಯುವುದು.

b) ಹಳದಿ ರಂಜಕವನ್ನು ಯಾವಾಗಲೂ ನೀರಿನಲ್ಲಿ ಶೇಖರಿಸುವರು. ಏಕೆ ?

**ಉತ್ತರ :** ಹಳದಿ ರಂಜಕವನ್ನು ಗಾಳಿಯಲ್ಲಿಟ್ಟರೆ, ಅದು ಸುಮಾರು 30°C ಉಷ್ಣತೆಗೆ ಹೊತ್ತಿಕೊಂಡು ಉರಿಯುತ್ತದೆ. ಆದ್ದರಿಂದ ಹಳದಿ ರಂಜಕವನ್ನು ಯಾವಾಗಲೂ ನೀರಿನಲ್ಲಿ ಶೇಖರಿಸಿಡುವರು.

**ಪ್ರಶ್ನೆ 15.** a) ಗ್ರ್ಯಾಫೈಟನ್ನು ಎಲೆಕ್ಟ್ರೋಡುಗಳ ತಯಾರಿಕೆಯಲ್ಲಿ ಏಕೆ ಉಪಯೋಗಿಸುವರು ?

**ಉತ್ತರ :** ಗ್ರ್ಯಾಫೈಟು ಇದು ವಿದ್ಯುತ್‌ನ ಸುವಾಹಕ ಆದ್ದರಿಂದ ಇದನ್ನು ಎಲೆಕ್ಟ್ರೋಡ್‌ಗಳ ತಯಾರಿಕೆಯಲ್ಲಿ ಉಪಯೋಗಿಸುವರು.

b) ವಿದ್ಯುದಾವೇಶಗಳ ಆಕರ್ಷಣೆ ನಿರಾಕರಣೆ ನಿಯಮವನ್ನು ಹೇಳಿರಿ.

**ಉತ್ತರ : ನಿಯಮ :** ಸಜಾತೀಯ ವಿದ್ಯುದಾವೇಶಗಳು ಪರಸ್ಪರ ನಿರಸಿಸುತ್ತವೆ ಮತ್ತು ವಿಜಾತೀಯ ವಿದ್ಯುದಾವೇಶಗಳು ಪರಸ್ಪರ ಆಕರ್ಷಿಸುತ್ತವೆ.

**ಪ್ರಶ್ನೆ 16.** a) ಕಲಿಲಗಳನ್ನು ಗರಣೆ ಗಟ್ಟಿಸುವುದು ಹೇಗೆ ? ಇದರ ಒಂದು ಕೈಗಾರಿಕಾ ಉಪಯೋಗವನ್ನು ತಿಳಿಸಿ

**ಉತ್ತರ :** ಕಲಾಯ್ಡು ಕಣಗಳೆಲ್ಲಾ ಮಾಧ್ಯಮದಿಂದ ಒಂದು ಬಗೆಯ ಅಯಾನುಗಳನ್ನು ಲಗತ್ತಿಸಿಕೊಂಡು ವಿದ್ಯುತ್ಪೂರಣ ಹೊಂದುತ್ತವೆ. ಆದರಿಂದ ಅವು ಋಣ ಇಲ್ಲವೆ ಧನಾವಿಷ್ಟವಾಗುತ್ತವೆ. ಅಂಥ ಸಮಾವಿಷ್ಟ ಕಣಗಳು ಪರಸ್ಪರ ವಿಕರ್ಷಿಸುವುದರಿಂದ ಅಂಟಿಕೊಳ್ಳುವುದಿಲ್ಲ. ಅದರಿಂದ ಕಲಾಯ್ಡುಗಳಿಗೆ ಸ್ಥಿರತೆ ಬರುತ್ತದೆ. ಈ ಸಂದರ್ಭದಲ್ಲಿ ಕಲಾಯ್ಡುಗಳಿಗೆ ಒಂದು ವಿದ್ಯುದ್ವಿಶ್ಲೇಷ್ಯವನ್ನು ಬೆರೆಸಿದರೆ, ಅದರಿಂದ ದೊರೆಯುವ ವಿರುದ್ಧ ಆವೇಶವುಳ್ಳ ಅಯಾನುಗಳು, ಕಲಾಯ್ಡುಗಳ ಮೇಲಿರುವ ಆವೇಶವನ್ನು ತಟಸ್ಥಗೊಳಿಸುವುದರಿಂದ, ಕಲಾಯ್ಡುಗಳ ಸ್ಥಿರತೆಯು ಇಲ್ಲದಂತಾಗಿ ಆವೇಶ ರಹಿತ ಕಣಗಳು ಪರಸ್ಪರ ಅಂಟಿಕೊಂಡು ತಳಕ್ಕೆ ತಂಗುತ್ತವೆ. ಇದನ್ನು ಕಲಿಲಗಳು ಗರಣೆ ಗಟ್ಟುವುದು ಅಥವಾ ಹೆಪ್ಪುಗಟ್ಟುವುದು ಎನ್ನುವರು.

**ಕೈಗಾರಿಕಾ ಉಪಯೋಗ :** ಮೋಡಗಳ ಮೇಲೆ ವಿಮಾನದಿಂದ ವಿದ್ಯುತ್ಪೂರಿತ ಮರಳು ಇಲ್ಲವೆ ಬೆಳ್ಳಿಯ ಅಯೋಡೈಡನ್ನು ಸಿಂಪಡಿಸುವುದರಿಂದ ಕೃತಕ ಮಳೆಯನ್ನು ತರಿಸುವರು.

ಉಪ್ಪನ್ನು ಕೂಡಿಸಿ ಗ್ಲಿಸ್‌ರಿನ್ ಮತ್ತು ಸಬಕಾರ ಇವುಗಳ ಮಿಶ್ರಣದಿಂದ ಸಬಕಾರವನ್ನು ಒತ್ತರಿಸುವುದು.

b) ಇವುಗಳಿಗೆ ಒಂದೊಂದು ಉದಾಹರಣೆ ಕೊಡಿ.

1) ಫಾಸ್ಫೇಟ ಗೊಬ್ಬರ, 2) ಅಮೋನಿಯಾ ಗೊಬ್ಬರ.

ಉತ್ತರ : 1) ಫಾಸ್ಫೇಟ ಗೊಬ್ಬರ– ಅಮೋನಿಯಮ್ ಫಾಸ್ಫೇಟ.

2) ಅಮೋನಿಯಾ ಗೊಬ್ಬರ– ಅಮೋನಿಯಂ ನೈಟ್ರೇಟ್, ಯುರಿಯಾ.

c) ಪರಮಾಣುವಿನ ಅತ್ಯಂತ ಹೊರ ಕವಚದಲ್ಲಿರುವ ಗರಿಷ್ಠ ಎಲೆಕ್ಟ್ರಾನುಗಳ ಸಂಖ್ಯೆ ಎಷ್ಟು ?

ಉತ್ತರ : ಗರಿಷ್ಠ ಎಲೆಕ್ಟ್ರಾನುಗಳ ಸಂಖ್ಯೆ=8 (ಎಂಟು)

---

# ವಿಜ್ಞಾನ

## ಎಪ್ರಿಲ್ 1985 — 2 ನೇ ಪತ್ರಿಕೆ

### [ ಜೀವಶಾಸ್ತ್ರ ]

ವೇಳೆ : 2 ಗಂಟೆ ] [ ಗುಣಗಳು : 35

I. ಪ್ರಶ್ನೆ 1. a) ಕೆಂಪು ರಕ್ತ ಕಣಗಳಿಗೂ [R.B.C.] ಬಿಳಿರಕ್ತಕಣಗಳಿಗೂ (W.B.C.) ಇರುವ ವ್ಯತ್ಯಾಸಗಳೇನು ?

ಉತ್ತರ : ಕೆಂಪುರಕ್ತಕಣಗಳಿಗೂ, ಬಿಳಿರಕ್ತಕಣಗಳಿಗೂ ಇರುವ ವ್ಯತ್ಯಾಸ—

| | ಕೆಂಪುರಕ್ತಕಣ | ಬಿಳಿರಕ್ತಕಣ |
|---|---|---|
| 1] | ನಿರ್ದಿಷ್ಟ ಆಕಾರವಿದೆ | ನಿರ್ದಿಷ್ಟ ಆಕಾರವಿರುವುದಿಲ್ಲ |
| 2] | ಕೆಂಪುಬಣ್ಣವಿದೆ | ಬಣ್ಣವಿರುವುದಿಲ್ಲ |
| 3] | ಆಕಾರದಲ್ಲಿ ಚಿಕ್ಕವು | ಆಕಾರದಲ್ಲಿ ದೊಡ್ಡವು |
| 4] | ರಕ್ತದ ಪ್ರವಾಹದ ಗುಂಟ ಚಲಿಸುವವು | ರಕ್ತನ ಪ್ರವಾಹದ ಗುಂಟ ಅಲ್ಲದೆ ಒಮ್ಮೊಮ್ಮೆ ಪ್ರವಾಹದ ವಿರುದ್ಧವೂ ಚಲಿಸುವವು. |
| 5] | ಹೀಮೋಗ್ಲೋಬಿನ್ ವಸ್ತು ಇದೆ | ಹೀಮೋಗ್ಲೋಬಿನ್ ವಸ್ತು ಇಲ್ಲ |
| 6] | ರಕ್ತದಲ್ಲಿ ಇವುಗಳ ಸಂಖ್ಯೆ ಹೆಚ್ಚು | ರಕ್ತದಲ್ಲಿ ಇವುಗಳ ಸಂಖ್ಯೆ ಕಡಿಮೆ |
| 7] | ರೋಗಾಣುಗಳನ್ನು ನಾಶ ಮಾಡುವುದಿಲ್ಲ | ರೋಗಾಣುಗಳನ್ನು ನಾಶ ಮಾಡುತ್ತವೆ. |
| 8] | ಸಾಮಾನ್ಯ ಸ್ಥಿತಿಯಲ್ಲಿ ರಕ್ತನಾಳದ ಹೊರಗೆ ಬರುವುದಿಲ್ಲ. | ಸಾಮಾನ್ಯ ಸ್ಥಿತಿಯಲ್ಲಿ ರಕ್ತನಾಳದ ಹೊರಗೆ ಬಂದು ರೋಗಾಣುಗಳನ್ನು ನಾಶ ಮಾಡುವವು. |

b) ಮನುಷ್ಯನ ಹೃದಯವು (Heart) ಕಪ್ಪೆಯ ಹೃದಯದಿಂದ ಹೇಗೆ ಭಿನ್ನವಾಗಿದೆ.

ಉತ್ತರ : ಕಪ್ಪೆಯ ಹೃದಯದಲ್ಲಿ ಮೂರು ಕೋಣೆಗಳಿದ್ದರೆ, ಮನುಷ್ಯನ ಹೃದಯದಲ್ಲಿ ನಾಲ್ಕು ಕೋಣೆಗಳಿವೆ. ಕಪ್ಪೆಯ ಹೃದಯದಲ್ಲಿ ಒಂದೇ ಹೃತ್ಕುಕ್ಷಿಯಿದ್ದು ಅದರಲ್ಲಿ ಮಲಿನ ಮತ್ತು ಶುದ್ಧ ರಕ್ತಗಳ ಮಿಶ್ರಣವಿರುತ್ತದೆ. ಆದರೆ ಮನುಷ್ಯನ ಹೃದಯದಲ್ಲಿ ಎರಡು ಹೃತ್ಕುಕ್ಷಿಗಳಿದ್ದು ಒಂದರಲ್ಲಿ ಶುದ್ಧರಕ್ತವೂ ಇನ್ನೊಂದರಲ್ಲಿ ಮಲಿನ ರಕ್ತವೂ ಇರುವುದು.

ಪ್ರಶ್ನೆ 2. a) ಮನುಷ್ಯನ ಮೂತ್ರಜನಕಾಂಗದ ಚಿತ್ರ ಬಿಡಿಸಿರಿ. ಈ ಭಾಗಗಳನ್ನು ಗುರುತಿಸಿರಿ. 1] ಮೂತ್ರನಾಳ (ureter), 2) ನೆಫ್ರಾನ್ (nephron), 3) ರೀನಲ್ ಪೆಲ್ವಿಸ್ (pelvis).

ಉತ್ತರಕ್ಕೆ ಎಪ್ರಿಲ್ 1984 ರ 1 ನೇ ಪ್ರಶ್ನೆ (a) ನೋಡಿ.

ಭಾಗಗಳು :. 4) ರೀನಲ್ ಪೆಲ್ವಿಸ್, 5) ಮೂತ್ರನಾಳ.

b) ಮನುಷ್ಯನ ಮೆದುಳು ಬಳ್ಳಿಯ ಅಡ್ಡಛೇದದ ಚಿತ್ರ ಬಿಡಿಸಿ ಪರಾವರ್ತಿತ ಚಾಪ (Reflex arc) ಗುರುತಿಸಿ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 3 ನೋಡಿ.

II. ಪ್ರಶ್ನೆ 1. ಮನುಷ್ಯ ದೇಹದಲ್ಲಿರುವ ಎರಡು ನಿರ್ನಾಳ ಗ್ರಂಥಿ (Endocrine glands)ಗಳನ್ನು ಹೆಸರಿಸಿ ಅವುಗಳ ಸ್ರಾವವನ್ನು ಹೆಸರಿಸಿ.

ಉತ್ತರ : ಮನುಷ್ಯನ ದೇಹದಲ್ಲಿರುವ ನಿರ್ನಾಳ ಗ್ರಂಥಿಗಳಲ್ಲಿ ಎರಡು ಗ್ರಂಥಿಗಳು– 1) ಥೈರಾಯಿಡ್, 2) ಅಡ್ರಿನಲ್.

ಥೈರಾಯಿಡ್ ಗ್ರಂಥಿಯು ಥೈರಾಕ್ಸಿನ್ ಎಂಬ ಹಾರ್ಮೋನನ್ನು ಸ್ರವಿಸುವುದು. ಅಡ್ರಿನಲ್ ಗ್ರಂಥಿಯು ಅಡ್ರಿನಲಿನ್ ಮತ್ತು ಕಾರ್ಟಿಸೋನ್ ಎಂಬ ಹಾರ್ಮೋನ್‌ಗಳನ್ನು ಸ್ರವಿಸುವುದು.

ಪ್ರಶ್ನೆ 2. ಎರಡು ಪ್ರಧಾನ ದೃಷ್ಟಿದೋಷಗಳನ್ನು ಹೆಸರಿಸಿ. ಅವನ್ನು ಹೇಗೆ ಸರಿಪಡಿಸಬಹುದು ?

ಉತ್ತರ : ಎರಡು ಪ್ರಧಾನ ದೃಷ್ಟಿದೋಷಗಳು : 1) ದೂರದೃಷ್ಟಿ, 2) ಸಮೀಪದೃಷ್ಟಿ.

1) ದೂರದೃಷ್ಟಿ ದೋಷ ನಿವಾರಣೆಗೆ ಸೂಕ್ತವಾದ ಪೀನ ಮಸೂರಗಳಿರುವ ಕನ್ನಡಕವನ್ನು ಉಪಯೋಗಿಸಬೇಕು.

2) ಸಮೀಪದೃಷ್ಟಿ ದೋಷ ನಿವಾರಣೆಗೆ ಸೂಕ್ತವಾದ ನಿಮ್ನ ಮಸೂರಗಳಿರುವ ಕನ್ನಡಕವನ್ನು ಉಪಯೋಗಿಸಬೇಕು.

ಪ್ರಶ್ನೆ 3. ಮನುಷ್ಯನ ಮೆದುಳಿನ ವೈಶಿಷ್ಟ್ಯತೆ ಏನು ? ಮೆದುಳಿನ ಮೂರು ಪ್ರಾಮುಖ್ಯ ಭಾಗಗಳು ಯಾವುವು ?

ಉತ್ತರ : ಪ್ರಪಂಚದಲ್ಲಿಯ ಯಾವುದೇ ಪ್ರಾಣಿಯ ಮೆದುಳಿಗಿಂತ ಮನುಷ್ಯನ ಮೆದುಳು ಹೆಚ್ಚು ಅಭಿವೃದ್ಧಿಯನ್ನು ಹೊಂದಿದೆ. ಆದರಿಂದ ಅವನು ಅನೇಕ ಜಟಿಲವಾದ ಸಮಸ್ಯೆಗಳನ್ನು ಬಿಡಿಸಲು ಮತ್ತು ಮೇಲ್ಮಟ್ಟದ ಮಾನಸಿಕ ಕ್ರಿಯೆಗಳನ್ನು ನಿರ್ವಹಿಸಲು ಶಕ್ತನಾಗಿದ್ದಾನೆ.

ಮೆದುಳಿನ ಮೂರು ಭಾಗಗಳು : 1) ಮುಮ್ಮೆದುಳು 2) ಮಧ್ಯದ ಮೆದುಳು 3) ಹಿಮ್ಮೆದುಳು.

ಪ್ರಶ್ನೆ 4. ಅಣುಜೀವಿ(Microbes)ಗಳಿಂದ ಪಡೆಯಬಹುದಾದ ಎರಡು ಉಪಯೋಗಗಳನ್ನು ತಿಳಿಸಿ. ಅಣುಜೀವಿಗಳಿಂದ ಬರುವ ಎರಡು ರೋಗಗಳನ್ನು ಹೆಸರಿಸಿ.

ಉತ್ತರ : ಅಣುಜೀವಿಗಳು ಕೊಳಚೆಯನ್ನು ನಾಶ ಮಾಡುತ್ತವೆ. ಅಲ್ಲದೆ ಅಣುಜೀವಿಗಳು ಉಂಟುಮಾಡುವ ಹುದುಗುವಿಕೆಯಿಂದ ಆಲ್ಕೊಹಾಲ್ ತಯಾರಿಸುವರು.

ಅಣುಜೀವಿಗಳಿಂದ ಬರುವ ಎರಡು ರೋಗಗಳು : 1) ಕಾಲರಾ (ವಾಂತಿಭೇದಿ) 2) ಕ್ಷಯ.

ಪ್ರಶ್ನೆ 5. ಪ್ಲಾಸೆಂಟಾ (Placenta) ಎಂದರೇನು ? ಅದರ ಕಾರ್ಯಗಳೇನು ?

ಉತ್ತರ : ಪ್ಲಾಸೆಂಟಾ : ಪ್ರಾರಂಭದಲ್ಲಿ, ಫಲಿಸಿದ ತತ್ತಿಯ ಕಣಗಳು ವಿಭಜಿಸಿ ಸಂಖ್ಯೆಯಲ್ಲಿ ಹೆಚ್ಚುವವು. ಅವುಗಳಲ್ಲಿ ಒಂದು ಹೊಕ್ಕುಳ ನಾಳವಾಗಿ ರೂಪುಗೊಳ್ಳುತ್ತದೆ. ಬಿಲ್ಲೆಯಂತಿರುವ ಹೊಕ್ಕುಳ ನಾಳದ ತುದಿಯನ್ನು ಪ್ಲಾಸೆಂಟಾ ಎನ್ನುವರು.

ಪ್ಲಾಸೆಂಟಾದ ಕಾರ್ಯಗಳು : ಬೆಳೆಯುತ್ತಿರುವ ಭ್ರೂಣಕ್ಕೆ ಆಹಾರ ಮತ್ತು ಆಮ್ಲಜನಕವನ್ನು ಸತತವಾಗಿ ಪೂರೈಸುವುದು. ಭ್ರೂಣದಿಂದ ಬರುವ ಅನುಪಯುಕ್ತ ವಸ್ತುಗಳನ್ನು ವಿಸರ್ಜಿಸುವುದು.

III. ಪ್ರಶ್ನೆ 1. ಬೇಸಿಗೆಯಲ್ಲಿ ಮೂತ್ರ ವಿಸರ್ಜನೆ ಕಡಿಮೆ ಏಕೆ ?

ಉತ್ತರ : ಬೇಸಿಗೆಯಲ್ಲಿ ಚರ್ಮವು ಹೆಚ್ಚೆಚ್ಚು ಬೆವರನ್ನು ಉತ್ಪತ್ತಿಮಾಡಿ, ದೇಹದಲ್ಲಿಯ ಹೆಚ್ಚು ಪ್ರಮಾಣದ ಸಾರಜನಕ ಯುಕ್ತ ಕಶ್ಮಲಗಳನ್ನು ಹೊರಹಾಕುವುದು. ಇದರಿಂದ ಮೂತ್ರದ ಉತ್ಪಾದನೆ ಮತ್ತು ವಿಸರ್ಜನೆಯ ಪ್ರಮಾಣ ಕಡಿಮೆಯಾಗುತ್ತದೆ.

ಪ್ರಶ್ನೆ 2. ಎರೆ ಹುಳುವಿನ [Earth worm] ವಿಸರ್ಜನಾಂಗವನ್ನು ಏನೆಂದು ಕರೆಯುವರು ?

ಉತ್ತರ : ಎರೆಹುಳುವಿನ ವಿಸರ್ಜನಾಂಗವನ್ನು ನೆಫ್ರಿಡಿಯಾ ನಾಳ ಎಂದು ಕರೆಯುವರು.

ಪ್ರಶ್ನೆ 3. ಜಿರಲೆಯ (Cockroach) ರಕ್ತವು ಉಸಿರಾಟದಲ್ಲಿ ಭಾಗವಹಿಸುವುದಿಲ್ಲ ಕಾರಣವೇನು ?

ಉತ್ತರ : ಜಿರಲೆಯ ರಕ್ತದಲ್ಲಿ ಶ್ವಸನೆಗೆ ಕಾರಣವಾದ ಬಣ್ಣದ ವಸ್ತುವಾದ ಹೀಮೊಗ್ಲೋಬಿನ್ ಇರುವುದಿಲ್ಲವಾದ ಕಾರಣ, ಜಿರಲೆಯ ರಕ್ತವು ಉಸಿರಾಟದಲ್ಲಿ ಭಾಗವಹಿಸುವುದಿಲ್ಲ.

ಪ್ರಶ್ನೆ 4. ಅಣಬೆ (Fungi) ಸಸ್ಯಗಳು ಆಹಾರವನ್ನು ತಯಾರಿಸಲಾರವು ಕಾರಣವೇನು ?

ಉತ್ತರ : ಸಸ್ಯಗಳಲ್ಲಿ ಆಹಾರ ತಯಾರಿಕೆಗೆ ಕಾರಣವಾದ ಪತ್ರಹರಿತ್ತು (ಹಸಿರು ಬಣ್ಣದ ವಸ್ತು) ಅಣಬೆ ಸಸ್ಯಗಳಲ್ಲಿರುವುದಿಲ್ಲ. ಆದ್ದರಿಂದ ಅಣಬೆ ಸಸ್ಯಗಳು ಆಹಾರವನ್ನು ತಯಾರಿಸಲಾರವು.

ಪ್ರಶ್ನೆ 5. ಏಕದಳ ಬೆಳೆದು ನಂತರ ದ್ವಿದಳ ಬೆಳೆಯನು ಬೆಳೆಯುವುದು ಒಳ್ಳೆಯದು ಕಾರಣವೇನು ?

ಉತ್ತರ : ದ್ವಿದಳ ಸಸ್ಯಗಳ ಬೇರುಗಳು ಭೂಮಿಯಲ್ಲಿ ಹೆಚ್ಚು ಆಳದವರೆಗೆ ಹೋಗುವವು. ಆದರಿಂದ ಅವುಗಳು ಆಳದಲ್ಲಿರುವ ಪೋಷಣಾಂಶಗಳನ್ನೂ ನೀರನ್ನೂ ಹೀರಿಕೊಳ್ಳಲು ಶಕ್ತವಾಗುವವು. ಆದರೆ ಏಕದಳ ಸಸ್ಯಗಳ ಬೇರುಗಳು ತಂತು ಬೇರುಗಳಾಗಿದ್ದು, ಹೆಚ್ಚು ಆಳದ ವರೆಗೆ ಹೋಗಿರುವುದಿಲ್ಲ. ಆದ್ದರಿಂದ ಮೇಲ್ಭಾಗದಲ್ಲಿ ತೇವಾಂಶವಿರುವಾಗ ಅಂದರೆ, ಮಳೆಗಾಲದಲ್ಲಿ (ಮೊದಲು) ಏಕದಳ ಸಸ್ಯಗಳನ್ನು ಬೆಳೆಯಬೇಕು. ನಂತರ ದ್ವಿದಳ ಸಸ್ಯಗಳನ್ನು ಬೆಳೆಯಬೇಕು.

**ಪ್ರಶ್ನೆ 6.** ಯುಸ್ಟೇಷಿಯನ್ ನಳಿಕೆಯಲ್ಲಿ ತೊಂದರೆ ಯಾದಾಗ ಕಿವಿ ಕೇಳದಿರುವ ಕಾರಣವೇನು ?

**ಉತ್ತರ :** ಯುಸ್ಟೇಷಿಯನ್ ನಳಿಕೆಯು ತಮಟೆಯ ಎರಡೂ ಬದಿಗಳ ಗಾಳಿಯ ಒತ್ತಡವನ್ನು ಸಮನಾಗಿಟ್ಟಿರುವುದ ರಿಂದ ಶಬ್ದವು ಚನ್ನಾಗಿ ಕೇಳುತ್ತದೆ. ಆದರೆ ಯುಸ್ಟೇಷಿಯನ್ ನಾಳಕ್ಕೆ ತೊಂದರೆಯಾದಾಗ ತಮಟೆಯ ಬದಿಗಳ ಗಾಳಿಯ ಒತ್ತಡದಲ್ಲಿ ವ್ಯತ್ಯಾಸವಾಗಿ ಶಬ್ದವು ಚನ್ನಾಗಿ ಕೇಳುವುದಿಲ್ಲ.

**ಪ್ರಶ್ನೆ 7.** ಜೀವಿತದ ಅವಧಿ ಇತ್ತೀಚಿನ ವರ್ಷಗಳಲ್ಲಿ ದ್ವಿಗುಣಗೊಂಡಿದೆ ಕಾರಣವೇನು ?

**ಉತ್ತರ :** ಕಾರಣ : ಸುಧಾರಿಸಿದ ನೈರ್ಮಲೀಕರಣ, ನೀರಿನ ರಕ್ಷಣೆ, ಜೀವ ನಿರೋಧಕಗಳ ಬಳಕೆ, ಲಸಿಕೆ ಹಾಕುವುದು, ಇತರ ನಿರೋಧಿಕರಣ ಪದ್ಧತಿಗಳು, ನಂಜುನಾಶಕ ಶಸ್ತ್ರ ಚಿಕಿತ್ಸೆ ಮತ್ತು ಔಷಧಿಗಳ ಬಳಕೆ ಹಳೆಯ ರೋಗಗಳನ್ನು ಗೆದ್ದಿವೆ. ಇದ ರಿಂದ ಸಾವಿನ ಸಂಖ್ಯೆಯ ಗತಿಯು ಕಡಿಮೆಯಾಗಿದೆ. ಹಿಂದೆ ಅತಿಯಾಗಿದ್ದ ಶಿಶು ಮರಣವು, ಈಗ ಬಹಳಷ್ಟು ಕಡಿಮೆಯಾ ಗಿದೆ. ಇದರಿಂದ ಜೀವಿತದ ಅವಧಿ ಇತ್ತೀಚಿನ ವರ್ಷಗಳಲ್ಲಿ ದ್ವಿಗುಣಗೊಂಡಿದೆ.

**IV ಪ್ರಶ್ನೆ 1.** ಚಿಟ್ಟೆ (Butterfly)ಯ ಪ್ರಾಣಿಯ ವಂಶವನ್ನು ಹೆಸರಿಸಿ.

**ಉತ್ತರ :** ಚಿಟ್ಟೆಯ ವಂಶ– **ಆರ್ಥ್ರೋಪೊಡಾ (ಸಂಧಿಪದಿ)**

**ಪ್ರಶ್ನೆ 2.** ಮುತ್ತು (Pearl) ಯಾವ ವಂಶದ ಪ್ರಾಣಿಯಿಂದ ದೊರಕುತ್ತದೆ ?

**ಉತ್ತರ :** ಮುತ್ತು **ಮೊಲಸ್ಕ [ಮೃದ್ವಂಗಿ]** ವಂಶದ ಪ್ರಾಣಿಗಳಿಂದ ದೊರಕುತ್ತದೆ.

**ಪ್ರಶ್ನೆ 3.** ಡಾರ್ವಿನ್ ಶೋಧನೆಗಳು ಏನನ್ನು ಸಿದ್ಧಪಡಿ ಸುತ್ತವೆ ?

**ಉತ್ತರ :** ಡಾರ್ವಿನ್‌ನ ಶೋಧನೆಗಳು ನಿಸರ್ಗದ ಆಯ್ಕೆ **(Natural Selection)**ಯನ್ನು ಸಿದ್ಧಪಡಿಸುತ್ತವೆ.

**ಪ್ರಶ್ನೆ 4.** ಹುಚ್ಚುನಾಯಿ ಕಡಿತಕ್ಕೆ ಚಿಕಿತ್ಸೆಯನ್ನು ಬಳ ಕೆಗೆ ತಂದ ವಿಜ್ಞಾನಿ ಯಾರು ?

**ಉತ್ತರ :** ಹುಚ್ಚುನಾಯಿ ಕಡಿತಕ್ಕೆ ಚಿಕಿತ್ಸೆಯನ್ನು ಬಳಕೆಗೆ ತಂದ ವಿಜ್ಞಾನಿ– **ಲೂಯಿಪಾಶ್ಚರ.**

**V ಪ್ರತಿಯೊಂದಕ್ಕೂ ಸರಿಯಾದ ಕಾರಣ ಕೊಡಿ.**

**ಪ್ರಶ್ನೆ 1.** ಎರೆಹುಳು ಒಂದು ಅಕಶೇರುಕ (Invertebrate) ಪ್ರಾಣಿ.

**ಉತ್ತರ :** ಕಾರಣ : ಎರೆಹುಳಕ್ಕೆ ಬೆನ್ನುಮೂಳೆ ಇರುವು ದಿಲ್ಲ. ಆದ್ದರಿಂದ ಅದು ಒಂದು ಅಕಶೇರುಕ ಪ್ರಾಣಿ.

**ಪ್ರಶ್ನೆ 2** ಮೃದ್ವಸ್ಥಿ (Cartilage) ಗಟ್ಟಿಯಾಗಿಲ್ಲ.

**ಉತ್ತರ :** ಕಾರಣ : ಮೃದ್ವಸ್ಥಿಯ ಮಾತೃಕೆಯಲ್ಲಿ ಕ್ಯಾಲ್ಸಿಯಮ್ ಲವಣಗಳಿಲ್ಲ. ಇದರ ಕೋಶಗಳು ರಬ್ಬರಿನಂತಹ ಮಾತೃಕೆಗಳ ಕುಹರಗಳಲ್ಲಿ ಹುದುಗಿರುತ್ತವೆ. ಮೃದ್ವಸ್ಥಿಯು ಬಾಗುವ ಗುಣವನ್ನು ಪಡೆದಿರುತ್ತದೆ. ಆದ್ದರಿಂದ ಮೃದ್ವಸ್ಥಿ ಗಟ್ಟಿಯಾಗಿಲ್ಲ.

**ಪ್ರಶ್ನೆ 3.** ಕಬ್ಬಿನ ಗಿಡ (Sugar cane)ದಲ್ಲಿ ತಾಯಿಬೇರು ಇಲ್ಲ.

**ಉತ್ತರ :** ಕಾರಣ : ಕಬ್ಬು ಏಕದಳ ಸಸ್ಯವಾಗಿದೆ. ಏಕ ದಳ ಸಸ್ಯಗಳಲ್ಲಿ ತಂತು ಬೇರು ಮಾತ್ರ ಇರುತ್ತವೆ. ತಾಯಿಬೇರು ಇರುವುದಿಲ್ಲ. ಆದ್ದರಿಂದ ಕಬ್ಬಿನ ಗಿಡದಲ್ಲಿ ತಾಯಿಬೇರು ಇರು ವುದಿಲ್ಲ.

**ಪ್ರಶ್ನೆ 4.** ಶುಂಠಿ ಭೂಮಿಯೊಳಗಿದ್ದರೂ, ಕಾಂಡವೆಂದು ಪರಿಗಣಿಸಲ್ಪಟ್ಟಿದೆ.

**ಉತ್ತರ :** ಕಾರಣ : ಶುಂಠಿಯ ಕಾಂಡವು ಆಹಾರ ಸಂಗ್ರಹಣೆಗೆ ಮಾರ್ಪಾಟಾಗಿದೆ. ಇದರಲ್ಲಿ ಗಿಣ್ಣು, ಅಂತರ ಗಿಣ್ಣು, ಹುರುಪೆ ಎಲೆ ಮತ್ತು ಮೊಗ್ಗುಗಳಂತಹ ಕಾಂಡದ ಎಲ್ಲ ಲಕ್ಷಣಗಳೂ ಕಂಡು ಬರುತ್ತವೆ. ಆದ್ದರಿಂದ ಶುಂಠಿ ಭೂಮಿಯ ಲ್ಲಿದ್ದರೂ ಕಾಂಡವೆಂದು ಪರಿಗಣಿಸಲ್ಪಡುವುದು.

**ಪ್ರಶ್ನೆ 5.** ಆಮ್ಲ ಬಿದ್ದು ಗಾಯವಾದಾಗ ಸುಣ್ಣದ ನೀರಿನಿಂದ ತೊಳೆಯಬೇಕು.

**ಉತ್ತರ :** ಕಾರಣ : ಸುಣ್ಣದ ನೀರು ಒಂದು ಪ್ರತ್ಯಾಮ್ಲ ವಾಗಿದೆ. ಈ ಪ್ರತ್ಯಾಮ್ಲವು ಗಾಯದಲ್ಲಿಯ ಆಮ್ಲದೊಡನೆ ವರ್ತಿಸಿ ಆಮ್ಲವನ್ನು ತಟಸ್ಥೀಕರಿಸುವುದರಿಂದ ಆಮ್ಲದಿಂದ ಆಗು ತ್ತಿರುವ ಉರಿತವು ಕಡಿಮೆಯಾಗುವುದು. ಆದ್ದರಿಂದ ಆಮ್ಲ ದಿಂದಾದ ಗಾಯಗಳನ್ನು ಸುಣ್ಣದ ನೀರಿನಿಂದ ತೊಳೆಯುತ್ತಾರೆ.

**VI ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತಪದದಿಂದ ತುಂಬಿರಿ. (ದಪ್ಪಕ್ಷರದ ಪದ ತುಂಬಿದ ಪದ)**

1] ದ್ವಿನಾಮಕರಣ ಪದ್ಧತಿಯನ್ನು ಬಳಕೆಯಲ್ಲಿ ತಂದ ವಿಜ್ಞಾನಿ **ಲಿನಿಯಸ್.**

2] ಗೋಧಿ [Wheat]ಯಲ್ಲಿರುವ ದಳಗಳ ಸಂಖ್ಯೆ ಒಂದು.

3] ನಕ್ಷತ್ರ ಮೀನು [Star fish] ಎಕ್ಕಿನೋಡರ್ಮೆಟ (ಕಂಟಕ ಚರ್ಮಿ) ವಂಶಕ್ಕೆ ಸೇರಿದ ಪ್ರಾಣಿ.

4] ನೀರನ್ನು ಸಾಗಿಸುವ ಸಸ್ಯ ಅಂಗಾಂಶದ ಹೆಸರು ಕ್ಸೈಲೆಮ್.

5) ಹಸಿರು ಸಸ್ಯಗಳು ದ್ಯುತಿ ಸಂಶ್ಲೇಷಣೆ ಕ್ರಿಯೆಯಿಂದ ತಮ್ಮ ಆಹಾರವನ್ನು ತಯಾರಿಸಿಕೊಳ್ಳುತ್ತವೆ.

VII ಕೆಳಗಿನವುಗಳ ಒಂದೊಂದು ಕಾರ್ಯವನ್ನು ತಿಳಿಸಿರಿ.

**ಪ್ರಶ್ನೆ 1.** ಸಸ್ಯಗಳಲ್ಲಿರುವ ಫ್ಲೋಯಂ (Phloem) ನಳಿಕೆಗಳು.

**ಉತ್ತರ : ಕಾರ್ಯ :** ಸಸ್ಯಗಳ ಎಲೆಗಳಲ್ಲಿ ತಯಾರಾದ ಆಹಾರವನ್ನು ಸಸ್ಯದ ಎಲ್ಲ ಭಾಗಗಳಿಗೂ ಸಾಗಿಸುವುದು.

**ಪ್ರಶ್ನೆ 2.** ಕ್ರೋಮೋಸೋಮ್‌ಗಳಲ್ಲಿರುವ ಗುಣಾನು (Gene)ಗಳು.

**ಉತ್ತರ : ಕಾರ್ಯ :** ಗುಣಾನುಗಳು ಅನುವಂಶೀಯ ಗುಣಗಳನ್ನು ಪೀಳಿಗೆಯಿಂದ ಪೀಳಿಗೆಗೆ ಒಯ್ಯುವವು.

**ಪ್ರಶ್ನೆ 3.** ಯುಗ್ಲೀನಾದಲ್ಲಿರುವ ಕಶಾಂಗ (Flagellum)

**ಉತ್ತರ : ಕಾರ್ಯ :** ಕಶಾಂಗವು ಯುಗ್ಲೀನಾದ ಚಲನೆಗೆ ಸಹಾಯ ಮಾಡುತ್ತದೆ.

**ಪ್ರಶ್ನೆ 4.** ಜೀವಕೋಶದಲ್ಲಿ ಮೈಟೋಕಾಂಡ್ರಿಯ

**ಉತ್ತರ : ಕಾರ್ಯ :** ಜೀವಕೋಶಗಳಿಗೆ ಶಕ್ತಿಯನ್ನು ಒದಗಿಸುವುದು ಮೈಟೋಕಾಂಡ್ರಿಯದ ಕಾರ್ಯವಾಗಿದೆ.

---

# ವಿಜ್ಞಾನ

## ಅಕ್ಟೋಬರ್ 1985 — 1 ನೆಯ ಪತ್ರಿಕೆ

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : 2½ ಗಂಟೆ ] [ ಗುಣಗಳು : 65

**ಪ್ರಶ್ನೆ 1. a)** ಅಂದವಾದ ಚಿತ್ರದ ಸಹಾಯದಿಂದ ಪ್ರೇರಣಾ ಸುರಳಿಯ ಕಾರ್ಯವನ್ನು ವಿವರಿಸಿ. ಅದನ್ನು ಏತಕ್ಕೆ ಉಪಯೋಗಿಸುತ್ತಾರೆ ? ಕಿಡಿಗಳು ಉಂಟಾಗುವುದನ್ನು ಹೇಗೆ ತಡೆಯಬಹುದು ?




**ಉತ್ತರ :** PP–ಪ್ರಧಾನ ಸುರಳಿ, SS–ಉಪ ಸುರುಳಿ, K–ಕಬ್ಬಿಣದ ಸುತ್ತಿಗೆ, C–ಮೆದು ಕಬ್ಬಿಣದ ತಿರುಳು.

**ಪ್ರೇರಣಾ ಸುರುಳಿಯ ಕಾರ್ಯ :** ಮಂಡಲವನ್ನು ಪೂರ್ಣಗೊಳಿಸಲು, ಪ್ರಧಾನ ಸುರುಳಿ (PP)ಯಲ್ಲಿ ಡಿ. ಸಿ. ಪ್ರವಾಹವು ಹರಿಯುತ್ತದೆ. ಆಗ ಮೆದು ಕಬ್ಬಿಣದ ತಿರುಳು (C) ಕಾಂತವಾಗಿ ರೂಪುಗೊಳ್ಳುತ್ತದೆ. ಆಗ ಅದು ಕಬ್ಬಿಣದ ಸುತ್ತಿಗೆ (H)ಯನ್ನು ಆಕರ್ಷಿಸುತ್ತದೆ. ಆದರಿಂದ M ಸ್ಕ್ರೂ ಮತ್ತು H ಸುತ್ತಿಗೆ ಇವುಗಳ ಸಂಪರ್ಕ ಕಡಿದು ಹೋಗುವುದರಿಂದ ಮಂಡಲವು ಅಪೂರ್ಣವಾಗುವುದು. ಆದರಿಂದ ಪ್ರಧಾನ ಸುರುಳಿಯಲ್ಲಿಯ ಪ್ರವಾಹ ನಿಲ್ಲುವುದು. ಆದರಿಂದ ಕಬ್ಬಿಣದ ತಿರುಳು ಕಾಂತತ್ವವನ್ನು ಕಳೆದುಕೊಳ್ಳುತ್ತದೆ. ಕೂಡಲೆ H ಸುತ್ತಿಗೆಯು ನಿರಾಕರಿಸಲ್ಪಡುವುದರಿಂದ ಅದು ಹಿಂದಕ್ಕೆ ಸರಿದು M–ಸ್ಕ್ರೂದ ಸಂಪರ್ಕ ಸಾಧಿಸುತ್ತದೆ. ಪುನಃ ಮೊದಲಿನ ಕ್ರಿಯೆಯು ಪುನರಾವೃತ್ತಿಯಾಗುತ್ತದೆ. ಪ್ರಧಾನ ಸುರುಳಿಯಲ್ಲಿ ಬಿಟ್ಟು ಬಿಟ್ಟು ವಿದ್ಯುತ್ಪ್ರವಾಹವು ಹರಿಯುವುದರಿಂದ ಉಪ ಸುರುಳಿಯಲ್ಲಿ ಬೃಹತ್ಪ್ರಮಾಣದ ವಿ. ಚಾ. ಬ. ಪ್ರೇರಿತವಾಗುತ್ತದೆ. ಉಪಸುರುಳಿಯಲ್ಲಿಯ ವೋಲ್ಟತೆಯು ಅದರಲ್ಲಿಯ ತಂತಿಯ ಸುತ್ತುಗಳ ಅನುಪಾತವನ್ನು ಅವಲಂಬಿಸಿರುತ್ತದೆ.

ಪ್ರೇರಣಾ ಸುರುಳಿಯನ್ನು ಉನ್ನತ ವೋಲ್ಟತೆಯ ಆಕರವನ್ನಾಗಿ ಉಪಯೋಗಿಸುವರು. ಅನಿಲಗಳಲ್ಲಿ ವಿದ್ಯುದ್ವಿಸರ್ಜನೆಯನ್ನುಂಟು ಮಾಡಲು ಉಪಯೋಗಿಸುವರು.

ಪ್ರೇರಣಾ ಸುರುಳಿಯಲ್ಲಿ ಕಂಡೆನ್ಸರನ್ನು ಉಪಯೋಗಿಸುವುದರಿಂದ ಕಿಡಿಗಳು ಉಂಟಾಗುವುದನ್ನು ತಡೆಯಬಹುದು.

b) ಕಾಂತತ್ವದ "ವಿಲೋಮ ವರ್ಗ ನಿಯಮ"ವನ್ನು ವಿವರಿಸಿ.

**ಉತ್ತರ :** ಎರಡು ಕಾಂತೀಯ ಧ್ರುವಗಳ ನಡುವೆ ವರ್ತಿಸುವ ಬಲವು ಆ ಧ್ರುವಗಳ ಸಾಮರ್ಥ್ಯಗಳ ಗುಣಲಬ್ಧಕ್ಕೆ ಸಮಾನುಪಾತದಲ್ಲಿಯೂ ಮತ್ತು ಅವುಗಳ ನಡುವಿನ ದೂರದ ವರ್ಗಕ್ಕೆ ವಿಲೋಮಾನುಪಾತದಲ್ಲಿಯೂ ಇರುತ್ತದೆ.

$F \propto \frac{m_1 m_2}{d^2}$ F– ಧ್ರುವಗಳ ನಡುವೆ ವರ್ತಿಸುವ ಬಲ

$m_1 m_2$–ಕಾಂತೀಯ ಧ್ರುವಗಳ ಸಾಮರ್ಥ್ಯ

d–ಧ್ರುವಗಳ ನಡುವಿನ ದೂರ

ಅಥವಾ $F = K\frac{m_1 m_2}{d^2}$ ಇಲ್ಲಿ K–ಸಮಾನುಪಾತ ಸ್ಥಿರಾಂಕ

ಇನ್ನು $m_1 m_2 = 1$ ಏಕಮಾನ ಧ್ರುವ, $d=1$ ಸೆಂ. ಮೀ. $F=1$ ಡೈನ್ ಇದ್ದರೆ, $K=1$ ಆಗುತ್ತದೆ.

ಆಗ $F = \frac{m_1 m_2}{d^2}$ ಆಗುತ್ತದೆ.

c) ವಿದ್ಯುತ್ಕಾಂತಗಳು ಎಂದರೇನು ? ಅವುಗಳನ್ನು ಹೇಗೆ ತಯಾರಿಸುತ್ತಾರೆ ? ಅವುಗಳ ಉಪಯೋಗವೇನು ?

**ಉತ್ತರ : ವಿದ್ಯುತ್ಕಾಂತ :** ಮೆದು ಕಬ್ಬಿಣದ ದಂಡದ ಮೇಲೆ ಸುತ್ತಿದ ತಂತಿಯ ಸುರುಳಿಯಲ್ಲಿ ವಿದ್ಯುತ್ಪ್ರವಾಹವು ಹರಿಯುವಾಗ ಮಾತ್ರ ಕಾಂತೀಯ ಗುಣಗಳನ್ನು ಪ್ರದರ್ಶಿಸುವ ತಾತ್ಕಾಲಿಕ ಆಯಸ್ಕಾಂತಗಳನ್ನು ವಿದ್ಯುತ್ಕಾಂತಗಳೆನ್ನುವರು.

**ವಿದ್ಯುತ್ಕಾಂತಗಳ ತಯಾರಿಕೆ :** ಮೆದು ಕಬ್ಬಿಣದ ದಂಡದ ಮೇಲೆ ಅವಾಹಕ ಕವಚವಿರುವ ತಾಮ್ರದ ತಂತಿಯನ್ನು ಸುತ್ತುವುದರಿಂದ ವಿದ್ಯುತ್ಕಾಂತಗಳನ್ನು ತಯಾರಿಸುತ್ತಾರೆ.

**ವಿದ್ಯುತ್ಕಾಂತಗಳ ಉಪಯೋಗ :** ವಿದ್ಯುತ್ ಘಂಟೆಗಳಲ್ಲಿ, ಟೆಲಿಗ್ರಾಫ್ ಗ್ರಾಹಕದಲ್ಲಿ, ಟೇಪರಿಕಾರ್ಡರಗಳಲ್ಲಿ ವಿದ್ಯುತ್ ಕಾಂತಗಳನ್ನು ಉಪಯೋಗಿಸುವರು.

**ಪ್ರಶ್ನೆ 2.** a) i) ತಂತಿಯ ವಿದ್ಯುನ್ನಿರೋಧಕವು ಯಾವ ಅಂಶಗಳನ್ನು ಅವಲಂಬಿಸಿರುತ್ತದೆ. ಬರೆಯಿರಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 11 (a) ನೋಡಿ.

ii) ವಿದ್ಯುತ್ ಬಲ್ಬುಗಳಲ್ಲಿ ಟಂಗ್‌ಸ್ಟನ್ ತಂತಿಗಳನ್ನು ಏಕೆ ಉಪಯೋಗಿಸುತ್ತಾರೆ ?

**ಉತ್ತರ :** ಟಂಗ್‌ಸ್ಟನ್ ಲೋಹದ ರೋಧ(ವಿದ್ಯುನ್ನಿರೋಧ)ವು ಅಧಿಕವಾಗಿದ್ದು ಅದರ ಕರಗುವ ಬಿಂದು ಕೂಡ ಅತ್ಯಂತ ಹೆಚ್ಚು (ಸುಮಾರು 2500°C) ಇರುವುದರಿಂದ ಅದು ಹೆಚ್ಚು ಬೆಳಕನ್ನು ಕೊಡುವುದಲ್ಲದೆ, ಬಾಳಿಕೆಯೂ ಹೆಚ್ಚು. ಆದ್ದರಿಂದ ಟಂಗ್‌ಸ್ಟನ್‌ನ್ನು ಬಲ್ಬುಗಳಲ್ಲಿ ಉಪಯೋಗಿಸುವರು.

iii) 10, 15 ಮತ್ತು 20 ಓಂಗಳ ರೋಧಗಳುಳ್ಳ ಮೂರು ತಂತಿಗಳನ್ನು ಸಮಾಂತರವಾಗಿ ಜೋಡಿಸಿದೆ. ಈ ಜೋಡಣೆಯ ಚಿತ್ರ ಬರೆದು, ಅವುಗಳ ನಿವ್ವಳ ರೋಧವನ್ನು ಕಂಡು ಹಿಡಿಯಿರಿ.




**ಚಿತ್ರ : ರೋಧಗಳ ಸಮಾಂತರ ಜೋಡಣೆ**

ರೀತಿ : $R_1=10$ ಓಂ, $R_2=15$ ಓಂ ಮತ್ತು $R_3=20$ ಓಂ ಇರಲಿ.

$$\frac{1}{R} = \frac{1}{R_1} + \frac{1}{R_2} + \frac{1}{R_3}$$

$$= \frac{1}{10} + \frac{1}{15} + \frac{1}{20} = \frac{6+4+3}{60} = \frac{13}{60}$$

$\therefore R = \frac{60}{13} = 4.61$ ಓಂ.

$\therefore$ ಜೋಡಣೆಯ ನಿವ್ವಳ ರೋಧ= 4.61 ಓಂ. Ans.

b) ಒಂದು ಮನೆಯಲ್ಲಿ 25 ವಾಟ್ಟಿನ 2 ಬಲ್ಬುಗಳು ದಿನಕ್ಕೆ 4 ಗಂಟೆಗಳ ಕಾಲ ಮತ್ತು 40 ವಾಟ್ಟಿನ 2 ಬಲ್ಬುಗಳು ದಿನಕ್ಕೆ 2 ಗಂಟೆಗಳ ಕಾಲ ಉರಿಯುತ್ತವೆ. ಯುನಿಟ್ಟಿಗೆ 60 ಪೈಸೆಯಂತೆ ಜೂನ ತಿಂಗಳಲ್ಲಿ ಬಳಸಿದ ವಿದ್ಯುಚ್ಛಕ್ತಿಯ ಒಟ್ಟು ಖರ್ಚು ಎಷ್ಟು ?

ರೀತಿ : ಪ್ರತಿದಿನ ಬಳಸಿದ ವಿದ್ಯುಚ್ಛಕ್ತಿ=

=(2×25×4+2×40×2)ವಾ.ಅವರ್.

=(200+160) ವಾ. ಅವರ್

=360 ವಾ. ಅವರ್

∴ ಜೂನ ತಿಂಗಳಲ್ಲಿ ಬಳಸಿದ ವಿದ್ಯುಚ್ಛಕ್ತಿ =

=(360 × 30) ವಾ. ಅವರ್

=10,800 ವಾ. ಅವರ್

∴ $= \frac{10,800}{1000}$ ವಾ. ಅವರ್

=10.8 ಕಿ. ವಾ. ಅ.

(ಯುನಿಟ್‌ಗಳು)

∴ ವಿದ್ಯುಚ್ಛಕ್ತಿಯ ಜೂನ ತಿಂಗಳ ಖರ್ಚು

=(10.8 × 60) ಪೈಸೆ

=648.0 ಪೈಸೆ=6.48 ರೂ.Ans.

c) ವಿದ್ಯುಚ್ಛಕ್ತಿಯನ್ನು ಅಳೆಯುವ ಉಪಕರಣ ಯಾವುದು ?

**ಉತ್ತರ :** ವಿದ್ಯುಚ್ಛಕ್ತಿಯನ್ನು ಅಳೆಯುವ ಉಪಕರಣ– ಮೀಟರ್ (ವಿದ್ಯುತ್ ಮೀಟರ್).

**ಪ್ರಶ್ನೆ 3.** a) "ಸಮರೂಪ ವೇಗವರ್ಧನೆ" ಎಂದರೇನು ? ಒಂದು ಉದಾಹರಣೆ ಕೊಡಿ.

**ಉತ್ತರ : ಸಮರೂಪ ವೇಗ ವರ್ಧನೆ :** ವೇಗ ಪರಿವರ್ತಕ ಮತ್ತು ಕ್ರಿಯಾ ವಸ್ತುಗಳೆರಡೂ ಒಂದೇ ಭೌತಿಕ ಅವಸ್ಥೆಯಲ್ಲಿರುವ ವೇಗವರ್ಧನೆ ಕ್ರಿಯೆಯನ್ನು ಸಮರೂಪ ವೇಗವರ್ಧನೆ ಎನ್ನುವರು.

ಉದಾ : ಸಲ್ಫರ್ ಡೈ ಆಕ್ಸೈಡ್ ಉತ್ಕರ್ಷಣ ಹೊಂದಿ ಸಲ್ಫರ್ ಟ್ರೈ ಆಕ್ಸೈಡ್ ಆಗುವ ಕ್ರಿಯೆಯಲ್ಲಿ, ನೈಟ್ರಿಕ್ ಆಕ್ಸೈಡ್ ಹಾಗೂ ನೈಟ್ರೋಜನ್ ಡೈ ಆಕ್ಸೈಡ್‌ಗಳು ವೇಗ ಪರಿವರ್ತಕಗಳಾಗಿವೆ. ಇಲ್ಲಿ NO ಮತ್ತು $NO_2$ ಪರಿವರ್ತಕಗಳು, $SO_2$ ಮತ್ತು $SO_3$ಗಳು ಕ್ರಿಯಾ ವಸ್ತುಗಳು ಒಂದೇ ಭೌತಿಕ ಅವಸ್ಥೆ ಅಂದರೆ ಅನಿಲ ರೂಪದಲ್ಲಿರುತ್ತವೆ.

b) ವಿದ್ಯುಚ್ಛಕ್ತಿಯ ಶಾಖ ಪರಿಣಾಮದ ಎರಡು ಉಪಯೋಗಗಳನ್ನು ಬರೆಯಿರಿ.

**ಉತ್ತರ :** ವಿದ್ಯುತ್ ಇಸ್ತ್ರಿ ಪೆಟ್ಟಿಗೆ, ವಿದ್ಯುತ್ ಒಲೆ, ನೀರು ಕಾಸುವ ಹೀಟರ್‌ಗಳ ತಯಾರಿಕೆಯಲ್ಲಿ ವಿದ್ಯುಚ್ಛಕ್ತಿಯ ಶಾಖ ಪರಿಣಾಮದ ಉಪಯೋಗವಾಗಿದೆ.

**ಪ್ರಶ್ನೆ 4.** a) ಸಮಸ್ಥಾನಿಗಳು ಎಂದರೇನು? ಜಲಜನಕದ ಸಮಸ್ಥಾನಿಗಳನ್ನು ಬರೆಯಿರಿ.

**ಉತ್ತರ :** ಕೆಲವು ಮೂಲವಸ್ತುಗಳಲ್ಲಿ ಪರಮಾಣು ಸಂಖ್ಯೆ ಒಂದೇ ಇದ್ದು, ದ್ರವ್ಯರಾಶಿ ಸಂಖ್ಯೆಗಳು ಬೇರೆ ಬೇರೆಯಾಗಿರುತ್ತವೆ. ಇವುಗಳನ್ನು ಸಮಸ್ಥಾನಿ(Isotopes)ಗಳು ಎನ್ನುವರು.

**ಜಲಜನಕದ ಸಮಸ್ಥಾನಿಗಳು :** ಹೈಡ್ರೋಜನ್ (ಜಲಜನಕ), ಡ್ಯುಟೀರಿಯಮ್, ಟ್ರೀಸಿಯಮ್.

b) ವಿದ್ಯುನ್ಮಂಡಲವನ್ನು ಒಂದು ದಾರದಿಂದ ಮುಚ್ಚಿದಾಗ ಬಲ್ಬು ಏಕೆ ಉರಿಯುವುದಿಲ್ಲ ?

**ಉತ್ತರ :** ದಾರವು ವಿದ್ಯುತ್ತಿನ ಅವಾಹಕ. ಆದ್ದರಿಂದ ಬಲ್ಬು ಉರಿಯುವುದಿಲ್ಲ.

**ಪ್ರಶ್ನೆ 5.** a) ನಿರ್ದ್ರವ ಕೋಶದ ಚಿತ್ರವನ್ನು ಬರೆದು ಭಾಗಗಳನ್ನು ಗುರುತಿಸಿ.




**ಉತ್ತರ : ನಿರ್ದ್ರವಕೋಶ : ಭಾಗಗಳು :**

a– ಸತುವಿನ ಪಾತ್ರೆ

b– ಅಮೋನಿಯಮ್ ಕ್ಲೋರೈಡ್ ಮತ್ತು ಸತುವಿನ ಕ್ಲೋರೈಡ್‌ಗಳ ಮಿಶ್ರಣ

c– ಮಸ್ಲಿನ್ ಅರಿವೆ

d– ಮ್ಯಾಂಗನೀಜ ಡೈಆಕ್ಸೈಡ್ ಮತ್ತು ಇಂಗಾಲಗಳ ಮಿಶ್ರಣ

e– ಇಂಗಾಲದ ಕಡ್ಡಿ
f– ಬಂಧನ ಸ್ಕ್ರೂ ಇಲ್ಲವೆ ಹಿತ್ತಾಳಿಯ ಟೋಪಿ
g– ಅರಗಿನ ಸೀಲು

b) ವಿದ್ಯುತ್ ಪರಿವರ್ತಕದ ಎರಡು ಬಗೆಗಳನ್ನು ತಿಳಿಸಿ.

**ಉತ್ತರ :** 1) ವೋಲ್ಟತೆಯನ್ನು ಹೆಚ್ಚಿಸುವ ವಿದ್ಯುತ್ ಪರಿವರ್ತಕ. (Step up transformer)

2) ವೋಲ್ಟತೆಯನ್ನು ಇಳಿಸುವ (ಕಡಿಮೆ ಮಾಡುವ) ಪರಿವರ್ತಕ (Step down transformer)

**ಪ್ರಶ್ನೆ 6.** a) i) ಕೂಲಂಬನ ವಿದ್ಯುದಾವೇಶ ನಿಯಮವನ್ನು ವಿವರಿಸಿರಿ.

**ಉತ್ತರ : ಕೂಲಂಬನ ನಿಯಮ :** ಎರಡು ವಿದ್ಯುದಾವಿಷ್ಟ ಕಾಯಗಳ ನಡುವಿನ ಬಲವು ಅವುಗಳ ಮೇಲಿನ ಆವೇಶಗಳ ಪರಿಮಾಣಕ್ಕೆ ಸಮಾನುಪಾತದಲ್ಲಿಯೂ ಮತ್ತು ಅವುಗಳ ನಡುವಿನ ದೂರದ ವರ್ಗಕ್ಕೆ ವಿಲೋಮಾನುಪಾತದಲ್ಲಿಯೂ ಇರುತ್ತದೆ.

ಈಗ $Q_1$, $Q_2$ ಗಳು ವಿದ್ಯುದಾವೇಶಗಳು, d ಇದು ಆ ವಿದ್ಯುದಾವಿಷ್ಟ ಕಾಯಗಳ ನಡುವಿನ ಧೂರ ಇದ್ದರೆ,

$$F \propto \frac{Q \times Q_2}{d_2} \text{ ಅಥವಾ } F = K\frac{Q_1 Q_2}{d_2}$$

ಇಲ್ಲಿ K→ಸಮಾನುಪಾತ ಸ್ಥಿರಾಂಕ.

ii) 40 e.s.u. ಮತ್ತು 80 e.s.u. ವಿದ್ಯುದಾವೇಶ ಹೊಂದಿರುವ ಎರಡು ಚಿಕ್ಕ ಗೋಳಾಕೃತಿಯ ಬಲೂನುಗಳನ್ನು ಪರಸ್ಪರ 20 ಸೆ.ಮೀ. ದೂರದಲ್ಲಿ ಇಟ್ಟಾಗ ಬಲವನ್ನು ಕಂಡು ಹಿಡಿಯಿರಿ,

ರೀತಿ : ಇಲ್ಲಿ $Q_1 = 40$ e.s.u. $Q_2 = 20$ e.s.u.
ದೂರ $d = 20$ c.m.

$$\therefore \text{ ಬಲ } F = \frac{Q_1 Q_2}{d_2} = \frac{40 \times 80}{(20)^2} = \frac{40 \times 80}{20 \times 20}$$

=8 ಡೈನ್‌ಗಳು Ans.

b) ಸುರಕ್ಷಿತ ಫ್ಯೂಝು ಎಂದರೇನು ? ವಿದ್ಯುನ್ಮಂಡಲದಲ್ಲಿ ಇದನ್ನು ಏಕೆ ಉಪಯೋಗಿಸುತ್ತಾರೆ ?

**ಉತ್ತರ : ಸುರಕ್ಷಿತ ಫ್ಯೂಜ :** ವಿದ್ಯುನ್ಮಂಡಲದಲ್ಲಿರುವ ಬೆಲೆ ಬಾಳುವ ವಿದ್ಯುದುಪಕರಣಗಳನ್ನು ವಿದ್ಯುತ್ಪ್ರವಾಹದಲ್ಲಿ ಆಗುವ ಬದಲಾವಣೆಯಿಂದ ರಕ್ಷಿಸಲು ವಿದ್ಯುನ್ಮಂಡಲದಲ್ಲಿ ಉಪಯೋಗಿಸುವ ತಂತಿಯನ್ನು ಸುರಕ್ಷಿತ ಫ್ಯೂಜು ಎನ್ನುವರು.

ವಿದ್ಯುನ್ಮಂಡಲದಲ್ಲಿ ಕ್ವಚಿತ್ತಾಗಿ ಹೆಚ್ಚು ಬಲದ ವಿದ್ಯುತ್ಪ್ರವಾಹವು ಬಂದರೆ, ಮಂಡಲದಲ್ಲಿರುವ ಬೆಲೆಬಾಳುವ ವಿದ್ಯುದುಪಕರಣಗಳಾದ ಫ್ರಿಜ್, ಟಿ.ವ್ಹಿ., ರೇಡಿಯೋ ಮುಂತಾದವುಗಳು ಸುಡುವ ಸಂಭವ ಇರುತ್ತದೆ. ಆದ್ದರಿಂದ ಅವುಗಳನ್ನು ರಕ್ಷಿಸಲು ಮಂಡಲದಲ್ಲಿ ಫ್ಯೂಜ್ ತಂತಿಯನ್ನು ಉಪಯೋಗಿಸುವರು. ಹೆಚ್ಚು ಬಲದ ವಿದ್ಯುತ್ಪ್ರವಾಹವು ಬಂದಾಗ ಫ್ಯೂಜ್ ತಂತಿಯು ಕರಗಿ ಹೋಗುವದು. ಆದರಿಂದ ಮಂಡಲವು ಅಪೂರ್ಣವಾಗುವುದು, ಅದರಿಂದ ಉಪಕರಣಗಳು ರಕ್ಷಿಸಲ್ಪಡುವವು.

**ಪ್ರಶ್ನೆ 7.** a) ಚಿಕ್ಕ ಕೊಠಡಿಗಳಲ್ಲಿ ಏಕೆ ಪ್ರತಿಧ್ವನಿಗಳು ಉತ್ಪತ್ತಿಯಾಗುವುದಿಲ್ಲ ?

**ಉತ್ತರ :** ಪ್ರತಿಧ್ವನಿಗಳು ಕೇಳಿಸಬೇಕಾದರೆ ಶಬ್ದದ ಅಲೆಗಳು ಅಪ್ಪಳಿಸಬೇಕಾದ ಸ್ಥಳದ ದೂರದ ಶಬ್ದದ ಉತ್ಪತ್ತಿ ಸ್ಥಾನದಿಂದ ಕನಿಷ್ಠ ಪಕ್ಷ 16.5 ಮೀ. ದೂರದಲ್ಲಿರಬೇಕು, ಆದರೆ ಚಿಕ್ಕ ಕೊಠಡಿಗಳಲ್ಲಿ ಇಷ್ಟು ದೂರದಲ್ಲಿ ಯಾವ ಸ್ಥಾನವೂ ಇರುವುದಿಲ್ಲ. ಆದ್ದರಿಂದ ಚಿಕ್ಕ ಕೊಠಡಿಗಳಲ್ಲಿ ಪ್ರತಿಧ್ವನಿಗಳು ಉತ್ಪತ್ತಿಯಾಗುವುದಿಲ್ಲ.

b) ಬಾಯ್ಲನ ಅನಿಲಗಳ ನಿಯಮವನ್ನು ಬರೆಯಿರಿ.

**ಉತ್ತರ : ಬಾಯ್ಲ್‌ನ ಅನಿಲಗಳ ನಿಯಮ :** ಉಷ್ಣತೆಯು ಸ್ಥಿರವಿರುವಾಗ ಗೊತ್ತಾದ ದ್ರವ್ಯರಾಶಿಯುಳ್ಳ ಅನಿಲದ ಗಾತ್ರವು ಅದರ ಮೇಲಿನ ಒತ್ತಡಕ್ಕೆ ವಿಲೋಮಾನುಪಾತದಲ್ಲಿರುವುದು. ಅಥವಾ ಉಷ್ಣತೆಯು ಸ್ಥಿರವಿರುವಾಗ ಗೊತ್ತಾದ ದ್ರವ್ಯರಾಶಿಯುಳ್ಳ ಅನಿಲದ ಗಾತ್ರ ಮತ್ತು ಅದರ ಮೇಲಿನ ಒತ್ತಡ ಇವುಗಳ ಗುಣಲಬ್ಧವು ಸ್ಥಿರವಿರುತ್ತದೆ.

**ಪ್ರಶ್ನೆ 8.** a) ಚಲನ ಪರಿಮಾಣ (Momentum) ಎಂದರೇನು ? 100 ಕೆ.ಜಿ. ತೂಕವುಳ್ಳ ಒಬ್ಬ ಹುಡುಗನು ಸೆಕೆಂಡಿಗೆ 2.5 ಮೀಟರ್ ವೇಗದಲ್ಲಿ ಚಲಿಸಿದರೆ, ಅವನ ಚಲನ ಪರಿಮಾಣವೆಷ್ಟು ?

**ಉತ್ತರ : ಚಲನ ಪರಿಮಾಣ :** ಒಂದು ವಸ್ತುವಿನ ದ್ರವ್ಯರಾಶಿ ಮತ್ತು ಅದರ ವೇಗ ಅವುಗಳ ಗುಣಲಬ್ಧವನ್ನು ಆ ವಸ್ತುವಿನ ಚಲನ ಪರಿಮಾಣ (Momentum) ಎನ್ನುವರು.

∴ ಚಲನ ಪರಿಮಾಣ = ದ್ರವ್ಯರಾಶಿ×ವೇಗ
ಹುಡುಗನ ದ್ರವ್ಯರಾಶಿ $m = 100$ ಕೆ.ಜಿ.,
ವೇಗ $v = 2.5$ ಮೀ/ಸೆ.

∴ ಹುಡುಗನ ಚಲನ ಪರಿಮಾಣ $= mv$
$= (100 \times 2.5)$ ನ್ಯೂಟನ್
$= 250$ ನ್ಯೂಟನ್‌ಗಳು Ans.

b) ಎತ್ತರದಿಂದ ಬೀಳುತ್ತಿರುವ ಒಂದು ಚೂರು ಆನೆ ಕಲ್ಲು ಗಮನಾರ್ಹವಾದ ತೂಕವನ್ನು ಹೊಂದಿರುವುದಿಲ್ಲ. ಆದರೆ ತಲೆಯ ಮೇಲೆ ಬಿದ್ದರೆ, ಪರಿಣಾಮವನ್ನುಂಟು ಮಾಡುತ್ತದೆ. ಕಾರಣವೇನು ?

**ಉತ್ತರ :** ಆನೆಕಲ್ಲಿನ ದ್ರವ್ಯರಾಶಿಯು ಕಡಿಮೆ ಇದ್ದರೂ ಅದರ ವೇಗೋತ್ಕರ್ಷವು ಹೆಚ್ಚಿಗೆ ಇರುತ್ತದೆ. ಆನೆಕಲ್ಲಿನಲ್ಲಿ ಬರುವ ಬಲವು ಅದರ ದ್ರವ್ಯರಾಶಿ ಮತ್ತು ಅದರ ವೇಗೋತ್ಕರ್ಷವನ್ನು ಅವಲಂಬಿಸಿರುತ್ತದೆ, ಬಲ = ದ್ರವ್ಯರಾಶಿ × ವೇಗೋತ್ಕರ್ಷ ವೇಗೋತ್ಕರ್ಷ ಹೆಚ್ಚಿಗೆ ಇರುವುದರಿಂದ ತಲೆಗೆ ಬಡಿಪರೆ ಪರಿಣಾಮ ಮಾಡುವುದು.

c) ನ್ಯೂಟನ್‌ನ ಮೂರನೆಯ ಚಲನ ನಿಯಮವನ್ನು ಬರೆಯಿರಿ.

**ಉತ್ತರ :** ಕ್ರಿಯೆ ಹಾಗೂ ಪ್ರತಿಕ್ರಿಯೆಗಳು ಸಮ ಹಾಗೂ ವಿರುದ್ಧವಿರುತ್ತವೆ ಅಥವಾ ಪ್ರತಿಯೊಂದು ಕ್ರಿಯೆಗೂ ಸಮನಾದ ಹಾಗೂ ವಿರುದ್ಧವಾದ ಪ್ರತಿಕ್ರಿಯೆ ಇದ್ದೇ ಇರುತ್ತದೆ.

**ಪ್ರಶ್ನೆ 9.** a) ಬಹುರೂಪತೆ ಎಂದರೇನು ? ಬಹುರೂಪತೆಯನ್ನು ತೋರಿಸುವ ಎರಡು ಮೂಲವಸ್ತುಗಳನ್ನು ಹೆಸರಿಸಿ.

**ಉತ್ತರ : ಬಹುರೂಪತೆ :** ಒಂದೇ ಮೂಲವಸ್ತುವಿನ ಬೇರೆ ಬೇರೆ ರೂಪಗಳ ಭೌತ ಗುಣಗಳು ಬೇರೆ ಬೇರೆಯಾಗಿದ್ದು, ರಾಸಾಯನಿಕ ಗುಣಗಳು ಒಂದೇ ಆಗಿದ್ದರೆ, ಆ ವಸ್ತುವಿನ ಈ ಗುಣವನ್ನು ಬಹುರೂಪತೆ ಎನ್ನುವರು.

ಬಹುರೂಪತೆಯ ಎರಡು ವಸ್ತುಗಳು : ಇಂಗಾಲ ಮತ್ತು ಗಂಧಕ.

b) ಬಹುಕ್ರಿಯಾ ಗುಂಪುಗಳುಳ್ಳ ಸಂಯುಕ್ತಗಳ್ಳ ಎಂದರೇನು ? ಅವುಗಳಲ್ಲಿ ಒಂದು ಸಂಯುಕ್ತದ ಹೆಸರನ್ನು ಬರೆಯಿರಿ.

**ಉತ್ತರ : ಬಹುಕ್ರಿಯಾ ಗುಂಪುಗಳುಳ್ಳ ಸಂಯುಕ್ತಗಳು :** ಒಂದು ಸಾವಯವ ಸಂಯುಕ್ತವು, ಒಂದೇ ಅಣುವಿನಲ್ಲಿ ಒಂದಕ್ಕಿಂತ ಹೆಚ್ಚು ಕ್ರಿಯಾ - ಗುಂಪುಗಳನ್ನು ಹೊಂದಿದ್ದರೆ, ಅಂತಹ ಸಂಯುಕ್ತಗಳನ್ನು ಬಹುಕ್ರಿಯಾ ಗುಂಪುಗಳುಳ್ಳ ಸಂಯುಕ್ತಗಳೆನ್ನುವರು.

ಉದಾ : ಅಮಿನೊ ಆಮ್ಲ.

c) ನಮ್ಮ ದೇಹಕ್ಕೆ ಅವಶ್ಯವಾದ ಎರಡು ಅಮಿನೋ ಆಮ್ಲಗಳನ್ನು ಹೆಸರಿಸಿ.

**ಉತ್ತರ :** 1] ಲ್ಯೂಸಿನ್, 2] ಅಲನೀನ್.

**ಪ್ರಶ್ನೆ 10.** a) ಗಾಜು ಉತ್ಪಾದನೆಯಲ್ಲಿ ಬೇಕಾದ ಕಚ್ಚಾ ಪದಾರ್ಥ ಯಾವುದು ? ಗಾಜನ್ನು ಹೇಗೆ ತಯಾರು ಮಾಡುತ್ತಾರೆ ? ತಾಪಾನುಶೀತನ (Annealing) ಎಂದರೇನು ? ಹಾಲು ಬಿಳುಪು ಗಾಜಿನ ಘಟಕಗಳು ಯಾವವು ?

**ಉತ್ತರ : ಗಾಜು ಉತ್ಪಾದನೆಯಲ್ಲಿ ಬೇಕಾಗುವ ಕಚ್ಚಾ ವಸ್ತುಗಳು :** 1) ಉಸುಕು (ಮರಳು), 2) ಸೋಡಿಯಮ್ ಕಾರ್ಬೊನೇಟ (ವಾಸಿಂಗ ಸೋಢಾ), 3) ಕಲ್ಲುಸುಣ್ಣ (ಕ್ಯಾಲ್ಸಿಯಮ್ ಕಾರ್ಬೊನೇಟ), 4) ಗಾಜಿನ ಚೂರುಗಳು.

**ಗಾಜಿನ ತಯಾರಿಕೆ :** 50% ಉಸುಕು, 15% ಸೋಡಿಯಮ್ ಕಾರ್ಬೋನೇಟ, 10% ಕಲ್ಲುಸುಣ್ಣ ಮತ್ತು 25% ಗಾಜಿನ ಚೂರುಗಳನ್ನು ಬೆರೆಸಿ ಮಿಶ್ರಣವನ್ನು ಕಡಾಯಿ ಕುಲುಮೆಯಲ್ಲಿ ಸುಮಾರು 1500°C ಉಷ್ಣತೆಯಲ್ಲಿ ದ್ರವಿಸುವರು. ಮಿಶ್ರಣದ ಘಟಕಗಳು ನಿಧಾನವಾಗಿ ಕರಗಿ ಮತ್ತು ವರ್ತಿಸಿ, ಸೋಡಿಯಂ ಸಿಲಿಕೇಟ್ ಮತ್ತು ಕ್ಯಾಲ್ಸಿಯಂ ಸಿಲಿಕೇಟಗಳ ಮಿಶ್ರವನ್ನುಂಟು ಮಾಡುವುದು. ಇದನ್ನು ಸಾಮಾನ್ಯ ಗಾಜು ಎನ್ನುವರು.

**ತಾಪಾನುಶೀತನ (Annealing) :** ಗಾಜಿನಿಂದ ತಯಾರಿಸಿದ ವಸ್ತುಗಳನ್ನು ನಿಧಾನವಾಗಿ ತಣಿಸುವುದನ್ನು ತಾಪಾನುಶೀತನ ಎನ್ನುವರು. ಇದರಿಂದ ಗಾಜಿನಲ್ಲಿಯ ಆಂತರಿಕ ದೋಷಗಳ ನಿವಾರಣೆಯಾಗುವುದಲ್ಲದೆ, ಗಾಜಿನ ವಸ್ತುಗಳು ಹೆಚ್ಚು ಕಾಲ ಬಾಳಿಕೆ ಬರುವವು.

**ಹಾಲು ಬಿಳುಪು ಗಾಜಿನ ಘಟಕಗಳು :** ಪ್ಲೋರ್ ಸ್ಪಾರ್, ಎಲುಬಿನ ಬೂದಿ ಮತ್ತು ಟಿನ್ ಆಕ್ಸೈಡ್‌ಗಳು.

b) i) ಕೆಂಪಗೆ ಕಾದ ಕಬ್ಬಿಣ ಮತ್ತು ii) ಬಿಸಿ ಮ್ಯಾಗ್ನೇಷಿಯಮ್ ಮೇಲೆ ನೀರಾವಿಯನ್ನು ಹಾಯಿಸಿದಾಗ, ಆಗುವ ಪರಿಣಾಮಗಳೇನು ?

**ಉತ್ತರ :** i) ಕೆಂಪಗೆ ಕಾದ ಕಬ್ಬಿಣದ ಮೇಲೆ ನೀರಾವಿ (ಹಬೆ) ಯನ್ನು ಹಾಯಿಸಿದಾಗ ಕಬ್ಬಿಣದ ಕಾಂತಿಯ ಆಕ್ಸೈಡ್ (ಮ್ಯಾಗ್ನೆಟಿಕ್ ಆಕ್ಸೈಡ್ $Fe_3O_4$) ಮತ್ತು ಜಲಜನಕ ದೊರೆಯುತ್ತವೆ.

$$3Fe + 4H_2O \rightarrow Fe_3O_4 + 4H_2$$

ii) ಬಿಸಿಯಾದ ಮ್ಯಾಗ್ನೇಷಿಯಮ್ ಮೇಲೆ ನೀರಾವಿಯನ್ನು ಹಾಯಿಸಿದಾಗ ರಾಸಾಯನ ಕ್ರಿಯೆಯ ಪರಿಣಾಮವಾಗಿ ಮ್ಯಾಗ್ನೇಷಿಯಮ್ ಹೈಡ್ರಾಕ್ಸೈಡ್ $Mg(OH_2)$ ಮತ್ತು ಜಲಜನಕ ದೊರೆಯುತ್ತವೆ.

$$Mg+2H_3O \rightarrow Mg(OH)_2 \cdot H_2$$

c) ಯಾವುದಾದರೂ ಎರಡು ನಿರವಯವ ಆಮ್ಲಗಳನ್ನು ಹೆಸರಿಸಿ.

**ಉತ್ತರ :** ಸಲ್ಫ್ಯೂರಿಕ್ ಆಮ್ಲ, ನೈಟ್ರಿಕ್ ಆಮ್ಲ.

**ಪ್ರಶ್ನೆ 11. a)** ಬೆನಜೀನ್‌ನ ರಚನಾತ್ಮಕ ಸೂತ್ರವನ್ನು ಬರೆಯಿರಿ. ಅದರ ರಚನೆಯನ್ನು ಸೂಚಿಸಿದವರಾರು ?

**ಉತ್ತರ :** ಬೆನಜಿನ್‌ನ ರಚನಾತ್ಮಕ ಸೂತ್ರ.




ಬೆನಜಿನ್‌ನ ರಚನೆಯನ್ನು ಕೆಕುಲೆ ಎಂಬ ವಿಜ್ಞಾನಿಯು ಸೂಚಿಸಿದನು.

b] ಪ್ರಯೋಗ ಶಾಲೆಯಲ್ಲಿ ಒಂದು ಶೀಷೆಯಲ್ಲಿ 0.2N, HCl ಇದೆ. ಇದರಿಂದ ನಿಮಗೆ ಏನು ತಿಳಿಯುವುದು ?

**ಉತ್ತರ :** ಹೈಡ್ರೋಕ್ಲೋರಿಕ್ ಆಮ್ಲದ 1Nದ್ರಾವಣ ಎಂದರೆ ಒಂದು ಲೀಟರ್ ಹೈಡ್ರೋಕ್ಲೋರಿಕ್ ಆಮ್ಲದ ದ್ರಾವಣದಲ್ಲಿ (Cl-35.5 ಗ್ರಾಂ + H-1 ಗ್ರಾಂ) 36.5 ಗ್ರಾಂ ಹೈಡ್ರೋಕ್ಲೋರಿಕ್ ಆಮ್ಲವಿರುತ್ತದೆ.

∴ 0.2Nದ್ರಾವಣದಲ್ಲಿ $\frac{36.5}{5} = 7.3$ ಗ್ರಾಂ ಹೈಡ್ರೋಕ್ಲೋರಿಕ್ ಆಮ್ಲವಿರುತ್ತದೆ ಎಂದು ತಿಳಿಯುತ್ತದೆ.

**ಪ್ರಶ್ನೆ 12 a]** ವಾಹಕಗಳು ಮತ್ತು ಅವಾಹಕಗಳು ಎಂದರೇನು ? ಪ್ರತಿಯೊಂದಕ್ಕೂ ಒಂದೊಂದು ಉದಾಹರಣೆ ಕೊಡಿ.

**ಉತ್ತರ : ವಿದ್ಯುತ್ ವಾಹಕ :** ಯಾವ ವಸ್ತುವಿನ ಮೂಲಕ ವಿದ್ಯುತ್ತು ಪ್ರವಹಿಸುವುದೋ ಅಂತಹ ವಸ್ತುವನ್ನು ವಿದ್ಯುತ್ ವಾಹಕ ಎನ್ನುವರು. ಸಾಮಾನ್ಯವಾಗಿ ವಿದ್ಯುತ್ ವಾಹಕ ವಸ್ತುವಿನ ಪರಮಾಣುವಿನ ಹೊರಕವಚದಲ್ಲಿ ಅನೇಕ ಸ್ವತಂತ್ರ ಎಲೆಕ್ಟ್ರಾನುಗಳಿರುತ್ತವೆ.

ಉದಾ : ಲೋಹಗಳು.

**ವಿದ್ಯುತ್ ನಿರೋಧಕ :** ಯಾವ ವಸ್ತುವಿನ ಮೂಲಕ ವಿದ್ಯುತ್ತು ಪ್ರವಹಿಸುವುದಿಲ್ಲವೋ ಅಂತಹ ವಸ್ತುವನ್ನು ವಿದ್ಯುತ್ ನಿರೋಧಕ ಎನ್ನುವರು. ಸಾಮಾನ್ಯವಾಗಿ ಅವಿದ್ಯುತ್ ವಾಹಕಗಳ ಪರಮಾಣುವಿನ ಹೊರಕವಚದಲ್ಲಿ ಅತ್ಯಂತ ಕಡಿಮೆ ಸಂಖ್ಯೆಯ ಎಲೆಕ್ಟ್ರಾನುಗಳಿರುವವು ಇಲ್ಲವೆ ಎಲೆಕ್ಟ್ರಾನುಗಳು ಇರುವುದೇ ಇಲ್ಲ.

ಉದಾ : ಪ್ಲಾಸ್ಟಿಕ್, ರಬ್ಬರ, ಗಾಜು ಇತ್ಯಾದಿ.

b) ಗ್ರ್ಯಾಫೈಟ್‌ನ ಎರಡು ಮುಖ್ಯ ಉಪಯೋಗಗಳನ್ನು ತಿಳಿಸಿ.

**ಉತ್ತರ : ಗ್ರ್ಯಾಫೈಟ್‌ನ ಉಪಯೋಗ :** 1) ವಿದ್ಯುದಾಗ್ರ (Electrodes) ತಯಾರಿಸಲು 2) ಲೆಡ್ ಪೆನ್ಸಿಲ್ ತಯಾರಿಸಲು.

**ಪ್ರಶ್ನೆ 13. a]** 1) ಅಲ್ಯುಮಿನಿಯಮ್ ಮತ್ತು 2) ಮ್ಯಾಂಗನೀಸ್‌ಗಳ ಅದುರುಗಳನ್ನು ಹೆಸರಿಸಿ.

**ಉತ್ತರ :** 1) ಅಲ್ಯುಮಿನಿಯಮ್ ಅದಿರು–ಬಾಕ್ಸೈಟ್
2) ಮ್ಯಾಂಗನೀಸ್‌ನ ಅದಿರು– ಪೈರೊಲು ಸೈಟ್.

b) ನಮ್ಮ ರಾಜ್ಯದಲ್ಲಿ ಅಲ್ಯುಮಿನಿಯಮ್ ಎಲ್ಲಿ ಉತ್ಪಾದನೆ ಮಾಡುತ್ತಾರೆ ?

**ಉತ್ತರ :** ಬೆಳಗಾವಿಯಲ್ಲಿ ಅಲ್ಯೂಮಿನಿಯಮ್‌ನ್ನು ಉತ್ಪಾದಿಸುವ ಕಾರಖಾನೆ ಇದೆ.

c) ಸರಳ ಕೀಟೋನ್‌ಗೆ ಒಂದು ಉದಾಹರಣೆ ಕೊಡಿ.

**ಉತ್ತರ :** ಅಸಿಟೋನ್ ಎಂಬುದು ಒಂದು ಸರಳ ಕೀಟೋನ್.

ಅಸಿಟೋನ್ $(CH_3—CO—C_2H_5)$

**ಪ್ರಶ್ನೆ 14. a]** ಮಿಲ್ಲನ್ ಕಾರಕ ಎಂದರೇನು ? ಇದನ್ನು ಏಕೆ ಉಪಯೋಗಿಸುತ್ತಾರೆ ?

**ಉತ್ತರ :** ಮಿಲ್ಲನ್ ಕಾರಕ : ನೈಟ್ರಿಕ್ ಆಮ್ಲದಲ್ಲಿ ಮರ್ಕ್ಯೂರಸ್ ನೈಟ್ರೇಟ್ ಮತ್ತು ಮರ್ಕ್ಯೂರಿಕ್ ನೈಟ್ರೇಟುಗಳನ್ನು ವಿಲೀನಗೊಳಿಸುವುದರಿಂದ ಬರುವ ಮಿಶ್ರಣವನ್ನು ಮಿಲ್ಲನ್ ಕಾರಕ ಎನ್ನುವರು.

**ಉಪಯೋಗ :** ಪ್ರೊಟೀನ್‌ಗಳ ಇರುವಿಕೆಯನ್ನು ತಿಳಿದುಕೊಳ್ಳಲು ಮಿಲ್ಲನ್ ಕಾರಕವನ್ನು ಉಪಯೋಗಿಸುವರು.

b) ಅಸಿಟಲಿನ್‌ನ ರಚನಾತ್ಮಕ ಸೂತ್ರವನ್ನು ಬರೆಯಿರಿ.

**ಉತ್ತರ :** ಅಸಿಟಲಿನ್‌ಸ ($C_2H_2$)
ರಚನಾತ್ಮಕ ಸೂತ್ರ H–C=H–C.

**ಪ್ರಶ್ನೆ 15.** a) ಮೈಲು ತುತ್ತದ ಪರ್ಯಾಪ್ತ ದ್ರಾವಣವನ್ನು ಹೇಗೆ ತಯಾರಿಸುತ್ತಾರೆ ?

**ಉತ್ತರ :** ಒಂದು ಚಿಕ್ಕ ಬೀಕರಿನಲ್ಲಿ ಸುಮಾರು 30 ಸಿ.ಸಿ. ನೀರು ತೆಗೆದುಕೊಳ್ಳಿರಿ. ಅದರಲ್ಲಿ ಸ್ವಲ್ಪ ಮೈಲು ತುತ್ತದ ಪುಡಿಯನ್ನು ಹಾಕಿ ಗಾಜಿನ ಕಡ್ಡಿಯಿಂದ ಚನ್ನಾಗಿ ಕಲಕಿರಿ. ಮೈಲು ತುತ್ತದ ಪುಡಿಯು ಪೂರ್ಣ ಕರಗಿದ್ದನ್ನು ಮನಗಾಣಿರಿ. ನಂತರ ಇನ್ನೂ ಸ್ವಲ್ಪ ಪುಡಿಯನ್ನು ಹಾಕಿ ಮೊದಲಿನಂತೆ ಕಲಕಿರಿ ಈ ಕ್ರಿಯೆಯನ್ನು ಮೈಲು ತುತ್ತದ ಸ್ವಲ್ಪ ಪುಡಿಯು ಕರಗದೆ ಉಳಿಯುವವರೆಗೆ ಮುಂದುವರಿಸಿ. ಆಮೇಲೆ ತಿಳಿಯಾದ ದ್ರಾವಣವನ್ನು ಸೋಧಿಸಿಕೊಳ್ಳಿ.. ಈಗ ದೊರೆಯುವ ದ್ರಾವಣವು ಮೈಲು ತುತ್ತದ ಪರ್ಯಾಪ್ತ ದ್ರಾವಣವಿರುತ್ತದೆ.

b) ಟಂಗ್‌ಸ್ಟನ್—W. ಪೊಟ್ಯಾಸಿಯಮ್–K

Tungsten = Wolfarm = W
Potassium = Kalium = K

**ಪ್ರಶ್ನೆ 16.** a) ಒಂದು ದ್ರವ ಉರುವಲನ್ನು ಮತ್ತು ಒಂದು ಅನಿಲ ಉರುವಲನ್ನು ಹೆಸರಿಸಿ.

**ಉತ್ತರ :** ದ್ರವ ಉರುವಲು—ಪೆಟ್ರೋಲ್
ಅನಿಲ ಉರುವಲು—ಕೋಲ್ ಗ್ಯಾಸ್

b) ಸೋಡಿಯಂ ಕಾರ್ಬೋನೇಟ್ ದ್ರಾವಣದೊಳಗೆ ಒಂದು ತೊಟ್ಟು ಮೀಥೈಲ್ ಆರೇಂಜ್‌ನ್ನು ಹಾಕಿದಾಗ ಆಗುವ ಬಣ್ಣ ಬದಲಾವಣೆ ಏನು ?

**ಉತ್ತರ :** ಸೋಡಿಯಮ್ ಕಾರ್ಬೋನೇಟ್ ದ್ರಾವಣಕ್ಕೆ ಬಣ್ಣ ಇರುವುದಿಲ್ಲ. ಅದಕ್ಕೆ ಒಂದು ತೊಟ್ಟು ಮೀಥೈಲ್ ಆರೇಂಜ್‌ನ್ನು ಹಾಕಿದಾಗ ಅದು ಹಳದಿ ಬಣ್ಣಕ್ಕೆ ಬದಲಾಗುವುದು.

———

# ವಿಜ್ಞಾನ

**ಅಕ್ಟೋಬರ್ 1985 2 ನೆಯ ಪತ್ರಿಕೆ**

## [ ಜೀವಶಾಸ್ತ್ರ ]

ವೇಳೆ : 2 ಗಂಟೆ ] [ ಗುಣಗಳು : 35

I **ಪ್ರಶ್ನೆ 1.** ಮನುಷ್ಯನ ರಕ್ತದ ಕಾರ್ಯಗಳು ಯಾವವು ?

**ಉತ್ತರ : ರಕ್ತದ ಕಾರ್ಯಗಳು :** 1) ಜೀರ್ಣವಾದ ಆಹಾರ ವಸ್ತುಗಳನ್ನು ದೇಹದ ಎಲ್ಲಾ ಭಾಗಗಳಿಗೂ ಸಾಗಿಸಿ, ಸಾರಜನಕದಿಂದ ಕೂಡಿದ ಕಶ್ಮಲಗಳನ್ನು ದೇಹದ ಎಲ್ಲಾ ಭಾಗಗಳಿಂದ ವಿಸರ್ಜನಾಂಗಗಳಿಗೆ ತರುವುದು.

2) ಜೀವಕೋಶಗಳಿಗೆ ಆಮ್ಲಜನಕವನ್ನು ಪೂರೈಸಿ, ರಕ್ತವು ಅವುಗಳಿಂದ ಇಂಗಾಲದ ಡೈಆಕ್ಸೈಡನ್ನು ಶ್ವಾಸಾಂಗಳಿಗೆ ತರುವುದು.

3) ರಸವಿಶೇಷ (ಹಾರ್ಮೋನ)ಗಳನ್ನು ಅವು ತಲುಪ ಬೇಕಾದ ಅಂಗಗಳಿಗೆ ಸಾಗಿಸುವುದು.

4) ರೋಗ ನಿರೋಧಕ ಶಕ್ತಿಯನ್ನು ಒದಗಿಸುವುದು.

5) ರಕ್ತವು ಹೆಪ್ಪುಗಟ್ಟುವ ಮೂಲಕ ಗಾಯಗಳ ಮೂಲಕ ಬ್ಯಾಕ್ಟೀರಿಯಾ ಮತ್ತು ವಿಷವಸ್ತುಗಳು ದೇಹದಲ್ಲಿ ಸೇರದಂತೆ ಗಾಯಗಳನ್ನು ಮುಚ್ಚುವುದು.

6) ದೇಹದ ಎಲ್ಲಾ ಭಾಗಗಳಲ್ಲಿ ಶಾಖವು ಒಂದೇ ಸಮನಾಗಿರುವಂತೆ ನೋಡಿಕೊಳ್ಳುವುದು.

**ಪ್ರಶ್ನೆ 2.** ರಕ್ತ ಹೆಪ್ಪುಗಟ್ಟುವ ಕ್ರಮವನ್ನು ವಿವರಿಸಿ.

**ಉತ್ತರ : ರಕ್ತ ಹೆಪ್ಪುಗಟ್ಟುವ ಕ್ರಮ :** ಗಾಯಗಳಾದಾಗ ಅವುಗಳಿಂದ ರಕ್ತವು ಹೊರಗೆ ಬರುತ್ತಿರುತ್ತದೆ. ಹೀಗೆ ಹೊರಗೆ ಬಂದ ರಕ್ತವು ವಾಯುವಿನ ಸಂಪರ್ಕ ಹೊಂದಿದಾಗ ಗಾಯದ ಮುಖದಲ್ಲಿ, ರಕ್ತದಲ್ಲಿರುವ ಫೈಬ್ರಿನೋಜನ್ ಎಂಬ ವಸ್ತುವು ಫೈಬ್ರಿನ ಎಂಬ ಸೂಕ್ಷ್ಮ ಎಳೆಗಳಾಗಿ. ಬಲೆಯ ರೂಪವನ್ನು ಹೊಂದುತ್ತದೆ. ಫೈಬ್ರಿನ ಎಳೆಗಳೂ ಮತ್ತು ಅವುಗಳ ಬಲೆಯಲ್ಲಿರುವ ರಕ್ತಕಣಗಳು ಸುರಿಯುವುದನ್ನು ತಡೆಯುವ ಗೋಡೆಯನ್ನು ನಿರ್ಮಿಸುತ್ತವೆ. ಇದರಿಂದ ರಕ್ತ ಸುರಿಯುವುದು ನಿಲ್ಲುತ್ತದೆ. ಇದನ್ನು ರಕ್ತ ಹೆಪ್ಪುಗಟ್ಟುವುದು ಎನ್ನುವರು.

II ಪ್ರಶ್ನೆ 1. ಮಾನವನ ಚರ್ಮದ (Skin) ರಚನೆಯನ್ನು ತೋರಿಸುವ ಚಿತ್ರವನ್ನು ಬಿಡಿಸಿ ಈ ಭಾಗಗಳನ್ನು ಗುರುತಿಸಿ. 1) ಸ್ವೇದ ಗ್ರಂಥಿ (Sweat glands), 2) ಹೊರಚರ್ಮ (Epidermis), 3) ಒಳಚರ್ಮ (Dedermis)



ಉತ್ತರ : ಭಾಗಗಳು : 1) ಹೊರಚರ್ಮ, 2) ಒಳ ಚರ್ಮ, 7) ಸ್ವೇದ ಗ್ರಂಥಿಗಳು.

ಪ್ರಶ್ನೆ 2. ಜಿರಲೆ (Cockroach)ಯ ವಿಸರ್ಜನಾಂಗವನ್ನು ಚಿತ್ರಿಸಿ ಭಾಗಗಳನ್ನು ಹೆಸರಿಸಿ.




ಉತ್ತರ : ಭಾಗಗಳು : 1) ಮಧ್ಯಕರುಳು, 2) ಮಾಲ್‌ಫೀಜಿಯನ್ ನಾಳಗಳು, 3) ಹಿಂಭಾಗದ ಕರುಳು.

III ಪ್ರಶ್ನೆ 1. ಮಾನವನ ಮೆದುಳಿನ (Brain) ಮೂರು ಮುಖ್ಯ ಭಾಗಗಳನ್ನು ಹೆಸರಿಸಿ. ಮೆದುಳಿನ ಯಾವ ಭಾಗ ದೇಹದ ಸಮತೋಲನವನ್ನು ನಿಯಂತ್ರಿಸುತ್ತದೆ ?

ಉತ್ತರ : ಮನುಷ್ಯನ ಮೆದುಳಿನ ಮೂರು ಮುಖ್ಯ ಭಾಗಗಳು : 1) ಮುಮ್ಮೆದುಳು, 2) ಮಧ್ಯದ ಮೆದುಳು ಮತ್ತು 3) ಹಿಮ್ಮೆದುಳು.

ಹಿಮ್ಮೆದುಳಿನಲ್ಲಿರುವ ಅನುಮಸ್ತಿಷ್ಕ (ಸಣ್ಣಮೆದುಳು)ವು ದೇಹದ ಸಮತೋಲನವನ್ನು ನಿಯಂತ್ರಿಸುತ್ತವೆ.

ಪ್ರಶ್ನೆ 2. "ಅಡ್ರಿನಲ್ ಗ್ರಂಥಿಗಳು" ಎಲ್ಲಿವೆ? ಅದರಿಂದ ಸ್ರಾವವಾಗುವ ಮೂರು ಹಾರ್ಮೋನುಗಳನ್ನು ಹೆಸರಿಸಿ.

ಉತ್ತರ : ಪ್ರತಿ ಮೂತ್ರ ಜನಕಾಂಗದ ಮೇಲೆ ತ್ರಿಭುಜಾಕಾರದ ಟೋಪಿಯಂತೆ ಒಂದು ಅಡ್ರಿನಲ್ ಗ್ರಂಥಿ ಇರುತ್ತದೆ.

ಅಡ್ರಿನಲ್ ಗ್ರಂಥಿಗಳು ಕಾರ್ಟಿಸೋನ್, ಅಡ್ರಿನಲಿನ್ ಮತ್ತು ಡೊಪಸಮಿನ್ ಎಂಬ ಮೂರು ಹಾರ್ಮೋನುಗಳಲ್ಲದೆ ಇನ್ನೂ ಅನೇಕ ಹಾರ್ಮೋನುಗಳನ್ನು ಸ್ರವಿಸುತ್ತವೆ.

ಪ್ರಶ್ನೆ 3. ಒಳಕಿವಿಯ ಎರಡು ಭಾಗಗಳನ್ನು ಹೆಸರಿಸಿ, ಒಳಕಿವಿಯಲ್ಲಿಯ ಎರಡು ದ್ರವಗಳನ್ನು ಹೆಸರಿಸಿ.

ಉತ್ತರ : ಒಳಕಿವಿಯಲ್ಲಿಯ ಎರಡು ಭಾಗಗಳು : ಯುಟ್ರಿಕ್ಯುಲಸ್ ಮತ್ತು ಸಾಕ್ಯುಲಸ್. ಒಳಕಿವಿಯಲ್ಲಿಯ ಎರಡು ದ್ರವಗಳು : ಪೆರಿಲಿಂಫ್ ಮತ್ತು ಎಂಡೋಲಿಂಫ್.

ಪ್ರಶ್ನೆ 4. "ವೈರಸ್" (Virus) ಎಂದರೇನು ? ಇದರಿಂದ ಉಂಟಾಗುವ ಮೂರು ರೋಗಗಳನ್ನು ಹೆಸರಿಸಿ.

ಉತ್ತರ : ವೈರಸ್ ಎಂದರೆ ವಿಷ. ವೈರಸ್‌ಗಳು ಸೂಕ್ಷ್ಮಾಣು ಜೀವಿಗಳು. ಇವುಗಳನ್ನು ನಿರ್ಬಂಧ ಪರಾವಲಂಬಿಗಳು ಎನ್ನುವರು.

ವೈರಸ್‌ಗಳಿಂದ ಉಂಟಾಗುವ ರೋಗಗಳು : 1. ಸಿಡುಬು, 2. ಪೋಲಿಯೋ, 3. ಗದಗಟ್ಟು, 4. ಇನ್‌ಫ್ಲುಯೆನ್ಜಾ.

ಪ್ರಶ್ನೆ 5. ಪರಾವರ್ತಿತ ಪ್ರತಿಕ್ರಿಯೆ ಎಂದರೇನು ? ಎರಡು ಉದಾಹರಣೆ ಕೊಡಿ.

ಉತ್ತರ : ಪರಾವರ್ತಿತ ಪ್ರತಿಕ್ರಿಯೆ : ಒಂದು ಪ್ರಚೋದನೆಗೆ ತಾನೇ ತಾನಾಗಿ ಉಂಟಾಗುವ ಪ್ರತಿಕ್ರಿಯೆಯನ್ನು ಪರಾವರ್ತಿತ ಪ್ರತಿಕ್ರಿಯೆ ಎನ್ನುವರು.

ಉದಾ : 1) ನಿದ್ರೆಯಲ್ಲಿರುವ ಒಬ್ಬನ ಕೈಗೆ ಸೂಜಿಯಿಂದ ಚುಚ್ಚಿದಾಗ, ಅವನು ಎಚ್ಚರವಾಗದೆ ಕೈಯನ್ನು ಹಿಂದಕ್ಕೆ ಎಳೆದುಕೊಳ್ಳುವನು.

2) ಪ್ರಕಾಶಮಾನವಾದ ಬೆಳಕಿಗೆ ಕಣ್ಣು ತನ್ನಿಂದ ತಾನೇ ಮುಚ್ಚುವುದು.

**IV ಪ್ರಶ್ನೆ 1.** ಜನಸಂಖ್ಯಾ ಸ್ಫೋಟನೆಗೆ ಯಾವುದಾದರೂ ಎರಡು ಕಾರಣಗಳನ್ನು ಕೊಡಿ.

**ಉತ್ತರ :** 1) ಸುಧಾರಿಸಿದ ನೈರ್ಮಲೀಕರಣ, ನೀರಿನ ರಕ್ಷಣೆ, ಜೀವ ನಿರೋಧಕಗಳ ಬಳಕೆ, ಲಸಿಕೆ ಹಾಕುವುದು, ನಂಜು ನಾಶಕ ಶಸ್ತ್ರಚಿಕಿತ್ಸೆ ಮುಂತಾದವುಗಳಿಂದ ಮರಣ ಸಂಖ್ಯೆಯು ಜನನ ಸಂಖ್ಯೆಗಿಂತ ಕಡಿಮೆಯಾಗಿರುವುದು ಒಂದು ಕಾರಣ.

2) ಜನರಲ್ಲಿ ಬಹಳಷ್ಟು ಅಶಿಕ್ಷಿತರಿರುವುದರಿಂದ ಕುಟುಂಬ ಯೋಜನೆಯನ್ನು ಪಾಲಿಸದೇ ಇರುವುದು ಇನ್ನೊಂದು ಕಾರಣ.

**ಪ್ರಶ್ನೆ 2.** ವಲಸೆ ಹೋಗುವುದು ಎಂದರೇನು ? ಅತ್ಯಂತ ದೂರ ವಲಸೆ ಹೋಗುವ ಒಂದು ಹಕ್ಕಿಯನ್ನು ಹೆಸರಿಸಿ.

**ಉತ್ತರ : ವಲಸೆ ಹೋಗುವದು :** ಋತುಮಾನಕ್ಕನು ಗುಣವಾಗಿ ನಿಶ್ಚಿತ ಕಾಲದಲ್ಲಿ ಪ್ರಾಣಿಗಳು ದೂರದ ಸ್ಥಳಕ್ಕೆ ಪ್ರಯಾಣ ಮಾಡುವುದನ್ನು ವಲಸೆ ಹೋಗುವುದು ಎನ್ನುವರು.

ಆರ್ಕಟಿಕ್‌ನ ಟರ್ನ್ F ಎಂಬ ಪಕ್ಷಿಯು ಅತ್ಯಂತ ದೂರ ವಲಸೆ ಹೋಗುವ ಒಂದು ಹಕ್ಕಿ.

**ಪ್ರಶ್ನೆ 3.** ಮಲೇರಿಯಾ ರೋಗ ಹರಡುವಿಕೆಯಲ್ಲಿ ಸೊಳ್ಳೆಯ ಪಾತ್ರವನ್ನು ಸಂಶೋಧಿಸಿದ ವಿಜ್ಞಾನಿ ಯಾರು ?

**ಉತ್ತರ :** ಸರ್ ರೋನಾಲ್ಡ್ ರಾಸ್.

**ಪ್ರಶ್ನೆ 4.** ತದ್ರೂಪ ಅವಳಿಗಳು (Identical twins) ಒಂದನ್ನೊಂದು ಪೂರ್ಣವಾಗಿ ಹೋಲುವವು. ಕಾರಣ ವೇನು ?

**ಉತ್ತರ :** ತದ್ರೂಪ ಅವಳಿಗಳು ಒಂದೇ ಒಂದು ಸೈಗೋಟಿನಿಂದ ಉತ್ಪನ್ನವಾಗುವವು. ಗರ್ಭಕಟ್ಟಿದ ತತ್ತಿಯ ಮೊದಲನೆಯ ವಿಭಜನೆಯಿಂದ ಎರಡು ಅನುರೂಪ ಜೀವಕೋಶ ಗಳು ಉಂಟಾಗುತ್ತವೆ. ಇವು ಪರಸ್ಪರ ಪ್ರತ್ಯೇಕವಾದರೆ, ಎರಡು ಭ್ರೂಣಗಳು ಬೆಳೆಯುತ್ತವೆ. ಒಂದೇ ಸೈಗೋಟಿನಿಂದ ಎರಡು ಭ್ರೂಣಗಳು ಬೆಳೆಯುವುದರಿಂದ ಎರಡಕ್ಕೂ ಒಂದೇ ರೀತಿಯ ಅನುವಂಶೀಯ ರಚನೆ ಇರುತ್ತದೆ. ಇಂತಹ ಅವಳಿಗಳನ್ನು ತದ್ರೂಪ ಅವಳಿಗಳೆನ್ನುವರು.

**ಪ್ರಶ್ನೆ 5.** ಮಾನವನ ಮೂತ್ರ ಜನಕಾಂಗವು (Kidney) ದಪ್ಪವಾದ ಮೇಧಸ್ಸಿನ ಪದರುಗಳಿಂದ ಆವರಿಸಲ್ಪಟ್ಟದೆ ಕಾರಣವೇನು ?

**ಉತ್ತರ :** ಮೇಧಸ್ಸಿನ ದಪ್ಪವಾದ ಪದರಗಳು ಮೂತ್ರ ಜನಕಾಂಗವನ್ನು ರಕ್ಷಿಸುವವು.

**ಪ್ರಶ್ನೆ 6.** ಮಾನವ ಜನಾಂಗಕ್ಕೆ "ಲೂಯಿ ಪಾಶ್ಚರ್"ನ ಕೊಡುಗೆಗಳನ್ನು ಹೆಸರಿಸಿ.

**ಉತ್ತರ : ಲುಯಿ ಪಾಶ್ಚರನ ಕೊಡುಗೆಗಳು :** 1) ರೇಷ್ಮೆ ಹುಳುಗಳನ್ನು ಅಂತ್ರಾಕ್ಸ್ ರೋಗದಿಂದ ರಕ್ಷಿಸಿದನು. 2) ಹುಚ್ಚುನಾಯಿ ಕಡಿತದಿಂದ ಬರುವ ರ್‍ಯಾಬಿಸ್ ರೋಗಕ್ಕೆ ಚುಚ್ಚುಮದ್ದನ್ನು ಕಂಡುಹಿಡಿದನು. 3) ದ್ರಾಕ್ಷಾರಸ ಹುಳಿ ಯಾಗುವುದಕ್ಕೆ ಯೀಸ್ಟ್‌ನಂತಹ ಸೂಕ್ಷ್ಮ ಜೀವಾಣುಗಳು ಕಾರಣ ಎಂದು ತೋರಿಸಿಕೊಟ್ಟನು. 4) ಹಾಲು ಕೆಡದಂತೆ ಮಾಡುವುದನ್ನು "ಪಾಶ್ಚರೈಜೇಶನ್" ಕಂಡು ಹಿಡಿದನು.

**ಪ್ರಶ್ನೆ 7.** ಗಾಯಿಟರ್‌ಗೆ ಕಾರಣವೇನು? ಇದು ಯಾವ ಗ್ರಂಥಿಗೆ ಸಂಬಂಧಿಸಿದೆ ?

**ಉತ್ತರ :** ದೇಹದಲ್ಲಿ ಅಯೋಡಿನ್‌ನ ಪ್ರಮಾಣ ಕಡಿಮೆಯಾಗುವುದರಿಂದ ಗಾಯಿಟರ್ ರೋಗ ಬರುವುದು. ಅದಕ್ಕೆ ನಾವು ತೆಗೆದುಕೊಳ್ಳುವ ಆಹಾರ ಮತ್ತು ನೀರಿನಲ್ಲಿ ಅಯೋಡಿನ್‌ನ ಅಭಾವವು ಕಾರಣವಾಗಿದೆ.

ಗಾಯಿಟರ್ ರೋಗವು ಥೈರಾಯಿಡ್ ಗ್ರಂಥಿಗೆ ಸಂಬಂಧಿಸಿದ ರೋಗ.

**V ಪ್ರಶ್ನೆ 1.** ಹೃದಯದ ಯಾವ ಭಾಗ ಅಯೋರ್ಟ (Aeorta) ಸಂಪರ್ಕದಲ್ಲಿದೆ.

**ಉತ್ತರ :** ಅಯೋರ್ಟವು ಹೃದಯದ ಎಡ ಹೃತ್ಕುಕ್ಷಿಗೆ ಸಂಪರ್ಕ ಹೊಂದಿದೆ.

**ಪ್ರಶ್ನೆ 2.** ಪೆನ್ಸೀಲಿಯನ್ ನೊಟಟಾ ಸಂಶೋಧಿಸಿದ ವಿಜ್ಞಾನಿ ಯಾರು ?

**ಉತ್ತರ :** ಅಲೆಕ್ಸಾಂಡರ್ ಫ್ಲೆಮಿಂಗ್.

**ಪ್ರಶ್ನೆ 3.** ಹೃದಯದ ಬಡಿತ ಕೇಳಲು (Aeart beats) ವೈದ್ಯರು ಉಪಯೋಗಿಸುವ ಉಪಕರಣದ ಹೆಸರೇನು ?

**ಉತ್ತರ :** ಸ್ಟೆತೊಸ್ಕೋಪ್.

**ಪ್ರಶ್ನೆ 4.** ಆಮ್ಲ ಕುಡಿದಾಗ ಪ್ರಥಮ ಚಿಕಿತ್ಸೆ (First aid)ಗಾಗಿ ಕೊಡಬಹುದಾದ ಆಂಟಿಡೋಟ್ (Antidote) ಯಾವುದು.

**ಉತ್ತರ :** ತಿನ್ನುವ ಸೋಡಾ (ಸೋಡಿಯಮ್ ಬೈಕಾರ್ಬೋನೇಟ) ದ್ರಾವಣ ಇಲ್ಲವೆ ದುರ್ಬಲವಾದ ಸುಣ್ಣದ ನೀರು.

**ಪ್ರಶ್ನೆ 5.** ಪ್ರಾಚೀನ ಕಾಲದ ಜೀವಿಗಳ ಅವಶೇಷವನ್ನು ಏನೆಂದು ಕರೆಯುವರು ?

**ಉತ್ತರ :** ಪಳೆಯುಳಿಕೆ ಎಂದು ಕರೆಯುವರು.

VI ಪ್ರತಿಯೊಂದಕ್ಕೂ ಸರಿಯಾದ ಕಾರಣ ಕೊಡಿ.

1) ಕಪ್ಪೆ ಒಂದು ದ್ವಿಚರಿ. (Amphibian)

**ಕಾರಣ :** ಕಪ್ಪೆಯು ಉಭಯವಾಸಿ. ಅಂದರೆ ನೀರಿನಲ್ಲಿಯೂ ನೆಲದ ಮೇಲೆಯೂ ಜೀವಿಸಿರುತ್ತದೆ.

2. ಚೇಳು (Scorpion) ಒಂದು ಅಕಶೇರುಕ ಪ್ರಾಣಿ.

**ಕಾರಣ :** ಚೇಳು ಒಂದು ಸಂಧಿಪದಿ ಪ್ರಾಣಿ. ಇದಕ್ಕೆ ಬೆನ್ನು ಮೂಳೆ ಇರುವುದಿಲ್ಲ. ಕಾರಣ ಚೇಳು ಅಕಶೇರುಕ ಪ್ರಾಣಿ.

3. ನಾಯಿಕೊಡೆ (Agaricus) ಒಂದು ಅಣಬೆ.

**ಕಾರಣ :** ಅಣಬೆಗೆ ಪತ್ರಹರಿತ್ತು ಇರುವುದಿಲ್ಲ. ಆದ್ದರಿಂದ ಅದು ಪರೋಪಜೀವಿ. ಅದರಂತೆ ನಾಯಿಕೊಡೆಗೂ ಹರಿತ್ತು ಇಲ್ಲ. ಅದು ಆಹಾರ ತಯಾರಿಸುವುದಿಲ್ಲ. ಮೈಸಿಲಿಯಮ್‌ನಿಂದ ಆಹಾರವನ್ನು ಪಡೆಯುತ್ತದೆ. ಆದ್ದರಿಂದ ನಾಯಿಕೊಡೆ ಒಂದು ಅಣಬೆ.

4. ಆಲೂಗಡ್ಡೆ ಭೂಮಿಯೊಳಗಿದ್ದರೂ, ಒಂದು ಕಾಂಡವೆಂದು ಪರಿಗಣಿಸಲ್ಪಟ್ಟಿದೆ.

**ಕಾರಣ :** ಆಲೂಗಡ್ಡೆಯು ಭೂಮಿಯೊಳಗಿದ್ದರೂ, ಅದಕ್ಕೆ ಕಾಂಡಕ್ಕಿರಬೇಕಾದ ಗಿಣ್ಣು, ಅಂತರಗಿಣ್ಣು ಮತ್ತು ಕಂಕುಳು ಮೊಗ್ಗುಗಳಿರುವುದರಿಂದ ಕಾಂಡವೆಂದು ಪರಿಗಣಿಸಲ್ಪಟ್ಟಿದೆ.

VII ಭರ್ತಿಮಾಡಿ. (ಭರ್ತಿಮಾಡಿ ಬರೆದಿದೆ. ದಪ್ಪಕ್ಷರದ ಪದಗಳು ಭರ್ತಿ ಮಾಡಿದ ಪದಗಳು)

1. ಸಾಸಿವೆಯಲ್ಲಿರುವ ಬೀಜದಳಗಳ ಸಂಖ್ಯೆ **ಒಂದು.**
2. ಅಮೀಬ **ಆದಿಜೀವಿ** ಪ್ರಾಣಿ ವಂಶಕ್ಕೆ ಸೇರಿದೆ.
3. ಶುಂಠಿಯಲ್ಲಿ ಆಹಾರ ಸಂಗ್ರಹ ಭಾಗ **ಕಾಂಡ.**
4. **ಹುಲ್ಲು** ತಂತು ಬೇರಿರುವ ಒಂದು ಸಸ್ಯ.
5. ಮನುಷ್ಯ ದೇಹ ಜೀವಕೋಶದಲ್ಲಿರುವ ಕ್ರೋಮೋಸೋಮ್‌ಗಳ ಸಂಖ್ಯೆ **23 ಜೊತೆ.**

VIII ಕೆಳಗಿನವುಗಳ ಒಂದೊಂದು ಕಾರ್ಯ ತಿಳಿಸಿ.

1) "ಪ್ಯಾರಾಮೀಸಿಯಂ"ನಲ್ಲಿರುವ ರೋಮಿಕೆ(Catia) ಗಳು.

**ಕಾರ್ಯ :** ರೋಮಿಕೆಗಳು ಪ್ಯಾರಾಮೀಸಿಯಮ್‌ನ ಚಲನೆಗೆ ಸಹಕಾರಿಯಾಗಿವೆ.

2. ಎರೆಹುಳುವಿನಲ್ಲಿರುವ "ನೆಫ್ರಿಡಿಯಾ" (Nephridia)

**ಕಾರ್ಯ :** ನೆಫ್ರಿಡಿಯಮ್‌ನ ನೆಫ್ರೋಸ್ಟೋಮ್ ಸಿಲಿಯಾಗಳು ತ್ಯಾಜ್ಯ ವಸ್ತುಗಳನ್ನು ರಂಧ್ರದ ಮೂಲಕ ನಾಳಕ್ಕೆ ತಳ್ಳುತ್ತವೆ.

3. ಸಸ್ಯದ ಎಲೆಗಳಲ್ಲಿರುವ "ಪತ್ರ ಸೂಕ್ಷ್ಮ ರಂಧ್ರಗಳು" (Stomata)

**ಕಾರ್ಯ :** ಪತ್ರ ಸೂಕ್ಷ್ಮ ರಂಧ್ರಗಳ ಮೂಲಕ ಅನಿಲಗಳ ವಿನಿಮಯ ಕಾರ್ಯ ಮತ್ತು ಭಾಷ್ಪ ವಿಸರ್ಜನ ಕಾರ್ಯ ನಡೆಯುತ್ತದೆ.

4. ಮೂಲಂಗಿ (Radish)ಯ ತಾಯಿ ಬೇರು.

**ಕಾರ್ಯ :** ಆಹಾರ ಸಂಗ್ರಹಣೆಯು ಮೂಲಂಗಿಯ ತಾಯಿಬೇರಿನ ಮುಖ್ಯ ಕಾರ್ಯವಾಗಿದೆ.

---

# ವಿಜ್ಞಾನ

## ಎಪ್ರಿಲ್ 1986 1 ನೆಯ ಪತ್ರಿಕೆ

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : $2\frac{1}{2}$ ಗಂಟೆ ] [ ಗುಣಗಳು : 65

**ಪ್ರಶ್ನೆ 1. ಅ)** ವಿದ್ಯುತ್‌ದರ್ಶಕ ಎಂದರೇನು ? ಇದರ ಅಂದವಾದ ಚಿತ್ರ ಬರೆದು ಭಾಗಗಳನ್ನು ಗುರುತಿಸಿ. ಅದರ ಉಪಯೋಗವನ್ನು ತಿಳಿಸಿ.

**ಉತ್ತರ : ವಿದ್ಯುದ್ದರ್ಶಕ :** ಸ್ಥಾಯಿ ವಿದ್ಯುದಾವಿಷ್ಟಗಳ ಇರುವಿಕೆಯನ್ನು ಪತ್ತೆಮಾಡುವ (ಕಂಡು ಹಿಡಿಯುವ) ಸಾಧನವನ್ನು ವಿದ್ಯುದ್ದರ್ಶಕ ಎನ್ನುವರು.




**ಸುವರ್ಣಪರ್ಣ ವಿದ್ಯುದ್ದರ್ಶಕ**

ಭಾಗಗಳು : 1. ಗಾಜಿನ ಆವರಣ, 2. ಲೋಹದ ದಂಡ, 3. ಸುವರ್ಣ ಪರ್ಣಗಳು, 4. ಕಟ್ಟಿಗೆಯ ಹಲಿಗೆ, 5. ಕಾರ್ಕ್, 6. ಲೋಹದ ಗುಂಡು.

**ಉಪಯೋಗ:** 1. ವಸ್ತುವಿನಲ್ಲಿ ವಿದ್ಯುದಾವೇಶ ಇದೆಯೋ ಇಲ್ಲವೋ ಎಂಬುದನ್ನು ಕಂಡು ಹಿಡಿಯಲು, 2. ವಸ್ತುವಿನಲ್ಲಿಯ ವಿದ್ಯುದಾವೇಶದ ವಿಧವನ್ನು ಕಂಡುಕೊಳ್ಳಲು.

b) ಸ್ಥಳದ ದಿಕ್ಪಾತ ಕೋನವನ್ನು ವಿವರಿಸಿ.

**ಉತ್ತರ : ದಿಕ್ಪಾತ ಕೋನ :** ಒಂದು ಸ್ಥಳದ ಲಂಬ ಸಮತಲದಲ್ಲಿರುವ ಕಾಂತ ಸೂಜಿಯ ಅಕ್ಷ ಮತ್ತು ಕ್ಷಿತಿಜ ಸಮಾಂತರ ದಿಕ್ಕುಗಳ ನಡುವಿನ ಕೋನವನ್ನು ಆ ಸ್ಥಳದ ದಿಕ್ಪಾತ ಕೋನ ಎನ್ನುವರು. ಭೂಗೋಳದ ಮೇಲಿನ ಬೇರೆ ಬೇರೆ ಸ್ಥಳಗಳ ದಿಕ್ಪಾತ ಕೋನಗಳು ಬೇರೆ ಬೇರೆಯಾಗಿರುತ್ತವೆ. ಸಮಭಾಜಕ ವೃತ್ತದ ಸಮೀಪದಲ್ಲಿ ದಿಕ್ಪಾತ ಕೋನವು $0^\circ$ ಇದ್ದರೆ, ಧ್ರುವಗಳ ಸಮೀಪದಲ್ಲಿ $90^\circ$ ಇರುತ್ತದೆ.

c) ಕ್ಷ–ಕಿರಣದ (X-rays) ಎರಡು ಗುಣಗಳನ್ನು ಮತ್ತು ಎರಡು ಉಪಯೋಗಗಳನ್ನು ತಿಳಿಸಿ.

**ಉತ್ತರ : ಗುಣಗಳು :** 1) ಕ್ಷ–ಕಿರಣಗಳು ಕೆಲವು ಘನವಸ್ತುಗಳ ಮೂಲಕ ತೂರಿಕೊಂಡು ಹೋಗುತ್ತವೆ.

2) ಕೆಲವು ರಾಸಾಯನಿಕ ವಸ್ತುಗಳಲ್ಲಿ ಸ್ಫುರಣವನ್ನುಂಟು ಮಾಡುತ್ತವೆ.

**ಉಪಯೋಗಗಳು :** 1. ವೈದ್ಯಕೀಯದಲ್ಲಿ ದೇಹದ ಒಳಭಾಗದ ಸ್ಥಿತಿಯನ್ನು ತಿಳಿದುಕೊಳ್ಳಲು, 2. ಕೈಗಾರಿಕಾ ಕ್ಷೇತ್ರದಲ್ಲಿ ವಸ್ತುಗಳ ಗುಣಮಟ್ಟವನ್ನು ಪರೀಕ್ಷಿಸಲು.

**ಪ್ರಶ್ನೆ 2.** a) ಉಕ್ಕನ್ನು ತಯಾರಿಸಲು ಬಳಸುವ ವಿದ್ಯುತ್ ಕುಲುಮೆಯ ಅಂದವಾದ ಚಿತ್ರಬರೆದು, ಅದರ ಭಾಗಗಳನ್ನು ಗುರುತಿಸಿ. ಉಕ್ಕನ್ನು ತಯಾರಿಸುವಾಗ ಸುಣ್ಣವನ್ನು ಏಕೆ ಉಪಯೋಗಿಸುತ್ತಾರೆ ?

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 10 (a) ನೋಡಿ.

**ಉಕ್ಕಿನ ತಯಾರಿಕೆಯಲ್ಲಿ ಸುಣ್ಣದ ಉಪಯೋಗ :** ಸುಣ್ಣವು ಕಶ್ಮಲಗಳೊಡನೆ ಕೂಡಿಕೊಂಡು ಕಿಟ್ಟವನ್ನುಂಟು ಮಾಡುವುದು. ಈ ಕಿಟ್ಟವು ಉಕ್ಕು ಆಮ್ಲಜನಕದೊಡನೆ ಸಂಪರ್ಕ ಹೊಂದದಂತೆ ಮಾಡುವುದು.

b) ಬೆಂಕಿ ಆರಿಸುವ ಸಾಧಾರಣ ಯಂತ್ರದಲ್ಲಿ ಬಳಸುವ ರಾಸಾಯನಿಕ ವಸ್ತುಗಳು ಯಾವವು ? ಈ ವಿಧಾನದಲ್ಲಿ ಉತ್ಪತ್ತಿಯಾಗುವ ಅನಿಲ ಯಾವುದು ?

**ಉತ್ತರ :** ಬೆಂಕಿ ಆರಿಸುವ ಸಾಧಾರಣ ಯಂತ್ರದಲ್ಲಿ ಬಳಸುವ ರಾಸಾಯನಿಕ ವಸ್ತುಗಳು : ಸೋಡಿಯಮ್ ಕಾರ್ಬೋನೇಟ ಮತ್ತು ದುರ್ಬಲ ಸಲ್ಫ್ಯೂರಿಕ್ ಆಮ್ಲ. ಈ ಯಂತ್ರದಲ್ಲಿ ಉತ್ಪತ್ತಿಯಾಗುವ ಅನಿಲ ಇಂಗಾಲದ ಡೈಆಕ್ಸೈಡ್.

c) ಸುಣ್ಣದ ಸೂಪರ್ ಫಾಸ್ಫೇಟ್ ಎಂದರೇನು ?

**ಉತ್ತರ :** ಸುಣ್ಣದ ಸೂಪರ್ ಫಾಸ್ಫೇಟ್ ಎನ್ನುವುದು ಒಂದು ಕೃತಕ ಗೊಬ್ಬರ.

**ಪ್ರಶ್ನೆ 3.** a) ಲೆಕ್ಲಾಂಚಿ ನಿರ್ದ್ರವ ಕೋಶದ ಅಂದವಾದ ಚಿತ್ರ ಬರೆಯಿರಿ. ಅದರ ಭಾಗಗಳನ್ನು ಗುರುತಿಸಿ. ಈ ಕೋಶದಲ್ಲಿ ಇರುವ ಮ್ಯಾಂಗನೀಸ್ ಡೈ ಆಕ್ಸೈಡ್‌ನ ಕಾರ್ಯವೇನು ?

**ಉತ್ತರ :** ಚಿತ್ರಕ್ಕಾಗಿ ಅಕ್ಟೋಬರ 1985ರ 5(a) ಪ್ರಶ್ನೆ ನೋಡಿ.

ಲೆಕ್ಲಾಂಚಿ ನಿರ್ದ್ರವ ಕೋಶದಲ್ಲಿ ಇರುವ ಮ್ಯಾಂಗನೀಸ್ ಡೈಆಕ್ಸೈಡವು ಕೋಶದಲ್ಲಿ ಆಗಬಹುದಾದ ಧ್ರುವೀಕರಣವನ್ನು ತಡೆಯುತ್ತದೆ.

b) ಬೆಳಕಿನ ಅಲೆಗಳಿಗೂ ಶಬ್ದದ ಅಲೆಗಳಿಗೂ ಇರುವ ವ್ಯತ್ಯಾಸವೇನು ?

**ಉತ್ತರ :**

| ಬೆಳಕಿನ ಅಲೆಗಳು | ಶಬ್ದದ ಅಲೆಗಳು |
|---|---|
| 1. ಅಡ್ಡಲೆಗಳು | 1. ನೀಳಲೆಗಳು |
| 2. ಉಬ್ಬು ತಗ್ಗುಗಳ ರೂಪದಲ್ಲಿರುವವು | 2. ದಟ್ಟತೆ ವಿರಳತೆಗಳ ರೂಪದಲ್ಲಿರುವವು |
| 3. ಅಲೆಗಳ ವೇಗ ಸೆಕೆಂಡಿಕೆ 3 ಲಕ್ಷ ಕಿ.ಮೀ.ಗಳು. | 3. ಅಲೆಗಳ ವೇಗ ಸೆಕೆಂಡಿಗೆ 340 ಮೀಟರ್‌ಗಳು |

c) ವಿದ್ಯುಜ್ಜನಕ (Dynmao) ಎಂದರೇನು ?

**ಉತ್ತರ : ವಿದ್ಯುಜ್ಜನಕ :** ಯಾಂತ್ರಿಕ ಶಕ್ತಿಯನ್ನು ವಿದ್ಯುಚ್ಛಕ್ತಿಯನ್ನಾಗಿ ಪರಿವರ್ತಿಸುವ ಸಾಧನವನ್ನು ವಿದ್ಯುಜ್ಜನಕ ಎನ್ನುವರು.

**ಪ್ರಶ್ನೆ 4. a)** ಸಿಮೆಂಟ್ ತಯಾರಿಸಲು ಉಪಯೋಗಿಸುವ ವಸ್ತುಗಳು ಯಾವವು ? ಸಿಮೆಂಟ್ ತಯಾರಿಕೆಯ ವಿವಿಧ ಹಂತಗಳನ್ನು ಸಂಕ್ಷಿಪ್ತವಾಗಿ ವಿವರಿಸಿ. ಜಿಪ್ಸಮ್‌ನನ್ನು ಏತಕ್ಕಾಗಿ ಉಪಯೋಗಿಸುತ್ತಾರೆ ?

**ಉತ್ತರ :** ಸಿಮೆಂಟ್ ತಯಾರಿಸಲು ಉಪಯೋಗಿಸುವ ವಸ್ತುಗಳು : ಜೇಡಿಮಣ್ಣು, ಕಲ್ಲುಸುಣ್ಣ ಮತ್ತು ಜಿಪ್ಸಮ್.

**ಸಿಮೆಂಟಿನ ತಯಾರಿಕೆ :** ಕಲ್ಲು ಸುಣ್ಣ ಹಾಗೂ ಜೇಡಿಮಣ್ಣು ಇವುಗಳ ಮಿಶ್ರಣವನ್ನು ನೀರಿನೊಂದಿಗೆ ಚೆನ್ನಾಗಿ ಅರೆದು ತಯಾಸಿದ ಸ್ಲರ್ರಿಯನ್ನು ಸುಮಾರು 75 ಮೀಟರ್ ಉದ್ದ 2.5 ಮೀ. ವ್ಯಾಸವುಳ್ಳ ಸ್ವಲ್ಪ ಓರೆಯಾಗಿರುವ, ಉರುಳ್ಳ ಕುಲುಮೆಯಲ್ಲಿ ಕೆಳಗಿನಿಂದ ನುಗ್ಗಿ ಬರುತ್ತಿರುವ ಕಲ್ಲಿದ್ದಲು ಧೂಳಿನ ಉರಿಗಾಳಿಯಲ್ಲಿ 1200°C ದಿಂದ 1400°C ಉಷ್ಣ ತೆಯವರೆಗೆ ಚೆನ್ನಾಗಿ ಕಾಸುತ್ತಾರೆ. ಕುಲುಮೆಯಿಂದ ಹೊರಗೆ ಬರುವ ಗಂಟು ಗಂಟಾದ ಹಾಗೂ ಕೆಂಪಗೆ ಕಾದಿರುವ ಉಂಡೆಗಳನ್ನು ಕ್ಲಿಂಕರ್ ಎನ್ನುವರು. ಆ ಮೇಲೆ ಕ್ಲಿಂಕರನ್ನು ತಂಪುಗೊಳಿಸಿ ಅದಕ್ಕೆ ಸುಮಾರು 3% ಜಿಪ್ಸಮ್ಮನ್ನು ಸೇರಿಸಿ ಮಿಶ್ರಣವನ್ನು ಚೆನ್ನಾಗಿ ಪುಡಿಮಾಡುತ್ತಾರೆ. ಇದೇ ಸಿಮೆಂಟ್.

ಸಿಮೆಂಟ್ ತಯಾರಿಸುವಾಗ ಸೇರಿಸಿದ ಜಿಪ್ಸಮ್ ಇದು ಸಿಮೆಂಟ್ ಕಾಂಕ್ರೀಟ್ ಬೇಗನೆ ಗಟ್ಟಿಯಾಗುವುದನ್ನು ತಡೆಯುತ್ತದೆ.

b) ಕಬ್ಬಿಣದ ಪುಡಿ ಮತ್ತು ಗಂಧಕದ ಮಿಶ್ರಣದಿಂದ ಗಂಧಕವನ್ನು ಹೇಗೆ ಬೇರ್ಪಡಿಸುವಿರಿ.

ಉತ್ತರಕ್ಕೆ ಎಪ್ರಿಲ್ 1985 ರ ಪ್ರಶ್ನೆ 4 c ನೋಡಿ.

c) ನೆಸ್ಲರ್ ದ್ರಾವಣ ಎಂದರೇನು ? ಅದನ್ನು ಹೇಗೆ ತಯಾರಿಸುವಿರಿ ?

**ಉತ್ತರ :** ಅಮೋನಿಯಾ ಅಥವಾ ಅಮೋನಿಯಮ್ ಲವಣಗಳನ್ನು ಗುರುತಿಸಲು ನೆಸ್ಲರ್‌ದ್ರಾವಣವನ್ನು ಉಪಯೋಗಿಸುವರು. ಅಮೋನಿಯಾ ಅಥವಾ ಅಮೋನಿಯಮ್‌ಗಳು ನೆಸ್ಲರ ದ್ರಾವಣದಿಂದ ಕಂದು ಬಣ್ಣಕ್ಕೆ ಬದಲಾಗುವವು.

**ನೆಸ್ಲರ್ ದ್ರಾವಣ ತಯಾರಿಕೆ :** ಮರ್ಕ್ಯೂರಿಕ್ ಕ್ಲೋರೈಡ್ ದ್ರಾವಣಕ್ಕೆ ಹೆಚ್ಚಿನ ಪ್ರಮಾಣದಲ್ಲಿ ಪೊಟ್ಯಾಷಿಯಂ ಅಯೋಡೈಡ್‌ನ್ನು ಬೆರೆಸಿ, ಮಿಶ್ರಣಕ್ಕೆ ಸೋಡಿಯಮ್ ಇಲ್ಲವೆ ಪೊಟ್ಯಾಷಿಯಮ್ ಹೈಡ್ರಾಕ್ಸೈಡ್‌ನ್ನು ಸೇರಿಸಬೇಕು. ಈಗ ತಯಾರಾದ ದ್ರಾವಣವನ್ನು ನೆಸ್ಲರ್ ದ್ರಾವಣ ಎನ್ನುವರು.

**ಪ್ರಶ್ನೆ 5. a)** 2 ಓಂ ಮತ್ತು 3 ಓಂ, ( 2 ohm ಮತ್ತು 3 ohm ) ರೋಧಕವುಳ್ಳ ಎರಡು ವಾಹಕಗಳನ್ನು ಸರಣಿಯಲ್ಲಿ ಮತ್ತು ಸಮಾಂತರ ಜೋಡಣೆಯಲ್ಲಿ ಸೇರಿಸಿದಾಗ ಉಂಟಾಗುವ ಪರಿಣಾಮಕಾರಿ ರೋಧಕವನ್ನು ಕಂಡು ಹಿಡಿಯಿರಿ.

ರೀತಿ ; ಸರಣಿಯಲ್ಲಿ ಸೇರಿಸಿದಾಗ ಪರಿಣಾಮಕಾರಿ ರೋಧಕ

$$R = R_1 + R_2 = 2+3 = 5 \text{ ಓಮ್‌ಗಳು.}$$

ಸಮಾಂತರ ಜೋಡಣೆಯಲ್ಲಿ ಸೇರಿಸಿದಾಗ ಪರಿಣಾಮಕಾರಿ ರೋಧಕ

$$\frac{1}{R} = \frac{1}{R_1} + \frac{1}{R_2} = \frac{1}{2} + \frac{1}{3} = \frac{5}{6}$$

ಅಥವಾ $R = \frac{6}{5} = 1.2$ ಓಮ್‌ಗಳು.

b) ಜ್ಯೋತಿರ್ ವರ್ಷ (ಬೆಳಕಿನ ವರ್ಷ) ಎಂದರೇನು ?

**ಉತ್ತರ : ಜ್ಯೋತಿರ್ ವರ್ಷ :** ಬೆಳಕು ಸೆಕೆಂಡಿಗೆ 3 ಲಕ್ಷ ಕಿಲೋಮೀಟರ್ ವೇಗದಿಂದ ಒಂದು ವರ್ಷ ಅವಧಿಯಲ್ಲಿ ಚಲಿಸುವ ದೂರವನ್ನು ಒಂದು ಜ್ಯೋತಿರ್ ವರ್ಷ ಎನ್ನುವರು.

**ಪ್ರಶ್ನೆ 6. a)** ವಜ್ರವನ್ನು ಬಂಡೆಗಳ ಕೊರೆಯುವಿಕೆಯಲ್ಲಿ ಏಕೆ ಉಪಯೋಗಿಸುತ್ತಾರೆ ?

**ಉತ್ತರ :** ವಜ್ರವು ಅತ್ಯಂತ ಕಠಿಣವಾಗಿರುವುದರಿಂದ ಬಂಡೆಗಳನ್ನು ಕೊರೆಯುವುದಕ್ಕಾಗಿ ಉಪಯೋಗಿಸುವರು.

b) ನೀರಿನ ಶಾಶ್ವತ ಮತ್ತು ತಾತ್ಕಾಲಿಕ ಗಡಸುತನಕ್ಕೆ ಕಾರಣವೇನು ?

**ಉತ್ತರ :** ನೀರಿನಲ್ಲಿ ಕ್ಯಾಲ್ಸಿಯಮ್ ಕ್ಲೋರೈಡ್, ಕ್ಯಾಲ್ಸಿಯಮ್ ಸಲ್ಫೇಟ್ ಮ್ಯಾಗ್ನೇಷಿಯಂ ಕ್ಲೋರೈಡ್ ಮತ್ತು ಮ್ಯಾಗ್ನೇಷಿಯಮ್ ಸಲ್ಫೇಟ್ ಈ ಲವಣಗಳಲ್ಲಿ ಯಾವುದಾದರೂ ಒಂದು ಲವಣ ಕರಗಿದರೆ, ನೀರಿಗೆ ಶಾಶ್ವತ ಗಡಸುತನ ಬರುವುದು.

ನೀರಿನಲ್ಲಿ ಕ್ಯಾಲ್ಸಿಯಮ್ ಇಲ್ಲವೆ ಮ್ಯಾಗ್ನೇಷಿಯಂ ಬೈಕಾರ್ಬೊನೇಟ್‌ಗಳು ಕರಗುವುದರಿಂದ ನೀರಿಗೆ ತಾತ್ಕಾಲಿಕ ಗಡಸುತನ ಬರುವುದು.

**ಪ್ರಶ್ನೆ 7. a)** ಪೊಟ್ಯಾಷ್ ಆಲಂ(Potash Alum) ಅನ್ನು ಹೇಗೆ ತಯಾರಿಸುವಿರಿ ? ಅದರ ಒಂದು ಉಪಯೋಗವನ್ನು ತಿಳಿಸಿ.

**ಉತ್ತರ :** ಪೊಟ್ಯಾಷಿಯಂ ಸಲ್ಫೇಟ್ ಮತ್ತು ಅಲ್ಯುಮಿನಿಯಂ ಸಲ್ಫೇಟಗಳ ಬಿಸಿಯಾದ ಸಂತೃಪ್ತ ದ್ರಾವಣಗಳನ್ನು ಬೆರೆಸಿ, ಮಿಶ್ರಣವನ್ನು ತಣಿಸಿ ಸ್ಫಟಿಕೀಕರಿಸಿದರೆ ಪೊಟ್ಯಾಷ್ ಆಲಂನ ಹರಳುಗಳು ದೊರೆಯುತ್ತವೆ.

ಪೊಟ್ಯಾಷ ಆಲಮ್‌ನ್ನು ರಾಡಿ ನೀರನ್ನು ತಿಳಿಗೊಳಿಸಲು ಬಣ್ಣದ ಉದ್ಯಮದಲ್ಲಿ ಉಪಯೋಗಿಸುವರು.

**b)** ಕ್ಲೋರಿನ್ ಮತ್ತು ಹೈಡ್ರೋಜನ್ ಅನಿಲಗಳ ಮಿಶ್ರಣವನ್ನು ಸೂರ್ಯನ ಬೆಳಕಿನಲ್ಲಿಟ್ಟರೆ, ಏನಾಗುತ್ತದೆ ?

**ಉತ್ತರ :** ಸೂರ್ಯನ ಬೆಳಕಿನಲ್ಲಿ(ಬಿಸಿಲಲ್ಲಿ)ಕ್ಲೋರಿನ್ ಮತ್ತು ಹೈಡ್ರೋಜನ್ ಅನಿಲಗಳು ಸ್ಫೋಟದೊಂದಿಗೆ ಸಂಯೋಗಗೊಂಡು ಹೈಡ್ರೋಜನ್ ಕ್ಲೋರೈಡ್ ಅನಿಲವು ಉಂಟಾಗುತ್ತದೆ.

$H_2 + Cl_2 \rightarrow 2HCl$.

**ಪ್ರಶ್ನೆ 8. a)** ಈ ಸೂತ್ರಗಳು ಯಾವ ವಸ್ತುವನ್ನು ಸೂಚಿಸುತ್ತವೆ ?

i) $CS_2$ ii) NaCl.

**ಉತ್ತರ :** i) $CS_2 \rightarrow$ ಇಂಗಾಲದ ಡೈಸಲ್ಫೈಡ್
ii) NaCl→ಸೋಡಿಯಮ್ ಕ್ಲೋರೈಡ್ (ತಿನ್ನುವ ಉಪ್ಪು)

**b)** ಕ್ರಿಯೆಗಳ ವೇಗದ ಮೇಲೆ ಪ್ರಭಾವ ಬೀರುವ ಯಾವುದಾದರೂ ನಾಲ್ಕು ಅಂಶಗಳನ್ನು ತಿಳಿಸಿ.

**ಉತ್ತರ :** ಕ್ರಿಯೆಯ ವೇಗದ ಮೇಲೆ ಪ್ರಭಾವ ಬೀರುವ ನಾಲ್ಕು ಅಂಶಗಳು : 1) ಕ್ರಿಯಾ ವಸ್ತುಗಳ ಸ್ವಭಾವ, 2) ಪ್ರಬಲತೆ, 3) ಉಷ್ಣತೆ ಮತ್ತು 4) ವೇಗ ಪರಿವರ್ತಕ.

**ಪ್ರಶ್ನೆ 9. a)** "ಅನುರೂಪ ಶ್ರೇಣಿ" ಇದನ್ನು ವಿವರಿಸಿ ಎರಡು ಉದಾಹರಣೆ ಕೊಡಿ.

**ಉತ್ತರ : ಅನುರೂಪ ಶ್ರೇಣಿ :** ಸಾವಯವ ಸಂಯುಕ್ತಗಳ ಯಾವುದೇ ಶ್ರೇಣಿಯಲ್ಲಿ ಸದಸ್ಯರು ಅನುಕ್ರಮವಾಗಿ ಒಂದು $CH_2$ ಗುಂಪಿನಿಂದ ವ್ಯತ್ಯಾಸ ಹೊಂದುತ್ತಿದ್ದರೆ,ಅಂತಹ ಶ್ರೇಣಿಯನ್ನು ಅನುರೂಪ ಶ್ರೇಣಿ ಎನ್ನುವರು. ಅನುರೂಪ ಶ್ರೇಣಿಯ ವಸ್ತುಗಳ ಭೌತಿಕ ಗುಣಗಳಲ್ಲಿ ನಿಯಮಿತವಾದ ಬದಲಾವಣೆ ಇದ್ದರೂ, ಅವುಗಳ ರಾಸಾಯನಿಕ ಗುಣಗಳಲ್ಲಿ ಸಾಮ್ಯತೆ ಕಂಡು ಬರುತ್ತದೆ.

ಉದಾ: ಮಿಥೇನ್ ($CH_4$), ಈಥೇನ್ ($C_2H_6$), ಪ್ರೊಪೇನ್ ($C_3H_8$) ಮುಂತಾದವು.

**b)** ಬೆನ್ಸೀನ್ ($C_6H_6$) ಧೂಮಯುಕ್ತ ಜ್ವಾಲೆಯೊಂದಿಗೆ ಉರಿಯುತ್ತದೆ. ಕಾರಣವೇನು ?

**ಉತ್ತರ :** ಬೆಂಜೀನ್‌ನಲ್ಲಿ ಅನುರೂಪದ ಪ್ಯಾರಾಫಿನ್‌ಗಳಲ್ಲಿಯಕ್ಕಿಂತ ಹೆಚ್ಚಿನ ಪ್ರಮಾಣದ ಇಂಗಾಲದ ಪ್ರಮಾಣವನ್ನು ಹೊಂದಿರುತ್ತದೆ. ಆದ್ದರಿಂದ ಬೆನ್ಸೀನ್‌ವು ಧೂಮಯುಕ್ತ ಜ್ವಾಲೆಯಿಂದ ಉರಿಯುತ್ತದೆ.

**ಪ್ರಶ್ನೆ 10. a)** ಶಬ್ದಾತೀತಗಳು (Ultrasonics) ಎಂದರೇನು ? ಅವು ಹೇಗೆ ಉಂಟಾಗುತ್ತವೆ ?

**ಉತ್ತರ : ಶಬ್ದಾತೀತಗಳು :** ಸೆಕೆಂಡಿಗೆ 20,000 ಕ್ಕಿಂತಲೂ ಹೆಚ್ಚಿನ ಕಂಪನಾಂಕದಿಂದ ಕೂಡಿದ ಶಬ್ದವನ್ನು ಶಬ್ದಾತೀತಗಳು ಎನ್ನುವರು. ಈ ಶಬ್ದವನ್ನು ಕೇಳುವುದು ಅಸಾಧ್ಯ.

ಕಾಚಶಿಲೆಯನ್ನು ಒಂದು ವಿಶಿಷ್ಟ ದಿಕ್ಕಿನಲ್ಲಿ ಕತ್ತರಿಸಿ ತಯಾರಿಸಿದ ತೆಳುವಾದ ಬಿಲ್ಲೆಯನ್ನು ಎರಡು ಲೋಹದ ಫಲಕಗಳ ನಡುವೆ ಇಡಬೇಕು. ಫಲಕಗಳ ನಡುವೆ ಅತ್ಯಧಿಕ ಆವರ್ತ ಸಂಖ್ಯೆಯ ಪರ್ಯಾಯ ವಿಭವವನ್ನು ಆರೋಪಿಸಬೇಕು. ಆಗ ಕಾಚಶಿಲೆಯ ತುಂಡು ಶ್ರವಣಾತೀತ ಆವರ್ತ ಸಂಖ್ಯೆಯಿಂದ ಕಂಪಿಸುತ್ತದೆ. ಆದರಿಂದ ಉತ್ಪನ್ನವಾದ ಧ್ವನಿಯು ಶ್ರವಣಾತೀತವಿರುತ್ತದೆ.

**b)** ಘನಸ್ಥಿತಿಯ ದ್ರಾವಣಗಳ ಎರಡು ವಿಧಗಳನ್ನು ತಿಳಿಸಿ.

**ಉತ್ತರ :** 1) ಘನದಲ್ಲಿ ದ್ರವ—ಅಮಲ್ಗಮ್ (ಲೋಹ+ಪಾದರಸ)
2) ಘನದಲ್ಲಿ ಘನ–ಹಿತ್ತಾಳಿ (ತಾಮ್ರ+ಸತು)

**ಪ್ರಶ್ನೆ 11. a)** ಒಂದು ವಾಹಕದ ವಿಭವಾಂತರ, ರೋಧ ಮತ್ತು ವಿದ್ಯುತ್ ಪ್ರವಾಹ ಇವುಗಳಿಗೆ ಇರುವ ಸಂಬಂಧವನ್ನು ತಿಳಿಸಿ ಮತ್ತು ಪ್ರತಿಯೊಂದು ಅಳತೆಯ ಮೂಲಮಾನವನ್ನು ತಿಳಿಸಿ.

**ಉತ್ತರ :** ವಾಹಕದ ವಿಭವಾಂತರ (V), ರೋಧ(R) ಮತ್ತು ವಿದ್ಯುತ್ಪ್ರವಾಹ (I)ಗಳಿಗೆ ಇರುವ ಸಂಬಂಧ $V = RI$

ಅಂದರೆ ವಿಭವಾಂತರವು ವಾಹಕದ ರೋಧ ಮತ್ತು ಅದರಲ್ಲಿ ಹರಿಯುತ್ತಿರುವ ವಿ. ಪ್ರವಾಹ ಇವುಗಳ ಗುಣಲಬ್ಧಕ್ಕೆ ಅನುಲೋಮವಾಗಿರುವುದು.

ವಿಭವಾಂತರದ ಮೂಲಮಾನ–ವೋಲ್ಟ್

ರೋಧದ ಮೂಲಮಾನ–ಓಮ್

ವಿದ್ಯುತ್ ಪ್ರವಾಹದ ಮೂಲಮಾನ–ಅಂಪೇರ

b) ಮಾನವನ ಶರೀರದ ಉಷ್ಣತೆಯನ್ನು ಹೇಗೆ ಅಳೆಯುವಿರಿ ?

**ಉತ್ತರ :** ಮಾನವನ ಶರೀರದ ಉಷ್ಣತೆಯನ್ನು ಕ್ಲಿನಿಕಲ್ ಥರ್ಮಾಮೀಟರ್‌ದಿಂದ ಅಳೆಯುವರು.

**ಪ್ರಶ್ನೆ 12. a)** ಕಬ್ಬಿಣದ ಎರಡು ಮುಖ್ಯ ಅದಿರುಗಳನ್ನು ಹೆಸರಿಸಿ.

**ಉತ್ತರ :** ಕಬ್ಬಿಣದ ಎರಡು ಅದಿರುಗಳು–

1) ಹೀಮೆಟೈಟ್ 2) ಮೆಗ್ನೆಟೈಟ್.

b) ಪ್ರಯೋಗ ಶಾಲೆಯಲ್ಲಿರುವ ಯಾವುವಾದರೂ ನಾಲ್ಕು ಆಮ್ಲಗಳ ಹೆಸರನ್ನು ತಿಳಿಸಿ. ಅವುಗಳ ಸೂತ್ರವನ್ನು ಬರೆಯಿರಿ.

**ಉತ್ತರ :** ಆಮ್ಲಧ ಹೆಸರು ಮತ್ತು ಸೂತ್ರ–ಸಲ್ಫ್ಯೂರಿಕ್ ಆಮ್ಲ $H_2SO_4$, ಹೈಡ್ರೋಕ್ಲೋರಿಕ್ ಆಮ್ಲ $HCl$, ನೈಟ್ರಿಕ್ ಆಮ್ಲ $HNO_3$ ಮತ್ತು ಅಸಿಟಿಕ್ ಆಮ್ಲ $CH_3COOH$.

**ಪ್ರಶ್ನೆ 13. a)** ಯಾವುದಾದರೂ ಎರಡು ಚಾಕ್ಷುಷೋಪಕರಣಗಳನ್ನು ತಿಳಿಸಿ. ಅವುಗಳ ಉಪಯೋಗವನ್ನು ತಿಳಿಸಿ.

**ಉತ್ತರ :** ಎರಡು ಚಾಕ್ಷುಷೋಪಕರಣಗಳು : 1) ಸಂಯೋಜಿತ ಸೂಕ್ಷ್ಮದರ್ಶಕ, 2) ದೂರದರ್ಶಕ.

**ಉಪಯೋಗ :** 1) ಸೂಕ್ಷ್ಮದರ್ಶಕವನ್ನು ಆಸ್ಪತ್ರೆಗಳಲ್ಲಿ ರಕ್ತ, ಕಫ ಮುಂತಾದವುಗಳ ಪರೀಕ್ಷೆಗಾಗಿ, ಜೀವಶಾಸ್ತ್ರ ಪ್ರಯೋಗ ಶಾಲೆಗಳಲ್ಲಿ ಸಸ್ಯದ ಮತ್ತು ಪ್ರಾಣಿಗಳ ಸೂಕ್ಷ್ಮ ಅಭ್ಯಾಸಕ್ಕಾಗಿ, ಬ್ಯಾಕ್ಟೀರಿಯಾಗಳಂತಹ ಸೂಕ್ಷ್ಮಾಣುಜೀವಿಗಳನ್ನು ನೋಡುವುದಕ್ಕಾಗಿ ಉಪಯೋಗಿಸುವರು.

2) ದೂರದರ್ಶಕವನ್ನು ದೂರದ ವಸ್ತುಗಳನ್ನು ನೋಡುವುದಕ್ಕಾಗಿ ಸೈನ್ಯದಲ್ಲಿ, ಹಡಗುಗಳಲ್ಲಿ, ವಿಮಾನಗಳಲ್ಲಿ ಉಪಯೋಗಿಸುವರು. ಅಲ್ಲದೆ ಖಗೋಳದಲ್ಲಿಯ ಗ್ರಹ, ಉಪಗ್ರಹಗಳನ್ನು, ಧೂಮಕೇತುಗಳನ್ನು ನೋಡಲು ಉಪಯೋಗಿಸುವರು.

b) ಯಾವ ಕ್ರಿಯೆಯಿಂದ ಒಂದು ಪಾತ್ರೆಯ ಬೆಳ್ಳಿಯ ಲೇಪನ ಮಾಡಬಹುದು ?

**ಉತ್ತರ :** ವಿದ್ಯುಲ್ಲೇಪನ ಕ್ರಿಯೆಯಿಂದ ಒಂದು ಪಾತ್ರೆಗೆ ಬೆಳ್ಳಿಯ ವಿಲೇಪನ ಮಾಡಬಹುದು.

**ಪ್ರಶ್ನೆ 14. a)** ಪಾಲಿಮರ್‌ಗಳು ಎಂದರೇನು ? ಎರಡು ಉದಾಹರಣೆ ತಿಳಿಸಿ.

**ಉತ್ತರ : ಪಾಲಿಮರ್ :** ಪ್ಲಾಸ್ಟಿಕ್‌ಗಳು ಅತ್ಯಂತ ದೊಡ್ಡ ಅಣುಗಳನ್ನು ಹೊಂದಿದ ರಾಸಾಯನಿಕ ಸಂಯುಕ್ತಗಳು. ಪ್ಲಾಸ್ಟಿಕ್‌ನ ಈ ದೊಡ್ಡ ಅಣುಗಳನ್ನು ಪಾಲಿಮರ್ ಎನ್ನುವರು.

ಉದಾ : ಪಿಷ್ಟ, ಸೆಲ್ಯುಲೋಸ್.

b) ಕಬ್ಬಿನಲ್ಲಿರುವ ಸಕ್ಕರೆಯ ರಾಸಾಯನಿಕ ಹೆಸರನ್ನು ತಿಳಿಸಿ.

**ಉತ್ತರ :** ಸುಕ್ರೋಸ್.

**ಪ್ರಶ್ನೆ 15. a)** ಸ್ಟೈನ್‌ಲೆಸ್ ಉಕ್ಕಿನಲ್ಲಿರುವ ಘಟಕಗಳನ್ನು ತಿಳಿಸಿ. ಇದರ ಉಪಯೋಗಗಳನ್ನು ತಿಳಿಸಿ.

**ಉತ್ತರ :** ಸ್ಟೈನ್‌ಲೆಸ್ ಉಕ್ಕಿನ ಘಟಕ ವಸ್ತುಗಳು : ಕಬ್ಬಿಣದೊಡನೆ, 18% ಕ್ರೋಮಿಯಮ್, 8% ನಿಕ್ಕಲ್ ಮತ್ತು 0.3% ಇಂಗಾಲ ಇರುತ್ತವೆ.

**ಉಪಯೋಗ :** ಬ್ಲೇಡುಗಳು, ಕತ್ತರಿ, ಶಸ್ತ್ರಚಿಕಿತ್ಸೆಯ ಉಪಕರಣಗಳು, ಮನೆ ಉಪಯೋಗಿ ಪಾತ್ರೆಗಳನ್ನು ತಯಾರಿಸಲು ಉಪಯೋಗಿಸುವರು.

b) ಕ್ಲೋರಿನ್ ಚಲುವೆ ಕಾರ್ಯದಲ್ಲಿ ಆಡಕವಾಗಿರುವ ರಾಸಾಯನಿಕ ಕ್ರಿಯೆ ಯಾವವು ?

**ಉತ್ತರ :** ಒದ್ದೆಯಾಗಿರುವ ಬಣ್ಣದ ವಸ್ತುವಿನಲ್ಲಿಯ ನೀರಿನೊಡನೆ ಕ್ಲೋರಿನ್ ವರ್ತಿಸಿ ಹೈಡ್ರೋಕ್ಲೋರಿಕ್ ಆಮ್ಲ ($HCl$) ಮತ್ತು ಹೈಪೋಕ್ಲೋರಸ್ ಆಮ್ಲ ($HClO$) ಉತ್ಪನ್ನವಾಗುವವು.

$$H_2O+Cl_2 \rightarrow HCl+HClO$$

ಹೈಪೋಕ್ಲೋರಸ್ ಆಮ್ಲವು ಅಸ್ಥಿರವಿರುವುದರಿಂದ ಅದು ವಿಭಜಿಸಲ್ಪಟ್ಟು, ಉದ್ಭವಾವಸ್ಥೆಯಲ್ಲಿರುವ ಆಮ್ಲಜನಕ (Nacent Oxygen) ಬಿಡುಗಡೆಯಾಗುವುದು.

$$HClO \rightarrow HCl+O$$

ಈ ಉದ್ಭವಾವಸ್ಥೆಯಲ್ಲಿಯ ಆಮ್ಲಜನಕ (O) ಬಣ್ಣವನ್ನು ಉತ್ಕರ್ಷಿಸುವುದು ಆಧರಿಂದ ಬಣ್ಣವು ಇಲ್ಲದಂತಾಗುವುದು.

**ಪ್ರಶ್ನೆ 16.** a) ವಿದ್ಯುತ್ ವಾಹಕ ಮತ್ತು ನಿರೋಧಕಗಳು ಎಂದರೇನು ? ಒಂದೊಂದು ಉದಾಹರಣೆ ಕೊಡಿ.

ಉತ್ತರಕ್ಕೆ ಅಕ್ಟೋಬರ 1985 ರ ಪ್ರಶ್ನೆ 12 (a) ನೋಡಿ.

b) ಸರಳಯಂತ್ರ ಎಂದರೇನು ? ಎರಡು ಉದಾಹರಣೆ ಕೊಡಿ.

**ಉತ್ತರ : ಸರಳ ಯಂತ್ರ :** ಯಾವುದೇ ಒಂದು ಸಾಧನದ ಮೇಲೆ, ಪ್ರಯೋಗಿಸಿದ ಬಲವು ನಮಗೆ ಬೇಕಾದ ಮತ್ತೊಂದು ಬಿಂದುವಿನಲ್ಲಿ ತನ್ನ ನೇರ ಮತ್ತು ಪರಿಮಾಣದ ಸೂಕ್ತ ಬದಲಾವಣೆಯನ್ನು ಹೊಂದಿ ದೊರೆಯುವುದೋ ಆ ಸಾಧನವನ್ನು ಸರಳಯಂತ್ರ ಎನ್ನುವರು.

ಉದಾ : ಚಕ್ರ ಮತ್ತು ಅಚ್ಚು, ಗಡಗಡೆ, ಇಳುಕಲು.

## ವಿಜ್ಞಾನ

## ಏಪ್ರಿಲ್ 1986 2 ನೆಯ ಪತ್ರಿಕೆ

## [ ಜೀವಶಾಸ್ತ್ರ ]

ವೇಳೆ : 2 ಗಂಟೆ ] [ ಗುಣಗಳು : 35

**ಪ್ರಶ್ನೆ 1.** ಮನುಷ್ಯ ದೇಹದಲ್ಲಿನ ಶ್ವಾಸಕ ರಕ್ತ ಪರಿಚಲನೆ (Pulmonary Ciruulation) ವಿವರಿಸಿ. ಅದು ಯಾವ ಕಾರ್ಯವನ್ನು ನಿರ್ವಹಿಸುತ್ತದೆ ?

**ಉತ್ತರ: ಶ್ವಾಸಕ ರಕ್ತ ಪರಿಚಲನೆ :** ಮಲಿನ ರಕ್ತವು ಹೃದಯದ ಬಲ ಹೃತ್ಕುಕ್ಷಿಯಿಂದ ಪಲ್ಮನರಿ ಅಪಧಮನಿಯ ಮೂಲಕ, ಶ್ವಾಸಕೋಶಗಳಿಗೆ ಹೋಗಿ, ಅಲ್ಲಿ ಶುದ್ಧವಾಗಿ ಪಲ್ಮನರಿ ಅಭಿಧಮನಿಯ ಮೂಲಕ ಹೃದಯದ ಎಡಹೃತ್ಕರ್ಣಕ್ಕೆ ಬಂದು ಸೇರುವ ರಕ್ತದ ಪರಿಚಲನೆಯನ್ನು ಶ್ವಾಸಕ ರಕ್ತಪರಿಚಲನೆ ಎನ್ನುವರು.

ಹೃದಯದ ಹೃತ್ಕರ್ಣಗಳು ಸಂಕುಚಿಸಿದಾಗ ಮಲಿನ ರಕ್ತವು ಬಲಹೃತ್ಕರ್ಣದಿಂದ ತ್ರಿದಳ ಕವಾಟದ ಮೂಲಕ ಬಲ ಹೃತ್ಕುಕ್ಷಿಗೆ ಬರುವದು. ಹೃತ್ಕುಕ್ಷಿಗಳು ಸಂಕುಚಿಸಿದಾಗ, ಬಲ ಹೃತ್ಕುಕ್ಷಿಯಿಂದ ಮಲಿನ ರಕ್ತವು ಪಲ್ಮನರಿ ಅಪಧಮನಿಯ ಮೂಲಕ ಶ್ವಾಸ ಕೋಶಗಳಿಗೆ ಹೋಗುವದು. ಅಲ್ಲಿ ಲೋಮನಾಳಗಳಲ್ಲಿ ಪಸರಿಸುವುದು. ಅಲ್ಲಿ ಶ್ವಾಸಕೋಶಗಳ ವಾಯುಗೂಡುಗಳ ಸುತ್ತಲೂ ರಕ್ತವು ಹರಿಯುವಾಗ ಆಮ್ಲ ಜನಕವನ್ನು ಪಡೆದು, ಇಂಗಾಲದ ಡೈಆಕ್ಸೈಡನ್ನು ವಿಸರ್ಜಿಸುವದು. ಇದರಿಂದ ರಕ್ತವು ಶುದ್ಧವಾಗುವದು. ಶುದ್ಧ ರಕ್ತವು ಪಲ್ಮನರಿ ಅಭಿಧಮನಿಯಿಂದ ಎಡಹೃತ್ಕರ್ಣಕ್ಕೆ ಬಂದು ಸೇರುವದು.

ಶ್ವಾಸಕ ರಕ್ತಪರಿಚಲನೆಯ ಮಲಿನ ರಕ್ತವನ್ನು ಶುದ್ಧೀಕರಿಸುವ ಕಾರ್ಯವನ್ನು ನಿರ್ವಹಿಸುತ್ತದೆ.

**ಪ್ರಶ್ನೆ 2.** ಮನುಷ್ಯನ ಕಿವಿಯ ರಚನೆಯನ್ನು ತೋರಿಸುವ ಚಿತ್ರಬಿಡಿಸಿ ಈ ಭಾಗಗಳನ್ನು ಹೆಸರಿಸಿ. 1) ಕಿವಿಯ ತಮಟೆ, 2) ಯುಸ್ಟೇಶಿಯನ್ ನಾಳ, 3) ಸುತ್ತಿಗೆ (ಮೇಲಿಯಸ್), 4) ಅಡಿಗಲ್ಲು, 5) ರಿಕಾಪು (ಸ್ಟೇಪಿಸ್), 6) ಕಾಕ್ಲಿಯಾ.

ಕಿವಿಯ ಚಿತ್ರಕ್ಕೆ ಅಕ್ಟೋಬರ 1983 ರ ಪ್ರಶ್ನೆ 1ನೋಡಿ

ಭಾಗಗಳು : 3) ಕಿವಿಯ ತಮಟೆ, 8) ಯುಸ್ಟೇಶಿಯನ್ ನಾಳ.

**ಪ್ರಶ್ನೆ 3.** ಕ್ರಿಯಾತ್ಮಕ ಸಾಗಾಣಿಕೆ (Active transport) ಎಂದರೇನು ? ಅದು ಎಲ್ಲಿ ನಡೆಯುತ್ತದೆ ? ನೆಫ್ರಾನ್ (Nephron) ಚಿತ್ರ ಬಿಡಿಸಿರಿ.

**ಉತ್ತರ : ಕ್ರಿಯಾತ್ಮಕ ಸಾಗಾಣಿಕೆ :** ಶೋಧನೆಗೊಳಗಾಗಿ ಬಂದ ದ್ರವವು, ಸೂಕ್ಷ್ಮನಾಳಗಳಲ್ಲಿ ಹರಿಯುವಾಗ, ಆ ನಾಳದ ಗೋಡೆಯ ಏಕಪದರದ ಜೀವಕೋಶಗಳು ಗ್ಲೂಕೋಸ್, ಅಮೈನೊ ಆಮ್ಲಗಳು, ಲವಣಗಳು ಮುಂತಾದ ಉಪಯುಕ್ತ ವಸ್ತುಗಳನ್ನು ಅಧಿಕ ಪ್ರಮಾಣದ ನೀರಿನೊಂದಿಗೆ ಹೀರಿಕೊಂಡು, ತಮ್ಮ ಸುತ್ತಲೂ ಇರುವ ಲೋಮನಾಳಗಳಲ್ಲಿರುವ ರಕ್ತಕ್ಕೆ ಸೇರಿಸುತ್ತವೆ. ಈ ಕ್ರಿಯೆಯು ವಿಸರಣ ವಿಧಾನದಿಂದ ನಡೆಯವುದಿಲ್ಲ. ಆದರೆ ಈ ಸಾಗಾಣಿಕೆಯನ್ನು ನಡೆಸಲು ಸೂಕ್ಷ್ಮನಾಳದ ಗೋಡೆಯ ಜೀವಕೋಶಗಳು ವಿಶೇಷವಾಗಿ ಶಕ್ತಿಯನ್ನು ಬಳಸುತ್ತವೆ. ಆದ್ದರಿಂದ ಈ ಸಾಗಾಣಿಕೆಯ ಕ್ರಿಯೆಯನ್ನು ಕ್ರಿಯಾತ್ಮಕ ಸಾಗಾಣಿಕೆ ಎನ್ನುವರು.

ಕ್ರಿಯಾತ್ಮಕ ಸಾಗಾಣಿಕೆಯು ಸೂಕ್ಷ್ಮನಾಳದಲ್ಲಿ ನಡೆಯುತ್ತದೆ.




IV ಪ್ರಶ್ನೆ 1. ದೃಷ್ಟಿದೋಷದ (Eye defect)ಎರಡು ಮುಖ್ಯ ಪ್ರಕಾರಗಳಾವವು ? ಅವುಗಳನ್ನು ಹೇಗೆ ಸರಿಪಡಿಸಬಹುದು ?

ಉತ್ತರಕ್ಕೆ ಎಪ್ರಿಲ್ 1985 ಪ್ರಶ್ನೆ II (2) ನೋಡಿ.

ಪ್ರಶೆ 2. "ಹಾರ್ಮೋನ್‌ಗಳೆಂದರೇನು ?" ಎರಡು ಪ್ರಾಮುಖ್ಯ ಹಾರ್ಮೋನ್‌ಗಳನ್ನು ಹೆಸರಿಸಿ. ಪ್ರತಿಯೊಂದರ ಒಂದೊಂದು ಕಾರ್ಯವನ್ನು ತಿಳಿಸಿ.

ಉತ್ತರ : ಹಾರ್ಮೋನ್‌ಗಳು : ದೇಹದ ಒಂದು ಭಾಗದಲ್ಲಿರುವ ಜೀವಕೋಶಗಳಿಂದ ಸ್ರವಿಸಲ್ಪಟ್ಟು, ರಕ್ತಪ್ರವಾಹವನ್ನು ಸೇರಿ, ಗುರಿ ಅಂಗಗಳನ್ನು ತಲುಪಿ ಆ ಅಂಗಗಳಲ್ಲಿರುವ ಜೀವಕೋಶಗಳ ಚಟುವಟಿಕೆ ನಿಯಂತ್ರಣ ಮತ್ತು ಹೊಂದಾಣಿಕೆಯನ್ನು ಉಂಟುಮಾಡುವ ರಾಸಾಯನಿಕ ವಸ್ತುಗಳನ್ನು ಹಾರ್ಮೋನ್‌ಗಳೆನ್ನುವರು.

ಎರಡು ಹಾರ್ಮೋನ್‌ಗಳು : 1) ಥೈರಾಕ್ಸಿನ್
2) ಆಡ್ರಿನಲಿನ್.

ಕಾರ್ಯ : 1) ಥೈರಾಕ್ಸಿನ್– ದೇಹದ ಚಯಾಪಚಯ ಕ್ರಿಯೆಯ ವೇಗವನ್ನು ನಿಯಂತ್ರಿಸುವುದು.
2) ಆಡ್ರಿನಲಿನ್– ತುರ್ತು ಪರಿಸ್ಥಿತಿಯನ್ನು ಎದುರಿಸಲು ದೇಹವನ್ನು ಸಜ್ಜುಗೊಳಿಸುವುದು.

ಪ್ರಶ್ನೆ 3. ಅನುವಂಶೀಯತೆ (Heredity) ಮತ್ತು ವೈವಿಧ್ಯತೆ (Variation) ಎಂದರೇನು ? ಮಿಶ್ರತಳೀಕರಣ ಪ್ರಯೋಗವನ್ನು ಯಾವ ವಿಜ್ಞಾನಿ ಯಾವ ಸಸ್ಯ ಬೆಳೆಸಿ ನಿರ್ವಹಿಸಿದನು ?

ಉತ್ತರ : ಅನುವಂಶೀಯತೆ : ತಂದೆ ತಾಯಿಗಳಿಂದ ಗುಣಗಳು ಅಥವಾ ಲಕ್ಷಣಗಳು ವಂಶಪಾರಂಪರ್ಯವಾಗಿ ಬರುವುದನ್ನು ಅನುವಂಶೀಯತೆ ಎನ್ನುವರು.

ವೈವಿಧ್ಯತೆ : ತಂದೆ ತಾಯಿಗಳು ಮತ್ತು ಮಕ್ಕಳ ನಡುವೆ ಇರುವ ವ್ಯತ್ಯಾಸಗಳಿಗೆ ಸಂಬಂಧಪಟ್ಟ ಅಂಶಗಳನ್ನು ವೈವಿಧ್ಯತೆ ಎನ್ನುವರು.

ಗ್ರೆಗೋರ್ ಮೆಂಡಲ್ ಎಂಬ ವಿಜ್ಞಾನಿಯು ಬಟಾಣಿ ಸಸ್ಯಗಳ ಮೇಲೆ ಮಿಶ್ರತಳೀಕರಣದ ಪ್ರಯೋಗ ಮಾಡಿದನು.

ಪ್ರಶ್ನೆ 4. ಭ್ರಾತೃ ಅವಳಿಗಳು (Fraternal twins) ಮತ್ತು ತದ್ರೂಪ ಅವಳಿಗಳು (Identical twins) ಎಂದರೇನು ? ಅವು ಹೇಗೆ ಉಂಟಾಗುತ್ತವೆ ?

ಉತ್ತರ : ಭ್ರಾತೃ ಅವಳಿಗಳು : ಎರಡು ತತ್ತಿಗಳು (ಅಂಡಗಳು) ಪ್ರಾಪ್ತಸ್ಥಿತಿಗೆ ಬಂದು ಫಲಿತಗೊಂಡು ಹುಟ್ಟುವ ಅವಳಿ ಮಕ್ಕಳನ್ನು ಭ್ರಾತೃ ಅವಳಿ ಎನ್ನುವರು.

ಸ್ತ್ರೀ ಅಂಡಾಶಯದಲ್ಲಿ ಸಾಮಾನ್ಯವಾಗಿ ತಿಂಗಳಿಗೆ ಒಂದು ತತ್ತಿ (ಅಂಡ)ಯು ಪ್ರಾಪ್ತ ಸ್ಥಿತಿಗೆ ಬರುತ್ತದೆ. ಒಂದು ವೇಳೆ ಎರಡು ಅಂಡಗಳು ಪ್ರಾಪ್ತ ಸ್ಥಿತಿಗೆ ಬಂದು ಫಲಿತಗೊಂಡರೆ ಭ್ರಾತೃ ಅವಳಿಗಳು ಹುಟ್ಟುವವು.

ತದ್ರೂಪ ಅವಳಿಗಳು : ಗರ್ಭಕಟ್ಟಿದ ಒಂದು ತತ್ತಿಯ ಮೊದಲನೆಯ ವಿಭಜನೆಯಿಂದ ಎರಡು ಅನುರೂಪ ಜೀವಕೋಶಗಳು ಉಂಟಾಗುತ್ತವೆ. ಇವು ಪ್ರತ್ಯೇಕವಾಗಿ ಎರಡು ಭ್ರೂಣಗಳಾಗಿ ಬೆಳೆಯುತ್ತವೆ. ಒಂದೇ ಸೈಗೋಟಿನಿಂದ ಎರಡು ಭ್ರೂಣಗಳು ಬೆಳೆಯುವುದರಿಂದ ತದ್ರೂಪವಾದ ಅವಳಿಗಳು ಹುಟ್ಟುವವು.

ಪ್ರಶ್ನೆ 5. ಲೂಯಿಪಾಶ್ಚರ ಮತ್ತು ಜೋಸೆಫ್ ಲಿಸ್ಟರ್ ಇವರ ಕೊಡುಗೆಗಳ ಬಗ್ಗೆ ವಿವರಿಸಿ

ಉತ್ತರ : ಲೂಯಿ ಪಾಶ್ಚರನ ಬಗ್ಗೆ ಅಕ್ಟೋಬರ 1985ರ ಪ್ರಶ್ನೆ IV (6) ನೋಡಿ. ಜೋಸೆಫ್ ಲಿಸ್ಟರ್ : ಕಾರ್ಬಾನಿಕ್ ಆಸ್ಲವನ್ನು ಉಪಯೋಗಿಸಿ ನಂಜುನಾಶಕ ಶಸ್ತ್ರಕ್ರಿಯೆಯನ್ನು ಪ್ರಾರಂಭಿಸಿದನು.

V ಪ್ರಶ್ನೆ 1. ಅದ್ಭುತ ಪವಾಡದ ಔಷಧ ಎಂದು ಹೆಸರು ಪಡೆದ ಜೀವ ನಿರೋಧಕ (Antibiotic) ಯಾವುದು? ಅದರ ಸಂಶೋಧನೆಗಾಗಿ ಯಾರು ನೋಬೆಲ್ ಪಾರಿತೋಷಕ ಪಡೆದರು ?

ಉತ್ತರ : ಪೆನ್ಸಿಲಿನ್ ಎಂಬುದು ಅದ್ಭುತ ಪವಾಡದ ಔಷಧ ಎಂದು ಹೆಸರು ಪಡೆದ ಜೀವ ನಿರೋಧಕ.

ಪೆನ್ಸಿಲಿನ್‌ನ ಶೋಧನೆಗಾಗಿ ಅಲೆಕ್ಸಾಂಡರ್ ಫ್ಲೆಮಿಂಗ ಎಂಬವನು ನೋಬೆಲ್ ಪಾರಿತೋಷಕ ಪಡೆದನು.

ಪ್ರಶ್ನೆ 2. ಪರಾವರ್ತಿತ ಪ್ರತಿಕ್ರಿಯೆ [Reflexaction] ಎಂದರೇನು ? ಒಂದು ಉದಾಹರಣೆ ಕೊಡಿ.

ಉತ್ತರಕ್ಕೆ ಅಕ್ಟೋಬರ 1985 ರ ಪ್ರಶ್ನೆ III (5) ನೋಡಿ.

ಪ್ರಶ್ನೆ 3. ವ್ಯಾಸೆಕ್ಟಮಿ [Vasectomy] ಎಂದ ರೇನು ? ಅದು ಏನನ್ನು ತಡೆಯುತ್ತದೆ ?

ಉತ್ತರ : ವೈದ್ಯರು ಪುರುಷರ ವೀರ್ಯನಾಳಗಳನ್ನು ಕತ್ತರಿಸಿ. ಕತ್ತರಿಸಿದ ಕೊನೆಗಳನ್ನು ಗಂಟು ಹಾಕುವರು. ಇದನ್ನು ವ್ಯಾಸೆಕ್ಟಮಿ ಎನ್ನುವರು. ಇದು ಗರ್ಭಧಾರಣೆಯನ್ನು ತಡೆಯುತ್ತದೆ.

ಪ್ರಶ್ನೆ 4. ವಲಸೆ ಹೋಗುವುದು ಎಂದರೇನು ? ವಲಸೆ ಹೋಗುವ ಒಂದು ಜಲಚರ ಪ್ರಾಣಿಯನ್ನು ಹೆಸರಿಸಿ.

ಉತ್ತರ : ವಲಸೆ ಹೋಗುವುದು : ಋತುಗಳು ಬದಲಾದಂತೆ, ಪ್ರಾಣಿಗಳು ವಿಶಿಷ್ಟ ಕಾರ್ಯಕ್ಕಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತಾತ್ಕಾಲಿಕವಾಗಿ ಹೊರಟು ಹೋಗುವ ಕ್ರಿಯೆಯನ್ನು ವಲಸೆ ಹೋಗುವುದು ಎನ್ನುವರು.

ಆಮೆಯು ವಲಸೆ ಹೋಗುವ ಜಲಚರ ಪ್ರಾಣಿ.

ಪ್ರಶ್ನೆ 5. ಮನುಷ್ಯನ ಕೆಂಪುರಕ್ತ ಕಣ (R.B.C.) ದಲ್ಲಿರುವ ವರ್ಣಕ ಯಾವುದು ? ಅದರ ಕಾರ್ಯವೇನು ?

ಉತ್ತರ : ಹಿಮೋಗ್ಲೋಬಿನ್ ಎಂಬುದು ಮನುಷ್ಯನ ಕೆಂಪುರಕ್ತಕಣದಲ್ಲಿರುವ ವರ್ಣಕ. ಇದು ಜೀವಕೋಶಗಳಿಗೆ ಆಮ್ಲಜನಕವನ್ನು ಪೂರೈಸುತ್ತದೆ.

ಪ್ರಶ್ನೆ 6. ಸ್ವೇದ ಗ್ರಂಥಿ [Sweat glands] ಎಲ್ಲಿವೆ ? ಅವುಗಳ ಕಾರ್ಯವೇನು ?

ಉತ್ತರ : ಸ್ವೇದ ಗ್ರಂಥಿಗಳು ಒಳಚರ್ಮದಲ್ಲಿವೆ. ರಕ್ತ ದಲ್ಲಿಯ ಕಶ್ಮಲಗಳನ್ನು ಬೆವರಿನ ರೂಪದಲ್ಲಿ ಸಂಗ್ರಹಿಸಿ ಸ್ವೇದ ನಾಳಗಳ ಮೂಲಕ ಹೊರಗೆ ಹಾಕುವುದು ಸ್ವೇದ ಗ್ರಂಥಿಗಳ ಕಾರ್ಯವಾಗಿದೆ.

VI ಪ್ರಶ್ನೆ 1. ಜಿರಳೆ (Cockroach)ಯ ವಿಸರ್ಜನಾಂಗವನ್ನು ಹೆಸರಿಸಿ.

ಉತ್ತರ : ಮಾಲ್‌ಫೀಜಿಯನ್ ನಾಳಗಳು ಜಿರಳೆಯ ವಿಸರ್ಜನಾಂಗಗಳು.

ಪ್ರಶ್ನೆ 2. ಹೃದಯದ ಸುತ್ತಲೂ ಇರುವ ಎರಡು ಪದರಗಳ ಚೀಲವನ್ನು ಹೆಸರಿಸಿ.

ಉತ್ತರ : ಪೆರಿಕಾರ್ಡಿಯಂ ಅಥವಾ ಹೃದಯಾವರಣ.

ಪ್ರಶ್ನೆ 3. ಚರ್ಮಕ್ಕೆ ಬಣ್ಣ ಕೊಡುವ ವರ್ಣಕ (Pigment)ವನ್ನು ಹೆಸರಿಸಿ.

ಉತ್ತರ : ಮೆಲಾನಿನ್.

ಪ್ರಶ್ನೆ 4. ಮನುಷ್ಯನ ಮೆದುಳು ಬಳ್ಳಿಯ ನೇರ ಸಂಪರ್ಕದಲ್ಲಿ ಎಷ್ಟು ಜೊತೆ ನರಗಳಿವೆ ?

ಉತ್ತರ : ಮೂವತ್ತೊಂದು (31) ಜೊತೆ.

ಪ್ರಶ್ನೆ 5. ವಿಟಮಿನ್ 'A' ಕೊರತೆಯಿಂದ ಬರುವ ದೃಷ್ಟಿ ದೋಷ ಯಾವುದು ?

ಉತ್ತರ : ನಿಶಾಂಧತೆ ಅಥವಾ ಇರುಳು ಕುರುಡು.

ಪ್ರಶ್ನೆ 6. ಮಣ್ಣಿನಲ್ಲಿ ಮತ್ತು ನೀರಿನಲ್ಲಿ (Iodine) ಕೊರತೆಯಿಂದ ಬರಬಹುದಾದ ರೋಗ ಯಾವುದು.

ಉತ್ತರ : ಗಾಯಟರ್.

VII ಇವುಗಳನ್ನು ಹೆಸರಿಸಿ.

1. ಕರ್ನಾಟಕದಲ್ಲಿರುವ ಸುಂದರ ಪಕ್ಷಿಧಾಮ (Birds Sanctuary)

ಉತ್ತರ : ರಂಗನತಿಟ್ಟು.

2. ಆಮ್ಲ ಸೇವಿಸಿದವನಿಗೆ ಪ್ರಥಮ ಚಿಕಿತ್ಸೆ (First aid)ಗಾಗಿ ಕೊಡಬಹುದಾದ ಆಂಟಿಡೋಟ್ (Antidote).

ಉತ್ತರ : ಮಿಲ್ಕ ಆಫ್ ಮ್ಯಾಗ್ನಿಷಿಯಾ ಇಲ್ಲವೆ ತಿನ್ನುವ ಸೋಡಾದ ದ್ರಾವಣ.

3. ಬೇರು ಮತ್ತು ಕಾಂಡದ ತುದಿಯಲ್ಲಿರುವ ಅಂಗಾಂಶ.

ಉತ್ತರ : ವರ್ಧನ ಅಂಗಾಂಶ.

4. ಮೊಟ್ಟೆ ಇಡುವ ಸಸ್ತನಿ.

ಉತ್ತರ : ಪ್ಲಾಟಿಪಸ್.

5. ನಮ್ಮ ನಿಯಂತ್ರಣದಲ್ಲಿರುವ ಸ್ನಾಯು.

ಉತ್ತರ : ಐಚ್ಛಿಕ ಸ್ನಾಯು.

VIII ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದದಿಂದ ತುಂಬಿರಿ. (ದಪ್ಪಕ್ಷರದ ಪದಗಳು ತುಂಬಿದ ಪದಗಳು)

1. ಪಳೆಯುಳಿಕೆ (Fossils)ಗಳು **ಜಲಜ** ಶಿಲೆಯಲ್ಲಿರುತ್ತವೆ.
2. ಎರೆಹುಳು (Earth worm) **ಅನಲಿಡ** ವಂಶಕ್ಕೆ ಸೇರಿದೆ.

3. ತಂತು ಬೇರಿನ ವ್ಯೂಹ ಏಕದಳ ಸಸ್ಯಗಳ ಲಕ್ಷಣ.
4. ಮೂಲಂಗಿಯಲ್ಲಿ ಆಹಾರ ಸಂಗ್ರಹಕ್ಕಾಗಿ ಮಾರ್ಪಟ್ಟ ಭಾಗ ಬೇರು.

IX ಕೆಳಗಿನವುಗಳ ಒಂದೊಂದು ಕಾರ್ಯ ತಿಳಿಸಿ.

1. ಹೂಜಿಗಿಡದ (Nepenthes) ಹೂಜಿ.

ಕಾರ್ಯ : ಕೀಟಗಳನ್ನು ಆಕರ್ಷಿಸುವುದು.

2. ''ಯುಗ್ಲಿನಾ'' ಕಶಾಂಗ.

ಕಾರ್ಯ : ಚಲನೆಗೆ ಸಹಾಯ ಮಾಡುವುದು.

3. ಸಸ್ಯದಲ್ಲಿರುವ ವರ್ಧನ ಅಂಗಾಂಶ (Meristametic tissue)

ಕಾರ್ಯ : ಸಸ್ಯದ ಬೆಳವಣಿಗೆಗೆ ಸಹಾಯ ಮಾಡುವುದು.

4. ಜೀವಕೋಶದಲ್ಲಿರುವ "ಮೈಟೋಕಾಂಡ್ರಿಯ".

ಕಾರ್ಯ : ಆಹಾರದಿಂದ ಶಕ್ತಿಯನ್ನು ಬಿಡುಗಡೆ ಮಾಡುವುದು.

---

# ವಿಜ್ಞಾನ

## ಅಕ್ಟೋಬರ 1986 1 ನೇ ಪತ್ರಿಕೆ

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : $2\frac{1}{2}$ ಗಂಟೆ ] [ ಗುಣಗಳು : 65

**ಪ್ರಶ್ನೆ 1. a)** ವೃತ್ತಾಕಾರ ವಾಹಕದಲ್ಲಿ ವಿದ್ಯುತ್ ಪ್ರವಾಹದಿಂದ ಕಾಂತ ಕ್ಷೇತ್ರ ಉಂಟಾಗುವ ಪ್ರಯೋಗವನ್ನು ತಿಳಿಸಿ.

**ಉತ್ತರ :** ರಟ್ಟಿನ ಒಂದು ಫಲಕದಲ್ಲಿ ಎರಡು ರಂಧ್ರಗಳನ್ನು ಕೊರೆದು, ಅವುಗಳ ಮೂಲಕ ವೃತ್ತಾಕಾರದಲ್ಲಿ ಬಗ್ಗಿಸಿದ ದಪ್ಪನಾದ ತಾಮ್ರದ ಸುರುಳಿಯನ್ನು ಅಳವಡಿಸಿ. ಆ ಸುರುಳಿಯ ಎರಡೂ ತುದಿಗಳನ್ನು ಸೂಕ್ತವಾಗಿ ಬಾಗಿಸಿ ಒಂದು ಬ್ಯಾಟರಿಗೆ ಜೋಡಿಸಿ. ರಟ್ಟಿನ ಮೇಲೆ ಜಿನುಗಾದ ಕಬ್ಬಿಣದ ರಜವನ್ನು ಸಿಂಪಡಿಸಿ, ತಾಮ್ರದ ಸುರುಳಿಯಲ್ಲಿ (ತಂತಿಯಲ್ಲಿ) ವಿದ್ಯುತ್ ಪ್ರವಾಹವು ಹರಿಯುವಂತೆ ಮಾಡಿ. ಈಗ ರಟ್ಟನ್ನು ನಿಧಾನವಾಗಿ ತಟ್ಟಬೇಕು. ಈಗ ತಂತಿಯು ಹಾಯ್ದು ಎರಡೂ ರಂಧ್ರಗಳ ಸುತ್ತಲೂ ಕಬ್ಬಿಣದ ಕಣ್ಣುಗಳು ವೃತ್ತಾಕಾರವಾಗಿ ಸ್ಥಾಪಿಸಿಕೊಳ್ಳುವವು. ಈ ವೃತ್ತಗಳು ಏಕಕೇಂದ್ರೀಯವಾಗಿರುತ್ತವೆ. ಅಲ್ಲದೆ ಸುರುಳಿಯ ಕೇಂದ್ರದಲ್ಲಿ ಸುರುಳಿಯ ಸಮತಲಕ್ಕೆ ಲಂಬವಾಗಿಯೂ ಇರುವುದು ಕಂಡು ಬರುತ್ತದೆ.

ಇದರಿಂದ ಕಂಡು ಬರುವುದೇನೆಂದರೆ, ವೃತ್ತಾಕಾರದ ಸುರುಳಿಯಲ್ಲಿ ವಿದ್ಯುತ್ ಪ್ರವಾಹವು ಹರಿಯುವಾಗ ಉತ್ಪನ್ನವಾಗುವ ಕಾಂತ ಕ್ಷೇತ್ರದಲ್ಲಿಯ ಬಲರೇಖೆಗಳು ತಂತಿಯ ಸುತ್ತಲೂ ಏಕಕೇಂದ್ರೀಯ ರೂಪದಲ್ಲಿಯೂ, ಸುರುಳಿಯ ಕೇಂದ್ರದಲ್ಲಿ ಸುರುಳಿಯ ಸಮತಲಕ್ಕೆ ಲಂಬವಾಗಿಯೂ ಇರುವವು.

**b)** ಓಮನ ನಿಯಮವನ್ನು ವಿವರಿಸಿ.

**ಉತ್ತರ : ಓಮನ ನಿಯಮ :** ವಾಹಕದ ಉಷ್ಣತೆಯು ಸ್ಥಿರವಿರುವಾಗ ವಾಹಕದಲ್ಲಿ ಪ್ರವಹಿಸುವ ವಿದ್ಯುತ್ ಪ್ರವಾಹವು, ಆ ವಾಹಕದ ಅಂತ್ಯ ಬಿಂದುಗಳ ನಡುವಿನ ಪ್ರಚ್ಛನ್ನ ವ್ಯತ್ಯಾಸ (ವಿಭವಾಂತರ)ಕ್ಕೆ ನೇರ ಪ್ರಮಾಣದಲ್ಲಿಯೂ, ವಾಹಕದ ರೋಧಕ್ಕೆ ವಿಲೋಮ ಪ್ರಮಾಣದಲ್ಲಿಯೂ ಇರುವುದು.

$$I = \frac{V}{R} \text{ ಅಥವಾ } V = RI$$

ಇಲ್ಲಿ I=ವಿ. ಪ್ರವಾಹ V=ವಿಭವಾಂತರ R=ರೋಧ.

**ಲೆಕ್ಕ :** 2 ವೋಲ್ಟ್ ವಿಭವಾಂತರಕ್ಕೆ ಜೋಡಿಸಿರುವ ಒಂದು ರೋಧಕದ ಮೂಲ 0.1 ಅಂಪೇರು ವಿದ್ಯುತ್‌ನ್ನು ಹಾಯಿಸಿದಾಗ ಅದರ ರೋಧವನ್ನು ಕಂಡು ಹಿಡಿಯಿರಿ.

**ರೀತಿ :** ಇಲ್ಲಿ ವಿಭವಾಂತರ V=2 ವೋಲ್ಟ್. ಪ್ರವಾಹ I=0.1 ಅಂಪೇರ.

$$\therefore V = RI \text{ ಅಥವಾ } R = \frac{V}{I} = \frac{2}{.1} = \frac{20}{1}$$
$$= 20 \text{ ಓಮ್‌ಗಳು.}$$

∴ ರೋಧಕದ ರೋಧ=20 ಓಮ್‌ಗಳು. Ans.

**c)** ಅಯಸ್ಕಾಂತಗಳನ್ನು ಹೇಗೆ ಕಾಂತರಹಿತವಾಗಿ ಮಾಡುವಿರಿ ?

**ಉತ್ತರ :** ಅಯಸ್ಕಾಂತವನ್ನು ಮೇಲಿಂದ ಮೇಲೆ ಬೀಳಿಸುವುದರಿಂದ, ಕೆಂಪಗೆ ಕಾಯಿಸುವುದರಿಂದ, ಸುತ್ತಿಗೆಯಿಂದ ಬಲ

ವಾಗಿ ಕೊಡೆಯುವುದರಿಂದ, ಅಯಸ್ಕಾಂತಗಳನ್ನು ಕಾಂತ ರಹಿತವಾಗುವಂತೆ ಮಾಡಬಹುದು.

II a) ವಿದ್ಯುದ್ದರ್ಶಕ ಎಂದರೇನು ? ಸುವರ್ಣ ಪರ್ಣ ವಿದ್ಯುದ್ದರ್ಶಕದ ಅಂದವಾದ ಚಿತ್ರವನ್ನು ಬರೆದು ಭಾಗಗಳನ್ನು ಗುರ್ತಿಸಿ. ಅದರ ಉಪಯೋಗವನ್ನು ತಿಳಿಸಿ.

ಉತ್ತರಕ್ಕೆ ಎಪ್ರಿಲ್ 1986 ರ ಪ್ರಶ್ನೆ 1 (a) ನೋಡಿ.

b) ರಿಯೋಸ್ಟಾಟ್ ಎಂದರೇನು ? ವಿದ್ಯುನ್ಮಂಡಲದಲ್ಲಿ ಅದನ್ನು ಏಕೆ ಉಪಯೋಗಿಸುತ್ತಾರೆ ?

**ಉತ್ತರ :** ರಿಯೋ ಸ್ಟಾಟ್ : ರೋಧವನ್ನು ನಿರಂತರವಾಗಿ ಬದಲಾಯಿಸಲು ಅನುಕೂಲವಾದ ಒಂದು ಸಾಧನವನ್ನು ರಿಯೋಸ್ಟಾಟ್ ಎನ್ನುವರು.

ವಿದ್ಯುನ್ಮಂಡಲದಲ್ಲಿ ಇಚ್ಛಿತ ಪರಿಮಾಣದ ವಿದ್ಯುತ್ ಪ್ರವಾಹವು ಹರಿಯುವಂತೆ ಮಾಡಲು, ರಿಯೋಸ್ಟಾಟ್‌ನ್ನು ವಿದ್ಯುನ್ಮಂಡಲದಲ್ಲಿ ಉಪಯೋಗಿಸುವರು.

c) ಮೂಲವಾನ ರೋಧವುಳ್ಳ ಎರಡು ತಂತಿಗಳನ್ನು ಸರಣಿಯಲ್ಲಿಯೂ ಮತ್ತು ಸಮಾಂತರವಾಗಿಯೂ ಜೋಡಿಸಿದಾಗ ಅವುಗಳ ನಿವ್ವಳ ರೋಧವನ್ನು ಕಂಡು ಹಿಡಿಯಿರಿ.

ರೀತಿ : ಇಲ್ಲಿ ರೋಧಗಳು $R_1=1$ ಓಂ, $R_2=1$ ಓಂ. ಜೋಡಣೆಯ. ಸರಣಿಯಲ್ಲಿದ್ದಾಗ ನಿವ್ವಳ ರೋಧ $R=R_1+R_2$ ಅಥವಾ $R=1+1=2$ ಓಂ.ಗಳು.

ಜೋಡಣೆಯು ಸಮಾಂತರವಾಗಿದ್ದಾಗ $\frac{1}{R}=\frac{1}{R_1}+\frac{1}{R_2}$

$$=\frac{1}{1}+\frac{1}{1}=\frac{2}{1}$$

∴ ನಿವ್ವಳ ರೋಧ $R=\frac{1}{2}$ ಓಂ.

III a) ಕಾಂತತ್ವದ ವಿಲೋಮ ವರ್ಗ ನಿಯಮವನ್ನು ವಿವರಿಸಿ.

ಉತ್ತರಕ್ಕೆ ಅಕ್ಟೋಬರ 1985 ರ ಪ್ರಶ್ನೆ I (b)ನೋಡಿ.

b) 80 C.G.S. ಮತ್ತು 120 C.G.S. ಧ್ರುವ ಸಾಮರ್ಥ್ಯವುಳ್ಳ ಎರಡು ವಿಜಾತೀಯ ಧ್ರುವಗಳನ್ನು ಪರಸ್ಪರ 8 ಸೆಂ. ಮೀ. ದೂರದಲ್ಲಿಟ್ಟರೆ, ಅವುಗಳ ಆಕರ್ಷಕ ಬಲವನ್ನು ಕಂಡು ಹಿಡಿಯಿರಿ.

ರೀತಿ : ಧ್ರುವ ಸಾಮರ್ಥ್ಯ $m_1=80$ C.G.S., $m_2=120$ C.G.S. ಧ್ರುವಗಳ ನಡುವಿನ ದೂರ $d=8$ ಸೆಂ.ಮೀ.

∴ ಎರಡೂ ಧ್ರುವಗಳ ನಡುವೆ ವರ್ತಿಸುವ ಆಕರ್ಷಣ ಬಲ

$$F=\frac{m_1 m_2}{d^2}=\frac{80\times120}{(8)^2}=\frac{80\times120}{8\times8}$$

$=150$ ಡೈನ್‌ಗಳು.

∴ ಎರಡೂ ಧ್ರುವಗಳ ನಡುವೆ ವರ್ತಿಸುವ ಆಕರ್ಷಣ ಬಲ= 150 ಡೈನ್‌ಗಳು.

IV a) ನೀರಿನ ವಿದ್ಯುತ್ ವಿಶ್ಲೇಷಣೆಯನ್ನು ಹಾಫ್‌ಮನ್ ವೋಲ್ಟಾಮೀಟರಿನಿಂದ ವಿವರಿಸಿ.




ಹಾಫ್‌ಮನ್ ವೋಲ್ಟಾಮೀಟರ್

A–ಪ್ಲಾಟಿನಂ ಧನಾಗ್ರ, C–ಪ್ಲಾಟಿನಂ ಋಣಾಗ್ರ, $O_2$–ಆಮ್ಲಜನಕ, $H_2$–ಜಲಜನಕ, B–ಬ್ಯಾಟರಿ, R–ರಿಯೋಸ್ಟಾಟ್, S–ಸ್ವಿಚ್.

ನೀರಿನ ವಿದ್ಯುದ್ವಿಶ್ಲೇಷಣೆ : ಹಾಫ್‌ಮನ್ ವೋಲ್ಟಾಮೀಟರಿನಲ್ಲಿ ಸ್ವಲ್ಪ ಆಮ್ಲಮಿಶ್ರಿತ ನೀರನ್ನು ತೆಗೆದುಕೊಂಡ ಬುರೆಟ್‌ಗಳ ಸ್ಟಾಪ್‌ಕಾಕ್ ಮುಚ್ಚಬೇಕು. ಪ್ಲಾಟಿನಮ್ ವಿದ್ಯು

ಧ್ರುವಗಳನ್ನು ರಿಯೋಸ್ಟ್ಯಾಟ್ ಮತ್ತು ಸ್ವಿಚ್‌ಗಳ ಮೂಲಕ ಬ್ಯಾಟರಿಗೆ ಜೋಡಿಸಬೇಕು. ಮಂಡಲದಲ್ಲಿ ವಿದ್ಯುತ್ಪ್ರವಾಹವು ಹರಿಯುವಂತೆ ಮಾಡಬೇಕು, ಕೂಡಲೆ ಎರಡೂ ವಿದ್ಯುದಾಗ್ರಗಳ ಮೇಲೆ ಅನಿಲದ ಗುಳ್ಳೆಗಳು ಹೊರಟು ಬುರೆಟ್ಟುಗಳ ಮೇಲ್ಗಡೆ ಸಂಗ್ರಹವಾಗುವವು. ಸ್ವಲ್ಪ ಸಮಯದ ನಂತರ ವೋಲ್ಟಾ ಮೀಟರಿನ ಬುರೆಟ್‌ಗಳಲ್ಲಿ ಸಂಗ್ರಹವಾದ ಅನಿಲಗಳ ಗಾತ್ರಗಳನ್ನು ಪರೀಕ್ಷಿಸಲು ಋಣಾಗ್ರದ ಮೇಲೆ ಸಂಗ್ರಹವಾದ ಅನಿಲದ ಗಾತ್ರವು, ಧನಾಗ್ರದ ಮೇಲೆ ಸಂಗ್ರಹವಾದ ಅನಿಲದ ಗಾತ್ರದ ಎರಡರಷ್ಟಿರುವುದು ಕಂಡು ಬರುತ್ತದೆ. ಪರೀಕ್ಷೆಯಿಂದ ಋಣಾಗ್ರದ ಮೇಲೆ ಸಂಗ್ರಹವಾದ ಅನಿಲವು ಜಲಜನಕ ($H_2$)ಎಂದೂ, ಧನಾಗ್ರದ ಮೇಲೆ ಸಂಗ್ರಹವಾದ ಅನಿಲ ಆಮ್ಲಜನಕ ($O_2$) ಎಂದೂ ಗೊತ್ತಾಗುವುದು.

ಆದ್ದರಿಂದ ನೀರಿನ ವಿದ್ಯುದ್ವಿಭಜನೆಯಿಂದ ನೀರಿನಲ್ಲಿ ಜಲಜನಕ ಮತ್ತು ಆಮ್ಲಜನಕಗಳು 2:1 ಪ್ರಮಾಣದಲ್ಲಿರುವವೆಂದು ತಿಳಿಯುವುದು.

b) ವಿದ್ಯುನ್ಮಂಡಲದಲ್ಲಿ ಫ್ಯೂಜುಗಳನ್ನು ಏಕೆ ಉಪಯೋಗಿಸುತ್ತಾರೆ ?

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 16 (b) ನೋಡಿ.

V a) ಸೋನಾರ್ ಎಂದರೇನು? ಅದರ ಉಪಯೋಗವೇನು?

**ಉತ್ತರ :** **ಸೋನಾರ್ :** ಶ್ರವಣಾತೀತ ಧ್ವನಿಯನ್ನು ಉಪಯೋಗಿಸಿ ಜಲಾಂತರ್ಗತ ವಸ್ತುಗಳ ಇರುವಿಕೆಯನ್ನು ಪತ್ತೆ ಹಚ್ಚುವ ಸಾಧನವನ್ನು ಸೋನಾರ್ ಎನ್ನುವರು.

**ಉಪಯೋಗ :** ಜಲಾಂತರ್ಗಾಮಿಗಳನ್ನು, ಜಲಮಾರ್ಗದಲ್ಲಿರಬಹುದಾದ ಆತಂಕಗಳನ್ನು ಪತ್ತೆಹಚ್ಚಲು ಸೋನಾರನ್ನು ಉಪಯೋಗಿಸುವರು.

b) 10 ನಿರ್ದ್ರವ ಕೋಶಗಳನ್ನು ಸರಣಿಯಲ್ಲಿ ಜೋಡಿಸಿದಾಗ ಅವುಗಳ ನಿವ್ವಳ ವೋಲ್ಟೇಜ್ ಎಷ್ಟು ? ಒಂದು ನಿರ್ದ್ರವ ಕೋಶದ ವಿದ್ಯುಚ್ಚಾಲಕ ಬಲ $=1.5$ ವೋಲ್ಟ್‌ಗಳು.

**ರೀತಿ :** ಸರಣಿಯಲ್ಲಿ ಜೋಡಿಸಿದಾಗ 10 ಕೋಶಗಳ ನಿವ್ವಳ ವೋಲ್ಟೇಜ್. $=1.5\times10=15$ ವೋಲ್ಟ್‌ಗಳು. Ans.

VI a) ಮಳೆಗಾಲದಲ್ಲಿ ಉಂಟಾಗುವ ಸಿಡಿಲುಗಳಿಂದ ಎತ್ತರವಾದ ಕಟ್ಟಡಗಳನ್ನು ಹೇಗೆ ರಕ್ಷಿಸುತ್ತಾರೆ ?

**ಉತ್ತರ :** ಮಿಂಚು ಬಂಧಕವು ಎತ್ತರವಾದ ಕಟ್ಟಡದ ಗುಂಟ ಅಳವಡಿಸಲಾದ ದಪ್ಪನಾದ ತಾಮ್ರದ ಒಂದು ಪಟ್ಟಿ ಇರುತ್ತದೆ. ಅದರ ಮೇಲ್ಭಾಗವನ್ನು ಚೂಪಾದ ಮೊನೆಗಳುಳ್ಳ ಲೋಹದ ಒಂದು ಸರಳಿಗೆ ಜೋಡಿಸಿದ್ದು, ಕೆಳಭಾಗವನ್ನು ಭೂಮಿಯ ಆಳದಲ್ಲಿ ಹುಗಿಯಲಾಗಿದೆ.

ವಿದ್ಯುದಾವಿಷ್ಟ ಮೋಡವು ಮಿಂಚುವಾಹಕದ ಸಮೀಪದಲ್ಲಿ ಬಂದಾಗ, ಮಿಂಚು ಬಂಧಕದ ಮೊನೆಗಳ ಮೇಲೆ ವಿಜಾತೀಯವಾದ ವಿದ್ಯುದಾವೇಶಗಳು ಪ್ರೇರಿತವಾಗುತ್ತವೆ. ಈ ಕಾರಣದಿಂದ ಮೋಡ ಮತ್ತು ಬಂಧಕದ ನಡುವೆ, ವಿದ್ಯುದಾವಿಷ್ಟ ಗಾಳಿಯ ಕಣಗಳು ಹರಿಯಲಾರಂಭಿಸುತ್ತವೆ. ಈ ಕಾರಣದಿಂದ ಮೋಡದ ಮೇಲಿನ ವಿದ್ಯುದಾವೇಶವು ನಿಧಾನವಾಗಿ ತಟಸ್ಥಗೊಳ್ಳಲಾರಂಭಿಸುತ್ತದೆ. ಆಗ ಮಿಂಚು ಉಂಟಾಗುವುದಿಲ್ಲ. ಆದರಿಂದ ಕಟ್ಟಡವು ಸುರಕ್ಷಿತವಾಗಿ ಉಳಿಯುತ್ತದೆ. ಕೆಲವೊಂದು ಸಂದರ್ಭದಲ್ಲಿ ಕಟ್ಟಡ ಮತ್ತು ಮೋಡಗಳ ನಡುವಿನ ವಿದ್ಯುದಾವೇಶಗಳ ವ್ಯತ್ಯಾಸವು ಹೆಚ್ಚಾಗಿ, ಮಿಂಚು ಬಂಧಕವನ್ನು ಹೊಡೆಯುತ್ತದೆ. ಕೂಡಲೇ ವಿದ್ಯುದಾವೇಶಗಳು ತಾಮ್ರದ ಪಟ್ಟಿಯ ಮೂಲಕ ಹರಿದು ಭೂಮಿಯನ್ನು ಸೇರುತ್ತವೆ. ಆದರಿಂದ ಕಟ್ಟಡಕ್ಕೆ ಯಾವುದೇ ರೀತಿಯ ಅಪಾಯವಾಗುವುದಿಲ್ಲ.

b) ಲೇಸರ್ ಕಿರಣಗಳ ಎರಡು ಉಪಯೋಗಗಳನ್ನು ಬರೆಯಿರಿ.

**ಉತ್ತರ : ಲೇಸರ್ ಕಿರಣಗಳ ಉಪಯೋಗ :** 1) ಅತಿ ಸೂಕ್ಷ್ಮವಾದ ಶಸ್ತ್ರಚಿಕಿತ್ಸೆಯಲ್ಲಿ, 2) ಲೋಹಗಳನ್ನು ಕತ್ತರಿಸಲು, ಬೆಸೆಯಲು, ಲೋಹಗಳಲ್ಲಿ ರಂಧ್ರ ಕೊರೆಯಲು, 3) ಭೂಮಿ ಮತ್ತು ಚಂದ್ರ ಇವುಗಳ ನಡುವಿನ ದೂರಅಳೆಯಲು, 4) ಹೊಲೋಗ್ರಾಫಿ ಮತ್ತು ಸಂಪರ್ಕದಲ್ಲಿ.

VII a) ಉನ್ನತ ಯವ ಮತ್ತು ಅದರ ಸಂಗಮ ಬಿಂದುಗಳ ನಡುವೆ ಒಂದು ವಸ್ತುವನ್ನಿಟ್ಟಾಗ, ದೊರೆಯುವ ಪ್ರತಿಬಿಂಬವನ್ನು ಗುರ್ತಿಸಿ. ಅದರ ಉಪಯೋಗವನ್ನು ಸೂಚಿಸಿ.




ಚಿತ್ರದಲ್ಲಿ AB–ವಸ್ತು, A'B'–ಪ್ರತಿಬಿಂಬ

**ಉಪಯೋಗ :** ಸಾಮಾನ್ಯ ಸೂಕ್ಷ್ಮದರ್ಶಕದಂತೆ. ದೂರದೃಷ್ಟಿದೋಷ ನಿವಾರಣೆಯ ಕನ್ನಡಕಗಳಲ್ಲಿ ಉಪಯೋಗಿಸುವರು.

b) ವೇಗವಾಗಿ ಚಲಿಸುತ್ತಿರುವ ಫ್ಯಾನಿನ ಬ್ಲೇಡುಗಳು ಸರಿಯಾಗಿ ಕಾಣುವುದಿಲ್ಲ ಕಾರಣ ?

**ಉತ್ತರ :** ದೃಷ್ಟಿಫಲದ ಪರಿಣಾಮವಾಗಿ ವೇಗವಾಗಿ ಚಲಿಸುತ್ತಿರುವ ಫ್ಯಾನಿನ ಬ್ಲೇಡುಗಳು ಸರಿಯಾಗಿ ಕಾಣುವುದಿಲ್ಲ.

VIII a) ಸೂರ್ಯನಿಗೆ ಸಮೀಪದಲ್ಲಿರುವ ಗ್ರಹವು ಯಾವುದು ?

**ಉತ್ತರ :** ಬುಧಗ್ರಹ.

ಸೌರವ್ಯೂಹದಲ್ಲಿ ಯಾವ ಗ್ರಹವು ಅತ್ಯಂತ ದೊಡ್ಡದು ?

**ಉತ್ತರ :** ಗುರುಗ್ರಹ.

b) ಕೆಲವೇ ದಿನಗಳಲ್ಲಿ ಕಾಣಿಸಿಕೊಳ್ಳುವ ಧೂಮಕೇತು ಯಾವುದು ?

**ಉತ್ತರ :** ಹ್ಯಾಲೆ ಧೂಮಕೇತು (1986 ರಲ್ಲಿ ಕಾಣಿಸಿಕೊಂಡಿತು)

c) ಜಡತ್ವ ಎಂದರೇನು ?

**ಉತ್ತರ : ಜಡತ್ವ :** ಬಾಹ್ಯ ಬಲವು ಪ್ರಯೋಗವಾಗದ ವಿನಃ ನಿಶ್ಚಲ ಸ್ಥಿತಿಯಲ್ಲಿರುವ ವಸ್ತುವು ತನ್ನ ನಿಶ್ಚಲ ಸ್ಥಿತಿಯನ್ನಾಗಲಿ, ಚಲನೆಯಲ್ಲಿರುವ ವಸ್ತುವು ತನ್ನ ಸಮಚಲನೆಯ ಪರಿಮಾಣವನ್ನಾಗಲಿ, ನೇರವನ್ನಾಗಲಿ ಬದಲಿಸುವುದಿಲ್ಲ. ವಸ್ತುವಿನಲ್ಲಿರುವ ಈ ಗುಣವನ್ನು ಜಡತ್ವ ಎನ್ನುವರು.

IX a) i) ಗಡಸು ನೀರನ್ನು ಹೇಗೆ ಗುರ್ತಿಸುವಿರಿ ?

**ಉತ್ತರ :** ಅಲ್ಪ ಸಾಬೂನಿನೊಡನೆ ಹೆಪ್ಪು ನೊರೆಯನ್ನು ಕೊಡದಂತಹ ನೀರನ್ನು ಗಡಸು ನೀರು ಎಂದು ಗುರ್ತಿಸುವೆವು.

ii) ಶಾಶ್ವತ ಗಡಸು ನೀರಿನಲ್ಲಿರುವ ಯಾವುದಾದರೂ ಎರಡು ಲವಣಗಳನ್ನು ಹೆಸರಿಸಿ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 8 (a) ನೋಡಿ.

iii) ಪರ್ಮುಟೈಟ್ ಎಂದರೇನು ? ಇದು ಗಡಸುತನವನ್ನು ನಿವಾರಿಸಲು ಹೇಗೆ ಉಪಯೋಗವಾಗುತ್ತದೆ ?

**ಉತ್ತರ : ಪರ್ಮುಟೈಟ್ :** ಸೋಡಿಯಮ್ ಸಿಲಿಕೇಟ್ ಮತ್ತು ಅಲ್ಯೂಮಿನಿಯಮ್ ಸಿಲಿಕೇಟ್‌ಗಳ ನಿಕಟ ಮಿಶ್ರಣವನ್ನು ಪರ್ಮುಟೈಟ್ ಎನ್ನುವರು.

**ಪರ್ಮುಟೈಟ್‌ನ ಉಪಯೋಗ :** ಗಡಸು ನೀರನ್ನು ಪರ್ಮುಟೈಟ್ ಪದರುಗಳ ಮೂಲಕ ಹಾಯಿಸಿದಾಗ, ಪರ್ಮುಟೈಟ್‌ನಲ್ಲಿರುವ ಸೋಡಿಯಮ್ ಅಯಾನುಗಳು, ಗಡಸುನೀರಿನಲ್ಲಿರುವ ಕಾಲ್ಸಿಯಮ್ ಮತ್ತು ಮ್ಯಾಗ್ನೀಷಿಯಮ್ ಅಯಾನುಗಳಿಂದ ಸ್ಥಾನಪಲ್ಲಟಗೊಳಿಸಲ್ಪಡುವುದರಿಂದ ನೀರು ಮೆದುವಾಗುವುದು. ಅಂದರೆ ನೀರಿನಲ್ಲಿಯ ಗಡಸುತನವು ನಿವಾರಿಸಲ್ಪಡುವುದು.

b) ವಿದ್ಯುದ್ವಿಶ್ಲೇಷಣದ ಯಾವುದಾದರೂ ಎರಡು ಮುಖ್ಯ ಉಪಯೋಗಗಳನ್ನು ತಿಳಿಸಿ.

**ಉತ್ತರ :** ವಿದ್ಯುಲ್ಲೇಪನದಲ್ಲಿ, ಲೋಹಗಳ ಶುದ್ಧೀಕರಣದಲ್ಲಿ, ವಿದ್ಯುನ್ಮುದ್ರಣದಲ್ಲಿ.

c) ವಜ್ರದ ಎರಡು ಮುಖ್ಯ ಉಪಯೋಗಗಳನ್ನು ತಿಳಿಸಿ.

**ಉತ್ತರ : ವಜ್ರದ ಉಪಯೋಗ :** 1) ಬಂಡೆಗಳನ್ನು ಕೊರೆಯಲು, 2) ಗಾಜು ಕೊರೆಯಲು, 3) ಆಭರಣಗಳಲ್ಲಿ.

X a) ಅಂದವಾದ ಚಿತ್ರದೊಡನೆ ಸಂಕ್ಷೇಪವಾಗಿ ಸಿಮೆಂಟು ಉತ್ಪಾದನೆಯನ್ನು ವಿವರಿಸಿ.

ಉತ್ತರಕ್ಕೆ ಎಪ್ರಿಲ್ 1986 ರ ಪ್ರಶ್ನೆ 4 (a) ನೋಡಿ. (ಚಿತ್ರ ಪಠ್ಯಪುಸ್ತಕದ 252 ನೇ ಪುಟದಲ್ಲಿ)

b) ಪ್ರಯೋಗ ಶಾಲೆಯಲ್ಲಿ ಬಳಸುವ ಗಾಜು ಯಾವುದು ? ಕಾರಣವೇನು ?

**ಉತ್ತರ :** ಪ್ರಯೋಗ ಶಾಲೆಯಲ್ಲಿ ಬಳಸುವ ಗಾಜು ಪೈರೆಕ್ಸ್ ಗಾಜು.

ಯಾಕೆಂದರೆ ಈ ಗಾಜು ಹೆಚ್ಚಿನ ಉಷ್ಣತೆಯನ್ನು ಸಹಿಸಿಕೊಳ್ಳುವುದಲ್ಲದೆ, ರಾಸಾಯನಿಕ ದ್ರಾವಕಗಳ ಪ್ರಭಾವವನ್ನು ಸಹಿಸಿಕೊಳ್ಳುವುದು.

c) ಏರೋಪ್ಲೇನುಗಳ ರಚನೆಯಲ್ಲಿ ಬಳಸುವ ಅಲ್ಯುಮಿನಿಯಮ್ ಮಿಶ್ರಲೋಹದ ಹೆಸರನ್ನು ತಿಳಿಸಿ.

**ಉತ್ತರ :** ಡ್ಯೂರಾಲುಮಿನ್.

XI a) ಗ್ಲೂಕೋಸ್‌ನ ರಚನಾತ್ಮಕ ಸೂತ್ರವನ್ನು ಬರೆಯಿರಿ. ಅದನ್ನು ಏಕೆ ಆಲ್ಡೋಸ್ ಎನ್ನುವರು ?

**ಉತ್ತರ :** ಗ್ಲೂಕೋಸ್‌ನ ರಚನಾತ್ಮಕ ಸೂತ್ರ.



ಗ್ಲೂಕೋಸ್‌ನ ಸೂತ್ರ $C_6H_{12}O_6$ ಇದರಲ್ಲಿ (CHO) ಎಂಬ ಆಲ್ಡಿಹೈಡ ಕ್ರಿಯಾತ್ಮಕ ಗುಂಪು ಇರುವುದರಿಂದ ಇದನ್ನು ಆಲ್ಡೋಸ್ ಎನ್ನುವರು.

b) ಮಾನವ ರಕ್ತದ PH ಮೌಲ್ಯವೆಷ್ಟು ?

**ಉತ್ತರ :** ಮಾನವ ರಕ್ತದ PH ಮೌಲ್ಯ $=7.36$.

XII a) ಪರಾವರ್ತ ಕ್ರಿಯೆ ಎಂದರೇನು ? ಒಂದು ಉದಾಹರಣೆಯನ್ನು ಕೊಡಿ.

**ಉತ್ತರ :** ಅನೇಕ ರಾಸಾಯನಿಕ ಕ್ರಿಯೆಗಳು ಎರಡೂ ದಿಕ್ಕುಗಳಲ್ಲಿ ಸಾಗುವ ಪ್ರವೃತ್ತಿಯನ್ನು ಹೊಂದಿರುತ್ತವೆ. ಕ್ರಿಯಾವಸ್ತುಗಳು ತಮ್ಮೊಳಗೆ ಸತತವಾಗಿ ವರ್ತಿಸಿ ಕ್ರಿಯಾಫಲಗಳನ್ನು ಕೊಡುತ್ತವೆ. ಅದೇ ವೇಳೆಗೆ ಕ್ರಿಯಾಫಲಗಳೂ ಪರಸ್ಪರ ವರ್ತಿಸಿ, ಮೂಲ ಕ್ರಿಯಾವಸ್ತುಗಳನ್ನುಂಟು ಮಾಡುತ್ತವೆ. ಇಂತಹ ರಾಸಾಯನಿಕ ಕ್ರಿಯೆಯನ್ನು ಪರಾವರ್ತ ಕ್ರಿಯೆ ಎನ್ನುವರು.

ಉದಾ : $CaCO_3 \rightleftarrows CaO + CO_2$

b) ಸ್ಫಟಿಕದ ಎರಡು ಮುಖ್ಯ ಉಪಯೋಗಗಳನ್ನು ತಿಳಿಸಿ.

**ಉತ್ತರ :** ಸ್ಫಟಿಕ (ಫಟಿಕ)ದ ಉಪಯೋಗ : 1) ರಾಡಿ ನೀರನ್ನು ತಿಳಿಗೊಳಿಸಲು, 2) ಚರ್ಮ ಹದಮಾಡಲು 3) ಬಣ್ಣ ಹಾಕುವ ಉದ್ಯಮದಲ್ಲಿ 4) ಕ್ಯಾಲಿಕೊ ಮುದ್ರಣದಲ್ಲಿ.

XIII a) ಪರ್ಯಾಪ್ತ ಮತ್ತು ಅಪರ್ಯಾಪ್ತ ಹೈಡ್ರೊಕಾರ್ಬನ್‌ಗಳು ಎಂದರೇನು ? ಪ್ರತಿಯೊಂದಕ್ಕೂ ಒಂದು ಉದಾಹರಣೆ ಕೊಡಿ.

**ಉತ್ತರ :** ಪ್ರರ್ಯಾಪ್ತ ಹೈಡ್ರೋಕಾರ್ಬನ್ : ಇಂಗಾಲದ ಪರಮಾಣುಗಳು ಜಲಜನಕದ ಇಲ್ಲವೆ ಇತರ ಇಂಗಾಲದ ಪರಮಾಣುಗಳೊಂದಿಗೆ ಏಕ ಬಂಧದಿಂದ ಜೋಡಿಸಲ್ಪಟ್ಟಿದ್ದರೆ, ಅಂತಹ ಸಂಯುಕ್ತಗಳನ್ನು ಪರ್ಯಾಪ್ತ ಹೈಡ್ರೋಕಾರ್ಬನ್‌ಗಳೆನ್ನುವರು.

ಉದಾ : ಮಿಥೇನ್ ಈಥೇನ್



**ಅಪರ್ಯಾಪ್ತ ಹೈಡ್ರೋಕಾರ್ಬನ್ :** ಒಂದು ಸಂಯುಕ್ತದಲ್ಲಿ ಕನಿಷ್ಟ ಒಂದು ಜೋಡಿ ಪಕ್ಕದ ಇಂಗಾಲದ ಪರಮಾಣುಗಳು ಬಹುಬಂಧ ಅಂದರೆ ದ್ವಿಬಂಧ ಇಲ್ಲವೆ ತ್ರಿಬಂಧಗಳಿಂದ ಬಂಧಿಸಲ್ಪಟ್ಟಿದ್ದರೆ, ಅಂತಹ ಸಂಯುಕ್ತವನ್ನು ಅಪರ್ಯಾಪ್ತ ಹೈಡ್ರೋಕಾರ್ಬನ್ ಎನ್ನುವರು.

ಉದಾ : ಎಥಿಲೀನ್ ಪ್ರೊಪಿಲೀನ್



b) ತಣ್ಣೀರಿನ ಮೇಲೆ ಒಂದು ಚೂರು ಸೋಡಿಯಂ ಹಾಕಿದಾಗ ಆಗುವ ಬದಲಾವಣೆಗಳೇನು ?

**ಉತ್ತರ :** ಸೋಡಿಯಮ್ ಅತ್ಯಂತ ಕ್ರಿಯಾಶೀಲ (ಪಟುವಾದ) ಮೂಲ ವಸ್ತುವಾದುದರಿಂದ, ಅದು ನೀರಿನ ಮೇಲೆ ಗುಸುಗುಟ್ಟುತ್ತಾ ಚಲಿಸಿ, ಜಲಜನಕವನ್ನು ಬಿಡುಗಡೆ ಮಾಡಿ, ಸೋಡಿಯಮ್ ಹೈಡ್ರಾಕ್ಸೈಡ್‌ನ್ನು ಉಂಟುಮಾಡುವುದು.

$$2Na + 2H_2O \rightarrow 2NaOH + H_2$$

XIV a) "ಅಕ್ರೋಲಿನ್" ಪರೀಕ್ಷೆ ಎಂದರೇನು ? ಅದನ್ನು ಏಕೆ ಉಪಯೋಗಿಸುತ್ತಾರೆ ?

**ಉತ್ತರ :** ಕೊಬ್ಬು ಇರುವ ಪದಾರ್ಥಕ್ಕೆ ಪೊಟ್ಯಾಷಿಯಂ ಬೈಸಲ್ಫೇಟನ್ನು ಸೇರಿಸಿ ಕಾಯಿಸಬೇಕು. ಆಗ ಉತ್ಪನ್ನವಾಗುವ ಗ್ಲಿಸರಾಲ್ ತನ್ನ ನೀರಿನ ಅಂಶವನ್ನು ಕಳೆದುಕೊಂಡು ಘಾಟುವಾಸನೆಯುಳ್ಳ ಅಕ್ರೋಲಿನ್ ಎಂಬ ವಸ್ತುವಾಗಿ ಉಳಿಯುವುದು. ಇದನ್ನು ಅಕ್ರೋಲಿನ್ ಪರೀಕ್ಷೆ ಎನ್ನುವರು.

ವಸ್ತುವಿನಲ್ಲಿ ಕೊಬ್ಬಿನ ಅಂಶವಿರುವುದನ್ನು ಪರೀಕ್ಷಿಸಲು ಆಕ್ರೋಲಿನ್ ಪರೀಕ್ಷೆ ಮಾಡುವರು.

b) ಆಲ್ಕೇನುಗಳ ಸಾಮಾನ್ಯ ಸೂತ್ರವನ್ನು ಬರೆಯಿರಿ.
**ಉತ್ತರ :** $C_nH_{2n+2}$

**XV** a) ಅಯೋಡಿನ್ ಮತ್ತು ಉಪ್ಪುಗಳ ಮಿಶ್ರಣದಿಂದ ಘಟಕಗಳನ್ನು ಹೇಗೆ ಬೇರ್ಪಡಿಸುವಿರಿ ?

**ಉತ್ತರ :** ಅಯೋಡಿನ್ ಮತ್ತು ಉಪ್ಪುಗಳ ಮಿಶ್ರಣವನ್ನು ಕಾಯಿಸಬೇಕು. ಮಿಶ್ರಣದಲ್ಲಿಯ ಅಯೋಡಿನ್‌ವು ಉತ್ಪತನ ಹೊಂದುವುದು. ಅಂದರೆ ಭಾಷ್ಪವಾಗುವುದು. ಈ ಭಾಷ್ಪವನ್ನು ತಂಪುಗೊಳಿಸಲು ಅಯೋಡಿನ್‌ವು ಹರಳು ರೂಪದಲ್ಲಿ ದೊರೆಯುವುದು. ಉಪ್ಪು ಹಿಂದೆ ಉಳಿಯುವುದು.

b) ಆಮ್ಲಜನಕ ಮತ್ತು ಕ್ಲೋರಿನ್‌ಗಳ ಅಣುತೂಕ ಎಷ್ಟು ?

**ಉತ್ತರ :** ಆಮ್ಲಜನಕದ ಅಣುತೂಕ, $O_2 = 2\times 8 = 16$
ಕ್ಲೋರಿನ್‌ದ ಅಣುತೂಕ,
$$Cl_2 = 2\times 35.5 = 71$$

**XVI** a) ತಟಸ್ಥೀಕರಣ ಎಂದರೇನು ? ಯಾವ ಆಮ್ಲ ಮತ್ತು ಪ್ರತ್ಯಾಮ್ಲಗಳನ್ನು ಉಪಯೋಗಿಸುವುದರಿಂದ ಕ್ರಿಯೆಯ ಅಂತ್ಯದಲ್ಲಿ ಸಾಮಾನ್ಯ ಲವಣವು ದೊರೆಯುವುದು ?

**ಉತ್ತರ : ತಟಸ್ಥೀಕರಣ :** ಆಮ್ಲ ಮತ್ತು ಪ್ರತ್ಯಾಮ್ಲಗಳು ನಿರ್ದಿಷ್ಟ ಪ್ರಮಾಣದಲ್ಲಿ ಬೆರೆತು, ಪರಸ್ಪರ ಗುಣಗಳನ್ನು ಕಳೆದುಕೊಂಡು, ಲವಣ ಮತ್ತು ನೀರುಗಳನ್ನು ಉಂಟು ಮಾಡುವ ಕ್ರಿಯೆಯನ್ನು ತಟಸ್ಥೀಕರಣ ಎನ್ನುವರು.

ಹೈಡ್ರೋಕ್ಲೋರಿಕ್ ಆಮ್ಲ (HCl)ಮತ್ತು ಸೋಡಿಯಂ ಹೈಡ್ರಾಕ್ಸೈಡ್ (NaOH)ಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ಬೆರೆಸಿ ತಟಸ್ಥೀಕರಿಸುವುದರಿಂದ ಕ್ರಿಯೆಯ ಅಂತ್ಯದಲ್ಲಿ ಸಾಮಾನ್ಯ ಲವಣ (NaCl)ವು ದೊರೆಯುವುದು.

$$HCl + NaOH \rightarrow NaCl + H_2O$$

b) 98 ಮೀಟರು ಎತ್ತರದಿಂದ ಬಿದ್ದ ಕಲ್ಲು ಭೂಮಿಯನ್ನು ತಾಕಲು ಎಷ್ಟು ಕಾಲವನ್ನು ತೆಗೆದುಕೊಳ್ಳುವುದು ?

**ರೀತಿ :** ಇಲ್ಲಿ ಎತ್ತರ $h = 98$ ಮೀ. ಆರಂಭದ ವೇಗ $u=0$ ಮಿ/ಸೆ. ಮತ್ತು ಗುರುತ್ವ ವೇಗೋತ್ಕರ್ಷ $g = 9.8$ ಮಿ/ಸೆ$^2$.

ಈಗ $h = ut + \frac{1}{2}gt^2$

$$98 = 0\times t + \frac{1}{2}\times 9.8\times t^2$$

ಅಥವಾ $98 = 0 + 4.9\,t^2$

,, $4.9t^2 = 98$

$$t^2 = \frac{98}{4.9} = \frac{980}{49} = 20$$

$\therefore$ $t = \sqrt{20} = 4.47$ ಸೆಕೆಂಡುಗಳು.

$\therefore$ ತೆಗೆದುಕೊಳ್ಳುವ ಕಾಲ $= 4.47$ ಸೆಕೆಂಡುಗಳು Ans.

---

# ವಿಜ್ಞಾನ

## ಅಕ್ಟೋಬರ 1986 2 ನೆಯ ಪತ್ರಿಕೆ

## [ ಜೀವಶಾಸ್ತ್ರ ]

ವೇಳೆ : 2 ಗಂಟೆ ] [ ಗುಣಗಳು : 35

**I ಪ್ರಶ್ನೆ 1.** ಮನುಷ್ಯನ ಮೆದುಳಿನ ಮುಖ್ಯ ಭಾಗಗಳನ್ನು ಹೆಸರಿಸಿ, ಒಂದೊಂದು ಕಾರ್ಯವನ್ನು ತಿಳಿಸಿ.

**ಉತ್ತರ : ಮೆದುಳಿನ ಮುಖ್ಯ ಭಾಗಗಳು :** 1) ಮುಮ್ಮೆದುಳು, 2) ಮಧ್ಯದ ಮೆದುಳು, 3) ಹಿಮ್ಮೆದುಳು ಮತ್ತು 4) ಅನುಮಸ್ತಿಷ್ಕ.

**ಕಾರ್ಯಗಳು : 1) ಮುಮ್ಮೆದುಳು** (ಮಹಾಮಸ್ತಿಷ್ಕ) : ಇದು ಜ್ಞಾಪಕ ಶಕ್ತಿ, ಬುದ್ಧಿಶಕ್ತಿ, ಪ್ರಜ್ಞೆ, ಅರಿವುಗಳಿಗೆ ಸಂಬಂಧಿಸಿದ ಕಾರ್ಯ ಮಾಡುವುದು.

**2). ಮಧ್ಯದ ಮೆದುಳು :** ಇದು ಹಿಮ್ಮೆದುಳಿನಿಂದ ಬಂದ ಸಂದೇಶಗಳನ್ನು ಮುಮ್ಮೆದುಳಿಗೆ ಕಳಿಸಲು ಸಹಾಯ ಮಾಡುವುದು.

3) **ಹಿಮ್ಮೆದುಳು :** ಇದು ಅನೈಚ್ಛಿಕ ಸ್ನಾಯುಗಳ ಕಾರ್ಯವನ್ನು ನಿಯಂತ್ರಿಸುವುದು.

4) **ಅನುಮಸ್ತಿಷ್ಕ :** ದೇಹದ ಸಮತೋಲನವನ್ನು ಕಾಯುವುದು.

**ಪ್ರಶ್ನೆ 2.** ಮೆದುಳು ಬಳ್ಳಿಯ ರಚನೆ ಮೆದುಳಿನ ರಚನೆಗಿಂತ ಹೇಗೆ ಭಿನ್ನವಾಗಿದೆ ? ಅದರ ಒಂದು ಪ್ರಾಮುಖ್ಯ ಕಾರ್ಯ ತಿಳಿಸಿ.

**ಉತ್ತರ :** ಮೆದುಳು ಬಳ್ಳಿಯ ರಚನೆಯಲ್ಲಿ ಬಿಳಿ ಬಣ್ಣದ ಭಾಗವು ಹೊರ ಬದಿಯಲ್ಲಿದ್ದು ಬೂದು ಬಣ್ಣದ ಭಾಗವು ಒಳಗೆ ಇರುವುದು. ಆದರೆ ಮೆದುಳಿನಲ್ಲಿ ಇದಕ್ಕೆ ವಿರುದ್ಧವಾಗಿ ಬೂದು ಬಣ್ಣದ ಭಾಗವು ಮೆದುಳಿನ ಹೊರಭಾಗದಲ್ಲಿದ್ದು ಬಿಳಿ ಬಣ್ಣದ ಭಾಗವು ಒಳಗಡೆಯಲ್ಲಿ ಇರುವುದು.

ಮೆದುಳು ಬಳ್ಳಿಯ ಮುಖ್ಯ ಕಾರ್ಯವು ಪರಾವರ್ತಿತ ಪ್ರತಿಕ್ರಿಯೆಯನ್ನು ನಿರ್ವಹಿಸುವುದಾಗಿದೆ.

**II ಪ್ರಶ್ನೆ 1.** ಮನುಷ್ಯ ಶ್ವಾಸಕ ಪರಿಚಲನೆಯ (Pulmonary Circulation) ಚಿತ್ರ ಬಿಡಿಸಿ ಪ್ರಾಮುಖ್ಯ ರಕ್ತನಾಳಗಳನ್ನು ಹೆಸರಿಸಿ; ರಕ್ತ ಹರಿಯುವ ಮಾರ್ಗವನ್ನು ಗುರುತಿಸಿ.




ಶ್ವಾಸಕ ಪರಿಚಲನೆ

**ಉತ್ತರ :** ಭಾಗಗಳು : 1. ಬಲ ಹೃತ್ಕುಕ್ಷಿ, 2. ಎಡಹೃತ್ಕುಕ್ಷಿ, 3. ಬಲಶ್ವಾಸಕೋಶ, 4. ಎಡ ಶ್ವಾಸಕೋಶ, 5. ಪಲ್ಮನರಿ ಅಪಧಮನಿ–ಪಲ್ಮನರಿ ಅಭಿಧಮನಿ.

**ಪ್ರಶ್ನೆ 2.** ನಾಲಿಗೆಯಲ್ಲಿರುವ ರಸಾಂಕುರದ ನೀಳ ಛೇದ ಚಿತ್ರ ಬಿಡಿಸಿ, ಭಾಗಗಳನ್ನು ಹೆಸರಿಸಿ.




**ಉತ್ತರ :** ಭಾಗಗಳು : 1) ಜ್ಞಾನವಾಹಿ ಕೋಶ, 2) ಆಧಾರ ಜೀವಕೋಶ, 3) ಜ್ಞಾನವಾಹಿ ನರಕೋಶ, 4) ರಸಾಂಕುರದ ರಂಧ್ರ.

**III ಪ್ರಶ್ನೆ 1.** ಥೈರಾಯಿಡ್ ಗ್ರಂಥಿಗಳು ಎಲ್ಲಿವೆ ? ಅದರ ಸ್ರಾವದಲ್ಲಿ ಒಂದನ್ನು ಹೆಸರಿಸಿ.

**ಉತ್ತರ :** ಥೈರಾಯಿಡ್ ಗ್ರಂಥಿಗಳು ಗಂಟಲಿನ ಕೆಳಭಾಗದಲ್ಲಿ ಶ್ವಾಸನಾಳದ ಎರಡೂ ಬದಿಗಳಲ್ಲಿ ಇರುವವು.

ಇದರ ಒಂದು ಸ್ರಾವವು ಥೈರಾಕ್ಸಿನ್.

**ಪ್ರಶ್ನೆ 2.** ಎರಡು ಪ್ರಕಾರದ ದೃಷ್ಟಿದೋಷಗಳನ್ನು ಹೆಸರಿಸಿ. ಅವುಗಳನ್ನು ನಿವಾರಿಸಲು ಉಪಯೋಗಿಸುವ ಮಸೂರವನ್ನು (lens) ಹೆಸರಿಸಿ.

ಉತ್ತರಕ್ಕೆ ಎಪ್ರಿಲ್ 1985ರ ಪ್ರಶ್ನೆ IIರಲ್ಲಿ 2 ನೋಡಿ.

**ಪ್ರಶ್ನೆ 3.** ಮನುಷ್ಯನ ಬಿಳಿರಕ್ತಕಣ (W.B.C.)ದ ಮೂರು ಗುಣಲಕ್ಷಣ ಹಾಗೂ ಒಂದು ಕಾರ್ಯ ತಿಳಿಸಿ.

**ಉತ್ತರ :** ಬಿಳಿರಕ್ತಕಣದ ಗುಣ ಲಕ್ಷಣಗಳು : 1) ಗಾತ್ರದಲ್ಲಿ ಕೆಂಪು ರಕ್ತಕಣಕ್ಕಿಂತ ದೊಡ್ಡದು, 2) ನಿರ್ದಿಷ್ಟ ಆಕಾರವಿಲ್ಲ, 3) ಕೆಲವು ಸಲ ರಕ್ತ ಪ್ರವಾಹದ ವಿರುದ್ಧವೂ ಚಲಿಸುವುದಲ್ಲದೆ, ರೋಗ ಜಂತುಗಳನ್ನು ನಾಶಮಾಡಲು ರಕ್ತನಾಳದ ಹೊರಗೂ ಹೋಗುವವು.

ಕಾರ್ಯ : ರೋಗಾಣುಗಳನ್ನು ನಾಶ ಮಾಡುವುದು.

**ಪ್ರಶ್ನೆ 4.** ನಂಜುನಾಶಕ (Disinfectant) ಎಂದರೇನು ? ಎರಡು ನಂಜುನಾಶಕಗಳನ್ನು ಹೆಸರಿಸಿ.

**ಉತ್ತರ :** ಗಾಯದಲ್ಲಿರುವ ಬ್ಯಾಕ್ಟೀರಿಯಾಗಳನ್ನು ನಾಶಮಾಡುವ ರಾಸಾಯನಿಕ ವಸ್ತುವನ್ನು ನಂಜುನಾಶಕ ಎನ್ನುವರು.

**ನಂಜುನಾಶಕಗಳು :** 1) ಫೀನಾಲ್ 2) ಅಯೋಡಿನ್.

**ಪ್ರಶ್ನೆ 5.** ಪ್ಲಾಸೆಂಟಾ ಎಂದರೇನು ? ಅದರ ಕಾರ್ಯಗಳೇನು ?

ಉತ್ತರಕ್ಕೆ ಎಪ್ರಿಲ್ 1985 ರ ಪ್ರಶ್ನೆ IIರಲ್ಲಿ 5 ನೋಡಿ.

IV ಪ್ರಶ್ನೆ 1. ರಕ್ತಕ್ಕೆ ಬಣ್ಣಕೊಡುವ ವರ್ಣಕ (Chemical) ಯಾವುದು ? ಮತ್ತು ಅದರ ಕಾರ್ಯವೇನು ?

ಉತ್ತರಕ್ಕೆ ಎಪ್ರಿಲ್ 1986 ರ ಪ್ರಶ್ನೆ V (5) ನೋಡಿ.

ಪ್ರಶ್ನೆ 2. ಹೃದಯದ ಸುತ್ತಲೂ ಇರುವ ಪೊರೆ ಮತ್ತು ದ್ರವವನ್ನು ಹೆಸರಿಸಿ.

ಉತ್ತರ : ಹೃದಯದ ಸುತ್ತಲೂ ಇರುವ ಪೊರೆಯನ್ನು ಹೃದಯಾವರಣ ಅಥವಾ ಪೆರಿಕಾರ್ಡಿಯಂ ಎನ್ನುವರು. ಅದರಲ್ಲಿ ರುವ ದ್ರವವನ್ನು ಪೆರಿಕಾರ್ಡಿಯಲ್ ದ್ರವ ಎನ್ನುವರು.

ಪ್ರಶ್ನೆ 3. ಅಣಬೆ ಸಸ್ಯಗಳು ಆಹಾರ ತಯಾರಿಸಲಾರವು. ಕಾರಣವೇನು ? ಅವು ಹೇಗೆ ಆಹಾರ ಪಡೆಯುತ್ತವೆ ?

ಉತ್ತರ : ಅಣಬೆ ಸಸ್ಯಗಳಲ್ಲಿ ಪತ್ರ ಹರಿತ್ತು ಇರುವುದಿಲ್ಲವಾದ್ದರಿಂದ ಅವು ಆಹಾರ ತಯಾರಿಸಲಾರವು. ಕೊಳಚೆಯಿಂದ ಮತ್ತು ತಾವು ಆಶ್ರಯಿಸಿದ ಸಸ್ಯದಿಂದ ಪರಾವಲಂಬಿಗಳಾಗಿ ಆಹಾರವನ್ನು ಪಡೆಯುವವು.

ಪ್ರಶ್ನೆ 4. ಜೀವಿತದ ಅವಧಿ ದ್ವಿಗುಣಗೊಂಡಿದೆ ಎನ್ನುವರು. ಇದಕ್ಕೆ ಕಾರಣವೇನು ?

ಉತ್ತರಕ್ಕೆ ಎಪ್ರಿಲ್ 1985 ರ ಪ್ರಶ್ನೆ III ರಲ್ಲಿ 7 ನೋಡಿ.

ಪ್ರಶ್ನೆ 5. ಲೋಮ ಮೂತ್ರ ನಾಳದಲ್ಲಿ ಕ್ರಿಯಾತ್ಮಕ ಸಾಗಾಣಿಕೆಯ(Active transport) ಪ್ರಯೋಜನವೇನು?

ಉತ್ತರ : ಗ್ಲೊಮೆರೂಲಸ್‌ನಲ್ಲಿ ನಡೆದ ಶೋಧನೆಯಿಂದ ವಿಸರ್ಜಿಸಲಾದ ಅಮಿನೋ ಆಮ್ಲಗಳು, ಗ್ಲೂಕೋಸ್, ಲವಣಗಳು ಮುಂತಾದ ಉಪಯುಕ್ತ ವಸ್ತುಗಳನ್ನು ಒಳಗೊಂಡ ನೀರನ್ನು ಪುನಃ ರಕ್ತಗತಮಾಡಲು ಕ್ರಿಯಾತ್ಮಕ ಸಾಗಾಣಿಕೆಯು ಪ್ರಯೋಜನಕಾರಿಯಾಗಿದೆ.

ಪ್ರಶ್ನೆ 6. ಎರಡು "ನ್ಯೂಕ್ಲಿಯಿಕ್" ಆಮ್ಲಗಳನ್ನು ಹೆಸರಿಸಿ.

ಉತ್ತರ : 1) D. N. A. (ಡಿ. ಆಕ್ಸಿ. ರಿಬೊ ನ್ಯೂಕ್ಲಿಯಿಕ್ ಆಮ್ಲ) ಮತ್ತು

2) R.N.A. (ರಿಬೊ ನ್ಯೂಕ್ಲಿಯಿಕ್ ಆಮ್ಲ)

V ಪ್ರಶ್ನೆ 1. ಮೆದುಳಿನ ಸಂಪರ್ಕದಲ್ಲಿರುವ ನಿರ್ನಾಳ ಗ್ರಂಥಿ ಯಾವುದು ?

ಉತ್ತರ. ಪಿಟ್ಯುಟರಿ ಗ್ರಂಥಿ.

ಪ್ರಶ್ನೆ 2. ಮನುಷ್ಯನ ದ್ವಿನಾಮ ನಾಮಕರಣವೇನು ?

ಉತ್ತರ : ಹೋಮೋಸೇಪಿಯನ್ (Homosapien)

ಪ್ರಶ್ನೆ 3. ಲಾಡಿ ಹುಳ (Tapeworm)ದ ಪ್ರಾಣಿ ವಂಶವನ್ನು ಹೆಸರಿಸಿ.

ಉತ್ತರ : ಪ್ಲಾಟಿ ಹೆಲ್ಮೆಂಥಿಸ್ (Platy Helmenthes)

ಪ್ರಶ್ನೆ 4. ಸಾಮಾನ್ಯ ಕೋಶ ವಿಭಜನೆಯ ಕ್ರಮವನ್ನು ಹೆಸರಿಸಿ.

ಉತ್ತರ : ಮೈಟಾಸಿಸ್ (Mitosis)

ಪ್ರಶ್ನೆ 5. ದ್ರವ ರೂಪದ ಒಂದು ಅಂಗಾಂಶವನ್ನು ಹೆಸರಿಸಿ.

ಉತ್ತರ : ರಕ್ತ.

VI ಪ್ರತಿಯೊಂದಕ್ಕೂ ಸರಿಯಾದ ಕಾರಣ ಕೊಡಿ.

1) ಹೈಡ್ರಾ (Hydra) ಒಂದು ಸಿಲಿಯಂಟರೇಟಾ (Coelenterata)

ಕಾರಣ : ಇದಕ್ಕೆ ಜಠರ ಪರಿಚಲನಾ ಕುಹರವಿದೆ.

2. ಮೀನು ಒಂದು ಕಶೇರುಕ.

ಕಾರಣ : ಮೀನಿಗೆ ಬೆನ್ನು ಮೂಳೆಯಿದೆ.

3. ಪೆನಿಸಿಲೀಯಂ ಸಸ್ಯ ಒಂದು ಅಣಬೆ.

ಕಾರಣ : ಇದರಲ್ಲಿ ಹೈಫೆ ಇರುವುದು. ಇದಕ್ಕೆ ಹರಿತ್ತು ಇಲ್ಲ.

4. ಈರುಳ್ಳಿ (Onion) ಒಂದು ಕಾಂಡ.

ಕಾರಣ : ಇದು ಒಂದು ಪತ್ರಕಂದ ಅಥವಾ ಬಲ್ಬ.

5. ಚಿಟ್ಟೆ ಒಂದು ಸಂಧಿ ಪದಿ (Arthropod)

ಕಾರಣ : ಇದು ಒಂದು ಕೀಟ.

VII ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿಸಿ.

(ಬಿಟ್ಟ ಸ್ಥಳ ತುಂಬಿ ಬರೆದಿದೆ. ದಪ್ಪಕ್ಷರದ ಪದಗಳು ತುಂಬಿದ ಪದಗಳು)

1. ಜೋಳ (Maize)ದಲ್ಲಿರುವ ಬೀಜದಳಗಳ ಸಂಖ್ಯೆ **ಒಂದು.**

2) ಬಸವನ ಹುಳ (Snail) ಮೃದ್ವಂಗಿ ಪ್ರಾಣಿ ವಂಶಕ್ಕೆ ಸೇರಿದೆ.

3) ನೆಲಕಡಲೆಯಲ್ಲಿ ಆಹಾರ ಸಂಗ್ರಹಣೆ ಭಾಗ ಬೀಜ.

4) ತೆಂಗಿನ ಮರದಲ್ಲಿ ತಂತು ಬೇರು ವ್ಯೂಹವಿದೆ.

5) ಹೃದಯ ರಚನೆಯಲ್ಲಿರುವ ಕಾರ್ಡಿಯಾಕ್ ಸ್ನಾಯುಗಳು ಅನೈಚ್ಛಿಕ ಸ್ನಾಯುಗಳು.

VIII ಕೆಳಗಿನವುಗಳಿಗೆ ಒಂದೊಂದು ಕಾರ್ಯವನ್ನು ತಿಳಿಸಿ.

1. ಸಣ್ಣ ಕರುಳಿನಲ್ಲಿರುವ ವಿಲ್ಲೈ ಗ್ರಂಥಿಗಳು.

ಕಾರ್ಯ : ಜೀರ್ಣವಾದ ಆಹಾರವನ್ನು ಶೋಷಿಸಿಕೊಂಡು ರಕ್ತಗತ ಮಾಡುವುದು.

2. ಯುಗ್ಲಿನಾದಲ್ಲಿರುವ ಕಶಾಂಗ (Flagellum)

ಕಾರ್ಯ : ಚಲನೆಗೆ ಸಹಾಯ ಮಾಡುವುದು.

3. ಹೂವಿನ ಕೇಸರಗಳು (Stamens)

ಕಾರ್ಯ : ಪರಾಗ ರೇಣುಗಳನ್ನು ಉತ್ಪತ್ತಿ ಮಾಡುವುದು.

4. ಬೇರು ಟೋಪಿ (Root Cap)

ಕಾರ್ಯ : ಬೇರಿನ ಸೂಕ್ಷ್ಮ ತುದಿಯನ್ನು ರಕ್ಷಿಸುವುದು.

5. ಕಬ್ಬಿನ (Sugar cane) ಕಾಂಡ (Stem)

ಕಾರ್ಯ : ಆಹಾರ (ಸಕ್ಕರೆ) ಸಂಗ್ರಹಣೆ.

---

# ವಿಜ್ಞಾನ

## ಎಪ್ರಿಲ್ 1987 1 ನೇ ಪತ್ರಿಕೆ

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : 2½ ಗಂಟೆ ] [ ಗುಣಗಳು : 65

ಪ್ರಶ್ನೆ 1. a) ತಂತಿಯ ವಿದ್ಯುದ್ದೀಪದ ಅಂದವಾದ ಚಿತ್ರವನ್ನು ಬರೆದು ಭಾಗಗಳನ್ನು ಗುರುತಿಸಿ ಹಾಗೂ ಅದರ ರಚನೆಯನ್ನು ವಿವರಿಸಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 1(a)ನೋಡಿ.

b) ಕ್ಷ-ಕಿರಣ (X-ಕಿರಣ)ದ ಎರಡು ಗುಣಗಳನ್ನೂ ಮತ್ತು ಎರಡು ಉಪಯೋಗಗಳನ್ನು ತಿಳಿಸಿ.

ಉತ್ತರಕ್ಕೆ ಎಪ್ರಿಲ್ 1986 ರ ಪ್ರಶ್ನೆ 1 (c) ನೋಡಿ.

c) ವಿದ್ಯುಜ್ಜನಕ ಎಂದರೇನು ?

ಉತ್ತರ : ವಿದ್ಯುಜ್ಜನಕ : ಯಾಂತ್ರಿಕ ಶಕ್ತಿಯನ್ನು ವಿದ್ಯುಚ್ಛಕ್ತಿಯನ್ನಾಗಿ ಪರಿವರ್ತಿಸುವ ಸಾಧನವನ್ನು ವಿದ್ಯುಜ್ಜನಕ ಎನ್ನುವರು.

ಪ್ರಶ್ನೆ 2. a) ಲೆಕ್ಲಾಂಚಿ ನಿರ್ದ್ರವ ಕೋಶದ ಅಂದವಾದ ಚಿತ್ರವನ್ನು ಬರೆದು ಅದರ ಭಾಗಗಳನ್ನು ಗುರುತಿಸಿ. ಈ ಕೋಶದಲ್ಲಿ ಮ್ಯಾಂಗನೀಸ್ ಡೈಆಕ್ಸೈಡ್‌ನ ಪಾತ್ರವೇನು ?

ಉತ್ತರಕ್ಕೆ ಅಕ್ಟೋಬರ 1985 ರ ಪ್ರಶ್ನೆ 5 (a) ಮತ್ತು ಎಪ್ರಿಲ್ 1986ರ ಪ್ರಶ್ನೆ 3 (a) ನೋಡಿ.

b) ಸ್ಥಾಯೀ ವಿದ್ಯುತ್ ಅಂಶಗಳ ನಡುವಿನ ಕೂಲಾಂಬನ ನಿಯಮವನ್ನು ನಿರೂಪಿಸಿ.

ಕೂಲಾಂಬನ ವಿದ್ಯುತ್ ಬಲ ನಿಯಮ : ಎರಡು ವಿದ್ಯುದಾವಿಷ್ಟ ಕಾಯಗಳ ನಡುವಿನ ಬಲವು, ಅವುಗಳ ಮೇಲಿನ ಆವೇಶಗಳ ಗುಣಲಬ್ಧಕ್ಕೆ ಅನುಲೋಮಾನುಪಾತದಲ್ಲಿಯೂ ಮತ್ತು ಅವುಗಳ ನಡುವಿನ ದೂರದ ವರ್ಗಕ್ಕೆ ವಿಲೋಮಾನುಪಾತದಲ್ಲಿಯೂ ಇರುತ್ತದೆ.

c) ಯಾವುದಾದರೂ ಎರಡು ವಿಕಿರಣಶೀಲ ವಸ್ತುಗಳನ್ನು ಹೆಸರಿಸಿ.

ಉತ್ತರ : ಯುರೇನಿಯಮ್, ಪೊಲೋನಿಯಮ್.

ಪ್ರಶ್ನೆ 3. a) ಕೃತಕ ಕಾಂತಗಳನ್ನು ತಯಾರಿಸುವ ಯಾವುದಾದರೂ ಎರಡು ವಿಧಾನಗಳನ್ನು ತಿಳಿಸಿ,

ಉತ್ತರ : 1) ಏಕಸ್ಪರ್ಶ ವಿಧಾನ, 2) ವಿದ್ಯುತ್ ವಿಧಾನ.

b) ನ್ಯೂಟನ್‌ನ ಚಲನೆಯ ಮೂರನೆಯ ನಿಯಮದ ತತ್ವದ ಆಧಾರದ ಮೇಲೆ ಕಾರ್ಯ ಮಾಡುವ ಯಾವುದಾದರೂ ಎರಡು ಸಾಧನಗಳನ್ನು ಹೆಸರಿಸಿ.

ಉತ್ತರ : 1) ತುಬಾಕಿ (ಬಂದೂಕು), 2) ಜೆಟ್ ವಿಮಾನ.

ಪ್ರಶ್ನೆ 4. b) ಎರಡು ವಿಧವಾದ ಗೋಳೀಯ ದರ್ಪಣಗಳನ್ನು ಹೆಸರಿಸಿ ಮತ್ತು ಅವುಗಳ ಉಪಯೋಗ ತಿಳಿಸಿ.

ಉತ್ತರ : ಗೋಳೀಯ ದರ್ಪಣದ ಎರಡು ವಿಧಗಳು : 1) ನಿಮ್ನ ದರ್ಪಣ, 2) ಪೀನ ದರ್ಪಣ ಅಥವಾ ಉನ್ನತ ದರ್ಪಣ.

ಉಪಯೋಗ : ನಿಮ್ನ ದರ್ಪಣವನ್ನು ದಂತ ವೈದ್ಯರು, ದಂತ ಪರೀಕ್ಷೆಯಲ್ಲಿ, ಟಾರ್ಚುಗಳಲ್ಲಿ, ಮುಖಕ್ಷೌರ ಮಾಡಿಕೊಳ್ಳುವಾಗ, ಸರ್ಚಲೈಟ್‌ಗಳಲ್ಲಿ ಉಪಯೋಗಿಸುವರು.

ಪೀನ ಅಥವಾ ಉನ್ನತ ದರ್ಪಣವನ್ನು ಮೋಟಾರ ಚಾಲಕರ ಬದಿಯಲ್ಲಿ ಹಿನ್ನೋಟ ದರ್ಶಕವಾಗಿ ಉಪಯೋಗಿಸುವರು.

b) ಯಾವುದಾದರೂ ಎರಡು ಸರಳ ಯಂತ್ರಗಳನ್ನು ಹೆಸರಿಸಿ.

ಉತ್ತರ : ಸನ್ನೆ, ಇಳುಕಲು, ಚಕ್ರ ಮತ್ತು ಅಚ್ಚು, ಸ್ಕ್ರೂ.

ಪ್ರಶ್ನೆ 5. a) ರೇಡಾರ್ ಎಂದರೇನು ? ಅದನ್ನು ಏತಕ್ಕೆ ಉಪಯೋಗಿಸುತ್ತಾರೆ ?

ಉತ್ತರ : ಅತಿ ದೂರದಲ್ಲಿರುವ ವಸ್ತುಗಳನ್ನು ಗೊತ್ತು ಮಾಡುವ, ಅವುಗಳಿರುವ ದಿಕ್ಕನ್ನು ಮತ್ತು ವಸ್ತುವಿನಿಂದ ವೀಕ್ಷಣಾ ಕೇಂದ್ರಕ್ಕಿರುವ ದೂರವನ್ನು ನಿಖರವಾಗಿ ಗೊತ್ತು ಮಾಡುವ ಸಾಧನವನ್ನು ರೇಡಾರ್ ಎನ್ನುವರು.

ಉಪಯೋಗ : ಯುದ್ಧ ಕಾಲದಲ್ಲಿ ವೈರಿ ವಿಮಾನಗಳನ್ನು ಪತ್ತೆಹಚ್ಚಲು ಮತ್ತು 2) ವಾಯು ಯಾನ ನಿಯಂತ್ರಣಕ್ಕೆ ರೇಡಾರನ್ನು ಉಪಯೋಗಿಸುವರು.

b) ನ್ಯೂಟನ್ನನ ಗುರುತ್ವಾಕರ್ಷಣ ನಿಯಮವನ್ನು ತಿಳಿಸಿ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 8 (a) ನೋಡಿ.

ಪ್ರಶ್ನೆ 6. a) ಯಾವುದಾದರೂ ಎರಡು ದೃಷ್ಟಿ ಸಾಧಕ ಉಪಕರಣಗಳನ್ನು ತಿಳಿಸಿ, ಮತ್ತು ಪ್ರತಿಯೊಂದರ ಒಂದೊಂದು ಉಪಯೋಗ ತಿಳಿಸಿ.

ಉತ್ತರಕ್ಕೆ ಎಪ್ರಿಲ್ 1986 ರ ಪ್ರಶ್ನೆ 13 (a) ನೋಡಿ.

b) ಪ್ರೇರಣಾ ಸುರುಳಿಯ (Induction coil) ಒಂದು ಉಪಯೋಗ ತಿಳಿಸಿ.

ಉತ್ತರ : ಪ್ರೇರಣಾ ಸುರುಳಿಯ ಉಪಯೋಗ : ಉನ್ನತ ವೋಲ್ಟತೆಯ ಆಕರವಾಗಿ ಉಪಯೋಗಿಸುವರು.

ಪ್ರಶ್ನೆ 7. a) ವಿದ್ಯುತ್ಕಾಂತೀಯ ಪ್ರೇರಣೆಗೆ ಸಂಬಂಧಿಸಿದ ಫಾರಡೆಯ ನಿಯಮ ತಿಳಿಸಿ.

ಉತ್ತರ : ಫಾರಡೆಯ ವಿದ್ಯುತ್ಕಾಂತೀಯ ನಿಯಮ: ಮಂಡಲದಲ್ಲಿ, ಪ್ರೇರಿತ ವಿದ್ಯುಚ್ಚಾಲಕ ಬಲವು ಮಂಡಲಕ್ಕೆ ಸಂಬಂಧಿಸಿದ ಕಾಂತೀಯ ಫ್ಲಕ್ಸ್‌ನ ಬದಲಾವಣೆಯ ದರಕ್ಕೆ ಸಮಾನುಪಾತದಲ್ಲಿರುತ್ತದೆ.

b) ವಿದ್ಯುತ್ಪರಿವರ್ತಕ (transformer) ಎಂದರೇನು ?

ಉತ್ತರ : ವಿದ್ಯುತ್ಪರಿವರ್ತಕ : ಪರ್ಯಾಯ ವಿದ್ಯುತ್ಪ್ರವಾಹದ ವೋಲ್ಟತೆಯನ್ನು ಬದಲಾಯಿಸಲು ಉಪಯೋಗಿಸುವ ಸಾಧನವನ್ನು ವಿದ್ಯುತ್ಪರಿವರ್ತಕ ಎನ್ನುವರು.

ಪ್ರಶ್ನೆ 8. a) ಐನ್‌ಸ್ಟೈನ್‌ರ ದ್ರವ್ಯರಾಶಿ, ಶಕ್ತಿ ಸಂಬಂಧದ ಸಮೀಕರಣವನ್ನು ನಿರ್ಮಿಸಿ.

ಉತ್ತರ : ಶಾತ್ವಿಕ ತಳಹದಿಯ ಮೇಲೆ ಐನ್‌ಸ್ಟೈನ್ ಅವರು, ದ್ರವ್ಯರಾಶಿ ಮತ್ತು ಶಕ್ತಿಗಳು ಮೂಲತಃ ಒಂದೇ ಆಗಿದ್ದು, ಒಂದನ್ನು ಇನ್ನೊಂದರಲ್ಲಿ ಪರಿವರ್ತಿಸಲು ಸಾಧ್ಯವೆಂದು ಹೇಳಿದರು. ಅವರು ದತ್ತ ದ್ರವ್ಯರಾಶಿಗೆ ಸಮನಾದ ಶಕ್ತಿಯನ್ನು ಲೆಕ್ಕ ಮಾಡಲು ಸಾಧ್ಯವಾಗುವಂತೆ ಒಂದು ಸಮೀಕರಣವನ್ನು ಸೂಚಿಸಿದರು. ಆ ಸಮೀಕರಣವು ಈ ರೀತಿ ಇದೆ. $E=mC^2$. ಇಲ್ಲಿ $E=$ಶಕ್ತಿ, $m=$ದ್ರವ್ಯರಾಶಿ, $C=3\times10^8$ ಮೀಟರು/ಸೆಕೆಂಡು, ಅಂದರೆ ಬೆಳಕಿನ ವೇಗಕ್ಕೆ ಸಮನಾದ ಸಂಖ್ಯೆ

b) ಭೂಮಿಯ ಉಪಗ್ರಹ ಯಾವುದು ?

ಉತ್ತರ : ಭೂಮಿಯ ಉಪಗ್ರಹ ಚಂದ್ರ.

ಪ್ರಶ್ನೆ 9. a] ಉಕ್ಕನ್ನು ಉತ್ಪಾದಿಸಲು ಬಳಸುವ ವಿದ್ಯುತ್ ಕುಲುಮೆಯ ಅಂದವಾದ ಚಿತ್ರವನ್ನು ಬರೆದು ಭಾಗಗಳನ್ನು ಗುರುತಿಸಿ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 10[a] ನೋಡಿ.

b] ಪಾಲಿಮರ್‌ಗಳೆಂದರೇನು ? ಎರಡು ಪಾಲಿಮರ್‌ಗಳನ್ನು ತಿಳಿಸಿ.

ಉತ್ತರಕ್ಕೆ ಎಪ್ರಿಲ್ 1986 ರ ಪ್ರಶ್ನೆ 14 [a] ನೋಡಿ.

c] ಜೇನು ತುಪ್ಪದಲ್ಲಿರುವ ಸಕ್ಕರೆಯ ಹೆಸರನ್ನು ತಿಳಿಸಿ.

ಉತ್ತರ : ಫ್ರಕ್ಟೋಸ್ ಅಥವಾ ಹಣ್ಣಿನ ಸಕ್ಕರೆ.

ಪ್ರಶ್ನೆ 10. a) ಉಷ್ಣಕ್ಷೇಪಕ ಮತ್ತು ಉಷ್ಣಗ್ರಹಣ ಕ್ರಿಯೆಗಳು ಎಂದರೇನು ? ಪ್ರತಿಯೊಂದಕ್ಕೂ ಎರಡೆರಡು ಉದಾಹರಣೆಗಳನ್ನು ಕೊಡಿ.

ಉತ್ತರ : ಉಷ್ಣಕ್ಷೇಪಕ ಕ್ರಿಯೆ : ರಾಸಾಯನಿಕ ಕ್ರಿಯೆಯು ನಡೆದಾಗ ಉಷ್ಣವು ಬಿಡುಗಡೆಯಾದರೆ, ಅಂತಹ ರಾಸಾಯನಿಕ ಕ್ರಿಯೆಯನ್ನು ಉಷ್ಣಕ್ಷೇಪಕ ಕ್ರಿಯೆ ಎನ್ನುವರು.

ಉದಾ : 1) $N_3+3H_2 \rightleftarrows 2NH_3+22.8$ ಕಿ.ಕ್ಯಾ.

2) $2SO_2+H_2 \rightleftarrows 2SO_3+46.0$ ಕಿ. ಕ್ಯಾ.

b) ರಾಸಾಯನಿಕ ಕ್ರಿಯೆಯ ವೇಗದ ಮೇಲೆ ಪ್ರಭಾವವನ್ನು ಉಂಟುಮಾಡುವ ಯಾವುದಾದರೂ ನಾಲ್ಕು ಅಂಶಗಳನ್ನು ತಿಳಿಸಿ.

ಉತ್ತರ : a) ರಾಸಾಯನಿಕ ಕ್ರಿಯೆಗಳ ದರದ ಮೇಲೆ ಪ್ರಭಾವ ಬೀರುವ ನಾಲ್ಕು ಅಂಶಗಳು : 1) ಕ್ರಿಯಾವಸ್ತುಗಳ ಸ್ವಭಾವ 2) ಪ್ರಬಲತೆ 3) ಉಷ್ಣತೆ ಮತ್ತು 4) ವೇಗ ಪರಿವರ್ತಕ.

c) ಕೊಠಡಿಯ ಉಷ್ಣತೆಯಲ್ಲಿ ದ್ರವರೂಪದಲ್ಲಿರುವ ಲೋಹವನ್ನು ತಿಳಿಸಿ.

ಉತ್ತರ : ಪಾದರಸ.

ಪ್ರಶ್ನೆ 11. a) ಮೀಥೇನ್ ಮತ್ತು ಕ್ಲೋರಿನ್ ಪರಸ್ಪರ ವರ್ತಿಸಿದಾಗ ಸ್ಥಾನ ಪಲ್ಲಟಿಸಿ, ಉಂಟಾಗುವ ಪ್ರತಿಸ್ಥಾಪಿತ ಕ್ರಿಯಾಫಲಗಳನ್ನು [Substitution products] ಬರೆಯಿರಿ.

ಉತ್ತರ : ಪ್ರತಿಸ್ಥಾಪಿತ ಕ್ರಿಯಾಫಲಗಳು : 1) ಮೀಥೈಲ್ ಕ್ಲೋರೈಡ್ ($CH_3Cl$), 2) ಮಿಥಿಲಿನ್ ಕ್ಲೋರೈಡ್ (ಡೈಕ್ಲೋರೋ ಮಿಥೇನ್) ($CH_2Cl_2$), 3) ಕ್ಲೋರೋಫಾರ್ಮ(ಟ್ರೈಕ್ಲೋರೋ ಮಿಥೇನ್) ($CHCl_3$), 4) ಕಾರ್ಬನ್ ಟೆಟ್ರಾಕ್ಲೋರೈಡ್ ($CCl_4$).

b) ಟಿಂಡಾಲ್ ಪರಿಣಾಮ ಎಂದರೇನು ?

ಉತ್ತರ : ಟಿಂಡಾಲ ಪರಿಣಾಮ : ಕಲ್ಲಾಯ್ಡ್ ಕಣಗಳು ಬೆಳಕನ್ನು ಚದುರಿಸುವ ವಿದ್ಯಮಾನವನ್ನು ಟಿಂಡಾಲ್ ಪರಿಣಾಮ ಎನ್ನುವರು.

ಪ್ರಶ್ನೆ 12. a) ಹ್ಯಾಲೋಜನ್ ಗುಂಪಿನ ನಾಲ್ಕು ಮೂಲವಸ್ತುಗಳನ್ನು ತಿಳಿಸಿ.

ಉತ್ತರ : 1) ಫ್ಲೋರಿನ್ (F), 2) ಕ್ಲೋರಿನ್ (Cl), 3) ಬ್ರೋಮಿನ್ (Br) ಮತ್ತು 4) ಅಯೋಡಿನ್ (I).

b) ಬಹುರೂಪತೆಯನ್ನು ಹೊಂದಿರುವ ಯಾವುದಾದರೂ ಎರಡು ಮೂಲ ವಸ್ತುಗಳನ್ನು ತಿಳಿಸಿ.

ಉತ್ತರ. 1) ಇಂಗಾಲ, 2) ಗಂಧಕ.

ಪ್ರಶ್ನೆ 13. a) ವಸ್ತು ನಿತ್ಯತೆಯ ನಿಯಮವನ್ನು ನಿರೂಪಿಸಿ.

ಉತ್ತರ : ವಸ್ತು ನಿತ್ಯತೆಯ ನಿಯಮ : ರಾಸಾಯನಿಕ ಬದಲಾವಣೆಯು ನಡೆದಾಗ ವಸ್ತುವಿನ ಸೃಷ್ಟಿಯೂ ಆಗುವುದಿಲ್ಲ ಮತ್ತು ಲಯವೂ ಆಗುವುದಿಲ್ಲ.

b) ಒಂದು ಧನ ವೇಗವರ್ಧಕವನ್ನು ಹೆಸರಿಸಿ.

ಉತ್ತರ : ಮ್ಯಾಂಗನೀಸ್ ಡೈಆಕ್ಸೈಡ್ ($MnO_2$)

ಪ್ರಶ್ನೆ 14. a) ಅನುರೂಪ ಶ್ರೇಣಿ ಎಂದರೇನು ? ಎರಡು ಉದಾಹರಣೆ ಕೊಡಿ.

ಉತ್ತರಕ್ಕೆ ಎಪ್ರಿಲ್ 1986 ರ ಪ್ರಶ್ನೆ 9 (a) ನೋಡಿ.

b) ಮಿಲ್ಲನ್ ಪರೀಕ್ಷೆಯ [Millon's test] ಉಪಯೋಗವೇನು ?

ಉತ್ತರ : ಪ್ರೋಟೀನ್‌ಗಳ ಪರೀಕ್ಷೆಗಾಗಿ ಉಪಯೋಗವಾಗುತ್ತದೆ.

ಪ್ರಶ್ನೆ 15. a) ಅಲ್ಯೂಮಿನಿಯಮ್‌ನ ಎರಡು ಮಿಶ್ರ ಲೋಹಗಳನ್ನು ತಿಳಿಸಿ.

ಉತ್ತರ : 1) ಡ್ಯುರಾಲುಮಿನ್,
2) ಮೆಗ್ನಾಲಿಯಮ್.

b) ಹಸಿರು ಗಾಜನ್ನು ಹೇಗೆ ಪಡೆಯುವಿರಿ ?

ಉತ್ತರ : ಗಾಜು ತಯಾರಿಸುವಾಗ ದ್ರವರೂಪದಲ್ಲಿರುವ ಗಾಜಿಗೆ ಕ್ರೋಮಿಯಂ ಆಕ್ಸೈಡನ್ನು ಸೇರಿಸುವುದರಿಂದ ಹಸಿರು ಗಾಜು ದೊರೆಯುವುದು.

ಪ್ರಶ್ನೆ 16. a) ತಾಮ್ರದ ಒಂದು ಅದಿರನ್ನು ತಿಳಿಸಿ. ತಾಮ್ರವನ್ನು ಹೇಗೆ ಪರಿಶುದ್ಧಗೊಳಿಸುವಿರಿ ?

**ಉತ್ತರ :** ತಾಮ್ರದ ಅದಿರು – ಚಾಲ್ಕೊಪೈರಟ್ಸ್ [$CuFeS_2$]

ವಿದ್ಯುದ್ವಿಶ್ಲೇಷಣೆ ಕ್ರಿಯೆಯಿಂದ ಅಶುದ್ಧ ತಾಮ್ರವನ್ನು ಪರಿಶುದ್ಧಗೊಳಿಸುವರು.

b) ಕ್ಯಾಲ್ಸಿಯಮ್ ಕಾರ್ಬೊನೇಟ್‌ನ ರಾಸಾಯನಿಕ ಸೂತ್ರವನ್ನು ಬರೆಯಿರಿ.

**ಉತ್ತರ :** ಕ್ಯಾಲ್ಸಿಯಂ ಕಾರ್ಬೊನೇಟ್‌ನ ಸೂತ್ರ— $CaCO_3$.

c) ಶುಷ್ಕ ಮಾರ್ಜನಕ್ಕೆ (Dry Cleaning) ಉಪಯೋಗಿಸುವ ಎರಡು ಪೆಟ್ರೋಲಿಯಮ್ ಉತ್ಪನ್ನಗಳನ್ನು ತಿಳಿಸಿ.

**ಉತ್ತರ :** 1) ಪೆಟ್ರೋಲ್ ಮತ್ತು 2) ಪೆಟ್ರೋಲಿಯಮ್ ಬೆನ್‌ಜೀನ್.

———

# ವಿಜ್ಞಾನ

## ಎಪ್ರಿಲ್ 1987 2 ನೆಯ ಪತ್ರಿಕೆ

### [ ಜೀವಶಾಸ್ತ್ರ ]

ವೇಳೆ : 2 ಗಂಟೆ ] [ ಗುಣಗಳು : 35

I ಮಾನವ ದೇಹದ ಮೆದುಳಿನ ಹೊರನೋಟವನ್ನು ತೋರಿಸುವ ಚಿತ್ರ ಬರೆದು ಅದರಲ್ಲಿ ಈ ಕೆಳಗಿನ ಭಾಗಗಳನ್ನು ಗುರುತಿಸಿರಿ.

1] ಮಹಾಮಸ್ತಿಷ್ಕ, 2] ಅನುಮಸ್ತಿಷ್ಕ, 3] ಪಾನ್ಸ್, 4) ಮೆಡುಲ್ಲಾ ಆಬ್ಲಾಂಗೇಟಾ.




**ಉತ್ತರ :** ಭಾಗಗಳು : 1) ಮಹಾಮಸ್ತಿಷ್ಕ, 3) ಪಾನ್ಸ್, 4) ಅನುಮಸ್ತಿಷ್ಕ 5) ಮೆಡುಲ್ಲಾ ಆಬ್ಲಾಂಗೇಟಾ.

II ಎರೆಹುಳುವಿನ ದೇಹದಲ್ಲಿರುವ ಒಂದು ಮಾದರಿ ನೆಫ್ರಿಡಿಯಾದ ಚಿತ್ರ ಬರೆದು ಅದರಲ್ಲಿ ಈ ಕೆಳಗಿನ ಭಾಗಗಳನ್ನು ಗುರುತಿಸಿರಿ. 1) ನೆಫ್ರೋಸ್ಟೋಮ, 2) ನೆಫ್ರಿಡಿಯಂ [ಸುರುಳಿ ನಾಳ], 3) ವಲಯಗಳ ನಡುವಿನ ಗೋಡೆ, 4) ವಿಸರ್ಜನ ರಂಧ್ರ [ನೆಫ್ರಿಡಿಯೋ ಪೋರ್].




**ಉತ್ತರ :** ಭಾಗಗಳು : 1] ನೆಫ್ರೋಸ್ಟೋಂ (2,6) ನೆಫ್ರಿಡಿಯಂ (ಸುರುಳಿನಾಳ), 4] ವಲಯಗಳ ನಡುವಿನ ಗೋಡೆ 3] ವಿಸರ್ಜನ ರಂಧ್ರ (ನೆಫ್ರಿಡಿಯೋ ಪೋರ್).

III ಪ್ರಶ್ನೆ 1. ಹಾರ್ಮೋನುಗಳನ್ನು ರಾಸಾಯನಿಕ ಸುದ್ದಿಗಾರರು ಎಂದು ಕರೆಯಲು ಕಾರಣವೇನು ? ಆಪತ್ಕಾಲದಲ್ಲಿ ರಕ್ತ ಪರಿಚಲನೆಯ ಮೇಲೆ ಪ್ರಭಾವ ಬೀರುವ ಹಾರ್ಮೋನನ್ನು ಹೆಸರಿಸಿ.

**ಉತ್ತರ :** ಹಾರ್ಮೋನುಗಳು ದೇಹದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಪ್ರಚೋದನೆಯನ್ನು ಒಯ್ಯುವುದರಿಂದ ಅವುಗಳನ್ನು ರಾಸಾಯನಿಕ ಸುದ್ದಿಗಾರರು ಎಂದು ಕರೆಯುತ್ತಾರೆ.

ಆಪತ್ಕಾಲದಲ್ಲಿ ರಕ್ತಪರಿಚಲನೆಯ ಮೇಲೆ ಪ್ರಭಾವ ಬೀರುವ ಹಾರ್ಮೋನು ಆಡ್ರಿನಾಲಿನ್.

ಪ್ರಶ್ನೆ 2. ಸಂಕೀರ್ಣ ದೇಹರಚನೆ ಹೊಂದಿರುವ ಪ್ರಾಣಿಗಳು ತಮ್ಮ ದೇಹದಲ್ಲಿ ಸಾಗಾಣಿಕಾ ವ್ಯೂಹವನ್ನು ಏಕೆ ಹೊಂದಿರಬೇಕು ? ಪ್ರಾಣಿಗಳ ದೇಹದಲ್ಲಿ ಸಾಗಾಣಿಕಾ ವ್ಯೂಹದಲ್ಲಿ ಹರಿಯುವ ದ್ರವಗಳನ್ನು ಹೆಸರಿಸಿ.

ಉತ್ತರ : ಸಂಕೀರ್ಣ ದೇಹರಚನೆ ಹೊಂದಿರುವ ಪ್ರಾಣಿಗಳಲ್ಲಿ ಅನೇಕ ಅಂಗಾಂಶಗಳು ದೇಹದ ಒಳಭಾಗದಲ್ಲಿ ಸೇರಿಕೊಂಡಿವೆ. ಶ್ವಾಸಾನಿಲಗಳು, ಆಹಾರ ವಸ್ತುಗಳು, ಸ್ರವಿತ ವಸ್ತುಗಳು ಮುಂತಾದವುಗಳನ್ನು ಅಂಗಾಂಶಗಳಿಗೆ ಮತ್ತು ಅಂಗಗಳಿಗೆ ಸಾಗಿಸಲು ಒಂದು ಅಂಗವ್ಯೂಹ ಅವಶ್ಯಕವಾಗಿದೆ. ಇದೇ ಸಾಗಾಣಿಕಾ ವ್ಯೂಹ.

ಸಾಗಾಣಿಕಾ ವ್ಯೂಹದಲ್ಲಿ ಹರಿಯುವ ದ್ರವಗಳು : ರಕ್ತ, ಮುಗ್ಧರಸ ಅಥವಾ ಹೀಮೋದುಗ್ಧರಸ.

ಪ್ರಶ್ನೆ 3. ಮ್ಯುಟೇಶನ್ ಎಂದರೇನು ? ಮ್ಯುಟೇಶನ್‌ಗಳ ವಿಧಗಳನ್ನು ತಿಳಿಸಿ.

ಉತ್ತರ : ಮ್ಯುಟೇಶನ್ : ಅನುವಂಶೀಯ ವಸ್ತುವಿನಲ್ಲಿ ಉಂಟಾಗುವ ಬದಲಾವಣೆಗಳು ವಂಶಪಾರಂಪರ್ಯವಾಗಿ ಬರುತ್ತವೆ. ಇವುಗಳನ್ನು ಮ್ಯುಟೇಶನ್‌ಗಳೆನ್ನುವರು.

ಮ್ಯುಟೇಶನ್‌ಗಳ ವಿಧಗಳು : 1) ಜೀನ್ ಮ್ಯುಟೇಶನ್, 2) ವರ್ಣತಂತು ಮ್ಯುಟೇಶನ್.

ಪ್ರಶ್ನೆ 4. ಪ್ಲಾಸೆಂಟಾ ಎಂದರೇನು ? ಅದರ ಕಾರ್ಯಗಳೇನು ?

ಉತ್ತರಕ್ಕೆ ಅಕ್ಟೋಬರ 1986 ರ ಪ್ರಶ್ನೆ III (5) ನೋಡಿ.

ಪ್ರಶ್ನೆ 5. ಮಧ್ಯಾಹ್ನದ ಪ್ರದರ್ಶನ ಆರಂಭವಾದ ನಂತರ ನಾವು ಒಂದು ಚಲನಚಿತ್ರ ಮಂದಿರದೊಳಕ್ಕೆ ಹೋದ ತಕ್ಷಣ ಅಲ್ಲಿನ ಆಸನಗಳು ನಮಗೆ ಕಾಣಿಸುವುದಿಲ್ಲ. ಸ್ವಲ್ಪ ಕಾಲದ ನಂತರ ಅವು ಕಾಣಿಸುತ್ತವೆ ಕಾರಣವೇನು ?

ಉತ್ತರ : ಮಧ್ಯಾಹ್ನದಲ್ಲಿ ಹೊರಗೆ ಬಿಸಿಲು (ಬಹಳ ಬೆಳಕು) ಇರುವುದರಿಂದ ಆ ಬೆಳಕಿಗೆ ಸರಿ ಹೊಂದುವಂತೆ ಕಣ್ಣು ಪಾಪೆಯು ತನ್ನ ಗಾತ್ರವನ್ನು ಚಿಕ್ಕದಾಗಿಸಿರುತ್ತದೆ. ಅಂದರೆ ಬೆಳಕಿನ ಸ್ವಲ್ಪ ಕಿರಣಗಳು ಅದರ ಮೂಲಕ ಒಳಗೆ ಹೋಗುತ್ತವೆ. ಈ ಸಮಯದಲ್ಲಿ ನಾವು ಚಿತ್ರಮಂದಿರದಲ್ಲಿ ಹೋದರೆ, ಅಲ್ಲಿ ಬೆಳಕಿನ ಪ್ರಮಾಣವು ಕಡಿಮೆ ಇರುವುದರಿಂದ ಕೂಡಲೆ ಕಣ್ಣು ಪಾಪೆಯ ಮೂಲಕ ಒಳಸೇರುವ ಬೆಳಕಿನ ಕಿರಣಗಳಿಂದ ಅಲ್ಲಿರುವ ವಸ್ತುಗಳು ಕಾಣಿಸುವುದಿಲ್ಲ. ಸ್ವಲ್ಪ ಸಮಯದಲ್ಲಿ ಕಣ್ಣು ಪಾಪೆಯು ವಿಕಾಸಗೊಳ್ಳುವುದು. ಆದರಿಂದ ಅದರ ಮೂಲಕ ಬಹಳಷ್ಟು ಬೆಳಕಿನ ಕಿರಣಗಳು ಕಣ್ಣನ್ನು ಸೇರುವವು. ಆಗ ಅಲ್ಲಿಯ ವಸ್ತುಗಳು ಕಾಣುವವು.

ಪ್ರಶ್ನೆ 6. ಅಣುಜೀವಿಗಳ ಯಾವುದಾದರೂ ನಾಲ್ಕು ಪ್ರಯೋಜನಕಾರಿ ಚಟುವಟಿಕೆಗಳನ್ನು ತಿಳಿಸಿ.

ಉತ್ತರ : ಅಣುಜೀವಿಗಳ ಪ್ರಯೋಜನಕಾರಿ ಚಟುವಟಿಕೆಗಳು.

1] ಆಮ್ಲಗಳು, ಧ್ರಾವಕಗಳು ಮತ್ತು ಪರಿಮಳ ದ್ರವ್ಯಗಳ ತಯಾರಿಕೆ.

2] ಮೊಸರು, ಬೆಣ್ಣೆ ಮತ್ತು ಗಿಣ್ಣುಗಳ ತಯಾರಿಕೆ.

3] ಜೀವನಿರೋಧಕಗಳ ತಯಾರಿಕೆ.

4] ನಾರನ್ನು ಕೊಳೆಯಿಸುವುದು, ಚರ್ಮ ಹದ ಮಾಡುವುದು.

IV ಪ್ರಶ್ನೆ 1. ನಾವು ಶಬ್ದವನ್ನು ಸರಿಯಾಗಿ ಕೇಳುವಂತಾಗಲು ಮಧ್ಯಕರ್ಣಾಂತರ ನಾಳವು ಹೇಗೆ ಸಹಾಯಕವಾಗಿದೆ.

ಉತ್ತರ : ಮಧ್ಯ ಕರ್ಣಾಂತರ ನಾಳವು ಗಂಟಲಿನ ಮೂಲಕ ಮಧ್ಯಕಿವಿಯ ಸಂಪರ್ಕವನ್ನು ಹೊಂದಿದೆ. ಅದರಿಂದ ಕಿವಿಯ ತಮಟೆಯ ಎರಡೂ ಬದಿಗಳಲ್ಲಿ ಗಾಳಿಯ ಒತ್ತಡವು ಸಮವಾಗಿ ಉಳಿಯುವುದರಿಂದ, ಶಬ್ದದ ಅಲೆಗಳಿಗನುಗುಣವಾಗಿ ತಮಟೆಯು ಕಂಪನ ಹೊಂದಲು ಸಹಾಯಕವಾಗುವುದು. ಅದರಿಂದ ನಮಗೆ ಶಬ್ದವು ಕೇಳಿಸುವುದು.

ಪ್ರಶ್ನೆ 2. ಪ್ರಾಣಿಗಳು ತಮ್ಮ ಗುಂಪಿನ ಸದಸ್ಯರ ನಡುವೆ ವರ್ತಮಾನವನ್ನು ಕಳಿಸಲು ಅನುಸರಿಸುವ ಯಾವುದಾದರೂ ಎರಡು ವಿಧಾನಗಳನ್ನು ತಿಳಿಸಿ.

ಉತ್ತರ : ಪ್ರಾಣಿಗಳು ತಮ್ಮ ಗುಂಪಿನ ಸದಸ್ಯರ ನಡುವೆ ವರ್ತಮಾನವನ್ನು ಕಳಿಸುವ ವಿಧಾನಗಳು : ಸ್ಪರ್ಶ, ರಾಸಾಯನಿಕ, ದೃಷ್ಟಿ ಮತ್ತು ಶ್ರವಣ ವ್ಯವಸ್ಥೆಗಳು.

ಪ್ರಶ್ನೆ 3. ಗಳಿಸಿದ ನಿರೋಧತೆಯ ವಿಧಗಳನ್ನು ತಿಳಿಸಿ.

ಉತ್ತರ : ಗಳಿಸಿದ ನಿರೋಧತೆಯ ವಿಧಗಳು : 1) ಸಕ್ರಿಯ, 2) ನಿಷ್ಕ್ರಿಯ.

ಪ್ರಶ್ನೆ 4. a) ರಕ್ತ ಹೆಪ್ಪುಗಟ್ಟಲು, b) ದೇಹಕ್ಕೆ ನಿರೋಧತೆಯ ಉಂಟು ಮಾಡಲು ಸಹಾಯ ಮಾಡುವ ರಕ್ತದ ಪ್ಲಾಸ್ಮಾದಲ್ಲಿನ ಪ್ರೋಟೀನುಗಳನ್ನು ಹೆಸರಿಸಿರಿ.

**ಉತ್ತರ :** a) ರಕ್ತ ಹೆಪ್ಪುಗಟ್ಟಲು ಕಾರಣವಾದ ಪ್ರೊಟೀನು : ಫೈಬ್ರಿನೋಜಿನ್.

b) ದೇಹಕ್ಕೆ ನಿರೋಧಶಕ್ತಿಯನ್ನು ಉಂಟು ಮಾಡಲು ಸಹಾಯಮಾಡುವ ಪ್ರೊಟೀನ್ : ಸೀರಮ್ ಗ್ಲಾಬ್ಯುಲಿನ್.

**ಪ್ರಶ್ನೆ 5.** ವೈದ್ಯರು ಚುಚ್ಚುಮದ್ದು ಕೊಡುವ ಮೊದಲು ಅದಕ್ಕೆ ಉಪಯೋಗಿಸುವ ಉಪಕರಣಗಳನ್ನು ನೀರಿನಲ್ಲಿ ಕುದಿಸುತ್ತಾರೆ ಏಕೆ ?

**ಉತ್ತರ :** ಆ ಉಪಕರಣಗಳಿಗೆ ಅಂಟಿಕೊಂಡಿರಬಹುದಾದ ಕ್ರಿಮಿ(ಅಣುಜೀವಿ)ಗಳನ್ನು ಸಂಪೂರ್ಣವಾಗಿ ನಾಶಮಾಡುವುದಕ್ಕಾಗಿ (ಕ್ರಿಮಿ ಶುದ್ಧೀಕರಣ) ಉಪಕರಣಗಳನ್ನು ನೀರಿನಲ್ಲಿ ಚೆನ್ನಾಗಿ ಕುದಿಸುತ್ತಾರೆ.

**ಪ್ರಶ್ನೆ 6.** ಆಂತರಿಕ ಗರ್ಭಧಾರಣೆಯು ಬಾಹ್ಯ ಗರ್ಭಧಾರಣೆಗಿಂತ ಹೇಗೆ ಉತ್ತಮವಾಗಿದೆ ?

**ಉತ್ತರ :** ಆಂತರಿಕ ಗರ್ಭಧಾರಣೆಯು ಸ್ತ್ರೀಯ ಜನನೇಂದ್ರಿಯದಲ್ಲಿ ನಡೆಯುವುದರಿಂದ ಗರ್ಭಾಂಕುರ (ಗರ್ಭಧಾರಣೆ)ವು ನಿಶ್ಚಿತವಿರುತ್ತದೆ. ಅದಕ್ಕೆ ಬಾಹ್ಯ ಪರಿಸರದ ಯಾವುದೇ ಆತಂಕವಿರುವುದಿಲ್ಲ. ಆದರೆ ಬಾಹ್ಯ ಗರ್ಭಧಾರಣೆಗೆ ಹೊರ ಪರಿಸರದ ಆತಂಕ ಉಂಟಾಗುವ ಭಯವಿರುವುದರಿಂದ ಗರ್ಭಧಾರಣೆಯು ಅನಿಶ್ಚಿತವಿರುತ್ತದೆ. ಆದ್ದರಿಂದ ಆಂತರಿಕ ಗರ್ಭಧಾರಣೆಯು ಬಾಹ್ಯ ಗರ್ಭಧಾರಣೆಗಿಂತ ಉತ್ತಮವಾಗಿದೆ.

**ಪ್ರಶ್ನೆ 7.** ಮನುಷ್ಯನ ಹೃದಯವು ಕಪ್ಪೆಯ ಹೃದಯಕ್ಕಿಂತಲೂ ಹೇಗೆ ಅಭಿವೃದ್ಧಿ ಹೊಂದಿದೆ.

**ಉತ್ತರ** ಕಪ್ಪೆಯ ಹೃದಯದಲ್ಲಿ ಮೂರು ಕೋಣೆಗಳಿದ್ದು ಮನುಷ್ಯನ ಹೃದಯದಲ್ಲಿ ನಾಲ್ಕು ಕೋಣೆಗಳಿರುತ್ತವೆ. ಕಪ್ಪೆಯ ಹೃದಯದಲ್ಲಿ ಶುದ್ಧ ಮತ್ತು ಅಶುದ್ಧ ರಕ್ತಗಳು ಮಿಶ್ರವಾಗುತ್ತವೆ. ಆದರೆ ಮನುಷ್ಯನ ಹೃದಯದಲ್ಲಿ ಶುದ್ಧ, ಅಶುದ್ಧ ರಕ್ತಗಳು ಮಿಶ್ರವಾಗುವುದಿಲ್ಲ. ಈ ಕಾರಣಗಳ ಮೂಲಕ ಮನುಷ್ಯನ ಹೃದಯವು ಕಪ್ಪೆಯ ಹೃದಯಕ್ಕಿಂತಲೂ ಅಭಿವೃದ್ಧಿ ಹೊಂದಿದೆ ಎನ್ನಬಹುದು.

**ಪ್ರಶ್ನೆ 8.** ಕೋಳಿಗಳಲ್ಲಿ ಎತ್ತರವಾಗಿರುವುದು ತನಗಿಂತ ಕುಳ್ಳಾದ ಎಲ್ಲಾ ಕೋಳಿಗಳನ್ನೂ ಕುಕ್ಕುವ ಕ್ರಮವು ಏನನ್ನು ಸೂಚಿಸುತ್ತದೆ ?

**ಉತ್ತರ :** ಎತ್ತರ ಕೋಳಿಯು ಕುಳ್ಳಾದ ಕೋಳಿಗಳನ್ನು ಕುಕ್ಕುವ ಕ್ರಮವು ಒಂದು ಪ್ರಭುತ್ವ ಶ್ರೇಣಿಯನ್ನು ಸೂಚಿಸುತ್ತದೆ.

V **ಪ್ರಶ್ನೆ 1.** ಆಸ್ಟ್ರೇಲಿಯದಲ್ಲಿ ಪಾಪಾಸುಕಳ್ಳಿ, ಜೋಳದ ಬೆಳೆಯ ಹತೋಟಿಗೆ, ಬಳಸಿದ ಪತಂಗವನ್ನು ಹೆಸರಿಸಿ.

**ಉತ್ತರ :** ಕ್ಯಾಕ್ಟೊಬ್ಲಾಸ್ಟಿಸ್ ಕ್ಯಾಕ್ಟೊರಮ್.

**ಪ್ರಶ್ನೆ 2.** ''ಡೆಮೋಗ್ರಾಫರ್'' ಎಂದರೆ ಯಾರು ?

**ಉತ್ತರ :** **ಡೆಮೋಗ್ರಾಫರ :** ಜನಸಂಖ್ಯೆಯ ಬಗ್ಗೆ ಅಧ್ಯಯನ ಮಾಡುವ ವ್ಯಕ್ತಿಗೆ ಡೆಮೋಗ್ರಾಫರ ಎನ್ನುವರು.

**ಪ್ರಶ್ನೆ 3.** ಒಂದು ಮಾಂಸಾಹಾರಿ ಪಕ್ಷಿಯನ್ನು ಹೆಸರಿಸಿ.

**ಉತ್ತರ :** ಗಿಡುಗ ಪಕ್ಷಿ.

**ಪ್ರಶ್ನೆ 4.** ''ಜನಸಾಂದ್ರತೆ'' ಎಂದರೇನು ?

**ಉತ್ತರ :** **ಜನಸಾಂದ್ರತೆ :** ಒಂದು ಮೂಲಮಾನ ವಿಸ್ತೀರ್ಣದ ಪ್ರದೇಶದಲ್ಲಿ ಇರುವ ಜನರ ಸಂಖ್ಯೆಯನ್ನು ಜನಸಾಂದ್ರತೆ ಎನ್ನುವರು.

VI ಈ ಕೆಳಗಿನ ಜೋಡಿಗಳ ನಡುವೆ ಇರುವ ಒಂದೊಂದು ವ್ಯತ್ಯಾಸವನ್ನು ತಿಳಿಸಿ.

1) ಅಂಗಾಂಶ ಮತ್ತು ಅಂಗ.

**ಉತ್ತರ :** ಒಂದೇ ರೀತಿಯ ಆಕಾರವನ್ನು ಹೊಂದಿದ, ಒಂದೇ ರೀತಿಯ ಕೆಲಸವನ್ನು ಮಾಡುವ ಜೀವಕೋಶಗಳ ಗುಂಪು ಅಂಗಾಂಶವಾಗಿದೆ.

ಬೇರೆ ಬೇರೆ ಅಂಗಾಂಶಗಳು ಸೇರಿ ಕೆಲವು ನಿರ್ದಿಷ್ಟ ಕಾರ್ಯಗಳನ್ನು ಮಾಡುತ್ತವೆ. ಇಂತಹ ಅಂಗಾಂಶಗಳನ್ನು ಒಟ್ಟಿಗೆ ಅಂಗವೆನ್ನುವರು.

2) ಸುಟ್ಟಗಾಯ ಮತ್ತು ಬೆಂದಗಾಯ.

**ಉತ್ತರ :** ಬೆಂಕಿಯ ಇಲ್ಲವೆ ಕಾಯ್ದ ಲೋಹಗಳ ಸ್ಪರ್ಶದಿಂದ ಆದಂತಹ ಗಾಯಗಳು ಸುಟ್ಟ ಗಾಯಗಳು. ಆದರೆ ಕುದಿಯುವ ನೀರು ಇಲ್ಲವೆ ಹಬೆಯಿಂದಾದ ಗಾಯಗಳು ಬೆಂದ ಗಾಯಗಳು.

3) ಪ್ರಕಂದ ಮತ್ತು ಘನಕಂದ.

**ಉತ್ತರ :** ಶುಂಠಿ ಮತ್ತು ಅರಿಷಿಣ ಮುಂತಾದವುಗಳಲ್ಲಿ ಭೂಮಿಯ ಒಳಭಾಗದ ಕಾಂಡವು ಆಹಾರ ಶೇಖರಣಾಂಗವಾಗಿ ಬದಲಾವಣೆ ಹೊಂದುತ್ತದೆ. ಇದನ್ನು ಪ್ರಕಂದ ಎನ್ನುತ್ತಾರೆ. ಚೂರ್ಣಗಡ್ಡೆ ಮತ್ತು ಆಲೂಗಡ್ಡೆಗಳಲ್ಲಿ ಭೂಮಿಯ ಒಳಭಾಗದಲ್ಲಿರುವ ಕಾಂಡವು ದಪ್ಪನಾಗಿಯೂ ದುಂಡಾಗಿಯೂ ಬೆಳೆಯುತ್ತದೆ. ಇದನ್ನು ಘನಕಂದ ಎನ್ನುವರು.

**VII** ಈ ಕೆಳಗಿನವುಗಳಿಗೆ ವೈಜ್ಞಾನಿಕ ಕಾರಣಗಳನ್ನು ಕೊಡಿ.

**ಪ್ರಶ್ನೆ 1.** ನಾವು ವನಮಹೋತ್ಸವವನ್ನು ಆಚರಿಸಬೇಕು.

**ಉತ್ತರ :** ಸಸ್ಯಗಳು ವಾತಾವರಣದಲ್ಲಿಯ ಆಮ್ಲಜನಕದ ಮಟ್ಟವನ್ನು ಕಾಯ್ದುಕೊಳ್ಳುತ್ತವೆ. ಅವು ದ್ವಿತಿಸಂಶ್ಲೇಷಣೆಯಿಂದ ಆಹಾರವನ್ನು ತಯಾರಿಸುವುದಲ್ಲದೆ ಗಾಳಿಯಲ್ಲಿ ಸ್ವತಂತ್ರವಾದ ಆಮ್ಲಜನಕವನ್ನು ಸೇರಿಸುವವು. ಗಾಳಿಯಲ್ಲಿಯ ಇಂಗಾಲದ ಡೈಆಕ್ಸೈಡ್‌ನ ಪ್ರಮಾಣವನ್ನು ಕಡಿಮೆ ಮಾಡುವವು, ಸಸ್ಯಗಳು ಪ್ರಾಣಿಗಳ ಆಹಾರದ ಒಂದು ಮುಖ್ಯ ಘಟಕವಾಗಿರುವವು. ಅಲ್ಲದೆ ಮಳೆಯ ಪ್ರಮಾಣವು ಸಸ್ಯಗಳ (ಮರಗಳ)ನ್ನೆ ಅವಲಂಬಿಸಿರುವುದರಿಂದ ಭೂಮಿಯ ಮೇಲೆ ಸಸ್ಯಗಳ ಪ್ರಮಾಣವನ್ನು ಸಮತೋಲವಾಗಿಡಲು ನಾವು ವನಮಹೋತ್ಸವವನ್ನು ಆಚರಿಸಬೇಕು.

**ಪ್ರಶ್ನೆ 2.** ಹಿಮಾಲಯ ಪರ್ವತ ಶಿಖರಗಳ ತುದಿಯಲ್ಲಿ ಸಸ್ಯವರ್ಗವಿರುವುದಿಲ್ಲ.

**ಉತ್ತರ :** ಸಸ್ಯಗಳ ಬೆಳವಣಿಗೆಗೆ ಮಣ್ಣು, ನೀರು ಮತ್ತು ಗಾಳಿ ಅವಶ್ಯ. ಹಿಮಾಲಯ ಶಿಖರಗಳ ತುದಿಯಲ್ಲಿ ಈ ಮೂರೂ ವಸ್ತುಗಳ ಅಭಾವವಿರುತ್ತದೆ. ಅಂದರೆ ಭೂಮಿ (ಮಣ್ಣು)ಯನ್ನು ಮುಂಜುಗಡ್ಡೆಯು ಆವರಿಸಿದೆ. ನೀರು ಘನ ರೂಪದಲ್ಲಿದೆ. ಗಾಳಿಯು ವಿರಳವಾಗಿದೆ. ಸಾಕಷ್ಟು (ಅವಶ್ಯವಾದಷ್ಟು) ಆಮ್ಲಜನಕವಿಲ್ಲ, ಶಾಖವಿಲ್ಲ. ಈ ಕಾರಣಗಳಿಂದ ಹಿಮಾಲಯ ಪರ್ವತ ಶಿಖರಗಳ ತುದಿಯಲ್ಲಿ ಸಸ್ಯವರ್ಗವಿರುವುದಿಲ್ಲ.

**VIII** ಈ ಕೆಳಗಿನವುಗಳನ್ನು ಹೆಸರಿಸಿ.

1) ಭೂಕಂಪವನ್ನು ಪತ್ತೆಮಾಡಲು ಉಪಯೋಗಿಸುವ ಉಪಕರಣ.

**ಉತ್ತರ :** ಸೆಸ್ಮೋಗ್ರಾಫ್.

**ಪ್ರಶ್ನೆ 2.** ಸಸ್ಯ ಮತ್ತು ಪ್ರಾಣಿಗಳ ಆಕಾರ ಮತ್ತು ಹೊರರಚನೆಯನ್ನು ಅಭ್ಯಸಿಸುವ ಜೀವಶಾಸ್ತ್ರದ ಭಾಗ.

**ಉತ್ತರ :** ಆಕೃತಿ ರಚನಾ ಶಾಸ್ತ್ರ.

**ಪ್ರಶ್ನೆ 3.** ಪ್ರಾಣಿಗಳ ಬೇಟೆಯನ್ನು ನಿಷೇಧಿಸಿರುವ ಕಾಡಿನ ಭಾಗ.

**ಉತ್ತರ :** ರಕ್ಷಣಾ ಕೇಂದ್ರ (ಸ್ಯಾಂಕ್ಚುಯರಿ).

**ಪ್ರಶ್ನೆ 4.** ಅತಿ ಪ್ರಾಚೀನ ಪಳೆಯುಳಿಕೆ ಹಕ್ಕಿ.

**ಉತ್ತರ :** ಆರ್ಕಿಯೋಪ್ಟೆರಿಕ್ಸ್.

---

# ವಿಜ್ಞಾನ

## ಅಕ್ಟೋಬರ 1987 — 1 ನೇ ಪತ್ರಿಕೆ

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : $2\frac{1}{2}$ ಗಂಟೆ ] [ ಗುಣಗಳು : 65

**ಪ್ರಶ್ನೆ 1.** a) ಪರ್ಯಾಯ ವಿದ್ಯುತ್ಪ್ರವಾಹ ಎಂದರೇನು ? ಪರ್ಯಾಯ ವಿದ್ಯುತ್‌ಜನಕದ ಅಂದವಾದ ಚಿತ್ರವನ್ನು ಬರೆದು ಭಾಗಗಳನ್ನು ಹೆಸರಿಸಿ. 4

**ಉತ್ತರ :** ಪರ್ಯಾಯ ವಿದ್ಯುತ್ ಪ್ರವಾಹ : ಬಾಹ್ಯ ಮಂಡಲದಲ್ಲಿ ಹರಿಯುವ ವಿದ್ಯುತ್ಪ್ರವಾಹವು ಒಂದು ಪರಿಭ್ರಮಣದ ಪ್ರಥಮಾರ್ಧದಲ್ಲಿ ಒಂದು ದಿಕ್ಕಿನಲ್ಲಿಯೂ, ದ್ವಿತೀಯಾರ್ಧದಲ್ಲಿ ಅದರ ವಿರುದ್ಧ ದಿಕ್ಕಿನಲ್ಲಿಯೂ ಹರಿಯುತ್ತಿದ್ದರೆ, ಅಂತಹ ವಿದ್ಯುತ್ಪ್ರವಾಹವನ್ನು ಪರ್ಯಾಯ ವಿದ್ಯುತ್ಪ್ರವಾಹ ಎನ್ನುವರು.

b) "ಕಾಂತೀಯ ವಸ್ತುಗಳು" ಮತ್ತು "ಅಕಾಂತೀಯ ವಸ್ತುಗಳು" ಈ ಪದಗಳನ್ನು ವಿವರಿಸಿ. ಅವುಗಳಿಗೆ ಒಂದೊಂದು ಉದಾಹರಣೆಯನ್ನು ಕೊಡಿ. 2

**ಉತ್ತರ :** ಕಾಂತತಾ ವಸ್ತು : ಅಯಸ್ಕಾಂತದಿಂದ ಆಕರ್ಷಿಸಲ್ಪಡುವ ಇಲ್ಲವೆ ಅಯಸ್ಕಾಂತಗಳನ್ನು ಉತ್ಪಾದಿಸಲು ಉಪಯೋಗಿಸಲ್ಪಡುವ ವಸ್ತುಗಳನ್ನು ಕಾಂತತಾವಸ್ತು ಎನ್ನುವರು. ಉದಾ : ಕಬ್ಬಿಣ, ಕೊಬಾಲ್ಟ್ ಮತ್ತು ನಿಕ್ಕಲ್,

ಕಾಂತತಾಹೀನ ವಸ್ತು : ಅಯಸ್ಕಾಂತದಿಂದ ಆಕರ್ಷಿಸಲ್ಪಡದ ವಸ್ತುವನ್ನು ಕಾಂತತಾಹೀನ ವಸ್ತು ಎನ್ನುವರು. ಉದಾ: ತಾಮ್ರ, ಹಿತ್ತಾಳಿ, ಅಲ್ಯುಮಿನಿಯಂ, ಗಾಜು ಮುಂತಾದವು.

c) ಮಿಂಚು ಎಂದರೇನು ?

**ಉತ್ತರ :** ಪರಸ್ಪರ ವಿರುದ್ಧವಾದ ವಿದ್ಯುದಾವೇಶ ಹೊಂದಿದ ಎರಡು ಮೋಡಗಳು ಸಮೀಪಬಂದಾಗ, ವಿದ್ಯುದಾವೇಶ

ಗಳು ಒಂದರಿಂದ ಇನ್ನೊಂದಕ್ಕೆ ವೇಗವಾಗಿ ನೆಗೆಯುತ್ತವೆ. ಆಗ ಉಂಟಾಗುವ ದೊಡ್ಡ ಕಿಡಿ(ವಿದ್ಯುಚ್ಛಾಪ)ಯನ್ನು ಮಿಂಚು ಎನ್ನುವರು.

**ಪ್ರಶ್ನೆ 2.** a) ವಿದ್ಯುದ್ವಿಶ್ಲೇಷ್ಯಗಳು ಮತ್ತು ಅವಿದ್ಯುದ್ವಿಶ್ಲೇಷ್ಯಗಳು ಎಂದರೇನು ? ಪ್ರಬಲ ವಿದ್ಯುದ್ವಿಶ್ಲೇಷ್ಯಗಳಿಗೆ ಎರಡು ಉದಾಹರಣೆಗಳನ್ನು ಕೊಡಿ. ಕೈಗಾರಿಕೆಯಲ್ಲಿ ವಿದ್ಯುದ್ವಿಶ್ಲೇಷಣದ ವಿವಿಧ ಅನ್ವಯಗಳನ್ನು ಬರೆಯಿರಿ. 4

**ಉತ್ತರ :** ವಿದ್ಯುದ್ವಿಶ್ಲೇಷ್ಯಗಳು : ದ್ರಾವಣದ ರೂಪದಲ್ಲಿ ಇಲ್ಲವೆ ದ್ರವ ರೂಪದಲ್ಲಿ ವಿದ್ಯುದ್ವಾಹಕತೆಯನ್ನು ಪಡೆದ ಸಂಯುಕ್ತಗಳನ್ನು ವಿದ್ಯುದ್ವಿಶ್ಲೇಷ್ಯಗಳೆನ್ನುವರು.

ಅವಿದ್ಯುದ್ವಿಶ್ಲೇಷ್ಯಗಳು : ದ್ರಾವಣದ ರೂಪದಲ್ಲಿ ಇಲ್ಲವೆ ದ್ರವರೂಪದಲ್ಲಿ ವಿದ್ಯುದ್ವಾಹಕತೆಯನ್ನು ಪಡೆಯದ ಸಂಯುಕ್ತಗಳನ್ನು ಅವಿದ್ಯುದ್ವಿಶ್ಲೇಷ್ಯಗಳೆನ್ನುವರು.

ಪ್ರಬಲ ವಿದ್ಯುದ್ವಿಶ್ಲೇಷ್ಯಗಳು : 1) ಸೋಡಿಯಮ್ ಕ್ಲೋರೈಡ್ ($NaCl$), 2) ಸೋಡಿಯಮ್ ಹೈಡ್ರಾಕ್ಸೈಡ್ ($NaOH$), 3) ಪೊಟ್ಯಾಸಿಯಮ್ ನೈಟ್ರೇಟ್ ($KNO_3$)

ಕೈಗಾರಿಕೆಯಲ್ಲಿ ವಿದ್ಯುದ್ವಿಶ್ಲೇಷಣದ ಅನ್ವಯಗಳು: 1) ಲೋಹಗಳ ಉತ್ಪಾದನೆ, 2) ಲೋಹಗಳ ಶುದ್ಧೀಕರಣ, 3) ವಿದ್ಯುಲ್ಲೇಪನ, 4) ವಿದ್ಯುನ್ಮುದ್ರಣ ಮುಂ.

b) ಆವರ್ತಕ ಕೋಷ್ಟಕದಲ್ಲಿ (Periodic table) ಇರುವ ನಾಲ್ಕು ಹ್ಯಾಲೋಜನ್‌ಗಳನ್ನು ಹೆಸರಿಸಿ.

**ಉತ್ತರ :** 1) ಫ್ಲೋರಿನ್, 2) ಕ್ಲೋರಿನ್, 3) ಬ್ರೋಮಿನ್ ಮತು 4) ಅಯೋಡಿನ್.

c) ಈ ಕೆಳಗಿನವುಗಳಿಗೆ ರಸಾಯನ ಸೂತ್ರವನ್ನು ಬರೆಯಿರಿ.

1) ನೀರು, 2) ಇಂಗಾಲದ ಡೈಆಕ್ಸೈಡ್.

**ಉತ್ತರ :** 1) ನೀರು : $H_2O$, 2) ಇಂಗಾಲದ ಡೈಆಕ್ಸೈಡ್ : $CO_2$.

**ಪ್ರಶ್ನೆ 3.** a) ಬೆಸಿಮರ್ ಪರಿವರ್ತಕದ ಅಂದವಾದ ಚಿತ್ರವನ್ನು ಬರೆದು ಭಾಗಗಳನ್ನು ಹೆಸರಿಸಿ. ಯಾವ ಉದ್ದೇಶಕ್ಕಾಗಿ ಇದನ್ನು ಉಪಯೋಗಿಸಲಾಗುತ್ತದೆ ? 4

**ಉತ್ತರ :** ಬೆಸಿಮರ್ ಪರಿವರ್ತಕ.




ಭಾಗಗಳು : 1] ಕಶ್ಮಲಗಳ ದಹನದಿಂದಾದ ಉರಿ
2] ಸಿಲಿಕಾ ಅಸ್ತರಿಯುಳ್ಳ ಉಕ್ಕಿನ ಕವಚ.
3] ಟೊಳ್ಳಾದ ಅಡ್ಡಪಟ್ಟಿ ತಿರುಗಣೆ
4] ದ್ರವಿತ ಬೀಡು ಕಬ್ಬಿಣ
5] ಟ್ಯುಯರುಗಳು
6] ತಂಪು ಮತ್ತು ಸಂಕುಚಿತ ಗಾಳಿ

ಬೆಸಿಮರ್ ಪರಿವರ್ತಕವನ್ನು ಬೀಡು ಕಬ್ಬಿಣದಿಂದ ಉತ್ತಮವಾದ ಉಕ್ಕನ್ನು ತಯಾರಿಸುವುದಕ್ಕಾಗಿ ಉಪಯೋಗಿಸಲಾಗುತ್ತದೆ.

b) ಉತ್ಪತನ ಎಂದರೇನು ? ಇದಕ್ಕೆ ಎರಡು ಉದಾಹರಣೆಗಳನ್ನು ಕೊಡಿ.

**ಉತ್ತರ :** ಉತ್ಪತನ : ಒಂದು ಘನವಸ್ತುವನ್ನು ಕಾಯಿಸಿದರೆ, ಅದು ನೇರವಾಗಿ ಬಾಷ್ಪರೂಪವನ್ನು ಹೊಂದಿದು, ಬಾಷ್ಪರೂಪದಲ್ಲಿರುವ ವಸ್ತುವನ್ನು ತಂಪುಗೊಳಿಸಿದಾಗ ಅದು ನೇರವಾಗಿ ಘನರೂಪವನ್ನು ಹೊಂದಿದರೆ ಈ ಕ್ರಿಯೆಯನ್ನು ಉತ್ಪತನ ಅಥವಾ ಕರ್ಪೂರೀಕರಣ ಎನ್ನುವರು.

ಉದಾಹರಣೆಗಳು : 1) ಅಯೋಡಿನ್, 2) ಅಮೋನಿಯಮ್ ಕ್ಲೋರೈಡ್.

c) ಪ್ರಯೋಗ ಶಾಲೆಯಲ್ಲಿ ಲೋಹದ ಲವಣಗಳನ್ನು ಕಂಡುಹಿಡಿಯಲು ಯಾವ ಅನಿಲವನ್ನು ಉಪಯೋಗಿಸುವರು? 1

**ಉತ್ತರ :** ಹೈಡ್ರೋಜನ್ ಸಲ್ಫೈಡ್ (ಜಲಜನಕದ ಸಲ್ಫೈಡ್) $H_2S$.

**ಪ್ರಶ್ನೆ 4.** a) ತಾಮ್ರದ ಓಲ್ಟಾಮೀಟರಿನ ಅಂದವಾದ ಚಿತ್ರವನ್ನು ಬರೆದು ಅದರ ಭಾಗಗಳನ್ನು ಹೆಸರಿಸಿ. ಋಣಾಗ್ರ ಫಲಕದಲ್ಲಿ ವಿದ್ಯುತ್ ವಿಶ್ಲೇಷಣಾ ಕಾರ್ಯದಲ್ಲಿ ದ್ರವ್ಯರಾಶಿಯು ಏಕೆ ಹೆಚ್ಚಾಗುತ್ತದೆ ?

**ಉತ್ತರ :** ತಾಮ್ರದ ಓಲ್ಟಾಮೀಟರ್ :




ಭಾಗಗಳು : 1) ಗಾಜಿನ ಪಾತ್ರೆ
2) ತಾಮ್ರದ ಸಲ್ಫೇಟ್ ದ್ರಾವಣ ವಿದ್ಯುದ್ವಿಶ್ಲೇಷ್ಯ.
3) ತಾಮ್ರದ ಋಣಾಗ್ರ
4) ತಾಮ್ರದ ಧನಾಗ್ರ
5) ರಿಯೋಸ್ಟಾಟ್
6) ವಿದ್ಯುತ್ಕೋಶ
7) ಸ್ವಿಚ್

ವಿದ್ಯುತ್ ವಿಶ್ಲೇಷಣಾ ಕಾರ್ಯ ನಡೆದಾಗ ಧನ ವಿದ್ಯುದಾವೇಶ ಹೊಂದಿದ ತಾಮ್ರದ ಅಯಾನುಗಳು ಋಣಾಗ್ರದ ಸಂಪರ್ಕ ಹೊಂದಿ ಅಲ್ಲಿರುವ ಎಲೆಕ್ಟ್ರಾನುಗಳಿಗೆ ತಮ್ಮಲ್ಲಿಯ ಧನವಿದ್ಯುದಾವೇಶವನ್ನು ಕೊಟ್ಟು, ವಿದ್ಯುದಾವೇಶ ರಹಿತ ತಾಮ್ರದ ಕಣಗಳು ಋಣಾಗ್ರದ ಮೇಲೆ ಸಂಗ್ರಹವಾಗುವವು. ಆದ್ದರಿಂದ ಋಣಾಗ್ರ ಫಲಕದ ದ್ರವ್ಯರಾಶಿಯು ಹೆಚ್ಚಾಗುವುದು.

b) ನ್ಯೂಟನ್ನನ ಗುರುತ್ವಾಕರ್ಷಣ ನಿಯಮವನ್ನು ತಿಳಿಸಿ. 2

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 8 (a) ನೋಡಿ.

c) ಹಾಲಿನ ಪ್ರಬಲತೆಯನ್ನು ಕಂಡುಹಿಡಿಯಲು ಉಪಯೋಗಿಸುವ ಉಪಕರಣ ಯಾವುದು ? 1

**ಉತ್ತರ :** ಲ್ಯಾಕ್ಟೋಮೀಟರ್ (ಕ್ಷೀರಮಾಪಕ)

**ಪ್ರಶ್ನೆ 5.** a) ಟಿಂಡಾಲ್ ಪರಿಣಾಮ ಎಂದರೇನು ? 2

**ಉತ್ತರ :** ಟಿಂಡಾಲ್ ಪರಿಣಾಮ : ಕಲಾಯ್ಡ್ ಕಣಗಳಿಂದಾಗುವ ಬೆಳಕಿನ ಚದುರುವಿಕೆಯನ್ನು ಟಿಂಡಾಲ್ ಪರಿಣಾಮ ಎನ್ನುವರು.

b) ಪರಮಾಣುವು ವಿದ್ಯುತ್ ತಟಸ್ಥವಾಗಿಯೇ ಇರುತ್ತದೆ ಏಕೆ ? 1

**ಉತ್ತರ :** ಪರಮಾಣುವಿನಲ್ಲಿ ಎಲೆಕ್ಟ್ರಾನ್ ಮತ್ತು ಪ್ರೋಟಾನುಗಳ ಸಂಖ್ಯೆಯು ಪರಸ್ಪರ ಸಮನಾಗಿರುವುದರಿಂದ ಪರಮಾಣುವು ವಿದ್ಯುತ್ ತಟಸ್ಥವಾಗಿರುತ್ತದೆ.

**ಪ್ರಶ್ನೆ 6.** a) ಪ್ರಯೋಗ ಶಾಲೆಯಲ್ಲಿ ಉಪಯೋಗಿಸುವ ಗಾಜಿನ ಉಪಕರಣಗಳನ್ನು ಯಾವ ವಿಧವಾದ ಗಾಜಿನಿಂದ ತಯಾರಿಸುತ್ತಾರೆ ? 1

**ಉತ್ತರ :** ಪ್ರಯೋಗ ಶಾಲೆಯಲ್ಲಿ ಉಪಯೋಗಿಸುವ ಗಾಜಿನ ಉಪಕರಣಗಳನ್ನು ಬೊರೊಸಿಲಿಕೇಟ್ ಗಾಜು ಅಥವಾ ಪೈರೆಕ್ಸ್ ಗಾಜಿನಿಂದ ತಯಾರಿಸುತ್ತಾರೆ.

b) ದ್ರವರಾಜ ಎಂದರೇನು ? ಅದರ ಉಪಯೋಗವನ್ನು ತಿಳಿಸಿ. 2

**ಉತ್ತರ :** ದ್ರವರಾಜ : ಪ್ರಬಲ ಹೈಡ್ರೋಕ್ಲೋರಿಕ್ ಆಮ್ಲ ಮತ್ತು ಪ್ರಬಲ ನೈಟ್ರಿಕ್ ಆಮ್ಲಗಳನ್ನು 3:1 ಪ್ರಮಾಣದಲ್ಲಿ ಸೇರಿಸಿ ತಯಾರಿಸಿದ ಮಿಶ್ರಣವನ್ನು ದ್ರವರಾಜ ಎನ್ನುವರು.

ಚಿನ್ನವನ್ನು ಶುದ್ಧಗೊಳಿಸಲು ದ್ರವರಾಜವನ್ನು ಉಪಯೋಗಿಸುವರು.

**ಪ್ರಶ್ನೆ 7.** a) ಕ್ಲೋರಿನ್ ಮತ್ತು ಮಿಥೇನ್‌ಗಳ ರಾಸಾಯನಿಕ ಕ್ರಿಯೆಯಲ್ಲಿ ಉಂಟಾಗುವ ಪ್ರತಿಸ್ಥಾಪಿತ ಸಂಯುಕ್ತಗಳನ್ನು ಹೆಸರಿಸಿ. 2

**ಉತ್ತರ :** ಕ್ಲೋರಿನ್ ಮತ್ತು ಮಿಥೇನ್‌ಗಳ ಕ್ರಿಯೆಯಿಂದ ಉಂಟಾಗುವ ಪ್ರತಿಸ್ಥಾಪಿತ ಸಂಯುಕ್ತಗಳು : 1) ಮೀಥೈಲ್ ಕ್ಲೋರೈಡ್ : $CH_3Cl$. 2) ಡೈಕ್ಲೋರೊ ಮೀಥೇನ್ : $CH_2Cl_2$. 3) ಕ್ಲೋರೊಫಾರ್ಮ್ ಅಥವಾ ಟ್ರೈಕ್ಲೋರೊ ಮಿಥೇನ್ : $CHCl_3$ ಮತ್ತು 4) ಕಾರ್ಬನ್ ಟೆಟ್ರಾಕ್ಲೋರೈಡ್ : $CCl_4$.

b) ಇಥಲೀನಿನ ರಚನಾತ್ಮಕ ಸೂತ್ರವನ್ನು ಬರೆಯಿರಿ. 1

**ಉತ್ತರ :** H—C=C—H ಇಥಲೀನ್

     |   |

     H   H

**ಪ್ರಶ್ನೆ 8.** a) ಬಹುಶರ್ಕರಗಳು ಎಂದರೇನು ? ಇವುಗಳ ಎರಡು ಉದಾಹರಣೆ ಕೊಡಿ. 2

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 13 (a)ನೋಡಿ.

b) ಕೊಬ್ಬನ್ನು ಪರೀಕ್ಷಿಸುವ ಒಂದು ಪ್ರಯೋಗವನ್ನು ತಿಳಿಸಿ. 1

**ಉತ್ತರ :** ಅಕ್ರೋಲಿನ್ ಪ್ರಯೋಗ ಅಥವಾ ಸೂಡಾನ್ III ಪರೀಕ್ಷೆ.

**ಪ್ರಶ್ನೆ 9.** a) ತಾಮ್ರದ ಮುಖ್ಯವಾದ ಮಿಶ್ರಲೋಹಗಳನ್ನು ತಿಳಿಸಿರಿ. 2

**ಉತ್ತರ :** ತಾಮ್ರದ ಮುಖ್ಯವಾದ ಮಿಶ್ರಲೋಹಗಳು : 1) ಹಿತ್ತಾಳೆ, 2) ಕಂಚು, 3) ಗನ್‌ಮೆಟಲ್, 4) ಬೆಲ್‌ಮೆಟಲ್, 5) ಜರ್ಮನ್ ಸಿಲ್ವರ್.

b) ಸಕ್ಕರೆಯಿಂದ ಆಲ್ಕೋಹಾಲನ್ನು ಹೇಗೆ ತಯಾರಿಸುವಿರಿ ? 1

**ಉತ್ತರ :** ಕಾಕಂಬಿಗೆ ನೀರು ಸೇರಿಸಿ ಸುಮಾರು 10% ಸಕ್ಕರೆಯ ದ್ರಾವಣ ತಯಾರಿಸುತ್ತಾರೆ. ಇದಕ್ಕೆ ಸ್ವಲ್ಪ ದುರ್ಬಲ ಗಂಧಕಾಮ್ಲವನ್ನು ಸೇರಿಸಿ ಆಮ್ಲೀಯಗೊಳಿಸುತ್ತಾರೆ. ಈ ದ್ರಾವಣವನ್ನು ಗಾಳಿಯ ಸಂಪರ್ಕವಿಲ್ಲದ ಪಾತ್ರೆಯಲ್ಲಿ ಸುಮಾರು 35°c ಉಷ್ಣತೆಯಲ್ಲಿ ಇರಿಸುತ್ತಾರೆ. ಇದಕ್ಕೆ ಯೀಸ್ಟ್ ಬೆರಿಸುವರು. ಆಗ ಹುದುಗುವಿಕೆ ಪ್ರಾರಂಭವಾಗುವುದು. ಆಗ ಸಕ್ಕರೆಯು ಜಲವಿಶ್ಲೇಷಣೆ ಹೊಂದಿ ಗ್ಲೂಕೋಸ್ ಮತ್ತು ಫ್ರುಕ್ಟೋಸ್ ಉಂಟಾಗುವುವು. ನಂತರ ಗ್ಲೂಕೋಸ್ ಮತ್ತು ಮತ್ತು ಫ್ರುಕ್ಟೋಸ್‌ಗಳು ವಿಭಜನೆ ಹೊಂದಿ ಈಥೈಲ್ ಆಲ್ಕೋಹಾಲ್ ಮತ್ತು ಇಂಗಾಲದ ಡೈಆಕ್ಸೈಡ್‌ಗಳು ಉಂಟಾಗುವವು. ಹುದುಗಿಸಿದ ದ್ರವವನ್ನು ಅಂಶೀಯ ಭಟ್ಟಿ ಇಳಿಸುವುದರಿಂದ ಆಲ್ಕೋಹಾಲನ್ನು ಬೇರ್ಪಡಿಸುವರು.

**ಪ್ರಶ್ನೆ 10.** a) ಗ್ರಾಫೈಟಿನ ಮುಖ್ಯವಾದ ಮೂರು ಗುಣಗಳನ್ನು ತಿಳಿಸಿ ಮತ್ತು ಅದರ ಮುಖ್ಯವಾದ ಉಪಯೋಗ ವೇನು ? 2

**ಉತ್ತರ :** ಗ್ರಾಫೈಟಿನ ಮುಖ್ಯವಾದ ಗುಣಗಳು : 1] ವಿದ್ಯುತ್‌ನ ಸುವಾಹಕ, 2] ಶಾಖದ ಸುವಾಹಕ, 3] ಮಾರ್ಜಕ ಗುಣವಿದೆ, 4] ವಿಶಿಷ್ಟ ಹೊಳಪು ಇರುತ್ತದೆ, 5] ಸಾ. ಸಾಂದ್ರತೆ 2.2 ಗ್ರಾಂ/ಘ. ಸೆಂ. ಮೀ.

**ಗ್ರಾಫೈಟಿನ ಉಪಯೋಗ :** ವಿದ್ಯುದಾಗ್ರಗಳನ್ನು ತಯಾರಿಸಲು ಉಪಯೋಗಿಸುವರು.

b] ಪೊಟ್ಯಾಸಿಯಂ ಕ್ಲೋರೇಟಿನಿಂದ ಆಮ್ಲಜಕವನ್ನು ತಯಾರಿಸುವಾಗ ಉಪಯೋಗಿಸುವ ವೇಗವರ್ಧಕವನ್ನು ಹೆಸರಿಸಿ. 1

**ಉತ್ತರ :** ಮ್ಯಾಂಗನೀಸ್ ಡೈಆಕ್ಸೈಡ್.

**ಪ್ರಶ್ನೆ 11.** a] ವಿದ್ಯುತ್ ಅಂಶಗಳಿಗೆ ಸಂಬಂಧಿಸಿದಂತೆ ಕೂಲಾಂಬನ ನಿಯಮವನ್ನು ತಿಳಿಸಿ.

ಉತ್ತರಕ್ಕೆ ಎಪ್ರಿಲ್ 1987 ರ ಪ್ರಶ್ನೆ 2 [b] ನೋಡಿ.

b] ಸಾಮಾನ್ಯ ಲೋಲಕದ ಉದ್ದ, ಆವರ್ತಕಾಲ ಮತ್ತು ಗುರುತ್ವ ವೇಗೋತ್ಕರ್ಷ ಇವುಗಳಿಗೆ ಇರುವ ಸಂಬಂಧವನ್ನು ಸೂಚಿಸುವ ಸೂತ್ರವನ್ನು ಬರೆಯಿರಿ. 1

**ಉತ್ತರ :** $T = 2\pi \sqrt{\frac{l}{g}}$

ಇಲ್ಲಿ T=ಆವರ್ತಕಾಲ

l=ಲೋಲಕದ ಉದ್ದ

g=ಗುರುತ್ವ ವೇಗೋತ್ಕರ್ಷ

**ಪ್ರಶ್ನೆ 12.** a] ಬಲಗಳ ಸಮಾಂತರ ಚತುರ್ಭುಜದ ನಿಯಮವನ್ನು ತಿಳಿಸಿ. 2

**ಉತ್ತರ : ಬಲಗಳ ಸಮಾಂತರ ಚತುರ್ಭುಜ ನಿಯಮ :** ಒಂದು ಬಿಂದುವಿನಲ್ಲಿ ವರ್ತಿಸುತ್ತಿರುವ ಎರಡು ಬಲಗಳನ್ನು ಒಂದು ಸಮಾಂತರ ಚತುರ್ಭುಜದ ಎರಡು ಪಾರ್ಶ್ವ ಬಾಹುಗಳಿಂದ ಸೂಚಿಸಬಹುದಾದರೆ, ಅವುಗಳ ಫಲಿತ ಬಲವನ್ನು ಅದೇ ಬಿಂದುವಿನಿಂದ ಎಳೆದ ಕರ್ಣವು ಸೂಚಿಸುತ್ತದೆ.

b] ಬೆಳಕಿನ ವಿಭಜನೆ ಎಂದರೇನು ?

**ಉತ್ತರ :** ಬಿಳಿಯ ಬೆಳಕು ಪಟ್ಟಕದಿಂದ ನಿರ್ಗಮಿಸುವಾಗ ಏಳುಬಣ್ಣಗಳಲ್ಲಿ ವಿಭಜನೆ ಹೊಂದುವುದನ್ನು ಬೆಳಕಿನ ವಿಭಜನೆ ಎನ್ನುವರು.

**ಪ್ರಶ್ನೆ 13.** a] ಸೂಚಕ ಎಂದರೇನು ? ಪ್ರಯೋಗ ಶಾಲೆಯಲ್ಲಿ ಬಳಸುವ ಮುಖ್ಯವಾದ ಎರಡು ಸೂಚಕಗಳನ್ನು ತಿಳಿಸಿ. 2

ಉತ್ತರ : ಸೂಚಕ : ಆಮ್ಲ ಮತ್ತು ಪ್ರತ್ಯಾಮ್ಲಗಳನ್ನು ಗುರುತಿಸಲು ಉಪಯೋಗಿಸುವ ವಸ್ತುವನ್ನು ಸೂಚಕ ಎನ್ನುವರು.

ಪ್ರಯೋಗ ಶಾಲೆಯಲ್ಲಿ ಉಪಯೋಗಿಸುವ ಮುಖ್ಯವಾದ ಎರಡು ಸೂಚಕಗಳು : 1) ಲಿಟ್ಮಸ್ (ಪೇಪರ್ ಇಲ್ಲವೆ ದ್ರವ) 2) ಫೀನಾಲ್ ಥೆಲಿನ್.

b) ಸಾವಯವ ರಸಾಯನ ಶಾಸ್ತ್ರ ಎಂದರೇನು ? 1

ಉತ್ತರ : ಇಂಗಾಲದ ಸಂಯುಕ್ತ ವಸ್ತುಗಳಿಗೆ ಸಂಬಂಧಿಸಿದ ರಸಾಯನ ಶಾಸ್ತ್ರವನ್ನು ಸಾವಯವ ರಸಾಯನ ಶಾಸ್ತ್ರ ಎನ್ನುವರು.

ಪ್ರಶ್ನೆ 14. a) ತಾಮ್ರದ ಸಲ್ಫೇಟ್ ಹರಳುಗಳನ್ನು ಪ್ರಬಲ ಗಂಧಕಾಮ್ಲದಲ್ಲಿ ಹಾಕಿದಾಗ ಏನಾಗುತ್ತದೆ ? ಈ ರೀತಿ ಆಗುವ ಬದಲಾವಣೆಗೆ ಕಾರಣವನ್ನು ತಿಳಿಸಿ. 2

ಉತ್ತರ : ತಾಮ್ರದ ಸಲ್ಫೇಟ್‌ನ ಹರಳುಗಳನ್ನು ಪ್ರಬಲ ಗಂಧಕಾಮ್ಲದಲ್ಲಿ ಹಾಕಿದಾಗ ಹರಳುಗಳು ನೀಲಿಬಣ್ಣವನ್ನು ಕಳೆದುಕೊಳ್ಳುವುದಲ್ಲದೆ ಶಾಖವು ಬಿಡುಗಡೆಯಾಗುವುದು.

ಈ ರೀತಿ ಆಗಲು ಕಾರಣವೇನೆಂದರೆ ತಾಮ್ರದ ಸಲ್ಫೇಟ್‌ನ ಹರಳುಗಳಲ್ಲಿ 5 ಹರಳು ಜಲಾಣುಗಳು (water of crystallisation) ಇರುತ್ತವೆ. ಗಂಧಕಾಮ್ಲವು ಈ ಜಲಾಣುಗಳನ್ನು ಶೋಷಿಸಿಕೊಂಡು ಅವುಗಳೊಡನೆ ವರ್ತಿಸುವುದು. ಆದರಿಂದ ಶಾಖವು ಬಿಡುಗಡೆಯಾಗುವುದು.

b) ದ್ರವ್ಯದ ನಾಲ್ಕನೇ ಸ್ಥಿತಿ ಯಾವುದು ? 1

ಉತ್ತರ : ಪ್ಲಾಸ್ಮಾಸ್ಥಿತಿ.

ಪ್ರಶ್ನೆ 15. a) ಐನ್‌ಸ್ಟೈನ್‌ನ ದ್ರವ್ಯರಾಶಿ ಮತ್ತು ಶಕ್ತಿ ಸಂಬಂಧದ ಸಮೀಕರಣವನ್ನು ಬರೆಯಿರಿ. 2

ಉತ್ತರ : ಸಮೀಕರಣ $E=mC_2$.

ಇಲ್ಲಿ $E$=ಶಕ್ತಿ, $m$=ದ್ರವ್ಯರಾಶಿ, $C$=ಬೆಳಕಿನ ವೇಗಕ್ಕೆ ಸಮನಾದ ಸಂಖ್ಯೆ.

b) ಕೊಠಡಿಯ ಉಷ್ಣತೆಯಲ್ಲಿ ದ್ರವರೂಪದಲ್ಲಿರುವ ಲೋಹವನ್ನು ಹೆಸರಿಸಿ. 1

ಉತ್ತರ : ಪಾದರಸ.

ಪ್ರಶ್ನೆ 16. a) ನಕ್ಷತ್ರ ಮತ್ತು ಗ್ರಹಗಳಿಗೆ ಇರುವ ವ್ಯತ್ಯಾಸಗಳನ್ನು ತಿಳಿಸಿ.

ಉತ್ತರ : ವ್ಯತ್ಯಾಸ-

| | ನಕ್ಷತ್ರ | ಗ್ರಹ |
|---|---|---|
| 1) | ಸ್ವ ಪ್ರಕಾಶಗಳು | ಪರಪ್ರಕಾಶಗಳು |
| 2) | ಭೂಮಿಯಿಂದ ಬಹಳ ದೂರ | ಭೂಮಿಗೆ ಸಮೀಪವಾಗಿವೆ |
| 3) | ಸೂರ್ಯನನ್ನು ಸುತ್ತುವುದಿಲ್ಲ | ಸೂರ್ಯನನ್ನು ಸುತ್ತುತ್ತವೆ |
| 4) | ಮಿನುಗುತ್ತವೆ | ಮಿನುಗುವುದಿಲ್ಲ |

b) ಪ್ರಯೋಗ ಶಾಲೆಯಲ್ಲಿ ವಸ್ತುವಿನ ದ್ರವ್ಯರಾಶಿಯನ್ನು ಕಂಡು ಹಿಡಿಯಲು ಬಳಸುವ ಉಪಕರಣ ಯಾವುದು. 1

ಉತ್ತರ : ಭೌತತುಲಾ ಯಂತ್ರ.

c) ವಿದ್ಯುತ್ ಪ್ರವಾಹವನ್ನು ಅಳತೆಮಾಡಲು ಬಳಸುವ ಮೂಲಮಾನ ಯಾವುದು ? 1

ಉತ್ತರ : ಅಂಪೇರ.

---

# ವಿಜ್ಞಾನ

## ಅಕ್ಟೋಬರ 1987 2 ನೆಯ ಪತ್ರಿಕೆ

## [ ಜೀವಶಾಸ್ತ್ರ ]

ವೇಳೆ : 2 ಗಂಟೆ ] [ ಗುಣಗಳು : 35

ಪ್ರಶ್ನೆ 1. ಮನುಷ್ಯನಲ್ಲಿ ಸಾಗಾಣಿಕಾ ವ್ಯೂಹವು (Circulatory System) ಯಾವುದನ್ನೆಲ್ಲಾ ಒಳಗೊಂಡಿದೆ ? ಮನುಷ್ಯನ ಹೃದಯದ ಭಾಗಗಳನ್ನು ವಿವರಿಸಿ.

ಉತ್ತರ : ಮನುಷ್ಯನಲ್ಲಿ ಸಾಗಾಣಿಕಾ ವ್ಯೂಹವು ಹೃದಯ, ಅಪಧಮನಿಗಳು, ಅಭಿಧಮನಿಗಳು, ಲೋಮನಾಳಗಳ ಬಲೆಯನ್ನು ಒಳಗೊಂಡಿದೆ.

**ಮನುಷ್ಯನ ಹೃದಯದ ಭಾಗಗಳು :** ಎಡಹೃತ್ಕರ್ಣ, ಎಡಹೃತ್ಕುಕ್ಷಿ, ಬಲಹೃತ್ಕರ್ಣ, ಬಲಹೃತ್ಕುಕ್ಷಿ, ದ್ವಿದಳ ಮತ್ತು ತ್ರಿದಳ ಕವಾಟುಗಳು, ಹೃದಯದ ಸಂಪರ್ಕ ಹೊಂದಿದ ಮುಖ್ಯ ರಕ್ತನಾಳಗಳು.

**ಹೃತ್ಕರ್ಣಗಳು :** ಹೃದಯದ ಮೇಲ್ಭಾಗದ ಎರಡು ಕೋಣೆಗಳನ್ನು ಹೃತ್ಕರ್ಣಗಳೆನ್ನುವರು. ಹೃತ್ಕರ್ಣಗಳ ಸಂಕೋಚನದಿಂದ ರಕ್ತವು ಹೃತ್ಕುಕ್ಷಿಗಳಲ್ಲಿ ಬರುವುದು. ಎಡಹೃತ್ಕರ್ಣದಲ್ಲಿ ಶುದ್ಧ ರಕ್ತವು ಪಲ್ಮನರಿ ಅಭಿಧಮನಿಯ ಮೂಲಕ ಬರುವುದು. ಬಲಹೃತ್ಕರ್ಣದಲ್ಲಿ ಅಶುದ್ಧ ರಕ್ತವು ಉಚ್ಚ ಮತ್ತು ನೀಚ ಅಭಿಧಮನಿಗಳ ಮೂಲಕ ಬರುತ್ತದೆ.

**ಹೃತ್ಕುಕ್ಷಿಗಳು :** ಹೃದಯದ ಕೆಳಭಾಗದ ಎರಡು ಕೋಣೆಗಳನ್ನು ಹೃತ್ಕುಕ್ಷಿಗಳೆನ್ನುವರು. ಇವುಗಳ ಸಂಕೋಚನದಿಂದ ರಕ್ತವು ಹೃದಯದಿಂದ ರಕ್ತನಾಳಗಳಲ್ಲಿ ಹರಿಯುವುದು. ಎಡಹೃತ್ಕುಕ್ಷಿಯ ಸಂಕೋಚನದಿಂದ ಶುದ್ಧ ರಕ್ತ ಆಯೋರ್ಟಾ ಅಥವಾ ಮಹಾಅಪಧಮನಿಯನ್ನು ಸೇರುವುದು. ಬಲಹೃತ್ಕುಕ್ಷಿಯ ಸಂಕೋಚನದಿಂದ ಅಶುದ್ಧ ರಕ್ತವು ಪಲ್ಮನರಿ ಅಪಧಮನಿಯ ಮೂಲಕ ಶ್ವಾಸಕೋಶಕ್ಕೆ ಹೋಗುವುದು.

**ದ್ವಿದಳ ಮತ್ತು ತ್ರಿದಳ ಕವಾಟುಗಳು:** ಎಡಹೃತ್ಕರ್ಣ ಮತ್ತು ಎಡಹೃತ್ಕುಕ್ಷಿಗಳ ನಡುವೆ ಎರಡು ತುಂಡು ಪೊರೆಗಳಿಂದ ಕೂಡಿದ ದ್ವಿದಳ ಕವಾಟು ಇದೆ. ಬಲಹೃತ್ಕರ್ಣ ಮತ್ತು ಬಲ ಹೃತ್ಕುಕ್ಷಿಗಳ ನಡುವೆ ಮೂರು ತುಂಡು ಪೊರೆಗಳಿಂದ ಕೂಡಿದ ತ್ರಿದಳ ಕವಾಟು ಇದೆ. ಇವು ಹೃತ್ಕುಕ್ಷಿಯಲ್ಲಿ ಮಾತ್ರ ತೆರೆಯುತ್ತಿದ್ದು, ಹೃದಯದ ಸಂಕೋಚನ ವಿಕಸನಗಳಲ್ಲಿ ರಕ್ತವು ಪುನಃ ಹೃತ್ಕರ್ಣಗಳಿಗೆ ಹೋಗದಂತೆ ನೋಡಿಕೊಳ್ಳುತ್ತವೆ.

**ಅಪಧಮನಿಗಳು :** ಹೃದಯದಿಂದ ರಕ್ತವನ್ನು ಸಾಗಿಸುವ ರಕ್ತನಾಳಗಳನ್ನು ಅಪಧಮನಿಗಳು ಎನ್ನುವರು. ಎಡಹೃತ್ಕುಕ್ಷಿಯಿಂದ ಹೊರಡುವ ಆಯೋರ್ಟ ಅಥವಾ ಮಹಾ ಅಪಧಮನಿಯು ಅತ್ಯಂತ ದೊಡ್ಡ ಅಪಧಮನಿಯು ಇದು ಶುದ್ಧ ರಕ್ತವನ್ನು ದೇಹದ ನಾನಾ ಭಾಗಗಳಿಗೆ ಸಾಗಿಸುತ್ತದೆ. ಪಲ್ಮನರಿ ಅಪಧಮನಿಯು ಬಲಹೃತ್ಕುಕ್ಷಿಯಿಂದ ಹೊರಡುತ್ತಿದ್ದು, ಇದು ಅಶುದ್ಧ ರಕ್ತವನ್ನು ಶುದ್ಧಗೊಳಿಸುವುದಕ್ಕಾಗಿ ಶ್ವಾಸಕೋಶಗಳಿಗೆ ಸಾಗಿಸುವುದು.

**ಅಭಿಧಮನಿಗಳು :** ದೇಹದ ನಾನಾಭಾಗಗಳಿಂದ ರಕ್ತವನ್ನು ಹೃದಯಕ್ಕೆ ತರುವ ನಾಳಗಳನ್ನು ಅಭಿಧಮನಿಗಳೆನ್ನುವರು. ಉಚ್ಚ ಮತ್ತು ನೀಚ ಅಭಿಧಮನಿಗಳು ಬಲಹೃತ್ಕರ್ಣಕ್ಕೆ ಸಂಬಂಧ ಹೊಂದಿದ್ದರೆ, ಪಲ್ಮನರಿ ಅಭಿಧಮನಿಯು ಎಡಹೃತ್ಕರ್ಣದ ಸಂಪರ್ಕ ಹೊಂದಿದೆ. ಪಲ್ಮನರಿ ಅಭಿಧಮನಿಯಲ್ಲಿ ಶುದ್ಧ ರಕ್ತವು ಹರಿಯುತ್ತಿದ್ದರೆ, ಉಚ್ಚ ಮತ್ತು ನೀಚ ಅಭಿಧಮನಿಗಳಲ್ಲಿ ಅಶುದ್ಧ ರಕ್ತ ಹರಿಯುತ್ತದೆ.

ಹೃತ್ಕುಕ್ಷಿಗಳಿಂದ ಹೊರಡುವ ಅಪಧಮನಿಗಳ ಆದಿಭಾಗದಲ್ಲಿ ಅರ್ಧಚಂದ್ರಾಕಾರದ ಕವಾಟುಗಳಿವೆ.

ಹೃದಯದ ಎಲ್ಲಾ ಕೋಣೆಗಳೂ ಮತ್ತು ರಕ್ತನಾಳಗಳೂ ಚಪ್ಪಟೆ ಜೀವಕೋಶಗಳಿಂದ ರಚಿತವಾದ ನಯವಾದ ಮತ್ತು ತೆಳುವಾದ ಎಂಡೊಥೀಲಿಯಂ ಎಂಬ ಒಳಗೋಡೆಯನ್ನು ಹೊಂದಿವೆ. ರಕ್ತವು ಹೆಪ್ಪುಗಟ್ಟುವುದನ್ನು ಈ ಗೋಡೆಗಳು ತಡೆಯುತ್ತವೆ.

**ಪ್ರಶ್ನೆ II** ಮನುಷ್ಯನ ಕಣ್ಣು ಗುಡ್ಡೆಯ (eye)ನೀಳ ಛೇದದ (Vertical Section) ಚಿತ್ರ ಬಿಡಿಸಿ, ಈ ಭಾಗಗಳನ್ನು ಹೆಸರಿಸಿ :

1) ಕಾರ್ನಿಯಾ, 2) ಮಸೂರ (Lens), 3) ಕೃಷ್ಣ ಪಟಲ (Iris).

4) ಅಕ್ಷಿಪಟಲ (Retina), 5) ಚಾಕ್ಷುಷ ನರ (Optic nerve)

6) ಕಾಚರ ರಸಧಾತು (Vitreous humour)




**ಉತ್ತರ :** ಭಾಗಗಳು :

3) ಕಾರ್ನಿಯಾ, 6) ಮಸೂರ (Lens), 4) ಕೃಷ್ಣಪಟಲ (Iris), 9) ಅಕ್ಷಿಪಟಲ (Retina), 11) ಚಾಕ್ಷುಷನರ (Optic nerve), ಕಾಚಕ ರಸಧಾತು (Vitreous humour) ಅಕ್ಷಿಪಟಲ ಮತ್ತು ಮಸೂರ ಇವುಗಳ ನಡುವಿನ ಕಣ್ಣಿನ ಪೊಳ್ಳುಭಾಗದಲ್ಲಿದೆ.

**ಪ್ರಶ್ನೆ III.** "ನೆಫ್ರಿಡಿಯಾ" ಎಂದರೇನು ? ಚಿತ್ರದ ಸಹಾಯದಿಂದ ಎರೆಹುಳುದಲ್ಲಿಯ ನೆಫ್ರೀಡಿಯಾದ ರಚನೆ ಮತ್ತು ಕಾರ್ಯ ವಿವರಿಸಿರಿ.

5) ಮಕ್ಕಳು ತಂದೆ ತಾಯಿಯರನ್ನು ಹೋಲುತ್ತಾರೆ. ಕಾರಣವೇನು ?

**ಉತ್ತರ :** ಮಕ್ಕಳು ತಂದೆ ತಾಯಿಯನ್ನು ಹೋಲುವುದಕ್ಕೆ ಅನುವಂಶೀಯತೆ ಕಾರಣವಾಗಿದೆ.

6) ಕುಷ್ಟರೋಗಕ್ಕೆ ಕಾರಣವಾದ ಅಣುಜೀವಿ ಯಾವುದು ?

**ಉತ್ತರ :** ಮೈಕೊ ಬ್ಯಾಕ್ಟೀರಿಯಮ್ ಲೆಪ್ರೆ.

**ಪ್ರಶ್ನೆ VII** ಇವುಗಳನ್ನು ಹೆಸರಿಸಿರಿ.

1) ಭೂಕಂಪನವನ್ನು ಅಳೆಯಲು ಉಪಯೋಗಿಸುವ ಸಾಧನ.

**ಉತ್ತರ :** ಸೆಸ್ಮೊಗ್ರಾಫ್.

2) ಹೂವಿನ ರಚನೆಯಲ್ಲಿರುವ ಅತ್ಯಂತ ಹೊರವೃತ್ತ.

**ಉತ್ತರ :** ಪುಷ್ಪಪಾತ್ರೆ.

3) ಭೂಮಿಗೆ ಸಮಾಂತರವಾಗಿ ಬೆಳೆಯುವ ಒಂದು ಗುಪ್ತ ಕಾಂಡ.

**ಉತ್ತರ :** ಶುಂಠಿ

4) ಸಸ್ಯಗಳಲ್ಲಿ ನೀರು ಸಾಗಿಸುವ ಅಂಗಾಂಶ(tissue)

**ಉತ್ತರ :** ಕ್ಸೈಲಮ್.

5) ಒಂದು ದ್ರವ ಅಂಗಾಂಶ.

**ಉತ್ತರ :** ರಕ್ತ.

6) ಜೀವಕೋಶದ ಶಕ್ತಿ ಉತ್ಪಾದನಾ ಕೇಂದ್ರ.

**ಉತ್ತರ :** ಮೈಟೋಕಾಂಡ್ರಿಯ.

**ಪ್ರಶ್ನೆ VIII** ಖಾಲಿ ಬಿಟ್ಟಿರುವ ಸ್ಥಳಗಳನ್ನು ಸೂಕ್ತ ಪದದಿಂದ ತುಂಬಿರಿ.

[ಸೂಕ್ತಪದದಿಂದ ತುಂಬಿ ಬರೆದಿದೆ. ದಪ್ಪಕ್ಷರದ ಪದಗಳು ತುಂಬಿದ ಪದಗಳು]

1) ಪ್ಯಾರಾಮೇಸಿಯಮ್ 'ರೋಮಿಕ' (Cilia) ಗಳಿರುವ ಆದಿಜೀವಿ.

2) ಜೀರ್ಣಕ್ರಿಯೆಯು ಕಿಣ್ವಗಳು ಎಂಬ ಹಲವು ರಾಸಾಯನಿಕಗಳಿಂದ ನಿರ್ವಹಿಸಲ್ಪಡುತ್ತದೆ.

3) ಪಳೆಯುಳಿಕೆಗಳು (fossils) ಜಲಜ ಶಿಲೆಯಲ್ಲಿರುತ್ತವೆ.

4) ಪತಂಗ (butterfly) ಇನ್‌ಸೆಕ್ಟ್ (ಕೀಟಗಳು) ಪ್ರಾಣಿವಂಶಕ್ಕೆ ಸೇರಿದೆ.

**ಪ್ರಶ್ನೆ IX** ಕೆಳಗಿನವುಗಳ ಒಂದೊಂದು ಕಾರ್ಯ ತಿಳಿಸಿ.

1) ಅಮೀಬಾದ ಮಿಥ್ಯಾಪಾದ.

**ಉತ್ತರ :** ಕಾರ್ಯ : ಚಲನೆಗೆ ಸಹಾಯ ಮಾಡುವುದು.

2) ಮೀನಿನ ಕಿವಿರು (gills).

**ಉತ್ತರ :** ಕಾರ್ಯ : ಮೀನಿನಲ್ಲಿ ಶ್ವಾಸಕ್ರಿಯೆಯನ್ನು ನಿರ್ವಹಿಸುವುದು.

3) ಸಸ್ಯ ಜೀವಕೋಶದ ಪತ್ರ ಹರಿತ್ತು (Chloroplasts).

**ಉತ್ತರ :** ಕಾರ್ಯ : ಸಸ್ಯಜೀವಕೋಶದ ಪತ್ರಹರಿತ್ತು ದ್ಯುತಿಸಂಶ್ಲೇಷಣ ಕ್ರಿಯೆಯನ್ನು ಜರುಗಿಸುತ್ತದೆ.

4) ಬೇರಿನ ತುದಿಯಲ್ಲಿರುವ ಬೇರು ಟೋಪಿ (root cap).

**ಉತ್ತರ :** ಕಾರ್ಯ : ಬೇರಿನ ತುದಿಯಲ್ಲಿರುವ ಬೇರು ಟೋಪಿಯು ಅದರ ಹಿಂದೆ ಇರುವ ವರ್ಧನ ಅಂಗಾಂಶವನ್ನು ಆವರಿಸಿ ರಕ್ಷಿಸುತ್ತದೆ.

---

# ವಿಜ್ಞಾನ

## ಮಾರ್ಚ 1988 — 1 ನೇ ಪತ್ರಿಕೆ

### ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : 2½ ಗಂಟೆ ] [ ಗುಣಗಳು : 65

**ಪ್ರಶ್ನೆ I. a)** ವಿದ್ಯುತ್ ವಿಶ್ಲೇಷಣ ಕ್ರಿಯೆ ಎಂದರೇನು ? ತಾಮ್ರದ ವೋಲ್ಟಾಮೀಟರಿನಲ್ಲಿ ತಾಮ್ರದ ಸಲ್ಫೇಟ ದ್ರಾವಣದ ವಿಶ್ಲೇಷಣವನ್ನು ವಿವರಿಸಿ. ಅದಕ್ಕೆ ಉಪಯೋಗಿ

ಸುವ ಉಪಕರಣದ ಅಂದವಾದ ಚಿತ್ರವನ್ನು ಬರೆದು, ಭಾಗಗಳನ್ನು ಗುರುತಿಸಿ.

**ಉತ್ತರ : ವಿದ್ಯುತ್ ವಿಶ್ಲೇಷಣ ಕ್ರಿಯೆ :** ವಿದ್ಯುತ್ ಪ್ರವಾಹದ ಪರಿಣಾಮವಾಗಿ, ದ್ರಾವಣದಲ್ಲಾಗುವ ರಾಸಾಯನಿಕ ಬದಲಾವಣೆ (ವಿಶ್ಲೇಷಣೆ)ಯನ್ನು ವಿದ್ಯುತ್ ವಿಶ್ಲೇಷಣ ಕ್ರಿಯೆ ಎನ್ನುವರು.

**ತಾಮ್ರದ ಸಲ್ಫೇಟ ದ್ರಾವಣದ ವಿಶ್ಲೇಷಣ ಕ್ರಿಯೆ :**




ಭಾಗಗಳು : 1] ಗಾಜಿನ ಪಾತ್ರೆ
2] ತಾಮ್ರದ ಸಲ್ಫೇಟ ದ್ರಾವಣ (ವಿದ್ಯುತ್ ವಿಶ್ಲೇಷ್ಯ)
3] ತಾಮ್ರದ ಋಣಾಗ್ರ
4] ತಾಮ್ರದ ಧನಾಗ್ರ
5) ರಿಯೋಸ್ಟ್ಯಾಟ್
6] ವಿದ್ಯುತ್ ಕೋಶ
7] ಸ್ವಿಚ್

ತಾಮ್ರದ ವೋಲ್ಟಾಮೀಟರನ್ನು ಬ್ಯಾಟರಿ, ರಿಯೋಸ್ಟಾಟ್ ನೊಡನೆ ಸರಣಿ ಜೋಡಣೆಯಲ್ಲಿ ಜೋಡಿಸಬೇಕು. ವೋಲ್ಟಾಮೀಟರಿನ ಋಣಾಗ್ರವನ್ನು ಸ್ವಚ್ಛಮಾಡಿ, ಅದರ ದ್ರವ್ಯರಾಶಿಯನ್ನು ಕಂಡು ಹಿಡಿಯಬೇಕು. ಅನಂತರ ಅದನ್ನು ಪುನಃ ವೋಲ್ಟಾಮೀಟರಿನಲ್ಲಿಟ್ಟು, ಸುಮಾರು ಅರ್ಧಗಂಟೆಯವರೆಗೆ ವಿದ್ಯುತ್ ಪ್ರವಾಹವನ್ನು ಹಾಯಿಸಬೇಕು. ಆ ಮೇಲೆ ವಿದ್ಯುತ್ ಪ್ರವಾಹವನ್ನು ನಿಲ್ಲಿಸಿ ಋಣಾಗ್ರವನ್ನು ಪರೀಕ್ಷಿಸಿ. ಅದರ ಮೇಲೆ ತಾಮ್ರವು ಸಂಗ್ರಹವಾಗಿರುವುದು ಕಂಡುಬರುತ್ತದೆ. ಈ ಋಣಾಗ್ರವನ್ನು ಸ್ವಚ್ಛಮಾಡಿ, ಒಣಗಿಸಿ ದ್ರವ್ಯರಾಶಿಯನ್ನು ಕಂಡುಹಿಡಿಯಬೇಕು. ಈ ಎರಡೂ ದ್ರವ್ಯರಾಶಿಗಳಲ್ಲಿಯ ವ್ಯತ್ಯಾಸವು, ಧನಾಗ್ರವು ಕಳೆದುಕೊಂಡ ದ್ರವ್ಯರಾಶಿಗೆ ಸಮನಾಗಿರುವುದು. ಈ ಕ್ರಿಯೆಯಲ್ಲಿ ಧನಾಗ್ರ ತಾಮ್ರದ ಕೆಲವು ಅಣು ಋಣಾಗ್ರಕ್ಕೆ ವರ್ಗಾಯಿಸಲ್ಪಟ್ಟಿರುತ್ತದೆ.

b) ಎರಡು ವಿಧವಾದ ವಿದ್ಯುತ್ಪರಿವರ್ತಕಗಳನ್ನು ತಿಳಿಸಿ. ಪ್ರತಿಯೊಂದರ ಒಂದೊಂದು ಉಪಯೋಗವನ್ನು ತಿಳಿಸಿ.

**ಉತ್ತರ : ವಿದ್ಯುತ್ಪರಿವರ್ತದ ಎರಡು ವಿಧಗಳು:** 1) ವೋಲ್ಟತೆಯನ್ನೇರಿಸುವ ವಿದ್ಯುತ್ಪರಿವರ್ತಕ, 2) ವೋಲ್ಟತೆಯನ್ನಿಳಿಸುವ ವಿದ್ಯುತ್ಪರಿವರ್ತಕ. ವಿದ್ಯುತ್ಪೂರೈಕೆಯ ವೋಲ್ಟತೆಯನ್ನು ಹೆಚ್ಚಿಸಲು ವೋಲ್ಟತೆಯನ್ನೇರಿಸುವ ವಿದ್ಯುತ್ಪರಿವರ್ತಕವನ್ನೂ, ವೋಲ್ಟತೆಯನ್ನು ಕಡಿಮೆಮಾಡಲು ವೋಲ್ಟತೆಯನ್ನಿಳಿಸುವ ವಿದ್ಯುತ್ಪರಿವರ್ತಕವನ್ನೂ ಉಪಯೋಗಿಸುವರು.

c) ಮಿಂಚು ಎಂದರೇನು ?

ಉತ್ತರಕ್ಕೆ ಅಕ್ಟೋಬರ 1927 ರ ಪ್ರಶ್ನೆ 1 (c) ನೋಡಿ.

**ಪ್ರಶ್ನೆ 2.** a) ಕಾಂತದ ಯಾವುದಾದರೂ ಎರಡು ಮುಖ್ಯಗುಣಧರ್ಮವನ್ನು ಬರೆಯಿರಿ. ದಂಡಕಾಂತದ ಸುತ್ತ ಕಾಂತೀಯ ಬಲರೇಖೆಗಳನ್ನು ತೋರಿಸುವ ಅಂದವಾದ ಚಿತ್ರವನ್ನು ಬರೆಯಿರಿ.

**ಉತ್ತರ : ಕಾಂತದ ಎರಡು ಮುಖ್ಯಗುಣಗಳು:** 1] ಸ್ವತಂತ್ರವಾಗಿ ತೂಗುಬಿಟ್ಟಾಗ ಕಾಂತವು ಉತ್ತರ-ದಕ್ಷಿಣ ನೇರದಲ್ಲಿ ಸ್ಥಾಪಿಸಿಕೊಳ್ಳುವುದು. 2) ಸಜಾತೀಯ ಧ್ರುವಗಳು ವಿಕರ್ಷಿಸುತ್ತವೆ. ವಿಜಾತೀಯ ಧ್ರುವಗಳು ಪರಸ್ಪರ ಆಕರ್ಷಿಸುತ್ತವೆ.

ಬಲರೇಖೆಗಳನ್ನು ತೋರಿಸುವ ಚಿತ್ರಕ್ಕೆ ಪುಟ 57 ರಲ್ಲಿ ಪ್ರಶ್ನೆ 5 ರ ಉತ್ತರ ನೋಡಿ.

b). ಸಮಸ್ಥಾನಿಗಳು (Isotopes) ಎಂದರೇನು ? ಹೈಡ್ರೋಜನ್ನಿನ ಎರಡು ಸಮಸ್ಥಾನಿಗಳನ್ನು ಹೆಸರಿಸಿ.

ಉತ್ತರಕ್ಕೆ ಅಕ್ಟೋಬರ 1985 ರ ಪ್ರಶ್ನೆ 4 (a) ನೋಡಿ.

c) ಧಾರಕ (Capacitor) ಎಂದರೇನು ?

**ಉತ್ತರ :** ಧಾರಕ : ವಿದ್ಯುದಾವೇಶವನ್ನು ಸಂಗ್ರಹಿಸಬಲ್ಲ ಸಾಧನವನ್ನು ಧಾರಕ ಎನ್ನುವರು.

**ಪ್ರಶ್ನೆ 3. a)** ನ್ಯೂಕ್ಲಿಯ ವಿದಳನ ಕ್ರಿಯೆ(Nuclear Fission) ಎಂದರೇನು ? ಒಂದು ಉದಾಹರಣೆಯನ್ನು ಕೊಡಿ.

**ಉತ್ತರ. ನ್ಯೂಕ್ಲಿಯ ವಿದಳನ :** ದೊಡ್ಡ ನ್ಯೂಕ್ಲಿಯಸ್ಸು ಸುಮಾರಾಗಿ ಒಂದೇ ಗಾತ್ರದ ಎರಡು ಇಲ್ಲವೆ ಹೆಚ್ಚು ನ್ಯೂಕ್ಲಿಯಸ್ಸುಗಳಾಗಿ ಒಡೆಯುವ ಕ್ರಿಯೆಯನ್ನು ನ್ಯೂಕ್ಲಿಯ ವಿದಳನ ಕ್ರಿಯೆ ಎನ್ನುವರು.

**ಉದಾಹರಣೆ :** ಯುರೇನಿಯಮ್‌ನ್ನು ನ್ಯೂಟ್ರಾನಿನಿಂದ ತಾಡಿಸಿದಾಗ, ಯುರೇನಿಯಮ್‌ನ ನ್ಯೂಕ್ಲಿಯಸ್ಸು ಬೇರಿಯಮ್ ಮತ್ತು ಕ್ರಿಪ್ಟಾನ್ ನ್ಯೂಕ್ಲಿಯಸ್ಸುಗಳಾಗಿ ಒಡೆಯುವುದಲ್ಲದೆ, ಅನೇಕ ನ್ಯೂಟ್ರಾನುಗಳೂ ಬಿಡುಗಡೆಯಾಗುತ್ತವೆ. ಅಲ್ಲದೆ ಅಪಾರವಾದ ಶಕ್ತಿಯ ಬಿಡುಗಡೆಯಾಗುವುದು.

b) ವಿದ್ಯುತ್ ಮಂಡಲದಲ್ಲಿ ಸ್ವಿಚ್‌ನ್ನು ಏಕೆ ಉಪಯೋಗಿಸುತ್ತಾರೆ ?

**ಉತ್ತರ :** ಮಂಡಲದಲ್ಲಿ ವಿದ್ಯುತ್ಪ್ರವಾಹವನ್ನು ಹರಿಯಲು ಬಿಡುವುದು ಇಲ್ಲವೆ ಹರಿಯದಂತೆ ಮಾಡುವುದು ಈ ಕಾರ್ಯಕ್ಕಾಗಿ ವಿದ್ಯುತ್ ಮಂಡಲದಲ್ಲಿ ಸ್ವಿಚ್ಚನ್ನು ಉಪಯೋಗಿಸುವರು.

**ಪ್ರಶ್ನೆ 4. a)** 2 ಮತ್ತು 3 ರೋಧಗಳುಳ್ಳ ಎರಡು ವಾಹಕಗಳನ್ನು ಸ್ಥರಳ ಜೋಡಣೆಯಲ್ಲಿ ಮತ್ತು ಸಮಾನಾಂತರ ಜೋಡಣೆಯಲ್ಲಿ ಸೇರಿಸಿದರೆ, ಉಂಟಾಗುವ ಒಟ್ಟು ಪರಿಣಾಮಕಾರಿ ರೋಧವೆಷ್ಟು ?

ಉತ್ತರಕ್ಕೆ ಎಪ್ರಿಲ್ 1986 ರ ಪ್ರಶ್ನೆ 5 (a) ನೋಡಿ.

b) ಮಿಲೀ ಆಂಪ್ಯೆರ್‌ನಂತ ಕಡಿಮೆ ಪ್ರಮಾಣದ ವಿದ್ಯುತ್ ಪ್ರವಾಹವನ್ನು ಅಳೆಯುವ ಉಪಕರಣವನ್ನು ತಿಳಿಸಿ.

**ಉತ್ತರ : ಮಿಲೀ ಆಮ್ಮಿಟರ್.**

**ಪ್ರಶ್ನೆ 5. a)** ವಿಸರ್ಜನ ನಳಿಕೆಯ (Discharge tube) ಅಂದವಾದ ಚಿತ್ರವನ್ನು ಬರೆದು ಅದರ ಭಾಗಗಳನ್ನು ಗುರುತಿಸಿ.




ವಿಸರ್ಜನ ನಳಿಕೆ–A–ಧನಾಗ್ರ,C–ಋಣಾಗ್ರ,S–ಪಾರ್ಶ್ವನಳಿಕೆ

b) ಹಾಲಿನ ಸಾಪೇಕ್ಷ ಸಾಂದ್ರತೆಯನ್ನು ಕಂಡು ಹಿಡಿಯಲು ಉಪಯೋಗಿಸುವ ಉಪಕರಣ ಯಾವುದು ?

**ಉತ್ತರ :** ಲ್ಯಾಕ್ಟೋಮೀಟರ್.

**ಪ್ರಶ್ನೆ 6. a)** ಕೃತಕ ಉಪಗ್ರಹದ ಮುಖ್ಯವಾದ ಉಪಯೋಗಗಳನ್ನು ತಿಳಿಸಿ.

**ಉತ್ತರ :** ಕೃತಕ ಉಪಗ್ರಹಗಳ ಮುಖ್ಯ ಉಪಯೋಗಗಳು : 1) ದೂರ ಸಂಪರ್ಕವನ್ನು ಏರ್ಪಡಿಸುವುದು. 2) ದೂರದರ್ಶನದ ಪ್ರಸಾರಕ್ಕೆ ಸಹಾಯ ಮಾಡುವುದು.

b) ವೇಗೋತ್ಕರ್ಷ ಎಂದರೇನು ?

**ಉತ್ತರ : ವೇಗೋತ್ಕರ್ಷ :** ವೇಗದಲ್ಲಿ ಆಗುವ ಹೆಚ್ಚಳದ ದರವನ್ನು ವೇಗೋತ್ಕರ್ಷ ಎನ್ನುವರು.

**ಪ್ರಶ್ನೆ 7. a)** ಉನ್ನತ ಯವದ F ಮತ್ತು C ಗಳ ನಡುವೆ ಇರುವ ವಸ್ತುವಿನ ಪ್ರತಿಬಿಂಬವನ್ನು ಗುರುತಿಸಿ, ಪ್ರತಿಬಿಂಬದ ಲಕ್ಷಣವನ್ನು ತಿಳಿಸಿ.

**ಉತ್ತರ :**




AB→ವಸ್ತು, A'B'→ಪ್ರತಿಬಿಂಬ

**ಪ್ರತಿಬಿಂಬದ ಲಕ್ಷಣಗಳು :** 1) ಪ್ರತಿಬಿಂಬವು C'ದ ಆಚೆಗೆ ಇರುವುದು. 2) ವಸ್ತುವಿಗಿಂತ ದೊಡ್ಡದಿರುವುದು. 3) ತಲೆಕೆಳಗಾಗಿರುವುದು 4) ಸತ್ಯಪ್ರತಿಬಿಂಬವಿರುವುದು.

b) ಬೆಳಕಿನ ವಿಭಜನೆ ಎಂದರೇನು ?

**ಉತ್ತರ : ಬೆಳಕಿನ ವಿಭಜನೆ :** ಬಿಳಿಯ ಬೆಳಕು ಏಳು ವರ್ಣಗಳಾಗಿ ಒಡೆಯುವ ಕ್ರಿಯೆಯನ್ನು ಬೆಳಕಿನ ವಿಭಜನೆ ಎನ್ನುವರು.

**ಪ್ರಶ್ನೆ 8. a)** ಋಣಾಗ್ರ ಕಿರಣಗಳ (Cathode Rays) ಎರಡು ಮುಖ್ಯ ಗುಣಗಳನ್ನು ತಿಳಿಸಿ.

**ಉತ್ತರ :** ಋಣಾಗ್ರ ಕಿರಣಗಳ ಎರಡು ಮುಖ್ಯ ಗುಣಗಳು : 1) ಋಣಾಗ್ರ ಕಿರಣಗಳಿಗೆ ಶಕ್ತಿ ಇರುತ್ತದೆ.

2) ಋಣಾಗ್ರ ಕಿರಣಗಳು ಕಾಂತಗುಣವುಳ್ಳ ಕಣಗಳನ್ನು ಅಲ್ಲದೆ ಋಣವಿದ್ಯುದಾವಿಷ್ಟ ಕಣಗಳನ್ನು ಹೊಂದಿರುತ್ತವೆ.

b) ವಿದ್ಯುಚ್ಚಾಲಕ ಬಲವನ್ನು (E.M.F.) ಅಳೆಯಲು ಬಳಸುವ ಉಪಕರಣವನ್ನು ತಿಳಿಸಿ.

**ಉತ್ತರ : ವೋಲ್ಟಮೀಟರ್.**

**ಪ್ರಶ್ನೆ 9.** a) ಸಮರೂಪ ಕ್ರಿಯೆ ಮತ್ತು ಬಹುರೂಪ ಕ್ರಿಯೆ ಎಂದರೇನು ? ಪ್ರತಿಯೊಂದಕ್ಕೂ ಒಂದೊಂದು ಉದಾಹರಣೆ ಕೊಡಿ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 9 (a) ನೋಡಿ.

b) ಇಂಗಾಲದ ಎರಡು ಸ್ಫಟಿಕಾಕೃತಿಯ ರೂಪಗಳನ್ನು ತಿಳಿಸಿ.

**ಉತ್ತರ :** 1) ವಜ್ರ 2) ಗ್ರಾಫೈಟ್.

c) ಸಿಗರೇಟನ್ನು ಸುತ್ತಿಡಲು ಯಾವ ಲೋಹವನ್ನು ಬಳಸುತ್ತಾರೆ ?

**ಉತ್ತರ :** ಅಲ್ಯೂಮಿನಿಯಮ್.

**ಪ್ರಶ್ನೆ 10.** a) ಸಾವಯವ ರಸಾಯನ ಶಾಸ್ತ್ರ ಎಂದರೇನು ? ಅಲಿಫ್ಯಾಟಿಕ್ ಮತ್ತು ಆರೋಮ್ಯಾಟಿಕ್ ಸಂಯುಕ್ತಗಳಿಗಿರುವ ಮುಖ್ಯ ವ್ಯತ್ಯಾಸವನ್ನು ತಿಳಿಸಿ. ಪ್ರತಿಯೊಂದಕ್ಕೂ ಒಂದೊಂದು ಉದಾಹರಣೆಯನ್ನು ಕೊಡಿ.

**ಉತ್ತರ : ಸಾವಯುವ ರಸಾಯನಶಾಸ್ತ್ರ :** ಇಂಗಾಲ ಸಂಯುಕ್ತಗಳ ರಸಾಯನ ಶಾಸ್ತ್ರವನ್ನು ಸಾವಯವ ರಸಾಯನ ಶಾಸ್ತ್ರ ಎನ್ನುವರು.

**ಅಲಿಫ್ಯಾಟಿಕ್ ಮತ್ತು ಆರೋಮ್ಯಾಟಿಕ್ ಸಂಯುಕ್ತಗಳಿಗಿರುವ ವ್ಯತ್ಯಾಸ–**

| ಅಲಿಫ್ಯಾಟಿಕ್ | ಆರೋಮ್ಯಾಟಿಕ್ |
|---|---|
| 1) ತೆರೆದ ಸರಪಣಿ ಸಂಯುಕ್ತಗಳು | ಮುಚ್ಚಿದ ಸರಪಣಿ ಅಥವಾ ಉಂಗುರ ರಚನೆಯ ಸಂಯುಕ್ತಗಳು. |
| 2) ವಿವಿಧ ವಾಸನೆಗಳಿಂದ ಕೂಡಿವೆ. | ಸುವಾಸನೆಯಿಂದ ಕೂಡಿವೆ. |
| 3) ಅಷ್ಟೊಂದು ಧೂಮವಿಲ್ಲದ ಜ್ವಾಲೆಯಿಂದ ಉರಿಯುತ್ತವೆ. | ಧೂಮಯುಕ್ತ ಜ್ವಾಲೆಯಿಂದ ಉರಿಯುತ್ತವೆ. |

**ಉದಾ :** ಅಲಿಫ್ಯಾಟಿಕ್ ಸಂಯುಕ್ತಗಳು : ಮೀಥೇನ್, ಈಥೇನ್.

ಆರೋಮ್ಯಾಟಿಕ್ ಸಂಯುಕ್ತಗಳು ; ಬೆಂಜೀನ್.

b) ಗಾಜಿನಲ್ಲಿರುವ ಘಟಕಗಳನ್ನು ತಿಳಿಸಿ. ಯಾವುದಾದರೂ ಎರಡು ವಿಧವಾದ ಗಾಜುಗಳನ್ನು ಹೆಸರಿಸಿ.

**ಉತ್ತರ : ಗಾಜಿನ ಘಟಕಗಳು :** ಉಸುಕು (ಮಳಲು) ಸೋಡಿಯಂ ಕಾರ್ಬೋನೇಟ (ವಾಸಿಂಗ ಸೋಡಾ), ಕಲ್ಲುಸುಣ್ಣ ಮತ್ತು ಗಾಜಿನ ಚೂರುಗಳು.

**ಗಾಜಿನ ಎರಡು ವಿಧಗಳು :** ಲೆಡ್‌ಗಾಜು, ಬೊರೊಸಿಲಿಕೇಟ್ ಗಾಜು.

c) ಮಾರ್ಜಕ (Detergent) ಎಂದರೇನು ?

**ಉತ್ತರ : ಮಾರ್ಜಕ :** ಹೈಡ್ರೋಕಾರ್ಬನ್ ಸಲ್ಫೊನಿಕ್ ಆಮ್ಲವು ಸೋಡಿಯಂ ಹೈಡ್ರಾಕ್ಸೈಡ್‌ನಿಂದ ತಟಸ್ಥೀಕರಣ ಹೊಂದಿ ಉಂಟುಮಾಡುವ ಲವಣವನ್ನು ಮಾರ್ಜಕ ಎನ್ನುವರು.

**ಪ್ರಶ್ನೆ 11.** a) ಆಮ್ಲ ಮಿಶ್ರಣ ಪೊಟ್ಯಾಸಿಯಂ ಪರಮಾಂಗನೇಟ್ ದ್ರಾವಣದ ಮೂಲಕ ಹೈಡ್ರೋಜನ್ ಸಲ್ಫೈಡ್ ಅನಿಲವನ್ನು ಹಾಯಿಸಿದಾಗ ಏನಾಗುತ್ತದೆ ? ವಿವರಿಸಿ.

**ಉತ್ತರ :** ಆಮ್ಲಮಿಶ್ರಿತ ಪೊಟ್ಯಾಸಿಯಂ ಪರಮಾಂಗನೇಟ್ ದ್ರಾವಣದ ಮೂಲಕ ಹೈಡ್ರೋಜನ್ ಸಲ್ಫೈಡನ್ನು ಹಾಯಿಸಿದಾಗ ದ್ರಾವಣವು ನಿರ್ವರ್ಣವಾಗುತ್ತದೆ. ಅಂದರೆ ನೇರಳೆ (ಗುಲಾಬಿ) ಬಣ್ಣದ ಪರಮ್ಯಾಂಗನೇಟ್, ಬಣ್ಣವಿಲ್ಲದ ಮ್ಯಾಂಗನಸ್ ಲವಣವಾಗಿ ಅಪಕರ್ಷಿಸಲ್ಪಡುತ್ತದೆ. ಅಲ್ಲದೆ ಗಂಧಕವು ಪ್ರಕ್ಷೇಪಗೊಳ್ಳುತ್ತದೆ.

b) ದ್ರವರೂಪದ ಗಾಳಿ [Liquid Air] ಯಿಂದ ಸಾರಜನಕ ಮತ್ತು ಆಮ್ಲಜನಕವನ್ನು ಬೇರ್ಪಡಿಸುವ ವಿಧಾನ ಯಾವುದು ?

**ಉತ್ತರ :** ಅಂಶಾತ್ಮಕ ಭಟ್ಟಿ ಇಳಿಸುವಿಕೆ (Fractional Distillation).

**ಪ್ರಶ್ನೆ 12.** a) ಸ್ಟೇನ್‌ಲೆಸ್ ಉಕ್ಕಿನ ಘಟಕಗಳನ್ನು ತಿಳಿಸಿ ಮತ್ತು ಅದರ ಯಾವುದಾದರೂ ಎರಡು ಉಪಯೋಗಗಳನ್ನು ತಿಳಿಸಿ.

**ಉತ್ತರ : ಸ್ಟೇನ್‌ಲೆಸ್ ಉಕ್ಕಿನ ಘಟಕಗಳು :** ಕಬ್ಬಿಣ, ಇಂಗಾಲ, ಕ್ರೋಮಿಯಂ, ನಿಕ್ಕಲ್.

**ಉಪಯೋಗ :** ಬ್ಲೇಡುಗಳು, ಶಸ್ತ್ರಕ್ರಿಯಾ ಸಲಕರಣೆಗಳು, ಗ್ರಹೋಪಯೋಗಿ ಪಾತ್ರೆಗಳನ್ನು ತಯಾರಿಸಲು ಉಪಯೋಗಿಸುವರು.

b) ಸೋಡಿಯಂ ಕಾರ್ಬೋನೇಟ ಮತ್ತು ಹೈಡ್ರೋಕ್ಲೋರಿಕ್ ಆಮ್ಲ ಪ್ರಮಾಣ ಮಾಪನ ಪ್ರಯೋಗದಲ್ಲಿ ಬಳಸುವ ಸೂಚಕ ಯಾವುದು ?

**ಉತ್ತರ :** ಬಳಸುವ ಸೂಚಕ : **ಮಿಥಿಲ್ ಆರೇಂಜ್.**

**ಪ್ರಶ್ನೆ 13.** a) ಸಮತೋಲ ಆಹಾರ ಎಂದರೇನು ? ಅದರ ಘಟಕಗಳನ್ನು ತಿಳಿಸಿ.

**ಉತ್ತರ : ಸಮತೋಲ ಆಹಾರ :** ಅತ್ಯಾವಶ್ಯಕ ಅಂಶಗಳನ್ನು ಸರಿಯಾದ ಪ್ರಮಾಣದಲ್ಲಿ ಹೊಂದಿರುವ ಆಹಾರವನ್ನು ಸಮತೋಲ ಆಹಾರ ಎನ್ನುವರು.

**ಸಮತೋಲ ಆಹಾರದ ಘಟಕಗಳು :** ಕಾರ್ಬೋಹೈಡ್ರೇಟ್‌ಗಳು, (ಶರ್ಕರ ಪಿಷ್ಟಾದಿಗಳು) ಕೊಬ್ಬುಗಳು, ಪ್ರೊಟೀನ್‌ಗಳು, ಖನಿಜ ಲವಣಗಳು ಮತ್ತು ಜೀವಸತ್ವಗಳು.

b) ಹೈಡ್ರೋಕ್ಲೋರಿಕ್ ಆಮ್ಲದಿಂದ ಜಲಜನಕವನ್ನು ಸ್ಥಾನಪಲ್ಲಟಗೊಳಿಸಬಲ್ಲ ಒಂದು ಲೋಹದ ಹೆಸರನ್ನು ತಿಳಿಸಿ.

**ಉತ್ತರ :** ಸತು (Zinc)

**ಪ್ರಶ್ನೆ 14.** a) ಪೆಟ್ರೋ ರಸಾಯನ (Petrochemicals)ಗಳ ನಾಲ್ಕು ಮುಖ್ಯ ಉಪಯೋಗಗಳನ್ನು ತಿಳಿಸಿ.

**ಉತ್ತರ : ಉಪಯೋಗ :** ಪ್ಲಾಸ್ಟಿಕ್, ಸಂಶ್ಲೇಷಿತ ನಾರುಎಳೆ, ಸಂಶ್ಲೇಷಿತ ರಬ್ಬರ್ ಮಾರ್ಜಕ ಬಣ್ಣ, ಕ್ರಿಮಿನಾಶಕಗಳ ತಯಾರಿಕೆಯಲ್ಲಿ ಉಪಯೋಗಿಸುವರು.

b) ಸೋಡಿಯಂ ತಯಾರಿಕೆಯಲ್ಲಿ ತಯಾರಾಗುವ ಉಪೋತ್ಪನ್ನ (Bye-Product)ದ ಹೆಸರನ್ನು ತಿಳಿಸಿ.

**ಉತ್ತರ :** ಜಲಜನಕ.

**ಪ್ರಶ್ನೆ 15.** a) ಫೆರಸ್ ಸಲ್ಫೇಟ್ (Ferrous Sulphate)ನ ಎರಡು ಮುಖ್ಯ ಉಪಯೋಗಗಳನ್ನು ತಿಳಿಸಿ.

**ಉತ್ತರ : ಉಪಯೋಗ :** 1) ಮಸಿ (Ink) ತಯಾರಿಕೆಯಲ್ಲಿ 2) ವರ್ಣಬಂಧಕವಾಗಿ, ಉಪಯೋಗಿಸುವರು.

b) ಕಬ್ಬಿಣದ ಎರಡು ಮುಖ್ಯ ಅದುರು (Ore) ಗಳನ್ನು ಹೆಸರಿಸಿ.

**ಉತ್ತರ : ಕಬ್ಬಿಣದ ಎರಡು ಅದುರುಗಳು :** 1) ಹೆಮೆಟೈಟ್ [$Fe_2O_3$], 2) ಮೆಗ್ನೆಟೈಟ್ [$Fe_3O_4$]

**ಪ್ರಶ್ನೆ 16.** a) ಜರ್ಮನ್ ಸಿಲ್ವರ್‌ನಲ್ಲಿರುವ ಘಟಕ ಲೋಹಗಳನ್ನು ತಿಳಿಸಿ ಮತ್ತು ಅದರ ಒಂದು ಉಪಯೋಗವನ್ನು ಬರೆಯಿರಿ.

**ಉತ್ತರ : ಜರ್ಮನ್ ಸಿಲ್ವರ್‌ನಲ್ಲಿರುವ ಘಟಕ ಲೋಹಗಳು :** ತಾಮ್ರ, ಸತುವು, ನಿಕ್ಕಲ್.

**ಉಪಯೋಗ :** ಜರ್ಮನ್ ಸಿಲ್ವರನ್ನು ರೋಧಕ (Resistance) ತಂತಿಗಳ ತಯಾರಿಕೆಯಲ್ಲಿ ಉಪಯೋಗಿಸುವರು.

b) ಈ ಕೆಳಗಿನವುಗಳ ರಾಸಾಯನಿಕ ಹೆಸರುಗಳನ್ನು ತಿಳಿಸಿ.

1) $NH_3$ 2) $H_2SO_4$

**ಉತ್ತರ :** 1) $NH_3 \rightarrow$ ಅಮೋನಿಯಾ
2) $H_2SO_4 \rightarrow$ ಗಂಧಕಾಮ್ಲ (ಸಲ್ಫ್ಯೂರಿಕ್ ಆಮ್ಲ)

c) ವೇಗವರ್ಧಕದ ಸಮ್ಮುಖದಲ್ಲಿ ಜಲಾನಿಲದ (Water-gas) ಅಪಕರ್ಷಣ ಕ್ರಿಯೆ ಜರುಗಿದಾಗ ಉಂಟಾಗುವ ಸಂಶ್ಲೇಷಣ ಸಾವಯವ ಸಂಯುಕ್ತ ವಸ್ತುವನ್ನು ಹೆಸರಿಸಿರಿ.

**ಉತ್ತರ :** ಮೀಥೈಲ್ ಆಲ್ಕೋಹಾಲ್ ($CH_3OH$)

———

# ವಿಜ್ಞಾನ

## ಮಾರ್ಚ 1988 — 2 ನೆಯ ಪತ್ರಿಕೆ

### [ ಜೀವಶಾಸ್ತ್ರ ]

ವೇಳೆ : 2 ಗಂಟೆ ] — [ ಗುಣಗಳು : 35

**ಪ್ರಶ್ನೆ I.** ಮನುಷ್ಯ ದೇಹದ ಮೂತ್ರ ಜನಕಾಂಗದ ನೀಳಛೇದ ನೋಟವನ್ನು ತೋರಿಸುವ ಚಿತ್ರ ಬರೆದು ಅದರಲ್ಲಿ ಈ ಕೆಳಗಿನ ಭಾಗಗಳನ್ನು ಗುರುತಿಸಿ.

1) ತೊಗಟೆ (ಕಾರ್ಟೆಕ್ಸ್), 2) ಪೆಲ್ವಿಸ್, 3) ಮೆಡುಲ್ಲಾ, 4) ಮೂತ್ರನಾಳ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 1 ನೋಡಿ.

**ಪ್ರಶ್ನೆ II.** ಮನುಷ್ಯ ದೇಹದ ಮೆದುಳು ಬಳ್ಳಿಯ ಅಡ್ಡ ಛೇದ ನೋಟವನ್ನು ತೋರಿಸುವ ಚಿತ್ರ ಬರೆದು ಅದರಲ್ಲಿ ಈ ಕೆಳಗಿನ ಭಾಗಗಳನ್ನು ಗುರುತಿಸಿ ; 1] ಮೆದುಳು ಬಳ್ಳಿಯ ನರ 2] ಮಧ್ಯದ ಕಾಲುವೆ, 3] ಬಿಳಿ ವಸ್ತು, 4] ಮೆದುಳು ಬಳ್ಳಿ ನರದ ಮೇಲ್ಭಾಗದ ಮೂಲ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 3 ನೋಡಿ.

**ಪ್ರಶ್ನೆ III** 1) ಪ್ರಾಣಿಗಳಲ್ಲಿ ಕಂಡು ಬರುವ ಸಾಗಾಣಿಕಾ ವ್ಯೂಹಗಳ ವಿಧಗಳನ್ನು ಹೆಸರಿಸಿ. ಒಂದೊಂದು ವಿಧಕ್ಕೆ ಒಂದೊಂದು ಪ್ರಾಣಿಯನ್ನು ಉದಾಹರಿಸಿ.

**ಉತ್ತರ : ಸಾಗಾಣಿಕಾ ವ್ಯೂಹದ ವಿಧಗಳು :** 1] ತೆರೆದ ವ್ಯೂಹ 2] ಮುಚ್ಚಿದ ವ್ಯೂಹ.

ಉದಾ : 1] ತೆರೆದ ವ್ಯೂಹ– ಸಂಧಿಪದಿಗಳು (ಜಿರಲೆ) 2) ಮುಚ್ಚಿದ ವ್ಯೂಹ– ಕಶೇರುಕಗಳು (ಮನುಷ್ಯ)

2] ಹತ್ತಿರದ ಮತ್ತು ದೂರದ ವಸ್ತುಗಳನ್ನು ಸ್ಪಷ್ಟವಾಗಿ ನೋಡಲು ಕಣ್ಣಿನ ಮಸೂರವು ಹೊಂದಿರುವ ಹೊಂದಾಣಿಕೆಯನ್ನು ಏನೆಂದು ಕರೆಯುತ್ತಾರೆ ? ಈ ಹೊಂದಾಣಿಕೆ ಹೇಗೆ ಉಂಟಾಗುತ್ತದೆ ?

**ಉತ್ತರ :** ಕಣ್ಣಿನ ಮಸೂರದ ಹೊಂದಾಣಿಕೆಯನ್ನು ಕಣ್ಣಿನ ಪ್ರತಿಯೋಜನಾ ಶಕ್ತಿ ಎಂದು ಕರೆಯುತ್ತಾರೆ.

**ಹೊಂದಾಣಿಕೆ ಉಂಟಾಗುವ ಬಗೆ :** ಸಮೀಪದ ವಸ್ತುಗಳನ್ನು ನೋಡುವಾಗ ಅವುಗಳ ಪ್ರತಿಬಿಂಬವು ರೆಟಿನಾದ ಮೇಲೆ ಸ್ಪಷ್ಟವಾಗಿ ಮೂಡುವಂತೆ ಮಾಡಲು, ಮಸೂರದ ಸುತ್ತಲಿನ ಸ್ನಾಯುಗಳು ವಿಕಸಿಸುವುದರಿಂದ ಮಸೂರದ ವಕ್ರತೆಯು ಹೆಚ್ಚುತ್ತದೆ. ಅಂದರೆ ಮಸೂರವು ಎರಡೂ ಪಾರ್ಶ್ವಗಳಲ್ಲಿ ಉಬ್ಬಿಕೊಳ್ಳುತ್ತದೆ.

ದೂರದ ವಸ್ತುಗಳನ್ನು ನೋಡುವಾಗ ಮಸೂರದ ಸುತ್ತಲಿನ ಸ್ನಾಯುಗಳು ಸಂಕುಚಿಸುವುದರಿಂದ ಮಸೂರವು ಸುತ್ತಲೂ ಜಗ್ಗಲ್ಪಟ್ಟು ವಕ್ರತೆಯು ಕಡಿಮೆಯಾಗುವುದು. ಆಗ ಮಸೂರದ ಸಂಗಮ ದೂರವು ದೊಡ್ಡದಾಗಿ ದೂರದ ವಸ್ತುವಿನ ಸ್ಫುಟವಾದ ಪ್ರತಿಬಿಂಬವು ರೆಟಿನಾದ ಮೇಲೆ ಮೂಡುವುದು.

3) ಯಾವುದೇ ಅಣುಜೀವಿಯ ರೋಗಕಾರಕ ಗುಣವನ್ನು ಖಚಿತಪಡಿಸಲು ರಾಬರ್ಟ್ ಕಾಕ್ ಪ್ರತಿಪಾದಿಸಿದ ನಿಯಮಗಳನ್ನು ಬರೆಯಿರಿ.

**ಉತ್ತರ : ರಾಬರ್ಟ್ ಕಾಕ್ ಪ್ರತಿಪಾದಿಸಿದ ನಿಯಮಗಳು :** 1] ರೋಗಕ್ಕೆ ಕಾರಣವೆಂದು ನಂಬಲಾದ ಅಣುಜೀವಿ, ಆ ರೋಗದಿಂದ ನರಳುತ್ತಿರುವ ಪ್ರಾಣಿಯಲ್ಲಿ ಹೇರಳವಾಗಿರಬೇಕು.

2] ಆ ಅಣುಜೀವಿಯನ್ನು ರೋಗ ಪೀಡಿತ ಪ್ರಾಣಿಯಿಂದ ಬೇರ್ಪಡಿಸಿ ಶುದ್ಧ ಮಧ್ಯವರ್ತಿಯಲ್ಲಿ ಕೃತಕವಾಗಿ ಬೆಳೆಸುವಂತಿರಬೇಕು.

3] ಹೀಗೆ ಬೆಳೆಸಿದ ಅಣುಜೀವಿಗಳನ್ನು ಆರೋಗ್ಯವಾಗಿರುವ ಪ್ರಾಣಿಗಳಿಗೆ ಚುಚ್ಚಿ ನೀಡಿದಾಗ ಆ ಪ್ರಾಣಿಗಳಿಗೆ ಅದೆ ರೋಗ ತಗಲಬೇಕು.

4] ರೋಗ ಪೀಡಿತ ಪ್ರಾಣಿಗಳಿಂದ ಈ ಅಣುಜೀವಿಗಳನ್ನು ಮತ್ತೆ ಪಡೆಯುವಂತಿರಬೇಕು.

4] "ಸರಳ ಗಾಯಿಟರ್" ಎಂದರೇನು ? ಸಮುದ್ರ ತೀರ ಪ್ರದೇಶಗಳಲ್ಲಿ ವಾಸಿಸುವ ಜನರು ಸರಳ ಗಾಯಿಟರ್‌ನಿಂದ ನರಳದಿರಲು ಕಾರಣವೇನು ?

**ಉತ್ತರ : ಸರಳಗಾಯಿಟರ್ :** ಥೈರಾಯಿಡ್ ಗ್ರಂಥಿಯ ಸಹಜವಾದ ಬೆಳವಣಿಗೆಯಾಗಿದಿದ್ದರೆ, ಅದು ವಿಸ್ತಾರವಾಗಿ ಕತ್ತಿನಲ್ಲಿ ಊತ ಉಂಟಾಗುತ್ತದೆ. ಇದನ್ನು ಗಾಯಟರ್ ಎನ್ನುವರು.

ಸಮುದ್ರದ ನೀರು ಮತ್ತು ತೀರ ಪ್ರದೇಶದಲ್ಲಿ ಹೇರಳವಾಗಿ ಅಯೊಡಿನ್ ಇರುವುದರಿಂದ ಆ ಪ್ರದೇಶದ ಜನರಲ್ಲಿ ಗಾಯಟರ್

ರೋಗ ಇರುವುದಿಲ್ಲ. ಯಾಕೆಂದರೆ, ಅಯೋಡಿನ್ ಗಾಯಿಟರ್‌ನ್ನು ವಾಸಿ ಮಾಡುವುದು.

5] ಎತ್ತರ ಮತ್ತು ಗಿಡ್ಡ ಬಟಾಣಿ ಗಿಡಗಳ ಗ್ರಿಗೊರ್ ಮೆಂಡಲ್ ಮಾಡಿದ ಪ್ರಯೋಗವನ್ನು ಸಂಕ್ಷಿಪ್ತವಾಗಿ ವಿವರಿಸಿ.

**ಉತ್ತರ :** ಎತ್ತರ ಮತ್ತು ಗಿಡ್ಡ ಬಟಾಣಿಗಳನ್ನು ತೆಗೆದುಕೊಂಡು ಸ್ವಕೀಯ ಪರಾಗಸ್ಪರ್ಶದಿಂದ ಬೆಳೆಸಿದನು. ಉದ್ದವಾದ ಬಟಾಣಿ ಗಿಡಗಳಿಂದ ಪಡೆದ ಬೀಜಗಳಿಂದ ಉದ್ದವಾದ ಗಿಡಗಳೇ ಬೆಳೆದವು. ಗಿಡ್ಡ ಬಟಾಣಿ ಗಿಡಗಳಿಂದ ಪಡೆದ ಬೀಜಗಳಿಂದ ಗಿಡ್ಡ ಗಿಡಗಳೇ ಬೆಳೆದವು. ಹೀಗೆ ಪಡೆದ ಗಿಡಗಳನ್ನು ಶುದ್ಧ ಸಂತಾನ ಎಂದು ಕರೆದನು.

ನಂತರ ಈ ಶುದ್ಧ ಸಂತಾನದ ಗಿಡಗಳನ್ನು ಬೆಳೆಸಿ, ಅವುಗಳಲ್ಲಿ ಪರಕೀಯ ಪರಾಗಸ್ಪರ್ಶದಿಂದ ಬೆಳೆಸಿ ಬೀಜಗಳನ್ನು ಪಡೆದನು. ಈ ಬೀಜಗಳನ್ನು ಬಿತ್ತನೆ ಮಾಡಿದನು. ಈಗ ಎಲ್ಲಾ ಸಸ್ಯಗಳೂ ಉದ್ದವಾದ ಬಟಾಣಿ ಸಸ್ಯಗಳಾಗಿ ಬೆಳೆದವು. ಇದನ್ನು $F_1$ ಅಥವಾ ಮೊದಲನೆಯ ತಳಿ ಪೀಳಿಗೆಯೆಂದು ಕರೆದನು.

$F_1$ ತಳಿ ಪೀಳಿಗೆಯಲ್ಲಿ ಉತ್ಪತ್ತಿಯಾದ ಬೀಜಗಳನ್ನು ಬಿತ್ತಿದಾಗ ಎತ್ತರವಾದ ಸಸ್ಯಗಳೂ ಗಿಡ್ಡವಾದ ಸಸ್ಯಗಳೂ ಬೆಳೆದವು. ಇವು ಎರಡನೆಯ ಪೀಳಿಗೆಯ ($F_2$) ಸಸ್ಯಗಳು. ಎರಡನೆಯ ಪೀಳಿಗೆಯ ಸಸ್ಯಗಳಲ್ಲಿ 787 ಎತ್ತರವಾದವುಗಳೂ, 277 ಗಿಡ್ಡಾದವುಗಳೂ ಇದ್ದವು. ಆದ್ದರಿಂದ ಅವುಗಳ ಪ್ರಮಾಣ 3:1 ಆಗಿತ್ತು.

ಈ ಪ್ರಯೋಗದಿಂದ ಮೆಂಡೆಲ್‌ನು ಒಂದೊಂದು ಜೀವಿಯಲ್ಲೂ ಒಂದೊಂದು ಲಕ್ಷಣಕ್ಕೂ ಪ್ರತ್ಯೇಕ ಕಾರಣವಿರಬೇಕೆಂದು ಬಗೆದನು.

6) ಜೀವನಿರೋಧಕಗಳು ಎಂದರೇನು ? ರೋಗಗಳನ್ನು ವಾಸಿಮಾಡುವುದಕ್ಕಲ್ಲದೆ ಜೀವನಿರೋಧಕಗಳ ಇತರ ಎರಡು ಉಪಯೋಗಗಳನ್ನು ತಿಳಿಸಿ.

**ಉತ್ತರ : ಜೀವನಿರೋಧಕ :** ಸೂಕ್ಷ್ಮಜೀವಿಗಳು ಹೊರಸೂಸುವ ವಿಷವಸ್ತುವನ್ನು ಜೀವನಿರೋಧಕ ಎನ್ನುವರು.

ಜೀವನಿರೋಧಕಗಳು ಸೂಕ್ಷ್ಮಜೀವಿಗಳ ಬೆಳವಣಿಗೆಯನ್ನು ಕಡಿಮೆ ಮಾಡುತ್ತವೆ ಇಲ್ಲವೆ ನಿಲ್ಲಿಸುತ್ತವೆ. ಆದ್ದರಿಂದ ಸೂಕ್ಷ್ಮಜೀವಿಗಳ ಬೆಳವಣಿಗೆಯನ್ನು ಕಡಿಮೆಮಾಡಲು ಇಲ್ಲವೆ ನಿಲ್ಲಿಸಲು ಇವುಗಳನ್ನು ಉಪಯೋಗಿಸುತ್ತಾರೆ.

**ಪ್ರಶ್ನೆ IV** 1) "ಜೀರ್ಣವಾಗದ ಆಹಾರವನ್ನು ಪ್ರಾಣಿಗಳ ದೇಹದಿಂದ ಹೊರಹಾಕುವುದು ವಿಸರ್ಜನ ಕ್ರಿಯೆಯಲ್ಲ" ಏಕೆ ?

**ಉತ್ತರ :** ಏಕೆಂದರೆ, ಜೀರ್ಣವಾಗದ ಆಹಾರ ವಸ್ತುಗಳು ಚಯಾಪಚಯ ಕ್ರಿಯೆಗಳ ಉತ್ಪನ್ನಗಳಲ್ಲ. ಆದ್ದರಿಂದ ಇದು ವಿಸರ್ಜನ ಕ್ರಿಯೆಯಲ್ಲ.

2) "ರಕ್ತದ ಒತ್ತಡ" ಎಂದರೇನು ?

**ಉತ್ತರ :** ಅಪಧಮನಿಗಳಲ್ಲಿ ರಕ್ತವು ನುಗ್ಗುವಾಗ ಅವುಗಳ ಸ್ಥಿತಿಸ್ಥಾಪಕ ಸಾಮರ್ಥ್ಯವುಳ್ಳ ಗೋಡೆಗಳ ಮೇಲೆ ಒತ್ತಡ ಬೀಳುತ್ತದೆ. ಈ ಒತ್ತಡವು ಹೃದಯದ ವಿಕಸನ ಕಾಲಕ್ಕಿಂತಲೂ ಅದರ ಸಂಕೋಚನ ಕಾಲದಲ್ಲಿ ಹೆಚ್ಚಾಗಿರುತ್ತದೆ. ಇದನ್ನು ರಕ್ತದ ಒತ್ತಡ ಎನ್ನುವರು.

3) ಮಾನವರಲ್ಲಿ ಗರ್ಭಕಟ್ಟಿದ ತತ್ತಿಯು ಯಾವ ಸಂದರ್ಭದಲ್ಲಿ ಹೆಣ್ಣು ಮಗುವಾಗಿ ಬೆಳೆಯುತ್ತವೆ ?

**ಉತ್ತರ :** X- ವರ್ಣತಂತುವಿರುವ ವೀರ್ಯಾಣುವು ತತ್ತಿಯೊಡನೆ ಸಂಯೋಗವಾದರೆ; ಗರ್ಭಕಟ್ಟಿದ ತತ್ತಿಯು ಹೆಣ್ಣುಮಗುವಾಗಿ ಬೆಳೆಯುತ್ತದೆ.

4) ದೇಹದ ಸಮತೋಲನವನ್ನು ನಿರ್ವಹಿಸುವುದರಲ್ಲಿ ಪಾತ್ರವಹಿಸುವ ಒಳಕಿವಿಯ ಭಾಗಗಳನ್ನು ಹೆಸರಿಸಿ.

**ಉತ್ತರ :** ಅರ್ಧಚಂದ್ರಾಕೃತಿಯ ನಾಳಗಳು, ಯೂಟ್ರಿಕ್ಯುಲಸ್.

5) "ಭ್ರಾತೃ ಅವಳಿಗಳು" ಎಂದರೇನು ?

**ಉತ್ತರ : ಭ್ರಾತೃ ಅವಳಿಗಳು :** ಸ್ತ್ರೀ ಅಂಡಾಶಯದಲ್ಲಿ ಎರಡು ತತ್ತಿಗಳು ಪ್ರಾಪ್ತಸ್ಥಿತಿಗೆ ಬಂದು ಫಲಿತಗೊಂಡರೆ, ಅವಳಿ ಮಕ್ಕಳು ಹುಟ್ಟುತ್ತವೆ. ಈ ಅವಳಿ ಮಕ್ಕಳನ್ನು ಭ್ರಾತೃ ಅವಳಿಗಳು ಎನ್ನುವರು.

6) ಲಿಂಗಸಂಬಂಧೀ ಅನುವಂಶೀಯತೆಗೆ ಎರಡು ಉದಾಹರಣೆಗಳನ್ನು ಕೊಡಿ.

**ಉತ್ತರ :** ಉದಾ ; ವರ್ಣಾಂಧತೆ ಮತ್ತು ಹೀಮೊಫಿಲಿಯಾ ಕಾಯಿಲೆ.

7) "ಪ್ರಾದೇಶಿಕತೆ" ಎಂದರೇನು ?

**ಉತ್ತರ : ಪ್ರಾದೇಶಿಕತೆ :** ತಮ್ಮ ಚಟುವಟಿಕೆಗಳನ್ನು

ಒಂದು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತಗೊಳಿಸುವ ಪ್ರಾಣಿಗಳ ಗುಣವನ್ನು ಪ್ರಾದೇಶಿಕತೆ ಎನ್ನುವರು.

8) ಮಾನವನು ಸ್ವಪ್ರೇರಣೆಯಿಂದ ಕುಟುಂಬ ಯೋಜನೆಯನ್ನು ಅನುಸರಿಸದಿದ್ದಲ್ಲಿ ಪ್ರಕೃತಿಯು ಯಾವ ಕ್ರಮದಿಂದ ಮಾನವ ಜನಸಂಖ್ಯೆಯನ್ನು ನಿಯಂತ್ರಿಸುತ್ತದೆ ?

**ಉತ್ತರ:** ಜೈವಿಕ ನಿಯಂತ್ರಣ ಕ್ರಮದಿಂದ.

**ಪ್ರಶ್ನೆ V** 1) ಪ್ರಾಣಿಗಳು ವಲಸೆ ಹೋಗಲು ಒಂದು ಕಾರಣ ತಿಳಿಸಿ.

**ಉತ್ತರ :** ವಾತಾವರಣದ ವೈಪರೀತ್ಯವನ್ನು ತಪ್ಪಿಸುವುದಕ್ಕಾಗಿ ಪ್ರಾಣಿಗಳು ವಲಸೆ ಹೋಗುತ್ತವೆ.

2) ಭಾರತದಲ್ಲಿ ಪಾಪಾಸುಕಳ್ಳಿಯ ಒಂದು ಪ್ರಭೇದದ ಬೆಳವಣಿಗೆಯನ್ನು ಹತೋಟಿಯಲ್ಲಿಡಲು ಉಪಯೋಗಿಸಿದ ಕೀಟವನ್ನು ಹೆಸರಿಸಿ.

**ಉತ್ತರ :** ಕೊಕೀನಿಯಲ್ ಕೀಟ.

3) ಪ್ರಾಣಿಗಳು "ಶೀತ ನಿದ್ದೆ" ಹೋಗಲು ಕಾರಣ ವೇನು ?

**ಉತ್ತರ :** ಶಾಖದ ವೈಪರೀತ್ಯದಿಂದ ತಪ್ಪಿಸಿಕೊಳ್ಳಲು ಪ್ರಾಣಿಗಳು ಶೀತನಿದ್ದೆ ಹೋಗುವವು.

4) ಮನೆಹೆಗ್ಗಣಗಳ ಸಂಖ್ಯೆಯನ್ನು ನಿಯಂತ್ರಿಸಲು ಬಳಸುವ ಒಂದು ವಿಧಾನವನ್ನು ತಿಳಿಸಿ.

**ಉತ್ತರ :** ಮನೆಹೆಗ್ಗಣಗಳನ್ನು ನಿಯಂತ್ರಿಸಲು ಕೆಲವು ತೀಕ್ಷ್ಣವಾದ ವಿಷ ವಸ್ತುಗಳನ್ನು ಬಳಸುವುದು. ಅವುಗಳನ್ನು ಸೆರೆಹಿಡಿಯುವುದು.

**ಪ್ರಶ್ನೆ VI :** ಕೆಳಗಿನ ಜೋಡಿಗಳ ನಡುವೆ ಇರುವ ಒಂದೊಂದು ವ್ಯತ್ಯಾಸವನ್ನು ತಿಳಿಸಿ.

1) ಸರಳ ಅಸ್ಥಿಭಂಗ ಮತ್ತು ಸಂಯುಕ್ತ ಅಸ್ಥಿಭಂಗ.

**ಉತ್ತರ :** ಸರಳ ಅಸ್ಥಿಭಂಗದಲ್ಲಿ ಅಸ್ಥಿಭಂಗವಾದ ಭಾಗದಲ್ಲಿ ಯಾವುದೇ ರೀತಿಯ ಗಾಯವಿರುವುದಿಲ್ಲ. ಆದರೆ ಸಂಯುಕ್ತ ಅಸ್ಥಿಭಂಗದಲ್ಲಿ ಅಸ್ಥಿಭಂಗವಾದ ಸ್ಥಾನದಲ್ಲಿ ಗಾಯವಾಗಿ ಒಮ್ಮೊಮ್ಮೆ ಮೂಳೆ ಹೊರಗೆ ಹಾದಿರುತ್ತದೆ.

2) ಪ್ರಥಮ ಮೂಲ ಮತ್ತು ಪ್ರಥಮ ಕಾಂಡ.

**ಉತ್ತರ :** ಪ್ರಥಮ ಮೂಲವು, ಬೀಜವು ಮೊಳೆಯುವಾಗ ಪ್ರಥಮ ಕಾಂಡಕ್ಕಿಂತ ಮೊದಲು ಬೆಳೆಯಲು ಆರಂಭಿಸುತ್ತದೆ. ಪ್ರಥಮ ಮೂಲವು ಭೂಮಿಯಲ್ಲಿ ಸೇರಿದ ನಂತರ ಪ್ರಥಮ ಕಾಂಡವು ಮೇಲೆ ಬರುತ್ತದೆ.

3) ಪ್ರೊಕ್ಯಾರಿಯೋಟಿಕ್ ಮತ್ತು ಯೂಕ್ಯಾರಿಯೋಟಿಕ್ ಜೀವಕೋಶಗಳು.

**ಉತ್ತರ :** ಪ್ರೊಕ್ಯಾರಿಯೋಟಿಕ್ ಜೀವಕೋಶದಲ್ಲಿ ನ್ಯೂಕ್ಲಿಯಸ್ ಇರುವುದಿಲ್ಲ. ಆದರೆ ಯೂಕ್ಯಾರಿಯೋಟಿಕ್ ಜೀವಕೋಶದಲ್ಲಿ ನಿರ್ದಿಷ್ಟವಾದ ನ್ಯೂಕ್ಲಿಯಸ್ ಇರುತ್ತದೆ.

**ಪ್ರಶ್ನೆ VII** ಈ ಕೆಳಗಿನವುಗಳಿಗೆ ವೈಜ್ಞಾನಿಕ ಕಾರಣಗಳನ್ನು ಕೊಡಿ.

1) ಕೀಟಾಹಾರಿ ಸಸ್ಯಗಳು ಕೀಟಗಳನ್ನು ಹಿಡಿಯುತ್ತವೆ.

**ಉತ್ತರ :** ಸಸ್ಯಗಳ ಆಹಾರ ಮುಖ್ಯವಾಗಿ ಕೀಟಗಳಾಗಿರುವುದರಿಂದ ಕೀಟಹಾರಿ ಸಸ್ಯಗಳು, ತಮ್ಮ ಎಲೆಗಳನ್ನು ಕೀಟಗಳನ್ನು ಹಿಡಿಯಲು ಮಾರ್ಪಡಿಸಿಕೊಂಡಿರುತ್ತವೆ.

2) ಹೂವುಗಳಲ್ಲಿ ಪುಷ್ಪದಳಗಳು ಸಾಮಾನ್ಯವಾಗಿ ಹೊಳಪಾದ ಬಣ್ಣಗಳನ್ನು ಹೊಂದಿರುತ್ತವೆ.

**ಉತ್ತರ :** ಕೀಟಗಳ ಸಂಪರ್ಕದಿಂದ ಪರಾಗಸ್ಪರ್ಶ ಕ್ರಿಯೆಯನ್ನು ಸಸ್ಯಗಳು ಪರಾಗಸ್ಪರ್ಶ ಕಾರ್ಯವನ್ನು ಸಾಧಿಸುತ್ತವೆ. ಆದ್ದರಿಂದ ಕೀಟಗಳನ್ನು ಆಕರ್ಷಿಸಲು ಪುಷ್ಪದಳಗಳು ಆಕರ್ಷಕ ಬಣ್ಣಗಳನ್ನು ಹೊಂದಿರುತ್ತವೆ.

**ಪ್ರಶ್ನೆ VIII** ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ಭರ್ತಿಮಾಡಿ. (ದಪ್ಪಕ್ಷರದ ಪದಗಳು ಭರ್ತಿಮಾಡಿದ ಪದಗಳು).

**ಉತ್ತರ :** 1) ಜೀವಕೋಶದ ಶಕ್ತಿಕೇಂದ್ರ **ಮೈಟೋಕಾಂಡ್ರಿಯಾ** ಆಗಿದೆ.

2) ಏಡಿಯು **ಕ್ರಸ್ಟೇಸಿಯಾ** ಅಥವಾ ಕಠಿಣ ಚರ್ಮಿಗಳು ವಂಶಕ್ಕೆ ಸೇರಿದೆ.

3) ಬ್ಯಾಕ್ಟೀರಿಯಾಗಳನ್ನು ಸೋಂಕುವ ವೈರಸ್‌ಗಳಿಗೆ **ಆರ್ಬೋವೈರಸ್** ಎಂದು ಹೆಸರು.

4) ಪರೋಪಜೀವಿಗಳ ಆಹಾರ ಸರಪಣಿಯಲ್ಲಿ ಆಹಾರದ ಪಿರಾಮಿಡ್ **ತಲೆಕೆಳಗಾಗಿರುತ್ತದೆ.**

---

# ವಿಜ್ಞಾನ

## ಜೂನ 1988 1 ನೇ ಪತ್ರಿಕೆ

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

ವೇಳೆ : 2½ ಗಂಟೆ ] [ ಗುಣಗಳು : 65

ಪ್ರಶ್ನೆ 1. a) ಚಲಿಸುವ ಸುರುಳಿಯ ಗೆಲ್ವೊನೋಮೀಟರಿನ ಅಂದವಾದ ಚಿತ್ರಬರೆದು ಅದರ ಭಾಗಗಳನ್ನು ಗುರುತಿಸಿ. ಗೆಲ್ವೊನೋಮೀಟರನ್ನು ಅಮ್ಮೀಟರಾಗಿ ಹೇಗೆ ಪರಿವರ್ತಿಸುವಿರಿ ?

ಉತ್ತರ :



ಚಲಿಸುವ ಸುರುಳಿಯ ಗೆಲ್ವೊನೋಮೀಟರ

ಗೆಲ್ವೊನೋಮೀಟರಿಗೆ ಸಮಾಂತರವಾಗಿ ರೋಧವನ್ನು (ಪಾರ್ಶ್ವರೋಧ) ಜೋಡಿಸುವುದರಿಂದ ಗೆಲ್ವೊನೋಮೀಟರನ್ನು ಅಮ್ಮೀಟರಾಗಿ ಪರಿವರ್ತಿಸಬಹುದು.

b) ಕಾಂತೀಯ ಧ್ರುವಗಳ ನಡುವಿನ ವಿಲೋಮ ವರ್ಗ ನಿಯಮವನ್ನು ನಿರೂಪಿಸಿ.

ಉತ್ತರ : ಕಾಂತೀಯ ಧ್ರುವಗಳ ನಡುವಿನ ವಿಲೋಮ ವರ್ಗನಿಯಮ : ಎರಡು ಕಾಂತೀಯ ಧ್ರುವಗಳ ನಡುವೆ ವರ್ತಿಸುವ ಬಲವು, ಆ ಧ್ರುವಗಳ ಸಾಮರ್ಥ್ಯದ ಗುಣಲಬ್ಧಕ್ಕೆ ಸಮಾನುಪಾತದಲ್ಲಿಯೂ ಮತ್ತು ಅವುಗಳ ನಡುವಿನ ದೂರದ ವರ್ಗಕ್ಕೆ ವಿಲೋಮಾನುಪಾತದಲ್ಲಿಯೂ ಇರುತ್ತದೆ.

c) ಸ್ಥಾಯೀ ವಿದ್ಯುದಾವೇಶವನ್ನು ಪತ್ತೆಹಚ್ಚಲು ಬಳಸುವ ಸಾಧನ ಯಾವುದು ?

ಉತ್ತರ : ಲೋಹಪತ್ರ ವಿದ್ಯುದ್ದರ್ಶಕ.

ಪ್ರಶ್ನೆ 2. a) X-ಕಿರಣ ನಳಿಕೆಯ (X-Ray-tube) ಅಂದವಾದ ಚಿತ್ರ ಸಹಿತ X-ಕಿರಣಗಳನ್ನು ಹೇಗೆ ಪಡೆಯಬಹುದೆಂಬುದನ್ನು ವಿವರಿಸಿ.

ಉತ್ತರ :




X-ಕಿರಣಗಳನ್ನು ಪಡೆಯುವ ಬಗೆ :

B-ಗೋಲದಲ್ಲಿರುವ ಅನಿಲವು ಅತ್ಯಂತ ಕಡಿಮೆ ಒತ್ತಡದಲ್ಲಿರುತ್ತದೆ. F-ತಂತಿಯನ್ನು ಬ್ಯಾಟರಿಯ ಸಹಾಯದಿಂದ ಅತ್ಯಂತ ಹೆಚ್ಚಿನ ಉಷ್ಣತೆಗೆ ಕಾಯಿಸುತ್ತಾರೆ. ಆಗ F-ತಂತಿಯು ಎಲೆಕ್ಟ್ರಾನ್‌ಗಳನ್ನು ಬಿಡುಗಡೆ ಮಾಡುತ್ತದೆ. ಈ ಎಲೆಕ್ಟ್ರಾನ್‌ಗಳು A-ಧನಾಗ್ರದ ಕಡೆಗೆ ಚಲಿಸುತ್ತವೆ. ಧನಾಗ್ರವು ತಾಮ್ರದ ಗಟ್ಟಿ ಇದ್ದು, ಅದಕ್ಕೆ ಟಂಗ್‌ಸ್ಟನ್ನಿನ ಆವರಣವಿರುತ್ತದೆ. ಈ ಲೋಹವನ್ನು ವೇಗವಾಗಿ ಚಲಿಸುವ ಎಲೆಕ್ಟ್ರಾನ್‌ಗಳು ತಾಡಿಸಿದಾಗ X-ಕಿರಣಗಳು ಉತ್ಪನ್ನವಾಗುತ್ತವೆ.

b) ದ್ರವ್ಯದ ನಾಲ್ಕು ಸ್ಥಿತಿಗಳನ್ನು ಬರೆಯಿರಿ.

ಉತ್ತರ : ದ್ರವ್ಯದ ನಾಲ್ಕು ಸ್ಥಿತಿಗಳು : 1) ಘನ, 2) ದ್ರವ, 3) ಅನಿಲ, 4) ಪ್ಲಾಸ್ಮಾಸ್ಥಿತಿ.

c) ವಾಹಕದ ವಿದ್ಯುತ್‌ಪ್ರವಾಹವನ್ನು ಅಳೆಯಲು ಬಳಸುವ ಮೂಲಮಾನವನ್ನು ತಿಳಿಸಿ.

ಉತ್ತರ : ಅಂಪೇರ್.

ಪ್ರಶ್ನೆ 3. a) ವಿದ್ಯುಚ್ಛಕ್ತಿಯ ವ್ಯವಹಾರಿಕ ಮೂಲಮಾನವನ್ನು ತಿಳಿಸಿ. 60 ವಾಟ್ ವಿದ್ಯುದ್ದೀಪವು ಪ್ರತಿಯೊಂದು ದಿನ 12 ಗಂಟೆಕಾಲ ಉರಿದರೆ, 30 ದಿನಗಳಲ್ಲಿ ಎಷ್ಟು ವಿದ್ಯುತ್ ವ್ಯಯವಾಗುತ್ತದೆ ?

ಉತ್ತರ : ವಿದ್ಯುಚ್ಛಕ್ತಿಯ ವ್ಯವಹಾರಿಕ ಮೂಲಮಾನ : ಕಿಲೋ ವಾಟ್ ಅವರ್.

**ರೀತಿ :** ಬಳಸಿದ ಶಕ್ತಿ = ಪ್ರತಿಏಕಮಾನ ಕಾಲದಲ್ಲಿ ವ್ಯಯವಾದ ಶಕ್ತಿ × ಒಟ್ಟು ಬಳಕೆಯ ಕಾಲ.

= 60 w × (12 × 30) h
= (60 × 360) ವಾಟ್-ಅವರ್
= 21,600 ವಾಟ್-ಅವರ್
21.6 ಕಿ.ವಾ ಅವರ್ = 21.6 ಯುನಿಟ್‌ಗಳು.

b) ಬೆಳಕಿನ ವಕ್ರೀಭವನ ಎಂದರೇನು ?

**ಉತ್ತರ : ಬೆಳಕಿನ ವಕ್ರೀಭವನ :** ಬೆಳಕು ಒಂದು ಮಧ್ಯಮದಿಂದ ಇನ್ನೊಂದು ಮಧ್ಯಮಕ್ಕೆ ಪ್ರವೇಶಿಸುವಾಗ ಉಂಟಾಗುವ ಬಾಗುವಿಕೆಯನ್ನು ಬೆಳಕಿನ ವಕ್ರೀಭವನ ಎನ್ನುವರು.

**ಪ್ರಶ್ನೆ 4 (a)** ಈ ಕೆಳಗಿನ ಉಪಕರಣಗಳಲ್ಲಿ ವಿದ್ಯುತ್ಪ್ರವಾಹದ ಯಾವ ಪರಿಣಾಮವು ಉಪಯೋಗಿಸಲ್ಪಟ್ಟಿದೆ ?

1) ವಿದ್ಯುತ್ ಇಸ್ತ್ರಿ ಪೆಟ್ಟಿಗೆ 2) ಟ್ಯಾಂಜೆಂಟ್ ಗೆಲ್ವನೋಮೀಟರ 3) ವೋಲ್ಟಾಮೀಟರ್ 4) ವಿದ್ಯುದ್ದೀಪ.

**ಉತ್ತರ :** 1) ವಿದ್ಯುತ್ ಇಸ್ತ್ರಿಪೆಟ್ಟಿಗೆ—ವಿದ್ಯುತ್ತಿನ ಶಾಖೋತ್ಪತ್ತಿಯ ಪರಿಣಾಮ.

2) ಟ್ಯಾಂಜೆಂಟ್ ಗೆಲ್ವನೋಮೀಟರ್—ವಿದ್ಯುತ್ತಿನ ಕಾಂತೀಯ ಪರಿಣಾಮ

3) ವೋಲ್ಟಾಮೀಟರ್—ವಿದ್ಯುತ್‌ನ ರಾಸಾಯನಿಕ ಪರಿಣಾಮ.

4) ವಿದ್ಯುದ್ದೀಪ—ವಿದ್ಯುತ್‌ನ ಶಾಖೋತ್ಪತ್ತಿ ಪರಿಣಾಮ

b) ವಿದ್ಯುಚ್ಛಕ್ತಿಯನ್ನು ಯಾಂತ್ರಿ ಶಕ್ತಿಯನ್ನಾಗಿ ಪರಿವರ್ತಿಸಲು ಉಪಯೋಗಿಸುವ ಸಾಧನ ಯಾವುದು ?

**ಉತ್ತರ : ಡಿ.ಸಿ. ಮೋಟಾರ್.**

**ಪ್ರಶ್ನೆ 5. a)** ಮಾನವ ಕಣ್ಣಿನ ಎರಡು ದೋಷಗಳನ್ನು ತಿಳಿಸಿ. ಅವುಗಳನ್ನು ಹೇಗೆ ಸರಿಪಡಿಸುವಿರಿ.

**ಉತ್ತರ : ಮಾನವ ಕಣ್ಣಿನ ಎರಡು ದೋಷಗಳು :** 1) ದೂರದೃಷ್ಟಿ ದೋಷ 2) ಸಮೀಪದೃಷ್ಟಿ ದೋಷ.

ದೂರದೃಷ್ಟಿ ದೋಷವನ್ನು ನಿವಾರಿಸಲು ಪೀನ ಮಸೂರವಿರುವ ಕನ್ನಡಕವನ್ನು ಬಳಸಬೇಕು. ಸಮೀಪ ದೃಷ್ಟಿದೋಷವನ್ನು ನಿವಾರಿಸಲು ನಿಮ್ನ ಮಸೂರವಿರುವ ಕನ್ನಡಕವನ್ನು ಬಳಸಬೇಕು.

b) ಬಲಯುಗ್ಮ ಎಂದರೇನು ?

**ಉತ್ತರ : ಬಲಯುಗ್ಮ :** ಸಮನಾಗಿಯೂ, ಸಮಾಂತರವಾಗಿಯೂ ಇರುವ ಅಸದೃಶ ಬಲಗಳ ಜೋಡಿಯನ್ನು ಬಲಯುಗ್ಮ ಎನ್ನುವರು.

**ಪ್ರಶ್ನೆ 6. a)** ದ್ಯುತಿವಿದ್ಯುತ್ಪರಿಣಾಮದ (Photo-electric Effect) ಎರಡು ಉಪಯೋಗಗಳನ್ನು ತಿಳಿಸಿ.

**ಉತ್ತರ :** 1) ದ್ಯುತಿ ವಿದ್ಯುತ್ ನಳಿಕೆಗಳ ತಯಾರಿಕೆಯಲ್ಲಿ -2) ದ್ಯುತಿ ಕೋಶಗಳ ತಯಾರಿಕೆಯಲ್ಲಿ ದ್ಯುತಿವಿದ್ಯುತ್ಪರಿಣಾಮದ ಉಪಯೋಗವಾಗಿದೆ.

b) ತಟಸ್ಥ ಬಿಂದು (Null point) ಎಂದರೇನು ?

**ಉತ್ತರ : ತಟಸ್ಥ ಬಿಂದು :** ಕಾಂತಕ್ಷೇತ್ರದಲ್ಲಿ ಯಾವ ಬಿಂದುವಿನಲ್ಲಿ ಕಾಂತ ಸೂಜಿಯ ಮೇಲೆ ವರ್ತಿಸುವ ಒಟ್ಟು ಬಲವು ಶೂನ್ಯವಾಗಿರುವುದೋ ಆ ಬಿಂದುವನ್ನು ತಟಸ್ಥ ಬಿಂದು (Null point) ಎನ್ನುವರು.

**ಪ್ರಶ್ನೆ 7. a)** ಪ್ರತಿಫಲನ ನಿಯಮವನ್ನು ತಿಳಿಸಿ.

**ಉತ್ತರ : ಪ್ರತಿಫಲನ ನಿಯಮ :** 1) ಪತನಕಿರಣ ಪ್ರತಿಫಲನ ಕಿರಣ ಮತ್ತು ಪತನಬಿಂದುವಿನಲ್ಲಿ ಪ್ರತಿಫಲನ ಮೇಲ್ಮೈಗೆ ಎಳೆದ ಲಂಬ ಇವು ಒಂದೇ ಸಮತಲದಲ್ಲಿರುತ್ತವೆ. ಪತನಕಿರಣ ಮತ್ತು ಪ್ರತಿಫಲನ ಕಿರಣಗಳು ಲಂಬದ ವಿರುದ್ಧ ಬದಿಗಳಲ್ಲಿರುತ್ತವೆ.

2) ಪತನಕೋನವು ಪ್ರತಿಫಲನಕೋನಕ್ಕೆ ಸಮ ಇರುವುದು.

b) ವಿದ್ಯುತ್ ವಿಶ್ಲೇಷಣೆ ಮಾಡುವಾಗ ನೀರಿಗೆ ಕೆಲವು ತೊಟ್ಟು ಆಮ್ಲವನ್ನು ಬೆರೆಸುತ್ತೇವೆ ಏಕೆ ?

**ಉತ್ತರ :** ಶುದ್ಧ ನೀರಿನಲ್ಲಿ ವಿದ್ಯುತ್ತು ಹರಿಯುವುದಿಲ್ಲ. ಆದ್ದರಿಂದ ನೀರಿನಲ್ಲಿ ವಿದ್ಯುತ್ತು ಹರಿಯುವಂತೆ ಮಾಡಲು ನೀರಿಗೆ ಕೆಲವು ತೊಟ್ಟು ಆಮ್ಲವನ್ನು ಬೆರೆಸುತ್ತೇವೆ.

**ಪ್ರಶ್ನೆ 8. a)** ನ್ಯೂಕ್ಲಿಯ ಕ್ರಿಯಾಕಾರಿ ಎಂದರೇನು? ಇದರಲ್ಲಿ ಉಂಟಾಗುವ ಶಕ್ತಿಯನ್ನು ಹೇಗೆ ನಿಯಂತ್ರಿಸುತ್ತಾರೆ ?

**ಉತ್ತರ : ನ್ಯೂಕ್ಲಿಯ ಕ್ರಿಯಾಕಾರಿ :** ಪರಮಾಣು ಶಕ್ತಿಯನ್ನು ಶಾಖ ಇಲ್ಲವೆ ವಿದ್ಯುತ್ ಶಕ್ತಿಯನ್ನಾಗಿ ಪರಿವರ್ತಿಸುವ ಸಾಧನವನ್ನು ನ್ಯೂಕ್ಲಿಯ ಕ್ರಿಯಾಕಾರಿ ಎನ್ನುವರು.

ನ್ಯೂಕ್ಲಿಯ ಕ್ರಿಯಾಕಾರಿಯಲ್ಲಿ ಉಂಟಾಗುವ ಶಕ್ತಿಯನ್ನು ನಿಯಂತ್ರಿಸಲು ನಿಯಂತ್ರಕ ಸರಳುಗಳನ್ನು ಉಪಯೋಗಿ

ಸುವರು. ಆದರಿಂದ ವಿದಳನ ಕ್ರಿಯೆಯು ನಿಧಾನವಾಗಿ ಸಾಗು ವುದು.

b) ಶ್ರವಣಾತೀತ ಧ್ವನಿಯ ಒಂದು ಉಪಯೋಗವನ್ನು ತಿಳಿಸಿ.

**ಉತ್ತರ :** ಜಲಾಂತರ್ಗತ ವಸ್ತುಗಳ ಇರುವಿಕೆಯನ್ನು ಪತ್ತೆಹಚ್ಚಲು ಶ್ರವಣಾತೀತ ಧ್ವನಿಯನ್ನು ಉಪಯೋಗಿಸುವರು.

**ಪ್ರಶ್ನೆ 9.** a) ವಿದ್ಯುದ್ವಿಶ್ಲೇಷ್ಯಗಳು (Electrolytes) ಎಂದರೇನು ? ದುರ್ಬಲ ಮತ್ತು ಪ್ರಬಲ ವಿದ್ಯುದ್ವಿಶ್ಲೇಷ್ಯಗಳನ್ನು ಹೇಗೆ ಗುರುತಿಸುವಿರಿ ? ಪ್ರತಿಯೊಂದಕ್ಕೂ ಎರಡು ಉದಾಹರಣೆ ಕೊಡಿರಿ.

**ಉತ್ತರ :** ವಿದ್ಯುದ್ವಿಶ್ಲೇಷ್ಯಗಳು : ರಾಸಾಯನಿಕ ಪ್ರಕ್ರಿಯೆಯಿಂದ ಯಾವ ದ್ರಾವಣದಲ್ಲಿ ವಿದ್ಯುತ್ತು ಹರಿಯ ಬಲ್ಲುದೋ ಆ ದ್ರಾವಣವನ್ನು ವಿದ್ಯುದ್ವಿಶ್ಲೇಷ್ಯ (Electrolytes) ಎನ್ನುವರು.

ಪ್ರಬಲ ವಿದ್ಯುದ್ವಿಶ್ಲೇಷ್ಯದಲ್ಲಿ ವಸ್ತುವು ಸಂಪೂರ್ಣವಾಗಿ ಅಯಾನುಗಳಲ್ಲಿ ಪರಿವರ್ತನೆ ಹೊಂದಿರುತ್ತದೆ. ದುರ್ಬಲ ವಿದ್ಯುದ್ವಿಶ್ಲೇಷ್ಯದಲ್ಲಿ ವಸ್ತುವು ಸಂಪೂರ್ಣವಾಗಿ ಅಯಾನುಗಳಲ್ಲಿ ಪರಿವರ್ತನೆ ಹೊಂದಿರುವುದಿಲ್ಲ.

ಪ್ರಬಲ ವಿದ್ಯುದ್ವಿಶ್ಲೇಷ್ಯಗಳು ; 1) ಅಡುಗೆ ಉಪ್ಪಿನ ದ್ರಾವಣ 2) ಸೋಡಿಯಂ ಹೈಡ್ರಾಕ್ಸೈಡ್ ದ್ರಾವಣ.

ದುರ್ಬಲ ವಿದ್ಯುದ್ವಿಶ್ಲೇಷ್ಯಗಳು : 1) ಸಕ್ಕರೆಯ ದ್ರಾವಣ 2) ನೀರು.

b) ದ್ವಿಶರ್ಕರಗಳು ಎಂದರೇನು ? ಒಂದು ಉದಾಹರಣೆ ಕೊಡಿ.

**ಉತ್ತರ :** ದ್ವಿಶರ್ಕರಗಳು : ಎರಡು ಏಕಶರ್ಕರಿಗಳ ಅಣುಗಳು ನೀರಿನ ಒಂದು ಅಣುವನ್ನು ಹೊರಗೆ ಹಾಕುವುದರ ಮೂಲಕ ಸೇರುವುದರಿಂದ ಉಂಟಾಗುವ ಸಂಯುಕ್ತವನ್ನು ದ್ವಿಶರ್ಕರಿಗಳು ಅಥವಾ ಇಮ್ಮಡಿ ಶರ್ಕರ (Double Sugar) ಗಳು ಎನ್ನುವರು.

ಉದಾ : ಸುಕ್ರೋಸ್, ಮಾಲ್ಟೋಸ್ ಮುಂತಾದವು.

c) ಕಬ್ಬಿಣವನ್ನು ಗಂಧಕದೊಡನೆ ಕಾಯಿಸಿದಾಗ ಉಂಟಾಗುವ ಸಂಯುಕ್ತ ವಸ್ತುವನ್ನು ತಿಳಿಸಿ.

**ಉತ್ತರ :** ಕಬ್ಬಿಣದ ಸಲ್ಫೈಡ್ ಅಥವಾ ಅಯರ್ನ್ ಸಲ್ಫೈಡ್.

**ಪ್ರಶ್ನೆ 10.** a) ಬೆಸ್ಸಿಮರ್ ಪರಿವರ್ತಕದ ಅಂದವಾದ ಚಿತ್ರ ಬರೆದು, ಅದರ ಭಾಗಗಳನ್ನು ಗುರುತಿಸಿರಿ.

ಉತ್ತರಕ್ಕೆ ಅಕ್ಟೋಬರ 1987 ರ ಪ್ರಶ್ನೆ 3 (a) ನೋಡಿರಿ.

b) ದ್ರವರಾಜ (Aqua Regia) ಎಂದರೇನು ? ಅದನ್ನು ಏತಕ್ಕೆ ಉಪಯೋಗಿಸುತ್ತಾರೆ ?

ಉತ್ತರಕ್ಕೆ ಅಕ್ಟೋಬರ 1987ರ ಪ್ರಶ್ನೆ 6 (b) ನೋಡಿ

c) ಸಾಮಾನ್ಯ ಉಪ್ಪಿನ ರಾಸಾಯನಿಕ ಸೂತ್ರವನ್ನು ಬರೆಯಿರಿ.

**ಉತ್ತರ :** ಸಾಮಾನ್ಯ ಉಪ್ಪಿನ ರಾಸಾಯನಿಕ ಸೂತ್ರ : NaCl.

**ಪ್ರಶ್ನೆ 11.** a) ಇಂಗಾಲದ ಎರಡು ಬಹುರೂಪಗಳನ್ನು ತಿಳಿಸಿ. ಪ್ರತಿಯೊಂದರ ಒಂದೊಂದು ಉಪಯೋಗವನ್ನು ತಿಳಿಸಿ.

**ಉತ್ತರ :** ಇಂಗಾಲದ ಎರಡು ಬಹುರೂಪಗಳು : 1) ವಜ್ರ 2) ಗ್ರಾಫೈಟ್.

**ಉಪಯೋಗ :** ವಜ್ರವನ್ನು ಗಾಜು ಕತ್ತರಿಸುವ ಉಪಕರಣದಲ್ಲಿ, ಗ್ರಾಫೈಟ್‌ನ್ನು ವಿದ್ಯುದಾಗ್ರಗಳನ್ನು ತಯಾರಿಸಲು ಉಪಯೋಗಿಸುವರು.

b) ಇನ್ವರ್ ಉಕ್ಕಿನ ಒಂದು ಮುಖ್ಯವಾದ ಉಪಯೋಗವನ್ನು ತಿಳಿಸಿ.

**ಉತ್ತರ :** ಇನ್ವರ್ ಉಕ್ಕನ್ನು ಗಡಿಯಾರದ ಲೋಲಕವನ್ನು ತಯಾರಿಸಲು ಉಪಯೋಗಿಸುವರು.

**ಪ್ರಶ್ನೆ 12.** a) ಬೆಂಜೀನಿನ (Benzene) ರಚನಾತ್ಮಕ ಸೂತ್ರವನ್ನು ಮತ್ತು ಅಣು ಸೂತ್ರವನ್ನು ಬರೆಯಿರಿ.

**ಉತ್ತರ :** ಬೆಂಜೀನಿನ ರಚನಾತ್ಮಕ ಸೂತ್ರ.

ಅಣುಸೂತ್ರ $C_6H_6$




b) ಕೊಠಡಿಯ ಉಷ್ಣತೆಯಲ್ಲಿ ದ್ರವರೂಪದಲ್ಲಿರುವ ಹ್ಯಾಲೋಜಿನ್‌ನ್ನು ತಿಳಿಸಿ.

**ಉತ್ತರ :** ದ್ರವರೂಪದ ಹ್ಯಾಲೋಜಿನ್: ಬ್ರೋಮಿನ್

**ಪ್ರಶ್ನೆ 13. a)** ಕಂದು ಉಂಗುರದ ಪರೀಕ್ಷೆ ಎಂದರೇನು ? ವಿವರಿಸಿ. ಇದನ್ನು ಯಾವ ಉದ್ದೇಶಕ್ಕಾಗಿ ಬಳಸುತ್ತಾರೆ ?

**ಉತ್ತರ : ಕಂದು ಉಂಗುರದ ಪರೀಕ್ಷೆ :** ಹೊಸದಾಗಿ ತಯಾರಿಸಿದ ಫೆರಸ್ ಸಲ್ಫೈಟನ ದ್ರಾವಣವನ್ನು ನೈಟ್ರೇಟ್‌ನ ದ್ರಾವಣಕ್ಕೆ ಸೇರಿಸಿ, ಮಿಶ್ರಣವನ್ನು ತಂಪುಗೊಳಿಸಿ ಪ್ರನಾಳದ ಪಕ್ಕದ ಮೂಲಕ ನಿಧಾನವಾಗಿ ಪ್ರಬಲ ಗಂಧಕಾಮ್ಲವನ್ನು ಹರಿಸಿ. ಆಮ್ಲವು ತಳದಲ್ಲಿ ಶೇಖರವಾಗುತ್ತದೆ. ಆಮ್ಲವು ದ್ರಾವಣವನ್ನು ಸಂಧಿಸುವಲ್ಲಿ ಕಂದು ಬಣ್ಣದ ಉಂಗುರವು ನಿರ್ಮಾಣವಾಗುತ್ತದೆ. ಇದನ್ನು ಕಂದು ಉಂಗುರದ ಪರೀಕ್ಷೆ ಎನ್ನುವರು.

ಈ ಪರೀಕ್ಷೆಯನ್ನು ನೈಟ್ರೇಟ್‌ನ್ ಇರುವಿಕೆಯನ್ನು ಪತ್ತೆ ಹಚ್ಚಲು ಬಳಸುತ್ತಾರೆ.

**b)** ನೀರನ್ನು ಸಾರ್ವತ್ರಿಕ ದ್ರಾವಕ ಎಂದು ಕರೆಯಲು ಕಾರಣವೇನು ?

**ಉತ್ತರ :** ನೀರಿನಲ್ಲಿ ನಿಸರ್ಗದಲ್ಲಿಯ ಬಹಳಷ್ಟು ವಸ್ತುಗಳು ಕರಗುವುದರಿಂದ ಅದನ್ನು ಸಾರ್ವತ್ರಿಕ ದ್ರಾವಕ ಎನ್ನುವರು.

**ಪ್ರಶ್ನೆ 14. a)** ಸಾಬೂನನ್ನು ಹೇಗೆ ತಯಾರಿಸುತ್ತಾರೆ?

**ಉತ್ತರ :** ಸಸ್ಯಎಣ್ಣೆ ಮತ್ತು ಸೋಡಿಯಂ ಹೈಡ್ರಾಕ್ಸೈಡ್‌ನ ದ್ರಾವಣಗಳ ಮಿಶ್ರಣವನ್ನು ಒತ್ತಡದಲ್ಲಿ ಹಾಗೂ ಮುಚ್ಚಿದ ಕ್ರಿಯಾಪಾತ್ರೆಯಲ್ಲಿ ಕಾಯಿಸಬೇಕು. ಉನ್ನತ ಒತ್ತಡದ ಪರಿಣಾಮದಿಂದ ಹೆಚ್ಚಿನ ಕುದಿಯುವ ಬಿಂದುವಿನಲ್ಲಿ ಎಣ್ಣೆಯು ವಿಭಜನೆ ಹೊಂದುತ್ತದೆ. ಈ ಹೆಚ್ಚಿನ ಉಷ್ಣತೆ ಮತ್ತು ಒತ್ತಡದಲ್ಲಿ ರಾಸಾಯನಕ್ರಿಯೆಯು ನಡೆದು ಸಾಬೂನು ಮತ್ತು ಗ್ಲಿಸರಾಲ್‌ಗಳು ಉತ್ಪನ್ನವಾಗುತ್ತವೆ. ಈ ಸಾಬೂನು ಮತ್ತು ಗ್ಲಿಸರಾಲ್‌ಗಳ ಮಿಶ್ರಣವನ್ನು ತಣಿಸಿ, ಅದಕ್ಕೆ ಸೋಡಿಯಂಕ್ಲೋರೈಡ್‌ನ ಪ್ರಬಲ ದ್ರಾವಣವನ್ನು ಸೇರಿಸಬೇಕು. ಲವಣದ ದ್ರಾವಣದಲ್ಲಿ ಗ್ಲಿಸರಾಲ್ ವಿಲೀನಗೊಳ್ಳುತ್ತದೆ. ಆದರಿಂದ ಸಾಬೂನು ಘನರೂಪದಿಂದ ಬೇರ್ಪಡುತ್ತದೆ. ಇದನ್ನು ಬಿಸಿಯಾದ ನಿರ್ವಾತ ಕೋಷ್ಠದಲ್ಲಿ ಒಣಗಿಸುತ್ತಾರೆ. ನಂತರ ಅದನ್ನು ದೊಡ್ಡ ಅಚ್ಚುಗಳಲ್ಲಿ ಸಂಕುಚಿಸಿ ಬಾರುಗಳ ಇಲ್ಲವೆ ಬಿಲ್ಲೆಗಳ ರೂಪಕೊಡುತ್ತಾರೆ.

**b)** ಬಿಳಿಯ ರಂಜಕವನ್ನು ನೀರಿನಲ್ಲಿ ಇಟ್ಟರಲು ಕಾರಣವೇನು ?

**ಉತ್ತರ :** ಬಿಳಿಯ ರಂಜಕವು ಅತ್ಯಂತ ಪಟುವಾದ ವಸ್ತುವು. ಅದನ್ನು ಗಾಳಿಯಲ್ಲಿಟ್ಟರೆ ಗಾಳಿಯಲ್ಲಿಯ ಆಮ್ಲಜನಕದೊಡನೆ ವರ್ತಿಸಿ ಹೊತ್ತಿಕೊಂಡು ಉರಿಯುತ್ತದೆ. ಆದ್ದರಿಂದ ಅದನ್ನು ನೀರಿನಲ್ಲಿ ಸಂಗ್ರಹಿಸಿ ಇಡುವರು.

**ಪ್ರಶ್ನೆ 15. a)** ಪ್ರೋಟೀನ್ ದೊರೆಯುವ ಸಾಮಾನ್ಯ ಮೂಲಗಳು ಯಾವುವು ?

**ಉತ್ತರ : ಪ್ರೋಟೀನ್ ದೊರೆಯುವ ಸಾಮಾನ್ಯ ಮೂಲಗಳು :** ಮಾಂಸ, ಮೀನು, ಮೊಟ್ಟೆ, ಹಾಲು, ಕೋಗರಿಬೇಳೆ, ಅವರೆ (ಬೀನ್ಸ್) ಮುಂತಾದವು.

**b)** ಸಾವಯವ ಮಿಶ್ರಣವನ್ನು ಬೇರ್ಪಡಿಸುವ ವಿಧಾನ ಯಾವುದು ?

**ಉತ್ತರ : ಕ್ರೊಮ್ಯಾಟೋಗ್ರಾಫಿ.**

**ಪ್ರಶ್ನೆ 16. a)** ಅಲ್ಯೂಮಿನಿಯಂನ ಎರಡು ಮುಖ್ಯ ಅದಿರುಗಳನ್ನು ತಿಳಿಸಿ. ಅವುಗಳಲ್ಲಿರುವ ಅಲ್ಯೂಮಿನಿಯಂನ್ನು ಹೇಗೆ ಬೇರ್ಪಡಿಸುವಿರಿ ?

**ಉತ್ತರ : ಅಲ್ಯೂಮಿನಿಯಮ್‌ನ ಎರಡು ಅದಿರುಗಳು :** 1) ಬಾಕ್ಸೈಟ್ ಮತ್ತು 2) ಕ್ರಯೋಲೈಟ್.

**ಅವುಗಳಿಂದ ಅಲ್ಯೂಮಿನಿಯಮ್‌ನ್ನು ಬೇರ್ಪಡಿಸುವ ವಿಧಾನ :** ಕರಗಿದ ಕ್ರಯೋಲೈಟ್‌ನಲ್ಲಿ ವಿಲೀನವಾಗಿರುವ ಶುದ್ಧ ಬಾಕ್ಸೈಟ್‌ನ ವಿದ್ಯುದ್ವಿಶ್ಲೇಷಣೆಯಿಂದ ಶುದ್ಧವಾದ ಅಲ್ಯೂಮಿನಿಯಮ್ ಲೋಹವನ್ನು ಬೇರ್ಪಡಿಸುವರು.

**b)** ಹೇಬರನ ವಿಧಾನದಿಂದ ಅಮೋನಿಯಾ ಉತ್ಪಾದಿಸುವ ಕ್ರಿಯೆಯಲ್ಲಿ ಉಪಯೋಗಿಸುವ ವೇಗವರ್ಧಕವನ್ನು ತಿಳಿಸಿ.

**ಉತ್ತರ :** ಮೊಲಿಬ್ಡಿನಮ್ ವರ್ಧಕದಿಂದ ಕೂಡಿದ ನಯವಾಗಿ ಪುಡಿಮಾಡಿದ ಕಬ್ಬಿಣವನ್ನು ವೇಗವರ್ಧಕದಂತೆ ಉಪಯೋಗಿಸುವರು.

**c)** ಇಂಗಾಲದ ಸಂಯೋಗ ಸಾಮರ್ಥ್ಯ ಎಷ್ಟು ?

**ಉತ್ತರ :** ಇಂಗಾಲದ ಸಂಯೋಗ ಸಾಮರ್ಥ್ಯ ನಾಲ್ಕು

# ವಿಜ್ಞಾನ

## ಜೂನ 1988 2 ನೆಯ ಪತ್ರಿಕೆ

### [ ಜೀವಶಾಸ್ತ್ರ ]

ವೇಳೆ : 2 ಗಂಟೆ ] [ ಗುಣಗಳು : 35

ಪ್ರಶ್ನೆ I ಮನುಷ್ಯ ದೇಹದ ಕಣ್ಣಿನ ನೀಳನೋಟವನ್ನು ತೋರಿಸುವ ಚಿತ್ರ ಬರೆದು ಅದರಲ್ಲಿ ಈ ಕೆಳಗಿನ ಭಾಗಗಳನ್ನು ಗುರುತಿಸಿ :

1) ಕಾರ್ನಿಯಾ (ಶುಕ್ಲಪಟಲ) 2) ಐರಿಸ್ (ಕೃಷ್ಣಪಟಲ)
3) ಮಸೂರ 4) ಹಳದಿ ಪ್ರದೇಶ (ಫೋವಿಯ)

ಉತ್ತರ :




ಭಾಗಗಳು : 3) ಕಾರ್ನಿಯಾ (ಶುಕ್ಲ ಪಟಲ) 4) ಐರಿಸ್ (ಕೃಷ್ಣಪಟಲ), 6) ಮಸೂರ, 12) ಹಳದಿಪ್ರದೇಶ (ಫೋವಿಯ).

ಪ್ರಶ್ನೆ II ಮಾನವನ ಚರ್ಮದ ರಚನೆಯನ್ನು ತೋರಿಸುವ ಚಿತ್ರ ಬರೆದು ಅದರಲ್ಲಿ ಈ ಕೆಳಗಿನ ಭಾಗಗಳನ್ನು ಗುರುತಿಸಿ :

1) ಒಳಚರ್ಮ 2) ರೋಮಕೂಪ
3) ಸ್ವೇದ ಗ್ರಂಥಿ 4) ವೃದ್ಧಿ ಹೊಂದುವ ಪದರು.

ಉತ್ತರ :



ಭಾಗಗಳು : 2) ಒಳಚರ್ಮ, 6) ರೋಮಕೂಪ, 7) ಸ್ವೇದ ಗ್ರಂಥಿ, 1) ವೃದ್ಧಿಹೊಂದುವ ಪದರ.

ಪ್ರಶ್ನೆ III 1) ಪೆಸಿಫಿಕ್ ಸಾಗರದ ಸಾಲ್ಮನ್ ಮೀನುಗಳು ಹೊಂದಿರುವ ಸಂತಾನೋತ್ಪತ್ತಿ ನಡವಳಿಕೆಯನ್ನು ಸಂಕ್ಷೇಪವಾಗಿ ವಿವರಿಸಿ.

ಉತ್ತರ : ಪೆಸಿಫಿಕ್ ಸಾಗರದ ಸಾಲ್ಮನ್ ಮೀನುಗಳಲ್ಲಿ ಪ್ರೌಢಮೀನುಗಳು ಉಪ್ಪುನೀರಿನಲ್ಲಿ ಇರುತ್ತವೆ. ಆದರೆ ಅಲ್ಲಿ ವಂಶಾಭಿವೃದ್ಧಿಯಾಗುವುದಿಲ್ಲ. ಈ ಮೀನುಗಳು ಮೊಟ್ಟೆಯಿಡಲು ತಾವು ಏಳು ವರ್ಷಗಳ ಹಿಂದೆ ಹುಟ್ಟಿದ ಜಾಗವಾದ ಸಿಹಿ ನೀರಿಗೆ ಹೋಗುತ್ತವೆ. ಅಲ್ಲಿ ಮೊಟ್ಟೆಗಳನ್ನಿಟ್ಟು ಅವುಗಳ ಮೇಲೆ ವೀರ್ಯವನ್ನು ಚಲ್ಲಿ ಮೊಟ್ಟೆಗಳನ್ನು ಚಿಕ್ಕ ಚಿಕ್ಕ ಕಲ್ಲುಗಳಿಂದ ಮುಚ್ಚುತ್ತವೆ. ಮರಿಗಳು ತತ್ತಿಯಿಂದ ಹೊರಬಂದ ಮೇಲೆ, ಸಾಗರಕ್ಕೆ (ಉಪ್ಪುನೀರಿಗೆ) ಹೋಗುವವು.

2) "ಋತುಚಕ್ರ" ಎಂದರೇನು ?

ಉತ್ತರ : ಋತು ಚಕ್ರ : ಗರ್ಭಕಟ್ಟಿದ ತತ್ತಿಯನ್ನು ಮೊದಲೇ ನಿರೀಕ್ಷಿಸಿ, ಗರ್ಭಕೋಶದ ಒಳಗೋಡೆಯು, ತತ್ತಿಯು ಬಿಡುಗಡೆಯಾಗುವ 10 ರಿಂದ 12 ದಿವಸ ಮೊದಲೇ ಅಂಗಾಂಶದ ಒಳಗೋಡೆಯನ್ನು ನಿರ್ಮಿಸಿಕೊಳ್ಳುವುದು. ತತ್ತಿಯು ಫಲಿತಗೊಳ್ಳದಿದ್ದರೆ, ಗರ್ಭಕೋಶದ ಒಳಗೋಡೆಯ ಅಂಗಾಂಶಗಳು ನಶಿಸಿ ತತ್ತಿಯು ಉತ್ಪತ್ತಿಯಾದ ಎರಡು ವಾರದೊಳಗೆ ಹೊರಹಾಕಲ್ಪಡುತ್ತದೆ. ಪುನಃ ಗರ್ಭಕೋಶದ ಒಳಗೋಡೆಯಲ್ಲಿ ಅಂಗಾಂಶಗಳು ಉತ್ಪತ್ತಿಯಾಗಲು ಪ್ರಾರಂಭವಾಗುತ್ತದೆ. ಸಾಮಾನ್ಯವಾಗಿ ಇಂತಹ ಆವರ್ತನೆಯು 28 ದಿವಸಗಳಿಗೊಮ್ಮೆ ಆಗುತ್ತದೆ. ಈ ಆವರ್ತಕ್ಕೆ ಋತುಚಕ್ರ ಎನ್ನುವರು.

3) ಒಬ್ಬರು ಒಂದು ತಿರುಗುರಾಟೆಯಲ್ಲಿ ಅನೇಕ ಸುತ್ತುಗಳನ್ನು ಸುತ್ತಿದ ನಂತರ ನೆಲದ ಮೇಲೆ ನಿಲ್ಲಲು ಪ್ರಯತ್ನಿಸಿದರೆ, ಭದ್ರವಾಗಿ ನಿಲ್ಲಲು ಸಾಧ್ಯವಾಗುವುದಿಲ್ಲ. ಏಕೆ ?

**ಉತ್ತರ :** ತಿರುರಾಟೆಯಲ್ಲಿ ಸುತ್ತುತ್ತಿರುವಾಗ ಅನುಮಸ್ತಿಷ್ಕದ ಮೇಲೆ ಪರಿಣಾಮವಾಗುತ್ತದೆ. ಅನುಮಸ್ತಿಷ್ಕವು ದೇಹದ ಸಮತೋಲನ ಕಾರ್ಯಕ್ಕೆ ಕಾರಣವಾಗಿದೆ. ಈ ಕಾರಣದಿಂದ ರಾಟೆಯಲ್ಲಿ ಸುತ್ತಿದ ನಂತರ ನೆಲದ ಮೇಲೆ ನಿಲ್ಲಲು ಪ್ರಯತ್ನಿಸಿದರೆ ಭದ್ರವಾಗಿ ನಿಲ್ಲಲು ಸಾಧ್ಯವಾಗುವುದಿಲ್ಲ.

4) a) ಕ್ಷಯ b) ಧನುರ್ವಾಯು (ಟಿಟಾನಸ್) ಈ ರೋಗಗಳನ್ನು ಉಂಟುಮಾಡುವ ಬ್ಯಾಕ್ಟೀರಿಯಾಗಳನ್ನು ಹೆಸರಿಸಿ. ಮೇಲಿನ ರೋಗಗಳ ಒಂದೊಂದು ಚಿಹ್ನೆಯನ್ನು ತಿಳಿಸಿ.

**ಉತ್ತರ :** a) ಕ್ಷಯಕ್ಕೆ ಕಾರಣವಾದ ಬ್ಯಾಕ್ಟೀರಿಯ: ಮೈಕೊ ಬ್ಯಾಕ್ಟೀರಿಯಾ ಟ್ಯೂಬರ್ ಕ್ಯುಲೋಸಿಸ್. b) ಧನುರ್ವಾಯುವಿಗೆ ಕಾರಣವಾದ ಬ್ಯಾಕ್ಟೀರಿಯ : ಕ್ಲಾಸ್ಟ್ರೀಡಿಯಂ ಟಿಟನಿ.

ಕ್ಷಯದ ಲಕ್ಷಣ : ಶ್ವಾಸಕೋಶಾವರಣದ ಉರಿಯೂತ, ಕೆಮ್ಮು.

ಧನುರ್ವಾಯುವಿನ ಲಕ್ಷಣ : ಕತ್ತಿನ ಸ್ನಾಯುಗಳು ಬಿಗಿಯಾಗುವುದು. ದವಡೆಯ ಸ್ನಾಯುಗಳ ಸೆಳೆತ.

5) ಸ್ವಯಂ ನಿಯಂತ್ರಿತ ನರಮಂಡಲದ ಎರಡು ಭಾಗಗಳನ್ನು ತಿಳಿಸಿ. ಒಂದು ಉದಾಹರಣೆಯೊಡನೆ ಅವುಗಳ ಕಾರ್ಯವನ್ನು ಸಂಕ್ಷೇಪವಾಗಿ ತಿಳಿಸಿ.

**ಉತ್ತರ :** ಸ್ವಯಂ ನಿಯಂತ್ರಿತ ನರಮಂಡಲದ ಎರಡು ಭಾಗಗಳು : 1) ಅನುವೇದನಾ ವ್ಯೂಹ 2) ಪ್ಯಾರಾ ಅನುವೇದನಾ ವ್ಯೂಹ.

ಅನುವೇದನಾ ವ್ಯೂಹವು ಹೃದಯದ ಕಾರ್ಯಗಳು, ಹಾರ್ಮೋನ್‌ಗಳ ಸ್ರವಿಸುವಿಕೆ, ಮುಂತಾದ ಅನೈಚ್ಛಿಕ ಸ್ನಾಯುಗಳ ಕಾರ್ಯಗಳನ್ನು ನಿಯಂತ್ರಿಸಲು ಸಹಾಯ ಮಾಡುತ್ತದೆ.

ಪ್ಯಾರಾ ಅನುವೇದನಾ ವ್ಯೂಹವು ಕಣ್ಣಿ ಪಾಪೆಯ ಸಂಕುಚಿಸುವಂತೆ ಮಾಡುತ್ತದೆ.

6) ರಕ್ತದೇಹಾವಕಾಶ (ಹೀಮೋಸೀಲ್) ಎಂದರೇನು ? ಇದನ್ನು ಹೊಂದಿರುವ, ನೀವು ಅಭ್ಯಸಿಸಿರುವ ಒಂದು ಪ್ರಾಣಿಯನ್ನು ಹೆಸರಿಸಿ.

**ಉತ್ತರ :** ರಕ್ತದೇಹಾವಕಾಶ (ಹೀಮೋಸೀಲ್) : ರಕ್ತದಿಂದ ಕೂಡಿದ ದೇಹಾವಕಾಶವನ್ನು ರಕ್ತದೇಹಾವಕಾಶ (ಹೀಮೋಸೀಲ್)ಎನ್ನುವರು.

ರಕ್ತದೇಹಾವಕಾಶ ಹೊಂದಿದ ಪ್ರಾಣಿ : ಜಿರಲೆ.

ಪ್ರಶ್ನೆ IV 1] ರಕ್ತಪರಿಚಲನಾ ಕಾರ್ಯಕ್ಕೆ ಸಂಬಂಧಪಟ್ಟಂತೆ ಗುಲ್ಮದ ಎರಡು ಕಾರ್ಯಗಳನ್ನು ತಿಳಿಸಿ.

**ಉತ್ತರ :** ಗುಲ್ಮದ ಎರಡು ಕಾರ್ಯಗಳು :

1) ಗುಲ್ಮದ ಮೂಲಕ ಹರಿಯುವ ರಕ್ತದಿಂದ-ಸತ್ತ ಕೆಂಪು ರಕ್ತದ ಕಣಗಳನ್ನು ಬೇರ್ಪಡಿಸುವುದು.

2) ರಕ್ತಸ್ರಾವದಿಂದ ರಕ್ತ ನಷ್ಟವಾದಾಗ ಗುಲ್ಮವು ತಾನು ಸಂಗ್ರಹಿಸಿದ ರಕ್ತವನ್ನು ಪರಿಚಲನ ವ್ಯೂಹಕ್ಕೆ ಬಿಟ್ಟು ಕೊಡುವುದು.

2) 'ಏಕತಳಿ ಪ್ರಮಾಣ'ವನ್ನು ತೋರಿಸುವ ಚಕರ್ ಬೋರ್ಡನ್ನು ಬರೆಯಿರಿ.

**ಉತ್ತರ :** ಚಕರ್ ಬೋರ್ಡ

$F_1$ನ ಪರಾಗ

| $F_1$ನ ಪರಾಗ | T | t |
|---|---|---|
| T | TT | Tt |
| t | Tt | tt |

3) ಮಾನವ ಜನಸಾಂದ್ರತೆಯು ಒಳಗೊಂಡಿರುವ ಎರಡು ಅಂಶಗಳನ್ನು ತಿಳಿಸಿ.

**ಉತ್ತರ :** ಜನಸಾಂದ್ರತೆಯು ಒಳಗೊಂಡಿರುವ ಎರಡು ಅಂಶಗಳು : 1] ಜನನದ ಪ್ರಮಾಣ. 2) ಮರಣದ ಪ್ರಮಾಣ.

4) ಅನಿಮಿಯಾ [ರಕ್ತಹೀನತೆ]ವನ್ನು ಹೇಗೆ ವಾಸಿ ಮಾಡಬಹುದು ?

**ಉತ್ತರ :** ಅನಿಮಿಯಾ ರೋಗದಿಂದ ಬಳಲುವ ವ್ಯಕ್ತಿಗೆ ವಿಟಮಿನ್ $B_{12}$ ಅಥವಾ ಪಿತ್ತಜನಕಾಂಗದ ಸಾರವನ್ನು ಕೊಡುವುದರಿಂದ ಈ ರೋಗವನ್ನು ವಾಸಿಮಾಡಬಹುಧು.

5) "ಪಾಲಿಪ್ಲಾಯಿಡಿ" ಎಂದರೇನು ?

ಉತ್ತರ : ಪಾಲಿಪ್ಲಾಯಿಡ್ : ಕೆಲವು ಸಸ್ಯಗಳಲ್ಲಿ ಎರಡಕ್ಕಿಂತಲೂ ಹೆಚ್ಚಾದ ಹೆಪ್ಲಾಯಿಡ್ ಗುಣಗಳಿರುತ್ತವೆ. ಆದ್ದರಿಂದ ಅವುಗಳನ್ನು ಪಾಲಿಪ್ಲಾಯಿಡ್‌ಗಳೆನ್ನುವರು.

6) ಮಲೇರಿಯಾ ರೋಗವು ನೀರು ನಿಲ್ಲಲು ಅವಕಾಶ ವಿರುವ ಪ್ರದೇಶಗಳಲ್ಲಿ ಹೆಚ್ಚು ಸಾಮಾನ್ಯವಾಗಿ ಕಂಡು ಬರುತ್ತದೆ. ಏಕೆ ?

ಉತ್ತರ : ಸೊಳ್ಳೆಗಳ ಸಂತಾನೋತ್ಪತ್ತಿಯು ನಿಂತ ನೀರಿನಲ್ಲಿ ನಡೆಯುತ್ತದೆ. ಮಲೇರಿಯ ರೋಗವು ಸೊಳ್ಳೆಗಳಿಂದ ಪ್ರಸಾರವಾಗುತ್ತದೆ. ಆದ್ದರಿಂದ ನೀರು ನಿಲ್ಲಲು ಅವಕಾಶ ವಿರುವ ಪ್ರದೇಶಗಳಲ್ಲಿ ಸೊಳ್ಳೆಗಳ ಸಂತಾನಾಭಿವೃದ್ಧಿಯಾಗಿ ಮಲೇರಿಯಾ ರೋಗವು ಕಂಡು ಬರುತ್ತದೆ.

7) "ಜೈವಿಕ ನಿಯಂತ್ರಣ" ಎಂದರೇನು ?

ಉತ್ತರ : ಜೈವಿಕ ನಿಯಂತ್ರಣ : ಒಂದು ಜೀವಿ ಯಿಂದ ಆಗುವ ಮತ್ತೊಂದು ಜೀವಿಯ ನಿಯಂತ್ರಣವನ್ನು ಜೈವಿಕ ನಿಯಂತ್ರಣ ಎನ್ನುವರು.

8) ಹ್ಮಿಮೋಫಿಲಿಯಾ (ರಕ್ತಸ್ರಾವಿಯ ರೋಗ) ಎಂದರೇನು ?

ಉತ್ತರ : ಹಿಮೋಫಿಲಿಯಾ : ರಕ್ತ ಹೆಪ್ಪುಗಟ್ಟದಿರುವ ಇಲ್ಲವೆ ನಿಧಾನವಾಗಿ ಹೆಪ್ಪುಗಟ್ಟುವ ಗುಣವಿರುವುದಕ್ಕೆ ಹಿಮೋಫಿಲಿಯ ಇಲ್ಲವೆ ರಕ್ತಸ್ರಾವಿಯ ರೋಗ ಎನ್ನುವರು.

ಪ್ರಶ್ನೆ V 1) ಪ್ರೌಢಾವಸ್ಥೆಯಲ್ಲಿರುವವರಲ್ಲಿ ಪಿಟ್ಯುಟರಿ ಹಾರ್ಮೋನಿನ ಅತಿ ಚಟುವಟಿಕೆಯಿಂದುಂಟಾಗುವ ರೋಗವನ್ನು ಹೆಸರಿಸಿ.

ಉತ್ತರ : ಆಕ್ರೊಮೆಗಾಲಿ.

2) ಬಟಾಣಿ ಜಾತಿಯ ಸಸ್ಯಗಳ ಬೇರು ಗಂಟುಗಳಲ್ಲಿ ವಾಸಿಸುವ ಬ್ಯಾಕ್ಟೀರಿಯಾಗಳ ಉಪಯೋಗವೇನು ?

ಉತ್ತರ : ಸಸ್ಯಗಳ ಬೇರು ಗಂಟುಗಳಲ್ಲಿ ಸಾರಜನಕ ವನ್ನು ಸ್ಥಾರೀಕರಿಸುವವು. ಇದರಿಂದ ಸಸ್ಯದ ಬೆಳವಣಿಗೆ ಚೆನ್ನಾಗಿ ಆಗುವುದು.

3) ಲೆಂಗರ್‌ಹ್ಯಾನ್ಸನ ಪುಟ್ಟದ್ವೀಪಗಳಲ್ಲಿರುವ ಬೀಟಾ ಕೋಶಗಳಿಂದ ಉತ್ಪತ್ತಿಯಾಗುವ ಹಾರ್ಮೋನನ್ನು ಹೆಸರಿಸಿ.

ಉತ್ತರ : ಇನ್‌ಸುಲಿನ್.

4) ಮನುಷ್ಯನಿಗೆ ಸಿಡುಬು ರೋಗಕ್ಕೆ ನಿರೋಧತೆ ಉಂಟಾಗುವಂತೆ ಮಾಡುವ ಕ್ರಮವನ್ನು ಕಂಡುಹಿಡಿದ ವಿಜ್ಞಾನಿಯನ್ನು ಹೆಸರಿಸಿ.

ಉತ್ತರ : ಎಡ್ವರ್ಡ್ ಜೆನ್ನರ್.

ಪ್ರಶ್ನೆ VI ಈ ಕೆಳಗಿನ ಜೋಡಿಗಳ ನಡುವೆ ಇರುವ ಒಂದೊಂದು ವ್ಯತ್ಯಾಸವನ್ನು ತಿಳಿಸಿ.

1) ಅಗ್ನಿಜ ಶಿಲೆಗಳು ಮತ್ತು ಸಂಚಯಿತ ಶಿಲೆಗಳು.

ಉತ್ತರ : ಅಗ್ನಿಜ ಶಿಲೆಗಳು ಶಿಲಾಪಾಕ(ರಸ)ವು ಸ್ಫಟಿಕೀಕೃತವಾಗುವುದರಿಂದ ಉಂಟಾಗುತ್ತವೆ. ಆದರೆ ಸಂಚಯಿತ ಶಿಲೆಗಳು ಗಾಳಿ, ನೀರಿನಿಂದ ಸವೆದ ಶಿಲೆಗಳ ಚೂರುಗಳು ಸಂಗ್ರಹವಾಗುವುದರಿಂದ ಉತ್ಪನ್ನವಾಗುತ್ತವೆ.

2) ಜಲಜೀವ ಪರಂಪರೆ ಮತ್ತು ಜಲಾಭಾವ ಜೀವ ಪರಂಪರೆ.

ಉತ್ತರ : ಜಲಜೀವ ಪರಂಪರೆಯು ನೀರು ಇಲ್ಲವೆ ಕೊಳಚೆ ಪ್ರದೇಶಗಳಲ್ಲಿ ಪ್ರಾರಂಭವಾಗುವುದು. ಆದರೆ ಜಲಾಭಾವ ಪರಂಪರೆಯು ನೀರು ಇಲ್ಲದ ಖಾಲೀ ಬಂಡೆಗಳ ಮೇಲ್ಭಾಗದಲ್ಲಿ ಹಂತಹಂತವಾಗಿ ಹುಟ್ಟಿಕೊಳ್ಳುವ ಸಸ್ಯಗಳಿಂದ ಪ್ರಾರಂಭವಾಗುವುದು.

3) ಮೂಳೆ ಮತ್ತು ಮೃದ್ವಸ್ಥಿ.

ಉತ್ತರ : ಮೂಳೆಗಳು ಗಟ್ಟಿಯಾಗಿರುತ್ತವೆ. ಆದರೆ ಮೃದ್ವಸ್ಥಿಯು ಮೆದುವಾಗಿರುತ್ತದೆ.

ಪ್ರಶ್ನೆ VII ಇವುಗಳನ್ನು ಹೆಸರಿಸಿ.

1) ಜೈವಿಕ ಸಮುದಾಯ ಮತ್ತು ಅಜೈವಿಕ ಪರಿಸರಗಳ ನಡುವಿನ ಸಂಬಂಧ.

ಉತ್ತರ : ಪರಿಸರ ವ್ಯೂಹ.

2) ಒಂದೇ ಕೆಲಸ ಮಾಡುವ ಆದರೆ ಬೇರೆ ಬೇರೆ ರಚನೆ ಹೊಂದಿರುವ ಅಂಗಗಳು.

ಉತ್ತರ : ಆರ್ಗನೆಲ್.

3) ಒಂದು ದ್ರವ ಅಂಗಾಂಶ.

ಉತ್ತರ : ರಕ್ತ.

4) ಅಪ್ಪುಗಿಡಗಳ ವಾತಾವರಣದ ಬೇರುಗಳ ತುದಿಯಲ್ಲಿ ಸ್ಪಂಜಿನಂತಿರುವ ಅಂಗಾಂಶ.

ಉತ್ತರ : ವೆಲಮನ್.

**ಪ್ರಶ್ನೆ VIII** ಈ ಕೆಳಗಿನವುಗಳಿಗೆ ವೈಜ್ಞಾನಿಕ ಕಾರಣಗಳನ್ನು ಕೊಡಿ.

1) ಪ್ರಬಲ ಆಮ್ಲವನ್ನು ಕುಡಿದಿರುವ ವ್ಯಕ್ತಿಗೆ ಪ್ರಥಮ ಚಿಕಿತ್ಸೆ ಮಾಡುವಾಗ ವಾಂತಿ ಮಾಡಿಸಬಾರದು.

**ಉತ್ತರ :** ಕಾರಣ : ಪ್ರಬಲ ಆಮ್ಲವು ಸುಡುವ ಗುಣವನ್ನು ಹೊಂದಿದೆ. ವ್ಯಕ್ತಿಯು ಆಮ್ಲವನ್ನು ಕುಡಿಯುವಾಗ ಅದು ಹೊಟ್ಟೆಯನ್ನು ಸೇರುವ ಮಾರ್ಗದಲ್ಲಿಯ ಅಂಗಗಳನ್ನು ಸುಡುತ್ತ ಹೋಗಿರುತ್ತದೆ. ಅವನಿಗೆ ವಾಂತಿ ಮಾಡಿಸಿದರೆ ಅದೇ ಆಮ್ಲವು ತಿರುಗಿ ಬರುವಾಗ ಅಂಗಗಳನ್ನು ಸುಡುತ್ತ ಬರುವುದು. ಅದರಿಂದ ಆ ವ್ಯಕ್ತಿಗೆ ಇನ್ನೂ ತೊಂದರೆಯಾಗುವುದು. ಆದ್ದರಿಂದ ವಾಂತಿ ಮಾಡಿಸಬಾರದು.

2) ಮೈಟೋಕಾಂಡ್ರಿಯಾವನ್ನು ಜೀವಕೋಶದ ಶಕ್ತಿ ಕೇಂದ್ರವೆಂದು ಕರೆಯುವರು.

**ಉತ್ತರ :** ಕಾರಣ : ಮೈಟೋಕಾಂಡ್ರಿಯಾದಲ್ಲಿ ಉಸಿರಾಟ ನಡೆಯುತ್ತದೆ ಮತ್ತು ಶಕ್ತಿಯ ಬಿಡುಗಡೆಯಾಗುತ್ತದೆ. ಇದರಿಂದಾಗಿ ಮೈಟೋಕಾಂಡ್ರಿಯಾವನ್ನು ಜೀವಕೋಶದ ಶಕ್ತಿ ಕೇಂದ್ರ ಎನ್ನುವರು.

---

# ವಿಜ್ಞಾನ

## ( ಭೌತಶಾಸ್ತ್ರ – ರಸಾಯನ ಶಾಸ್ತ್ರ )

### 1989 ನೆಯ ಎಪ್ರಿಲ್ S.S.L.C. ಪರೀಕ್ಷೆಯ ಸಂಭವನೀಯ ಪ್ರಶ್ನೆಗಳು

### 4 ಗುಣಗಳ ಪ್ರಶ್ನೆಗಳು

1) ವಿದ್ಯುತ್ತಿನ ಮೂರು ಪರಿಣಾಮಗಳಾವವು ? ಒಂದೊಂದಕ್ಕೆ ಒಂದು ಉದಾಹರಣೆ ಕೊಡಿ.

**ಉತ್ತರ :** ವಿದ್ಯುತ್ತಿನ ಮೂರು ಪರಿಣಾಮಗಳು : 1) ವಿದ್ಯುತ್ತಿನ ಶಾಖೋತ್ಪತ್ತಿ ಪರಿಣಾಮ. 2) ವಿದ್ಯುತ್ತಿನ ರಾಸಾಯನಿಕ ಪರಿಣಾಮ. 3) ವಿದ್ಯುತ್ತಿನ ಕಾಂತೀಯ ಪರಿಣಾಮ.

**ಉದಾಹರಣೆಗಳು :** 1) ಶಾಖೋತ್ಪತ್ತಿ ಪರಿಣಾಮ : ವಿದ್ಯುತ್ ಇಸ್ತ್ರಿ 2) ರಾಸಾಯನಿಕ ಪರಿಣಾಮ : ವಿದ್ಯುಲ್ಲೇಪನ, 3) ಕಾಂತೀಯ ಪರಿಣಾಮ : ವಿದ್ಯುದಯಸ್ಕಾಂತಗಳು.

2) ಪರ್ಯಾಯ ವಿದ್ಯುಜ್ಜನಕದ ಅಂದವಾದ ಚಿತ್ರ ಬರೆದು ಭಾಗಗಳನ್ನು ಗುರುತಿಸಿ, ಅದರ ಕಾರ್ಯವನ್ನು ವಿವರಿಸಿ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರ. 1 (a) ನೋಡಿ.

3) ರೇಡಿಯೋ ಗ್ರಾಹಕದ ಆಕೃತಿ ತೆಗೆಯಿರಿ ಭಾಗಗಳನ್ನು ಗುರುತಿಸಿ. ಗ್ರಾಹಕದ ಕಾರ್ಯವೇನು ?

ಉತ್ತರಕ್ಕೆ ಅಕ್ಟೋಬರ 1984 ರ ಪ್ರ. 3 (a)ನೋಡಿ.

4) ವಿದ್ಯುತ್ ತಂತು ದೀಪದ ಅಂದವಾದ ಚಿತ್ರಬರೆದು ಅದರ ಭಾಗಗಳನ್ನು ಹೆಸರಿಸಿ ಮತ್ತು ರಚನೆಯನ್ನು ವಿವರಿಸಿ. (1983 ಅ)

**ಉತ್ತರ :** ವಿದ್ಯುತ್ ತಂತು ದೀಪದ ರಚನೆ :




ವಿದ್ಯುತ್ ತಂತು ದೀಪದಲ್ಲಿ ಸಾಮಾನ್ಯವಾಗಿ ಟಂಗಸ್ಟನ್ ತಂತಿಯನ್ನು ಉಪಯೋಗಿಸುತ್ತಾರೆ. ಈ ತಂತಿಯು ಸಾಕಷ್ಟು ಉದ್ದವಿದ್ದು ಸುರುಳಿಯ ರೂಪದಲ್ಲಿರುತ್ತದೆ. ಈ ಸುರುಳಿಯ ಎರಡು ತುದಿಗಳನ್ನು ವಿದ್ಯುದ್ದೀಪ ಬುರುಡಿಯ ಹೊರಗಡೆ ಇರುವ ಎರಡು ವಿದ್ಯುದ್ವಾರಗಳಿಗೆ ಬುರುಡೆಯ ಒಳಗಿರುವ ಎರಡು ತಾಮ್ರದ ತಂತಿಗಳ ಮೂಲಕ ಜೋಡಿಸಿರುತ್ತಾರೆ. ತಂತಿಯ ಈ ಸುರುಳಿಯು ಗಾಜಿನ ಬುರುಡಿಯಲ್ಲಿ ಬರುವಂತೆ ಅಳವಡಿಸಿರುವರು. ನಂತರ ಗಾಜಿನ ಬುರುಡೆಯಲ್ಲಿಯ ಗಾಳಿಯನ್ನು ಹೊರತೆಗೆದು ಅದರಲ್ಲಿ ಜಡ ಅನಿಲವನ್ನು ತುಂಬಿ ಬುರುಡೆಯನ್ನು ವಾಯುಬದ್ಧ ಮಾಡುವರು.

ಚಿತ್ರದಲ್ಲಿ F–ಇದು ಟಂಗಸ್ಟನ್ ತಂತಿಯ ಸುರುಳಿ.

5) ವಿದ್ಯುದ್ವಿಶ್ಲೇಷಣ ಕ್ರಿಯೆ ಎಂದರೇನು ? ತಾಮ್ರದ ವೋಲ್ಟಾಮೀಟರಿನಲ್ಲಿ ತಾಮ್ರದ ಸಲ್ಫೇಟ ದ್ರಾವಣದ ವಿಶ್ಲೇಷಣ ವನ್ನು ವಿವರಿಸಿ. ಅದಕ್ಕೆ ಉಪಯೋಗಿಸುವ ಉಪಕರಣದ ಅಂದವಾದ ಚಿತ್ರವನ್ನು ಬರೆದು ಭಾಗಗಳನ್ನು ಗುರುತಿಸಿ.

ಉತ್ತರಕ್ಕೆ ಮಾರ್ಚ 1988 ರ ಪ್ರ. 1 (a) ನೋಡಿ.

6) ವೃತ್ತಾಕಾರದ ವಾಹಕದಲ್ಲಿ ವಿದ್ಯುತ್ ಪ್ರವಾಹ ದಿಂದ ಕಾಂತಕ್ಷೇತ್ರ ಉಂಟಾಗುವ ಪ್ರಯೋಗವನ್ನು ವಿವರಿಸಿ.

ಉತ್ತರಕ್ಕೆ ಅಕ್ಟೋಬರ 1986 ರ ಪ್ರ. 1 (a)ನೋಡಿ.

7) ಗಾಜು ಉತ್ಪಾದನೆಯಲ್ಲಿ ಬೇಕಾದ ಕಚ್ಚಾವಸ್ತು ಯಾವುದು ? ಗಾಜನ್ನು ಹೇಗೆ ಉತ್ಪಾದಿಸುತ್ತಾರೆ ? ತಾಪಾನು ಶೀತನ (Annealing) ಎಂದರೇನು ? ಹಾಲು ಬಿಳುಪು ಗಾಜಿನ ಘಟಕಗಳು ಯಾವವು ?

ಉತ್ತರಕ್ಕೆ ಅಕ್ಟೋಬರ 1985 ರ ಪ್ರ. 10 (a) ನೋಡಿ.

8) ಸಮರೂಪಕ್ರಿಯೆ ಮತ್ತು ಬಹುರೂಪಕ್ರಿಯೆ ಎಂದ ರೇನು ? ಪ್ರತಿಯೊಂದಕ್ಕೂ ಒಂದೊಂದು ಉದಾಹರಣೆ ಕೊಡಿ. (1984 ಎ. 1988 ಮಾ.)

ಉತ್ತರಕ್ಕೆ ಎಪ್ರಿಲ್ 1984 ರ ಪ್ರ. 9 (a) ನೋಡಿ.

9) ಬೆಸಿಮರ್ ಪರಿವರ್ತಕದ ಅಂದವಾದ ಚಿತ್ರ ಬರೆದು ಭಾಗಗಳನ್ನು ಹೆಸರಿಸಿ. ಯಾವ ಉದ್ದೇಶಕ್ಕಾಗಿ ಇದನ್ನು ಉಪ ಯೋಗಿಸುತ್ತಾರೆ ? (1987 ಅ. 1988 ಜೂ.)

ಉತ್ತರಕ್ಕೆ ಅಕ್ಟೋಬರ 1987 ರ ಪ್ರ. 3(a) ನೋಡಿ.

10) X-ಕಿರಣ ನಳಿಕೆ (X-Ray tube)ಯ ಅಂದವಾದ ಚಿತ್ರ ಸಹಿತ X-ಕಿರಣಗಳನ್ನು ಹೇಗೆ ಪಡೆಯಬಹು ದೆಂಬುದನ್ನು ವಿವರಿಸಿ.

ಉತ್ತರಕ್ಕೆ ಜೂನ 1988 ರ ಪ್ರ. 2 (a) ನೋಡಿ.

## 2 ಗುಣಗಳ ಪ್ರಶ್ನೆಗಳು

1) ಒಂದು ವಿದ್ಯುದ್ದೀಪದ ರೋಧವು R=100 ಓಮ್‌ಗಳಿವೆ. ಅದರಲ್ಲಿ ಒಂದು ಆಂಪಿಯರ್‌ನಷ್ಟು ವಿದ್ಯುತ್ಪ್ರ ವಾಹವು ಹರಿಯುತ್ತದೆ. ಹಾಗಾದರೆ ಆ ವಿದ್ಯುತ್ಪ್ರವಾಹದ ಸಾಮರ್ಥ್ಯವೆಷ್ಟು ?

**ಉತ್ತರ :** ಇಲ್ಲಿ ರೋಧ $R=100$ ಓಮ್, ಪ್ರವಾಹ $I=1$ ಆಂಪಿಯರ್.

∴ ವಿದ್ಯುದ್ದೀಪದ ಸಾಮರ್ಥ್ಯ $P=IR$ ವಾಟ್‌ಗಳು.
$= 1\times100=100$ ವಾಟ್‌ಗಳು. Ans.

2) ಬಲಗಳ ಸಮಾಂತರ ಚತುರ್ಭುಜ ನಿಯಮವನ್ನು ನಿರೂಪಿಸಿ.

ಉತ್ತರಕ್ಕೆ ಅಕ್ಟೋಬರ 1987 ರ ಪ್ರ. 12(a)ನೋಡಿ.

3) ಕೆಳಗಿನವುಗಳನ್ನು ವ್ಯಾಖ್ಯಿಸಿರಿ.

a) ವಾಟ್ b) ಕಿಲೋವಾಟ್ ಅವರ್.

**ಉತ್ತರ :** a) **ವಾಟ್ :** ಒಂದು ಸೆಕೆಂಡಿಗೆ ಒಂದು ಜೂಲ್‌ನಷ್ಟು ಕಾರ್ಯಮಾಡುವ ವಿದ್ಯುತ್ತಿನ ಸಾಮರ್ಥ್ಯವನ್ನು ವಾಟ್ ಎನ್ನುವರು.

b) **ಕಿಲೋವಾಟ್ ಅವರ್ :** ಒಂದು ಕಿಲೋವಾಟ್ ವಿದ್ಯುತ್ ಸಾಧನವು ಒಂದು ಗಂಟೆಯಲ್ಲಿ ಬಳಸಬಹುದಾದ ವಿದ್ಯುಚ್ಛಕ್ತಿಯ ಪರಿಮಾಣವನ್ನು ಕಿಲೋವಾಟ್ ಅವರ್ ಎನ್ನುವರು.

4) ಕೂಲಾಂಬನ ವಿದ್ಯುತ್‌ಬಲ ನಿಯಮವನ್ನು ನಿರೂಪಿಸಿ. (1983 ಎ.)

**ಉತ್ತರ : ಕೂಲಾಂಬನ ವಿದ್ಯುತ್ ಬಲ ನಿಯಮ :** ಎರಡು ವಿದ್ಯುದಾವಿಷ್ಟ ಕಾಯಗಳ ನಡುವಿನ ಬಲವು, ಅವುಗಳ ಮೇಲಿನ ಆವೇಶಗಳ ಗುಣಲಬ್ಧಕ್ಕೆ ಅನುಲೋಮಾನುಪಾತದ ಲ್ಲಿಯೂ ಮತ್ತು ಅವುಗಳ ನಡುವಿನ ದೂರದ ವರ್ಗಕ್ಕೆ ವಿಲೋ ಮಾನುಪಾತದಲ್ಲಿಯೂ ಇರುತ್ತದೆ.

5) ಉತ್ಪತನ ಎಂದರೇನು ? ಎರಡು ಉದಾಹರಣೆ ಗಳನ್ನು ಕೊಡಿ.

ಉತ್ತರಕ್ಕೆ ಅಕ್ಟೋಬರ 1987 ರ ಪ್ರ. 3(b) ನೋಡಿ.

6) ವಜ್ರವನ್ನು ಬಂಡೆಗಳನ್ನು ಕೊರೆಯಲು ಏಕೆ ಉಪ ಯೋಗಿಸುವರು ?

ಉತ್ತರಕ್ಕೆ ಎಪ್ರಿಲ್ 1986 ರ ಪ್ರ.6 (a) ನೋಡಿ.

7) ಇಂಗಾಲವನ್ನು ಉತ್ಕರ್ಷಿಸುವ ಗುಣಧರ್ಮವನ್ನು ಎರಡು ಉದಾಹರಣೆಗಳೊಂದಿಗೆ ವಿವರಿಸಿ.

**ಉತ್ತರ :** ಪ್ರಬಲ ಗಂಧಕಾಮ್ಲ [$H_2SO_4$]ಮತ್ತು ನೈಟ್ರಿಕಾಮ್ಲ [$HNO_3$]ಗಳು ಇಂಗಾಲವನ್ನು ಉತ್ಕರ್ಷಿಸಿ ಇಂಗಾಲದ ಡೈಆಕ್ಸೈಡನ್ನು ಉಂಟುಮಾಡುತ್ತವೆ.

i] $C+2H_2SO_4 \rightarrow 2H_2O+2SO_2+CO_2$.

ii] $C+4HNO_3 \rightarrow 2H_2O+4NO_2+CO_2$.

8) ಓಮನ ನಿಯಮವನ್ನು ವಿವರಿಸಿ.

ಉತ್ತರಕ್ಕೆ ಅಕ್ಟೋಬರ 1986 ರ ಪ್ರ. 1 (b)ನೋಡಿ.

9) 50 ಗ್ರಾಮ್ ಪೊಟ್ಯಾಷಿಯಂ ನೈಟ್ರೇಟ ಲವಣವು 200 ಗ್ರಾಮ್ ನೀರಿನಲ್ಲಿ ಕರಗಿ ಕೊಠಡಿ ಉಷ್ಣತೆಯಲ್ಲಿ ಪರ್ಯಾಪ್ತ ದ್ರಾವಣವನ್ನು ಕೊಡುತ್ತದೆ. ಕೊಠಡಿಯ ಉಷ್ಣತೆಯಲ್ಲಿ ಪೊಟ್ಯಾಷಿಯಂ ನೈಟ್ರೇಟ್‌ನ ಕರಗುವಿಕೆಯನ್ನು ಕಂಡು ಹಿಡಿಯಿರಿ.

ರೀತಿ : 200 ಗ್ರಾಮ್ ನೀರಿನಲ್ಲಿ ಪರ್ಯಾಪ್ತ ದ್ರಾವಣ ಮಾಡಲು ಬೇಕಾಗುವ ಪೊಟ್ಯಾಷಿಯಂ ನೈಟ್ರೇಟ್‌ನ ದ್ರವ್ಯರಾಶಿ = 50 ಗ್ರಾಮ್.

∴ 100 ಗ್ರಾಮ್ ನೀರನ್ನು ಪರ್ಯಾಪ್ತ ದ್ರಾವಣ ಮಾಡಲು ಬೇಕಾಗುವ ಪೊಟ್ಯಾಷಿಯಂ ನೈಟ್ರೇಟ್‌ನ

$$\text{ದ್ರವ್ಯರಾಶಿ} = \frac{50 \times 100}{200} = 25 \text{ ಗ್ರಾಮ್.}$$

∴ ಪೊಟ್ಯಾಷಿಯಂ ನೈಟ್ರೇಟ್‌ನ ಕರಗುವಿಕೆ = 25 ಗ್ರಾಮ್ Ans.

10] ಸ್ಥಳದ ದಿಕ್ಪಾತ ಕೋನವನ್ನು ವಿವರಿಸಿ.

ಉತ್ತರಕ್ಕೆ ಎಪ್ರಿಲ್ 1986 ರ ಪ್ರ. 1 (b) ನೋಡಿ.

11] ಕಾಂತತ್ವದ "ವಿಲೋಮ ವರ್ಗ ನಿಯಮ"ವನ್ನು ವಿವರಿಸಿ.

ಉತ್ತರಕ್ಕೆ ಅಕ್ಟೋಬರ 1985 ರ ಪ್ರ. 1(b) ನೋಡಿ.

12] ಮೀಥೇನ್ ಮತ್ತು ಎಥಿಲೀನ್‌ಗಳ ರಚನೆಯನ್ನು ತೋರಿಸುವ ಸೂತ್ರ ಬರೆಯಿರಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರ. 4 (b)ನೋಡಿ.

13] ಸಾವಯುವ ರಸಾಯನ ಶಾಸ್ತ್ರವೆಂದರೇನು ? ಸಾವಯುವ ಸಂಯುಕ್ತಗಳ ಮುಖ್ಯವಾದ ಎರಡು ವರ್ಗಗಳನ್ನು ತಿಳಿಸಿ.

**ಉತ್ತರ : ಸಾವಯುವ ರಸಾಯನ ಶಾಸ್ತ್ರ :** ಇಂಗಾಲದ ಸಂಯುಕ್ತಗಳಿಗೆ ಸಂಬಂಧಿಸಿದ ರಸಾಯನ ಶಾಸ್ತ್ರವನ್ನು ಸಾವಯುವ ರಸಾಯನ ಶಾಸ್ತ್ರ ಎನ್ನುವರು.

ಸಾವಯುವ ಸಂಯುಕ್ತಗಳ ಎರಡು ವರ್ಗಗಳು :

1) ಅಲಿಫ್ಯಾಟಿಕ್ ಅಥವಾ ತೆರೆದ ಸರಪಣಿ ಸಂಯುಕ್ತಗಳು

2) ಆರೋಮ್ಯಾಟಿಕ್ ಅಥವಾ ಉಂಗುರ ರಚನೆಯ ಸಂಯುಕ್ತಗಳು.

14] ಚಲಿಸುವ ಸುರುಳಿಯ ವಿದ್ಯುತ್ ಪ್ರವಾಹ ಮಾಪಕದ [Moving coil galvanometer] ಅಂದವಾದ ಚಿತ್ರ ಬರೆದು ಭಾಗಗಳನ್ನು ಗುರುತಿಸಿ.

ಉತ್ತರಕ್ಕೆ ಜೂನ 1988 ರ ಪ್ರ 1 (a) ನೋಡಿ.

15) 2 ಮತ್ತು 3 ರೋಧಗಳುಳ್ಳ ಎರಡು ವಾಹಕಗಳನ್ನು ಸರಳ ಜೋಡಣೆಯಲ್ಲಿ ಮತ್ತು ಸಮಾನಾಂತರ ಜೋಡಣೆಯಲ್ಲಿ ಸೇರಿಸಿದರೆ, ಉಂಟಾಗುವ ಪರಿಣಾಮಕಾರಿ ರೋಧವೆಷ್ಟು ? (1986 ಎ. 1988 ಮಾ.)

ಉತ್ತರಕ್ಕೆ ಎಪ್ರಿಲ್ 1986 ರ ಪ್ರ. 5 (a) ನೋಡಿ.

16] ಸಂಶ್ಲೇಷಿತ ಆರ್ಗ್ಯಾನಿಕ್ ಸಂಯುಕ್ತ ಎಂದರೇನು? ಒಂದು ಉದಾಹರಣೆ ಕೊಡಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರ. 10[a]ನೋಡಿ.

17] ಕ್ಷ-ಕಿರಣ [X-Ray]ಗಳ ಎರಡು ಗುಣಗಳನ್ನೂ ಮತ್ತು ಎರಡು ಉಪಯೋಗಗಳನ್ನೂ ತಿಳಿಸಿ. [1986 ಎ. 1987 ಎ]

ಉತ್ತರಕ್ಕೆ ಎಪ್ರಿಲ್ 1986 ರ ಪ್ರ. 1 [c] ನೋಡಿ.

18] ರಿಯೋಸ್ಟಾಟ್ ಎಂದರೇನು ? ವಿದ್ಯುನ್ಮಂಡಲದಲ್ಲಿ ಅದನ್ನು ಏಕೆ ಉಪಯೋಗಿಸುತ್ತಾರೆ ?

ಉತ್ತರಕ್ಕೆ ಅಕ್ಟೋಬರ 1986 ರ ಪ್ರ. II [b]ನೋಡಿ.

19] ಗ್ಲೂಕೋಸ್‌ನ ರಚನಾತ್ಮಕ ಸೂತ್ರವನ್ನು ಬರೆಯಿರಿ. ಅದನ್ನು ಏಕೆ ಅಲ್ಡೋಸ್ ಎನ್ನುವರು ?

ಉತ್ತರಕ್ಕೆ ಅಕ್ಟೋಬರ 1986 ರ ಪ್ರ. XI [a] ನೋಡಿ.

20] ಸೂಚಕ ಎಂದರೇನು ? ಪ್ರಯೋಗ ಶಾಲೆಯಲ್ಲಿ ಬಳಸುವ ಎರಡು ಸೂಚಕಗಳನ್ನು ತಿಳಿಸಿ.

ಉತ್ತರಕ್ಕೆ ಅಕ್ಟೋಬರ 1987 ರ ಪ್ರ. 13 [a] ನೋಡಿ.

### 1 ಗುಣದ ಪ್ರಶ್ನೆಗಳು

1) ಕೋಣೆಯ ಉಷ್ಣತೆಯಲ್ಲಿರುವ ದ್ರವರೂಪದಲ್ಲಿರುವ ಒಂದು ಲೋಹ ಯಾವುದು ?

**ಉತ್ತರ :** ಪಾದರಸ.

2) ಸೌರವ್ಯೂಹದಲ್ಲಿ ವಲಯಗಳನ್ನು ಹೊಂದಿದ ಗ್ರಹ ಯಾವುದು ?

**ಉತ್ತರ :** ಶನಿ.

3) ಸೌರವ್ಯೂಹದಲ್ಲಿ ಅತ್ಯಂತ ದೊಡ್ಡ ಗ್ರಹ ಯಾವುದು ?

**ಉತ್ತರ :** ಗುರು.

4) ಬೆಳಕಿನ ವಿಭಜನೆ ಎಂದರೇನು ?

ಉತ್ತರಕ್ಕೆ ಅಕ್ಟೋಬರ 1987 ರ ಪ್ರ. 12(b)ನೋಡಿ.

5) ಕೋಣೆಯ ಉಷ್ಣತೆಯಲ್ಲಿ ದ್ರವರೂಪದಲ್ಲಿರುವ ಒಂದು ಅಲೋಹ ಯಾವುದು ?

**ಉತ್ತರ :** ಬ್ರೋಮಿನ್.

6) ಲೇಸರ್ ಎಂದರೇನು ?

ಉತ್ತರಕ್ಕೆ ಎಪ್ರಿಲ್ 1984 ರ ಪ್ರ. 6 (b) ನೋಡಿ.

7) ಇಂಗಾಲದ ಯಾವುವಾದರೂ ಎರಡು ಬಹುರೂಪಗಳನ್ನು ಹೆಸರಿಸಿ.

**ಉತ್ತರ :** 1) ವಜ್ರ, 2) ಗ್ರಾಫೈಟ್.

8) ವಸ್ತುವಿನ ತೂಕವನ್ನು ಕಂಡುಹಿಡಿಯಲು ಬಳಸುವ ಉಪಕರಣವನ್ನು ಹೆಸರಿಸಿ.

**ಉತ್ತರ :** ಸ್ಪ್ರಿಂಗ್ ತುಲಾಯಂತ್ರ.

9) ಕಲ್ಲಿದ್ದಲಿನ ಎರಡು ವಿಧಗಳನ್ನು ತಿಳಿಸಿ.

**ಉತ್ತರ :** 1) ಕಪ್ಪು ಕಲ್ಲಿದ್ದಲು, 2) ಕಂದು ಕಲ್ಲಿದ್ದಲು.

10) ಒಂದು ವಸ್ತುವು 5 ಸೆಕೆಂಡುಗಳಲ್ಲಿ 20ಮೀಟರ್‌ನಿಂದ 50 ಮೀಟರ್‌ಗೆ ವೇಗವನ್ನು ಹೆಚ್ಚಿಸಿದರೆ. ಅದರ ವೇಗೋತ್ಕರ್ಷವನ್ನು ಕಂಡು ಹಿಡಿಯಿರಿ.

ಉತ್ತರಕ್ಕೆ ಅಕ್ಟೋಬರ್ 1984 ರ ಪ್ರ. 3 (c)ನೋಡಿ.

11) ಹಾಲಿನ ಸಾಪೇಕ್ಷ ಸಾಂದ್ರತೆಯನ್ನು ಕಂಡು ಹಿಡಿಯಲು ಉಪಯೋಗಿಸುವ ಉಪಕರಣ ಯಾವುದು ?

**ಉತ್ತರ :** ಲ್ಯಾಕ್ಟೋಮೀಟರ್ ಅಥವಾ ಕ್ಷೀರಮಾಪಕ.

12) ಇಂಗಾಲದ ಸ್ಫಟಿಕಾಕೃತಿಯ ರೂಪಗಳನ್ನು ತಿಳಿಸಿ.

**ಉತ್ತರ :** ವಜ್ರ, ಗ್ರಾಫೈಟ್.

13) ಕಲ್ಲೆಣ್ಣೆಯಲ್ಲಿ ಸಂಗ್ರಹಿಸಿಡುವ ಒಂದು ಲೋಹವನ್ನು ಹೆಸರಿಸಿ.

**ಉತ್ತರ :** ಸೋಡಿಯಮ್.

14) ಸಾಮಾನ್ಯ ಉಪ್ಪಿನ ರಾಸಾಯನಿಕ ಸೂತ್ರವನ್ನು ಬರೆಯಿರಿ.

**ಉತ್ತರ :** $NaCl$.

15) ಅಡುಗೆ ಸೋಡಾದ ರಾಸಾಯನಿಕ ಹೆಸರು ಮತ್ತು ಸೂತ್ರವನ್ನು ತಿಳಿಸಿ.

**ಉತ್ತರ :** ಸೋಡಿಯಮ್ ಕಾರ್ಬೋನೇಟ್– $Na_3CO_3$

16) ಹರಳು ರೂಪದ ಮೈಲು ತುತ್ತೇದ ರಾಸಾಯನಿಕ ಸೂತ್ರ ಕೊಡಿ.

**ಉತ್ತರ :** $CuSO_4\ 5H_3O$.

17) ದ್ರವ್ಯದ ನಾಲ್ಕನೆಯ ಸ್ಥಿತಿ ಯಾವುದು ?

**ಉತ್ತರ :** ಪ್ಲಾಸ್ಮಾಸ್ಥಿತಿ.

18) ವಿಭವಾಂತರವನ್ನು ಅಳೆಯಲು ಉಪಯೋಗಿಸುವ ಉಪಕರಣ ಯಾವುದು ?

**ಉತ್ತರ :** ವೋಲ್ಟ್‌ಮೀಟರ್.

19) ವಿದ್ಯುತ್ ಪ್ರವಾಹವನ್ನು ಅಳತೆಮಾಡಲು ಬಳಸುವ ಮೂಲಮಾನ ಯಾವುದು ?

**ಉತ್ತರ :** ಆಂಪಿಯರ್,

20) ಇಂಗಾಲದ ಸಂಯೋಗ ಸಾಮರ್ಥ್ಯ ಎಷ್ಟು ?

**ಉತ್ತರ :** ನಾಲ್ಕು.

---

# ವಿಜ್ಞಾನ

## [ ಜೀವಶಾಸ್ತ್ರ ]

## 2 ನೆಯ ಪತ್ರಿಕೆ

### 3 ಗುಣಗಳ ಪ್ರಶ್ನೆಗಳು

1) ಕ್ರಿಯಾತ್ಮಕ ಸಾಗಾಣಿಕೆ (Active transport) ಎಂದರೇನು ? ಅದು ಎಲ್ಲಿ ನಡೆಯುತ್ತದೆ ? ನೆಫ್ರಾನ್‌ನ ಚಿತ್ರ ಬಿಡಿಸಿ.

ಉತ್ತರಕ್ಕೆ ಎಪ್ರಿಲ್ 1986 ರ ಪ್ರ. 3 ನೋಡಿ.

2) ವಾಯುವಿನಿಂದ ಹರಡುವ ಸೋಂಕು ರೋಗಗಳಾವವು ? ಒಂದನ್ನು ವಿವರಿಸಿ.

**ಉತ್ತರ :** ವಾಯುವಿನಿಂದ ಹರಡುವ ಸೋಂಕು ರೋಗಗಳು : 1) ಡಿಫ್ತಿರಿಯಾ 2) ನಾಯಿಕೆಮ್ಮು 3) ಕ್ಷಯ ಮತ್ತು 4) ಕುಷ್ಟರೋಗ.

**ನಾಯಿಕೆಮ್ಮು :** ನಾಯಿಕೆಮ್ಮು ಬಾರ್ಡೆಟೆಲ್ ಪರ್ಟ್ಯುಸಿಸ್ ಎಂಬ ಹ್ರಸ್ವಗ್ರಾಂ ನೆಗೆಟಿವ್ ಬ್ಯಾಕ್ಟೀರಿಯಾದಿಂದ ಉಂಟಾಗುವ ಸೋಂಕುರೋಗ. ಈ ರೋಗ ಇರುವವರು ಕೆಮ್ಮುವಾಗ 'ಹೂಫ್' ಎಂಬ ವಿಶಿಷ್ಟ ಶಬ್ದ ಮಾಡುತ್ತಾರೆ. ಮೂಗು, ಕಣ್ಣು ಮತ್ತು ಮೆದುಳಿನಿಂದ ಕೂಡ ರಕ್ತಸ್ರಾವವಾಗುವ ಸಂಭವ ಇರುತ್ತದೆ. ರೋಗಿಗೆ ಆಹಾರ ಸೇವಿಸುವುದು ಕಷ್ಟವಾಗುವುದರಿಂದ ನಿಶ್ಯಕ್ತನಾಗುವನು. ರೋಗಿಯ ಎಂಜಲಿನಲ್ಲಿ ರೋಗಾಣುಗಳಿರುವವು. ಈ ರೋಗವು ಸಾಮಾನ್ಯವಾಗಿ 2 ವರ್ಷಕ್ಕಿಂತಲೂ ಕಡಿಮೆ ವಯಸ್ಸಿನ ಮಕ್ಕಳಿಗೆ ಸಾಮಾನ್ಯವಾಗಿ ಬರುವುದು.

3) ಮಾನವನ ಕಣ್ಣಿನ ಗುಡ್ಡೆಯ ಅಂದವಾದ ನೀಳ ಛೇದ ನೋಟದ ಚಿತ್ರ ಬರೆದು ಅದರಲ್ಲಿ ಕೊರಾಯಿಡ್, ಕಾರ್ನಿಯಾ, ಐರಿಸ್ (ಕೃಷ್ಣಪಟಲ), ಸ್ಕ್ಲೆರಾಟಿಕ್, ದ್ವಿ ಉನ್ನತ ಮಸೂರ, ರೆಟಿನಾ ಇವುಗಳನ್ನು ಗುರುತಿಸಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರ. 1 ನೋಡಿ.

4) ನಾಲಿಗೆಯಲ್ಲಿರುವ ರಸಾಂಕುರದ ನೀಳಛೇದ ಚಿತ್ರ ಬಿಡಿಸಿ, ಭಾಗಗಳನ್ನು ಹೆಸರಿಸಿ.

ಉತ್ತರಕ್ಕೆ ಅಕ್ಟೋಬರ 1986 ರ ಪ್ರ. 2 ನೋಡಿ.

5) ಮಾನವನ ಹೃದಯದ ಅಂದವಾದ ಚಿತ್ರಬರೆದು ಅದರಲ್ಲಿ ಕೆಳಗಿನ ಭಾಗಗಳನ್ನು ಗುರುತಿಸಿ.

ಪಲ್ಮನರಿ ಅಭಿಧಮನಿ, ಅಯೋರ್ಟಾ, ಬಲಹೃತ್ಕುಕ್ಷಿ ಉಚ್ಚಮಹಿನ ರಕ್ತನಾಳ.

**ಉತ್ತರ :**



ಭಾಗಗಳು : 1] ಪಲ್ಮನರಿ ಅಭಿಧಮನಿ, 9) ಅಯೋರ್ಟಾ 4] ಬಲಹೃತ್ಕುಕ್ಷಿ, 7] ಉಚ್ಚಮಹಿನ ರಕ್ತನಾಳ.

6] ಮಾನವನ ಚರ್ಮದ [Skin] ರಚನೆಯನ್ನು ತೋರಿಸುವ ಚಿತ್ರವನ್ನು ಬಿಡಿಸಿ ಈ ಭಾಗಗಳನ್ನು ಗುರುತಿಸಿ. 1] ಸ್ವೇದ ಗ್ರಂಥಿ, 2] ಹೊರಚರ್ಮ, 3] ಒಳಚರ್ಮ.

ಉತ್ತರಕ್ಕೆ ಅಕ್ಟೋಬರ 1985 ರ ಪ್ರ. II(1) ನೋಡಿ.

7] ಮೆದುಳು ಬಳ್ಳಿಯ ಅಡ್ಡಛೇದ ನೋಟದ ಅಂದವಾದ ಚಿತ್ರ ಬರೆದು ಕೆಳಗಿನ ಭಾಗಗಳನ್ನು ಹೆಸರಿಸಿ. 1] ಮಧ್ಯ ಕಾಲುವೆ, 2] ಮೆದುಳುಬಳ್ಳಿ ನರಗಳು, 3] ಬಿಳಿಯ ವಸ್ತು ಮತ್ತು 4] ನರಕೋಶಗಳು.

**ಉತ್ತರ :**



ಮೆದುಳು ಬಳ್ಳಿಯ ಅಡ್ಡಛೇದದ ಚಿತ್ರ

ಭಾಗಗಳು : 6) ಮಧ್ಯಕಾಲುವೆ, 1) ಮೆದುಳು ಬಳ್ಳಿಯ ನರಗಳು, 4) ಬಿಳಿಯ ವಸ್ತು, 7) ನರಕೋಶಗಳು.

8) ಮಾನವನ ಮೂತ್ರ ಜನಕಾಂಗದ ನೀಳಛೇದದ ಅಂದವಾದ ಚಿತ್ರಬರೆದು ಅದರಲ್ಲಿ ಕಾರ್ಟೆಕ್ಸ್, ಮೆಡುಲ್ಲಾ, ಪೆಲ್ವಿಸ್, ಮೂತ್ರನಾಳ, ಪಿರ‍್ಯಾಮಿಡ್‌ಗಳನ್ನು ಗುರುತಿಸಿ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರ. 1 ನೋಡಿ.

9) ಮಾನವನ ಮೆದುಳಿನ ಹೊರನೋಟವನ್ನು ತೋರಿಸುವ ಚಿತ್ರಬರೆದು ಅದರಲ್ಲಿ ಈ ಕೆಳಗಿನ ಭಾಗಗಳನ್ನು ಗುರ್ತಿಸಿ. 1) ಮಹಾಮಸ್ತಿಷ್ಕ, 2) ಅನುಮಸ್ತಿಷ್ಕ, 3) ಫಾನ್ಸ್, 4) ಮೆಡುಲ್ಲಾ, ಅಬ್ಲಾಂಗೇಟಾ.

ಉತ್ತರಕ್ಕೆ ಎಪ್ರಿಲ್ 1987 ರ ಪ್ರ. 1 ನೋಡಿ.

10) ರಕ್ತದ ಯಾವುದಾದರೂ ಆರು ಮುಖ್ಯ ಕಾರ್ಯಗಳನ್ನು ತಿಳಿಸಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರ. 6 ನೋಡಿ.

## 2 ಗುಣಗಳ ಪ್ರಶ್ನೆಗಳು

1) ಪ್ಲಾಸೆಂಟಾ ಎಂದರೇನು ? ಅದರ ಕಾರ್ಯಗಳನ್ನು ತಿಳಿಸಿ.

ಉತ್ತರಕ್ಕೆ ಅಕ್ಟೋಬರ 1987 ರ ಪ್ರ. IV ರಲ್ಲಿ 4 ನೋಡಿ.

2) ರಕ್ತ ಹೆಪ್ಪುಗಟ್ಟುವಿಕೆ ಎಂದರೇನು ? ಅದರ ಅನುಕೂಲತೆಗಳೇನು ?

ಉತ್ತರ : ರಕ್ತ ಹೆಪ್ಪುಗಟ್ಟುವಿಕೆ : ಗಾಯದ ಮುಖದಲ್ಲಿ ರಕ್ತವು ಗಟ್ಟಿಯಾಗುವುದನ್ನು ರಕ್ತ ಹೆಪ್ಪುಗಟ್ಟುವುದು ಎನ್ನುವರು.

ರಕ್ತ ಹೆಪ್ಪುಗಟ್ಟುವಿಕೆಯ ಅನುಕೂಲತೆಗಳು : ರಕ್ತ ಹೆಪ್ಪುಗಟ್ಟುವುದರಿಂದ ಗಾಯದಿಂದ ಹೆಚ್ಚು ರಕ್ತವು ಹೊರಗೆ ಹೋಗುವುದನ್ನು ತಡೆಯುವುದು. ಮುರಿದ ರಕ್ತನಾಳಗಳು ಮುಚ್ಚಿಕೊಂಡು ರಕ್ತಹರಿಯುವುದು ನಿಲ್ಲುವುದು. ಗಾಯದ ಮೂಲಕ ದೇಹದಲ್ಲಿ ಸೇರಬಹುದಾದ ರೋಗಾಣುಗಳ ಪ್ರವೇಶವನ್ನು ತಡೆಯುವುದು. ಅಧಿಕ ರಕ್ತಸ್ರಾವದಿಂದ ಆಗುವ ಅಪಾಯವನ್ನು ತಡೆಯುವುದು.

3) ಲಿಂಗಸಂಬಂಧ ಅನುವಂಶೀಯತೆ ಎಂದರೇನು ? ಇದಕ್ಕೆ ಎರಡು ಉದಾಹರಣೆ ಕೊಡಿ.

ಉತ್ತರಕ್ಕೆ ಎಪ್ರಿಲ್ 1984 ರ ಪ್ರ. 5 ನೋಡಿ.

4) "ಸರಳ ಗಾಯಿಟರ್" ಎಂದರೇನು ? ಸಮುದ್ರ ತೀರ ಪ್ರದೇಶಗಳಲ್ಲಿ ವಾಸಿಸುವ ಜನರು ಸರಳ ಗಾಯಿಟರ್‌ನಿಂದ ನರಳದಿರಲು ಕಾರಣವೇನು ?

ಉತ್ತರಕ್ಕೆ ಮಾರ್ಚ 1988 ರ ಪ್ರ. IV (4) ನೋಡಿ.

5) ವೈವಿಧ್ಯತೆ ಎಂದರೇನು ? ವೈವಿಧ್ಯತೆಗೆ ಕಾರಣಗಳಾವವು ?

ಉತ್ತರ : ವೈವಿಧ್ಯತೆ : ಜೀವಿಗಳಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ವೈವಿಧ್ಯತೆ ಎನ್ನುವರು.

ವೈವಿಧ್ಯತೆಗೆ ಕಾರಣಗಳು : ಪರಕೀಯ ಗರ್ಭಧಾರಣೆ, ಪರಿಸರ ಮತ್ತು ಪರಿವರ್ತನೆ (ಮ್ಯುಟೇಶನ್)

6) ಶಕ್ತಿ ಪಿರ‍್ಯಾಮಿಡ್ ಮತ್ತು ಸಂಖ್ಯೆ ಪಿರ‍್ಯಾಮಿಡ್‌ಗಳಲ್ಲಿಯ ವ್ಯತ್ಯಾಸವೇನು ?

ಉತ್ತರ : ಶಕ್ತಿ ಪಿರ‍್ಯಾಮಿಡ್‌ಗಳಲ್ಲಿಯ ಆಹಾರ ಸರಪಣಿಯ ನಾನಾ ಕೊಂಡಿಗಳಲ್ಲಿರುವ ಜೀವಿಗಳ ಶಕ್ತಿಯ ಪರಿಮಾಣದ ಆಧಾರದಿಂದ ಪಿರ‍್ಯಾಮಿಡ್‌ದ ರಚನೆಯಾಗಿರುತ್ತದೆ. ಆದರೆ ಸಂಖ್ಯೆ ಪಿರ‍್ಯಾಮಿಡ್‌ನಲ್ಲಿ ಆಹಾರ ಸರಪಣಿಯ ನಾನಾ ಕೊಂಡಿಗಳಲ್ಲಿರುವ ಜೀವಿಗಳ ಸಂಖ್ಯೆಯ ಆಧಾರದಿಂದ ಪಿರ‍್ಯಾಮಿಡ್‌ನ ರಚನೆಯಾಗಿರುತ್ತದೆ.

7) "ಋತುಚಕ್ರ" ಎಂದರೇನು ?

ಉತ್ತರಕ್ಕೆ ಜೂನ 1988 ರ ಪ್ರ. III (2) ನೋಡಿ.

8) ಒಳಕಿವಿಯ ಎರಡು ಭಾಗಗಳನ್ನು ಹೆಸರಿಸಿ. ಒಳಕಿವಿಯಲ್ಲಿಯ ಎರಡು ದ್ರವಗಳನ್ನು ಹೆಸರಿಸಿ.

ಉತ್ತರಕ್ಕೆ ಅಕ್ಟೋಬರ 1985 ರ ಪ್ರ. III (3) ನೋಡಿ.

9) ಮೂತ್ರ ಮತ್ತು ಸಂತಾನೋತ್ಪತ್ತಿ ವ್ಯೂಹ ಎಂದರೇನು ? ಅದು ಎಲ್ಲಿ ಕಂಡು ಬರುತ್ತದೆ ?

ಉತ್ತರ : ವಿಸರ್ಜನ ವ್ಯೂಹವು ಸಂತಾನೋತ್ಪತ್ತಿ ವ್ಯೂಹದ ನಿಕಟ ಸಂಪರ್ಕವನ್ನು ಹೊಂದಿದ್ದರೆ, ಇವೆರಡನ್ನು

ಒಟ್ಟಾಗಿ ನಮೂತ್ರ ಮತ್ತು ಸಂತಾನೋತ್ಪತ್ತಿ ವ್ಯೂಹ ಎನ್ನುವರು. ಇದು ಕಪ್ಪೆಯಲ್ಲಿ ಕಂಡು ಬರುತ್ತದೆ.

10) ಭ್ರಾತೃ ಅವಳಿಗಳು (Fraternal twins) ಮತ್ತು ತದ್ರೂಪ ಅವಳಿಗಳು (Identical twins) ಎಂದರೇನು ? ಅವು ಹೇಗೆ ಉಂಟಾಗುತ್ತವೆ ?

ಉತ್ತರಕ್ಕೆ ಎಪ್ರಿಲ್ 1986 ರ ಪ್ರ. IV (4) ನೋಡಿ.

## 1 ಗುಣದ ಪ್ರಶ್ನೆಗಳು

1) ಮ್ಯುಟೇಶನ್‌ಗಳ ವಿಧಗಳನ್ನು ತಿಳಿಸಿ.

**ಉತ್ತರ :** 1) ಜೀನ್ ಮ್ಯುಟೇಶನ್ 2) ವರ್ಣತಂತು ಮ್ಯುಟೇಶನ್.

2) ಹೃದಯದ ಸುತ್ತಲೂ ಇರುವ ದ್ರವ ಮತ್ತು ಪೊರೆಯನ್ನು ಹೆಸರಿಸಿ.

**ಉತ್ತರ :** ದ್ರವ-ಪೆರಿಕಾರ್ಡಿಯಲ್ ದ್ರವ, ಪೊರೆ : ಪೆರಿಕಾರ್ಡಿಯಂ.

3) ಡಾರ್ವಿನ್‌ನ ಶೋಧನೆಗಳು ಏನನ್ನು ಸಿದ್ಧಪಡಿಸುತ್ತವೆ ?

**ಉತ್ತರ :** ನಿಸರ್ಗದ ಆಯ್ಕೆಯನ್ನು ಸಿದ್ಧಪಡಿಸುತ್ತವೆ.

4) ಡೆಮೋಗ್ರಾಫರ ಎಂದರೆ ಯಾರು ?

**ಉತ್ತರ :** ಜನಸಂಖ್ಯೆಯ ಬಗ್ಗೆ ಅಧ್ಯಯನ ಮಾಡುವವ.

5) ರಕ್ತದೇಹಾವಕಾಶವು ಯಾವ ಪ್ರಾಣಿಯಲ್ಲಿ ಕಂಡು ಬರುವುದು ?

**ಉತ್ತರ :** ಜಿರಲೆಯಲ್ಲಿ.

6) ಕೋಳಿಗಳಲ್ಲಿ ಎತ್ತರವಾಗಿರುವುದು ತನಗಿಂತ ಕುಳ್ಳಾದ ಎಲ್ಲಾ ಕೋಳಿಗಳನ್ನೂ ಕುಕ್ಕುವ ಕ್ರಮವು ಏನನ್ನು ಸೂಚಿಸುತ್ತದೆ ?

ಉತ್ತರಕ್ಕೆ ಎಪ್ರಿಲ್ 1987 ರ ಪ್ರ. IV (8) ನೋಡಿ.

7) "ಪಾಲಿಪ್ಲಾಯಿಡಿ" ಎಂದರೇನು ?

ಉತ್ತರಕ್ಕೆ ಜೂನ 1988 ರ ಪ್ರ. IV (5) ನೋಡಿ.

8) ಲಿಂಗ ಸಂಬಂಧೀ ಅನುವಂಶೀಯತೆಗೆ ಎರಡು ಉದಾಹರಣೆಗಳನ್ನು ಕೊಡಿ.

ಉತ್ತರಕ್ಕೆ ಮಾರ್ಚ 1988 ರ ಪ್ರ. III (6) ನೋಡಿ.

9) ಸರಳ ಅಸ್ಥಿಭಂಗ ಮತ್ತು ಸಂಯುಕ್ತ ಅಸ್ಥಿಭಂಗ ವ್ಯತ್ಯಾಸ ತಿಳಿಸಿ.

ಉತ್ತರಕ್ಕೆ ಮಾರ್ಚ 1988 ರ ಪ್ರ. VI (1) ನೋಡಿ.

10) ಹೃದಯದ ಬಡಿತವನ್ನು ಪರೀಕ್ಷಿಸುವ ಉಪಕರಣವು ಯಾವುದು ?

**ಉತ್ತರ :** ಸ್ಟೆತೋಸ್ಕೋಪು.

## ½ ಗುಣದ ಪ್ರಶ್ನೆಗಳು

ಬಿಟ್ಟ ಸ್ಥಳಗಳನ್ನು ಯೋಗ್ಯ ಪದಗಳಿಂದ ತುಂಬಿ. (ತುಂಬಬೇಕಾದ ಪದಗಳನ್ನು ಕಂಸಿನಲ್ಲಿ ಕೊಟ್ಟಿದೆ.

1] ದ್ವಿನಾಮಕರಣ ಪದ್ಧತಿಯನ್ನು ಜಾರಿಯಲ್ಲಿ ತಂದ ವಿಜ್ಞಾನಿ........ (ಲೆನಿಯಸ್)

2] ಅಮೀಬಾ........ಪ್ರಾಣಿ ವಂಶಕ್ಕೆ ಸೇರಿದ್ದೆ (ಆದಿಜೀವಿ)

3] ನೀರನ್ನು ಸಾಗಿಸುವ ಸಸ್ಯಅಂಗಾಂಶ.......... (ಕ್ಸೈಲೆಮ್)

4] ಚರ್ಮಕ್ಕೆ ಬಣ್ಣಕೊಡುವ ವರ್ಣಕವು.......... (ಮೆಲೆನಿನ್)

5] ಚಿಟ್ಟೆಯ ವಂಶ........ (ಆರ್ಥ್ರೋಪೋಡಾ)

6] ಮುತ್ತು........ವಂಶದ ಪ್ರಾಣಿಯಿಂದ ದೊರಕುತ್ತದೆ. (ಮೃದ್ವಂಗಿ)

7] ಹುಚ್ಚುನಾಯಿ ಕಡಿತಕ್ಕೆ ಚಿಕಿತ್ಸೆಯನ್ನು ಕಂಡು ಹಿಡಿದ ವಿಜ್ಞಾನಿ........(ಲೂಯಿ ಪಾಶ್ಚರ)

8] ಲಾಲಾರಸದಲ್ಲಿರುವ ಕಿಣ್ವ........ (ಅಮಿಲೋಸ್)

9] ಪರಾವಲಂಬಿ ಸಸ್ಯದ ಬೇರುಗಳ ಹೆಸರು.......... (ಹಾಸ್ಟೋರಿಯಾ)

10. ಹೈಡ್ರಾ........ವಂಶಕ್ಕೆ ಸೇರಿದ (ಕುಟುಕು ಕಣವಂತ)
11. ಜೀವಕೋಶದ ಶಕ್ತಿ ಉತ್ಪಾದನಾ ಕೇಂದ್ರ........ (ಮೈಟೊಕಾಂಡ್ರಿಯಾ)
12. ಮೀನಿನ ಚಲನಾಂಗಗಳು........ (ಫಿನ್‌ಗಳು)
13. ಜಂತುಹುಳು........ವಂಶಕ್ಕೆ ಸೇರಿದೆ. (ಆಸ್ಕೆಲ್ಮೆಂಥಿಸ್)
14. ನಕ್ಷತ್ರ ಮೀನು........ವಂಶಕ್ಕೆ ಸೇರಿದೆ. (ಕಂಟಕ ಚರ್ಮಿಗಳು)
15. ಮನುಷ್ಯನ ವೈಜ್ಞಾನಿಕ ಹೆಸರು........ (ಹೋಮೋಸೆಫಿಯನ್ಸ್)

ಕೆಳಗಿನವುಗಳನ್ನು ಹೆಸರಿಸಿ.

(ಹೆಸರನ್ನು ಕಂಸನಲ್ಲಿ ಕೊಟ್ಟಿದೆ)

1. ಸಾಮಾನ್ಯ ಕೋಶವಿಭಜನೆಯ ಕ್ರಮ. (ಮೈಟಾಸಿಸ್)
2. ಬೀಜಾಣುವನ್ನು ಉತ್ಪತ್ತಿಮಾಡುವ ರಚನೆ. (ಸ್ಪೊರ್ಯಾಂಜಿಯಮ್)
3. ಕೋಶದ ಚಲಾವಣೆ ಶಕ್ತಿ (ಎ. ಟಿ. ಪಿ. ಶಕ್ತಿ)
4. ಜಿರಲೆಯ ವಿಸರ್ಜನಾಂಗ (ಮಾಲ್ಫಿಜಿಯನ್ ನಾಳ)
5. ರಕ್ತಕ್ಕೆ ಬಣ್ಣಕೊಡುವ ವರ್ಣಕ. (ಹೀಮೊಗ್ಲೋಬಿನ್)
6, ಕರ್ನಾಟಕದಲ್ಲಿರುವ ಸುಂದರ ಪಕ್ಷಿಧಾಮ. (ರಂಗನತಿಟ್ಟು)
7. ಮನುಷ್ಯನ ದ್ವಿನಾಮ ನಾಮಕರಣ (ಹೋಮೋಸೆಫಿಯನ್ಸ್)
8. ಭೂಕಂಪವನ್ನು ಪತ್ತೆಹಚ್ಚುವ ಉಪಕರಣ (ಸೆಸ್ಮೊಗ್ರಾಫ್)
9. ಕಣ್ಣಿನಿಂದ ಹೊರಡುವ ನರ (ಚಾಕ್ಷುಷನರ)
10. ಒಳಕಿವಿಯನ್ನು ಸುತ್ತುವರಿದ ದ್ರವ (ಪೆರಿಲಿಂಫ್)

ಕೆಳಗಿನವುಗಳ ಒಂದೊಂದು ಕಾರ್ಯ ತಿಳಿಸಿ.
(ಕಾರ್ಯವನ್ನು ಮುಂದೆ ಬರೆದಿದೆ)

1] ಮೀನಿನ ಕಿವಿರು— ಉಸಿರಾಟಕ್ಕೆ ಸಹಾಯ ಮಾಡುವುದು.

2] ಬೇರು ಟೋಪಿ— ಬೇರಿನ ಸೂಕ್ಷ್ಮ ತುದಿಯ ರಕ್ಷಣೆ.

3] ಯುಗ್ಲಿನಾ ಕಶಾಂಗ—ಚಲನೆಗೆ ಸಹಾಯ ಮಾಡುವುದು.

4] ಅಮೀಬಾದ ಮಿಥ್ಯಾಪಾದ— ಚಲನೆಗೆ ಸಹಾಯ.

5] ಮೂಲಂಗಿಯ ತಾಯಿಬೇರು— ಆಹಾರ ಸಂಗ್ರಹಣೆ.

6] ಕ್ರೊಮೊಸೋಮ್‌ಗಳಲ್ಲಿರುವ ಗುಣಾಣು— ಅನುವಂಶೀಯ ಗುಣಗಳನ್ನು ಪೀಳಿಗೆಯಿಂದ ಪೀಳಿಗೆಗೆ ಸಾಗಿಸುವುದು.

7] ಅಭಧಮನಿಗಳು— ಹೃದಯದಿಂದ ರಕ್ತವನ್ನು ಸಾಗಿಸುವುದು.

8] ಹೂಜಿಗಿಡದ ಹೂಜಿ— ಕೀಟಗಳನ್ನು ಆಕರ್ಷಿಸುವುದು.

9] ಜೀವಕೋಶದಲ್ಲಿರುವ ಮೈಟೊಕಾಂಡ್ರಿಯ— ಆಹಾರದಿಂದ ಶಕ್ತಿಯನ್ನು ಬಿಡುಗಡೆ ಮಾಡುವುದು.

10] ಸಣ್ಣ ಕರುಳಿನಲ್ಲಿರುವ ವಿಲ್ಲೈಗ್ರಂಥಿಗಳು— ಜೀರ್ಣವಾದ ಆಹಾರವನ್ನು ರಕ್ತಗತ ಮಾಡುವುದು.

———

# ಗಣಿತ

Anthony R = GEF
Palahally
S.R. Patana
Madyampya

ಪರಿವಿಡಿ

ಗ್ರಾಮ = ಚಿತ್ರ = ಕಂಪನಿ.

# ಗಣಿತ

ಎಪ್ರೀಲ್-1984 1 ನೆಯ ಪತ್ರಿಕೆ

(ಅಂಕಗಣಿತ-ಬೀಜಗಣಿತ)

ವೇಳೆ : $2\frac{1}{2}$ ಗಂಟೆ) (ಗುಣಗಳು : 65

ಪ್ರಶ್ನೆ 1. $6 : 15 = 12 : x$, ಆದರೆ $x$ ನ ಬೆಲೆಯನ್ನು ಕಂಡುಹಿಡಯಿರಿ.

ರೀತಿ : $6 : 15 = 12 : x$.

ಅಂತ್ಯ ಪದಗಳ ಗುಣಲಬ್ಧ = ಮಧ್ಯಪದಗಳ ಗುಣಲಬ್ಧ

$\therefore \quad 6 \times x = 15 \times 12$

ಅಥವಾ $x = \frac{15 \times 12}{6} = 30$

$\therefore \quad x = 30$ Ans.

ಪ್ರಶ್ನೆ 2. A {1,2,3,4,5,6} ಮತ್ತು B = {1,3,5,7} ಆದರೆ A ∩ B ಲೆಕ್ಕಾಚಾರ ಮಾಡಿ.

ರೀತಿ : A={1,2,3,4,5,6}, {B=1,3,5,7}

∴ A . B={1,3,5}

ಪ್ರಶ್ನೆ 3. $12_{(5)}$ ನ್ನು ದಶಮಾನ ಪದ್ಧತಿಗೆ ಬದಲಾಯಿಸಿ.

ರೀತಿ :

| $5^1$ | $5^0$ |
|---|---|
| 1 | 2 |

$\therefore \quad 12_{(5)} = 1 \times 5^1 + 2 \times 5^0$
$= 1 \times 5 + 2 \times 1$
$= 5 + 2 = 7$

$\therefore \quad 12_{(5)} = 7$ Ans.

ಪ್ರಶ್ನೆ 4. 0 8 ನ್ನು ಭಿನ್ನರಾಶಿಯಾಗಿ ಬರೆಯಿರಿ.

ರೀತಿ : $0.8 = \frac{8}{10} = \frac{4}{5}$ Ans.

ಪ್ರಶ್ನೆ 5. ರೂ. 492 ನ್ನು A ಮತ್ತು B ಗಳಿಗೆ 7 : 5 ಪ್ರಮಾಣದಲ್ಲಿ ಹಂಚಿರಿ.

ರೀತಿ : ಪ್ರಮಾಣಗಳ ಮೊತ್ತ $= 7 + 5 = 12$

∴ A ನ ಪಾಲಿನ ಹಣ $= \frac{492}{12}$

$\times 7 = 287$ ರೂ.

ಮತ್ತು B ನ ಪಾಲಿನ ಹಣ $= \frac{492}{12}$

$\times 5 = 205$ ರೂ.

A ನಿಗೆ 287ರೂ. B ನಿಗೆ 205 ರೂ. Ans.

ಪ್ರಶ್ನೆ 9. 10 ಸೆಂ ಮೀ. ಉದ್ದವಿರುವ ಒಂದು ರೇಖೆಯನ್ನು 10.1 ಸೆಂ. ಮೀ. ಎಂದು ಅಳೆದರೆ ಶೇಕಡಾ ತಪ್ಪನ್ನು ಕಂಡು ಹಿಡಿಯಿರಿ.

ರೀತಿ : 10 ಸೆಂ.ಮೀ.ಗೆ ಆಗುವ ತಪ್ಪು = 10 1 − 10
= 0.1 ಸೆಂ.ಮೀ.

∴ 100 ಸೆಂ.ಮೀ.ಗೆ ಆಗುವ ತಪ್ಪು

$\frac{.1 \times 100}{10} = 1$

∴ ಶೇಕಡಾ ತಪ್ಪು = 1% Ans.

ಪ್ರಶ್ನೆ 7. ಒಬ್ಬ ದಲ್ಲಾಳಿಯು ರೂ. 32,000 ಕ್ಕೆ ಒಂದು ಮನೆಯನ್ನು ಮಾರಿಸಿ 2% ಕಮೀಶನ್ ಪಡೆದರೆ. ಕಮೀಷನ್ ಹಣವನ್ನು ಕಂಡು ಹಿಡಿಯಿರಿ.

ರೀತಿ : 100 ರೂ.ಗಳಿಗೆ ದೊರೆಯುವ ಕಮೀಶನ್=2 ರೂ.

∴ 32,000 ರೂ.ಗಳಿಗೆ ದೊರೆಯುವ ಕಮೀಷನ್

$= \frac{2 \times 32,000}{100} = 640$ ರೂ.

∴ ಕಮೀಷನ್ ಹಣ = 640 ರೂ Ans.

ಪ್ರಶ್ನೆ 8. ಈ ಹೇಳಿಕೆಯನ್ನು ಸಂಕೇತ ರೂಪದಲ್ಲಿ ಬರೆಯಿರಿ "$x$"ಗೆ $p$ ಯನ್ನು ಸೇರಿಸಿದಾಗ ಮೊತ್ತವು 15 ಕ್ಕೆ ಸಮವಾಗುವುದು"

ಉತ್ತರ : $x + p = 15$.

ಪ್ರಶ್ನೆ 9. 441 ರ ವರ್ಗಮೂಲವನ್ನು ಕಂಡುಹಿಡಿಯಿರಿ.

ರೀತಿ :

```
      1 1
   2 |441  (21
  +2 |-4
  41 | 041
     | -41
  -  |  00
```

$\therefore \sqrt{441} = 21$ Ans..

ಪ್ರಶ್ನೆ 10. ಗಣ $A=\{1,2\}$, ಗಣ $B=\{3,5\}$ ಆದರೆ $A\times B$ ಕಂಡುಹಿಡಿಯಿರಿ

ರೀತಿ : $A=\{1,2\}$, $B=\{3,5\}$.

$\therefore A\times B=\{1,2\}\times\{3,5\}$.

$=\{(1,3),(1,5),(2,3),(2,5)\}$.

ಪ್ರಶ್ನೆ 11. ರೂ. 240 ರ 15 ಕೆನರಾ ಬ್ಯಾಂಕ ಶೇರುಗಳನ್ನು ಕೊಳ್ಳಲು ಬೇಕಾಗುವ ಹಣವೆಷ್ಟು ?

ರೀತಿ : ಒಂದು ಶೇರಿನ ಬೆಲೆ = ರೂ. 240.

$\therefore$ 15 ಶೇರುಗಳ ಒಟ್ಟು ಬೆಲೆ $=(240\times15)$ರೂ.

$=3600$ ರೂ.

$\therefore$ 15 ಶೇರುಗಳನ್ನು ಕೊಳ್ಳಲು. ಬೇಕಾಗುವ ಹಣ = 3,600 ರೂ. Ans.

ಪ್ರಶ್ನೆ 12. $log\ 500=2.6990$, ಆದರೆ $log\ 50$ ರ ಬೆಲೆಯೇನು ?

ಉತ್ತರ : $log\ 500=2.6990$, $\therefore log\ 50=1.6990$ Ans.

ಅಥವಾ

$$log\ 50=log\left(\frac{500}{10}\right)=log\ 500-log\ 10$$

$$=2.6990-1.0000$$

$$=1.6990 \text{ Ans.}$$

ಪ್ರಶ್ನೆ 13. ಇವುಗಳ ಮ.ಸಾ.ಅ. ಏನು? $3a, 3ab, 3abc$.

ಉತ್ತರ : $3a, 3ab, 3abc$ ಗಳ ಮ. ಸಾ. ಅ. $=3a$ Ans.

ಪ್ರಶ್ನೆ 14. ಇವುಗಳ ಲ.ಸಾ.ಅ ಏನು ? $4m^6n^6, 12m^6n^5$

ಉತ್ತರ : $4m^6n^6$, $12\ m^6n^5$ ಗಳ ಲ.ಸಾ.ಅ, $=12m^6n^6$ Ans.

ಪ್ರಶ್ನೆ 15. $\sqrt{x}+\sqrt{y}$ ಇದರ ಸಂಯುಗ್ಮಿಯನ್ನು ಬರೆಯಿರಿ.

ಉತ್ತರ : $\sqrt{x}+\sqrt{y}$ ಇದರ ಸಂಯುಗ್ಮಿ $=\sqrt{x}-\sqrt{y}$ Ans.

ಪ್ರಶ್ನೆ 16. ಈ ಸಂಖ್ಯಾಯತದ ಹೆಸರು ಮತ್ತು ಶ್ರೇಣಿಯನ್ನು ಬರೆಯಿರಿ.

$$\begin{bmatrix}1&0&0\\0&1&0\\0&0&1\end{bmatrix}$$

ಉತ್ತರ : $\begin{bmatrix}1&0&0\\0&1&0\\0&0&1\end{bmatrix}$ ಈ ಸಂಖ್ಯಾಯತದ ಹೆಸರು : ಘಟಕ ಸಂಖ್ಯಾಯತ ಶ್ರೇಣಿ $3\times3$ Ans.

ಪ್ರಶ್ನೆ 17. $x^2-7x+12=0$ ಸಮೀಕರಣದ i) ಮೂಲಗಳ ಮೊತ್ತ ii) ಮೂಲಗಳ ಗುಣಲಬ್ಧವನ್ನು ಕಂಡುಹಿಡಿಯಿರಿ.

ರೀತಿ : $x^2-7x+12=0$ ಇಲ್ಲಿ $a=1$ $b=-7$ ಮತ್ತು $c=12$

$\therefore$ i) ಮೂಲಗಳ ಮೊತ್ತ $\frac{-b}{a}=\frac{-(-7)}{1}$

$=+7$ Ans.

ii) ಮೂಲಗಳ ಗುಣಲಬ್ಧ $=\frac{c}{a}=\frac{12}{1}=12$ Ans.

ಪ್ರಶ್ನೆ 18. 1 ರಿಂದ 25 ರ ವರೆಗಿನ ಎಲ್ಲಾ ಸ್ವಾಭಾವಿಕ ಸಂಖ್ಯೆಗಳ ಮೊತ್ತವೇನು ?

ರೀತಿ : $S_{25}=\frac{25\ (25+1)}{2}\ldots\left(Sn=\frac{n(n+1)}{2}\right)$

$=\frac{25\times26}{2}=325$

$\therefore$ 1 ರಿಂದ 25 ರ ವರೆಗಿನ ಸ್ವಾಭಾವಿಕ ಸಂಖ್ಯೆಗಳ ಮೊತ್ತ $=325$ Ans.

ಪ್ರಶ್ನೆ 19 ಒಂದು ತರಗತಿಯಲ್ಲಿ 35 ವಿದ್ಯಾರ್ಥಿಗಳು ಷರ್ಟ ಮತ್ತು ಟೋಪಿಗಳನ್ನು ಮತ್ತು 25 ವಿದ್ಯಾರ್ಥಿಗಳು ಕೋಟು ಮತ್ತು ಟೋಪಿಗಳನ್ನು ಧರಿಸುತ್ತಾರೆ. 10 ವಿದ್ಯಾರ್ಥಿಗಳು ಷರ್ಟ, ಕೋಟು ಮತ್ತು ಟೋಪಿಗಳನ್ನು ಧರಿಸಿದರೆ, ತರಗತಿಯಲ್ಲಿರುವ ವಿದ್ಯಾರ್ಥಿಗಳ ಸಂಖ್ಯೆಯನ್ನು ಕಂಡು ಹಿಡಿಯಿರಿ.

ರೀತಿ : $n(A)$=ಷರ್ಟ ಮತ್ತು ಟೋಪಿಧರಿಸಿದ ವಿದ್ಯಾರ್ಥಿಗಳು $=35$

$n(B)$=ಕೋಟು ಮತ್ತು ಟೋಪಿ ಧರಿಸಿದ ವಿದ್ಯಾರ್ಥಿಗಳು $=25$

$\therefore n(A\cup B)$=ಒಟ್ಟು ವಿದ್ಯಾರ್ಥಿಗಳ ಸಂಖ್ಯೆ $=?$,

$n(A\cap B)$=ಷರ್ಟ, ಕೋಟು ಮತ್ತು ಟೋಪಿ ಧರಿಸಿದವರು=10

ಈಗ $n(A)+n(B)+n(A \quad B)+n(A \cap B)$

ಅಥವಾ $35+25 = n(A \cup B+10)$

ಅಥವಾ $n(A \cup B)=35+25 \quad 10=60$

$-10=50$

∴ ತರಗತಿಯಲ್ಲಿಯ ಒಟ್ಟು ವಿದ್ಯಾರ್ಥಿಗಳು $=50$ Ans.

ಪ್ರಶ್ನೆ 20. ಈ ಕೆಳಗಿನ ವ್ಯವಹಾರವನ್ನು ಕರೆಂಟ ಅಕೌಂಟ (ಚಾಲ್ತಿ ಖಾತೆ)ನ ಪಾಸ್‌ಬುಕ್ಕಿನಲ್ಲಿ ನಮೂದಿಸಿ.

| ತಾರೀಖು | ವಿವರಗಳು | ಮೊಬಲಗು (ರೂ.) |
|---|---|---|
| 4-1-84 | ಹಿಂದಿನ ಜಮೆ ಇರುವುದು | 3035.75 |
| | ಬ್ಯಾಂಕ್ ಡ್ರಾಫ್ಟಿನಿಂದ | 890.00 |
| | ಚಕ್ ನಂ. 2065 ಕ್ಕೆ | 730.00 |
| | ಶ್ರೀನಾಥನಿಗೆ ಚೆಕ್ ಮೂಲಕ | 690 00 |
| | ಚಕ್ ನಂ. 2066 ಕ್ಕೆ | 1305.00 |
| | ಠೇವಣಿಗೆ | 760.25 |

ಉತ್ತರ :

| ತಾ | ವಿವರಗಳು | ಪಡೆದಹಣ (ರೂ.) | ಪಾವತಿಮಾಡಿದ ಹಣ (ರೂ.) | ಬಾಕಿ (ರೂ.) |
|---|---|---|---|---|
| 4-1-84 | ಹಿಂದಿನ ಜಮೆ | — | — | 3,035-75 |
| | ಬ್ಯಾಂಕ ಡ್ರಾಫ್ಟಿನಿಂದ | — | 890-00 | 3,925-75 |
| | ಚಕ್ ನಂ. 2065 ಕ್ಕೆ | 730-00 | | 3,195-75 |
| | ಚಕ್ ಮೂಲಕ ಶ್ರೀನಾಥನಿಗೆ | 690-00 | — | 2,505-75 |
| | ಚಕ್ ನಂ. 2066ಕ್ಕೆ | 1,305-00 | — | 1,200-75 |
| | ಠೇವಣಿಗೆ | — | 760-25 | 1,961-00 |

ಬಾಕಿ ಹಣ = ರೂ. 1,961-00 Ans.

ಪ್ರಶ್ನೆ 21. 11.000ರೂ. ಗಳನ್ನು ಶೇ. 6 ಮುದ್ದತಿ ಠೇವಣಿಯಲ್ಲಿ ಇರಿಸಿದಾಗ ಬರುವ-ಕಾಲು ವರ್ಷದ ಬಡ್ಡಿಯನ್ನು ಕಂಡು ಹಿಡಿಯಿರಿ.

ರೀತಿ : 100 ರೂ.ಗಳ 1 ವರ್ಷದ ಬಡ್ಡಿ = 6 ರೂ.

∴ 11,000 ರೂ.ಗಳ 1 ವರ್ಷದ ಬಡ್ಡಿ

$= \frac{6 \times 11,000}{100} = 660$ ರೂ.

∴ 11,000 ರೂ.ಗಳ $\frac{1}{4}$ ವರ್ಷದ ಬಡ್ಡಿ

$= \left(660 \times \frac{1}{4}\right)$ ರೂ. $=165$ ರೂ. Ans.

ಪ್ರಶ್ನೆ 22. ಈ ಕೆಳಗಿನ ವಿವರಗಳನ್ನು ವೃತ್ತಖಂಡಾಲೇಖ (ಪೈನಕ್ಷೆ)ದಲ್ಲಿ ತೋರಿಸಿ.

| | ವಿವರ | ಖರ್ಚು ರೂ. (ಕೋಟಿಗಳಲ್ಲಿ) |
|---|---|---|
| a) | ವ್ಯವಸಾಯ | 560 |
| b) | ನೀರಾವರಿ | 450 |
| c) | ಕೈಗಾರಿಕೆ | 890 |
| d) | ವಿದ್ಯುಚ್ಛಕ್ತಿ | 440 |
| e) | ಸಾಗಾಣಿಕೆ | 1260 |
| | ಒಟ್ಟು | 3600 |




ರೀತಿ : ಒಟ್ಟು 3600 ಕೋಟಿ ರೂ. $=360^\circ$

∴ 1 ಕೋಟಿ ರೂ. $= \frac{360^\circ}{3600} = \frac{1^\circ}{10}$

∴ (a) ವ್ಯವಸಾಯ = 560 ಕೋಟಿ ರೂ.

$= 560 \times \frac{1^\circ}{10} = 56^\circ$

(b) ನೀರಾವರಿ = 450 ಕೋಟಿ ರೂ.

$= 450 \times \frac{1}{10} = 45^\circ$

(c) ಕೈಗಾರಿಕೆ = 890 ಕೋಟಿ ರೂ.

$= 890 \times \frac{1}{10} = 89^\circ$

(d) ವಿದ್ಯುಚ್ಛಕ್ತಿ = 440 ಕೋಟಿ ರೂ.

$= 440 \times \frac{1}{10} = 44^\circ$

(e) ಸಾಗಾಣಿಕೆ = 1260 ಕೋ. ರೂ.

$= 1260 \times \frac{1}{10} = 126^\circ$

ಪ್ರಶ್ನೆ 23. 5 ಜನರಿರುವ ಒಂದು ಗುಂಪಿನಿಂದ ಇಬ್ಬರನ್ನೊಳಗೊಂಡ ಸಮಿತಿಗಳನ್ನು ಎಷ್ಟು ವಿಧಗಳಲ್ಲಿ ರಚಿಸಬಹುದು ?

ರೀತಿ : 5 ಜನರ ಗುಂಪಿನಿಂದ ಇಬ್ಬರನ್ನು ಆರಿಸಬಹುದಾದ ವಿಧಗಳು

$$5C_2 = \frac{5!}{(5-2)!\,2!} = \frac{5!}{3! \times 2!}$$

$$= \frac{5 \times 4 \times 3!}{3! \times 2 \times 1} = 10$$

∴ 10 ವಿಧಗಳು Ans.

**ಪ್ರಶ್ನೆ 24.** ಒಂದು ಪಂದ್ಯಕ್ಕೆ ಎರಡು ಶಾಲೆಗಳಿಂದ ಇಬ್ಬಿಬ್ಬರು ಸ್ಪರ್ಧಿಗಳನ್ನು ಕಳುಹಿಸಲಾಗಿತ್ತು. ಗೆದ್ದವರಿಗೆ ಎರಡು ಬಹುಮಾನಗಳನ್ನು ಮಾತ್ರ ಕೊಡಲಾಯಿತು. 1 ನೇ ಮತ್ತು 2 ನೇ ಬಹುಮಾನಗಳನ್ನು ಒಂದೇ ಶಾಲೆಯು ಗೆಲ್ಲ ಬಹುದಾದ ಸಂಭವ ನೀಯತಿ ಎಷ್ಟು ?

ರೀತಿ : ಸಂಭವಿಸಬಹುದಾದ ಎಲ್ಲಾ ಘಟನೆಗಳು $= 4P_2$

ಅಥವಾ $n(S) = 4P_2 = \frac{4!}{(4-2)!}$

$= \frac{4!}{2!} \quad \frac{4 \times 3 \times 2!}{2!} = 12$ ವಿಧಗಳು.

ಮತ್ತು ಅಪೇಕ್ಷಣೀಯ ಘಟನೆಗಳು $n$ (E)

$= 2P_2 \times 2P_2$

$= \frac{2!}{(2-2!)} \times \frac{2!}{(2-2)!}$

$= \frac{2!}{0!} \times \frac{2!}{0!} = 2 \times 2 = 4$ ವಿಧಗಳು

∴ ಸಂಭವನೀಯತೆ $= \frac{n(E)}{n(S)} \frac{4}{12} = \frac{1}{3}$ Ans

**ಪ್ರಶ್ನೆ 25.** ಬೆಂಗಳೂರು ಮದರಾಸಿನ ಪಶ್ಚಿಮಕ್ಕಿದೆ ಮದರಾಸಿನಿಂದ ಬೆಂಗಳೂರಿಗೆ ಆಕಾಶದೆತ್ತರಕ್ಕೆ ಬಿರುಗಾಳಿ 100 ಕಿ, ಮೀ,/ಗಂ ಬೀಸುತ್ತಿದೆ. ಪ್ರಶಾಂತ ಗಾಳಿಯಲ್ಲಿ ಒಂದು ವಿಮಾನವು ಬೆಂಗಳೂರಿನಿಂದ ಮದರಾಸಿಗೆ 600 ಕಿ. ಮೀ./ಗಂ ಚಲಿಸುತ್ತದೆ. ವಿಮಾನದ ಫಲಿತ ವೇಗವನ್ನು ಕಂಡು ಹಿಡಿಯಿರಿ.

ರೀತಿ : ಗಾಳಿಯು ಏರೋಪ್ಲೇನಿನ ಚಲನೆಯ ವಿರುದ್ಧ ದಿಕ್ಕಿನಲ್ಲಿ ಬೀಸುತ್ತಿದೆ.

∴ ಏರೋಪ್ಲೇನಿನ ಫಲಿತವೇಗ = ಪ್ರಶಾಂತ ಗಾಳಿಯಲ್ಲಿ ಏರೋಪ್ಲೇನಿನ ವೇಗ–ಗಾಳಿಯ ವೇಗ

$= 600 - 100 = 500$ ಕಿ ಮೀ./ಗಂ. ಗೆ Ans.

**ಪ್ರಶ್ನೆ 26.** ಸೂತ್ರವನ್ನುಪಯೋಗಿಸಿ ಈ ಕೆಳಗಿನ ಸಮೀಕರಣದ ಮೂಲಗಳನ್ನು ಕಂಡು ಹಿಡಿಯಿರಿ $x^2-6x-16 = 0$

ರೀತಿ : $x^2-6x-16=0$ ಇಲ್ಲಿ $a=1$, $b=-6$, $c=-16$

∴ ಸಮೀಕರಣದ ಮೂಲಗಳು

$$x = \frac{-b \pm \sqrt{b^2-4ac}}{2a}$$

$$= \frac{(-6) \pm \sqrt{(-6)^2-4(1)(-16)}}{2(1)}$$

$$= \frac{6 \pm \sqrt{36+64}}{2} = \frac{6 \pm \sqrt{100}}{2}$$

$$= \frac{6 \pm 10}{2}$$

∴ $x = \frac{6+10}{2} = \frac{16}{2} = 8$

ಇಲ್ಲವೇ $x = \frac{6-10}{2} = \frac{-4}{2} = -2$

∴ $x = 8$ ಇಲ್ಲವೆ 2 Ans.

**ಪ್ರಶ್ನೆ 27.** ಒಂದು ಲಂಬಕೋನ ತ್ರಿಕೋನದ ಕರ್ಣ 13 ಸೆಂ. ಮೀ. ಇದೆ. ಉಳಿದೆರಡು ಬಾಹುಗಳಲ್ಲಿ ಒಂದು ಇನ್ನೊಂದಕ್ಕಿಂತ 7 ಸೆಂ. ಮೀ, ಹೆಚ್ಚಾಗಿದ್ದರೆ ಈ ಎರಡು ಬಾಹುಗಳನ್ನು ಕಂಡು ಹಿಡಿಯಿರಿ.

ರೀತಿ : ಲಂಬಕೋನವನ್ನು ಮಾಡುವ ಬಾಹುಗಳಲ್ಲಿ ಒಂದು ಬಾಹು $x$ ಸೆಂ. ಮೀ. ಎಂದು ಕಲ್ಪಿಸಿ.

∴ ಇನ್ನೊಂದು ಬಾಹು $=(x+7)$ ಸೆಂ. ಮೀ.

ಪೈಥೆಗೋರಸ್‌ನ ಪ್ರಮೇಯದ ಪ್ರಕಾರ—

$x^2 + (x+7)^2 = (13)^2$

ಅಥವಾ $x^2 + x^2 + 14x + 49 = 169$

„ $2x^2 + 14x + 49 - 169 = 0$

„ $2x^2 + 14x - 120 = 0$

„ $x^2 + 7x - 60 = 0$........

(2 ರಿಂದ ಭಾಗಿಸಲಾಗಿ)

„ $2x^2 + 12x - 5x - 60 = 0$

„ $x(x+12) - 5(x+12) = 0$

„ $(x+12)(x-5) = 0$

ಈಗ $x+12=0$ ಇದ್ದರೆ $x = -12$

ಮತ್ತು $x-5=0$ „ $x=5$

ಇಲ್ಲಿ $x = -12$, ಬಾಹುವಿನ ಅಳತೆ ಋಣಾತ್ಮಕ

∴ ಕೈಬಿಡಲಾಗಿದೆ. ∴ $x=5$,

∴ ಒಂದು ಬಾಹುವಿನ ಉದ್ದ=5 ಸೆಂ.ಮೀ. ಮತ್ತು ಇನ್ನೊಂದು ಬಾಹುವಿನ ಉದ್ದ $x+7=5+7=12$ ಸೆಂ.ಮೀ. Ans.

ಪ್ರಶ್ನೆ 28. $x^2-5x+6=0$ ಸಮೀಕರಣದ ನಕ್ಷೆಯನ್ನೆಳೆಯಿರಿ.

ರೀತಿ : 1 ನೆಯ ಕ್ರಮ :

$y=x^2-5x+6$

| $x$ | 0 | 1 | 2 | 3 | 4 | 5 |
|---|---|---|---|---|---|---|
| $y$ | 6 | 2 | 0 | 0 | 2 | 6 |

ಸ್ಕೇಲು : 1 ಸೆಂ.ಮೀ.=1 ಮಾನ ಎರಡೂ ಅಕ್ಷಗಳ ಗುಂಟ.



2 ನೆಯ ಕ್ರಮ : $x^2-5x+6=0$ ಅಥವಾ $x^2=5x-6$

∴ $y=x^2$ ಮತ್ತು $y=5x-6$ ಗಳ ನಕ್ಷೆಗಳನ್ನು ರಚಿಸಬೇಕು.

$y=x^2$

| $x$ | 1 | 2 | 3 | 0 | −1 | −2 | −3 |
|---|---|---|---|---|---|---|---|
| $y$ | 1 | 4 | 9 | 0 | 1 | 4 | 9 |

$y=5x-6$

| $x$ | 1 | 2 | 3 | 0 |
|---|---|---|---|---|
| $y$ | −1 | 4 | 8 | −6 |

ಸ್ಕೇಲು : 1 ಸೆಂ.ಮೀ.=1 ಮಾನ X—ಅಕ್ಷದ ಗುಂಟ.
5 ಸೆಂ.ಮೀ.=1 ಮಾನ Y—ಅಕ್ಷದ ಗುಂಟ.



ಪ್ರಶ್ನೆ 29. $x-\frac{1}{x}=p$ ಆದರೆ $x^2+\frac{1}{x^2}$ ಬೆಲೆಯನ್ನು $p$ ಯಲ್ಲಿ ಕಂಡುಹಿಡಿಯಿರಿ.

ರೀತಿ : $x^2+\frac{1}{x^2}=\left(x-\frac{1}{x}\right)^2+2$
$=p^2+2$ Ans.

ಪ್ರಶ್ನೆ 30. $a+b+c=2S$, ಆದರೆ $2bc+b_2+c^2-a^2=4S(S-a)$ ಎಂದು ಸಾಧಿಸಿ.

ರೀತಿ : L.H.S. $=2bc+b^2+c^2-a^2$.
$=b^2+2bc+c^2-a^2$
$=(b+c)^2-(a)^2$
$=(b+c+a)(b+c-a)$
$=(a+b+c)(a+b+c-2a)$
$=2S(2S-2a)$
$=2S\times2(S-a)=4S(S-a)$
=R.H.S.

ಪ್ರಶ್ನೆ 31. ಸುಲಭರೂಪಕ್ಕೆ ತಂದು ಉತ್ತರವನ್ನು ಘಾತಾಂಕ ರೂಪದಲ್ಲಿ ಬರೆಯಿರಿ.

$\sqrt{18}+\sqrt{8}+\sqrt{50}$

ರೀತಿ : $\sqrt{18}+\sqrt{8}+\sqrt{50}$
$=\sqrt{9}\times\sqrt{2}+\sqrt{4}\times\sqrt{2}+\sqrt{25}\times\sqrt{2}$
$=3\sqrt{2}+2\sqrt{2}+5\sqrt{2}$
$=10\sqrt{2}$ Ans. $10\sqrt{2}$ ಇದರ ಘಾತಾಂಕ ರೂಪ$=10(2)^{\frac{1}{2}}$ Ans.

ಪ್ರಶ್ನೆ 32. $x$ ಮತ್ತು $y$ ಗಳನ್ನು ಬಿಡಿಸಿ.

$$\begin{bmatrix}0 & 2\\ x & 0\end{bmatrix}+\begin{bmatrix}y & 2\\ y & 3\end{bmatrix}=\begin{bmatrix}4 & 4\\ 2 & 3\end{bmatrix}$$

ರೀತಿ : $\begin{bmatrix}0 & 2\\ x & 0\end{bmatrix}+\begin{bmatrix}y & 2\\ y & 3\end{bmatrix}=\begin{bmatrix}4 & 4\\ 2 & 3\end{bmatrix}$

ಅಥವಾ $\begin{bmatrix}0+y & 2+2\\ x+y & 0+3\end{bmatrix}=\begin{bmatrix}4 & 4\\ 2 & 3\end{bmatrix}$

,, $\begin{bmatrix}y & 4\\ x+y & 3\end{bmatrix}=\begin{bmatrix}4 & 4\\ 2 & 3\end{bmatrix}$

$\therefore$ $y=4$ ಮತ್ತು $x+y=2$.

$x+y=2$ ಅಥವಾ $x+4=2$.

,, $x=2-4=-2$.

$\therefore$ $x=-2$ ಮತ್ತು $y=4$ Ans.

ಪ್ರಶ್ನೆ 33. ಸಂಕಲನ ನಿಯತ 4 ರ ಪಟ್ಟಿ ಮಾಡಿ. ಮತ್ತು $Z_4$ ಒಂದು ಬೀಜಗಣಿತ ಸಂರಚನೆ ಎಂದು ತೋರಿಸಿ.

ರೀತಿ : $Z_4=\{0, 1, 2, 3\}$

| $Z_4 \oplus$ | 0 | 1 | 2 | 3 |
|---|---|---|---|---|
| 0 | 0 | 1 | 2 | 3 |
| 1 | 1 | 2 | 3 | 0 |
| 2 | 2 | 3 | 0 | 1 |
| 3 | 3 | 0 | 1 | 2 |

$1+3=0\in Z_4$

$2+3=1\in Z_4$

$3+3=2\in Z_4$

$\therefore$ $\forall a,b\in Z_4$ $a+b\in Z_4$

$\therefore$ ಸಂಕಲನ ನಿಯತಗಣಕ 4 ಒಂದು ಬೀಜಗಣಿತ ಸಂರಚನೆಯಾಗಿದೆ.

ಪ್ರಶ್ನೆ 34. $3+\sqrt{2}$ ಮತ್ತು $3-\sqrt{2}$ ಮೂಲಗಳನ್ನು ಹೊಂದಿರುವ ಸಮೀಕರಣವನ್ನು ರಚಿಸಿ.

ರೀತಿ : ಈಗ $m=3+\sqrt{2}$, ಮತ್ತು $n=3-\sqrt{2}$. ಇರಲಿ, ಇನ್ನು ಮೂಲಗಳ ಮೊತ್ತ $(m+n)=3+\sqrt{2}+3-\sqrt{2}=6$

ಮತ್ತು ಮೂಲಗಳ ಗುಣಲಬ್ಧ $(mn)$

$=(3+\sqrt{2})(3-\sqrt{2})$

$=(3)^2-(\sqrt{2})^2$

$=9-2=7$.

$\therefore$ ಸಮೀಕರಣ $x^2-(m+n)x+mn=0$

$\therefore$ ,, $x^2-6x+7=0$. Ans.

ಪ್ರಶ್ನೆ 35. $p-q=5$ ಮತ್ತು $pq=2$ ಆದರೆ $p^2+q^2$ ಬೆಲೆಯನ್ನು ಕಂಡು ಹಿಡಿಯಿರಿ.

ರೀತಿ : $p-q=5$ ಮತ್ತು $pq=2$.

$\therefore$ $p^2+q^2=(p-q)^2+2pq$

$=(5)^2+2(2)=25+4$

$=29$ Ans.

....●....

# ಗಣಿತ

## ಎಪ್ರೀಲ್-1984 2 ನೆಯ ಪತ್ರಿಕೆ

### ರೇಖಾಗಣಿತ

ವೇಳೆ : 2 ಗಂಟೆ) (ಅಧಿಕ ಗುಣಗಳು 35

ಪ್ರಶ್ನೆ 1. ಎಲ್ಲಾ ಬಾಹುಗಳು ಪರಸ್ಪರ ಸಮಾನವಾಗಿರುವ ಆಯತವನ್ನು ವರ್ಗ ಎನ್ನುವರು.

ಪ್ರಶ್ನೆ 2. ABCD ಸಮಾಂತರ ಚತುರ್ಭುಜದಲ್ಲಿ AB= 4.5 ಸೆಂ.ಮೀ. ಮತ್ತು $\angle A=105^\circ$ ಆದರೆ CD ಮತ್ತು $\angle C$ ಗಳ ಅಳತೆಗಳೆಷ್ಟು ?

ದತ್ತ : AB=4.5 ಸೆಂ.ಮೀ. $\angle B=105^\circ$.

ಕಂಡುಹಿಡಿಯುವುದು : CD ಮತ್ತು $\angle C$ ಗಳ ಅಳತೆ.

ರೀತಿ : ABCD ಸಮಾಂತರ ಚತುರ್ಭುಜದಲ್ಲಿ




CD=AB=4.5 ಸೆಂ.ಮೀ, (ಅಭಿಮುಖ ಬಾಹುಗಳು)

$\angle C=180^\circ-\angle B$........ (ಅಂತರ $\angle$ಗಳು)

$=180^\circ-105^\circ=75^\circ$

$\therefore$ CD=4.5 ಸೆಂ.ಮೀ. $\angle C=75^\circ$.

ಪ್ರಶ್ನೆ 3. ಆರು ಸಮ ವಿಸ್ತೀರ್ಣದ ಮುಖವನ್ನುಳ್ಳ ಘನಾಕೃತಿಯನ್ನು........ಎಂದು ಕರೆಯುತ್ತೇವೆ.

**ಉತ್ತರ :** ಆರು ಸಮ ವಿಸ್ತೀರ್ಣದ ಮುಖವನ್ನುಳ್ಳ ಘನಾಕೃತಿಯನ್ನು ಷಟ್ ಮುಖ ಘನ ಎಂದು ಕರೆಯುತ್ತೇವೆ.

**ಪ್ರಶ್ನೆ 4.** ಒಂದು ವಜ್ರಾಕೃತಿಯ ವಿಸ್ತೀರ್ಣ 60 ಚ.ಸೆಂ.ಮೀ. ಇದರ ಒಂದು ಕರ್ಣವು 15 ಸೆಂ.ಮಿ. ಇದ್ದರೆ, ಇನ್ನೊಂದು ಕರ್ಣದ ಆಳತೆ ಎಷ್ಟು ?

**ರೀತಿ :** ವಜ್ರಾಕೃತಿಯ ವಿಸ್ತೀರ್ಣ $= \frac{1}{2} d_1 d_2$,

ಇಲ್ಲಿ ವಿಸ್ತೀರ್ಣ $=60$ ಚ.ಸೆಂ.ಮೀ. ಒಂದು ಕರ್ಣ $d_1 = 15$ ಸೆಂ.ಮೀ.

$\therefore \frac{1}{2} \times 15 \times d_2 = 60$ ಅಥವಾ $15 \times d_2 = 60 \times 2$

ಅಥವಾ $d_2 = \frac{60 \times 2}{15} = 8$ ಸೆಂ.ಮೀ.

$\therefore$ ಇನ್ನೊಂದು ಕರ್ಣ $= 8$ ಸೆಂ.ಮೀ. Ans.

**ಪ್ರಶ್ನೆ 5.** ಸರಳ ಸಮಷಡ್ಭುಜಾಕೃತಿಯ ಪ್ರತಿ ಹೊರ ಕೋನದ ಆಳತೆ ಎಷ್ಟು ?

**ರೀತಿ :** ಸಮಷಡ್ಭುಜಾಕೃತಿಯ ಹೊರಕೋನ

$= \frac{360^\circ}{\text{ಬಾಹುಗಳ ಸಂಖ್ಯೆ}} = \frac{360^\circ}{6} = 60^\circ$ Ans.

**ಪ್ರಶ್ನೆ 6.** ABC $\triangle$ ದಲ್ಲಿ AB=AC. $\angle A = x^\circ$ ಮತ್ತು $\angle B$ $2x^\circ$ ಆದರೆ $\angle A$ ದ ಆಳತೆ ಎಷ್ಟು?

**ದತ್ತ :** AB=AC, $\angle A = x^\circ$, $\angle B = 2x^\circ$




**ಕಂಡುಹಿಡಿಯುವುದು :** $\angle A$

**ರೀತಿ :** ABC $\triangle$ ದಲ್ಲಿ AB=AC ........(ದತ್ತ)

$\therefore \angle B = \angle C = 2x^\circ$........ $(\angle B = 2x^\circ)$

ಇನ್ನು ABC $\triangle$ ದಲ್ಲಿ

$\angle A + \angle B + \angle C = 180^\circ$

ಅಥವಾ $x^\circ + 2x^\circ = 2x^\circ = 180^\circ$

,, $5x^\circ = 180^\circ$ ಅಥವಾ $x^\circ = \frac{180^\circ}{5}$

$= 36^\circ$

$\therefore \angle A = x^\circ = 36^\circ$ Ans.

**ಪ್ರಶ್ನೆ 7.** O ಕೇಂದ್ರವುಳ್ಳ ವೃತ್ತದಲ್ಲಿ ಜ್ಯಾ AB = ಜ್ಯಾ CD, ಲಂಬ OL = 15 ಸೆಂ. ಮೀ. ಆದರೆ OM ಲಂಬದ ಆಳತೆ ಎಷ್ಟು ?

**ದತ್ತ :** ಜ್ಯಾ AB = ಜ್ಯಾ CD ಲಂಬ OL=1.5 ಸೆಂ. ಮೀ.




**ಕಂಡುಹಿಡಿಯುವುದು :** ಲಂಬ OM

**ರೀತಿ :** O ಕೇಂದ್ರದ ವೃತ್ತದಲ್ಲಿ ಜ್ಯಾ AB = ಜ್ಯಾ CD ....(ದತ್ತ)

$\therefore$ ಲಂಬ OL = ಲಂಬ OM = 1.5 ಸೆಂ. ಮೀ.

$\because$ ವೃತ್ತದಲ್ಲಿ ಸಮಾನ ಜ್ಯಾಗಳು ಕೇಂದ್ರದಿಂದ ಸಮಾನ ದೂರದಲ್ಲಿರುತ್ತವೆ.

**ಪ್ರಶ್ನೆ 8.** ಆಯತ ಘನಾಕೃತಿಯಲ್ಲಿರುವ ಸಮಾನಾಂತರ ಸಮತಲಗಳು ಎಷ್ಟು ಜೊತೆ ಇವೆ ?

**ಉತ್ತರ :** ಮೂರು ಜೊತೆ Ans.

**ಪ್ರಶ್ನೆ 9.** ಒಂದು ಕ್ಷಿತಿಜ ಸಮತಲ ಮತ್ತು ಒಂದು ಓರೆ ಸಮತಲಗಳ ಛೇದನವು............ಆಗಿರುವುದು.

**ಉತ್ತರ :** ಒಂದು ಕ್ಷಿತಿಜ ಸಮತಲ ಮತ್ತು ಒಂದು ಓರೆ ಸಮತಲಗಳ ಛೇದನವು ಕ್ಷಿತಿಜ ರೇಖೆ ಆಗಿರುವುದು.

**ಪ್ರಶ್ನೆ 10.** ಲಂಬಕೋನ ತ್ರಿಭುಜದಲ್ಲಿ, ಲಂಬಕೇಂದ್ರವು........ ಬಿಂದುವಿನಲ್ಲಿರುತ್ತದೆ.

**ಉತ್ತರ :** ಲಂಬಕೋನದ ಶೃಂಗ ಬಿಂದುವಿನಲ್ಲಿರುತ್ತದೆ.

**ಪ್ರಶ್ನೆ 11.** ಏಕಪಾದದ ಮೇಲೆ ಮತ್ತು ಒಂದೇ ಜೊತೆ ಸಮಾಂತರ ಸರಳರೇಖೆಗಳ ನಡುವೆ ನಿಂತಿರುವ ಎರಡು ಸಮಾಂತರ ಚತುರ್ಭುಜಗಳು ಕ್ಷೇತ್ರದಲ್ಲಿ ಸಮನಾಗಿರುತ್ತವೆ ಎಂದು ಸಾಧಿಸಿ.




**ದತ್ತ :** ABCD, ABEF ಸಮಾಂತರ ಚತುರ್ಭುಜಗಳು AB ಏಕಪಾದದ ಮೇಲೆ AB ಹಾಗೂ DE ಒಂದೇ ಜೊತೆ ಸಮಾಂತರ ಸರಳರೇಖೆಗಳ ನಡುವೆ ಇವೆ.

**ಸಾಧನೀಯ :** //ಚ. ಭು ABCD = //ಚ.ಭು.ABEF ............(ಕ್ಷೇತ್ರದಲ್ಲಿ)

**ಸಾಧನೆ :** ADF ಹಾಗೂ BCE $\triangle$ ಗಳಲ್ಲಿ

$\angle D = \angle BCE$.......(ಅನುರೂಪ $\angle$ ಗಳು)

$\angle AFD = \angle E$.......( ,, ,, )

ಮತ್ತು AD = BC........(//ಚ.ಭು. ದ ಅಭಿಮುಖ ಬಾಹುಗಳು)

∴ △ADF ≅ △BCE

∴ △ADF = △BCE........(ಕ್ಷೇತ್ರಫಲದಲ್ಲಿ)

ಇನ್ನು ಆಕೃತಿ ABED ದೊಳಗಿಂದ ಕ್ರಮವಾಗಿ △BCE ಹಾಗು △ADFಗಳನ್ನು ಕಳೆಯಲಾಗಿ. ಆಕೃತಿ ABED—△BCE=ಆಕೃತಿ ABED —△ADF ಅಥವಾ// ಚ.ಭು. ABCD=// ಚ. ಭು ABEF........(ಕ್ಷೇತ್ರದಲ್ಲಿ).

**ಪ್ರಶ್ನೆ 12.** 4 ಮೀಟರ್ ಮತ್ತು 8 ಮೀಟರ್ ಎತ್ತರವುಳ್ಳ ಎರಡು ಕಂಬಗಳು ಪರಸ್ಪರ 3 ಮೀಟರ್ ದೂರದಲ್ಲಿವೆ. ಅವುಗಳ ತುದಿಗಳಿಗಿರುವ ನೇರ ದೂರವನ್ನು ಲೆಕ್ಕಾಚಾರದಿಂದ ಕಂಡುಹಿಡಿಯಿರಿ.

ದತ್ತ : AB=4 ಮೀ. CD=8 ಮೀ. ಕಂಬಗಳು.
BC=3 ಮೀ. ದೂರ

ಕಂಡುಹಿಡಿಯುವುದು :
ತುದಿಗಳ ನಡುವಿನ ದೂರ AD




ರಚನೆ : AE⊥CD ಎಳೆಯಿರಿ.
AD ಸೇರಿಸಿ.

ರೀತಿ : ABCE ಆಯತದಲ್ಲಿ
AB=CE=4 ಮೀ.
BC=AE=3 ಮೀ.
ಇನ್ನು DE=CD—CE
8—4=4 ಮೀ.
ಇನ್ನುAED△ದಲ್ಲಿ ∠AED=90°....(ರಚನೆ)

∴ $AD^2 = AE^2 + DE^2$

$= (3)^2 + (4)^2 = 9 + 16 = 25$

∴ $AD = \sqrt{25} = 5$ ಮೀ.

∴ ಕಂಬಗಳ ತುದಿಗಳ ನಡುವಿನ ನೇರದೂರ
=5 ಮೀ. Ans.

**ಪ್ರಶ್ನೆ 13.** ABCD ಸಮಾಂತರ ಚತುರ್ಭುಜದಲ್ಲಿ AC, BD ಕರ್ಣಗಳು ಪರಸ್ಪರ O ಬಿಂದುವಿನಲ್ಲಿ ಅರ್ಧಿಸುತ್ತವೆ. AB=8 ಸೆಂ.ಮೀ. BC=6 ಸೆಂ.ಮೀ. ಕರ್ಣ AC=10 ಸೆಂ. ಮೀ. ಇದ್ದರೆ BD ಯ ಅಳತೆಯನ್ನು ಅಪಲೋನಿಯಸ್ ಪ್ರಮೇಯದಿಂದ ಕಂಡುಹಿಡಿಯಿರಿ.

ದತ್ತ : AB=8 ಸೆಂ.ಮೀ.
BC=6 ಸೆಂ.ಮೀ.
AC=10 ಸೆಂ.ಮೀ.

ಕಂಡುಹಿಡಿಯುವುದು : BD ಕರ್ಣದ ಉದ್ದ.




ರೀತಿ : ABCD ಸ. ಚತುರ್ಭುಜವದೆ.

∴ AC,BD ಕರ್ಣಗಳು ಪರಸ್ಪರ ಅರ್ಧಿಸುತ್ತವೆ.

∴ $AO = CO = \frac{1}{2} AC = \frac{1}{2} \times 10 = 5$ ಸೆಂ.ಮೀ.
BO=DO
BC=AD=6 ಸೆಂ.ಮೀ.

ಇನ್ನು ABD △ದಲ್ಲಿ AO ಮಧ್ಯರೇಖೆಯಿದೆ.

∴ $AB^2 + AD^2 = 2AO^2 + 2BO^2$

ಅಥವಾ $2BO^2 = AB^2 + AD^2 - 2AO^2$
$= (8) + (6)^2 - 2(5)^2$
$= 64 + 36 - 2(25)$
$= 100 - 50 = 50$

ಅಥವಾ $BO^2 = \frac{50}{2} = 25$

,, $BO = \sqrt{25} = 5$

ಆದರೆ BD=2BO=2×5=10 ಸೆಂ.ಮೀ.

∴ BD=10 ಸೆಂ.ಮೀ.

**ಪ್ರಶ್ನೆ 14.** BC=6 ಸೆಂ.ಮೀ. ∠B=∠C 60° ಇರುವಂತೆ ABC △ ರಚಿಸಿ ಮೂರು ಮಧ್ಯರೇಖೆಗಳನ್ನು ಎಳೆಯಿರಿ. ಗುರುತ್ವ ಕೇಂದ್ರ ಬಿಂದುವನ್ನು ಗುರುತಿಸಿ.

ರೀತಿ : BC=6 ಸೆಂ. ಮೀ. ಎಳೆಯಿರಿ. B ಮತ್ತು C ಗಳಲ್ಲಿ 60° ಕೋನಗಳನ್ನು ಮಾಡಿ ಎರಡು ರೇಖೆಗಳನ್ನು ಎಳೆಯಿರಿ. ಈ ರೇಖೆಗಳು A ದಲ್ಲಿ ಛೇದಿಸಲಿ BC, AC,



AB ಗಳ ಮಧ್ಯ ಬಿಂದುಗಳು ಕ್ರಮವಾಗಿ D,E,F ಗಳನ್ನು ಗುರುತಿಸಿ. AD, BE ಮತ್ತು CF ಸೇರಿಸಿ ಇವು ಮಧ್ಯರೇಖೆಗಳಿರುತ್ತವೆ. ಈ ಮಧ್ಯರೇಖೆಗಳು Gದಲ್ಲಿ ಛೇದಿಸಲಿ.

ಈಗ G ಬಿಂದುವು ABC $\triangle$ ದ ಗುರುತ್ವ ಕೇಂದ್ರವಿರುತ್ತದೆ.

ಸೂಚನೆ : ರೀತಿಯಲ್ಲಿ ಸೂಚಿಸಿದಂತೆ ಚಿತ್ರ ರಚಿಸಿ (G ಗುರುತಿಸಿದರೆ ಸಾಕು ವಿವರ ಬರೆಯುವ ಅವಶ್ಯಕತೆ ಇಲ್ಲ).

ಪ್ರಶ್ನೆ 15. O ಬಿಂದುವು ABC $\triangle$ ದ ಪರಿಕೇಂದ್ರ, AC ಯನ್ನು D ವರೆಗೆ ವೃದ್ಧಿಸಿದೆ. $\angle BOC$ 130°, $\angle BCD = 110°$ ಆದರೆ ABC $\triangle$ ದ ಕೋನಗಳನ್ನು ಕಂಡುಹಿಡಿಯಿರಿ.



ದತ್ತ : O ಪರಿಕೇಂದ್ರ, $\angle BOC = 130°$, $\angle BCD = 110°$.

ಕಂಡುಹಿಡಿಯುವದು : ABC $\triangle$ ದ ಕೋನಗಳು

ರೀತಿ : $\angle ACB + \angle BCD = 180°$ ........(ACD) ಸ. ರೇಖೆ) ಅಥವಾ $\angle ACD = 180° - \angle BCD = 180° - 110° = 70°$

ಇನ್ನು $\angle BAC = \frac{1}{2} \angle BOC$........(ಕೇಂದ್ರ $\angle$ ಸಂಧಿ $\angle$) $= \frac{1}{2} \times 130° = 65°$.

ಇನ್ನು ABC $\triangle$ ದಲ್ಲಿ $\angle ABC + \angle BAC + \angle ACB = 180°$ ಆದರೆ $\angle BAC = 65°$, $\angle ACB = 70°$ ........(ಸಾಧಿಸಿದೆ.)

$\therefore \quad \angle ABC = 180° - \angle BAC - \angle ACB = 180° - 65° - 70° = 45°$.

$\therefore$ ABC $\triangle$ ದ $\angle$ ಗಳು $\angle A = 65°$, $\angle B = 45°$, $\angle C = 70°$ Ans.

ಪ್ರಶ್ನೆ 16. ವೃತ್ತಕ್ಕೆ ಬಾಹ್ಯಬಿಂದುವಿನಿಂದ ಎಳೆದ ಸ್ಪರ್ಶಕಗಳು ಸಮವಾಗಿರುತ್ತವೆ ಎಂದು ಸಾಧಿಸಿ.




ದತ್ತ : O ಕೇಂದ್ರದ ವೃತ್ತಕ್ಕೆ A ಬಾಹ್ಯ ಬಿಂದುವಿನಿಂದ AB, AC ಗಳು ಸ್ಪರ್ಶಕಗಳಿರುತ್ತವೆ. OA, OB, OC ಸೇರಿಸಿದೆ.

ಸಾಧನೀಯ : a) AB = AC.
b) $\angle OAB = \angle OAC$.
c) $\angle AOB = \angle AOC$.

ಸಾಧನೆ : AB, AC ಗಳು ಸ್ಪರ್ಶಕಗಳಿದ್ದು OB, OC ಗಳು ಸ್ಪರ್ಶಬಿಂದುಗಳಲ್ಲಿಯ ತ್ರಿಜ್ಯಗಳಿವೆ.

$\therefore \quad \angle ABO = \angle ACO = 90°$.

ಇನ್ನು AOB, AOC ಲಂಬಕೋನ $\triangle$ ಗಳಲ್ಲಿ ವಿಕರ್ಣ AO ಉಭಯ ಸಾಮಾನ್ಯವಿದೆ.

BO = CO........(ಒಂದೇ ವೃತ್ತದ ತ್ರಿಜ್ಯಗಳು)

$\therefore \quad \triangle AOB \cong \triangle AOC$.

$\therefore$ a) AB = AC.
b) $\angle OAB = \angle OAC$.
c) $\angle AOB = \angle AOC$.

ಪ್ರಶ್ನೆ 17. A.B.C. ಕೇಂದ್ರಗಳನ್ನುಳ್ಳ ಮೂರು ವೃತ್ತಗಳು ಪರಸ್ಪರ ಬಾಹ್ಯವಾಗಿ ಸ್ಪರ್ಶಿಸುತ್ತವೆ. ಆ ವೃತ್ತಗಳ ತ್ರಿಜ್ಯಗಳು 2 ಸೆಂ. ಮೀ. 3 ಸೆಂ. ಮೀ. ಮತ್ತು 4 ಸೆಂ. ಮೀ ಆದರೆ ABC $\triangle$ ದ ಸುತ್ತಳತೆ ಎಷ್ಟು ?




ದತ್ತ : ವೃತ್ತಗಳ ತ್ರಿಜ್ಯಗಳು AP = 4 ಸೆಂ.ಮೀ. BQ = 2 ಸೆಂ. ಮೀ. CR = 3 ಸೆಂ. ಮೀ.

ಕಂಡುಹಿಡಿಯುವದು : $\triangle$ABC ಯ ಸುತ್ತಳತೆ

ರೀತಿ : ವೃತ್ತಗಳು ಪರಸ್ಪರ ಬಾಹ್ಯವಾಗಿ ಸ್ಪರ್ಶಿಸುತ್ತವೆ.

$\therefore$ AB = AP + BP = 4 + 2 = 6 ಸೆಂ.ಮೀ.
BC = BQ + CQ = 2 + 3 = 5 ಸೆಂ.ಮೀ.
AC = AR + CR = 4 + 3 = 7 ಸೆಂ.ಮೀ

$\therefore$ ABC $\triangle$ ದ ಸುತ್ತಳತೆ = AB + BC + AC = (6 + 5 + 7) ಸೆಂ.ಮೀ. = 18 ಸೆಂ. ಮೀ.

ಪ್ರಶ್ನೆ 18. 4.5 ಸೆಂ.ಮೀ. ಮತ್ತು 3 ಸೆಂ.ಮೀ. ತ್ರಿಜ್ಯವನ್ನುಳ್ಳ ಎರಡು ವೃತ್ತಗಳ ಕೇಂದ್ರಗಳು ಪರಸ್ಪರ

11 ಸೆಂ.ಮೀ. ದೂರದಲ್ಲಿವೆ. ಆ ವೃತ್ತಗಳಿಗೆ ನೇರ ಸಾಮಾನ್ಯ ಸ್ಪರ್ಶಕಗಳನ್ನೆಳೆಯಿರಿ.




**ರಚನಾಕ್ರಮ :** PQ = 11 ಸೆಂ.ಮೀ. ಸರಳರೇಖೆ ಎಳೆಯಿರಿ. P ಕೇಂದ್ರವೆಂದು 4.5 ಸೆಂ.ಮೀ.Q ಕೇಂದ್ರವೆಂದು 3 ಸೆಂ.ಮೀ. ತ್ರಿಜ್ಯದಿಂದ ವೃತ್ತಗಳನ್ನೆಳೆಯಿರಿ. P ಕೇಂದ್ರವೆಂದು ತ್ರಿಜ್ಯ = (4.5 − 3) = 1.5 ಸೆಂ. ಮೀ. ತ್ರಿಜ್ಯದಿಂದ ಮತ್ತೊಂದು ವೃತ್ತವನ್ನು ಎಳೆಯಿರಿ. PQ ದ ಮಧ್ಯಬಿಂದು M ಕೇಂದ್ರವೆಂದು PM ತ್ರಿಜ್ಯದಿಂದ ಇನ್ನೊಂದು ವೃತ್ತವನ್ನು ಎಳೆಯಿರಿ. ಈ ವೃತ್ತವು P ಕೇಂದ್ರದ ಚಿಕ್ಕ ವೃತ್ತವನ್ನು A ಮತ್ತು B ಗಳಲ್ಲಿ ಛೇದಿಸಲಿ. AQ, BQ ಸೇರಿಸಿರಿ ಮತ್ತು PA, PB ಸೇರಿಸಿ ವೃದ್ಧಿಸಿರಿ. ಅವು ದೊಡ್ಡ ವೃತ್ತವನ್ನು ಕ್ರಮವಾಗಿ C,D ಗಳಲ್ಲಿ ಛೇದಿಸಲಿ. PAC// QE, PBD//QF ಎಳೆಯಿರಿ. CE, DF ಸೇರಿಸಿ. ಈಗ CE ಮತ್ತು DF ಗಳು ಕೊಟ್ಟ ವೃತ್ತಗಳಿಗೆ ನೇರ ಸಾಮಾನ್ಯ ಸ್ಪರ್ಶಕಗಳಿರುತ್ತವೆ.

**ಸೂಚನೆ :** ರಚನಾಕ್ರಮದಲ್ಲಿ ತಿಳಿಸಿದಂತೆ ರಚನೆ ಮಾಡಿ. ರಚನಾಕ್ರಮ ಬರೆಯುವ ಅವಶ್ಯಕತೆ ಇಲ್ಲ.

**ಪ್ರಶ್ನೆ 19.** ಕೊಟ್ಟಿರುವ ಚಿತ್ರದಿಂದ ಯೂಲರನ ಸೂತ್ರ N+R=A+2 ನ್ನು ತಾಳೆ ನೋಡಿ.



**ರೀತಿ :** ಚಿತ್ರದಲ್ಲಿ N = ಸಂಪಾತ ಬಿಂದುಗಳು = 6

R = ವಲಯಗಳು ........ = 5

A = ಕಂಸಗಳು ............ = 9

∴ ಯೂಲರನ ಸೂತ್ರ N + R = 6 + 5 = 11,

A + 2 = 9 + 2 = 11

∴ N + R = A + 2.

**ಪ್ರಶ್ನೆ 20.** ಕೊಟ್ಟಿರುವ ಜಾಲಕೃತಿಯ ಸಂಖ್ಯಾಯತವನ್ನು ತಯಾರಿಸಿ.

**ರೀತಿ :**

| | A | B | C | D |
|---|---|---|---|---|
| A | 0 | 1 | 2 | 1 |
| B | 1 | 0 | 1 | 0 |
| C | 2 | 1 | 0 | 1 |
| D | 1 | 0 | 1 | 0 |

$$\begin{Vmatrix} 0 & 1 & 2 & 1 \\ 1 & 0 & 1 & 0 \\ 2 & 1 & 0 & 1 \\ 1 & 0 & 1 & 0 \end{Vmatrix}$$ ಸಂಖ್ಯಾಯತ




.... ● ....

# ಗಣಿತ

## ಅಕ್ಟೋಬರ – 1984 1 ನೆಯ ಪತ್ರಿಕೆ

## (ಅಂಕಗಣಿತ – ಬೀಜಗಣಿತ)

ವೇಳೆ : $2\frac{1}{2}$ ಗಂಟೆ) (ಅಧಿಕ ಗುಣಗಳು : 65

**ಪ್ರಶ್ನೆ 1.** ಯಾವ ಕನಿಷ್ಠ ಸಂಖ್ಯೆಯನ್ನು 221ಕ್ಕೆ ಸೇರಿಸಿದರೆ ಬರುವ ಮೊತ್ತವು ಪೂರ್ಣ ವರ್ಗವಾಗುತ್ತದೆ ?

**ರೀತಿ :** $(15)^2 = 225$

∴ 221 + 4 = 225

∴ 221 ಕ್ಕೆ 4 ಸೇರಿಸಿದರೆ ಅದು ಪೂರ್ಣ ವರ್ಗವಾಗುವುದು.

**ಪ್ರಶ್ನೆ 2.** $y = 4Z$ ಆದರೆ Y : Z ನ ಬೆಲೆಯೇನು ?

ರೀತಿ : $Y=4Z$ ಅಥವಾ $\frac{Y}{Z}=\frac{4}{1}$ ಅಥವಾ

$Y:Z=4:1$ Ans.

ಪ್ರಶ್ನೆ 3. $A=\{1,2,3,4\}$ ಮತ್ತು $B=\{3,4,5\}$ ಆದರೆ $A\cap B$ ಕಂಡುಹಿಡಿಯಿರಿ.

ರೀತಿ : $A=\{1,2,3,4\}$ ಮತ್ತು $B=\{3,4,5\}$

$\therefore\ A\cap B=\{3,4\}$ Ans.

ಪ್ರಶ್ನೆ 4. ಈ ಹೇಳಿಕೆಯನ್ನು ಸಮೀಕರಣದ ರೂಪದಲ್ಲಿ ಬರೆಯಿರಿ: ವಸ್ತುವಿನ ಗಾತ್ರ (V)ವು ಮಾರ್ಪಟ್ಟಂತೆ, ಅದರ ಸಾಂದ್ರತೆ (D) ಯು ವಿಲೋಮವಾಗಿ ಮಾರ್ಪಡುವುದು.

ರೀತಿ : $V\propto\frac{1}{D}$ ಅಥವಾ $V=K\cdot\frac{1}{D}$ ಅಥವಾ

$VD=K$. Ans.

K — ಮಾರ್ಪಿನ ಸ್ಥಿರಾಂಕ.

ಪ್ರಶ್ನೆ 5. ಅಪವರ್ತಿಸಿ : $x^2+ax+bx+ab$

ರೀತಿ : $x^2+ax+bx+ab$

$=x(x+a)+b(x+a)$

$=(x+a)(x+b)$ Ans.

ಪ್ರಶ್ನೆ 6. $\frac{5}{6}$, $\frac{7}{10}$, $\frac{8}{15}$ ಈ ಭಿನ್ನರಾಶಿಗಳನ್ನು ಆರೋಹಣ ಕ್ರಮದಲ್ಲಿ ಬರೆಯಿರಿ.

ರೀತಿ : $\frac{5}{6}$, $\frac{7}{10}$, $\frac{8}{15}$ ಭಿನ್ನರಾಶಿಗಳನ್ನು ಸಮಛೇದ ರಾಶಿಗಳನ್ನು ಮಾಡಲಾಗಿ. $\frac{5}{6}\times\frac{5}{5}=\frac{25}{30}$, $\frac{7}{10}\times\frac{3}{3}=\frac{21}{30}$, $\frac{8}{15}\times\frac{2}{2}=\frac{16}{30}$.

$\therefore$ ಭಿನ್ನರಾಶಿಗಳು ಆರೋಹಣ ಕ್ರಮದಲ್ಲಿ :

$\frac{8}{15}$, $\frac{5}{6}$, $\frac{7}{10}$ Ans.

ಪ್ರಶ್ನೆ 7. ...., 15, ...., 19, 21, 23 ಸಂಖ್ಯಾ ಶ್ರೇಣಿಯಲ್ಲಿ ಬಿಟ್ಟಿರುವ ಸಂಖ್ಯೆಗಳನ್ನು ಬರೆಯಿರಿ.

ರೀತಿ : ಸಾಮಾನ್ಯ ವ್ಯತ್ಯಾಸ+2 ಇದೆ.

$\therefore$ ಸಂಖ್ಯಾ ಶ್ರೇಣಿ=13,15,17,19,21, 23 Ans.

ಪ್ರಶ್ನೆ 8. ಸಂಕ್ಷೇಪಿಸಿ : $\frac{3x-3}{x^2-1}$.

ರೀತಿ : $\frac{3x-3}{x^2-1}=\frac{3(x-1)}{(x-1)(x+1)}=\frac{3}{x+1}$ Ans.

ಪ್ರಶ್ನೆ 9. $(x+2)(x+3)(x-5)$ ಎಂಬ ಗುಣಲಬ್ಧದಲ್ಲಿ $x$ನ ಸಹ ಗುಣಕವನ್ನು ಬರೆಯಿರಿ.

ರೀತಿ : $(x+2)(x+3)(x-5)$

$x$ನ ಸಹಗುಣಕ$=\{(2)(3)+(3)(-5)+(-5)(2)\}$

$=(6-15-10)=-19$ Ans.

ಪ್ರಶ್ನೆ 10. $2^8=256$, ಲಘುಗಣಕದಲ್ಲಿ ಬರೆಯಿರಿ.

ರೀತಿ : $2^8=256$ ಲಘುಗಣಕ ರೂಪದಲ್ಲಿ $\log_2 256=8$. Ans.

ಪ್ರಶ್ನೆ 11. ಈ ಸಂಖ್ಯಾಯತದ ಹೆಸರು ಮತ್ತು ಶ್ರೇಣಿಯನ್ನು ತಿಳಿಸಿ. $\begin{bmatrix} p & q \\ q & r \end{bmatrix}$

ರೀತಿ : $\begin{bmatrix} p & q \\ q & r \end{bmatrix}$ ಇದು ವರ್ಗ ಸಂಖ್ಯಾಯತ ಶ್ರೇಣಿ $2\times2$

ಪ್ರಶ್ನೆ 12. $9x^2y^2z^3$ ಮತ್ತು $15x^3y^3z^4$ರ ಮ.ಸಾ.ಅ. ಏನು ?

ರೀತಿ : $9x^2y\ z^3$ ಮತ್ತು $15x^3y^3z^4$ ಗಳ ಮ.ಸಾ.ಅ.$=3x^2y\ z^3$ Ans.

ಪ್ರಶ್ನೆ 13. $5x^2y^2$ ಮತ್ತು $10y^2z^2$ರ ಲ.ಸಾ.ಅ. ಏನು?

ರೀತಿ : $5x^2y^2$ ಮತ್ತು $10y^2z^2$ ಗಳ ಲ.ಸಾ.ಅ.

$=10x^2y^2z^2$ Ans.

ಪ್ರಶ್ನೆ 14. 492 ರೂ.ಗಳನ್ನು ಹರಿ ಮತ್ತು ರಾಮನಿಗೆ 7:5 ಪ್ರಮಾಣದಲ್ಲಿ ಹಂಚಿ.

ರೀತಿ :

ಪ್ರಮಾಣದ ಅಂಶಗಳ ಮೊತ್ತ$=7+5=12$

$\therefore$ ಹರಿಯ ಪಾಲು$=\frac{492\times7}{12}=287$ ರೂ.

ಮತ್ತು ರಾಮನ ಪಾಲು$=\frac{492\times5}{12}=205$ ರೂ. } Ans.

ಪ್ರಶ್ನೆ 15. $f(x)=x^2-2x+3$ ಆದರೆ $f(1)$ ನ ಬೆಲೆಯೇನು ?

ರೀತಿ : $f(x)=x^2-2x+3$

$\therefore\ f(1)=(1)^2-2(1)+3=1$

$-2+3=2$ Ans.

ಪ್ರಶ್ನೆ 16. $B=\frac{a^2\sqrt{3}}{4}$ ಆದರೆ $a$ ಯ ಬೆಲೆಯೇನು ?

ರೀತಿ : $B=\frac{a^2\sqrt{3}}{4}$ ಅಥವಾ $4B=a^2\sqrt{3}$ ಅಥವಾ

$a^2\sqrt{3}=4B$

ಅಥವಾ $a^2=\frac{4B}{\sqrt{3}}$ $\therefore\ a=\pm\sqrt{\frac{4B}{\sqrt{3}}}$

$=\pm2\sqrt{\frac{B}{\sqrt{3}}}$ Ans.

**ಪ್ರಶ್ನೆ 17.** $(5^x)^2=625$ ಆದರೆ $x$ ನ ಬೆಲೆಯೇನು ?

**ರೀತಿ :** $(5^x)^2=625$, ಅಥವಾ $5^{2x}=5^4$

ಅಥವಾ $2x=4$ or $x=2$ Ans.

**ಪ್ರಶ್ನೆ 18.** 2 ರಿಂದ 42 ರ ವರೆಗಿನ ಸ್ವಾಭಾವಿಕ ಸರಿಸಂಖ್ಯೆಗಳ ಮೊತ್ತವನ್ನು ಕಂಡು ಹಿಡಿಯಿರಿ.

**ರೀತಿ :** ಮೊತ್ತ $S=2+4+6+8+\dots\dots+42$

$=2(1+2+3+4+\dots\dots21)$

$$2S_{21}=2\left\{\frac{21(21+1)}{2}\right\}=2\left(\frac{21\times22}{2}\right)$$

$=21\times22=462$ Ans.

**ಪ್ರಶ್ನೆ 19.** ಗಣ $K=\{4,6,8,10,12\}$, ಗಣ $L=\{8,10,1_,14,16\}$ ಮತ್ತು ಗಣ $M=\{12,14,16,18,20\}$ ಆದರೆ $K\cap(L\cup M)$ ನ ಬೆಲೆ ಏನು ?

**ರೀತಿ :** $K=\{4,6,8,10,12\}$, $L=\{8,10,12,14,16,\}$ $M=\{12,14,16,18,20\}$

ಈಗ $L\cup M=\{8,10,12,14,16\}\cup\{12,14,16,18,20\}=\{8,10,12,14,16,18,20\}$

$\therefore$ $K\cap(L\cup M)=\{4,6,8,10,12\}\cap\{8,10,12,14,16,18,20\}$

$=\{8,10,12\}$ *Ans.*

**ಪ್ರಶ್ನೆ 20.** 4000 ರೂ. ಮೊಬಲಗನ್ನು 9% ರಂತೆ ಮುದ್ದತಿ ಠೇವಣಿಯಲ್ಲಿ ಇರಿಸಿದಾಗ ಬರುವ ಕಾಲು ವರ್ಷದ ಬಡ್ಡಿಯನ್ನು ಕಂಡು ಹಿಡಿಯಿರಿ.

**ರೀತಿ :** 100 ರೂ. ಗಳ 1 ವರ್ಷದ ಬಡ್ಡಿ =9 ರೂ.

$\therefore$ 4000 ರೂ.ಗಳ ,, ,, $\frac{9\times4000}{100}=360$ ರೂ.

$\therefore$ 4000 ರೂ.ಗಳ $\frac{1}{4}$ ವರ್ಷದ ಬಡ್ಡಿ $\frac{360}{4}=90$ ರೂ.

$\therefore$ ಕಾಲುವರ್ಷದ ಬಡ್ಡಿ = 90 ರೂ. Ans.

**ಪ್ರಶ್ನೆ 21.** $a+5>13$ ಆದರೆ $a>8$ ಎಂದು ತೋರಿಸಿರಿ.

**ರೀತಿ :** $a+5>13$ ಎರಡೂ ಬದಿಗಳಿಗೆ $-5$ ಕೂಡಿಸಲಾಗಿ.

$a+5-5>13-5$ ಅಥವಾ $a>8$ Ans.

**ಪ್ರಶ್ನೆ 22.** ಕುಮಾರನು ಪ್ರತಿ ತಿಂಗಳು 150 ರೂ. ಗಳನ್ನು ತನ್ನ ರಿಕರಿಂಗ ಡಿಪಾಜಿಟ್ ಖಾತೆಗೆ ಠೇವಣಿ ಮಾಡುವನು. 5 ವರ್ಷಗಳ ನಂತರ ಅವನು 13,500 ರೂ. ಗಳನ್ನು ಪಡೆದರೆ, ಅವನಿಗೆ ಬರುವ ಬಡ್ಡಿ ಎಷ್ಟು?

**ರೀತಿ :** ಒಂದು ತಿಂಗಳ ಠೇವಣಿ =150 ರೂ.

$\therefore$ 5 ವರ್ಷಗಳ ಒಟ್ಟು ಠೇವಣಿ=$(150\times5\times12)$ ರೂ.=9000 ರೂ.

$\therefore$ ಕುಮಾರನಿಗೆ ದೊರೆತ ಬಡ್ಡಿ = (13,500−9000) ರೂ. = 4,500 ರೂ. Ans.

**ಪ್ರಶ್ನೆ 23.** ಈ ಕೆಳಗಿನ ಉಳಿತಾಯ ಖಾತೆಗೆ 30/6 ರಲ್ಲಿ ಇದ್ದಂತೆ, ಬಡ್ಡಿಯನ್ನು ಶೆ. 5 ರಂತೆ ಕಂಡುಹಿಡಿಯಿರಿ.

| ತಾರೀಖು | ವಿವರ | ಮೊಬಲಗು. (ರೂ.ಗಳಲ್ಲಿ) | ಬಾಕಿ (ರೂ ಗಳಲ್ಲಿ) |
|---|---|---|---|
| 1-1 | ಹಿಂದಿನ ಬಾಕಿ | | 350-00 |
| 3-1 | ಠೇವಣಿ | 60-50 | |
| 10-2 | ತೆಗೆದುಕೊಂಡಿರುವುದು | 20.75 | |
| 5-4 | ಠೇವಣಿ | 25-30 | |
| 5-4 | ತೆಗೆದುಕೊಂಡಿರುವುದು | 30-00 | |
| 5-5 | ಠೇವಣಿ | 02-50 | |
| 7-6 | ಠೇವಣಿ | 15-00 | |
| 2-7 | ಠೇವಣಿ | 10-00 | |

**ರೀತಿ :**

| ತಿಂಗಳು | ಬಡ್ಡಿಗೆ ಪಾತ್ರವಾದ ಹಣ ರೂ. ಗಳಲ್ಲಿ |
|---|---|
| ಜನೇವರಿ | 410-00 |
| ಫೈಬ್ರುವರಿ | 389-00 |
| ಮಾರ್ಚ | 389-00 |
| ಎಪ್ರಿಲ್ | 385-00 |
| ಮೇ. | 387-00 |
| ಜೂನ. | 402-00 |
| | 2362-00 |

ಇನ್ನು 100 ರೂ ಗಳ 1 ವರ್ಷದ ಬಡ್ಡಿ =5 ರೂ.

$\therefore$ 2362 ರೂ. ಗಳ 1 ವರ್ಷದ ಬಡ್ಡಿ

$=\frac{5\times2362}{100}$ ರೂ.

$\therefore$ 2362 ರೂ. ಗಳ 1 ತಿಂಗಳ ಬಡ್ಡಿ

$=\frac{5\times2362}{100\times12}=\frac{1181}{120}$

$\therefore$ $=9.84$ ರೂ.

**ಪ್ರಶ್ನೆ 24.** ಒಂದು ತ್ರಿಭುಜದ ಪಾದವು ಆದರ ಎತ್ತರಕ್ಕಿಂತ 4 ಸೆಂ.ಮೀ. ಜಾಸ್ತಿ ಇದೆ. ಅದರ ವಿಸ್ತೀರ್ಣವು 48 ಸೆಂ.ಮೀ. ಆದರೆ ಅದರ ಪಾದ ಮತ್ತು ಎತ್ತರಗಳನ್ನು ಕಂಡುಹಿಡಿಯಿರಿ.

ರೀತಿ : ತ್ರಿಭುಜದ ಎತ್ತರ $x$ ಸೆಂ. ಮೀ. ಎಂದು ಕಲ್ಪಿಸಿ.

∴ ತ್ರಿಭುಜದ ಪಾದ$=(x+4)$ ಸೆಂ. ಮೀ.

∴ ತ್ರಿಭುಜದ ವಿಸ್ತೀರ್ಣ$=\frac{1}{2}$ ಪಾದ$\times$ಎತ್ತರ

∴ $\frac{1}{2}x(x+4)=48$

ಅಥವಾ $x(x+4)=96$

,, $x^2+4x-96=0$

,, $x^2+12x-8x-96=0$

,, $x(x+12)-8(x+12)=0$

,, $(x+12)(x-8)=0$

ಇನ್ನು $x+12=0$ ಇದ್ದರೆ $x=-12$ ಕೈಬಿಡಲಾಗಿದೆ.

ಮತ್ತು $x-8=0$ ಇದ್ದರೆ $x=8$

∴ ತ್ರಿಭುಜದ ಎತ್ತರ$=8$ ಸೆಂ.ಮೀ.
ಮತ್ತು ತ್ರಿಭುಜದ ಪಾದ$=8+4=12$ ಸೆಂ.ಮೀ. } Ans.

ಪ್ರಶ್ನೆ 25. $y=x^2$ ಮತ್ತು $y=x+6$ ಸಮೀಕರಣದ ನಕ್ಷೆಯನ್ನು ಎಳೆದು ಇದರ ಸಹಾಯದಿಂದ $x^2-x-6=0$ ಸಮೀಕರಣದ ನಕ್ಷೆಯನ್ನು ಬಿಡಿಸಿ.

ರೀತಿ : $y=x^2$, $y=x+6$ ಸಮೀಕರಣದ ನಕೆಯನ್ನು ಎಳೆಯುವುದು.

$y=x^2$

| $x$ | 1 | 2 | 3 | 0 | −1 | −2 | −3 |
|---|---|---|---|---|---|---|---|
| $y$ | 1 | 4 | 9 | 0 | 1 | 4 | 9 |

$y=x+6$

| $x$ | 1 | −1 | −2 | 3 | 2 |
|---|---|---|---|---|---|
| $y$ | 7 | 5 | 4 | 9 | 8 |

ಸ್ಕೇಲು 1 ಸೆಂ.ಮೀ.$=1$ ಮಾನ X-ಅಕ್ಷದ ಗುಂಟ
0.5 ಸೆಂ.ಮೀ.$=1$ ಮಾನ Y-ಅಕ್ಷದ ಗುಂಟ.



$y=x^2$ ದ ಪರವಲಯ ಮತ್ತು $y=x+6$ ದ ಸರಳರೇಷೆಗಳು ಪರಸ್ಪರ $(-2,4)$ ಮತ್ತು $(3,9)$ ಬಿಂದುಗಳಲ್ಲಿ ಛೇದಿಸುತ್ತವೆ.

∴ ನಕ್ಷೆಯ ಕ್ರಮದಿಂದ $x^2-x-6=0$ ಸಮೀಕರಣದ ಮೂಲಗಳು $x=-2$ ಇಲ್ಲವೆ 3. ಯಾಕೆಂದರೆ $x^2=x+6$ ಅಥವಾ $y=x^2$, $y=x+6$.

ಪ್ರಶ್ನೆ 26. ಒಬ್ಬ ಹುಡುಗನು 2 ದಾಳಗಳನ್ನು ಒಟ್ಟಿಗೆ ಎಸೆದನು. ಎರಡರ ಮೇಲಿನ ಮುಖದ ಒಟ್ಟು ಸಂಖ್ಯೆಗಳು 5 ಆಗಲು ಆಗಬಹುದಾದ ಕ್ರಮಯೋಜನೆಗಳೆಷ್ಟು? (ದಾಳಗಳ ಮೇಲೆ 1, 2, 3, 4, 5, 6 ಎಂದು ಬರೆದಿದೆ)

ರೀತಿ : ಒಟ್ಟು ಸಾಧ್ಯತೆಗಳು $=6\times6=36$.

ಮೇಲು ಮುಖಗಳ ಮೇಲಿನ ಸಂಖ್ಯೆಗಳ ಮೊತ್ತವು 5 ಆಗುವ ಸಾಧ್ಯತೆಗಳು

$=(1+4), (2+3), (3+2), (4+1)=4$

∴ ಸಂಭವನೀಯತೆ$=\dfrac{\text{ಅಪೇಕ್ಷಿತ ಸಾಧ್ಯತೆಗಳು}}{\text{ಒಟ್ಟು ಸಾಧ್ಯತೆಗಳು}}$

$=\frac{4}{36}=\frac{1}{9}$ Ans.

ಪ್ರಶ್ನೆ 27. $3x^2=5x+3$, ಸಮೀಕರಣದ ಮೂಲಗಳನ್ನು ಸೂತ್ರದ ಸಹಾಯದಿಂದ ಕಂಡುಹಿಡಿಯಿರಿ.

ರೀತಿ : $3x^2=5x+3$ ಅಥವಾ $3x^2-5x-3=0$

ಸೂತ್ರದ ಪ್ರಕಾರ$=x\dfrac{-b\pm\sqrt{b\quad-4ac}}{2a}$

ಇಲ್ಲಿ $a=3$, $b=-5$ ಮತ್ತು $c=-3$

∴ $x=\dfrac{-(-5)+\sqrt{(-5)\quad-4(3)(-3)}}{2(3)}$

$=\dfrac{5\pm\sqrt{25+36}}{6}=\dfrac{5\pm\sqrt{61}}{6}=\dfrac{1}{6}$

$(5\pm\sqrt{61})$

∴ $x=\frac{1}{6}(5\pm\sqrt{61}$ Ans.

ಪ್ರಶ್ನೆ 28. $x+y=7$ ಮತ್ತು $xy=10$, ಆದರೆ $x^2 y^2$ ನ ಬೆಲೆಯೇನು ?

ರೀತಿ : $x^2y^2=(x+y)(x-y)$

$=(x+y)\sqrt{(x+y)^2-4xy}$

$=7\sqrt{7^2-4\times10}=7\sqrt{49-40}=7$

$\sqrt{9}=7\times3=21$ Ans.

**ಪ್ರಶ್ನೆ 29.** $\sqrt{18}+\sqrt{8}+\sqrt{50}$ ಇದನ್ನು ಸುಲಭ ರೂಪಕ್ಕೆ ತಂದು ಉತ್ತರವನ್ನು ಘಾತಾಂಕ ರೂಪದಲ್ಲಿ ಬರೆಯಿರಿ.

**ರೀತಿ :** $\sqrt{18}+\sqrt{8}+\sqrt{50}$

$$=\sqrt{9\times2}+\sqrt{4\times2}+\sqrt{25\times2}$$

$$=3\sqrt{2}+2\sqrt{2}+5\sqrt{2}=\sqrt{2}(3+2+5)$$

$$=10\sqrt{2}=10(2)^{\frac{1}{2}}$$

$\therefore\ 10\,(2)^{\frac{1}{2}}$ Ans.

**ಪ್ರಶ್ನೆ 30.** ಕೆಳಗೆ ಕೊಟ್ಟಿರುವ ದತ್ತಾಂಶಗಳನ್ನು ಸ್ತಂಭ ರೇಖೆಯ ಮೂಲಕ ತೋರಿಸಿ. ಸೂಕ್ತ ಅಳತೆಯನ್ನು ಉಪಯೋಗಿಸಿ.

| ಪ್ರಾಣಿಯ ಹೆಸರು | ಜೀವಿತ ಕಾಲ (ವರ್ಷಗಳಲ್ಲಿ) |
|---|---|
| 1. ಆನೆ | 60 |
| 2. ಒಂಟೆ | 28 |
| 3. ಕುದುರೆ | 20 |
| 4. ಹಸು | 20 |

**ಪ್ರಶ್ನೆ 31.** 1,2,3,4,5 ಅಂಕೆಗಳಲ್ಲಿ 3 ಅಂಕೆಗಳ ಸಂಖ್ಯೆಗಳನ್ನು ಎಷ್ಟು ವಿಧಗಳಲ್ಲಿ ಮಾಡಬಹುದು ?

**ರೀತಿ :** 1,2,3,4,5 ಅಂಕೆಗಳಲ್ಲಿ 3 ಅಂಕೆಗಳ ಸಂಖ್ಯೆಗಳನ್ನು $5P^3$ ವಿಧಗಳಲ್ಲಿ ಮಾಡಬಹುದು.

$$\therefore\ 5P_3=\frac{5!}{(5-3)!}=\frac{2!}{5!}=\frac{5\times4\times3\times2!}{2!}$$

$=5\times4\times3=60$ ವಿಧಗಳು Ans.

**ಪ್ರಶ್ನೆ 32.** 10 ಕಿ.ಮೀ./ಗಂ. ಹೋಗುತ್ತಿದ್ದ ಹಡಗೊಂದು ದಕ್ಷಿಣಕ್ಕೆ ಚಲಿಸುವಾಗ 2 ಕಿ.ಮೀ. / ಗಂ. ಪಶ್ಚಿಮಕ್ಕೆ ಹರಿಯುತ್ತಿದ್ದ ಸಮುದ್ರದ ಸುಳಿಯಲ್ಲಿ ಸೇರಿತು. ಈಗ ಹಡಗಿನ ವೇಗವನ್ನು ಕಂಡು ಹಿಡಿಯಿರಿ.

**ರೀತಿ :** AB—ಹಡಗಿನ ವೇಗ = 10 ಕಿ.ಮೀ./ಗಂ.

BC—ಪ್ರವಾಹ ವೇಗ = 2 ಕಿ.ಮೀ./ಗಂ.

$ABC\triangle$ ದಲ್ಲಿ $\angle ABC=90^\circ$

$$\therefore\ AC^2=AB^2+BC^2$$

$$=(10)^2+(2)^2$$

$$=100+4$$

$$=104$$

$\therefore\ AC=\sqrt{104}=10.2$

$\therefore$ ಪ್ರವಾಹದಲ್ಲಿ ಹಡಗಿನ ವೇಗ $=10.2$ ಕಿ.ಮೀ.




**ಪ್ರಶ್ನೆ 33.** $x$ ನ ಬೆಲೆಯೇನು ?

$$\begin{bmatrix}x&1\\1&4\end{bmatrix}+\begin{bmatrix}1&-1\\2&6\end{bmatrix}=\begin{bmatrix}5&0\\3&10\end{bmatrix}$$

**ರೀತಿ :** $\begin{bmatrix}x&1\\1&4\end{bmatrix}+\begin{bmatrix}1&-1\\2&6\end{bmatrix}=\begin{bmatrix}5&0\\3&10\end{bmatrix}$

ಅಥವಾ $\begin{bmatrix}x+1\\1+2\end{bmatrix}\begin{bmatrix}1-1\\4+6\end{bmatrix}=\begin{bmatrix}5&0\\3&10\end{bmatrix}$

" $\begin{bmatrix}x+1&0\\3&10\end{bmatrix}=\begin{bmatrix}5&0\\3&10\end{bmatrix}$

$\therefore\ x+1=5$ ಅಥವಾ $x=5-1=4$

$\therefore\ x=4$ Ans.

**ಪ್ರಶ್ನೆ 34.** ಛೇದವನ್ನು ಅಕರಣೀಕರಿಸಿ ಸುಲಭರೂಪಕ್ಕೆ ತನ್ನಿ.

$$\frac{\sqrt{x}}{\sqrt{x}+\sqrt{y}}$$

**ರೀತಿ :** $\dfrac{\sqrt{x}}{\sqrt{x}+\sqrt{y}}=\dfrac{\sqrt{x}}{\sqrt{x}+\sqrt{y}}\times\dfrac{\sqrt{x}-\sqrt{y}}{\sqrt{x}-\sqrt{y}}$

$$=\frac{\sqrt{x}\ (\sqrt{x}-\sqrt{y})}{(\sqrt{x}+\sqrt{y})(\sqrt{x}-\sqrt{y})}$$

$$=\frac{x-\sqrt{xy}}{(\sqrt{x})^2-(\sqrt{y})^2}=\frac{x-\sqrt{xy}}{x-y}\ \text{Ans.}$$

**ಪ್ರಶ್ನೆ 35.** ಗುಣಾಕಾರ ನಿಯತಗಣಕ 3ಕ್ಕೆ ಹೊಂದಿಕೊಂಡ $Z^3$ಯನ್ನು ಪಟ್ಟಿ ಮಾಡಿ. ಇದರಿಂದ ಗುಣಾಕಾರ ನಿಯತಗಣಕ 3 ಎಂಬುದು ಒಂದು ಬೀಜ ಗಣಿತ ಸಂರಚನೆ ಎಂದು ತೋರಿಸಿ.

**ರೀತಿ :** $Z^3=\{0,1,2\}$

| $Z_3\odot$ | 0 | 1 | 2 |
|---|---|---|---|
| 0 | 0 | 0 | 0 |
| 1 | 0 | 1 | 2 |
| 2 | 0 | 2 | 1 |

$0\times1=0\in Z_3$

$1\times1=1\in Z_3$

$1\times2\ \ 2\in Z_3$

$2\times2=1\in Z_3$

$\therefore\ \forall\ a,b\in{}_3Z_3$

$a\times b\in Z_3$.

$\therefore\ (Z^3\odot)$ ಒಂದು ಬೀಜಗಣಿತ ಸಂರಚನೆ.

....●....

# ಗಣಿತ

## ಅಕ್ಟೋಬರ-1984    2 ನೆಯ ಪತ್ರಿಕೆ

### ರೇಖಾಗಣಿತ

ವೇಳೆ : 2 ಗಂಟೆ)    (ಅಧಿಕ ಗುಣಗಳು 35

ಪ್ರಶ್ನೆ 1. XY ಮೇಲೆ AB ಯ ಪ್ರಕ್ಷೇಪವನ್ನು ಗುರುತಿಸಿ.

ರೀತಿ : PQ ಇದು XYದ ಮೇಲೆ AB ಯ ಪ್ರಕ್ಷೇಪ ವಿರುತ್ತದೆ.




ಪ್ರಶ್ನೆ 2. ಕೊಟ್ಟಿರುವ ಆಕೃತಿಯಲ್ಲಿ $x$ ಕಂಡು ಹಿಡಿಯಿರಿ.

ರೀತಿ : $2x^o + x^o = 180^o$............
(ಪಾರ್ಶ್ವ $\angle$ ಗಳು)
ಅಥವಾ $3x^o = 180^o$
„ $x^o = \frac{180'}{3}$  $\therefore$ $x^o = 60^o$.

ಪ್ರಶ್ನೆ 3. AB ಮತ್ತು CD ಸಮಾಂತರ ಸರಳರೇಖೆಗಳನ್ನು EF ಸರಳರೇಖೆಯು G ಮತ್ತು H ಗಳಲ್ಲಿ ಛೇದಿಸುತ್ತದೆ $\angle AGF = 110^o$, ಆದರೆ $\angle$ GHD ಮತ್ತು $\angle BGH$ ಗಳನ್ನು ಕಂಡು ಹಿಡಿಯಿರಿ.




ದತ್ತ : $\angle AGE = 110^o$, AB//CD.
ಕಂಡುಹಿಡಿಯುವುದು : $\angle GHD$ $\angle BGH$.

ರೀತಿ : $\angle BGH = \angle AGE$ $110^o$........(ಶೃಂಗಾಭಿಮುಖ $\angle$ ಗಳು)
$\angle GHD = 180^o - \angle BGH$............ (ಅಂತರ $\angle$ ಗಳು)
$= 180^o - 110^o$  $70^o$
$\therefore$ $\angle GHD = 70^o$, $\angle BGH = 110$.

ಪ್ರಶ್ನೆ 4. $\triangle ABC$ ಯಲ್ಲಿ $\angle A = 60^o$ ಮತ್ತು $\angle B = 70^o$ ಆದರೆ $\angle ACD$ ಯನ್ನು ಕಂಡುಹಿಡಿಯಿರಿ.




ದತ್ತ : $\angle A = 60^o$, $\angle B = 70^o$
ಕಂಡುಹಿಡಿಯುವುದು : $\angle ACD$
ರೀತಿ : ABC $\triangle$ ದಲ್ಲಿ ಬಾಹ್ಯ $\angle ACD = \angle A + \angle B = 60^o + 70^o = 130^o$
$\therefore$ $\angle ACD = 130^o$.

ಪ್ರಶ್ನೆ 5. ಪಂಚಭುಜಾಕೃತಿಯ ಎಲ್ಲಾ ಒಳಕೋನಗಳ ಮೊತ್ತವನ್ನು ಕಂಡುಹಿಡಿಯಿರಿ.

ರೀತಿ : $n$ ಬಾಹುಗಳುಳ್ಳ ಬಹುಭುಜಾಕೃತಿಯ ಎಲ್ಲ ಒಳ ಕೋನಗಳ ಮೊತ್ತ $= (2n-4)$ ಲಂಬ $\angle$ ಗಳು.
ಇಲ್ಲಿ $n = 5$
$\therefore$ ಪಂಚಭುಜಾಕೃತಿಯ ಎಲ್ಲ ಒಳಕೋನಗಳ ಮೊತ್ತ
$= 2(5) - 4$ ಲಂಬ $\angle$ ಗಳು.
$= 10 - 4 = 6$ ಲಂಬ $\angle$ ಗಳು.
$\therefore$ ಒಳಕೋನಗಳ ಮೊತ್ತ $= 6 \times 90^o = 540^o$ Ans.

ಪ್ರಶ್ನೆ 6. PQRS ಚಕ್ರೀಯ ಚತುರ್ಭುಜ, $\angle POR = 160^o$ ಆದರೆ $\angle PQR$ ಕಂಡುಹಿಡಿಯಿರಿ.

ದತ್ತ : $\angle POR = 160^o$
ಕಂಡುಹಿಡಿಯುವುದು : $\angle PQR$




ರೀತಿ : $\angle PSR = \frac{1}{2}$ $\angle$ POR........(ಕೇಂದ್ರ $\angle$, ಪರಿಧಿ $\angle$)
$= \frac{1}{2} \times 160^o = 80^o$
ಇನ್ನು $\angle PQR = 180^o$

$-\angle PSR$........(PQRS ಚಕ್ರೀಯ ಚ.ಭು.)
$=180^\circ-80^\circ=100^\circ$.
$\therefore \quad \angle PQR=100^\circ$.

**ಪ್ರಶ್ನೆ 7.** ಒಂದು ಗೋಪುರದ ಪಾದದ ವಿಸ್ತೀರ್ಣ 30 ಚ.ಸೆಂ.ಮೀ. ಇದ್ದು, ಅದರ ಲಂಬ ಎತ್ತರವು 8 ಸೆಂ.ಮೀ. ಇದ್ದು ಅದರ ಘನಫಲ ಎಷ್ಟು ?

**ರೀತಿ :** ಗೋಪುರದ ಘನಫಲ$=\frac{1}{3}$ ಪಾದದ ಕ್ಷೇತ್ರ $\times$ ಎತ್ತರ
$=\frac{1}{3}\times 30\times 8=80$ ಘ.ಸೆಂ.ಮೀ. Ans.

**ಪ್ರಶ್ನೆ 8.** ಮುಚ್ಚಳವಿಲ್ಲದ ಪೆಟ್ಟಿಗೆಯಲ್ಲಿ ಎಷ್ಟು ಜೊತೆ ಸಮಾಂತರ ಸಮತಲಗಳಿವೆ ?

**ಉತ್ತರ :** ಎರಡು ಜೊತೆ.

**ಪ್ರಶ್ನೆ 9.** ಒಂದು ವಜ್ರಾಕೃತಿಯ ಕರ್ಣಗಳು 8 ಸೆಂ. ಮೀ. ಮತ್ತು 6 ಸೆಂ.ಮೀ. ಇದ್ದರೆ, ಅದರ ಕ್ಷೇತ್ರಫಲ ಎಷ್ಟು ?

**ರೀತಿ :** ವಜ್ರಾಕೃತಿಯ ಕ್ಷೇತ್ರಫಲ$=\frac{1}{2}\times$ ಕರ್ಣಗಳ ಗುಣಲಬ್ಧ
$=\frac{1}{2}\times 8\times 6=24$ ಚ.ಸೆಂ.ಮೀ. Ans.

**ಪ್ರಶ್ನೆ 10.** ಎರಡು ಲಂಬ ಸಮತಲಗಳ ಛೇದನವು ಯಾವಾಗಲೂ........

**ಉತ್ತರ :** ಲಂಬ ರೇಖೆಯಾಗಿರುವುದು.

**ಪ್ರಶ್ನೆ 11.** ABCD ಒಂದು ಚತುರ್ಭುಜದಲ್ಲಿ ಕರ್ಣ AC=6 ಸೆಂ.ಮೀ. ಲಂಬ DP=2 ಸೆಂ.ಮೀ. ಮತ್ತು BQ=3 ಸೆಂ.ಮೀ. . ಆದರೆ ವಿಸ್ತೀರ್ಣವನ್ನು ಕಂಡುಹಿಡಿಯಿರಿ.

**ರೀತಿ :**
ಚತುರ್ಭುಜದ ವಿಸ್ತೀರ್ಣ
$=\frac{1}{2}\ AC(DP+BQ)$
$=\frac{1}{2}\times 6\ (2+3)$ಚ.ಸೆಂ.ಮೀ.
$=3\times 5=15$ ಚ.ಸೆಂ.ಮೀ.
Ans.




**ಪ್ರಶ್ನೆ 12.** 6.5 ಮೀಟರ್ ಉದ್ದವುಳ್ಳ ಒಂದು ಏಣಿಯ ಪಾದವು ಗೋಡೆಯ ತಳದಿಂದ 2.5 ಮೀಟರ್ ದೂರದಲ್ಲಿರುವಂತೆ ಗೋಡೆಗೆ ಒರೆಯಾಗಿ ನಿಲ್ಲಿಸಿ ಇತ್ತೆ, ಏಣಿಯ ತುದಿಯು ಎಷ್ಟು ಎತ್ತರವನ್ನು ಮುಟ್ಟುತ್ತದೆ ?

**ರೀತಿ :** AC=ಏಣಿ=6.5 ಮೀ.
AB=ಗೋಡೆ, BC=ಗೋಡೆ ಯಿಂದ ದೂರ=2 5 ಮೀ.
ಇನ್ನು ABC$\triangle$ ದಲ್ಲಿ
$\angle ABC=90^\circ$




$\therefore \quad AB^2+BC^2=AC^2$
ಅಥವಾ $AB^2=AC^2-BC^2$
$=(6.5)^2-(2.5)^2$
$=(6.5+2.5)\ (6.5-2.5)$
$=(9)\ (4)=36$
$\therefore \quad AB=\sqrt{36}=6$ ಮೀ.
$\therefore$ ಗೋಡೆಯ ತಳದಿಂದ ಏಣಿಯ ತುದಿಯು ದೂರ=6 ಮೀಟರ Ans.

**ಪ್ರಶ್ನೆ 13.** $\triangle ABC$ ದಲ್ಲಿ AB=25 ಸೆಂ.ಮೀ. BC=12 ಸೆಂ.ಮೀ. BC ಯ ಮೇಲಿನ AC ಯ ಪ್ರಕ್ಷೇಪ CD=8 ಸೆಂ.ಮೀ. ಇದ್ದರೆ, ACಯ ಅಳತೆಯನ್ನು ಲೆಕ್ಕಾಚಾರದಿಂದ ಕಂಡುಹಿಡಿಯಿರಿ

**ದತ್ತ :** AB=25 ಸೆಂ.ಮೀ. BC=12 ಸೆಂ.ಮೀ.
CD=8 ಸೆಂ.ಮೀ.

**ಕಂಡುಹಿಡಿಯುವುದು :** AC

**ರೀತಿ :** ABC $\triangle$ ದಲ್ಲಿ $\angle ABC=$ಲಘುಕೋನ,
AB ಯ ಪ್ರಕ್ಷೇಪ BD=BC+CD
$=12+8=20$ ಸೆಂ.ಮೀ.




$\therefore \quad AC^2=AB^2+BC^2-2BC.\ BD$
$=(25)^2+(12)^2-2(12)(20)$
$=625+144+480$
$=769-480=289$
$\therefore \quad AC=\sqrt{\phantom{0}}=17$ ಸೆಂ.ಮೀ.
$\therefore \quad AC=17$ ಸೆಂ.ಮೀ.

ಪ್ರಶ್ನೆ 14. ಯಾವುದಾದರೂ ತ್ರಿಭುಜದಲ್ಲಿ ಯಾವುದಾದರೂ ಎರಡು ಬಾಹುಗಳ ಮೇಲಿನ ವರ್ಗಗಳ ಮೊತ್ತವು ಮೂರನೇ ಭುಜದ ಅರ್ಧದ ವರ್ಗದ ಎರಡ ರಷ್ಟಕ್ಕೆ ಮೂರನೇ ಭುಜಕ್ಕೆಳೆದ ಮಧ್ಯರೇಖೆಯ ಮೇಲಿನ ವರ್ಗದ ಎರಡರಷ್ಟನ್ನು ಸೇರಿಸಿದ್ದಕ್ಕೆ ಸಮನಾಗಿರುತ್ತದೆ. ಎಂದು ಸಾಧಿಸಿ.

ದತ್ತ : ABC △ ದಲ್ಲಿ AD ಮಧ್ಯರೇಖೆಯಿದೆ.

ಸಾಧನೀಯ : $AB^2+AC^2=2AD^2+2BD^2$

ರಚನೆ : $AP \perp BC$ ಎಳೆಯಿರಿ.

ಸಾಧನೆ : $AD \perp BC$ ಇರದಿದ್ದರೆ $\angle ADB$, $\angle ADC$ ಗಳಲ್ಲಿ ಒಂದು ಅಧಿಕ ಕೋನ ಇರಬೇಕು $\angle ADB$ ಅಧಿಕ ಕೋನವಾಗಿರಲಿ



ಇನ್ನು ABD △ ದಲ್ಲಿ $\angle ADB$ ಅಧಿಕ ಕೋನ ಪಿ...

$\therefore\ AB^2=AD^2+BD^2+2BD.DP$.......I

ಮತ್ತು ACD △ ದಲ್ಲಿ $\angle ADC$ ಲಘು ಕೋನವಿದೆ.

$\therefore\ AC^2=AD^2+CD^2-2CD.DP$

ಆದರೆ CD = BD........(ದತ್ತ)

$\therefore\ AC^2=AD^2+BD^2-BD.PD$ .......II

I ಮತ್ತು II ಪರಿಣಾಮ ಕೂಡಿಸಲು.

$\therefore\ AB^2+AC^2=2AD^2+2BD^2$

ಪ್ರಶ್ನೆ 15. 6 ಸೆಂ.ಮೀ. ಭುಜವುಳ್ಳ ಸಮಬಾಹು ತ್ರಿಭುಜ ರಚಿಸಿ, ಅದರ ಅಂತಃ ಕೇಂದ್ರ ಕಂಡುಹಿಡಿಯಿರಿ.



ಉತ್ತರ : ABC ಸಮಬಾಹು △ ರಚಿಸಿ. $\angle B$, $\angle C$ ಗಳ ಅರ್ಧಕಗಳನ್ನು ಎಳೆಯಿರಿ. ಅವು I ದಲ್ಲಿ ಛೇದಿಸಲಿ. ಈಗ I ಇದು ABC △ ದ ಒಳ ಕೇಂದ್ರವಿದೆ.

ಪ್ರಶ್ನೆ 16. ಎರಡು ವೃತ್ತಗಳು ಪರಸ್ಪರ ಸ್ಪರ್ಶಿಸಿದಾಗ ಸ್ಪರ್ಶ ಬಿಂದುವು ಮತ್ತು ವೃತ್ತಕೇಂದ್ರಗಳು ಒಂದೇ ಸರಳ ರೇಖೆಯಲ್ಲಿರುತ್ತವೆ ಎಂದು ಸಾಧಿಸಿ.

ಉತ್ತರ :



ಆಕೃತಿ 1.



ಆಕೃತಿ 2.

ದತ್ತ : A ಮತ್ತು B ಕೇಂದ್ರಗಳಿರುವ ಎರಡು ವೃತ್ತಗಳು ಪರಸ್ಪರ Cದಲ್ಲಿ ಸ್ಪರ್ಶಿಸುತ್ತವೆ. ಬಾಹ್ಯವಾಗಿ ಆಕೃತಿ 1, ಅಂತಸ್ಥವಾಗಿ ಆಕೃತಿ 2.

ಸಾಧನೀಯ : A, B ಮತ್ತು C ಗಳು ಒಂದೇ ಸರಳ ರೇಖೆಯಲ್ಲಿರುತ್ತವೆ.

ರಚನೆ : C ದಲ್ಲಿ ಒಂದು ಸಾಮಾನ್ಯ ಸ್ಪರ್ಶಕ PQ ಎಳೆಯಿರಿ. AC, BC ಸೇರಿಸಿ.

ಸಾಧನೆ : A ಕೇಂದ್ರದ ವೃತ್ತಕ್ಕೆ PQ ಸ್ಪರ್ಶವಿದ್ದು AC ಸ್ಪರ್ಶ ಬಿಂದುವಿನಲ್ಲಿ ತ್ರಿಜ್ಯವಿದೆ.

$\therefore\ \angle ACP=90^\circ$........I

ಇದರಂತೆ $\angle BCP=90^\circ$ ಎಂದು ಸಾಧಿಸಬಹುದು.........II

ಇನ್ನು ಆಕೃತಿ 1 ರಲ್ಲಿ, I ಮತ್ತು II ಕೂಡಿಸಲಾಗಿ.

$\angle ACP+\angle BCP=180^\circ$ ಅಥವಾ

$\angle ACB$ = ಸರಳಕೋನ.

$\therefore$ ACB ಸರಳರೇಖೆಯಿದೆ.

$\therefore$ A,B ಮತ್ತು C ಗಳು ಒಂದೇ ಸರಳರೇಖೆಯಲ್ಲಿರುತ್ತವೆ.

ಇನ್ನು ಆಕೃತಿ 2ರಲ್ಲಿ, I ಮತ್ತು II ರಿಂದ

$\angle ACP=\angle BCP=90^\circ$

ಆದರೆ ಈ ಎರಡೂ ಸಮಾನ ಕೋನಗಳಿಗೆ CP ಸಾಮಾನ್ಯ ಬಾಹುವಿದ್ದು CA, CB ಗಳು CPದ ಒಂದೇ ಬದಿಗೆ ಇರುತ್ತವೆ.

CA, CB ಗಳು ಒಂದರ ಮೇಲೆ ಒಂದು ಬೀಳುತ್ತವೆ
∴ A,B ಮತ್ತು C ಗಳು ಒಂದೇ ಸರಳರೇಖೆ ಯಲ್ಲಿರುತ್ತವೆ.

**ಪ್ರಶ್ನೆ 17.** ABC ಸ್ಪರ್ಶಕವು ವೃತ್ತವನ್ನು C ನಲ್ಲಿ ಸ್ಪರ್ಶಿಸುತ್ತದೆ. $\angle ACD = 40^\circ$ ಮತ್ತು $\angle D = 70^\circ$ ಕೋನಗಳನ್ನು ಕಂಡುಹಿಡಿಯಿರಿ.




**ದತ್ತ :** $\angle ACD = 40^\circ$, $\angle D = 70^\circ$

**ಕಂಡುಹಿಡಿಯುವದು :** ಉಳಿದ ಎಲ್ಲಾ ಕೋನಗಳು.

**ರೀತಿ :** $\angle E = \angle ACD = 40^\circ$........

(ಪ.ಪ್ಪ.ಖಂ. $\angle$ ಗಳು)

$\angle BCE = \angle D = 70^\circ$........

(ಪ.ವೃ.ಖಂ. $\angle$ ಗಳು)

$\angle DCE = 180^\circ - 40^\circ - 70^\circ$

$= 70^\circ$

∴ $\angle E = 40^\circ$, $\angle BCE = 70^\circ$ $\angle DCE = 70^\circ$

**ಪ್ರಶ್ನೆ 18.** 4 ಸೆಂ.ಮೀ. ಮತ್ತು 2.5 ಸೆಂ.ಮೀ. ತ್ರಿಜ್ಯಗಳನ್ನುಳ್ಳ ಎರಡು ವೃತ್ತಗಳ ಕೇಂದ್ರಗಳು 10 ಸೆಂ.ಮೀ. ದೂರದಲ್ಲಿವೆ. ಈ ವೃತ್ತಗಳಿಗೆ ವ್ಯತ್ಯಸ್ತ ಸಾಮಾನ್ಯ ಸ್ಪರ್ಶಕಗಳನ್ನೆಳೆಯಿರಿ.




**ರಚನಾ ಕ್ರಮ :** PQ 10 ಸೆಂ.ಮೀ. ಎಳೆಯಿರಿ P ಕೇಂದ್ರವೆಂದು 4 ಸೆಂ.ಮೀ. ತ್ರಿಜ್ಯದಿಂದ Q ಕೇಂದ್ರವೆಂದು 2.5 ಸೆಂ. ಮೀ. ತ್ರಿಜ್ಯದಿಂದ ವೃತ್ತಗಳನ್ನೆಳೆಯಿರಿ. P ಕೇಂದ್ರವೆಂದು ತ್ರಿಜ್ಯ (4+2.5)=6 5 ಸೆಂ.ಮೀ. ತ್ರಿಜ್ಯದಿಂದ ಇನ್ನೊಂದು ವೃತ್ತ ಎಳೆಯಿರಿ. PQ ವ್ಯಾಸವೆಂದು ಎಳೆದ ವೃತ್ತವು, P ಕೇಂದ್ರದ ದೊಡ್ಡ ವೃತ್ತವನ್ನು C,D ಗಳಲ್ಲಿ ಛೇದಿಸಲಿ PC, PD, CQ,DQ ಸೇರಿಸಿರಿ. PC,PDಗಳು P ಕೇಂದ್ರದ ಚಿಕ್ಕವೃತ್ತವನ್ನು A,B ಗಳಲ್ಲಿ ಛೇದಿಸಲಿ. PC// QE, PD//QF ಎಳೆಯಿರಿ. AE, BF ಸೇರಿಸಿರಿ. AE,BF ಗಳು ಇಚ್ಛಿತ ವ್ಯತ್ಯಸ್ತ ಸಾಮಾನ್ಯ ಸ್ಪರ್ಶಕಗಳಿವೆ.

**ಸೂಚನೆ :** ಇಲ್ಲಿ ರಚನಾಕ್ರಮ ಕೇಳಿಲ್ಲ. ವಿದ್ಯಾರ್ಥಿಗಳಿಗೆ ರಚಿಸಲು ಅನುಕೂಲವಾಗಲೆಂದು ಕೊಟ್ಟಿದೆ. ರಚನಾಕ್ರಮದಲ್ಲಿ ಸೂಚಿಸಿದಂತೆ ಆಕೃತಿ ರಚಿಸಿ.

**ಪ್ರಶ್ನೆ 19.** ಕೊಟ್ಟಿರುವ ಚಿತ್ರದಿಂದ ಯೂಲರನ ಸೂತ್ರ $N + R = A + 2$ ತಾಳೆನೋಡಿ.



**ರೀತಿ :** ಆಕೃತಿಯಲ್ಲಿ.

N = ಸಂಪಾತ ಬಿಂದುಗಳ ಸಂಖ್ಯೆ = 10

R = ವಲಯಗಳ ಸಂಖ್ಯೆ....=7

A = ಕಂಸುಗಳ ಸಂಖ್ಯೆ.......... = 15

∴ $N + R = A + 2$

ಅಥವಾ $10 + 7 = 15 + 2$ ಅಥವಾ $17 = 17$

**ಪ್ರಶ್ನೆ 20.** ಕೊಟ್ಟಿರುವ ಜಾಲಕೃತಿಯ ಸಂಖ್ಯಾಯುತವನ್ನು ತಯಾರಿಸಿ.




**ರೀತಿ :**

| | L | M | N |
|---|---|---|---|
| L | 0 | 1 | 1 |
| M | 1 | 0 | 2 |
| N | 1 | 1 | 0 |

∴ ಸಂಖ್ಯಾಯತ $\begin{bmatrix} 0 & 1 & 1 \\ 1 & 0 & 2 \\ 1 & 2 & 0 \end{bmatrix}$

# ಗಣಿತ

**ಏಪ್ರಿಲ್–1984** **1 ನೆಯ ಪತ್ರಿಕೆ**

**(ಅಂಕಗಣಿತ–ಬೀಜಗಣಿತ)**

ವೇಳೆ : $2\frac{1}{2}$ ಗಂಟೆ) (ಅಧಿಕ ಗುಣಗಳು : 65

ಪ್ರಶ್ನೆ 1. MMCCC × LIV ನ್ನು ಹಿಂದಿ ಅರಬ್ಬಿ ಅಂಕೆಗಳಲ್ಲಿ ಬರೆಯಿರಿ.

ರೀತಿ : MMCCC × LIV = M+M+C+C+C +L–X+V–I
= 1000+1000+100+100+100+50–10 +5–1
= 2000+300+40+4 = 2,344 Ans.

ಪ್ರಶ್ನೆ 2. $a:b$ 2 : 5 $b:c=4:7$, ಆದರೆ $a:b:c$ ಅನ್ನು ಕಂಡು ಹಿಡಿಯಿರಿ.

ರೀತಿ : $a:b=2:5$ ಅಥವಾ $a:b=(2:5)\times 4$
$=8:20$............I
ಮತ್ತು $b:c=4:7$ ,, $b:c=(4:7)\times 5$
$=20:35$.........II
∴ I ಮತ್ತು II ರಿಂದ $a:b:c=8:20:35$ Ans.

ಪ್ರಶ್ನೆ 3. 0.625 ನ್ನು ಶೇಕಡಾ ಕ್ರಮದಲ್ಲಿ ನಿರೂಪಿಸಿ.

ರೀತಿ : 0.625 × 100 = 6.25. Ans.

ಪ್ರಶ್ನೆ 4. 6 ಹುಡುಗರ ಸರಾಸರಿ ತೂಕವು 90 ಪೌಂಡು. ಇವರಲ್ಲಿ ಒಬ್ಬನ ತೂಕ 100 ಪೌಂಡುಗಳು. ಆದರೆ ಉಳಿದ ಹುಡುಗರ ಸರಾಸರಿ ತೂಕವನ್ನು ಕಂಡು ಹಿಡಿಯಿರಿ.

ರೀತಿ : 6 ಹುಡುಗರ ಒಟ್ಟು ತೂಕ = 6 × 90 = 540 ಪೌಂ.
ಒಬ್ಬನ ತೂಕ = 100 ಪೌಂ.
∴ 5 ಹುಡುಗರ ಒಟ್ಟು ತೂಕ = 540–100 = 440 ಪೌಂ
∴ ಉಳಿದ 5 ಹುಡುಗರ ಸರಾಸರಿ ತೂಕ $=\frac{440}{5}=88$ ಪೌಂಡು Ans.

ಪ್ರಶ್ನೆ 5. 26, 23, 31.5, 35, 38.5, 24, 31, 32.5, 27.5, 34 ಗಳ ಮಧ್ಯಮ ಬೆಲೆಯನ್ನು ಕಂಡು ಹಿಡಿಯಿರಿ.

ರೀತಿ : ಪ್ರಾಪ್ತಾಂಕಗಳನ್ನು ಏರಿಕೆಯ ಕ್ರಮದಲ್ಲಿ ಜೋಡಿಸಲು—
23, 24, 26, 27.5, 31, 31.5, 32.5 34, 35, 38.5.
∴ ಮಧ್ಯಮ ಬೆಲೆ $=\frac{31+31.5}{2}=\frac{62.5}{2}$
$=31.25$ Ans.

ಪ್ರಶ್ನೆ 6. $\log 3=0.4771$ ಮತ್ತು $\log 2=0.3010$ ಆದರೆ $\log \frac{3}{2}$ ರ ಬೆಲೆ ಎಷ್ಟು ?

ರೀತಿ : $\log\frac{3}{2}=\log 3-\log 2=0.4771-0.3010$
$=0.1761$ Ans.

ಪ್ರಶ್ನೆ 7. ಶೇ. $7\frac{1}{2}$ ಭಾರತ ಸರ್ಕಾರದ ಸಾಲ ಪತ್ರವುಳ್ಳ ರೂ. 5,600 ಸ್ಟಾಕಿನಿಂದ ಬರುವ ವಾರ್ಷಿಕ ಆದಾಯವೆಷ್ಟು ?

ರೀತಿ : 100 ರೂ. ಸ್ಟಾಕಿನ ವಾರ್ಷಿಕ ಆದಾಯ $=\frac{15}{2}$ ರೂ.
∴ 5,600 ರೂ. ಸ್ಟಾಕಿನ ವಾರ್ಷಿಕ ಆದಾಯ
$=\frac{15\times 5600}{2\times 100}=420$ ರೂ. Ans.

ಪ್ರಶ್ನೆ 8. ಎರಡು ಬೀಜೋಕ್ತಿಗಳ ಗುಣಲಬ್ಧ $a(a+1)(a+1)(a-1)$, ಅವುಗಳ ಮ.ಸಾ.ಅ. $(a+1)$ ಆದರೆ ಲ.ಸಾ.ಅ. ವನ್ನು ಕಂಡುಹಿಡಿಯಿರಿ.

ರೀತಿ : ಬೀಜೋಕ್ತಿಗಳ ಗುಣಲಬ್ಧ $A\times B=a(a+1)(a+1)(a-1)$. ಬೀಜೋಕ್ತಿಗಳ ಮ ಸಾ.ಅ. $H=a+1$.
∴ ಬೀಜೋಕ್ತಿಗಳ ಲ.ಸಾ.ಅ. $L=\frac{A\times B}{H}$
$=\frac{a(a+1)(a+1)(a-1)}{a+1}$
$=a(a+1)(a+1)$ Ans.

ಪ್ರಶ್ನೆ 9. ಈ ಕೆಳಗಿನ ಹೇಳಿಕೆಯನ್ನು ಸಮೀಕರಣ ರೂಪದಲ್ಲಿ ಬರೆಯಿರಿ. B ಮತ್ತು C ಗಳಿಗೆ ತಕ್ಕಂತೆ A ಯು ಜಂಟಿಯಾಗಿ ಮಾರ್ಪಡುವುದು.

ರೀತಿ : $A\propto BC$ ಅಥವಾ $A=KBC$.....K ಮಾರ್ಪಿನ ಸ್ಥಿರಾಂಕ.

ಪ್ರಶ್ನೆ 10. ಈ ಕೆಳಗಿನ ಸಂಖ್ಯಾಯತದ ಪ್ರಧಾನ ಕರ್ಣಾಂಶಗಳು ಮತ್ತು ಅಧೀನ ಕರ್ಣಾಂಶಗಳನ್ನು ಕಂಡು ಹಿಡಿಯಿರಿ.

$$\begin{vmatrix} 0 & 8 & 9 \\ 4 & 2 & 5 \\ 6 & 5 & 1 \end{vmatrix}$$

**ಉತ್ತರ :** ಪ್ರಧಾನ ಕರ್ಣಾಂಶಗಳು —0, 2, 1
ಅಧೀನ ಕರ್ಣಾಂಶಗಳು —9, 2, 6.

**ಪ್ರಶ್ನೆ 11.** $3(3)^{\frac{1}{3}}$ ನ್ನು ಪರಿಪೂರ್ಣ ಕರಣಿಯಾಗಿ ವ್ಯಕ್ತ ಪಡಿಸಿ.

**ರೀತಿ :** $3(3)^{\frac{1}{3}} = 3\sqrt[3]{3} = \sqrt[3]{3^3} = \sqrt[3]{3}$.
$= \sqrt[3]{3^3 \times 3} = \sqrt[3]{81}$ Ans.

**ಪ್ರಶ್ನೆ 12.** $x^2+5x-8=0$, ಸಮೀಕರಣದ ಮೂಲಗಳ ಮೊತ್ತ ಮತ್ತು ಗುಣಲಬ್ಧಗಳನ್ನು ಕಂಡುಹಿಡಿಯಿರಿ.

**ರೀತಿ :** $x^2+5x-8=0$ ಇಲ್ಲಿ $a=1$, $b=5$, $c=-8$.

$\therefore$ ಮೂಲಗಳ ಮೊತ್ತ $\frac{-b}{a}=\frac{-5}{1}=-5$

ಮೂಲಗಳ ಗುಣಲಬ್ಧ $=\frac{c}{a}=\frac{-8}{1}=-8$.

**ಪ್ರಶ್ನೆ 13.** ಮಾರ್ಪಿನ ಗುಣಾಂಕವನ್ನು ಕಂಡುಹಿಡಿಯಲು ಉಪಯೋಗಿಸುವ ಸೂತ್ರವನ್ನು ಕಂಡುಹಿಡಿಯಿರಿ.

**ಉತ್ತರ :** ಮಾರ್ಪಿನ ಗುಣಾಂಕ $=\frac{\sigma}{M}\times 100$. ಇಲ್ಲಿ $\sigma$ = ಮಾನಕ ವಿಚಲನೆ. M = ಸರಾಸರಿ.

**ಪ್ರಶ್ನೆ 14.** $7(2)^{\frac{1}{3}}$ ರಿಂದ $2(2)^{\frac{1}{3}}$ ನ್ನು ಕಳೆದು ವ್ಯತ್ಯಾಸವನ್ನು ಕರಣಿ ರೂಪದಲ್ಲಿ ಬರೆಯಿರಿ.

**ರೀತಿ :** $7(2)^{\frac{1}{3}}-2(2)^{\frac{1}{3}}=5(2)^{\frac{1}{3}}=5\sqrt[3]{2}$ Ans.

**ಪ್ರಶ್ನೆ 15.** $c^2-d^2=ab$ ಆದರೆ '$d$' ಬೆಲೆಯೇನು ?

**ರೀತಿ :** $c^2-d^2=ab$ ಅಥವಾ $d^2=c^2-ab$
,, $d=\pm\sqrt{c^2-ab}$. Ans.

**ಪ್ರಶ್ನೆ 16.** $x^2-5x=14$ ಸಮೀಕರಣದ ಧನ ಮೂಲವನ್ನು ಕಂಡುಹಿಡಿಯಿರಿ.

**ರೀತಿ :** $x^2-5x=14$ ಅಥವಾ $x^2-5x-14=0$
,, $x^2-7x+2x-14=0$
,, $x(x-7)+2(x-7)=0$
,, $(x-7)(x+2)=0$
$x-7=0$ ಇದ್ದರೆ $x=7$
$x+2=0$ ,, $x=-2$.

$\therefore$ ಸಮೀಕರಣದ ಧನಮೂಲ = 7. Ans.

**ಪ್ರಶ್ನೆ 17.** $\phi(a)=2a^3-3a^2+2a-4$ ಆದರೆ $\phi(-3)$ ರ ಬೆಲೆಯೇನು ?

**ರೀತಿ :** $\phi(a)=2a^3-3a^2+2a-4$
$\phi(-3)=2(-3)^3-3(-3)^2+2(-3)-4$
$=2(-27)-3(9)+2(-3)-4$
$=-54-27-6-4$
$=91$ Ans.

**ಪ್ರಶ್ನೆ 18.** $S=\frac{n(n+1)}{2}$ ಸೂತ್ರದಲ್ಲಿ $S$ ಎಂಬುದು ಮೊದಲಿನ $n$ ಧನ ಪೂರ್ಣಾಂಕಗಳ ಮೊತ್ತವಾಗಿದೆ. ಪ್ರಾರಂಭ 1 ರಿಂದ $n$ ವರೆಗೆ ಮೊತ್ತವು 120 ಆಗಲು ಎಷ್ಟು ಧನ ಪೂರ್ಣಾಂಕಗಳನ್ನು ಕೂಡಿಸಬೇಕು ?

**ರೀತಿ :** $S=\frac{n(n+1)}{2}=120$ ಅಥವಾ $n(n+1)=2\times 120$

ಅಥವಾ $n^2+n=240$
,, $n^2+n-240=0$
,, $n^2+16n-15n-240=0$
,, $n(n+16)-15(n+16)=0$
,, $(n+16)(n-15)=0$
$n+16=0$ ಇದ್ದರೆ $n=-16$
$n-15=0$ ,, $n=15$

$\therefore$ 1 ರಿಂದ 15 ರ ವರೆಗಿನ ಧನ ಪೂರ್ಣಾಂಕಗಳನ್ನು ಕೂಡಿಸಬೇಕು.

**ಪ್ರಶ್ನೆ 19.** ಪ್ರತಿ ತಿಂಗಳು ರೂ. 10ರ ಸಂಚಿತಾವಧಿ ಠೇವಣಿಗೆ 60 ತಿಂಗಳ ನಂತರ ಬ್ಯಾಂಕು ರೂ. 741 ಕೊಡುತ್ತದೆ. ಒಬ್ಬನು ಈ ರೀತಿ ಸಂಚಿತಾವಧಿ ಠೇವಣಿಯಿಂದ 60 ತಿಂಗಳ ನಂತರ ರೂ. 3334.50 ಪಡೆದನು. ಆದರೆ ಅವನು ಇಡುತ್ತಿದ್ದ ಪ್ರತಿ ತಿಂಗಳ ಠೇವಣಿ ಎಷ್ಟು ? ಮತ್ತು ಅವನಿಗೆ ದೊರೆತ ಬಡ್ಡಿ ಎಷ್ಟು ?

**ರೀತಿ :** ತಿಂಗಳ ಕಂತು ರೂ. 10 ಇರುವಾಗ 60 ತಿಂಗಳ ಠೇವಣಿ $=10\times 60=600$ ರೂ.
ಈಗ 741 ರೂ. ಮೊತ್ತ ಪಡೆಯಲು ಇಡಬೇಕಾದ ಠೇವಣಿ = 600 ರೂ.

∴ 3334.50 ರೂ. ಮೊತ್ತ ಪಡೆಯಲು ಇಡಬೇಕಾದ ಠೇವಣಿ $= \dfrac{600 \times 3334.50}{741}$

$= (600 \times 4.50)$ ರೂ. $= 2700$ ರೂ.

ಇನ್ನು 60 ತಿಂಗಳ ಠೇವಣಿ $= 2700$ ರೂ.

∴ 1 ತಿಂಗಳ ಠೇವಣಿ $= \dfrac{2700}{60} = 45$ ರೂ.

∴ ಪ್ರತಿ ತಿಂಗಳ ಠೇವಣಿ $= 45$ ರೂ. Ans.

ದೊರೆತ ಬಡ್ಡಿ $= 3334.50 - 2700$

$= 634.50$ ರೂ. Ans.

ಪ್ರಶ್ನೆ 20. 12 ಡೈನ್ ಮತ್ತು 5 ಡೈನ್ ಬಲಗಳು ಒಂದು ವಸ್ತುವಿನ ಮೇಲೆ ಲಂಬಕೋನದಲ್ಲಿ ಪರಸ್ಪರ ವರ್ತಿಸುತ್ತವೆ. ಫಲಿತ ಬಲವನ್ನು ಕಂಡುಹಿಡಿಯಿರಿ.

ರೀತಿ : $AD = BC = 12$ ಡೈನ್, $AB = 5$ ಡೈನ್ ಫಲಿತ ಬಲವು AC ಗುಂಟ ವರ್ತಿಸುವುದು.

$ABC\triangle$ ದಲ್ಲಿ $\angle ABC = 90^\circ$




$\therefore AC^2 = AB^2 + BC^2$

$= (5)^2 + (12)^2$

$= 25 + 144 = 169.$

$\therefore AC = \sqrt{169} = 13$

∴ ಫಲಿತ ಬಲದ ಪರಿಮಾಣ

$= 13$ ಡೈನ್‌ಗಳು Ans.

ಪ್ರಶ್ನೆ 21. ಕುಂದಿಲ್ಲದ ಎರಡು ದಾಳಗಳನ್ನು ನಾನು ಎಸೆಯುತ್ತೇನೆ. ಈ ಎರಡು ದಾಳಗಳ ಮೇಲೆ ಬರುವ ಮುಖದ ಮೇಲಿನ ಸಂಖ್ಯೆಗಳ ಮೊತ್ತವು 5ಆಗುವ ಸಂಭವನೀಯತೆ ಎಷ್ಟು ?

ರೀತಿಗೆ ಅಕ್ಟೋಬರ 1984ರ ಪ್ರಶ್ನೆ 26 ನೋಡಿ.

ಪ್ರಶ್ನೆ 22. "PROBLEM" ಎಂಬ ಪದದ 4 ಅಕ್ಷರಗಳ ಎಷ್ಟು ವಿಕಲ್ಪಗಳಾಗಲು ಸಾಧ್ಯ ?

ರೀತಿ ; "PROBLEM" ಈ ಪದದಲ್ಲಿ 7 ಅಕ್ಷರಗಳಿವೆ. ಈ7 ಅಕ್ಷರಗಳಿಂದ 4 ಅಕ್ಷರಗಳಿಂದಾಗುವ ವಿಕಲ್ಪಗಳ ಸಂಖ್ಯೆ $= 7C_4$.

$$\therefore 7C_4 = \frac{7!}{(7-4)!4!} = \frac{7!}{3! \times 4!}$$

$$= \frac{7 \times 6 \times 5 \times 4!}{3 \times 2 \times 1 \times 4!} = 7 \times 5 = 35$$

∴ ವಿಕಲ್ಪಗಳ ಸಂಖ್ಯೆ $= 35$ Ans.

ಪ್ರಶ್ನೆ 23. $5P_5$ರ ಬೆಲೆಯೇನು ? $\left[ nP_n = \dfrac{n!}{(n-n)!} \right]$

ರೀತಿ : $5P_5 = \dfrac{5!}{(5-5)!} = \dfrac{5!}{0!} = \dfrac{5 \times 4 \times 3 \times 2 \times 1}{1}$

$= 120.$

$\therefore 5P_5 = 120.$ Ans.

ಪ್ರಶ್ನೆ 24. ಒಬ್ಬ ಹೂವಾಡಿಗನ ಬಳಿ ಹೂವಿನ ಹಾರಗಳಿವೆ. ಅವುಗಳಲ್ಲಿ 110 ಸಂಪಿಗೆ ಹೂವಿನವು, 50 ಮಲ್ಲಿಗೆ ಹೂವಿನವು. 30 ಹಾರಗಳು ಎರಡೂ ಬಗೆಯ ಹೂಗಳನ್ನು ಹೊಂದಿರುವುವು. ಹೂವಾಡಿಗನ ಬಳಿ ಇರುವ ಹಾರಗಳ ಸಂಖ್ಯೆ ಎಷ್ಟು ?

ರೀತಿ : $n(S)$ = ಸಂಪಿಗೆಯ ಹೂವಿನ ಹಾರಗಳು $= 110$

$n(M)$ = ಮಲ್ಲಿಗೆ ಹೂವಿನ ಹಾರಗಳು $= 50$

$n(S \cap M)$ = ಎರಡೂ ಬಗೆಯ ಹೂ ಹೊಂದಿರುವ ಹಾರಗಳು $= 30$

$\therefore n(S \cup M) = n(S) + n(M) = n(S \cap M)$

$= 110 + 50 - 30$

$= 160 - 30 = 130$

∴ ಒಟ್ಟು ಹಾರಗಳ ಸಂಖ್ಯೆ $= 130$ Ans.

ಪ್ರಶ್ನೆ 25. $x^2 - 10 = 2x$ ಎಂಬ ಸಮೀಕರಣದ ಮೂಲಗಳನ್ನು ಸೂತ್ರವನ್ನು ಉಪಯೋಗಿಸಿ ಕಂಡುಹಿಡಿಯಿರಿ.

ರೀತಿ : $x^2 - 10 = 2x$ ಅಥವಾ $x^2 - 2x - 10 = 0$

ಇಲ್ಲಿ $a = 1$, $b = -2$, $c = -10$

$$\therefore x = \frac{-b \pm \sqrt{b^2 - 4ac}}{2a}$$

$$= \frac{-(-2) \pm \sqrt{(-2)^2 - 4(1)(-10)}}{2(1)}$$

$$= \frac{2 \pm \sqrt{4 + 40}}{2} = \frac{2 \pm \sqrt{44}}{2}$$

$$= \frac{2 \pm 2\sqrt{11}}{2}$$

$$= 2(1 \pm \sqrt{11})/2 = 1 \pm \sqrt{11}$$

$\therefore x = 1 \pm \sqrt{11}$ Ans.

ಪ್ರಶ್ನೆ 26. $2x^2 + x = 5$ ಎಂಬ ಸಮೀಕರಣವನ್ನು ವರ್ಗಪೂರ್ಣಮಾಡುವುದರಿಂದ ಬಿಡಿಸಿ.

ರೀತಿ : $2x^2+x=5$ ಅಥವಾ $x^2+\frac{x}{2}=\frac{5}{2}$

ಎರಡೂ ಬದಿಗಳಿಗೆ $\frac{1}{16}$ ಕೂಡಿಸಲಾಗಿ.

$x^2+\frac{x}{2}+\frac{1}{16}=\frac{5}{2}+\frac{1}{16}$

ಅಥವಾ $\left(x+\frac{1}{4}\right)^2=\frac{40+1}{16}=\frac{41}{16}$

,, $x+\frac{1}{4}=\pm\sqrt{\frac{41}{16}}=\pm\frac{\sqrt{41}}{\sqrt{16}}=\pm\frac{\sqrt{41}}{4}$

,, $x=-\frac{1}{4}\pm\frac{\sqrt{41}}{4}=\frac{-1\pm\sqrt{41}}{4}$

,, $x=\frac{1}{4}(-1\pm\sqrt{41})$ Ans.

ಪ್ರಶ್ನೆ 27. $-2+3\sqrt{5}$ ಮತ್ತು $-2-3\sqrt{5}$ ಮೂಲಗಳನ್ನು ಹೊಂದಿರುವ ವರ್ಗ ಸಮೀಕರಣವನ್ನು ರಚಿಸಿ.

ರೀತಿ : ಮೂಲಗಳು $m=-2+3\sqrt{5}$ ಮತ್ತು $n=-2-3\sqrt{5}$ ಇರಲಿ.

ಮೂಲಗಳ ಮೊತ್ತ $m+n=-2+3\sqrt{5}+(-2-3\sqrt{5})=-2+3\sqrt{5}-2-3\sqrt{5}=-4$

ಮೂಲಗಳ ಗುಣಲಬ್ಧ $mn=(-2+3\sqrt{5})(-2-3\sqrt{5})=(-2)^2-(3\sqrt{5})^2=4-(9\times5)=4-45=-41$

$\therefore$ ಸಮೀಕರಣ $x^2-(m+n)x+mn=0$

ಅಥವಾ $x^2-(-4)x+(-41)=0.$

,, $x^2+4x-41=0.$ Ans.

ಪ್ರಶ್ನೆ 28. $P=\begin{bmatrix}2&3\\1&1\end{bmatrix}$ ಮತ್ತು $Q=\begin{bmatrix}1&0\\2&1\end{bmatrix}$ ಆದರೆ $PQ\neq QP$ ಎಂದು ತೋರಿಸಿ.

ರೀತಿ : $P=\begin{bmatrix}2&3\\1&1\end{bmatrix}$, $Q=\begin{bmatrix}1&0\\2&1\end{bmatrix}$

$\therefore P\times Q=\begin{bmatrix}2&3\\1&1\end{bmatrix}\times\begin{bmatrix}1&0\\2&1\end{bmatrix}$

$=\begin{bmatrix}2\times1+3\times2 & 2\times0+3\times1\\1\times1+1\times2 & 1\times0+1\times1\end{bmatrix}$

$=\begin{bmatrix}2+6 & 0+3\\1+2 & 0+1\end{bmatrix}=\begin{bmatrix}8&3\\3&1\end{bmatrix}$............I

$Q\times P=\begin{bmatrix}1&0\\2&1\end{bmatrix}\times\begin{bmatrix}2&3\\1&1\end{bmatrix}$

$=\begin{bmatrix}2+0 & 3+0\\4+1 & 6+1\end{bmatrix}=\begin{bmatrix}2&3\\5&7\end{bmatrix}$............II

$\therefore$ I ಮತ್ತು II ರಿಂದ $PQ\neq QP$.

ಪ್ರಶ್ನೆ 29. ಛೇದಗಳನ್ನು ಅಕರಣೀಕರಿಸಿ ಸುಲಭರೂಪಕ್ಕೆ ತನ್ನಿ. $\frac{\sqrt{a}-2\sqrt{b}}{\sqrt{a}-\sqrt{b}}$

ರೀತಿ : $\frac{\sqrt{a}-2\sqrt{b}}{\sqrt{a}-\sqrt{b}}=\frac{\sqrt{a}-2\sqrt{b}}{\sqrt{a}-\sqrt{b}}\times\frac{\sqrt{a}+\sqrt{b}}{\sqrt{a}+\sqrt{b}}$

$=\frac{(\sqrt{a}-2\sqrt{b})(\sqrt{a}+\sqrt{b})}{(\sqrt{a}-\sqrt{b})(\sqrt{a}+\sqrt{b})}$

$=\frac{(\sqrt{a})^2+\sqrt{a}\cdot\sqrt{b}-2\sqrt{a}\sqrt{b}-2(\sqrt{b})^2}{(\sqrt{a})^2-(\sqrt{b})^2}$

$=\frac{a+\sqrt{ab}-2\sqrt{ab}-2b}{a-b}=\frac{a-2b-\sqrt{ab}}{a-b}$ Ans.

ಪ್ರಶ್ನೆ 30. ಒಬ್ಬ ವ್ಯಾಪಾರಸ್ಥನು ರೂ. 450 ನಗದು ಬೆಲೆಯ ಟೇಬಲ್ ಫ್ಯಾನನ್ನು ರೂ. 105 ನಗದು ಕೊಟ್ಟು, ಮತ್ತೆ ಪ್ರತಿ ತಿಂಗಳಿಗೆ ರೂ. 60.60 ರಂತೆ 6 ಕಂತುಗಳಲ್ಲಿ ಮುಟ್ಟಿಸುವ ಕರಾರಿನಂತೆ ಕೊಡುತ್ತಾನೆ. ಅವನು ಪಡೆಯುವ ಬಡ್ಡಿಯ ದರವನ್ನು ಕಂಡು ಹಿಡಿಯಿರಿ.

ರೀತಿ : ಫ್ಯಾನಿನ ನಗದು ಬೆಲೆ = 450 ರೂ.

ಪ್ರಾರಂಭದಲ್ಲಿ ಕೊಡಬೇಕಾದ ಹಣ = 105 ರೂ.

ಕಂತುಗಳಿಂದ ಕೊಡಬೇಕಾದ ಹಣ $=6\times60=360$ ರೂ.

ಕಂತಿನಿಂದ ಕೊಂಡಾಗ ಫ್ಯಾನಿನ ಬೆಲೆ

$=(105+360)=465$ ರೂ.

$\therefore$ ಕೊಡಬೇಕಾದ ಬಡ್ಡಿ $=(465-450)=15$ ರೂ.

1ನೇ ತಿಂಗಳ ಬಡ್ಡಿಗೆ ಪಾತ್ರವಾದ ಹಣ 345 ರೂ.—(450–105)

| | | | | | |
|---|---|---|---|---|---|
| 2ನೇ | ,, | ,, | ,, | ,, | =285 ರೂ. |
| 3ನೇ | ,, | ,, | ,, | ,, | =225 ರೂ. |
| 4ನೇ | ,, | ,, | ,, | ,, | =165 ರೂ. |
| 5ನೇ | ,, | ,, | ,, | ,, | =105 ರೂ. |
| 6ನೇ | ,, | ,, | ,, | ,, | = 45 ರೂ. |

$\therefore$ ಒಟ್ಟು =1170 ರೂ.

$\therefore$ 1170 ರೂ.ಗಳ ಒಂದು ತಿಂಗಳ ಬಡ್ಡಿ = 15 ರೂ.

$\therefore$ 100 ರೂ ಗಳ ಒಂದು ತಿಂಗಳ ಬಡ್ಡಿ

$=\frac{15\times100}{1170}$ ರೂ.

$\therefore$ 100 ರೂ.ಗಳ 12 ತಿಂಗಳ ಬಡ್ಡಿ

$$=\frac{15\times100\times12}{1170}=\frac{200}{13}$$

$\therefore$ ಬಡ್ಡಿಯ ದರ.........=15.38% Ans.

ಪ್ರಶ್ನೆ 31. $ax^2+bx+c=0$ ಆದರೆ.

$x=\dfrac{-b\pm\sqrt{b^2-4ac}}{2a}$ ಎಂದು ಸಾಧಿಸಿ.

ರೀತಿ : $ax^2+bx+c=0$

ಅಥವಾ $x^2+\frac{b}{a}x+\frac{c}{a}=0$

,, $x^2+\frac{b}{a}x=-\frac{c}{a}$

ಎರಡೂ ಬದಿಗಳಿಗೆ $\frac{b^2}{4a^2}$ ಕೂಡಿಸಲಾಗಿ

$$x^2+\frac{b}{a}x+\frac{b^2}{4a^2}=\frac{b^2}{4a^2}-\frac{c}{a}$$

ಅಥವಾ $\left(x+\frac{b}{2a}\right)^2=\frac{b^2-4ac}{4a^2}$

,, $x+\frac{b}{2a}=\pm\frac{\sqrt{b^2-4ac}}{4a^2}$

$$=\frac{\pm\sqrt{b^2-4ac}}{2a}$$

,, $x=-\frac{b}{2a}\pm\frac{\sqrt{b^2-4ac}}{2a}$

$$=\frac{-b\pm\sqrt{b^2-4ac}}{2a}$$

$\therefore$ $x=\dfrac{-b\pm\sqrt{b^2-4ac}}{2a}$

ಪ್ರಶ್ನೆ 32. $y=x^2$ ನಕ್ಷೆಯನ್ನು ಎಳೆಯಿರಿ. ಅದರ ಸಹಾಯದಿಂದ $\sqrt{7}$ ರ ಬೆಲೆಯನ್ನು ಕಂಡು ಹಿಡಿಯಿರಿ.

ರೀತಿ : $y=x^2$

| x | 1 | 2 | 3 | 0 | −1 | −2 | −3 |
|---|---|---|---|---|---|---|---|
| y | 1 | 4 | 9 | 0 | 1 | 4 | 9 |

ಸ್ಕೇಲು 2 ಸೆಂ.ಮೀ.=1 ಮಾನ X ಅಕ್ಷದಗುಂಟ
1 ಸೆಂ.ಮೀ.=1 ಮಾನ Y-ಅಕ್ಷದಗುಂಟ.



$y=x^2$ ದ ರೇಖಾ ಚಿತ್ರ ಪರವಲಯವಿದೆ.

$y=\sqrt{7}$ ಇರಲಿ. $\therefore$ $x^2=(\sqrt{7})^2=7$.

$\therefore$ $y=x^2=7$

Y ಅಕ್ಷದ ಗುಂಟ 7 ಮಾನ ಗುರುತಿಸಿ, ಅಲ್ಲಿಂದ X-ಅಕ್ಷಕ್ಕೆ ಸಮಾನಾಂತ ಸರಳರೇಖೆ ಎಳೆಯಿರಿ. ಅದು ಪರವಲಯವನ್ನು A, B ಗಳಲ್ಲಿ ಛೇದಿಸಲಿ. A ಮತ್ತು B ಗಳಿಂದ X-ಅಕ್ಷಕ್ಕೆ ಲಂಬ ಎಳೆಯಿರಿ. ಈ ಲಂಬಗಳ ಪಾದಗಳು $\sqrt{7}$ ದ ಬೆಲೆ ಸೂಚಿಸುತ್ತವೆ.

$\therefore$ ನಕ್ಷೆಯ ಕ್ರಮದಿಂದ $\sqrt{7}=2.7$ ಇರುತ್ತದೆ.

ಪ್ರಶ್ನೆ 33. ಈ ಕೆಳಗಿನ ದತ್ತಾಂಶಗಳನ್ನು ಉಪಯೋಗಿಸಿ ಕೊಂಡು ಮಾನಕ ವಿಚಲನೆಯನ್ನು ಕಂಡು ಹಿಡಿಯಿರಿ.

| ಪಡೆದ ಅಂಕ | ಆವರ್ತ (ವಿದ್ಯಾರ್ಥಿಗಳ ಸಂಖ್ಯೆ) |
|---|---|
| 16—20 | 5 |
| 21—25 | 10 |
| 26—30 | 2 |
| 31—35 | 2 |
| 36—40 | 1 |

ರೀತಿ :

| ವರ್ಗ | ಮಧ್ಯ ಬಿಂದು $x$ | ಆವರ್ತ $f$ | ಗುಣ ಲಬ್ಧ $fx$ | ಸರಾಸರಿ ಯಿಂದ ವಿಚಲನೆ $d$ | $d^2$ | $fd$ |
|---|---|---|---|---|---|---|
| 16-20 | 18 | 5 | 90 | −6 | 36 | 180 |
| 21-25 | 23 | 10 | 230 | −1 | 1 | 10 |
| 26-30 | 28 | 2 | 56 | 4 | 16 | 32 |
| 31-35 | 33 | 2 | 66 | 9 | 81 | 162 |
| 36-40 | 38 | 1 | 38 | 14 | 196 | 196 |

$N=20, \Sigma fx=480$ $\Sigma fd^2=580$

∴ ಸರಾಸರಿ $M=\frac{\Sigma fx}{N}=\frac{480}{20}=24$

∴ ಮಾನಕ ವಿಚಲನೆ $\sigma=\sqrt{\frac{\Sigma fx}{N}}=\sqrt{\frac{580}{20}}$

$=\sqrt{29}=5.38$ Ans.

**ಪ್ರಶ್ನೆ 34.** ಒಂದು ಆಯತಾಕಾರದ ಮೈದಾನದ ಉದ್ದವು ಅಗಲಕ್ಕಿಂತ 10 ಮೀಟರುಗಳು ಹೆಚ್ಚಾಗಿದ್ದರೆ ಮತ್ತು ಅದರ ವಿಸ್ತೀರ್ಣವು 875 ಚ.ಮೀಟರು ಗಳಿದ್ದರೆ, ಆ ಮೈದಾನದ ಉದ್ದ ಅಗಲಗಳನ್ನು ಕಂಡುಹಿಡಿಯಿರಿ.

**ರೀತಿ :** ಆಯತಾಕಾರದ ಮೈದಾನದ ಅಗಲ=$x$ ಮೀ. ಎಂದು ಕಲ್ಪಿಸಿ.

∴ ಮೈದಾನದ ಉದ್ದ=$(x+10)$ ಮೀ.

ಸಮಸ್ಯೆಯ ಪ್ರಕಾರ

$x(x+10)=875$

ಅಥವಾ $x^2+10x-875=0$

,, $x^2+35x-25x-875=0$

,, $x(x+35)-25(x+35)=0$

,, $(x+35)(x-25)=0$

$x+35=0$ ಇದ್ದರೆ $x=-35$ (ಕೈಬಿಡಲಾಗಿದೆ).

$x-25=0$ ,, $x=25$

∴ ಮೈದಾನದ ಅಗಲ=25 ಮೀ. Ans.

ಮೈದಾನದ ಉದ್ದ=$x+10=(25+10)$ಮೀ.
=35 ಮೀ. Ans.

**ಪ್ರಶ್ನೆ 35.** $Z_6$ + ಮಾಡ್ 6 ಸಮುದಾಯವೆಂದು ತೋರಿಸಿ.

**ರೀತಿ :** $Z_6=\{0, 1, 2, 3, 4, 5\}$ ಆಗಿರಲಿ.

| $Z_6$ | 0 | 1 | 2 | 3 | 4 | 5 |
|---|---|---|---|---|---|---|
| 0 | 0 | 1 | 2 | 3 | 4 | 5 |
| 1 | 1 | 2 | 3 | 4 | 5 | 0 |
| 2 | 2 | 3 | 4 | 5 | 0 | 1 |
| 3 | 3 | 4 | 5 | 0 | 1 | 2 |
| 4 | 4 | 5 | 0 | 1 | 2 | 3 |
| 5 | 5 | | 1 | 2 | 3 | 4 |

i) $1+2=3\in Z_6$

$4+4=2\in Z_6$

$5+5=4\in Z_6$

∴ $\forall\ a,b\in Z_6\ (a+b)\in Z_6$.

∴ $Z_6$ + ಮಾಡ್ 6 ಆವೃತವಾಗಿದೆ.

ii) $(1+2)+5=3+5=2\in Z_6$.

$1+(2+5)=1+7=2\in Z_6$.

∴ $(1+2)+5=1+(2+5)$

∴ $\forall\ a,b,c\in Z_6\ (a+b)+c=a+(b+c)$

∴ $Z_6$ + ಮಾಡ್ 6 ಸಹವರ್ತನೀಯ ಗುಣವನ್ನು ಹೊಂದಿದೆ.

iii) $0\in Z_6$, $2+0=0+2=2$

$4+0=0+4=4$

∴ $\forall a\in Z_6\ \exists\ e\in Z_6\ (a+e=e+a=a)$

∴ $Z_6$+ಮಾಡ್6 ಅನನ್ಯತಾಂಶ ಗುಣವನ್ನು ಹೊಂದಿದೆ.

iv)

| ಸಂಖ್ಯೆ | ವಿಲೋಮ | ಕಾರಣ |
|---|---|---|
| $a$ | $a^{-1}$ | $a+a^{-1}=0$ |
| 0 | 0 | $0+0=0$ |
| 1 | 5 | $1+5=0$ |
| 2 | 4 | $2+4=0$ |
| 3 | 3 | $3+3=0$ |
| 4 | 2 | $4+2=0$ |
| 5 | 1 | $5+1=0$ |

∴ $\forall a\in Z_6\ \exists a^{-1}\ Z_6/a+a^{-1}=e$

∴ $Z_6$+ ಮಾಡ್ 6 ವಿಲೋಮಾಂಶ ಗುಣವನ್ನು ಹೊಂದಿದೆ.

∴ $Z_6$ + ಮಾಡ್ 6 ಒಂದು ಸಮುದಾಯವಾಗಿದೆ.

....●....

# ಗಣಿತ

## ಎಪ್ರೀಲ್-1985 2 ನೆಯ ಪತ್ರಿಕೆ

### ರೇಖಾಗಣಿತ

ವೇಳೆ : 2 ಗಂಟೆ) (ಅಧಿಕ ಗುಣಗಳು 35

**ಪ್ರಶ್ನೆ 1** AB ಮತ್ತು CD ಸಮಾಂತರ ರೇಖೆಗಳು, EF ಅವುಗಳನ್ನು G ಮತ್ತು H ಬಿಂದುಗಳಲ್ಲಿ ಛೇದಿಸುತ್ತದೆ. $\angle GHD = 80^\circ$ ಆದರೆ $\angle AGE$ ಅಳತೆಯೆಷ್ಟು ?




ದತ್ತ : $AB // CD$, $\angle GHD = 80^\circ$

ಕಂಡುಹಿಡಿಯುವುದು : $\angle AGE$

ರೀತಿ : $\angle BGH = 180^\circ - \angle GHD$. ....(ಅಂತರ $\angle$ಗಳು)

$= 180^\circ - 80^\circ = 100^\circ$.

ಆದರೆ $\angle BGH = \angle AGE = 100^\circ$............ (ಶೃಂಗಾಭಿಮುಖ $\angle$ಗಳು)

**ಪ್ರಶ್ನೆ 2.** $ABC\triangle$ ದಲ್ಲಿ $AB = AC$, $\angle A = 90^\circ$ ಆದರೆ $\angle B$ದ ಅಳತೆಯೆಷ್ಟು ?

ದತ್ತ : $AB = AC$,

$\angle A \; 90^\circ$

ಕಂಡುಹಿಡಿಯುವದು : $\angle B$ದ ಅಳತೆ.




ರೀತಿ : $ABC\triangle$ ಮತ್ತು $AB = AC$ ಮತ್ತು $\angle A = 90^\circ$........(ದತ್ತ)

$\therefore \; \angle B = \angle C = \frac{90^\circ}{2} = 45^\circ$. $\therefore \; \angle B = 45^\circ$.

**ಪ್ರಶ್ನೆ 3.** ಒಂದು ಸಮಾಂತರ ಚತುರ್ಭುಜದ ವಿಸ್ತೀರ್ಣ 40 ಚ.ಸೆಂ.ಮೀ. ಆದರ ಪಾದ 10 ಸೆಂ. ಮೀ. ಆದರೆ ಆದರ ಎತ್ತರ$=\frac{40}{10}=4$ ಸೆಂ.ಮೀ.

**ಪ್ರಶ್ನೆ 4.** ಗೋಳದ ಹೊರಮೈ ಕ್ಷೇತ್ರಫಲವನ್ನು ಕಂಡು ಹಿಡಿಯುವ ಸೂತ್ರ $4\pi r^2$.

**ಪ್ರಶ್ನೆ 5.** ಒಂದು ಆಯತದ ಸುತ್ತಳತೆ=26 ಸೆಂ.ಮೀ. ಆದರ ಉದ್ದ 8 ಸೆಂ.ಮೀ. ಆದರೆ ಅದರ ಅಗಲ ಎಷ್ಟು ?

ರೀತಿ : ಆಯತದ ಸುತ್ತಳತೆ=2 (ಉದ್ದ + ಅಗಲ)

ಅಥವಾ ಉದ್ದ + ಅಗಲ $= \frac{\text{ಸುತ್ತಳತೆ}}{2} = \frac{26}{2}$

$= 13$ ಸೆಂ.ಮೀ.

,, ಅಗಲ=13—ಉದ್ದ=13—8

=5 ಸೆಂ.ಮೀ. Ans.

**ಪ್ರಶ್ನೆ 6.** ABCD ಚಕ್ರೀಯ ಚತುರ್ಭುಜದಲ್ಲಿ $\angle AOC = 150^\circ$ ಆದರ $\angle D$ದ ಅಳತೆ ಎಷ್ಟು ?

ದತ್ತ : $\angle AOC = 150^\circ$.

ಕಂಡುಹಿಡಿಯುವುದು : $\angle D$ದ ಅಳತೆ




ರೀತಿ : $\angle B = \frac{1}{2} \angle AOC = \frac{1}{2} \times 150^\circ = 75^\circ$ ..........(ಕೇಂದ್ರ $\angle$, ಪರಿಧಿ $\angle$)

ಇನ್ನು ABCD ಚಕ್ರೀಯ ಚತುರ್ಭುಜದಲ್ಲಿ $\angle B + \angle D = 180^\circ$ ಅಥವಾ $\angle D = 180^\circ - \angle B = 180^\circ - 75^\circ = 105^\circ$.

$\therefore \; \angle D = 105^\circ$.

**ಪ್ರಶ್ನೆ 7.** ಒಂದು ಸರಳ ಸಮಭುಜಾಕೃತಿಯ ಪ್ರತಿ ಹೊರ ಕ್ನೊನವು $45^\circ$ ಇದ್ದರೆ, ಅದರ ಭುಜಗಳ ಸಂಖ್ಯೆ ಎಷ್ಟು ?

ರೀತಿ : ಬಹುಭುಜಾಕೃತಿಯ ಭುಜಗಳ ಸಂಖ್ಯೆ

$= \frac{360^\circ}{\text{ಹೊರಕೋನ}} = \frac{360^\circ}{45} = 8$

$\therefore$ ಭುಜಗಳ ಸಂಖ್ಯೆ $= 8$. Ans.

**ಪ್ರಶ್ನೆ 8.** ಎರಡೂ ಲಂಬ ಸಮತಲಗಳ ಛೇದನವು ಲಂಬರೇಖೆ ಯಾಗಿರುತ್ತದೆ.

**ಪ್ರಶ್ನೆ 9.** ಒಂದು ಪಟ್ಟಕದಲ್ಲಿ ಎಷ್ಟು ಜೊತೆ ಸಮಾಂತಲ ಸಮತಲಗಳಿರುತ್ತವೆ.

**ಪ್ರಶ್ನೆ 10.** ಲಂಬಕೋನ ತ್ರಿಭುಜದಲ್ಲಿ ಪರಿಕೇಂದ್ರವು ವಿಕರ್ಣದ ಮಧ್ಯಬಿಂದುವಿನಲ್ಲಿರುತ್ತದೆ.

**ಪ್ರಶ್ನೆ 11.** ABCD ತ್ರಾಪಿಜ್ಯದಲ್ಲಿ AB//CD, AB $=17$ ಸೆಂ.ಮೀ. $CD=13$ ಸೆಂ.ಮೀ. ಮತ್ತು ಅದರ ವಿಸ್ತೀರ್ಣ 150 ಚ.ಸೆಂ.ಮೀ. ಆದರೆ ಅದರ ಎತ್ತರವನ್ನು ಕಂಡುಹಿಡಿಯಿರಿ.

**ರೀತಿ :** ತ್ರಾಪಿಜ್ಯದ ವಿಸ್ತೀರ್ಣ $=\frac{1}{2}(AB+CD)$ ಎತ್ತರ.
ಅಥವಾ $(AB+CD)\times$ ಎತ್ತರ $=2\times$ ವಿಸ್ತೀರ್ಣ
$(17+13)\times$ ಎತ್ತರ $=2\times 150$
,, $30\times$ ಎತ್ತರ $=2\times 150$
ಎತ್ತರ $=\frac{2\times 150}{30}=10$. ಸೆಂ.ಮೀ. Ans.

**ಪ್ರಶ್ನೆ 12.** 8 ಸೆಂ.ಮೀ. ಉದ್ದವುಳ್ಳ ಜ್ಯಾವು ವೃತ್ತಕೇಂದ್ರದಿಂದ 3 ಸೆಂ.ಮೀ. ದೂರದಲ್ಲಿದ್ದರೆ. ಆ ವೃತ್ತದ ತ್ರಿಜ್ಯವನ್ನು ಲೆಕ್ಕಾಚಾರದಿಂದ ಕಂಡುಹಿಡಿಯಿರಿ.

**ರೀತಿ :** ಜ್ಯಾದ ಉದ್ದ $2l=8$ ಸೆಂ.ಮೀ.. $\therefore l=\frac{8}{2}$ ಸೆಂ.ಮಿ.
ಕೇಂದ್ರದಿಂದ ಜ್ಯಾದ ದೂರ $d=3$ ಸೆಂ.ಮೀ.
ಇನ್ನು ವೃತ್ತದ ತ್ರಿಜ್ಯ $r$ ಇದ್ದರೆ
$r^2=l^2d^2=(4)^2+(3)^2=16+9=25$
$\therefore r=\sqrt{25}=5$ ಸೆಂ.ಮೀ.
$\therefore$ ತ್ರಿಜ್ಯ $=5$ ಸೆಂ.ಮೀ. Ans.

**ಪ್ರಶ್ನೆ 13.** ಲಘುಕೋನ ತ್ರಿಭುಜದಲ್ಲಿ ಲಘುಕೋನ ಅಭಿಮುಖ ಬಾಹುವಿನ ಮೇಲಿನ ವರ್ಗವು ಉಳಿದೆರಡು ಬಾಹುಗಳ ಮೇಲಿನ ವರ್ಗಗಳ ಮೊತ್ತಕ್ಕಿಂತ, ಅವುಗಳಲ್ಲಿ ಒಂದು ಬಾಹು ಮತ್ತು ಅದರ ಮೇಲೆ ಇನ್ನೊಂದರ ಪ್ರಕ್ಷೇಪಗಳಿಂದುಂಟಾದ ಆಯತದ ಎರಡರಷ್ಟು ಕಡಿಮೆ ಇರುತ್ತದೆ ಎಂದು ಸಾಧಿಸಿ.



ಆಕೃತಿ 1

**ದತ್ತ :** ABC $\triangle$ ದಲ್ಲಿ $\angle B$ ಲಘುಕೋನವಿದೆ. $AD\perp BC$ ಇಲ್ಲವೆ BC ವೃದ್ಧಿಸಿದ್ದರ ಮೇಲೆ, BD ಇದು BC ದ ಮೇಲೆ, ಇಲ್ಲವೇ BC ವೃದ್ಧಿಸಿದ್ದರ ಮೇಲೆ AB ಯ ಪ್ರಕ್ಷೇಪವದೆ.



ಆಕೃತಿ 2

**ಸಾಧನೀಯ :** $AC^2=AB^2+BC^2-2BC\ BD.$

**ಸಾಧನೆ :** ACD $\triangle$ ದಲ್ಲಿ $\angle ADC=90°$
$\therefore AC^2=AD^2+CD^2$
ಆಕೃತಿ 1 ರಲ್ಲಿ $CD=BC-BD$
$\therefore CD^2=(BC-BD)^2=BC^2-2BC\ BD+BD^2$
ಆಕೃತಿ 2 ರಲ್ಲಿ $CD=BD-BC$
$\therefore CD^2=(BD-BC)^2=BD^2-2BD\ BC+BC^2$
$\therefore$ ಎರಡೂ ಆಕೃತಿಯಲ್ಲಿ
$AC^2=AD^2+BC^2-2BC.\ BD+BD^2$
$=BC^2-2BC.\ BD+BD^2+AD^2$
ಆದರೆ $BD^2+AD^2=AB^2$..........
$(\angle ADB=90°)$ $\therefore AC^2=BC^2-2BC.\ BD+AB^2$
ಅಥವಾ $AC^2=AB^2+BC^2-2BC.\ BD.$

**ಪ್ರಶ್ನೆ 14.** 6 ಸೆಂ.ಮೀ. ಭುಜವುಳ್ಳ ಸಮ.ಬಾಹು ತ್ರಿಭುಜ ರಚಿಸಿ, ಗುರುತ್ವ ಕೇಂದ್ರವನ್ನು ಕಂಡು ಹಿಡಿಯಿರಿ.

**ರೀತಿ :** BE,CF ಮಧ್ಯ ರೇಖೆಗಳು G ಗುರುತ್ವ ಕೇಂದ್ರ.




**ಪ್ರಶ್ನೆ 15.** ಸ್ಪರ್ಶ ಬಿಂದುವಿನ ಮೂಲಕ ಸ್ಪರ್ಶರೇಖೆಗೆ ಎಳೆದ ಲಂಬವು ವೃತ್ತಕೇಂದ್ರದ ಮೂಲಕ ಹಾದುಹೋಗುತ್ತದೆ. ಎಂದು ಸಾಧಿಸಿ.

**ದತ್ತ :** O ಕೇಂದ್ರದ ವೃತ್ತಕ್ಕೆ AB ಸ್ಪರ್ಶಕವಿದ್ದು P ಸ್ಪರ್ಶ ಬಿಂದುವದೆ. $PQ\perp AB.$

**ಸಾಧನೀಯ :** PQ ಇದು ವೃತ್ತ ಕೇಂದ್ರ O ದಲ್ಲಿ ಹಾಯುತ್ತದೆ.



ಸಾಧನೆ : PQ ಲಂಬವು O ಕೇಂದ್ರದ ಮೂಲಕ ಹಾಯ ದಿದ್ದರೆ, O,PQ ದ ಹೊರಗೆ ಇರುತ್ತದೆ, OP ಸೇರಿಸಿ. ಇನ್ನು O ಕೇಂದ್ರವಿದ್ದು P ಸ್ಪರ್ಶ ಬಿಂದು ವದೆ. ∴ $OP \perp AB$.

ಆದರೆ $PQ \perp AB$........(ದತ್ತ).

OP ಮತ್ತು PQಗಳು P ಒಂದೇ ಬಿಂದುವಿನಲ್ಲಿ ABದ ಒಂದೇ ಬದಿಗೆ AB ಗೆ ಲಂಬವಿದುತ್ತದೆ. ಇದು ಅಶಕ್ಯವದೆ. ಯಾಕೆಂದರೆ, ಒಂದು ಸರಳ ರೇಖೆಗೆ ಅದರಲ್ಲಿಯ ಒಂದು ಬಿಂದುವಿನಲ್ಲಿ ಅದರ ಒಂದೇ ಬದಿಗೆ ಒಂದೇ ಒಂದು ಲಂಬವನ್ನು ಎಳೆಯಲು ಬರುವುದು.

∴ OP ಮತ್ತು PQ ಗಳು ಪರಸ್ಪರ ಹೊಂದಿಕೊಳ್ಳುತ್ತವೆ.

∴ PQ ಲಂಬವು ವೃತ್ತಕೇಂದ್ರ O ದ ಮೂಲಕ ಹಾಯುವುದಿಲ್ಲ ಎನ್ನುವುದು ತಪ್ಪು.

∴ PQ ಲಂಬವು ವೃತ್ತಕೇಂದ್ರ Oದ ಮೂಲಕ ಹಾಯುತ್ತದೆ.

ಪ್ರಶ್ನೆ 16. AB,BC ಮತ್ತು CDಗಳು ಒಂದು ವೃತ್ತಕ್ಕೆ ಎಳೆದ ಸ್ಪರ್ಶಕಗಳು. AB=2 ಸೆಂ.ಮೀ. CD =3 ಸೆಂ ಮೀ. ಆದರೆ BC ಯ ಅಳತೆ ಎಷ್ಟು ?




ದತ್ತ : AB =2 ಸೆಂ.ಮೀ.
CD 3 ಸೆಂ.ಮೀ.

ಕಂಡುಹಿಡಿಯುವುದು :
BC ಸ್ಪರ್ಶಕದ ಉದ್ದ

ರೀತಿ : BP=AB....I

(ಬಾಹ್ಯಬಿಂದುವಿನಿಂದ ಸ್ಪರ್ಶಕಗಳು)

CP=CD......II ( ,, ,, )

I, II ಕೂಡಿಸಲಾಗಿ BP+CP=AB+CD

ಅಥವಾ CB=2+3=5 ಸೆಂ.ಮೀ.

∴ BC 5 ಸೆಂ.ಮೀ. Ans.

ಪ್ರಶ್ನೆ 17. ACB ಎಂಬ ಒಂದು ವೃತ್ತದ ಸ್ಪರ್ಶಕವು C ಬಿಂದುವಿನಲ್ಲಿ ಸ್ಪರ್ಶಿಸುತ್ತದೆ CD, DE CE ಜ್ಯಾಗಳು, $\angle ACD = 40^\circ$ $\angle D = 70^\circ$ ಆದರೆ ಉಳಿದ ಕೋನಗಳ ಅಳತೆಗಳನ್ನು ಕಂಡು ಹಿಡಿಯಿರಿ.

ಉತ್ತರಕ್ಕೆ ಆಕ್ಟೋಬರ 1984 ರ ಪ್ರಶ್ನೆ 15 ನೋಡಿ.

ಪ್ರಶ್ನೆ 18. 4 ಸೆಂ.ಮೀ. ಮತ್ತು 5 ಸೆಂ.ಮೀ. ತ್ರಿಜ್ಯಗಳುಳ್ಳ ಎರಡು ವೃತ್ತಗಳ ಕೇಂದ್ರಗಳು ಪರಸ್ಪರ 12 ಸೆಂ. ಮೀ. ದೂರದಲ್ಲಿವೆ. ಆ ವೃತ್ತಗಳ ಕೇಂದ್ರಗಳು ಪರಸ್ಪರ 12 ಸೆಂ.ಮೀ. ದೂರದಲ್ಲಿವೆ. ಆ ವೃತ್ತಗಳಿಗೆ ವ್ಯತ್ಯಸ್ತ ಸಾಮಾನ್ಯ ಸ್ಪರ್ಶಕಗಳನ್ನೆಳೆಯಿರಿ. ಉತ್ತರಕ್ಕೆ ಆಕ್ಟೋಬರ 1984 ರ ಪ್ರಶ್ನೆ 18 ನೋಡಿ.

ಪ್ರಶ್ನೆ 19. ಯೂಲರನ ಸೂತ್ರ N+R=A+2 ನ್ನು ಪಕ್ಕದ ಚಿತ್ರದಿಂದ ತಾಳೆ ನೋಡಿ.

ರೀತಿ :



ಚಿತ್ರದಲ್ಲಿ N=ಸಂಪಾತ ಬಿಂದು= 5

R=ವಲಯಗಳು = 3

A = ಕಂಸಗಳು.... = 6

∴ ಯೂರಲನ ಸೂತ್ರ N+R=A+2

5+3=6+2

ಅಥವಾ 8=8

ಪ್ರಶ್ನೆ 20. ಪಕ್ಕದ ಚಿತ್ರದ ಸಂಖ್ಯಾಯುತ ತಯಾರಿಸಿ.

ರೀತಿ :

| | A | B | C | D |
|---|---|---|---|---|
| A | 0 | 1 | 0 | 1 |
| B | 1 | 0 | 1 | 1 |
| C | 0 | 1 | 0 | 1 |
| D | 1 | 1 | 1 | 0 |

$$\begin{vmatrix} 0 & 1 & 0 & 1 \\ 1 & 0 & 1 & 1 \\ 0 & 1 & 0 & 1 \\ 1 & 1 & 1 & 1 \end{vmatrix}$$




....●....

# ಗಣಿತ

## ಅಕ್ಟೋಬರ–1985 1 ನೆಯ ಪತ್ರಿಕೆ

## (ಅಂಕಗಣಿತ–ಬೀಜಗಣಿತ)

ವೇಳೆ : $2\frac{1}{2}$ ಗಂಟೆ) (ಅಧಿಕ ಗುಣಗಳು : 65

**ಪ್ರಶ್ನೆ 1.** 1980 ನ್ನು ರೋಮನ್ ಅಂಕೆಗಳಲ್ಲಿ ಬರೆಯಿರಿ.

**ಉತ್ತರ :** 1980=MCMLXXX Ans.

**ಪ್ರಶ್ನೆ 2.** $\frac{1}{8}$ ಕ್ಕೆ ಎಷ್ಟನ್ನು ಕೂಡಿಸಿದರೆ, $\frac{1}{2}$ ಕ್ಕೆ ಸಮವಾಗುವುದು ?

**ರೀತಿ :** $\frac{1}{2}-\frac{1}{8}=\frac{4-1}{8}=\frac{3}{8}$

∴ $\frac{3}{8}$ ನ್ನು ಕೂಡಬೇಕು Ans.

**ಪ್ರಶ್ನೆ 3.** ಯಾವ ಕನಿಷ್ಠ ಸಂಖ್ಯೆಯಿಂದ 5400 ನ್ನು ಗುಣಿಸಿದರೆ, ಅದು ಪೂರ್ಣ ಘನವಾಗುವದು ?

**ರೀತಿ :**

| | |
|---|---|
| 2 | 5400 |
| 2 | 2700 |
| 2 | 1350 |
| 3 | 675 |
| 3 | 225 |
| 3 | 75 |
| 5 | 25 |
| 5 | 5 |
| | 1 |

∴ $5400=2^3\times3^3\times5^2$

∴ 5400 ನ್ನು 5 ರಿಂದ ಗುಣಿಸಿದರೆ ಅದು ಪೂರ್ಣ ಘನವಾಗುವುದು. Ans.

**ಪ್ರಶ್ನೆ 4.** $log\frac{1}{1000}=-3$ ಎಂದು ತೋರಿಸಿ.

**ರೀತಿ :** $log\frac{1}{1000}=log\frac{1}{10^3}=log10^{-3}$

$=-3\ log\ 10=-3\times1=-3.$

∴ $log\frac{1}{1000}=-3$

**ಪ್ರಶ್ನೆ 5.** $a:b=2:3$ ಮತ್ತು $b:c=5:7$, ಆದರೆ $a:b:c$ ಯ ಬೆಲೆ ಏನು ?

**ರೀತಿ :** $a:b=2:3$ ಅಥವಾ $a:b=(2:3)\times5$
$=10:15$........I

$b:c=5:7$ ,, $b:c=(5:7)\times3$
$=15:21$........II

I ಮತ್ತು II ರಿಂದ $a:b:c=10:15:21.$ Ans.

**ಪ್ರಶ್ನೆ 6.** $101011_{(2)}$ ಮತ್ತು $10100_{(2)}$ ಕೂಡಿ.

**ರೀತಿ :** 101011

$111111_{(2)}$ Ans.

**ಪ್ರಶ್ನೆ 7.** ಒಬ್ಬ ಮನುಷ್ಯನು ಸ್ವಿಟ್ಜರ್‌ಲ್ಯಾಂಡ್‌ನಿಂದ ಭಾರತದಲ್ಲಿರುವಳ ವನ ಸ್ನೇಹಿತನಿಗೆ ಒಂದು ಕೈಗಡಿಯಾರವನ್ನು ಕಾಣಿಕೆಯಾಗಿ ಕಳುಹಿಸುತ್ತಾನೆ. ಅದರ ಬೆಲೆ ಸ್ವಿಟ್ಜರ್‌ಲ್ಯಾಂಡಿನಲ್ಲಿ 95 ಸ್ವಿಸ್ ಫ್ರಾಂಕುಗಳಾದರೆ, ಭಾರತದಲ್ಲಿ ಅದರ ಬೆಲೆಯನ್ನು ರೂಪಾಯಿಗಳಲ್ಲಿ ಕಂಡು ಹಿಡಿಯಿರಿ.

(ಒಂದು ಸ್ವಿಸ್ ಫ್ರಾಂಕು=ರೂ. 3.10)

**ರೀತಿ :** ಭಾರತದಲ್ಲಿ ಸ್ವಿಸ್ ಕೈಗಡಿಯಾರದ ಬೆಲೆ

$=(95\times3.10)$ ರೂ. $=294.50$ ರೂ.Ans.

**ಪ್ರಶ್ನೆ 8.** ವಿಸ್ತರಿಸಿ : $(3x-y+2Z)^2$

**ರೀತಿ :** $(3x-y+2Z)^2$

$=(3x)^2+(-y)^2+(2Z)^2$
$+2(3x)(-y)+2(-y)(2Z)+$
$(2.2Z)(3x)$

$=9x^2+y^2 4Z^2-6xy-4yZ+12Zx$ Ans.

**ಪ್ರಶ್ನೆ 9.** $\theta\ (a)=2a^3-3a^2+2c-4$ ಆದರೆ $\theta\ (-\frac{1}{2})$ ನ ಬೆಲೆಯನ್ನು ಕಂಡುಹಿಡಿಯಿರಿ.

**ರೀತಿ :** $\theta(a)=2a^3-3a^2+a2-4$

∴ $\theta(-\frac{1}{2})=2(-\frac{1}{2})^3-3(-\frac{1}{2})^2+2(-\frac{1}{2})-4$

$=2(-\frac{1}{8})-3(\frac{1}{4})-1-4$

$=-\frac{1}{4}-\frac{3}{4}-1-4=-\ 6$ Ans.

**ಪ್ರಶ್ನೆ 10.** ಕೆಳಗಿನ ಹೇಳಿಕೆಯಿನ್ನು ಸಮೀಕರಣ ರೂಪದಲ್ಲಿ ಬರೆಯಿರಿ.

$y^2$ ಮತ್ತು $Z$ಗಳಿಗೇ ತಕ್ಕಂತೆ $x$ ಜಂಟಿಯಾಗಿ ಮಾರ್ಪಡುವದು.

**ರೀತಿ :** $\propto y^2Z$ ಅಥವಾ $x=ky^2Z$ Ans. $k$=ಸ್ಥಿರಾಂಕ

**ಪ್ರಶ್ನೆ 11.** $3x-9$, $5x^2-45$ ರ, ಮ.ಸಾ.ಅ. ಕಂಡು ಹಿಡಿಯಿರಿ.

**ರೀತಿ :** $3x-9=3\ (x-3)$........I

$5x^2-45=5(x^2-9)=5(x-3(x+3)$
............II

∴ I ಮತ್ತು IIರಿಂದ ಮ.ಸಾ.ಅ. $=x-3$.Ans.

**ಪ್ರಶ್ನೆ 12.** $a^3+8$ ಮತ್ತು $a^2-4$ ರ ಲ.ಸಾ.ಅ. ಕಂಡು ಹಿಡಿಯಿರಿ.

ರೀತಿ : $a^3+8=(a+2)(a^2-2a+4)$........I

$a^2-4=(a+2)(a-2)$..............II

$\therefore$ I ಮತ್ತು II ರಿಂದ ಲ.ಸಾ.ಅ.

$=(a+2)(a-2)(a^2-2a+4)$ Ans.

ಪ್ರಶ್ನೆ 13. ರೂ. 650 ಕ್ಕೆ ಶೇ. $8\frac{1}{4}$ ಯ ರೂ. 130 ರ ಎಷ್ಟು ಸ್ಟಾಕನ್ನು ಕೊಳ್ಳಬಹುದು ?

ರೀತಿ : 130 ರೂ. ಗಳಿಗೆ ದೊರೆಯುವ ಸ್ಟಾಕು = 100 ರೂ.

$\therefore$ 650 ರೂ. ಗಳಿಗೆ ದೊರೆಯುವ ಸ್ಟಾಕು

$=\frac{100\times 650}{130}=500$

$\therefore$ 650 ರೂ.ಗಳಿಗೆ ದೊರೆಯುವ ಸ್ಟಾಕು = ರೂ. 500 Ans.

ಪ್ರಶ್ನೆ 14. $ax^2+bx+c=0$ ಸಮೀಕರಣದ ಮೂಲಗಳನ್ನು ಕಂಡುಹಿಡಿಯುವ ಸೂತ್ರವನ್ನು ಬರೆಯಿರಿ.

ಉತ್ತರ : ಸೂತ್ರ $x=\frac{-b\pm\sqrt{b^2-4ac}}{2a}$

ಪ್ರಶ್ನೆ 15. $K=\frac{1}{2}mv^2$ ಆದರೆ $v$ ಕಂಡುಹಿಡಿಯಿರಿ

ರೀತಿ : $K=\frac{1}{2}mv^2$ ಅಥವಾ $2K=mv^2$ ಅಥವಾ $mv^2=2K$ ಅಥವಾ $v^2$

$=\frac{2K}{m}$, ಅಥವಾ $v=\pm\sqrt{\frac{2K}{m}}$ Ans.

ಪ್ರಶ್ನೆ 16. $\sqrt[3]{7}$ ನಲ್ಲಿ ಕರಣೀಯ ಮತ್ತು ಕರಣಿಯ ಕ್ರಮಗಳನ್ನು ಬರೆಯಿರಿ.

ಉತ್ತರ : $\sqrt[3]{7}$ ನಲ್ಲಿ ಕರಣೀಯ ಮತ್ತು ಕರಣಿಯ ಕ್ರಮ 3

ಪ್ರಶ್ನೆ 17. ಕೆಳಗಿನದು ಸರಿಯೇ ಪರೀಕ್ಷಿಸಿ

$65\equiv 15$ (ಮಾಡ್ 11).

ರೀತಿ : $\frac{65}{11}=5\frac{10}{11}$ ಇಲ್ಲಿ ಶೇಷ $=10$

$\frac{15}{11}=1\frac{4}{11}$ ಇಲ್ಲಿ ಶೇಷ $=4$.

$\therefore 10\neq 4$.

$\therefore 65\equiv 15$ (ಮಾಡ್ 11) ಸರಿಯಲ್ಲ.

ಪ್ರಶ್ನೆ 18. 2 ರಿಂದ 42 ರ ವರೆಗಿನ ಎಲ್ಲಾ ಸಮಸಂಖ್ಯೆಗಳ ಮೊತ್ತವನ್ನು ಕಂಡುಹಿಡಿಯಿರಿ.

ರೀತಿಗೆ ಅಕ್ಟೋಬರ್ 1984 ರ ಪ್ರಶ್ನೆ 18 ನೋಡಿ

ಪ್ರಶ್ನೆ 19. ಕೆಳಗಿನ ಉಳಿತಾಯ ಖಾತೆಗೆ 30/6 ಕ್ಕೆ ಅರ್ಧ ವಾರ್ಷಿಕ ಬಡ್ಡಿಯನ್ನು ಸೇರಿಸಿ (ಪ್ರತಿ ತಿಂಗಳ 10 ರಿಂದ ಕಡಿಮೆ ದಿನದವರೆಗ ಖಾತೆಯಲ್ಲಿರುವ ತಿಂಗಳ ಕನಿಷ್ಠ ಪೂರ್ಣ ರೂಪಾಯಿ ಬಾಕಿಗೆ ಬಡ್ಡಿ ಶೇ $4\frac{1}{2}$)

| ತಾರೀಖು | ವಿವರ | ಮೊತ್ತ | ಬಾಕಿ. |
|---|---|---|---|
| 1/1 | ಹಿಂದಿನದು | | 2050-00 |
| 3/3 | ಪಡೆದಹಣ | 1200-00 | 850-00 |
| 8/7 | ಶೇವಣಿ | 500-00 | 1350-00 |

ರೀತಿ :

| ತಿಂಗಳು | ಕನಿಷ್ಠ ಬಾಕಿ |
|---|---|
| ಜನೇವರಿ | 2050–00 |
| ಫೆಬ್ರುವರಿ | 2050–00 |
| ಮಾರ್ಚ | 850–00 |
| ಎಪ್ರಿಲ್ | 850–00 |
| ಮೇ | 850 00 |
| ಜೂನ | 850–00 |
| ಮೊತ್ತ = | 7500–00 |

ಇನ್ನು 7500 ರೂ.ಗಳ ಒಂದು ತಿಂಗಳ ಬಡ್ಡಿಯನ್ನು ತೆಗೆಯಬೇಕು.

100 ರೂ.ಗಳ 12 ತಿಂಗಳಬಡ್ಡಿ $=\frac{9}{2}$ ರೂ

7500 ರೂ.ಗಳ „ $=\frac{9\times 7500}{100\times 2}$

7500 ರೂ.ಗಳ „ $=\frac{675}{2}$ ರೂ.

$\therefore$ 7500 ರೂ.ಗಳ 1 ತಿಂಗಳ ಬಡ್ಡಿ $=\frac{675}{2\times 12}$

$=28.13$ ರೂ.

28.13 ರೂ. ಬಡ್ಡಿಯನ್ನು ಸೇರಿಸಬೇಕು.

Ans.

ಪ್ರಶ್ನೆ 20. 30 ಹುಡುಗಿಯರು ಸಂಜೆಯ ಉಪಹಾರಕ್ಕಾಗಿ ಹೋಟೆಲ್‌ಗೆ ಹೋದರು ಕೆಲವರು ಸಿಹಿಯನ್ನೂ, ಕೆಲವರು ಖಾರವನ್ನೂ ಮತ್ತೆ ಕೆಲವರು ಎರಡನ್ನೂ ಆರಿಸಿದರು. 25 ಜನ ಸಿಹಿಯನ್ನೂ, 20 ಜನ ಖಾರವನ್ನೂ ಆರಿಸಿಕೊಂಡರೆ, ಎರಡನ್ನೂ ಆರಿಸಿಕೊಂಡವರ ಸಂಖ್ಯೆಯೆಷ್ಟು ?

ರೀತಿ : $n(A)$ = ಸಿಹಿಯನ್ನು ಬಯಸಿದರು $=25$

$n(B)$ = ಖಾರವನ್ನು ಬಯಸಿದವರು $=20$

$n(A\cap B)$ = ಎರಡನ್ನೂ ಬಯಸಿದವರು $=?$

$n(A\cup B)$ = ಒಟ್ಟು ಹುಡುಗಿಯರ ಸಂಖ್ಯೆ 30

ಇನ್ನು $n(A\cup B)+n(A\cap B)n(A)+n(B)$

ಅಥವಾ $n(A\cap B)=n(A)+n(B)-n(A\cup B)=25+20-30=45-30=15$.

∴ ಸಿಹಿ ಮತ್ತು ಖಾರ ಎರಡನ್ನೂ ಆರಿಸಿಕೊಂಡವರ ಸಂಖ್ಯೆ 15 Ans.

**ಪ್ರಶ್ನೆ 21.** "COMBINE" ಪದದ ಎಲ್ಲಾ ಅಕ್ಷರಗಳನ್ನೂ ಜೋಡಿಸಬಹುದಾದ ವಿಧಗಳೆಷ್ಟು ?

**ರೀತಿ :** COMBINE ಪದದಲ್ಲಿ 7 ಅಕ್ಷರಗಳಿವೆ.

∴ 7 ಅಕ್ಷರಗಳನ್ನೂ ಜೋಡಿಸುವ ವಿಧಗಳ ಸಂಖ್ಯೆ $=7P_7$

$$7P_7=\frac{7!}{(7-7)!}=\frac{7!}{0!}$$

$$=\frac{7\times6\times5\times4\times3\times2\times1}{1}$$

$=5040$ ವಿಧಗಳು Ans.

**ಪ್ರಶ್ನೆ 22.** "SOLVED" ಪದದಿಂದ ನಾಲ್ಕು ಅಕ್ಷರಗಳ ವಿಕಲ್ಪಗಳಾಗಲು ಸಾಧ್ಯ ?

**ರೀತಿ :** SOLVED ಪದದಲ್ಲಿ 6 ಅಕ್ಷರಗಳಿವೆ.

∴ 6 ಅಕ್ಷರಗಳಲ್ಲಿ 4 ಅಕ್ಷರಗಳಿಂದಾಗುವ ವಿಕಲ್ಪಗಳ ಸಂಖ್ಯೆ $=6C_4$

$$\therefore 6C_4=\frac{6!}{(6-4)!\times4!}=\frac{6!}{2!\times4!}$$

$$=\frac{6\times5\times4!}{2\times4\times1!}$$

$=15$ ವಿಕಲ್ಪಗಳು Ans.

**ಪ್ರಶ್ನೆ 23.** ಕುಂದಿಲ್ಲದ ಎರಡು ದಾಳಗಳನ್ನು ನಾನು ಎಸೆಯುತ್ತೇನೆ. ಈ ಎರಡೂ ದಾಳಗಳ ಮೇಲೆ ಬರುವ ಮುಖಗಳ ಮೇಲಿನ ಸಂಖ್ಯೆಗಳ ಮೊತ್ತವು 8 ಆಗುವ ಸಂಭವನೀಯತೆ ಎಷ್ಟು ?

**ರೀತಿ :** ದಾಳಗಳನ್ನು ಎಸೆಯುವಾಗ ಸಂಭವಿಸಬಹುದಾದ ಒಟ್ಟು ಘಟನೆಗಳು. $=6\times6=36$

ಮೇಲೆ ಬರುವ ಮುಖಗಳ ಮೇಲಿನ ಸಂಖ್ಯೆಗಳ ಮೊತ್ತವು 8 ಆಗುವ ಘಟನೆಗಳು

$=(2+6), (3+5), (4+4), (5+3), (6+2)=5$

∴ ಸಂಭವನೀಯತೆ

$$\frac{\text{ಸಂಭವಿಸುವ ಘಟನೆಗಳ ಸಂಖ್ಯೆ}}{\text{ಸಂಭವಿಸಬಹುದಾದ ಒಟ್ಟು ಘಟನೆಗಳು}}$$

$=\frac{5}{36}$ Ans.

**ಪ್ರಶ್ನೆ 24.** ದಿಶಾಯುಕ್ತಗಳ ನಿಯಮದ ಆಧಾರದಿಂದ ಸಮಾಂತರ ಚತುರ್ಭುಜದ ಕರ್ಣಗಳು ಪರಸ್ಪರ ಅರ್ಧಿಸುತ್ತವೆ ಎಂದು ಸಾಧಿಸಿ.




**ರೀತಿ :** $\vec{AC}=\vec{AD}+\vec{DC}=\vec{a}+\vec{b}$

$\vec{AP}=x(\vec{AC})=x(\vec{a}+\vec{b})$

$\vec{DB}=\vec{AB}-\vec{AD}$ ∵ $\vec{DA}=-\vec{AD}$

$=\vec{a}-\vec{b}$

$\vec{PB}=y(\vec{DB})=y(\vec{b}-\vec{a})$

$\triangle APB$ ಯಿಂದ

$\vec{AP}+\vec{PB}=x(\vec{a}+\vec{b})+y(\vec{b}-\vec{a})=\vec{b}$

ಅಥವಾ $\vec{a}x+\vec{b}x+\vec{b}y-\vec{a}y-\vec{b}=0$

" $\vec{a}x-\vec{a}y+\vec{b}x+\vec{b}y-\vec{b}=0$

" $\vec{a}(x-y)+\vec{b}(x+y-1)=0$

∴ $x-y=0$ ಇಲ್ಲವೆ $x+y-1=0$ ಇರಬಹುದು.

ಇನ್ನು $x-y=0$ ಇದ್ದರೆ $x=y$.

ಮತ್ತು $x+y-1=$ ಇದ್ದರೆ $x+y=1$

ಅಥವಾ $x+x=1$ ಅಥವಾ $2x=1$

" $x=\frac{1}{2}=y$

∴ $x=y=\frac{1}{2}$.

∴ $\vec{AP}=\frac{1}{2}\vec{AC}$ ಮತ್ತು $\vec{PB}=\frac{1}{2}\vec{DB}$

∴ $\vec{AC}$ ಮತ್ತು $\vec{DB}$ ಕರ್ಣಗಳು ಪರಸ್ಪರ ಅರ್ಧಿಸುತ್ತವೆ.

ಪ್ರಶ್ನೆ 25. $x+\frac{6}{x}=5$ ಸಮೀಕರಣವನ್ನು ಬಿಡಿಸಿ.

ರೀತಿ : $x+\frac{6}{x}=5$ ಅಥವಾ $x^2+6=5x$............

($x$ದಿಂದ ಗುಣಿಸಲು)

ಅಥವಾ $x^2-5x+6=0$.

„ $x^2-3x-2x+6=0$

„ $x(x-3)-2(x-3)=0$

„ $(x-3)(x-2)=0$

$x-3=0$ ಇದ್ದರೆ $x=3$

$x-2=0$ „ $x=2$

$\therefore$ $x=2x$ ಇಲ್ಲವೆ 3 Ans.

ಪ್ರಶ್ನೆ 26. $x^2+15+10=0$ ಸಮೀಕರಣದ ಮೂಲಗಳನ್ನು ಸೂತ್ರದ ಸಹಾಯದಿಂದ ಕಂಡು ಹಿಡಿಯಿರಿ.

ರೀತಿ : $x^2+15x+10=0$. ಇಲ್ಲಿ $a=1$, $b=15$, $c=10$.

$\therefore$ $x=\frac{-b\pm\sqrt{b^2-4ac}}{2a}$

$=\frac{-15\pm\sqrt{(15)^2-4(1)(10)}}{2(1)}$

$=\frac{-15\pm\sqrt{225-40}}{2}=\frac{-15\pm\sqrt{185}}{2}$

$=\frac{1}{2}(-15\pm\sqrt{185})$

$\therefore$ $x=\frac{1}{2}(-15\pm\sqrt{183})$ Ans.

ಪ್ರಶ್ನೆ 27. $A=\begin{bmatrix}2 & 6\\4 & 8\end{bmatrix}$ ಮತ್ತು $=B\begin{bmatrix}6 & 3\\9 & -3\end{bmatrix}$ ಆದರೆ A+B' ಕಂಡುಹಿಡಿಯಿರಿ.

ರೀತಿ : $A=\begin{bmatrix}2 & 6\\4 & 8\end{bmatrix}$ ಮತ್ತು $B=\begin{bmatrix}6 & 3\\9 & -3\end{bmatrix}$

$\therefore B'=\begin{bmatrix}6 & 9\\3 & -3\end{bmatrix}$

$\therefore A+B'=\begin{bmatrix}2 & 6\\4 & 8\end{bmatrix}+\begin{bmatrix}6 & 9\\3 & -3\end{bmatrix}$

$=\begin{bmatrix}2+6 & 6+9\\4+3 & 8-3\end{bmatrix}=\begin{bmatrix}8 & 15\\7 & 5\end{bmatrix}$ Ans.

ಪ್ರಶ್ನೆ 28. $a+b=5$, $a^2+b^2=11$ ಆದರೆ $a^3+b^3$ ನ ಬೆಲೆಯನ್ನು ಕಂಡುಹಿಡಿಯಿರಿ.

ರೀತಿ : $a+b=5$

ಅಥವಾ $(a+b)^2=(5)^2$ ಅಥವಾ $a^2+b^2+2ab=25$

„ $11+2ab=25$ ; „ $2ab=25-11=14$

„ $ab=\frac{14}{2}=7$ $\therefore$ $ab=7$

ಈಗ $a^3+b^3=(a+b)^3-3ab(a+b)$

$=(5)^3-3(7)(5)=125-105=20$.

$\therefore$ $a^3+b^3=20$ Ans.

ಪ್ರಶ್ನೆ 29. $a+b+c=2s$ ಆದರೆ $\frac{a^2-b^2+2bc-c^2}{b^2+2bc+c^2-a^2}=\frac{(s-b)(s-c)}{s(s-a)}$ ಎಂದು ಸಾಧಿಸಿ.

ರೀತಿ : ಈಗ L.H.S. $=\frac{a^2-b^2+2bc-c^2}{b^2+2bc+c^2-a^2}$

$=\frac{a^2-(b^2-2bc+c^2)}{b^2+2bc+c^2-a^2}=\frac{(a)^2-(b-c)}{(b+c)^2-(a)^2}$

$=\frac{(a+b-c)(a-b+c)}{(b+c+a)(b+b-a)}$

$=\frac{(a+b+c-2c)(a+b+c-2b)}{(a+b+c)\ a+b+c-2a}$

$=\frac{(2s-2c)(2s-2b)}{2s(2s-2a)}=\frac{2(s-c)\times 2(s-b)}{2s\times 2(s-a)}$

$=\frac{(s-b)(s-c)}{s(s-a)}$ R.H.S.

ಪ್ರಶ್ನೆ 30. ಒಬ್ಬನು ರೂ. 600 ಬೆಲೆಯ ಒಂದು ರೇಡಿಯೋವನ್ನು ಕೊಳ್ಳುವ ಸಮಯದಲ್ಲಿ ರೂ. 125 ಕೊಟ್ಟು ಕೊಳ್ಳುತ್ತಾನೆ. ಉಳಿದ ಬಾಕಿ ಹಣವನ್ನು ಪ್ರತಿಯೊಂದು ರೂ. 125 ರ. 4 ತಿಂಗಳ ಕಂತುಗಳಲ್ಲಿ ಕೊಡುತ್ತಾನೆ. ವಿಧಿಸಲಾದ ಬಡ್ಡಿಯ ದರ ವೇನು ?

ರೀತಿ : ರೇಡಿಯೋದ ನಗದು ಬೆಲೆ $=600$ ರೂ.

ಕಂತಿನಿಂದ ಕೊಂಡಾಗ ಅದರ ಬೆಲೆ

$=(125+4\times 125)$ ರೂ.

$=(125+500=625)$ ರೂ.

$\therefore$ ಕೊಡಬೇಕಾಗುವ ಬಡ್ಡಿ $=625-600$

$=25$ ರೂ.

| ಅವಧಿ | ಬಡ್ಡಿಗೆ ಪಾತ್ರವಾದ ಹಣ. |
|---|---|
| 1 ನೇ ತಿಂಗಳ | 475 ರೂ.(600–125) ರೂ. |
| 2 ನೇ ,, | 350 ರೂ. |
| 3 ನೇ ,, | 225 ರೂ. |
| 4 ನೇ ,, | 100 ರೂ. |

∴ ಒಟ್ಟು=1150 ರೂ.

∴ 1150 ರೂ. ಗಳ 1 ತಿಂಗಳ ಬಡ್ಡಿ=25 ರೂ.

∴ 100 ರೂ. ಗಳ 1 ತಿಂಗಳ ಬಡ್ಡಿ $=\frac{25\times100}{1150}$ ರೂ.

∴ 100 ರೂ.ಗಳ 12 ತಿಂಗಳ ಬಡ್ಡಿ

$=\frac{25\times100\times12}{1150}=26.08$ ರೂ.

∴ ಬಡ್ಡಿದರ=26.08 % Ans.

**ಪ್ರಶ್ನೆ 31.** ಛೇದಗಳನ್ನು ಅಕರಣೀಕರಿಸಿ ಸುಲಭರೂಪಕ್ಕೆ ತನ್ನಿ: $\frac{\sqrt{3}}{5\sqrt{2}+2\sqrt{5}}$

**ರೀತಿ :** $\frac{\sqrt{3}}{5\sqrt{2}+2\sqrt{5}}=\frac{1\sqrt{3}}{5\sqrt{2}+2\sqrt{5}}$

$\times\frac{5\sqrt{2}-2\sqrt{5}}{5\sqrt{2}-2\sqrt{5}}$

$=\frac{\sqrt{3}(5\sqrt{2}-2\sqrt{3})}{(\sqrt{52}+2\sqrt{5})(5\sqrt{2}-2\sqrt{5})}$

$=\frac{5\sqrt{6}-2\sqrt{15}}{25\times2-4\times5}$

$=\frac{5\sqrt{6}-2\sqrt{15}}{50-20}=\frac{5\sqrt{6}-2\sqrt{15}}{30}$

$=\frac{5\sqrt{6}}{30}-\frac{2\sqrt{15}}{30}=\frac{\sqrt{6}}{6}-\frac{\sqrt{15}}{15}$

Ans.

**ಪ್ರಶ್ನೆ 32.** ವಿಸ್ತೀರ್ಣ 60 ಚ.ಸೆಂ.ಮೀ. ಮತ್ತು ಸುತ್ತಳತೆ 32 ಮೀಟರ್ ಇರುವ ಒಂದು ಆಯತಾಕಾರದ ಜಮೀನಿನ ಉದ್ದ ಮತ್ತು ಅಗಲಗಳನ್ನು ಕಂಡು ಹಿಡಿಯಿರಿ.

**ರೀತಿ :** ಆಯತದ ಸುತ್ತಳತೆ=2 ಉದ್ದ + 2ಅಗಲ =32 ಮೀಟರ್‌ಗಳು.

∴ ಉದ್ದ + ಅಗಲ $=\frac{32}{2}=16$ ಮೀಟರ್‌ಗಳು

ಈಗ ಆಯತಾಕಾರದ ಹೊಲದ ಉದ್ದ $x$ ಮೀಟರ್ ಎಂದು ಕಲ್ಪಿಸಿ.

∴ ಹೊಲದ ಅಗಲ$=(16-x)$ ಮೀ.

ಸಮಸ್ಯೆಯ ಪ್ರಕಾರ—

$x(16-x)=60.$

ಅಥವಾ $16x-x^2=60$

,, $x^2-16x+60=0$

,, $x^2-10x=6x+60=0$

,, $x(x-10)-6(x-10)=0$

ಅಥವಾ

$(x-10)(x-6)=0$

,, $x-10=0$ ಇದ್ದರೆ $x=10$

ಮತ್ತು $x-6=0$ ಇದ್ದರೆ $x=6$.

∴ ಹೊಲದ ಉದ್ದ=10 ಮೀಟರ್‌ಗಳು Ans.

ಮತ್ತು ಹೊಲದ ಅಗಲ=16−10=6 ಮೀಟರ್‌ಗಳು Ans.

**ಪ್ರಶ್ನೆ 33.** $(Z_7$,+ಮಾಡ್ 7) ಸಮುದಾಯವೆಂದು ತೋರಿಸಿ.

**ರೀತಿ :** $Z_7=\{0,1,2,3,4,5,6\}$ ಇರಲಿ.

| $Z_7+$ | 0 | 1 | 2 | 3 | 4 | 5 | 6 |
|---|---|---|---|---|---|---|---|
| 0 | 0 | 1 | 2 | 3 | 4 | 5 | 6 |
| 1 | 1 | 2 | 3 | 4 | 5 | 6 | 0 |
| 2 | 2 | 3 | 4 | 5 | 6 | 0 | 1 |
| 3 | 3 | 4 | 5 | 6 | 0 | 1 | 2 |
| 4 | 4 | 5 | 6 | 0 | 1 | 2 | 3 |
| 5 | 5 | 6 | 0 | 1 | 2 | 3 | 4 |
| 6 | 6 | 0 | 1 | 2 | 3 | 4 | 5 |

i) $2+5=0\in Z_7$ $4+6=3\in Z_7$.

∴ $\forall\, a,b\in Z_7,\ (a+b)\in Z_7$

∴ $Z_7$+ ಆವೃತ ಗುಣವನ್ನು ಹೊಂದಿದೆ.

ii) ಸಹವರ್ತನಿಯ ಗುಣ :

$(2+4)+3=6+3=2\in Z_7$.

$2+(4+3=2+7=2\in Z_7$.

∴ $(2+4)+3=2+(4+3)$

∴ $\forall a,b\in Z_7\ (a+b)+c=a+(b+c)$

∴ $(Z_7+)$ ಸಹವರ್ತನೀಯ ಗುಣವನ್ನು ಹೊಂದಿದೆ.

iii) ಅನನ್ಯತಾಂಶ ಗುಣ :

$0 \in Z_7,\ 1+0=1 \in Z_7,\ 5+0= \in Z_7.$

$\therefore\ \forall\ a \in Z_7\ \exists\ e \in Z_7 | a+e=e+a=a$

$\therefore$ $(Z_7,+)$ ಅನನ್ಯತಾಂಶ ಗುಣವನ್ನು ಹೊಂದಿದೆ.

iv) ವಿಲೋಮಾಂಶ ಗುಣ :

0 ದ ವಿಲೋಮ 0, 1ರ ವಿಲೋಮ 6, 2 ರ ವಿಲೋಮ 5
3 ರ ವಿಲೋಮ 4, 4 ರ ವಿಲೋಮ 3, 5ರ ವಿಲೋಮ 2
6 ರ ವಿಲೋಮ 1. ಯಾಕೆಂದರೆ $0+0 - 0,\ 1+6\ 0,$
$2+5=0,\ 3+4=0$ ಮುಂತಾದವು.

$\forall\ a \in Z_7\ \exists a^{-1} \in Z_7 / a+a^{-1}=e.$

$\therefore$ $(z_7 +$ ಮಾಡ್$+)$ ಒಂದು ಸಮುದಾಯವಾಗಿದೆ.

ಪ್ರಶ್ನೆ 34. $y=2x^2$ ಮತ್ತು $y=3-x$ ನಕ್ಷೆಯನ್ನು ಎಳೆಯಿರಿ. ಮತ್ತು $2x^2+x-3=0$ ಸಮೀಕರಣವನ್ನು ಬಿಡಿಸಿ.

ರೀತಿ : $y=2x^2$

| x | 1 | 2 | 3 | 0 | −1 | −2 | −3 |
|---|---|---|---|---|---|---|---|
| y | 2 | 8 | 18 | 0 | 2 | 8 | 18 |

$y=3-x$

| x | 1 | 2 | 3 | 0 | −1 |
|---|---|---|---|---|---|
| y | 2 | 1 | 0 | 3 | 4 |

ಸ್ಕೇಲು 2 ಸೆಂ.ಮೀ. = 1 ಮಾನ X-ಅಕ್ಷದ ಗುಂಟ.
.5 ಸೆಂ ಮೀ. = 1 ಮಾನ Y-ಅಕ್ಷದ ಗುಂಟ.



$2x^2+x-3=0$ or $2x^2=3-x$

$\therefore$ $y=2x^2$ ಮತ್ತು $y=3-x$. ಈ ಸಮೀಕರಣಗಳ ನಕ್ಷೆ ರಚಿಸಿದ್ದು: ನಕ್ಷೆಯ ಕ್ರಮದಿಂದ $2x^2+x-3=0$ ಸಮೀಕರಣದ ಮೂಲಗಳು $x=1$ ಇಲ್ಲವೇ $-1.5$

ಪ್ರಶ್ನೆ 35. ಈ ಕೆಳಗಿನ ದತ್ತಾಂಶಗಳಿಗೆ ಮಾನಕ ವಿಚಲನೆ ಯನ್ನು ಕಂಡುಹಿಡಿಯಿರಿ.

| ಪಡೆದ ಅಂಕಗಳು | ವಿದ್ಯಾರ್ಥಿಗಳ ಸಂಖ್ಯೆ |
|---|---|
| 10—19 | 8 |
| 20—29 | 15 |
| 30—39 | 20 |
| 40—49 | 7 |

ರೀತಿ :

| ವರ್ಗಾಂತರ | ಮಧ್ಯ ಬಿಂದು $x$ | ಆವೃತ್ತಿ $f$ | ಗುಣ ಲಬ್ಧ $fx$ | ವಿಚಲನೆ $d$ | $d^2$ | $fd^2$ |
|---|---|---|---|---|---|---|
| 10-19 | 14.5 | 8 | 116.0 | −15.2 | 231.04 | 1848.32 |
| 20-29 | 24.5 | 15 | 367.5 | −5.2 | 27.04 | 405.60 |
| 30-39 | 34.5 | 20 | 690.0 | 4.8 | 23.04 | 460.80 |
| 40-49 | 44.5 | 7 | 311.5 | 14.8 | 219.04 | 1533.28 |
| N=50, $\Sigma fx$=1485.0 | | | | | $\Sigma fd^2$ | 4248.00 |

$\therefore$ ಸರಾಸರಿ $M = \frac{\Sigma fx}{N} = \frac{1485}{50} = 29.7$

$\therefore$ ಮಾನಕ ವಿಚಲನೆ $= \sqrt{\frac{\Sigma fd^2}{N}}$

$= \sqrt{\frac{4248}{50}} = \sqrt{84.96}$

$= 9.22$

$\therefore$ ಮಾನಕ ವಿಚಲನೆ $= 9.22$ Ans.

# ಗಣಿತ

## ಅಕ್ಟೋಬರ-1985 2 ನೆಯ ಪತ್ರಿಕೆ

## ರೇಖಾಗಣಿತ

ವೇಳೆ : 2 ಗಂಟೆ) (ಅಧಿಕ ಗುಣಗಳು 35

ಪ್ರಶ್ನೆ 1. ಬಿಟ್ಟ ಸ್ಥಳ ತುಂಬಿ (ದಪ್ಪಕ್ಷರದ ಪದಗಳು ತುಂಬಿದ ಪದಗಳು)

**ಉತ್ತರ :** (a) ಚತುರ್ಭುಜಾಕೃತಿಯ ಒಂದು ಕೋನ ಲಂಬಕೋನವಾದರೆ, ಅದನ್ನು ವರ್ಗ ಎಂದು ಕರೆಯುತ್ತಾರೆ.

(b) ಒಂದು ತ್ರಿಕೋನದ ಮೂರು ಎತ್ತರಗಳು ಸಂಧಿಸುವ ಬಿಂದು ಲಂಬಕೇಂದ್ರವಾಗಿದೆ.

**ಪ್ರಶ್ನೆ 2.** ಆಕೃತಿಯ O ಬಿಂದುವಿನಲ್ಲಿ ಉಂಟಾದ ಎಲ್ಲ ಕೋನಗಳ ಮೊತ್ತವನ್ನು ಕಂಡುಹಿಡಿಯಿರಿ.

**ರೀತಿ :**




AO ನ್ನು Dದ ವರೆಗೆ ವೃದ್ಧಿಸಿ.

$\angle AOC + \angle COD$ $180^o$ ........(ಪಾರ್ಶ್ವ $\angle$ ಗಳು) I

$\angle AOB + \angle BOD = 180^o$ ........(ಪಾರ್ಶ್ವ $\angle$ ಗಳು) II

I, II ಕೂಡಿಸಲಾಗಿ.

$\angle AOC + \angle COD + \angle AOB + \angle BOD = 180^o + 180^o$

ಅಥವಾ $\angle AOC + \angle AOB + \angle COD + \angle BOD = 360^o$

ಆದರೆ $\angle COD + \angle BOD = \angle BOC$

$\therefore \angle AOC + \angle AOB + \angle BOC = 360^o$

**ಪ್ರಶ್ನೆ 3.** $\triangle ABC$ ಯಲ್ಲಿ BCಯನ್ನು Dದ ವರೆಗೆ ವೃದ್ಧಿಸಲಾಗಿದೆ AB=AC ಮತ್ತು $\angle A = 50^o$ ಆದರೆ $\angle ACD$ ಕಂಡುಹಿಡಿಯಿರಿ.




**ದತ್ತ :** AB=AC $\angle A = 50^o$

**ಕಂಡುಹಿಡಿಯುವುದು :** $\angle ACD$

**ರೀತಿ :** ABC $\triangle$ ದಲ್ಲಿ

$\angle A + \angle B + \angle ACB = 180^o$

ಆದರೆ $\angle A = 50^o$, AB=AC..........(ದತ್ತ)

$\therefore \angle B = \angle C = \frac{1}{2}(180^o - 50^o) = \frac{1}{2} \times 130^o = 65^o$

$\therefore$ ಬಾಹ್ಯ $\angle ACD = \angle A + \angle B = 50^o + 65^o = 115^o$

$\therefore \angle ACD = 115^o$.

**ಪ್ರಶ್ನೆ 4.** ಒಂದು ಸಿಲಿಂಡರಿನ ಗಾತ್ರವನ್ನು ಕಂಡುಹಿಡಿಯುವ ಸೂತ್ರವನ್ನು ಬರೆಯಿರಿ.

**ಉತ್ತರ :** ಸಿಲಿಂಡರಿನ ಗಾತ್ರವನ್ನು ಕಂಡುಹಿಡಿಯುವ ಸೂತ್ರ $V = \pi r^2 h$ ಇಲ್ಲಿ V = ಗಾತ್ರ, $\pi = \frac{22}{7}$ $r$ = ಸಿಲಿಂಡರಿನ ತ್ರಿಜ್ಯ $h$ = ಸಿಲಿಂಡರಿನ ಎತ್ತರ.

**ಪ್ರಶ್ನೆ 5.** ಅವಕಾಶವನ್ನು ನಿರ್ಧರಿಸಲು ಬೇಕಾದ ಕನಿಷ್ಠ ಬಿಂದುಗಳ ಸಂಖ್ಯೆ ಎಷ್ಟು ?

**ಉತ್ತರ :** ಅವಕಾಶವನ್ನು ನಿರ್ಧರಿಸಲು ಬೇಕಾದ ಕನಿಷ್ಠ ಬಿಂದುಗಳ ಸಂಖ್ಯೆ = ಒಂದೇ ಸಮತಲದಲ್ಲಿಲ್ಲದ 4 ಬಿಂದುಗಳು.

**ಪ್ರಶ್ನೆ 6.** ABCD ಒಂದು ಚಕ್ರೀಯ ಚತುರ್ಭುಜ $\angle A = 70^o$ ಮತ್ತು $\angle D = 80^o$ ಆದರೆ $\angle B$ ಮತ್ತು $\angle C$ ಕಂಡು ಹಿಡಿಯಿರಿ.

**ದತ್ತ :** ABCD ಚಕ್ರೀಯ ಚತುರ್ಭುಜ $\angle A = 70^o$ $\angle D = 80^o$.

**ಕಂಡುಹಿಡಿಯುವದು :** $\angle B$ ಮತ್ತು $\angle C$.

**ರೀತಿ :** ABCD ಚಕ್ರೀಯ ಚತುರ್ಭುಜ..........(ದತ್ತ)




$\therefore \angle A + \angle C = 180^o$

ಮತ್ತು $\angle B + \angle D = 180^o$

ಆದರೆ $\angle A = 70^o$, $\angle D = 80^o$..........(ದತ್ತ)

$\therefore \angle C = 180^o - \angle A = 180^o - 70^o = 110^o$

$\angle B = 180^o - \angle D = 180^o - 80^o = 100^o$

$\therefore \angle C = 110^o$, $\angle B = 100^o$

**ಪ್ರಶ್ನೆ 7.** ಒಂದು ಸಮಬಾಹುಭುಜಾಕೃತಿಯ ಪ್ರತಿ ಹೊರಕೋನ $40^o$ ಆದರೆ ಅದರ ಬಾಹುಗಳ ಸಂಖ್ಯೆಯನ್ನು ಕಂಡುಹಿಡಿಯಿರಿ.

**ರೀತಿ :** ಬಾಹುಗಳ ಸಂಖ್ಯೆ= $\frac{360^o}{\text{ಹೊರಕೋನ}} = \frac{360^o}{40^o} = 9$

**ಪ್ರಶ್ನೆ 8.** 6 ಸೆಂ.ಮೀ ಮತ್ತು 4 ಸೆಂ. ಮಿ. ತ್ರಿಜ್ಯವಿರುವ ಎರಡು ವೃತ್ತಗಳ ಕೇಂದ್ರಗಳ ನಡುವಿನ ದೂರವನ್ನು ಬಾಹ್ಯಸ್ಪರ್ಶ ಮತ್ತು ಅಂತಃಸ್ಪರ್ಶವಾದಾಗ ಕಂಡುಹಿಡಿಯಿರಿ.

**ರೀತಿ :** ವೃತ್ತಕೇಂದ್ರಗಳ ನಡುವಿನ ದೂರ
(i) ಬಾಹ್ಯಸ್ಪರ್ಶವಾದಾಗ $=6+4=10$ ಸೆಂ.ಮೀ
(ii) ಅಂತಃಸ್ಪರ್ಶವಾದಾಗ $=6-4=2$. ಸೆಂ.ಮೀ.

**ಪ್ರಶ್ನೆ 9.** ಒಂದು ಕ್ಷಿತಿಜ ಸಮತಲ ಮತ್ತು ಒಂದು ಓರೆ ಸಮತಲಗಳ ಛೇದನವು ಕ್ಷಿತಿಜರೇಖೆಯಾಗಿರುತ್ತದೆ.

**ಪ್ರಶ್ನೆ 10.** ಒಂದು ವಜ್ರಾಕೃತಿಯ ಕರ್ಣಗಳು 8 ಸೆಂ.ಮೀ. ಮತ್ತು 6 ಸೆಂ.ಮೀ. ಆದರೆ ವಿಸ್ತೀರ್ಣ 24 ಚ. ಸೆಂ. ಮೀ. ಆಗಿದೆ. (ವಿಸ್ತೀರ್ಣ$=\frac{1}{2}d_1\ d_2$).

**ಪ್ರಶ್ನೆ 11** ಏಕಪಾದದ ಮೇಲೆ ಒಂದೇ ಜೊತೆ ಸಮಾಂತರ ಸರಳ ರೇಖೆಗಳ ನಡುವೆ ಇರುವ ಸಮಾಂತರ ಚತುರ್ಭುಜಗಳ ವಿಸ್ತೀರ್ಣಗಳು ಸಮವಾಗಿರುವುವು ಎಂದು ಸಾಧಿಸಿ.
ಉತ್ತರಕ್ಕೆ ಎಪ್ರಿಲ್ 1984ರ ಪ್ರಶ್ನೆ 12 ನೋಡಿ

**ಪ್ರಶ್ನೆ 12.** 8 ಮೀಟರ್ ಮತ್ತು 4 ಮೀಟರ್ ಎತ್ತರವಿರುವ ಎರಡು ಕಂಬಗಳ ನಡುವಿನ ದೂರ 3 ಮೀಟರ್‌ಗಳಾದರೆ, ಕಂಬಗಳ ತುದಿಗಳಿಗಿರುವ ನೇರ ದೂರವನ್ನು ಕಂಡುಹಿಡಿಯಿರಿ.
ಉತ್ತರಕ್ಕೆ ಎಪ್ರಿಲ್ 1984 ರ ಪ್ರಶ್ನೆ 12 ನೋಡಿ

**ಪ್ರಶ್ನೆ 13.** $\triangle ABC$ ಯಲ್ಲಿ $AB=6$ ಸೆಂ.ಮೀ. $AC=8$ ಸೆಂ.ಮಿ. ಮತ್ತು ಮಧ್ಯರೇಖೆ $AE=5$ ಸೆಂ.ಮಿ. ಆದರೆ ಅಪಲೋನಿಯಸ್‌ನ ಪ್ರಮೇಯದ ಸಹಾಯದಿಂದ BC ಯ ಉದ್ದವನ್ನು ಲೆಕ್ಕಾಚಾರ ಮಾಡಿರಿ.

**ದತ್ತ :** $AB=6$ ಸೆಂ.ಮೀ. $AC=8$ ಸೆಂ.ಮೀ. ಮ. ರೇ. $AE=5$ ಸೆಂ.ಮೀ.

**ಕಂಡುಹಿಡಿಯುವುದು :** BC ಯ ಉದ್ದ.




**ರೀತಿ :** ABC $\triangle$ ದಲ್ಲಿ AE ಮಧ್ಯರೇಖೆಯಿದೆ.

$\therefore\ AB^2+AC^2=2AE^2+2BE^2$
ಆದರೆ $AB=6$ ಸೆಂ.ಮೀ. $AC=8$ ಸೆಂ.ಮೀ. ಮ. ರೇ. $AE=5$ ಸೆಂ.ಮೀ........(ದತ್ತ)
$(6)^2+(8)^2=2(5)^2+2BE^2$
ಅಥವಾ $36+64=2(25)+2BE^2$
,, $100=50+2BE^2$
,, $2BE^2=100-50=50$
,, $BE^2=\frac{50}{2}=25$
$\therefore\ BE=\sqrt{25}=5$ ಸೆಂ.ಮೀ.
ಆದರೆ $BC=2BE=2\times5=10$ ಸೆಂ.ಮೀ.

**ಪ್ರಶ್ನೆ 14.** $BC=5$ ಸೆಂ.ಮೀ. $\angle B=\angle C=60$ ಇರುವ ABC ತ್ರಿಕೋನವನ್ನು ರಚಿಸಿ, ಅದರ ಗುರುತ್ವ ಕೇಂದ್ರವನ್ನು ಕಂಡುಹಿಡಿಯಿರಿ.
ಉತ್ತರಕ್ಕೆ ಎಪ್ರಿಲ್ 1984ರ ಪ್ರಶ್ನೆ 14 ನೋಡಿ.

**ಪ್ರಶ್ನೆ 15.** ಬಾಹ್ಯ ಬಿಂದುವಿನಿಂದ ವೃತ್ತಕ್ಕೆ ಎಳೆದ ಸ್ಪರ್ಶಕಗಳು ಸಮವಾಗಿರುತ್ತವೆ ಎಂದು ಸಾಧಿಸಿ.
ಉತ್ತರಕ್ಕೆ ಎಪ್ರಿಲ್ 1984ರ ಪ್ರಶ್ನೆ 16ನೋಡಿ.

**ಪ್ರಶ್ನೆ 16.** O ವೃತ್ತಕೇಂದ್ರವಾಗಿದೆ. PA, PB ಗಳು ಸ್ಪರ್ಶಕಗಳಾಗಿವೆ. $\angle AOB=130^\circ$ ಆದರೆ $\angle PAB$ ಕಂಡುಹಿಡಿಯಿರಿ.

**ದತ್ತ :** $\angle AOB=130^\circ$




**ಕಂಡುಹಿಡಿಯುವುದು :** $\angle PAB$.

**ರೀತಿ :** AP ಸ್ಪರ್ಶಕ OA ಸ್ಪರ್ಶ ಬಿಂದು ವಿನಲ್ಲಿಯ ತ್ರಿಜ್ಯ
$\therefore\ \angle OAP=90^\circ$
ಇನ್ನು OAB $\triangle$ ದಲ್ಲಿ $OA=OB$............
(ಒದೇ $\odot$ ದ ತ್ರಿಜ್ಯಗಳು)
$\therefore\ \angle OAB=\angle OBA$
ಆದರೆ $\angle OAB+\angle OBA=180^\circ-\angle AOB=180^\circ-130^\circ=50^\circ$
ಆದರೆ $\angle OAB=\angle OBA$........(ಸಾಧಿಸಿದೆ)
$\therefore\ \angle OAB=\frac{1}{2}\times50^\circ=25$.
$\therefore\ \angle PAB=\angle OAP-\angle OAB=90^\circ-25^\circ-65^\circ$
$\therefore\ \angle PAB=65^\circ$

**ಪ್ರಶ್ನೆ 17.** ಕೊಟ್ಟಿರುವ ಆಕೃತಿಯಲ್ಲಿ $\triangle ABC$ಯ ಬಾಹುಗಳು ವೃತ್ತವನ್ನು P, Q ಮತ್ತು Rಗಳಲ್ಲಿ ಸ್ಪರ್ಶಿಸುತ್ತವೆ. $\angle B=5^\circ$, $\angle C=70^\circ$ ಆದರೆ $\angle P$ ಮತ್ತು $\angle R$ಗಳನ್ನು ಕಂಡುಹಿಡಿಯಿರಿ.




ದತ್ತ : $\angle B = 50^\circ$
$\angle C = 70^\circ$

ಕಂಡುಹಿಡಿಯುವದು :
$\angle QPR$ ಮತ್ತು
$\angle PRQ$.

ರೀತಿ : PBQ $\triangle$ ದಲ್ಲಿ
BP=BQ........
(ಬಾಹ್ಯ ಬಿಂದುವಿನಿಂದ ಸ್ಪರ್ಶಕಗಳು)
$\therefore \angle BQP = \angle BPQ$
ಆದರೆ $\angle B$ 50°........(ದತ್ತ)
$\therefore \angle BQP = \angle BPQ = \frac{1}{2}$ (180° —50)° $= \frac{1}{2} \times 130^\circ = 65^\circ$
ಆದರೆ $\angle BQP = \angle PRQ$....(ಪರ್ಯಾಯ ⊙ ಖಂಡದಲ್ಲಿನ $\angle$ ಗಳು)
$\therefore \angle PRQ = 65^\circ$
ಇದರಂತೆ $\angle QPR = \frac{1}{2}(180^\circ - 70^\circ) = \frac{1}{2} \times 110^\circ = 55^\circ$ ಎಂದು ಸಾಧಿಸಬಹುದು.
$\therefore \angle QPR = 55^\circ$ ಮತ್ತು $\angle PRQ = 65^\circ$

ಪ್ರಶ್ನೆ 18. ತ್ರಿಜ್ಯಗಳು 4.5 ಸೆಂ.ಮೀ. ಮತ್ತು 3 ಸೆಂ.ಮೀ. ಇರುವ ಮತ್ತು ವೃತ್ತಕೇಂದ್ರಗಳು ಪರಸ್ಪರ 11 ಸೆಂ.ಮೀ. ದೂರದಲ್ಲಿರುವ ಎರಡು ವೃತ್ತಗಳಿಗೆ ನೇರ ಸಾಮಾನ್ಯ ಸ್ಪರ್ಶಕಗಳನ್ನು ಎಳೆಯಿರಿ.

ಉತ್ತರಕ್ಕೆ ಎಪ್ರಿಲ್ 1984ರ ಪ್ರಶ್ನೆ 18 ನೋಡಿ

ಪ್ರಶ್ನೆ 19. ಯೂಲರನ ಸೂತ್ರ N+R=A+2 ನ್ನು ಕೊಟ್ಟಿರುವ ಆಕೃತಿಯಲ್ಲಿ ತಾಳೆನೋಡಿ.



ರೀತಿ : ಆಕೃತಿಯಲ್ಲಿ
ಸಂಪಾತ ಬಿಂದುಗಳು N=7
ವಲಯಗಳು ............R=2
ಕಂಸಗಳು A=7
$\therefore N+R = 7+2$,
$= 9$
$A+2 = 7+2$
$= 9$
$\therefore N+R = A+2$.

ಪ್ರಶ್ನೆ 20. ಕೊಟ್ಟಿರುವ ಜಾಲಕೃತಿಯ ಸಂಖ್ಯಾಯತವನ್ನು ತಯಾರಿಸಿರಿ. ಉತ್ತರಕ್ಕೆ ಎಪ್ರಿಲ್ 1984ರ ಪ್ರಶ್ನೆ 20 ನೋಡಿ.

—●—

# ಗಣಿತ

## ಎಪ್ರಿಲ್–1986 1 ನೆಯ ಪತ್ರಿಕೆ

### (ಅಂಕಗಣಿತ–ಬೀಜಗಣಿತ)

ವೇಳೆ : $2\frac{1}{2}$ ಗಂಟೆ) (ಅಧಿಕ ಗುಣಗಳು : 65

ಪ್ರಶ್ನೆ 1. 35 ರಿಂದ 50ರ ಮಧ್ಯದ ಎಲ್ಲಾ ಅವಿಭಾಜ್ಯ ಸಂಖ್ಯೆಗಳನ್ನು ಬರೆಯಿರಿ.

ಉತ್ತರ : ಅವಿಭಾಜ್ಯ ಸಂಖ್ಯೆಗಳು 37, 41, 43, 47. Ans.

ಪ್ರಶ್ನೆ 2. ಚತುರ್ಥಕ ವಿಚಲನೆಯ ಗುಣಕವನ್ನು ಕಂಡುಹಿಡಿಯಲು ಉಪಯೋಗಿಸುವ ಸೂತ್ರವನ್ನು ಬರೆಯಿರಿ.

ಉತ್ತರ : ಚತುರ್ಥಕ ವಿಚಲನೆಯ ಗುಣಕ $= \frac{Q_3 - Q_1}{Q_3 + Q_1}$

ಪ್ರಶ್ನೆ 3. ರೂ. 95ರಂತೆ ಶೇ. 7ರಲ್ಲಿ ರೂ. 6000 ಸ್ಟಾಕಿಗೆ ಬಂದ ಹಣವೆಷ್ಟು ?

ರೀತಿ : 100 ರೂ. ಸ್ಟಾಕಿಗೆ ಬರುವ ಹಣ=95 ರೂ.
$\therefore$ 6000 ರೂ. ಸ್ಟಾಕಿಗೆ ಬರುವ ಹಣ
$= \frac{95 \times 6000}{100} = 5700$ ರೂ.
$\therefore$ 6000 ರೂ. ಸ್ಟಾಕಿಗೆ ಬಂದ ಹಣ
=5700 ರೂ. Ans.

ಪ್ರಶ್ನೆ 4. $4^p = 64 = 8^q$ ಆದರೆ $p$ ಮತ್ತು $q$ಗಳ ಬೆಲೆ ಕಂಡುಹಿಡಿಯಿರಿ.

ರೀತಿ : $4^p = 64 = 4^3$ $\therefore p = 3$
$8^q = 64 = 8^2$ $\therefore q = 2$

ಪ್ರಶ್ನೆ 5. $(a^3 - b^3)$ ಮತ್ತು $(a^2 - b^2)$ಗಳ ಮ.ಸಾ.ಅ. ಕಂಡುಹಿಡಿಯಿರಿ.

ರೀತಿ : $a^3 - b^3 = (a-b)(a^2+ab+b^2)$......I
$a^2 - b^2 = (a-b)(a+b)$..................II
I ಮತ್ತು II ರಿಂದ ಮ ಸಾ.ಅ. $= a-b$ Ans.

ಪ್ರಶ್ನೆ 6. $(P+Q)^2$, $(P+Q)^3$ ಮತ್ತು $P^3+Q^3$ ಗಳ ಲ.ಸಾ.ಅ. ಕಂಡುಹಿಡಿಯಿರಿ.

ರೀತಿ : $(P+Q)^{3}$, $(P+Q)^{3}$,

$P^3+Q^3=(P+Q)(P^2-PQ+Q^2)$

ಲ.ಸಾ.ಅ.= $(P+Q)^3(P^2-PQ+Q^2)$

Ans.

ಪ್ರಶ್ನೆ 7. $49\times7^{-2}$ ಇದನ್ನು ಸಂಕ್ಷೇಪಿಸಿರಿ.

ರೀತಿ : $45\times7^{-2}=7^2\times7^{-2}=7^{2-2}=7^0=1$ Ans.

ಪ್ರಶ್ನೆ 8. $5x^2-3x=0$ ಸಮೀಕರಣದ ಮೂಲಗಳ ಮೊತ್ತ ಮತ್ತು ಗುಣಲಬ್ಧಗಳನ್ನು ಕಂಡುಹಿಡಿಯಿರಿ.

ರೀತಿ : $5x^2-3x=0$, ಇಲ್ಲಿ $a=5$, $b=-3$, $c=0$

$\therefore$ ಮೂಲಗಳ ಮೊತ್ತ $=\frac{-b}{a}=\frac{-(-3)}{5}=\frac{3}{5}$ Ans.

ಮತ್ತು ಮೂಲಗಳ ಗುಣಲಬ್ಧ $=\frac{c}{a}=\frac{0}{5}=0$ Ans.

ಪ್ರಶ್ನೆ 9. $S_n$ ಮೊತ್ತವು 1 ರಿಂದ $n$ ವರೆಗಿನ $n$ ಸಂಖ್ಯೆಗಳಲ್ಲಿ ಸ್ವಾಭಾವಿಕ ಸಂಖ್ಯೆಗಳಾದರೆ, $S_{24}-S_{10}$ ನ್ನು ಕಂಡುಹಿಡಿಯಿರಿ.

ರೀತಿ : $S_n=\frac{n(n+1)}{2}$

$\therefore\ S_{24}-S_{10}=\frac{24(24+1)}{2}-\frac{10(10+1)}{2}$

$=12(25)-5(11)=300-55$

$=245$ Ans.

ಪ್ರಶ್ನೆ 10. $p^2=q^2+r^2$ ರಲ್ಲಿ $p=15$ ಮತ್ತು $q=9$ ಆದರೆ '$r$' ಬೆಲೆಯನ್ನು ಕಂಡುಹಿಡಿಯಿರಿ.

ರೀತಿ : $p^2=q^2+r^2$ ಅಥವಾ $r^2=p^2-q^2$

$=(15)^2-(9)^2=225-81=144$

$\therefore\ r=\pm\sqrt{144}=\pm12$ Ans.

ಪ್ರಶ್ನೆ 11. $3x:15::20:10$. ಸಮಾನುಪಾತದಲ್ಲಿ $x$ ನ ಬೆಲೆಯನ್ನು ಕಂಡುಹಿಡಿಯಿರಿ.

ರೀತಿ : $3x:15::20:10$.

ಅಂತ್ಯಪದಗಳ ಗುಣಲಬ್ಧ=ಮಧ್ಯಪದಗಳ ಗುಣಲಬ್ಧ.

$\therefore\ 3x\times10=20\times15$ ಅಥವಾ $30x=300$

ಅಥವಾ $x=\frac{300}{30}=10$ $\therefore\ x=10$ Ans.

ಪ್ರಶ್ನೆ 12. $37\frac{1}{2}\%$ ಕ್ಕೆ ಸಮವಾದ ಭಿನ್ನರಾಶಿಯನ್ನು ಕಂಡುಹಿಡಿಯಿರಿ.

ರೀತಿ : $37\frac{1}{2}\%=\frac{37.5}{100}=\frac{375}{1000}=\frac{3}{8}$ Ans.

ಪ್ರಶ್ನೆ 13. $\log 5=0.6990$, $\log 7=0.8451$ ಆದರೆ $\log 35$ ನ್ನು ಕಂಡುಹಿಡಿಯಿರಿ.

ರೀತಿ : $\log 5=0.6990$, $\log 7=0.8451$.

$\therefore\ \log 35=\log(5\times7)=\log 5+\log 7$

$=0.6990+0.8451$

$\therefore\ \log 35=1.5441$ Ans.

ಪ್ರಶ್ನೆ 14. ಪಂಚಮಾನ ಕ್ರಮದಲ್ಲಿರುವ ಕೆಳಗಿನ ಸಂಖ್ಯೆಗಳ ಮೊತ್ತವನ್ನು ಕಂಡುಹಿಡಿಯಿರಿ.

2343, ಮತ್ತು 4212.

ರೀತಿ :
```
  2 3 4 3
  4 2 1 2
1 2 1 1 0(5)
```
$\therefore$ ಮೊತ್ತ $12110_{(5)}$ Ans.

ಪ್ರಶ್ನೆ 15. $5C_4$ ಇದರ ಬೆಲೆಯನ್ನು ಕಂಡುಹಿಡಿಯಿರಿ.

ರೀತಿ : $5C_4=\frac{5!}{(5-4)!\times4!}=\frac{5!}{1!\times4!}$

$=\frac{5\times4!}{1\ \ 4!}=5$ Ans.

ಪ್ರಶ್ನೆ 16. ಸಂಕ್ಷೇಪಿಸಿರಿ. $\sqrt{8}+\sqrt{18}+5\sqrt{2}$

ರೀತಿ : $\sqrt{8}+\sqrt{18}+5\sqrt{2}=\sqrt{4\times2}+\sqrt{9\times2}+5\sqrt{2}$ $2\sqrt{2}+3\sqrt{2}+5\sqrt{2}=\sqrt{2}$ $(2+3+5)=\sqrt{2}(10)=10\sqrt{2}$ Ans.

ಪ್ರಶ್ನೆ 17. ಸಂಕ್ಷೇಪಿಸಿರಿ. $\dfrac{8\frac{1}{3}-2\frac{2}{3}}{4\frac{1}{2}-3\frac{1}{3}}$

ರೀತಿ : $\dfrac{8\frac{1}{3}-2\frac{2}{3}}{4\frac{1}{2}-3\frac{1}{3}}=\dfrac{\frac{25}{3}-\frac{8}{3}}{\frac{9}{2}-\frac{10}{3}}$

$=\left[\frac{25}{3}-\frac{8}{3}\right]\div\left[\frac{9}{2}-\frac{10}{3}\right]$

$=\frac{25-8}{3}\div\frac{27-20}{6}=\frac{17}{3}\div\frac{7}{6}$

$=\frac{17}{3}\times\frac{6}{7}=\frac{34}{7}$ $4\frac{6}{7}$ Ans.

ಪ್ರಶ್ನೆ 18. $f(x)=3x^2-2x+1$ ಆದರೆ $f(0)$ ಮತ್ತು $f(-2)$ ಬೆಲೆಗಳನ್ನು ಕಂಡುಹಿಡಿಯಿರಿ.

ರೀತಿ : $f(x)=3x^2-2x+1$

$f(0)=3(0)^2-2(0)+1=3(0)-2(0)+1$

$=0-0+1=1$ Ans.

ಮತ್ತು $f(-2)=3(-2)^2-2(-2)+1$

$=3(4)+4+1=12+4+1=17$ Ans.

ಪ್ರಶ್ನೆ 19. ಒಂದು ವಾಹನವನ್ನು ಶೇ. 20 ಅಸಲಿಗಿಂತ ಕಡಿಮೆ ಬೆಲೆಗೆ ಮಾರಲಾಯಿತು ಈಗ ಮಾರಿದ ಬೆಲೆಗಿಂತ ರೂ. 150 ಹೆಚ್ಚಿಗೆ ಮಾರಿದ್ದರೆ, 10% ಲಾಭ ಬರುತ್ತಿತ್ತು. ಆದರೆ ಆ ವಾಹನದ ಅಸಲು ಬೆಲೆ ಎಷ್ಟು ?

ರೀತಿ : ವಾಹನದ ಅಸಲು ಬೆಲೆ 100 ರೂ. ಎಂದು ಕಲ್ಪಿಸಿ 20% ನಷ್ಟದಿಂದ ಮಾರಿದಾಗ ಬರುವ ಹಣ

$=100-20=80$ ರೂ.

10% ಲಾಭದಿಂದ ಮಾರಿದಾಗ ಬರುವ ಹಣ

$=100+10=110$ ರೂ.

ಎರಡನೆಯ ಮಾರಾಟದಿಂದ ಬರುವ ಹೆಚ್ಚಿನ ಹಣ

$=110-80=30$ ರೂ.

30 ರೂ. ಹೆಚ್ಚಿಗೆ ಬಂದಾಗ ಅಸಲು ಬೆಲೆ=100ರೂ.

∴ 150 ರೂ. ಹೆಚ್ಚಿಗೆ ಬಂದಾಗ ಅಸಲು ಬೆಲೆ

$=\frac{100\times150}{30}=500$ ರೂ.

∴ ವಾಹನದ ಅಸಲು ಬೆಲೆ $=500$ ರೂ. Ans.

ಪ್ರಶ್ನೆ 20. $a+\frac{1}{a}=5$ ಆದರೆ $a^3+\frac{1}{a^3}$ ಬೆಲೆಯೇನು ?

ರೀತಿ : $a^3+\frac{1}{a^3}=\left[a+\frac{1}{a}\right]^3-3\left[a+\frac{1}{a}\right]$

$=(5)^3-3(5)=125-15=110$ Ans.

ಪ್ರಶ್ನೆ 21. ಸಮೀಕರಣ $nP_1=24$ ರಲ್ಲಿ '$n$' ಬೆಲೆಯನ್ನು ಕಂಡುಹಿಡಿಯಿರಿ.

ರೀತಿ : $nP_1=n=24$

∴ $n=24$ Ans.

ಪ್ರಶ್ನೆ 22. ಛೇದವನ್ನು ಅಕರಣೀಕರಿಸಿ ಸುಲಭರೂಪಕ್ಕೆ ತನ್ನಿ.

$$\frac{\sqrt{2}+\sqrt{3}}{\sqrt{7}+\sqrt{5}}$$

ರೀತಿ : $\frac{\sqrt{2}+\sqrt{3}}{\sqrt{7}+\sqrt{5}}=\frac{\sqrt{2}+\sqrt{3}}{\sqrt{7}+\sqrt{5}}\times\frac{\sqrt{7}-\sqrt{5}}{\sqrt{7}-\sqrt{5}}$

$=\frac{(\sqrt{2}+\sqrt{3})(\sqrt{7}-\sqrt{5})}{(\sqrt{7}+\sqrt{5})(\sqrt{7}-\sqrt{5})}$

$=\frac{\sqrt{14}-\sqrt{10}+\sqrt{21}-\sqrt{15}}{(\sqrt{7})^2-(\sqrt{5})^2}$

$=\frac{\sqrt{14}-\sqrt{10}+\sqrt{21}-\sqrt{15}}{7-5}$

$=\frac{\sqrt{14}-\sqrt{10}+\sqrt{21}-\sqrt{15}}{2}$ Ans.

ಪ್ರಶ್ನೆ 23. $3+\sqrt{2}$ ಮತ್ತು $3-\sqrt{2}$ ಮೂಲಗಳನ್ನು ಹೊಂದಿರುವ ವರ್ಗ ಸಮೀಕರಣವನ್ನು ರಚಿಸಿ.

ರೀತಿ : $m=3+\sqrt{2}$ ಮತ್ತು $n=3-\sqrt{2}$ ಇರಲಿ.

ಈಗ $m+n=3+\sqrt{2}+3-\sqrt{2}=6$.

ಮತ್ತು $m\times n=(3+\sqrt{2})(3-\sqrt{2})$

$=(3)^2-(\sqrt{2})^2=9-2=7$.

∴ ಸಮೀಕರಣ $x^2-(m+n)x+mn=0$

,, $x^2-6x+7=0$ Ans.

ಪ್ರಶ್ನೆ 24. $\begin{bmatrix}x^2 & 0\\ 5 & 4\end{bmatrix}+\begin{bmatrix}2 & 1\\ 0 & 2\end{bmatrix}=\begin{bmatrix}11 & 1\\ 5 & 6\end{bmatrix}$ ಆದರೆ $x$ ನ್ನು ಬಿಡಿಸಿ.

ರೀತಿ : $\begin{bmatrix}x^2 & 0\\ 5 & 4\end{bmatrix}+\begin{bmatrix}2 & 1\\ 0 & 2\end{bmatrix}=\begin{bmatrix}11 & 1\\ 5 & 6\end{bmatrix}$

ಅಥವಾ $\begin{pmatrix}x^2+2 & 0+1\\ 5+0 & 4+2\end{pmatrix}=\begin{pmatrix}11 & 1\\ 5 & 6\end{pmatrix}$

,, $\begin{bmatrix}x^2+2 & 6\\ 5 & 1\end{bmatrix}=\begin{bmatrix}11 & 1\\ 5 & 6\end{bmatrix}$ ∴ $x^2+2=11$

ಅಥವಾ $x^2=11-2=9$ ಅಥವಾ

$x=\pm\sqrt{9}=\pm3$.

∴ $x=\pm3$ Ans.

ಪ್ರಶ್ನೆ 25. $\left(\sqrt{a}-\frac{1}{\sqrt{a}}\right)^2$ ಇದನ್ನು ವಿಸ್ತರಿಸಿ.

ರೀತಿ : $\left[\sqrt{a}-\frac{1}{\sqrt{a}}\right]^2$

$=(\sqrt{a})^2-2(\sqrt{a})\left[\frac{1}{\sqrt{a}}\right]+\left(\frac{1}{\sqrt{a}}\right)^2$

$=a-2+\frac{1}{a}$ Ans.

ಪ್ರಶ್ನೆ 26. K={4,6,8,10,12} L={8,10,12,14, 16} ಮತ್ತು M={12,14,16,18,20}

ಆದರೆ $K \cap (L \cup M)$ ಕಂಡುಹಿಡಿಯಿರಿ.

ಉತ್ತರಕ್ಕೆ ಅಕ್ಟೋಬರ 1984ರ ಪ್ರಶ್ನೆ 19 ನೋಡಿ.

**ಪ್ರಶ್ನೆ 27.** ಎರಡು ಸಂಖ್ಯೆಗಳ ಮೊತ್ತ 18, ಅವುಗಳ ವರ್ಗಗಳ ಮೊತ್ತ 290. ಆ ಸಂಖ್ಯೆಗಳನ್ನು ಕಂಡುಹಿಡಿಯಿರಿ.

**ರೀತಿ :** ಎರಡು ಸಂಖ್ಯೆಗಳಲ್ಲಿ ಒಂದು ಸಂಖ್ಯೆ $x$ ಎಂದು ಕಲ್ಪಿಸಿ.

$\therefore$ ಇನ್ನೊಂದು ಸಂಖ್ಯೆ $18-x$

ಸಮಸ್ಯೆಯ ಪ್ರಕಾರ –

$x^2+(18-x)^2=290$

ಅಥವಾ $x^2+324-36x+x^2=290$

ಅಥವಾ $2x^2-36x+324-290=0$

„ $2x^2-36x+34=0$

„ $x^2-18x+17=0$

„ $x^2-17x-x+17=0$

„ $x(x-17)-1(x-17)=0$

„ $(x-17)(x-1)=0$

$x-17=0$ ಇದ್ದರೆ $x=17$

$x-1=0$ „ $x=1$

$\therefore$ ಸಂಖ್ಯೆಗಳು 17 ಮತ್ತು 1 **Ans.**

**ಪ್ರಶ್ನೆ 28.** ಕಂತಿನ ಪ್ರಕಾರ ಒಬ್ಬನು ಒಂದು ರೇಡಿಯೋವನ್ನು ರೂ.450ಕ್ಕೆ ಕೊಂಡು ಕೊಳ್ಳುತ್ತಾನೆ 10 ತಿಂಗಳ ಕಾಲ ಅವನು ತಿಂಗಳಿಗೆ 48 ರೂ. ಗಳಂತೆ ಕೊಟ್ಟರೆ, ಬಡ್ಡಿ ದರವೆಷ್ಟು ?

**ರೀತಿ :** ರೇಡಿಯೋದ ಅಸಲು ಬೆಲೆ = 450 ರೂ.

ಕಂತಿನಿಂದ ಕೊಂಡಾಗ ಅದರ ಬೆಲೆ $=(48\times10)$ $=480$ ರೂ.

$\therefore$ ಕಂತಿನಿಂದ ಕೊಂಡಾಗ ಕೊಡುವ ಬಡ್ಡಿ $=(480-450)=30$ ರೂ.

ಇನ್ನು ಕಂತುಗಳ ಸಂಖ್ಯೆ $n=10$, ಪ್ರತಿಕಂತಿನ ಹಣ $P=48$ ರೂ.

ಕೊಡಬೇಕಾದ ಬಡ್ಡಿ $E=30$ ರೂ.

ಬಡ್ಡಿ ದರ $=r$ ಇರಲಿ.

ಸೂತ್ರದ ಪ್ರಕಾರ $r$

$$=\frac{2400E}{n[(n+1)P-2E]}$$

$$=\frac{2400\times30}{10[(10+1)48-2\times30]}$$

$$=\frac{2400\times30}{10(11\times48-60)}$$

$$=\frac{2400\times30}{10(528-60)}$$

$$=\frac{2400\times3}{468}=\frac{200}{13}=15\frac{5}{13}$$

$\therefore$ ಬಡ್ಡಿದರ $=15\frac{3}{13}$ % **Ans.**

**ಪ್ರಶ್ನೆ 29.** $y=\frac{1}{2}x^2$ ಇದರ ನಕ್ಷೆಯನ್ನು ಬರೆಯಿರಿ.

**ರೀತಿ :** $y=\frac{1}{2}x^2$

| $x$ | 2 | 4 | 6 | 0 | -2 | -4 | -6 |
|---|---|---|---|---|---|---|---|
| $y$ | 2 | 8 | 18 | 0 | 2 | 8 | 18 |



ಸ್ಕೇಲು 1 ಸೆಂ.ಮೀ. = 1 ಮಾನ X—ಅಕ್ಷದ ಗುಂಟ

5 ಸೆಂ.ಮೀ. = 1 ಮಾನ Y—ಅಕ್ಷದ ಗುಂಟ

**ಪ್ರಶ್ನೆ 30.** ಒಬ್ಬನು ಒಂದು ಸ್ಥಳದಿಂದ ಈಶಾನ್ಯಕ್ಕೆ 13 ಕಿ.ಮೀ. ಹೋಗಿ ಅಲ್ಲಿಂದ 5 ಕಿ.ಮೀ. ದಕ್ಷಿಣ ದಿಕ್ಕಿಗೆ ಹೋಗುತ್ತಾನೆ ಅವನು ಈಗ ಪ್ರಯಾಣ ಪ್ರಾರಂಭಿಸಿದ ಸ್ಥಳದಿಂದ ಎಷ್ಟು ದೂರದಲ್ಲಿದ್ದಾನೆ? ಇದನ್ನು ತೋರಿಸುವ ಒಂದು ಚಿತ್ರವನ್ನು ಬರೆಯಿರಿ.

**ರೀತಿ :** ABC△ದಲ್ಲಿ AB=13 ಕಿ.ಮೀ. BC=5ಕಿ.ಮೀ.

$\angle ACB=90^\circ$




$\therefore$ $AC^2+BC^2$

$=AB^2$ ಅಥವಾ $AC^2$

$=AB^2-BC^2$

$=(13)^2-(5)^2$

$=169-25=144$ $\therefore$ $AC=\sqrt{144}=12$ ಕಿ.ಮೀ.

∴ ಆವನು ಹೊರಟ ಸ್ಥಳದಿಂದ 12 ಕಿ.ಮೀ. ದೂರದಲ್ಲಿದ್ದಾನೆ. Ans.

ಪ್ರಶ್ನೆ 31. ಪ್ರತಿ ತಿಂಗಳು ರೂ. 10 ರ ಸಂಚಿತಾವಧಿ ಠೇವಣಿಗೆ 60 ತಿಂಗಳ ನಂತರ ಬ್ಯಾಂಕ ರೂ. 741 ಕೊಡುತ್ತದೆ. ರೂ. 25 ರಂತೆ ಇದೇ ಮಾದರಿ ಠೇವಣಿಯಲ್ಲಿ ಇಟ್ಟ ಹಣ 60 ತಿಂಗಳು ಆದ ಮೇಲೆ ಎಷ್ಟು ಮೊತ್ತ ಮತ್ತು ಬಡ್ಡಿಗಳಿಸಿಕೊಡುತ್ತದೆ ?

ರೀತಿ : 10 ರೂ ದಂತೆ 60 ತಿಂಗಳು ಕಟ್ಟಿದಾಗ ಸಿಗುವ ಹಣ = 741 ರೂ.

25 ರೂ.ದಂತೆ 60 ತಿಂಗಳು ಕಟ್ಟಿದಾಗ ಸಿಗುವಹಣ

$= \frac{741 \times 25}{10} = \frac{18525}{10}$ ರೂ.

∴ 25 ರೂ ದಂತೆ ಕಟ್ಟಿದಾಗ ಸಿಗುವ ಮೊತ್ತ = ರೂ. 1852.50 Ans.

25 ರೂ.ದಂತೆ 60 ತಿಂಗಳು ಕಟ್ಟಿದ ಒಟ್ಟು ಹಣ

$= 25 \times 60 = 1500$ ರೂ.

∴ ಗಳಿಸಿದ ಬಡ್ಡಿ = 1852.50—1500

= 352.50 ರೂ. Ans.

ಪ್ರಶ್ನೆ 32. $A = \begin{bmatrix} 2 & 6 \\ 4 & 8 \end{bmatrix}$ ಮತ್ತು $B = \begin{bmatrix} 6 & 3 \\ 9 & -3 \end{bmatrix}$

ಆದರೆ $A + \frac{1}{3}B$ ಯನ್ನು ಕಂಡುಹಿಡಿಯಿರಿ.

ರೀತಿ : $A = \begin{pmatrix} 2 & 6 \\ 4 & 8 \end{pmatrix}$ ಮತ್ತು $B = \begin{pmatrix} 6 & 3 \\ 9 & -3 \end{pmatrix}$

$\therefore \frac{1}{3}B = \frac{1}{3}\begin{pmatrix} 6 & 3 \\ 9 & -3 \end{pmatrix} = \begin{bmatrix} 2 & 1 \\ 3 & -1 \end{bmatrix}$

$\therefore A + \frac{1}{3}B = \begin{pmatrix} 2 & 6 \\ 4 & 8 \end{pmatrix} + \begin{pmatrix} 2 & 1 \\ 3 & -1 \end{pmatrix}$

$= \begin{pmatrix} 2+2 & 6+1 \\ 4+3 & 8-1 \end{pmatrix} = \begin{pmatrix} 4 & 7 \\ 7 & 7 \end{pmatrix}$ Ans.

ಪ್ರಶ್ನೆ 33. ಒಂದು ಚೀಲದಲ್ಲಿರುವ ಹತ್ತು ಬಿಳಿಯ ಮತ್ತು 20 ಕೆಂಪು ಚೆಂಡುಗಳಲ್ಲಿ ಒಂದು ಕೆಂಪು ಚೆಂಡನ್ನು ತೆಗೆಯುವ ಸಂಭವವನ್ನು ಕಂಡು ಹಿಡಿಯಿರಿ.

ರೀತಿ : ಒಂದು ಬಿಳಿಯ ಚೆಂಡನ್ನು ತೆಗೆಯುವ ವಿಧಗಳು $= 10C_1 = 10$. ಒಂದು ಕೆಂಪು ಚೆಂಡು ತೆಗೆಯುವ ವಿಧಗಳು $= 20C_1 = 20$

∴ ಒಂದು ಚೆಂಡನ್ನು ತೆಗೆಯುವ ಒಟ್ಟು ವಿಧಗಳು $= 20 + 10 = 30$.

∴ ಒಂದು ಕೆಂಪು ಚೆಂಡುತೆಗೆಯುವ ಸಂಭವ ನಿಯತಿ $= \frac{20}{30} = \frac{2}{3}$ Ans.

ಪ್ರಶ್ನೆ 34. ಕೆಳಗೆ ಕೊಡಲಾಗುವ ಅಂಕಿ ಅಂಶಗಳಿಂದ ಪ್ರಮಾಣ ವಿಚಲನವನ್ನು ಕಂಡುಹಿಡಿಯಿರಿ. ತೂಕ (ಪೌಂಡುಗಳಲ್ಲಿ) 70,80,60,50,40,65 ಮತ್ತು 55

ರೀತಿ :

| ತೂಕ (ಪೌಂಡುಗಳಲ್ಲಿ) | ಸರಾಸರಿಯಿಂದ ವಿಚಲನೆ ($d$) | $d^2$ |
|---|---|---|
| 40 | —20 | 400 |
| 50 | —10 | 100 |
| 55 | -5 | 25 |
| 60 | 0 | 0 |
| 65 | 5 | 25 |
| 70 | 10 | 100 |
| 80 | 20 | 400 |
| 420 | N=7 | $\Sigma d^2 = 1050$ |

ಸರಾಸರಿ $= \frac{420}{7} = 60$

∴ ಪ್ರಮಾಣ ವಿಚಲನೆ $= \sqrt{\frac{\Sigma d^2}{N}} = \sqrt{\frac{1050}{7}}$

$\therefore \sigma = \sqrt{150} = 12.2$

∴ ಪ್ರಮಾಣ ವಿಚಲನೆ = 12.2 Ans.

ಪ್ರಶ್ನೆ 35. ಮಾಡ್ 3ರ ಸಂಕಲನ ಕೋಷ್ಟಕವನ್ನು ರಚಿಸಿ ಮಾಡ್ 3 ಸಂಕಲನ ಬೀಜ ಗಣಿತ ಸಂರಚನೆ ಎಂದು ತೋರಿಸಿ.

ರೀತಿ : $Z_3 = \{0, 1, 2\}$ ಇರಲಿ

| $Z_3$+ | 0 | 1 | 2 |
|---|---|---|---|
| 0 | 0 | 1 | 2 |
| 1 | 1 | 2 | 0 |
| 2 | 2 | 0 | 1 |

$0+1 = 1 \in Z_3$

$1+2 = 0 \in Z_3$

$2+2 = 1 \in Z_3$

$\therefore \forall a, b \in Z_3 \ (a+b) \in Z_3$

∴ (ಮಾಡ್ 3+)ಒಂದು ಬೀಜ ಗಣಿತ ಸಂರಚನೆ.

....●....

# ಗಣಿತ

**ಎಪ್ರಿಲ್-1986** **2 ನೆಯ ಪತ್ರಿಕೆ**

ವೇಳೆ : 2 ಗಂಟೆ] [ಅಧಿಕ ಗುಣಗಳು : 35

## ರೇಖಾಗಣಿತ

ಪ್ರಶ್ನೆ 1. ಯೋಗ್ಯ ಉತ್ತರಗಳಿಂದ ಖಾಲಿ ಜಾಗಗಳನ್ನು ತುಂಬಿರಿ.

(a) ತ್ರಿಭುಜದ ಗೋಪುರದ ಮುಖಗಳ ಸಂಖ್ಯೆ ನಾಲ್ಕು

(b) ಒಂದು ಓರೆ ಸಮತಲವು ಒಂದು ಕ್ಷಿತಿಜ ಸಮತಲವನ್ನು ಛೇದಿಸಿದಾಗ ಛೇದಕ ರೇಖೆಯು ಕ್ಷಿತಿಜ ರೇಖೆ ಆಗಿರುತ್ತದೆ.

ಪ್ರಶ್ನೆ 2. ABC △ ದಲ್ಲಿ $AB = BC = AC$, BC ಯನ್ನು D ದ ವರೆಗೆ ವೃದ್ಧಿಸಿದೆ. $\angle ACD$ ದ ಅಳತೆ ಕಂಡುಹಿಡಿಯಿರಿ.




ದತ್ತ : $AB = BC = AC$

ಕಂಡುಹಿಡಿಯುವುದು : $\angle ACD$

ರೀತಿ : ABC △ ದಲ್ಲಿ

$AB = BC = AC$........(ದತ್ತ)

$\therefore \angle A = \angle B = \angle ACB = 60^\circ$

$\therefore$ ಬಾಹ್ಯ $\angle ACD = \angle A + \angle B$

$= 60^\circ + 60^\circ = 120$

$\therefore \angle ACD = 120^\circ$.

ಪ್ರಶ್ನೆ 3. PQR △ ದಲ್ಲಿ $\angle P = 50^\circ$, $\angle Q$ $60^\circ$ ಆದರೆ ತ್ರಿಭುಜದ ಅತ್ಯಂತ ದೊಡ್ಡ ಬಾಹು ಯಾವುದು ?

ದತ್ತ : $\angle P = 50^\circ$

$\angle Q$ $60^\circ$

ಕಂಡುಹಿಡಿಯುವದು :

ಅತ್ಯಂತ ದೊಡ್ಡ ಬಾಹು.




ರೀತಿ : PQR △ ದಲ್ಲಿ

$\angle P + \angle Q + \angle R = 180^\circ$

ಅಥವಾ $50^\circ + 60^\circ + \angle R = 180^\circ$

ಅಥವಾ $\angle R = 180^\circ - 60^\circ - 50^\circ = 70^\circ$

$\therefore$ PQR △ ದಲ್ಲಿ $\angle R$ ಎಲ್ಲಕ್ಕೂ ದೊಡ್ಡದು.

$\therefore$ PQ ಬಾಹುವು ಅತ್ಯಂತ ದೊಡ್ಡ ಬಾಹು.

ಪ್ರಶ್ನೆ 4. O ಕೇಂದ್ರವಾಗಿರುವ ಒಂದು ವೃತ್ತದಲ್ಲಿ AB DD ಒಂದು ಚತುರ್ಭುಜವಾಗಿದೆ. $\angle ABC = 130^\circ$, ಆದರೆ $\angle AOC$ದ ಅಳತೆ ಕಂಡು ಹಿಡಿಯಿರಿ.

ದತ್ತ : $\angle ABC = 130^\circ$




ಕಂಡುಹಿಡಿಯುವುದು : $\angle AOC$

ರೀತಿ : ABCD ಚಕ್ರೀಯ ಚತುರ್ಭುಜವಿದೆ.

$\therefore \angle ABC$

$\angle D = 180^\circ$

ಅಥವಾ $\angle D = 180^\circ - \angle ABC$

$= 180^\circ - 130^\circ = 50^\circ$

ಇನ್ನು $\angle AOC$ ಕೇಂದ್ರ ಕೋನವಿದ್ದು $\angle D$ ಪರಿಧಿಕೋನವಿದೆ.

$\therefore \angle AOC = 2\angle D = 2 \times 50^\circ = 100^\circ$

$\therefore \angle AOC = 100^\circ$

ಪ್ರಶ್ನೆ 5. KLMN ಸಮಾಂತರ ಚತುರ್ಭುಜದಲ್ಲಿ $\angle K = 65^\circ$ ಆದರೆ ಉಳಿದ ಕೋನಗಳನ್ನು ಕಂಡು ಹಿಡಿಯಿರಿ.

ದತ್ತ : $\angle K = 65^\circ$

ಕಂಡುಹಿಡಿಯುವುದು :

ಉಳಿದ ಕೋನಗಳು




ರೀತಿ : $\angle M = \angle K$

$=$........$65^\circ$

(//.ಚ.ಭು.

ಅಭಿಮುಖ ∠) ಗಳು

$\angle K + \angle L = 180^\circ$........(KN//LM)

∴ $\angle L = 180 - \angle K = 180 - 65^\circ = 115^\circ$

ಆದರೆ $\angle L = \angle N = 115^\circ$......(//ಚ.ಬು.ದ. ಅಭಿಮುಖ ∠ ಗಳು).

∴ $\angle L = 115^\circ$, $\angle M = 65^\circ$, $\angle N = 115^\circ$.

**ಪ್ರಶ್ನೆ 6.** O ಕೇಂದ್ರವಾಗಿರುವ ವೃತ್ತದಲ್ಲಿ ಜ್ಯಾ PQ=6 ಸೆಂ.ಮೀ. ಇದೆ. ಜ್ಯಾ RS=4 ಸೆಂ.ಮೀ. ಇದೆ. ಇವುಗಳಲ್ಲಿ ಕೇಂದ್ರಕ್ಕೆ ಸಮೀಪವಾಗಿರುವ ಜ್ಯಾ ಯಾವುದು ?

**ರೀತಿ :** ಎರಡು ಅಸಮಾನ ಜ್ಯಾಗಳಲ್ಲಿ ದೊಡ್ಡ ಜ್ಯಾವು ಕೇಂದ್ರಕ್ಕೆ ಸಮೀಪವಾಗಿರುತ್ತದೆ.

ಆದರೆ PQ = 6 ಸೆಂ.ಮೀ. RS = 4 ಸೆಂ.ಮೀ.

∴ PQ > RS.

∴ PQ ಜ್ಯಾವು ಕೇಂದ್ರಕ್ಕೆ ಸಮೀಪವಾಗಿರುತ್ತದೆ.

**ಪ್ರಶ್ನೆ 7.** ಒಂದು ನೀರಿನ ತೊಟ್ಟಿಯ ಉದ್ದ 100 ಸೆಂ. ಮೀ. ಅಗಲ 80 ಸೆಂ.ಮೀ. ಆಳ 50 ಸೆಂ.ಮೀ. ಆದರೆ ಅದರಲ್ಲಿ ಹಿಡಿಸುವ ನೀರಿನ ಗಾತ್ರವನ್ನು ಕಂಡುಹಿಡಿಯಿರಿ.

**ರೀತಿ :** ನೀರಿನ ತೊಟ್ಟಿಯ ಗಾತ್ರ

= ಉದ್ದ × ಅಗಲ × ಎತ್ತರ

= (100 × 80 × 50) ಘ.ಸೆಂ.ಮೀ.

= 4,00,000 ಘ.ಸೆಂ.ಮೀ.

∴ ನೀರಿನ ಗಾತ್ರ = 400 ಲೀಟರ್‌ಗಳು Ans.

**ಪ್ರಶ್ನೆ 8.** △XYZದಲ್ಲಿ XA ಮಧ್ಯರೇಖೆ 7.8 ಸೆಂ.ಮೀ ಇದೆ. G ಆದರ ಗುರುತ್ವಕೇಂದ್ರ XG ಉದ್ದವನ್ನು ಕಂಡುಹಿಡಿಯಿರಿ.

**ರೀತಿ :** ಗುರುತ್ವ ಕೇಂದ್ರವು ಮಧ್ಯರೇಖೆಯ ತ್ರಿಭುಜಕ ಬಿಂದುವಿರುತ್ತದೆ.

∴ XG $\frac{2}{3}$XA = $\frac{2}{3} \times 7.8$ 5.2 ಸೆಂ.ಮೀ. Ans.

**ಪ್ರಶ್ನೆ 9.** AB ಮತ್ತು CDಗಳು ಪರಸ್ಪರ ಸ್ಪರ್ಶಿಸುವ ಎರಡು ವೃತ್ತಗಳಿಗೆ ಸಾಮಾನ್ಯ ಸ್ಪರ್ಶಕಗಳಾಗಿವೆ. CD 2 ಸೆಂ.ಮೀ ಆದರೆ ABಯ ಉದ್ದವನ್ನು ಕಂಡುಹಿಡಿಯಿರಿ.




**ದತ್ತ :**

CD = 2 ಸೆಂ.ಮೀ.

**ಕಂಡುಹಿಡಿಯುವದು :**

AB ಯ ಉದ್ದಳತೆ.

**ರೀತಿ :** AD = CD

= 2 ಸೆಂ.ಮೀ.

........(ಬಾಹ್ಯ ಬಿಂದುವಿನಿಂದ ಸ್ಪರ್ಶಕಗಳು)

BD = CD = 2 ಸೆಂ.ಮೀ.

........(ಬಾಹ್ಯ ಬಿಂದುವನಿಂದ ಸ್ಪರ್ಶಕಗಳು)

∴ AD + BD = (2+2) ಸೆಂ.ಮೀ.

ಅಥವಾ AB = 4 ಸೆಂ.ಮೀ.

**ಪ್ರಶ್ನೆ 10.** LMN △ದಲ್ಲಿ A ಮತ್ತು Bಗಳು LM ಮತ್ತು MNಗಳ ಮಧ್ಯ ಬಿಂದುಗಳಾವೆ. AB = 2.8 ಸೆಂ.ಮೀ. ಆದರೆ LNದ ಉದ್ದವನ್ನು ಕಂಡುಹಿಡಿಯಿರಿ.




**ದತ್ತ :** AB = 2.8 ಸೆಂ.ಮೀ.

**ಕಂಡುಹಿಡಿಯುವುದು :** LNದ ಉದ್ದ

**ರೀತಿ :** LMN △ದಲ್ಲಿ A ಮತ್ತು B ಗಳು LM ಮತ್ತು MNಗಳ ಮಧ್ಯಬಿಂದುಗಳಿವೆ.

∴ AB = $\frac{1}{2}$ LN ಅಥವಾ

LN = 2AB = 2 × 2·8 = 5.6 ಸೆಂ ಮೀ.

∴ LN = 5.6 ಸೆಂ.ಮೀ.

**ಪ್ರಶ್ನೆ 11.** ಎರಡು ವೃತ್ತಗಳು ಪರಸ್ಪರ ಸ್ಪರ್ಶಿಸಿದಾಗ, ಸ್ಪರ್ಶ ಬಿಂದು ಮತ್ತು ವೃತ್ತಗಳ ಕೇಂದ್ರಗಳು ಒಂದೇ ಸರಳರೇಖೆಯಲ್ಲಿರುತ್ತವೆ. ಇದನ್ನು ಸಾಧಿಸಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 16 ನೋಡಿ.

**ಪ್ರಶ್ನೆ 12.** 3 ಸೆಂ.ಮೀ. ತ್ರಿಜ್ಯದ ಒಂದು ವೃತ್ತವನ್ನು ಎಳೆಯಿರಿ. ಆದರ ಕೇಂದ್ರದಿಂದ 5 ಸೆಂ.ಮೀ. ದೂರದಲ್ಲಿರುವಂತೆ, P ಬಿಂದುವನ್ನು ಗುರುತಿಸಿ. P ಯಿಂದ ವೃತ್ತಕ್ಕೆ ಎರಡು ಸ್ಪರ್ಶಕಗಳನ್ನು ಎಳೆಯಿರಿ. ಅವುಗಳ ಉದ್ದವನ್ನು ಅಳೆದು ಲೆಕ್ಕಾಚಾರದಿಂದ ತಾಳೆ ನೋಡಿ.

**ರಚನಾ ಕ್ರಮ :**



O ಕೇಂದ್ರದ 3 ಸೆಂ.ಮೀ. ತ್ರಿಜ್ಯದ ವೃತ್ತವನ್ನು ಎಳೆಯಿರಿ. ಕೇಂದ್ರದಿಂದ 5ಸೆಂ.ಮೀ. ದೂರದಲ್ಲಿ P ಬಿಂದು ಗುರುತಿಸಿ. OP ಸೇರಿಸಿ. OPದ ಮಧ್ಯಬಿಂದು M ಕೇಂದ್ರವೆಂದು MP ತ್ರಿಜ್ಯದಿಂದ ವೃತ್ತವನ್ನು ಎಳೆಯಿರಿ. ಈ ವೃತ್ತವು O ಕೇಂದ್ರದ ವೃತ್ತವನ್ನು A,B ಛೇದಿಸಲಿ AP, BP ಸೇರಿಸಿ AP, BPಗಳು ಇಚ್ಛಿತ ಸ್ಪರ್ಶಕಗಳು.

ಅಳತೆಯ ಪ್ರಕಾರ $AP = BP = 4$ ಸೆಂ.ಮೀ.

ಲೆಕ್ಕಾಚಾರದಿಂದ—OAP $\triangle$ದಲ್ಲಿ $\angle OAP = 90^\circ$

$\therefore \quad AP^2 + OA^2 = OP^2$

ಅಥವಾ $AP^2 = OP^2 - OA^2 = (5)^2 - (3)^2$

$= 25 - 9 = 16 \quad \therefore \quad AP = \sqrt{16} = 4$ ಸೆಂ.ಮೀ.

$\therefore \quad AP = BP = 4$ ಸೆಂ.ಮೀ.

**ಪ್ರಶ್ನೆ 13.** ಏಕಪಾದದ ಮೇಲೆ ಒಂದೇ ಜೊತೆ ಸಮಾಂತರ ಸರಳರೇಖೆಗಳ ನಡುವೆ ಇರುವ ತ್ರಿಭುಜಗಳು ವಿಸ್ತೀರ್ಣದಲ್ಲಿ ಸಮನಾಗಿರುತ್ತವೆ. ಎಂದು ಸಾಧಿಸಿ.



**ದತ್ತ :** ABC, DBC $\triangle$ಗಳು BC ಒಂವೇ ಪಾದದ ಮೇಲೆ BC ಹಾಗೂ AD ಅವೇ ಎರಡು ಸಮಾಂತರ ಸರಳರೇಖೆಗಳ ನಡುವೆ ಇರುತ್ತವೆ.

**ಸಾಧನೀಯ :** $\triangle ABC = \triangle DBC$......(ಕ್ಷೇತ್ರದಲ್ಲಿ)

**ರಚನೆ :** C ದೊಳಗಿಂದ CE//BA, CF//BD ಎಳೆದು ABCE, DBCF ಸಮಾಂತರ ಚತುರ್ಭುಜಗಳನ್ನು ಪೂರ್ಣ ಮಾಡಿರಿ.

**ಸಾಧನೆ :** ABCE ಮತ್ತು DBCF ಸಮಾಂತರ ಚತುರ್ಭುಜಗಳು BC ಒಂದೇ ಪಾದದ ಮೇಲೆ, BC ಹಾಗೂ AF ಅವೇ ಎರಡು ಸಮಾಂತರ ಸರಳ ರೇಖೆಗಳ ನಡುವೆ ಇರುತ್ತವೆ.

$\therefore$ // ಚ.ಭು. ABCE // ಚ.ಭು. DBCF........(ಕ್ಷೇತ್ರದಲ್ಲಿ)

ಆದರೆ AC, DCಗಳು ಕ್ರಮವಾಗಿ ABCE ಮತ್ತು DBCF ಸಮಾಂತರ ಚತುರ್ಭುಜಗಳು ಕರ್ಣಗಳಿವೆ.

$\therefore \quad ABC = \frac{1}{2}$ // ಚ.ಭು. ABCE,

$\triangle DBC = \frac{1}{2}$ // ಚ.ಭು DBCF.

ಆದರೆ // ಚ.ಭು ABCE // ಚ ಭು. DBCF........(ಸಾಧಿಸಿದೆ).

$\therefore \quad \triangle ABC = \triangle DBC$........(ಕ್ಷೇತ್ರದಲ್ಲಿ)

**ಪ್ರಶ್ನೆ 14.** ಕೊಟ್ಟಿರುವ ಚಿತ್ರದಲ್ಲಿ O ಕೇಂದ್ರವಾಗಿರುವ ವೃತ್ತಕ್ಕೆ B ಯಲ್ಲಿ PQ ವೃತ್ತ ಸ್ಪರ್ಶಕವಾದೆ $\angle ABP = 70^\circ$ ಆದರೆ $\angle AOB$ ಮತ್ತು $\angle OAB$ ಯನ್ನು ಕಂಡುಹಿಡಿಯಿರಿ.

**ದತ್ತ :** $\angle ABP = 70^\circ$

**ಕಂಡುಹಿಡಿಯುವುದು :** $\angle AOB \quad \angle OAB$



**ರೀತಿ :** PQ ಸ್ಪರ್ಶಕವಿದ್ದು OB ಸ್ಪರ್ಶಬಿಂದುವಿನಲ್ಲಿಯ ತ್ರಿಜ್ಯವದೆ.

$\therefore \quad \angle OBP = 90^\circ$. ಆಧರೆ

$\angle ABP = 70^\circ$............(ದತ್ತ)

$\therefore \quad \angle OBA = \angle OBP - \angle ABP$

$= 90^\circ - 70^\circ = 20^\circ$.

ಆದರೆ $\angle OAB = \angle OAB = 20^\circ$............ (OA OB)

ಇನ್ನು OAB $\triangle$ದಲ್ಲಿ $\angle OBA = \angle OAB = 20^\circ$........(ಸಾಧಿಸಿದೆ).

$\therefore \quad \angle AOB = 180^\circ - 20^\circ - 20^\circ = 140^\circ$

$\therefore \quad \angle AOB = 140^\circ, \quad \angle OAB = 20$.

**ಪ್ರಶ್ನೆ 15.** DE=7 ಸೆಂ. ಮೀ. EF=6 ಸೆಂ. ಮೀ DF=8 ಸೆಂ. ಮೀ. DEF △ ರಚಿಸಿ ಅಂತಃಕೇಂದ್ರವನ್ನು ಕಂಡುಹಿಡಿಯಿರಿ.




I ಇದು DEF △ದ ಅಂತಃಕೇಂದ್ರ.

**ಪ್ರಶ್ನೆ 16.** ಕೊಟ್ಟಿರುವ ಚಿತ್ರದಲ್ಲಿ TA ಯು A ಬಿಂದುವಿನಲ್ಲಿ ವೃತ್ತಸ್ಪರ್ಶಕವಾಗಿದೆ. TBC ವೃತ್ತಛೇದಕವಾಗಿದೆ. $\angle ATB = 50^\circ$ ಮತ್ತು $\angle CAT = 100^\circ$ ಆದರೆ $\angle ABC$ ಕಂಡುಹಿಡಿಯಿರಿ.

**ದತ್ತ :** $\angle ATB=50^\circ$, $\angle CAT=100^\circ$

**ಕಂಡುಹಿಡಿಯುವುದು :** $\angle ABC$




**ರೀತಿ :** CAT △ ದಲ್ಲಿ $\angle CAT=100^\circ$, $\angle ATB=50^\circ$ ........(ದತ್ತ)

$\therefore \angle ACT=180^\circ-100^\circ-50^\circ = 30^\circ$. ಆದರೆ $\angle BAT=\angle ACT=30^\circ$ ...... (ಪರ್ಯಾಯಿ ವೃತ್ತಖಂಡದಲ್ಲಿಯ ∠ ಗಳು).

ಇನ್ನು ABT △ ದಲ್ಲಿ ಬಾಹ್ಯ $\angle ABC$ $= ATB+\angle BAT$ $=50^\circ+30^\circ=80^\circ$.

$\therefore \angle ABC=80^\circ$.

**ಪ್ರಶ್ನೆ 17.** ABC △ ದಲ್ಲಿ ∠B ವಿಶಾಲಕೋನವದೆ. AB=17 ಸೆಂ. ಮೀ. BC=12 ಸೆಂ. ಮೀ. ಮತ್ತು CB ಯ ಮೇಲಿನ AB ಯ ಪ್ರಕ್ಷೇಪ 8 ಸೆಂ. ಮೀ. ಆದರೆ AC ಯ ಉದ್ದವನ್ನು ಲೆಕ್ಕಾಚಾರ ಮಾಡಿರಿ.

**ದತ್ತ :** AB = 17 ಸೆಂ.ಮೀ. BC = 12 ಸೆಂ.ಮೀ. AB ಯ ಪ್ರಕೇಪ BD = 8 ಸೆಂ.ಮೀ.




**ಕಂಡುಹಿಡಿಯುವುದು :** AC

**ರೀತಿ :** ABC △ ದಲ್ಲಿ ∠B ವಿಶಾಲಕೋನವದೆ.

$\therefore AC^2=AB^2+BC^2+2BC.BD$
$=(17)^2+(12)+2(12)(8)$ 289 $+144+192$
$=625$ $\therefore AC=\sqrt{625}=25$
$\therefore AB=25$ ಸೆಂ.ಮೀ. Ans.

**ಪ್ರಶ್ನೆ 18.** ಈ ಕೆಳಗಿನ ಸಂಪ್ಯಾಯತಕ್ಕೆ ಅನುಗುಣವಾದ ಜಾಲಕೃತಿಯನ್ನು ರಚಿಸಿ, ಈ ಜಾಲಕೃತಿಯ ಎಲ್ಲಾ ಸಂಪಾತಬಿಂದುಗಳ ವರ್ಗಗಳನ್ನು ತಿಳಿಸಿ.

$$\begin{bmatrix} 0 & 0 & 1 \\ 0 & 0 & 1 \\ 1 & 1 & 0 \end{bmatrix}$$

**ರೀತಿ :** $\begin{bmatrix} 0 & 0 & 1 \\ 0 & 0 & 1 \\ 1 & 1 & 0 \end{bmatrix}$ ∴

| | A | B | C |
|---|---|---|---|
| A | 0 | 0 | 1 |
| B | 0 | 0 | 1 |
| C | 1 | 1 | 0 |

∴ ಜಾಲಕೃತಿ




| ಸಂಪಾತ ಬಿಂದು | ವರ್ಗ |
|---|---|
| A | 1 |
| B | 1 |
| C | 2 |

**ಪ್ರಶ್ನೆ 19.** ABCD ತ್ರಾಪಿಜ್ಯದಲ್ಲಿ $\angle A=\angle B$ $90^\circ$. AB=4 ಸೆಂ.ಮೀ. BC=6 ಸೆಂ.ಮೀ. ಮತ್ತು AD=3 ಸೆಂ.ಮೀ. ಆದರೆ CD ಯ ಉದ್ದವನ್ನು ಲೆಕ್ಕಾಚಾರ ಮಾಡಿ.

**ದತ್ತ :** $\angle A=\angle B$ $=90^\circ$, AB=4 ಸೆಂ.ಮೀ. BC=6 ಸೆಂ.ಮೀ. AD =3 ಸೆಂ.ಮೀ.




**ಕಂಡುಹಿಡಿಯುವುದು :** CD.

**ರೀತಿ :** AB//DE ಎಳೆಯಿರಿ. ABED ಆಯತ ∴ AB=DE = 4 ಸೆಂ.ಮೀ. CE=AD=3 ಸೆಂ.ಮೀ.

$\therefore$ CE = BC − BE = 6 − 3 = 3 ಸೆಂ.ಮೀ.
ಇನ್ನು DEC $\triangle$ ದಲ್ಲಿ $\angle$ DEC = 90°
$\therefore$ $CD^2 = DE^2 + CE^2 = (4)^2 + (3)^2 = 16 + 9 = 25$
$\therefore$ $CD = \sqrt{25} = 5$ ಸೆಂ.ಮೀ.

ಪ್ರಶ್ನೆ 20. ಒಂದು ಸಮ ಬಹುಭುಜ ಘನಕ್ಕೆ 12 ಅಂಚುಗಳು. 8 ಶೃಂಗಗಳು ಇವೆ. F + V = E + 2 ಈ ಸೂತ್ರ ಉಪಯೋಗಿಸಿ ಅದರ ಮುಖಗಳ ಸಂಖ್ಯೆಯನ್ನು ಕಂಡುಹಿಡಿಯಿರಿ. ಆ ಬಹುಭುಜ ಘನದ ಹೆಸರನ್ನು ತಿಳಿಸಿ.

ರೀತಿ : ಇಲ್ಲಿ ಅಂಚುಗಳು E = 12, ಶೃಂಗಗಳು V = 8 ಕೊಟ್ಟಿದೆ.
$\therefore$ F + V = E + 2
ಅಥವಾ F + 8 = 12 + 2 = 14
,, F = 14 − 8 = 6.
$\therefore$ ಮುಖಗಳ ಸಂಖ್ಯೆ F = 6 Ans.
ಮತ್ತು ಬಹುಮುಖ ಘನದ ಹೆಸರು ಷಡ್ಮುಖ ಘನ Ans.

—●—

# ಗಣಿತ

## ಅಕ್ಟೋಬರ–1986 1 ನೆಯ ಪತ್ರಿಕೆ

### (ಅಂಕಗಣಿತ–ಬೀಜಗಣಿತ)

ವೇಳೆ : $2\frac{1}{2}$ ಗಂಟೆ) (ಅಧಿಕ ಗುಣಗಳು : 65

ಪ್ರಶ್ನೆ 1. MDCL ನ್ನು ಹಿಂದೂ ಅರೇಬಿಕ್ ಸಂಖ್ಯೆಗಳಲ್ಲಿ ಬರೆಯಿರಿ.

ರೀತಿ : MDCL = M + D + C + L
= 1000 + 500 + 100 + 50 = 1650 Ans.

ಪ್ರಶ್ನೆ 2. 1 ಅಂಗುಲ 2.54 ಸೆಂ.ಮೀ. ಆದರೆ ಒಂದು ಗಜವನ್ನು ಸೆಂ.ಮೀ ಗಳಲ್ಲಿ ಬರೆಯಿರಿ.

ರೀತಿ : 1 ಗಜ = 3 ಅಡಿ = 3 × 12 = 36 ಅಂಗುಲ
1 ಅಂಗುಲ = 2.54 ಸೆಂ.ಮೀ.
$\therefore$ 36 ಅಂಗುಲ = 2.54 × 36 = 91.44 ಸೆಂ.ಮೀ. Ans.

ಪ್ರಶ್ನೆ 3. ಇಳಿಕೆ ಕ್ರಮದಲ್ಲಿ ಬರೆಯಿರಿ : 0.340, 0.403, 0.304, 0.043, 0.034

ಉತ್ತರ : ಇಳಿಕೆ ಕ್ರಮದಲ್ಲಿ : 0.403, 0.340, 0.304, 0.043, 0.034.

ಪ್ರಶ್ನೆ 4. $\sqrt{3} = 1.732$ ಆದರೆ $\sqrt{12}$ ರ ಬೆಲೆಯನ್ನು ಕಂಡುಹಿಡಿಯಿರಿ.

ರೀತಿ : $\sqrt{12} = \sqrt{4 \times 3} = 2\sqrt{3} = 2 \times 1.732$
$= 3.464$ Ans.

ಪ್ರಶ್ನೆ 5. ರಷ್ಯಾದ ಒಬ್ಬ ಇಂಜಿನಿಯರನು ಭಾರತದಲ್ಲಿಯ ತನ್ನ ಸ್ನೇಹಿತನಿಗೆ 25 ರೂಬಲ್ ಬೆಲೆಯ ಒಂದು ಕ್ಯಾಮೆರಾವನ್ನು ಕಳುಹಿಸಿದನು. ಕ್ಯಾಮೆರಾದ ಬೆಲೆಯನ್ನು ರೂಪಾಯಿಗಳಲ್ಲಿ ಕಂಡುಹಿಡಿಯಿರಿ. (1 ರೂಬಲ್ = ರೂ 12.20).

ರೀತಿ : 1 ರೂಬಲ್ = 12.20 ರೂಪಾಯಿಗಳು
$\therefore$ 25 ರೂಬಲ್ = 12.20 × 25 = 305.00 ರೂಪಾಯಿಗಳು.
$\therefore$ ಕ್ಯಾಮೆರಾದ ಬೆಲೆ 305 ರೂ. Ans.

ಪ್ರಶ್ನೆ 6. 120 ಕಿ.ಗ್ರಾಮ್‌ನ ಶೇ. $12\frac{1}{2}$ ಯನ್ನು ಕಂಡುಹಿಡಿಯಿರಿ.

ರೀತಿ : 120 ಕಿ.ಗ್ರಾಮ್‌ನ ಶೇ. $12\frac{1}{2} = \frac{25}{2} \times \frac{120}{100}$
= 15 ಕಿ.ಗ್ರಾಮ್ Ans.

ಪ್ರಶ್ನೆ 7. ಈ ಕೆಳಗಿನ ಹೇಳಿಕೆಯನ್ನು ಸಮೀಕರಣ ರೂಪದಲ್ಲಿ ಬರೆಯಿರಿ : ಒಂದು ಮಾಧ್ಯಮದಲ್ಲಿ ಶಬ್ದದ ವೇಗ 'V' ಯು ಆದೇ ಮಾಧ್ಯಮದ ಸಾಂದ್ರತೆಯ ವರ್ಗಮೂಲಕ್ಕೆ ವಿಲೋಮ ಮಾರ್ಪನ್ನು ಹೊಂದಿದೆ.

ರೀತಿ : $V \propto \frac{1}{\sqrt{D}}$ ಅಥವಾ $V = K.\frac{1}{\sqrt{D}}$
........K = ಮಾರ್ಪಿನ ಸ್ಥಿರಾಂಕ
ಅಥವಾ $V.\sqrt{D} = K$. Ans.

ಪ್ರಶ್ನೆ 8. ಮ.ಸಾ.ಅ. ಕಂಡು ಹಿಡಿಯಿರಿ.
$x^2 - xy,\ x^2 - y^2$

ರೀತಿ : $x^2 - xy = x(x-y)$........I,
$x^2 - y^2 = (x-y)(x+y)$....... II
I ಮತ್ತು II ರಿಂದ.
ಮ.ಸಾ.ಅ. = $x - y$ Ans.

ಪ್ರಶ್ನೆ 9. ಲ.ಸಾ.ಅ. ಕಂಡುಹಿಡಿಯಿರಿ :
$b^2 - 4,\ b^2 + 2b$

ರೀತಿ : $b^2-4=(b-2)(b+2)$........I

$b^2+2b=b(b+2)$............II

I ಮತ್ತು II ರಿಂದ ಲ.ಸಾ.ಅ. $=b(b+2)(b-2)$ Ans.

ಪ್ರಶ್ನೆ 10. ಶೇ. $4\frac{3}{4}$ ಮತ್ತು ರೂ. 84 ಷೇರಿನ ಬೆಲೆಯುಳ್ಳ ಷೇರುಗಳ ಮೇಲೆ ರೂ. 4200 ಭಂಡವಾಳ ಹಾಕಿದಾಗ, ಬರುವ ವಾರ್ಷಿಕ ಆದಾಯವೇನು ?

ರೀತಿ : 84 ರೂ.ಗಳ ವಾರ್ಷಿಕ ಆದಾಯ $=\frac{19}{4}$ ಹಣ

$\therefore$ 4200 ರೂ.ಗಳ ವಾರ್ಷಿಕ ಆದಾಯ

$=\frac{19}{4\times84}\times4200=\frac{475}{2}=237.50$ ರೂ.

$\therefore$ ವಾರ್ಷಿಕ ಆದಾಯ=237.50 ರೂ. Ans.

ಪ್ರಶ್ನೆ 11. $\log_{10}2=0.3010$, ಮತ್ತು $\log_{10}3=0.4771$ ಆದರೆ $\log_{10}6$ ರ ಬೆಲೆಯನ್ನು ಕಂಡುಹಿಡಿಯಿರಿ.

ರೀತಿ : $\log_{10}6=\log_{10}(2\times3)=\log_{10}2+\log_{10}3=0.3010+0.4771=0.7781$ Ans.

ಪ್ರಶ್ನೆ 12. ಸಂಕ್ಷೇಪಿಸಿ : $\frac{a^2-b^2}{a^2-ab}$

ರೀತಿ : $\frac{a^2-b^2}{a^2-ab}=\frac{(a-b)(a+b)}{a(a-b)}=\frac{a+b}{a}$ Ans.

ಪ್ರಶ್ನೆ 13. $A=\{1, 2, 3, 4\}$ ಮತ್ತು $B=\{3, 4, 5\}$. ಆದರೆ $A\cap B$ ಕಂಡುಹಿಡಿಯಿರಿ.

ರೀತಿ : $A=\{1, 2, 3, 4\}$ ಮತ್ತು $B=\{3, 4, 5\}$

$\therefore A\cap B=\{1, 2, 3, 4\}\cap\{3, 4, 5\}$

$=\{3, 4\}$ Ans.

ಪ್ರಶ್ನೆ 14. $T=2\pi\sqrt{\frac{l}{g}}$ ಆದರೆ g ಕಂಡುಹಿಡಿಯಿರಿ

ರೀತಿ : $T=2\pi\sqrt{\frac{l}{g}}$ ಅಥವಾ $T^2=4\pi^2\times\frac{l}{g}$

ಅಥವಾ $T^2g=4\pi^2l$ ಅಥವಾ $g=\frac{4\pi^2l}{T^2}$ Ans.

ಪ್ರಶ್ನೆ 15. $3C_2$ ದ ಬೆಲೆಯನ್ನು ಕಂಡುಹಿಡಿಯಿರಿ.

ರೀತಿ : $3C_2=\frac{3!}{(3-2)!\times2!}=\frac{3!}{1!\times2!}$

$=\frac{3\times2!}{1\times2!}=3$ Ans.

ಪ್ರಶ್ನೆ 16. $\sqrt[3]{x}$ ಕರಣೀಯ ಯಾವುದು ? ಮತ್ತು ಕರಣಿಯ ಕ್ರಮ ಏನು ?

ಉತ್ತರ : $\sqrt[3]{x}$ ದಲ್ಲಿ ಕರಣಿಯ $x$ ಮತ್ತು ಕರಣಿಯ ಕ್ರಮ 3.

ಪ್ರಶ್ನೆ 17. ಈ ಕೆಳಗಿನದು ಸರಿಯೇ ಎಂದು ಪರೀಕ್ಷಿಸಿ.

$18\equiv9$ (ಮಾಡ್ 2)

ರೀತಿ : $18\div2=9$ ಮತ್ತು ಶೇಷ $=0$.

$9\div2=4$ ,, ಶೇಷ $=1$.

ಇಲ್ಲಿ ಶೇಷ ಸಮನಾಗಲಿಲ್ಲ.

$\therefore$ $18\equiv9$(ಮಾಡ್ 2) ಎಂಬುದು ಸರಿಯಲ್ಲ.

ಪ್ರಶ್ನೆ 18. 21 ರಿಂದ 41 ರ ವರೆಗಿನ ಎಲ್ಲಾ ಸ್ವಾಭಾವಿಕ ಸಂಖ್ಯೆಗಳ ಮೊತ್ತವನ್ನು ಕಂಡುಹಿಡಿಯಿರಿ.

ರೀತಿ : 21 ರಿಂದ 41ರ ವರೆಗಿನ ಎಲ್ಲಾ ಸ್ವಾಭಾವಿಕ ಸಂಖ್ಯೆಗಳ ಮೊತ್ತ $=S_{41}-S_{20}$.

$\therefore$ ಮೊತ್ತ $=\frac{41(41+1)}{2}-\frac{20(20+1)}{2}$

$=\frac{41\times42}{2}-\frac{20\times21}{2}=(41\times21)-(10\times21)$

$=861-210=651$ Ans.

ಪ್ರಶ್ನೆ 19. ತಿಂಗಳಿಗೆ ರೂ. 10 ರ ಸಂಚಿತಾವಧಿ ಖಾತೆಗೆ 60 ತಿಂಗಳ ನಂತರ ಬ್ಯಾಂಕ ರೂ. 741 ನ್ನು ಕೊಡುತ್ತದೆ. ಒಬ್ಬ ವ್ಯಕ್ತಿಯು 60 ತಿಂಗಳ ನಂತರ ತನ್ನ ಸಂಚಿತಾವಧಿ ಖಾತೆಯಿಂದ ರೂ. 1111.50ರೂ. ನ್ನು ಪಡೆದರೆ, ಅವನು ಬ್ಯಾಂಕಿನಲ್ಲಿ ಪ್ರತಿ ತಿಂಗಳು ಇಡುತಿದ್ದ ಠೇವಣಿ ಎಷ್ಟು ? ಅವನಿಗೆ ದೊರೆತ ಬಡ್ಡಿ ಎಷ್ಟು ?

ರೀತಿ : 741 ರೂ. ಪಡೆಯಬೇಕಾದರೆ, ಪ್ರತಿ ತಿಂಗಳ ಠೇವಣಿ $=10$ ರೂ.

$\therefore$ 1111.50 ರೂ. ಪಡೆಯಬೇಕಾದರೆ ಪ್ರತಿ ತಿಂಗಳ ಠೇವಣಿ $=\frac{10\times1111.50}{741}=15$ ರೂ.

15 ರೂ. ನಂತೆ 60 ತಿಂಗಳ ಠೇವಣಿ $=60\times15$ $=900$ ರೂ.

$\therefore$ ಅವನಿಗೆ ದೊರೆತ ಬಡ್ಡಿ $=(1111.50-900)$ರೂ. $=211.50$ ರೂ.

$\therefore$ ಪ್ರತಿ ತಿಂಗಳ ಠೇವಣಿ $=15$ ರೂ. ದೊರೆತ ಬಡ್ಡಿ $=211.50$ ರೂ. Ans

**ಪ್ರಶ್ನೆ 20.** ಒಂದು ಸೈಕಲ್ ಸ್ಟ್ಯಾಂಡಿನಲ್ಲಿ 70 ಸೈಕಲ್‌ಗಳಿವೆ 50 ಸೈಕಲ್‌ಗಳಲ್ಲಿ ಕ್ಯಾರಿಯರ್‌ಗಳಿವೆ. 35ಕ್ಕೆ ಘಂಟೆ ಮತ್ತು ಕ್ಯಾರಿಯರ್‌ಗಳಿವೆ. ಕೆಲವಕ್ಕೆ ಘಂಟೆ ಮಾತ್ರ ಇದ್ದು ಕ್ಯಾರಿಯರ್ ಇರುವುದಿಲ್ಲ. ಈ ಗುಂಪಿನ ಸೈಕಲ್‌ಗಳೆಷ್ಟು ?

**ರೀತಿ :** ಒಟ್ಟು ಸೈಕಲ್‌ಗಳ ಸಂಖ್ಯೆ $n(A \cup B)=70$.

ಕ್ಯಾರಿಯರ್ ಇರುವ ಸೈಕಲ್‌ಗಳ ಸಂಖ್ಯೆ$n(A)=50$

ಕ್ಯಾರಿಯರ್ ಮತ್ತು ಘಂಟೆ ಇರುವ ಸೈಕಲ್‌ಗಳ ಸಂಖ್ಯೆ$n(A \cap B)=35$

ಘಂಟೆ ಇರುವ ಸೈಕಲ್‌ಗಳ ಸಂಖ್ಯೆ $n(B)=?$

$\therefore \quad n(A)+n(B)=n(A \cup B)+n(A \cap B)$

ಅಥವಾ $n(B)=n(A \cup B)+n(A \cap B)-n(A)$

$=70+35-50=150-50=55$

ಕೇವಲ ಗಂಟೆ ಮಾತ್ರ ಇರುವ ಸೈಕಲ್ಲುಗಳು

$=n(B)-n(A \cap B)=55-35=20$ **Ans.**

**ಪ್ರಶ್ನೆ 21.** 5 ಕುರ್ಚಿಗಳಲ್ಲಿ 5 ಜನರು ಎಷ್ಟು ಕ್ರಮದಲ್ಲಿ ಕುಳಿತುಕೊಳ್ಳಬಹುದು ?

**ರೀತಿ :** 5 ಕುರ್ಚಿಗಳಲ್ಲಿ 5 ಜನರು ಕುಳಿತುಕೊಳ್ಳಬಹುದಾದ ಕ್ರಮಗಳ ಸಂಖ್ಯೆ

$$=5P_5=\frac{5!}{(5-5)!}=\frac{5!}{0!}$$

$$=\frac{5\times4\times3\times2\times1}{1}=120$$

$\therefore$ ಕುಳಿತುಕೊಳ್ಳಬಹುದಾದ ಕ್ರಮಗಳ ಸಂಖ್ಯೆ $=120$ **Ans.**

**ಪ್ರಶ್ನೆ 22.** $nC_2=15$ ಆದರೆ '$n$'ನ ಬೆಲೆ ಏನು ?

**ರೀತಿ :** $nC_2=\dfrac{n!}{(n-2)!\times 2!}$

$$=\frac{n(n-1)(n-2)(n-3)\ldots\ldots3\times2\times1}{(n-2)(n-3)\ldots3\times2\times1\times2\times1}$$

$$=\frac{n(n-1)}{2}=15$$

ಅಥವಾ $n(n-1)=2\times15$ ಅಥವಾ $n^2-n=30$

,, $n^2-n-30=0$

,, $n^2-6n+5n-30=0$

,, $n(n-6)+5(n-6)=0$

,, $(n-6)\ (n+5)=0$

$n-6=0$ ಇದ್ದರೆ $n=6$; $n+5=0$ ಇದ್ದರೆ $n=-5$ ಗಣನೆ ಇಲ್ಲ.

$\therefore \quad n=6$ **Ans.**

**ಪ್ರಶ್ನೆ 23.** ಕುಂದಿಲ್ಲದ ಎರಡು ಆರುಮುಖಗಳ ದಾಳಗಳನ್ನು ನಾನು ಎಸೆಯುತ್ತೇನೆ. ಈ ಎರಡೂ ದಾಳಗಳ ಮೇಲೆ ಬರುವ ಮುಖಗಳ ಮೇಲಿನ ಸಂಖ್ಯೆಗಳ ವ್ಯತ್ಯಾಸ 'O'ಆಗಿರುವ ಸಂಭವನೀಯತೆ ಎಷ್ಟು?

**ರೀತಿ :** ಒಟ್ಟು ಘಟನೆಗಳ ಸಂಖ್ಯೆ $=6\times6=36$.

ಮೇಲೆ ಬರುವ ಮುಖಗಳ ಮೇಲಿನ ಅಂಕಿಗಳ ವ್ಯತ್ಯಾಸ ಸೊನ್ನೆಯಾಗುವ ಘಟನೆಗಳ ಸಂಖ್ಯೆ $=\{1-1), (2-2), (3-3), (4-4), (5-5), (6-6)\}=6$

$\therefore$ ಸಂಭವನೀಯತೆ $=\dfrac{6}{36}=\dfrac{1}{6}$ **Ans.**

**ಪ್ರಶ್ನೆ 24.** ದಿಶಾಯುಕ್ತಗಳ ಕಲ್ಪನೆಯಿಂದ ಇವುಗಳನ್ನು ಸಾಧಿಸಿ. ಸಮಕೋನ ಚತುರ್ಭುಜದ ಕರ್ಣಗಳು ಸಮ ಅಳತೆಗಳನ್ನು ಹೊಂದಿರುವುವು.

**ರೀತಿ :** $\vec{BD}=\vec{BC}+\vec{CD}=\vec{b}+\vec{a}$..........I




ಮತ್ತು $\vec{CA}=\vec{CB}+\vec{BA}=\vec{b}+\vec{a}$

ಅಥವಾ $\vec{AC}=\vec{BC}+\vec{AB}=\vec{b}+\vec{a}$.......II

I ಮತ್ತು II ರಿಂದ $\vec{BD}=\vec{AC}$.

$\therefore$ ಸಮಕೋನ ಚತುರ್ಭುಜದ ಕರ್ಣಗಳು ಸಮವಾಗಿರುವವು.

**ಪ್ರಶ್ನೆ 25.** ಸಮೀಕರಣ ಬಿಡಿಸಿ : $(x+4)(x-4)=6x$.

ರೀತಿ : $(x+4)\ (x\ \ 4) = 6x$.

ಅಥವಾ $x^2-16-6x=0$ ಅಥವಾ $x^2-6x-16=0$ ಅಥವಾ $x^2-8x+2x-16=0$

ಅಥವಾ $x(x-8)+2(x-8)=0$

,, $(x-8)\ (x+2)=0$.

$x-8=0$ ಇದ್ದರೆ $x=8$, ಮತ್ತು $x+2=0$. ಇದ್ದರೆ $x=-2$.

$\therefore\ x=-2$ ಇಲ್ಲವೆ 8 Ans.

**ಪ್ರಶ್ನೆ 26.** $\frac{2}{5}$ ಮತ್ತು $\frac{5}{2}$ ಮೂಲಗಳನ್ನು ಹೊಂದಿರುವ ಸಮೀಕರಣವನ್ನು ರಚಿಸಿ.

ರೀತಿ : $m=-\frac{2}{5}, n=\frac{5}{2}$ ಇರಲಿ.

ಮೂಲಗಳ ಮೊತ್ತ $m+n=\frac{2}{5}+\frac{5}{2}=\frac{-4+25}{10}$

$=\frac{21}{10}$

ಮೂಲಗಳ ಗುಣಲಬ್ಧ $n.n=-\frac{2}{5}+\frac{5}{2}=-1$

$\therefore$ ಸಮೀಕರಣ $x^2-(m+n)x+mn=0$

ಅಥವಾ $x^2-\frac{21}{1l}x+(-1)=0$

,, $x^2-\frac{21}{10}x-1=0$

,, $10x^2\ \ 21x-10=0$. Ans.

**ಪ್ರಶ್ನೆ 27.** $A=\begin{bmatrix} 2 & -3 \\ -4 & 5 \end{bmatrix}$ ಮತ್ತು $B=\begin{bmatrix} 3 & 0 \\ 1 & 4 \end{bmatrix}$ ಆದರೆ AB' ಕಂಡುಹಿಡಿಯಿರಿ.

ರೀತಿ : $A=\begin{bmatrix} 2 & -3 \\ -4 & 5 \end{bmatrix}$ ಮತ್ತು $B=\begin{bmatrix} 3 & 0 \\ 1 & 4 \end{bmatrix}$

$\therefore\ B^1=\begin{bmatrix} 3 & 1 \\ 0 & 4 \end{bmatrix}$

ಇನ್ನು $A\times B^1=\begin{bmatrix} 2 & -3 \\ -4 & 5 \end{bmatrix}\times\begin{bmatrix} 3 & 1 \\ 0 & 4 \end{bmatrix}$

$=\begin{bmatrix} 2\times3+(-3)(0) & 2\times1+(-3)(4) \\ (-4)(3)+5\times0 & (-4)(1)+5\times4 \end{bmatrix}$

$=\begin{pmatrix} 6+0 & 2-12 \\ -12+0 & -4+20 \end{pmatrix}$

$=\begin{pmatrix} 6 & -10 \\ -12 & 16 \end{pmatrix}\ \therefore\ AB'=\begin{bmatrix} 6 & -10 \\ -12 & 16 \end{bmatrix}$

Ans.

**ಪ್ರಶ್ನೆ 28.** $1+\frac{1}{xy}\ \ 5$ ಮತ್ತು $xy=\frac{1}{4}$ ಆದರೆ $1+\frac{1}{x^2y^2}$ ನ ಬೆಲೆಯನ್ನು ಕಂಡುಹಿಡಿಯಿರಿ.

ರೀತಿ : ಈಗ $xy=\frac{1}{4}$ ಅಥವಾ $\frac{1}{xy}=4$

ಇನ್ನು $1+\frac{1}{x^2y^2}=1+\left[\frac{1}{xy}\right]^2=1+(4)^2=16$

17 Ans.

**ಪ್ರಶ್ನೆ 29.** $a+b+c\ 2s$ ಆದರೆ $2bc-(b^2+c^2-a^2)=4\ (s-b)\ (s-c)$ ಎಂದು ಸಾಧಿಸಿ.

ರೀತಿ : $L.H.S.=2bc-(b^2+c^2-a^2)$

$=2bc-b^2-c\ \ +a^2=a^2-b^2+bc-c^2$

$=a^2-(b^2-2bc+c^2)=(a)^2-(b-c)^2$

$=(a-b+c)\ (a+b-c)$

$=(a+b+c-2b)\ (a+b+c\ \ 2c)$

$=(2s-2b)\ (2s-2c)....(\because a+b+c=2s)$

$=2(s-b)\ 2(s-c)=4\ (s-b)\ (s-c)$

$=R.H.S.$

**ಪ್ರಶ್ನೆ 30.** ನಗದು ಪಡೆದವರಿಗೆ ಒಂದು ಗ್ರಿಫಿನ್‌ಕ್ಯಾರಿಯರ್ ಬೆಲೆ ರೂ. 50 ಆಗುವುದು. ವ್ಯಾಪಾರಿಯು ಸಾಲಿಯಾನ ಶೇ. 20 ಬಡ್ಡಿಯನ್ನು ಹಾಕಿ, ಅದನ್ನು 10 ತಿಂಗಳ ಸಮಕಂತಿನಂತೆ ಕೊಂಡ ತಾರೀಖಿನ ಮುಂದಿನ ತಿಂಗಳಿಂದ ಕೊಡಲು ಒಪ್ಪಿದರೆ, ತಿಂಗಳಿಗೆ ಕೊಡಬೇಕಾಗುವ ಹಣವೆಷ್ಟು "

ರೀತಿ : ಪ್ರತಿ ತಿಂಗಳ ಕಂತು = P ರೂ. ಎಂದು ಕಲ್ಪಿಸಿ.

$\therefore$ 10 ತಿಂಗಳಲ್ಲಿ ತುಂಬಬೇಕಾದ ಹಣ = 10P ರೂ.

$\therefore$ ಕೊಡಬೇಕಾದ ಬಡ್ಡಿ $E=(10P-50)$ ರೂ.

ಬಡ್ಡಿದರ $R=20\%$ ಕಂತುಗಳ ಸಂಖ್ಯೆ $n=10$.

ಸೂತ್ರದ. ಪ್ರಕಾರ

$\therefore$ ಬಡ್ಡಿದರ $R=\frac{2400}{n[(n+1)P-2E]}$

$20=\frac{2400(10P-50)}{10[(10+1)P-2\ (10P-50)]}$

$=\frac{2400\times10(P-5)}{10[11P-20P+100]}$

$=\frac{2400(P-5)}{-9P+100}$

ಅಥವಾ $2400(P-5)=20(-9P+100)$

,, $2400P - 12000 = -180P+2000$

,, $2400P+180P=12000+2000$

,, $2580P=14000$ ಅಥವಾ $P=\frac{14000}{2580}$

$=5.426$

∴ ಪ್ರತಿ ತಿಂಗಳ ಕಂತಿನ ಹಣ $=5.43$ Ans.

**ಪ್ರಶ್ನೆ 31.** ಛೇದವನ್ನು ಆಕರಣೀಕರಿಸಿ ಸುಲಭಗೂಪಕ್ಕೆ ತನ್ನಿ:

$$\frac{\sqrt{7}}{3\sqrt{2}-2\sqrt{3}}$$

**ರೀತಿ :** $\frac{\sqrt{7}}{3\sqrt{2}-2\sqrt{3}}=\frac{\sqrt{7}}{3\sqrt{2}-2\sqrt{3}}$

$\times\frac{3\sqrt{2}+2\sqrt{3}}{3\sqrt{2}+2\sqrt{3}}$

$=\frac{\sqrt{7}(3\sqrt{2}+2\sqrt{3})}{(3\sqrt{2}-2\sqrt{3})(3\sqrt{2}+2\sqrt{3})}$

$=\frac{3\sqrt{14}+2\sqrt{21}}{(3\sqrt{2})^2-(2\sqrt{3})^2}=\frac{3\sqrt{14}+2\sqrt{21}}{9\times2-4\times3}$

$=\frac{3\sqrt{14}+2\sqrt{21}}{18-12}=\frac{3\sqrt{14}+2\sqrt{21}}{6}$

$=\frac{1}{6}(3\sqrt{14}+2\sqrt{21})$ Ans.

**ಪ್ರಶ್ನೆ 32.** [1, 2, 3, 4, 5] ⊙ ಮೂಡ್ 6] ಸಮುದಾಯ ವಲ್ಲವೆಂದು ತೋರಿಸಿ.

**ರೀತಿ :** $Z_6-\{1, 2, 3, 4, 5\}$ ಆಗಿರಲಿ.

| $Z_6$ ⊙ | 1 | 2 | 3 | 4 | 5 |
|---|---|---|---|---|---|
| 1 | 1 | 2 | 3 | 4 | 5 |
| 2 | 2 | 4 | 0 | 2 | 4 |
| 3 | 3 | 0 | 3 | 0 | 3 |
| 4 | 4 | 2 | 0 | 4 | 2 |
| 5 | 5 | 4 | 3 | 2 | 1 |

i) ಆವೃತ ಗುಣ :

$1⊙5=5\in Z_6$

$2⊙4=2\in Z_6$

$3⊙5=3\in Z_6$

∴ $\forall\, a,b\in Z_6\ (a⊙b)\in Z_6$.

∴ $Z_6$ ⊙ ಮಾಡ್ 6 ಆವೃತ ಗುಣವನ್ನು ಹೊಂದಿದೆ.

ii) ಸಹವರ್ತನಿಯ ಗುಣ :

$(2⊙4)⊙5=2⊙5=4\in Z_6$.

$2⊙(4⊙5)=2⊙2=4\in Z_6$.

∴ $(2⊙4)⊙5=2⊙(4⊙5)\in Z_6$.

∴ $\forall\, a, b, c\in Z_6 (a⊙b)⊙c$

$=a⊙(b⊙c)$

∴ $Z_6$ ⊙ ಮೂಡ್ 6 ಸಹವರ್ತನೀಯ ಗುಣವನ್ನು ಹೊಂದಿದೆ.

iii) ಅನನ್ಯತಾಂಶ ಗುಣ :

$4⊙1=1⊙4=4\in Z_6$

$5⊙1=1⊙5=5\in Z_6$

∴ $\forall a\in Z_6\ \exists e\in Z_6\ a⊙e=e⊙a=a$

∴ $Z_6$ ⊙ ಮೂಡ್ 6 ಅನನ್ಯತಾಂಶ ಗುಣವನ್ನು ಹೊಂದಿದೆ.

iv) ವಿಲೋಮಾಂಶ ಗುಣ.

1 ರ ವಿಲೋಮ $1$ ಮತ್ತು 5 ರ ವಿಲೋಮ $5$ ಆದರೆ 2,3 ಮತ್ತು 4ಗಳಿಗೆ ವಿಲೋಮಾಂಶ ಗಳಿಲ್ಲ.

∴ $Z_6$ ⊙ ಮಾಡ್ 6 ಒಂದು ಸಮುದಾಯವಲ್ಲ.

**ಪ್ರಶ್ನೆ 33.** ಗುಣಲಬ್ಧ 99 ಆಗುವ ಎರಡು ಕ್ರಮಾಗತ ಬೆಸ ಸಂಖ್ಯೆಗಳನ್ನು ಕಂಡುಹಿಡಿಯಿರಿ.

**ರೀತಿ :** ಎರಡು ಕ್ರಮಾಗತ ಬೆಸ ಸಂಖ್ಯೆಗಳಲ್ಲಿ ಒಂದು ಸಂಖ್ಯೆ $x$ ಎಂದು ಕಲ್ಪಿಸಿ

∴ ಇನ್ನೊಂದು ಸಂಖ್ಯೆ $=x+2$.

ಸಮಸ್ಯೆಯ ಪ್ರಕಾರ—

$x(x+2)=99$.

ಅಥವಾ $x^2+2x-99=0$ ಅಥವಾ $x^2+11x-9x-99=0$ ಅಥವಾ $x(x+11)-9(x+11)=0$,

ಅಥವಾ $(x+11)(x-9)=0$

ಇನ್ನು $x+11=0$ ಇದ್ದರೆ $x=-11$ ಮತ್ತು

$x-9=0$ ,, $x=9$.

∴ ಒಂಧು ಸಂಖ್ಯೆ $-11$ ಇದ್ದರೆ ಇನ್ನೊಂದು ಸಂಖ್ಯೆ $-11+2=-9$.

ಒಂದು ಸಂಖ್ಯೆ 9 ಇದ್ದರೆ ಇನ್ನೊಂದು ಸಂಖ್ಯೆ $9+2=11$.

∴ ಸಂಖ್ಯೆಗಳು 9 ಮತ್ತು 11 ಇಲ್ಲವೆ 11 ಮತ್ತು −9 Ans.

ಪ್ರಶ್ನೆ 34. $y=x^2$ ಮತ್ತು $y=2-x$ ನಕ್ಷೆಗಳನ್ನು ಎಳೆಯಿರಿ. ಮತ್ತು $x^2+x-2=0$ ಸಮೀಕರಣ ಬಿಡಿಸಿ.

$y=x^2$

| $x$ | 1 | 2 | 3 | 0 | −1 | −2 | −3 |
|---|---|---|---|---|---|---|---|
| $y$ | 1 | 4 | 9 | 0 | 1 | 4 | 9 |

$y=2-x$

| $x$ | 1 | 2 | 3 | −1 | −2 | 0 |
|---|---|---|---|---|---|---|
| $y$ | 1 | 0 | −1 | 3 | 4 | 2 |



ಸ್ಕೇಲು 2 ಸೆಂ. ಮೀ. = 1 ಮಾನ X-ಅಕ್ಷದ ಗುಂಟ

1 ಸೆಂ. ಮೀ. = 1 ಮಾನ Y-ಅಕ್ಷದ ಗುಂಟ

ಸಮೀಕರಣ $x^2+x-2=0$.

ಅಥವಾ $x^2=2-x$

$y=x^2$ ಮತ್ತು $y=2-x$ ನಕ್ಷೆಗಳು ಪರಸ್ಪರ (1, 1) ಮತ್ತು (−2, 4) ಬಿಂದುಗಳಲ್ಲಿ ಛೇದಿಸಿವೆ.

∴ $x^2+x-2=0$ ಸಮೀಕರಣದ ಮೂಲಗಳು $x=-2$ ಮತ್ತು 1.

ಪ್ರಶ್ನೆ 35. ಈ ಕೆಳಗಿನ ಅಂಕಿ ಅಂಶಗಳ ಮಾನಕ ವಿಚಲನೆಯನ್ನು ಕಂಡುಹಿಡಿಯಿರಿ.

| ವರ್ಗಾಂತರ ಅಂಕಗಳು | ಆವರ್ತ ವಿದ್ಯಾರ್ಥಿಗಳ ಸಂಖ್ಯೆ |
|---|---|
| 0—4 | 13 |
| 5—9 | 12 |
| 10—14 | 3 |
| 15—19 | 4 |
| 20—24 | |

ರೀತಿ :

| ವರ್ಗಾಂತರ | ಮಧ್ಯ ಬಿಂದು $x$ | ಆವರ್ತ $f$ | $f\times x$ | ಸರಾಸರಿಯಿಂದ ವಿಚಲನೆ $d$ | $d$ | $fd^2$ |
|---|---|---|---|---|---|---|
| 0—4 | 2 | 13 | 26 | −6 | 36 | 468 |
| 5—0 | 7 | 12 | 84 | −1 | 1 | 12 |
| 10—14 | 12 | 3 | 36 | +4 | 16 | 48 |
| 15—19 | 17 | 4 | 68 | +9 | 81 | 324 |
| 20 24 | 22 | 3 | 66 | +14 | 196 | 588 |
| | N=35 | | $\Sigma fx=280$ | | | $\Sigma fd^2=1440$ |

∴ ಸರಾಸರಿ $M=\frac{\Sigma fx}{N}=\frac{280}{35}=8$

∴ ಮಾನಕ ವಿಚಲನೆ $\sigma=\sqrt{\frac{\Sigma fd^2}{N}}$

$=\sqrt{\frac{1440}{35}}=\sqrt{41.14}$

$=6.4$

ಮಾನಕ ವಿಚಲನೆ=6.4 Ans.

# ಗಣಿತ

## ಅಕ್ಟೋಬರ-1986 2 ನೆಯ ಪತ್ರಿಕೆ

### ರೇಖಾಗಣಿತ

ವೇಳೆ : 2 ಗಂಟೆ) (ಅಧಿಕ ಗುಣಗಳು 35

ಪ್ರಶ್ನೆ 1. ಕೊಟ್ಟಿರುವ ಚಿತ್ರದಲ್ಲಿ $x$ ನ ಬೆಲೆಯನ್ನು ಕಂಡುಹಿಡಿಯಿರಿ.

ಉತ್ತರಕ್ಕೆ ಅಕ್ಟೋಬರ 1984ರ ಪ್ರಶ್ನೆ 2 ನೋಡಿರಿ.

**ಪ್ರಶ್ನೆ 2.** ಒಂದು ಸಮತಲವನ್ನು ನಿರ್ಧರಿಸಲು ಬೇಕಾದ ಕನಿಷ್ಟ ಬಿಂದುಗಳ ಸಂಖ್ಯೆಯೇನು ?

**ಉತ್ತರ :** ಒಂದೇ ಸರಳ ರೇಖೆಯಲ್ಲಿಲ್ಲದ ಮೂರು ಬಿಂದುಗಳು

**ಪ್ರಶ್ನೆ 3.** ಒಂದು ಶಂಕುವಿನ ಮೇಲ್ಮೈ ವಿಸ್ತೀರ್ಣವನ್ನು ಕಂಡುಹಿಡಿಯಲು ಬೇಕಾದ ಸೂತ್ರವನ್ನು ಬರೆಯಿರಿ

**ಉತ್ತರ :** ಶಂಕುವಿನ ಮೇಲ್ಮೈ ವಿಸ್ತೀರ್ಣವನ್ನು ಕಂಡು ಹಿಡಿಯಲು ಬೇಕಾದ ಸೂತ್ರ $A=\pi r(r+l)$ ಚ. ಮಾನಗಳು.

**ಪ್ರಶ್ನೆ 4.** AB ಮತ್ತು CD ಸಮಾಂತರ ಸರಳರೇಖೆಗಳು. EF ಅವುಗಳನ್ನು G ಮತ್ತು H ಗಳಲ್ಲಿ ಕತ್ತರಿ ಸುತ್ತದೆ. ಪರ್ಯಾಯ ಕೋನಗಳ ಜೋಡಿಗಳನ್ನು ಬರೆಯಿರಿ.




**ಉತ್ತರ :** ಪರ್ಯಾಯ ಕೋನಗಳ ಜೊತೆಗಳು i) $\angle AGH$ ಮತ್ತು $\angle GHD$. ii) $\angle BGH$ ಮತ್ತು $\angle GHC$.

**ಪ್ರಶ್ನೆ 5.** 'O' ಕೇಂದ್ರವುಳ್ಳ ವೃತ್ತದಲ್ಲಿ ಜ್ಯಾ AB = ಜ್ಯಾ CD ಲಂಬ OL = 1.5 ಸೆಂ.ಮೀ. ಆದರೆ ಲಂಬ OM ಅಳತೆ ಎಷ್ಟು ?

ಉತ್ತರಕ್ಕೆ ಎಪ್ರಿಲ್ 1984ರ ಪ್ರಶ್ನೆ 7 ನೋಡಿ.

**ಪ್ರಶ್ನೆ 6** PQRS ಚಕ್ರೀಯ ಚತುರ್ಭುಜ $\angle POR = 160^\circ$ ಆದರೆ $\angle PQR$ ಕಂಡುಹಿಡಿಯಿರಿ.

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 6 ನೋಡಿ.

**ಪ್ರಶ್ನೆ 7** ಪಂಚ ಭುಜಾಕೃತಿಯ ಎಲ್ಲಾ ಒಳಕೋನ ಮೊತ್ತ ವೇನು ?

ಉತ್ತರಕ್ಕೆ ಅಕ್ಟೋಬರ 1984 ರ ಪ್ರಶ್ನೆ 5 ನೋಡಿ.

**ಪ್ರಶ್ನೆ 8.** ಎರಡು ಲಂಬ ಸಮತಲಗಳ ಛೇದನವು.........ಆಗಿದೆ.

**ಉತ್ತರ :** ಎರಡು ಲಂಬ ಸಮತಲಗಳ ಛೇದನವು ಲಂಬರೇಖೆ ಆಗಿದೆ.

**ಪ್ರಶ್ನೆ 9.** ಒಂದು ಆಯತ ಘನದಲ್ಲಿ ಎಷ್ಟು ಸಮಾಂತರ ಸಮತಲಗಳ ಜೊತೆಗಳಿವೆ ?

**ಉತ್ತರ :** ಒಂದು ಆಯತ ಘನದಲ್ಲಿ ಮೂರು ಜೊತೆ ಸಮಾಂತರ ಸಮತಲಗಳಿವೆ.

**ಪ್ರಶ್ನೆ 10.** ಒಂದು ತ್ರಿಭುಜದ ಎಲ್ಲಾ ಎತ್ತರಗಳೂ ಸಮನಾಗಿದ್ದರೆ, ಅದು ಎಂಥ ತ್ರಿಭುಜ ?

**ಉತ್ತರ :** ತ್ರಿಭುಜದ ಎಲ್ಲಾ ಎತ್ತರಗಳೂ ಸಮನಾಗಿದ್ದರೆ, ಅದು ಸಮಬಾಹು ತ್ರಿಭುಜ.

**ಪ್ರಶ್ನೆ 11.** ಒಂದು ತ್ರಿಭುಜದ ಒಂದು ಬಾಹುವಿನ ಮೇಲಿನ ವರ್ಗವು ಉಳಿದೆರಡು ಬಾಹುಗಳ ಮೇಲಿನ ವರ್ಗಗಳ ಮೊತ್ತಕ್ಕೆ ಸಮನಾಗಿದ್ದರೆ, ಎರಡೂ ಬಾಹುಗಳ ನಡುವಿನ ಕೋನವು ಒಂದು ಸಮ ಕೋನವಾಗಿರುವುದೆಂದು ಸಾಧಿಸಿ.




ದತ್ತ : ABC $\triangle$ ದಲ್ಲಿ $CB^2=AB^2+AC^2$

ಸಾಧನೀಯ : $\angle BAC = 90^\circ$ ಲಂಬಕೋನ

ರಚನೆ : AB = AD ಆಗುವಂತೆ $DB \perp AC$ ಎಳೆಯಿರಿ CD ಸೇರಿಸಿ.

ಸಾಧನೆ : ACD $\triangle$ ದಲ್ಲಿ $\angle CAD = 90^\circ$....(ರಚನೆ)

$\therefore AC^2+AD^2=CD^2$

ಆದರೆ AD = AB............(ರಚನೆ)

$\therefore AC^2+AB^2 = CD^2$

ಆದರೆ $AC^2+AB^2=BC^2$ ............(ದತ್ತ)

$\therefore BC^2=CD^2$ ಅಥವಾ BC = CD.

ಇನ್ನು ABC, ADC $\triangle$ ಗಳಲ್ಲಿ BC = CD. ............(ಸಾಧಿಸಿದೆ)

AB = AD............(ರಚನೆ)

ಮತ್ತು AC ಉಭಯ ಸಾಮಾನ್ಯವಿದೆ.

$\therefore \triangle ABC \cong \triangle ADC$.

$\therefore \angle CAB = \angle CAD$

ಆದರೆ $\angle CAD = 90^\circ$............(ರಚನೆ)

$\therefore \angle CAB = 90^\circ$ = ಲಂಬಕೋನ.

**ಪ್ರಶ್ನೆ 12.** $\triangle ABC$ ದಲ್ಲಿ $\angle ACB$ ಅಧಿಕಕೋನ. AC = 14 ಸೆಂ.ಮೀ. BC = 20 ಸೆಂ. ಮೀ. AC

ಯ BC ಯ ಮೇಲಿನ ಪ್ರಕ್ಷೇಪ CD=2 ಸೆಂ.ಮೀ. ABಯ ಉದ್ದವನ್ನು ಕಂಡುಹಿಡಿಯಿರಿ.




ದತ್ತ : AC=14ಸೆಂ.ಮಿ
BC=20 ಸೆಂ.ಮಿ. CD ಪ್ರಕ್ಷೇಪ= 2 ಸೆಂ. ಮೀ.
$\angle$ ACB ಅಧಿಕಕೋನ.
ಕಂಡುಹಿಡಿಯುವುದು : AB ಯ ಉದ್ದ ಳತೆ.

ರೀತಿ : ABC $\triangle$ ದಲ್ಲಿ $\angle$ ACB ಅಧಿಕೋನ.

$\therefore\ AB^2 = AC^2 + BC^2 + 2BC\ CD$
$= (14)^2 + (20)^2 + 2(20)(2)$
$= 196 + 400 + 80 = 676$
$\therefore\ AB = \sqrt{676} = 26$ ಸೆಂ ಮೀ.

ಪ್ರಶ್ನೆ 13. ABCD ಸಮಾಂತರ ಚತುರ್ಭುಜದಲ್ಲಿ AD= 4 ಸೆಂ.ಮೀ. ಆದರ ಮೇಲಿನ ಲಂಬ BF = 6 ಸೆಂ.ಮೀ. BF$\perp$AD AB = 5 ಸೆಂ.ಮೀ. ಇದ್ದರೆ, AB ಮೇಲಿನ ಎತ್ತರ ಕಂಡು ಹಿಡಿಯಿರಿ.




ದತ್ತ : ABCD ಸಮಾಂತರ ಚತುರ್ಭುಜ.
AD=4 ಸೆಂ.ಮೀ. AB=5 ಸೆಂ.ಮೀ.
BF = 6 ಸೆಂ.ಮೀ. BF$\perp$AD.

ಕಂಡುಹಿಡಿಯುವುದು : AB ಯ ಮೇಲಿನ ಎತ್ತರ

ರೀತಿ : ABCD ಸಮಾಂತರ ಚತುರ್ಭುಜದ ವಿಸ್ತೀರ್ಣ.
= AD $\times$ BF = 4 $\times$ 6 = 24 ಚ.ಸೆಂ.ಮೀ
ಇನ್ನು AB $\times$ ಎತ್ತರ = ABCD ವಿಸ್ತೀರ್ಣ
ಅಥವಾ 5 $\times$ ಎತ್ತರ = 24
,, ಎತ್ತರ = $\frac{24}{5}$ = 4.8 ಸೆಂ.ಮೀ.
$\therefore$ AB ಮೇಲಿನ ಎತ್ತರ=4.8 ಸೆಂ.ಮೀ. Ans.

ಪ್ರಶ್ನೆ 14. AB=6 ಸೆಂ ಮೀ. BC=5 ಸೆಂ.ಮೀ. $\angle$ B= 60° ಇರುವ $\triangle$ABCಯನ್ನು ರಚಿಸಿ ಅದರ ಅಂತಃಕೇಂದ್ರವನ್ನು ಕಂಡುಹಿಡಿಯಿರಿ.




I ಇದು ABC $\triangle$ದ ಅಂತಃ ಕೇಂದ್ರವಾಗಿದೆ.

ಪ್ರಶ್ನೆ 15. ಎರಡು ವೃತ್ತಗಳು ಪರಸ್ಪರ ಸ್ಪರ್ಶಿಸಿದರೆ, ಸ್ಪರ್ಶ ಬಿಂದು ಮತ್ತು ವೃತ್ತಗಳ ಕೇಂದ್ರಗಳು ಒಂದೇ ಸರಳರೇಖೆಯಲ್ಲಿರುತ್ತವೆ ಎಂದು ಸಾಧಿಸಿ.

ಉತ್ತರಕ್ಕೆ ಅಕ್ಟೋಬರ 1984ರ ಪ್ರಶ್ನೆ 16 ನೋಡಿ.

ಪ್ರಶ್ನೆ 16. ACB ಸ್ಪರ್ಶಕವು ವೃತ್ತವನ್ನು C ನಲ್ಲಿ ಸ್ಪರ್ಶಿಸುತ್ತದೆ: $\angle$ACD = 40°, ಮತ್ತು $\angle$D = 70° ಆದರೆ ಉಳಿದ ಕೋನಗಳನ್ನು ಕಂಡು ಹಿಡಿಯಿರಿ.

ಉತ್ತರಕ್ಕೆ ಅಕ್ಟೋಬರ 1984 ರ. ಪ್ರಶ್ನೆ 17 ನೋಡಿ.

ಪ್ರಶ್ನೆ 17. ಕೊಟ್ಟ ಆಕೃತಿಯಲ್ಲಿ AB,CD ಒಂದನ್ನೊಂದು ಸ್ಪರ್ಶಿಸುವ ಎರಡು ವೃತ್ತಗಳ ಎರಡು ಸಾಮಾನ್ಯ ಸ್ಪರ್ಶಕಗಳು. DC=4 ಸೆಂ.ಮೀ. ಆದರೆ AB ಯ ಉದ್ದ ಲೆಕ್ಕಾಚಾರ ಮಾಡಿ.

ಉತ್ತರಕ್ಕೆ ಎಪ್ರಿಲ್ 1986 ಪ್ರಶ್ನೆ 9 ನೋಡಿರಿ.

ಪ್ರಶ್ನೆ 18. ತ್ರಿಜ್ಯ 4 ಸೆಂ.ಮೀ. ಮತ್ತು 2.5 ಸೆಂ.ಮೀ. ಇರುವ ಮತ್ತು ಕೇಂದ್ರಗಳ ನಡುವಿನ ದೂರ 10. ಸೆಂ.ಮೀ. ಇರುವ ಎರಡು ವೃತ್ತಗಳಿಗೆ ನೇರ ಸಾಮಾನ್ಯ ಸ್ಪರ್ಶಕಗಳನ್ನೆಳೆಯಿರಿ.

ಉತ್ತರಕ್ಕೆ ಎಪ್ರಿಲ್ 1984ರ ಪ್ರಶ್ನೆ 18 ನೋಡಿ

ಪ್ರಶ್ನೆ 19. ಕೊಟ್ಟಿರುವ ಆಕೃತಿಯಲ್ಲಿ ಆಯ್ಲರನ ಸೂತ್ರವನ್ನು ತಾಳೆನೋಡಿ.

ರೀತಿ : ಆಯ್ಲರನ ಸೂತ್ರ.
N+R=A+2
ಚಿತ್ರದಲ್ಲಿ ಸಂಪಾತ ಬಿಂದುಗಳು N=5
ವಲಯಗಳು R=5
ಕಂಸಗಳು....A = 8



$\therefore\ N+R=5+5=10,$
$A+2=8+2=10$
$\therefore\ N+R=A+2$

ಪ್ರಶ್ನೆ 20. ಕೊಟ್ಟಿರುವ ಜಾಲಕೃತಿಯ ಸಂಖ್ಯಾಯತವನ್ನು ರಚಿಸಿ.

ರೀತಿ :




| | P | Q | R | S |
|---|---|---|---|---|
| P | 0 | 1 | 0 | 1 |
| Q | 1 | 2 | 1 | 0 |
| R | 0 | 1 | 0 | 1 |
| S | 1 | 0 | 1 | 2 |

∴ ಸಂಖ್ಯಾಯತ

$$\begin{bmatrix} 0 & 1 & 0 & 1 \\ 1 & 2 & 1 & 0 \\ 0 & 1 & 0 & 1 \\ 1 & 0 & 1 & 2 \end{bmatrix}$$

....●....

# ಗಣಿತ

## ಎಪ್ರಿಲ್-1987 1 ನೆಯ ಪತ್ರಿಕೆ

ವೇಳೆ : $2\frac{1}{2}$ ಗಂಟೆ] [ಅಧಿಕ ಗುಣಗಳು : 65

## (ಅಂಕಗಣಿತ-ಬೀಜಗಣಿತ)

ಪ್ರಶ್ನೆ 1. 654321ನ್ನು ಕನ್ನಡದಲ್ಲಿನ ಸಂಖ್ಯಾಸೂಚಕಗಳಲ್ಲಿ ಬರೆಯಿರಿ.

ಉತ್ತರ : 654321=೬೫೪೩೨೧.

ಪ್ರಶ್ನೆ 2. ಒಂದು ಕಿಲೋಮೀಟರನ್ನು ಸೆಂಟಿಮೀಟರಗಳಲ್ಲಿ ಬರೆಯಿರಿ.

ರೀತಿ : 1 ಕಿ.ಮೀ. = 1000 ಮೀಟರುಗಳು
= (1000 × 100) ಸೆಂ.ಮೀ.
1,00,000 ಸೆಂ.ಮೀ.ಗಳು Ans.

ಪ್ರಶ್ನೆ 3. ಗಣ $A=\{a,1\}$ ಆದರೆ, ಗಣ $A\times A$ ಬರೆಯಿರಿ

ರೀತಿ : $A\ \{a,1\}\quad A\times A=\{a,1\}\times\{a,1\}$
$=\{(a,a),\ (a,1),\ (1,a)\ (1,1\}$ Ans.

ಪ್ರಶ್ನೆ 4. $2as=v\ -u^2$ ಆದರೆ '$v$'ಯನ್ನು ಬಿಡಿಸಿ.

ರೀತಿ : $2as=v^2-u^2$ ಅಥವಾ $v^2=2as+u^2$
ಅಥವಾ $v=\pm\sqrt{2as+u^2}$ Ans.

ಪ್ರಶ್ನೆ 5. $log\ 7\ 0.8451$ ಮತ್ತು $log\ 9\ 0.9542$ ಆದರೆ, $log\ 63$ರ ಬೆಲೆ ಏನು ?

ರೀತಿ : $log\ 7=0.8451$ ಮತ್ತು $log\ 9=0.9542$
$\therefore\ log\ 63=log(7\times 9)=log\ 7+log\ 9$
$=0.8451+0.9542$
$=1.7993$ Ans.

ಪ್ರಶ್ನೆ 6. ಶೇಕಡಾ $7\frac{1}{2}$ಯ, ರೂ. 3,600 ಸಾಲದ ಬಾಂಡ್ ಗಳಿದ್ದಲ್ಲಿ ವಾರ್ಷಿಕ ಆದಾಯವೆಷ್ಟು ?

ರೀತಿ : 100 ರೂ ಗಳ ವಾರ್ಷಿಕ ಆದಾಯ= $\frac{15}{2}$ ರೂ.
∴ 3,600 ರೂ.ಗಳ ವಾರ್ಷಿಕ ಆದಾಯ
$=\frac{15\times 3,600}{2\quad 100}=270$ ರೂ.
∴ ಸಾಲದಬಾಂಡ್‌ಗಳಿಂದ ವಾರ್ಷಿಕ ಉತ್ಪನ್ನ
=270 ರೂ. Ans.

ಪ್ರಶ್ನೆ 7. $(2x^2+x)$ ಮತ್ತು $(4x^2-1)$ಗಳ ಮ.ಸಾ.ಅ. ಎಷ್ಟು ?

ರೀತಿ : $2x^2+x=x(2x+1)$..........I
$4x^2-1=(2x+1)(2x\ \ 1)$....II
I ಮತ್ತು II ರಿಂದ ಮ.ಸಾ.ಅ. $=2x+1$ Ans.

ಪ್ರಶ್ನೆ 8. $\{(a+b)(b+c)\},\ \{(b+c)(c+a)\},\ \{(c+a)(a+b)\}$ಗಳ ಲ.ಸಾ.ಅ. ಎಷ್ಟು ?

ರೀತಿ : $\{(a+b)(b+c)\},\ \{(b+c)(c+a)\},\ \{(c+a)(a+b)\}$,ಗಳ ಲ.ಸಾ.ಅ.$=(a+b)(b+c)(c+a)$ Ans.

ಪ್ರಶ್ನೆ 9. ಅಪವರ್ತಿಸಿ. $81m^4\ \ 121n^2$

ರೀತಿ : $81m^4-121n^2=(9m^2)^2-(11n)^2$
$=(9m^2-11n)(9m^2+11n)$Ans.

ಪ್ರಶ್ನೆ 10. $2x^2+6x-3=0$ ಸಮೀಕರಣದ ಮೂಲಗಳ ಮೊತ್ತ ಮತ್ತು ಗುಣಲಬ್ಧಗಳನ್ನು ಕಂಡು ಹಿಡಿಯಿರಿ.

ರೀತಿ : $2x^2+6x-3=0$ ಇಲ್ಲಿ $a=2, b=6, c=-3$.

$\therefore$ i) ಮೂಲಗಳ ಮೊತ್ತ $=\frac{-b}{a}=\frac{-6}{2}=-3$

ii) ಮೂಲಗಳ ಗುಣಲಬ್ಧ $=\frac{c}{a}$

$=\frac{-3}{2}=-\frac{3}{2}$ Ans.

ಪ್ರಶ್ನೆ 11. $\frac{1}{2}x : 30 :: 2 : \frac{1}{5}$ ಸಮಾನುಪಾತದಲ್ಲಿ $x$ನ ಬೆಲೆಯೇನು ?

ರೀತಿ : $\frac{1}{2}x : 30 :: 2 : \frac{1}{5}$

ಅಂತ್ಯ ಪದಗಳ ಗುಣಲಬ್ಧ=ಮಧ್ಯಪದಗಳ ಗುಣಲಬ್ಧ

$\therefore \frac{1}{2}x \times \frac{1}{5}=30\times 2$ ಅಥವಾ $\frac{x}{10}=60$

ಅಥವಾ $x=60\times 10=600$

$\therefore x=600$ Ans.

ಪ್ರಶ್ನೆ 12. 1101 ಮತ್ತು 111 ದ್ವಿಮಾನ ಸಂಖ್ಯಾಸೂಚಕಗಳನ್ನು ಕೂಡಿಸಿರಿ.

ರೀತಿ :
```
 1 1 0 1
   1 1 1      ∴ ಮೊತ್ತ 10100(2)
1 0 1 0 0(2)            Ans.
```

ಪ್ರಶ್ನೆ 13. ಒಂದು ಸಂಖ್ಯೆಯ ಶೇಕಡಾ 25 ರಷ್ಟು 8 ಆದರೆ ಆ ಸಂಖ್ಯೆ ಯಾವುದು ?

ರೀತಿ : ಆ ಸಂಖ್ಯೆ $=\frac{100\times 8}{25}=32$ Ans.

ಪ್ರಶ್ನೆ 14. ಸುಲಭಿಸಿ. $\frac{3x+3y}{4x^3-4xy^2}$

ರೀತಿ : $\frac{3x+3y}{4x^3-4xy^2}=\frac{3(x+y)}{4x(x^2-y^2)}$

$=\frac{3(x+y)}{4x(x+y)(x-y)}$

$=\frac{3}{4x(x-y)}$ Ans.

ಪ್ರಶ್ನೆ 15. $\frac{2^8}{2^0}$ ಇದರ ಬೆಲೆಯೇನು ?

ರೀತಿ : $\frac{2^8}{2^0}=\frac{2^8}{1}=2^8=8$ Ans.

ಪ್ರಶ್ನೆ 16. $4^{2/3}$ ನ್ನು ಕರಣಿರೂಪಕ್ಕೆ ಪರಿವರ್ತಿಸಿ.

ರೀತಿ : $4^{2/3}=\sqrt[3]{4^2}=\sqrt[3]{16}$ Ans.

ಪ್ರಶ್ನೆ 17. $\begin{bmatrix}2&0&0\\0&2&0\\0&0&2\end{bmatrix}$ ಈ ಸಂಖ್ಯಾಯತದ ಹೆಸರೇನು ?

ಉತ್ತರ : ಪರಿಮಾಣ ಸಂಖ್ಯಾಯತ.

ಪ್ರಶ್ನೆ 18. 1 ರಿಂದ 49 ರ ವರೆಗಿನ ಎಲ್ಲಾ ಸ್ವಾಭಾವಿಕ ಸಮಸಂಖ್ಯೆಗಳ ಮೊತ್ತ ಎಷ್ಟು ?

ರೀತಿ : 1 ರಿಂದ 49ರ ವರೆಗಿನ ಎಲ್ಲಾ ಸಮ ಸ್ವಾಭಾವಿಕ ಸಂಖ್ಯೆಗಳು $=2, 4, 6, 8, 10, 12, \ldots\ldots 48$.

$\therefore$ ಮೊತ್ತ $S=2+4+6+8+\ldots\ldots+48$.

$=2(1+2+3+4+\ldots\ldots 24)$

$=2\times S_{24}=2\left\{\frac{24(24+1)}{2}\right\}$

$=24\times 25=600$ Ans.

ಪ್ರಶ್ನೆ 19 ಲಘುಗಣಕ ಆಧಾರಿತ ಪಟ್ಟಿಯಲ್ಲಿ 4 ರಿಂದ 64 ಇರುವ ಅಂತರವು 2 ಸೆಂ ಮೀ. 4 ಮತ್ತು 64 ರ ರೇಖಾಭಾಗದಲ್ಲಿ ಯಾವ ಸಂಖ್ಯೆಯು ಮಧ್ಯಬಿಂದುವಾಗಿರುವುದು ?

ರೀತಿ : 4 ಮತ್ತು 64 ರ ರೇಖಾಭಾಗದ ಮಧ್ಯಬಿಂದುವಿನ ಬೆಲೆ $x$ ಆಗಿರಲಿ.

$\therefore 4 : x=x : 64$

ಅಥವಾ $x^2=4\times 64$ ಅಥವಾ $x=\sqrt{4\times 64}$

$=2\times 8=16$

ಮಧ್ಯಬಿಂದು 16 Ans

ಪ್ರಶ್ನೆ 20. ರೂ. 10 ರ ಸಂಚಿತಾವಧಿ ಖಾತೆಗೆ 60 ತಿಂಗಳ ನಂತರ ಬ್ಯಾಂಕ್ ರೂ. 761 ನ್ನು ಕೊಟ್ಟರೆ,ರೂ. 45 ಸಂಚಿತಾವಧಿ ಖಾತೆಗೆ 60 ತಿಂಗಳ ನಂತರ ಬ್ಯಾಂಕ ಕೊಡುವ ಹಣವೆಷ್ಟು ?

ರೀತಿ : 10 ರೂ. ಕಂತಿಗೆ 60 ತಿಂಗಳನಂತರ ಕೊಡುವ ಹಣ =761 ರೂ.

$\therefore$ 45 ರೂ. ಕಂತಿಗೆ 60 ತಿಂಗಳ ನಂತರ ಕೊಡುವ ಹಣ.

$=\frac{761\times 45}{10}=\frac{6849}{2}=3424.50$ ರೂ. Ans.

ಪ್ರಶ್ನೆ 21. $nc_2=15$ ಆದರೆ '$n$' ಬೆಲೆಯೇನು ?

ರೀತಿ : $nc_2=\frac{n!}{(n-2)!\times 2!}=15$

ಅಥವಾ $\frac{n(n-1)(n-2)(n-3)\times 3\times 2\times 1}{(n-2)(n-3)\ldots\times 3\times 2\times 1\times 2\times 1}=15$

ಅಥವಾ $\frac{n(n-1)}{2}=15$

,, $n(n-1)-30$ ಅಥವಾ $n^2-n-30=0$.

,, $n^2-6n+5n-30=0$.

,, $n(n-6)(+5(n-6)=0$.

,, $(n-6)(n+5)=0$.

$n-6=0$ ಇದ್ದರೆ $n=6$.

$n+5=0$ ಇದ್ದರೆ $n=-5$ ಅನ್ವಯಿಸುವುದಿಲ್ಲ.

$\therefore$ $n=6$ **Ans.**

**ಪ್ರಶ್ನೆ 22.** ಚದುರಂಗ ಆಟದಲ್ಲಿ A ಮತ್ತು B ಆಟಗಾರರ ನಿರ್ವಹಣೆಯು ಹೀಗಿದೆ.

| | A | B |
|---|---|---|
| ಸರಾಸರಿ ಪ್ರಾಪ್ತಾಂಕ (M) | 7.5 | 8.0 |
| ಪ್ರಮಾಣ ವಿಚಲನ ($\sigma$) | 0.5 | 0.6 |

ಯಾವ ಆಟಗಾರನ ಸ್ಥಿರತೆ ಹೆಚ್ಚು ?

A ಆಟಗಾರನ ಮಾರ್ಪಿನ ಗುಣಾಂಕ $=\frac{\sigma}{M}\times 100$

$=\frac{0.5}{7.5}\times 100=6.67$

B ಆಟಗಾರನ ಮಾರ್ಪಿನ ಗುಣಾಂಕ $=\frac{\sigma}{M}\times 100$

$=\frac{0.6}{8}\times 100=7.5$

A ಆಟಗಾರನ ಮಾರ್ಪಿನ ಗುಣಾಂಕವು, B ಆಟಗಾರನ ಮಾರ್ಪಿನ ಗುಣಾಂಕಕ್ಕಿಂತ ಕಡಿಮೆ ಇದೆ.

$\therefore$ A ಆಟಗಾರನ ಸ್ಥಿರತೆ ಹೆಚ್ಚು **Ans.**

**ಪ್ರಶ್ನೆ 23.** ಒಬ್ಬನು A ನಗರದಿಂದ ಪೂರ್ವ ದಿಕ್ಕಿನಲ್ಲಿ 15 ಕಿ.ಮೀ. ದೂರವಿರುವ B ನಗರಕ್ಕೆ ಕಾರಿನಲ್ಲಿ ತೆರಳುವನು. B ನಗರದಿಂದ ಉತ್ತರ ದಿಕ್ಕಿನಲ್ಲಿ 8ಕಿ.ಮೀ. ದೂರವಿರುವ C ನಗರಕ್ಕೆ ತೆರಳುವನು. C ನಗರದಿಂದ ಮತ್ತೆ A ನಗರವನ್ನು ತಲುಪುವನು. ಅವನ ಕಾರಿನಲ್ಲಿರುವ ದೂರಮಾಪನ ಯಂತ್ರವು ಎಷ್ಟು ದೂರದ ಪ್ರಯಾಣವನ್ನು ತೋರಿಸುವುದು ?

ರೀತಿ : ABC $\triangle$ ದಲ್ಲಿ $\angle B=90^\circ$.

AB = 15 ಕಿ ಮೀ. BC = 8 ಕಿ.ಮೀ.

ಇನ್ನು $AC^2=AB^2+BC^2$



$=(15)^2+(8)^2$

$=225+64$

$=289$

$\therefore$ $AC=\sqrt{289}=17$ ಕಿ.ಮೀ.

$\therefore$ ದೂರಮಾಪನ ಯಂತ್ರ ತೋರಿಸುವ ಒಟ್ಟು ದೂರ $=AB+BC+AC=(15+8+17)$ ಕಿ.ಮೀ. $=40$ ಕಿ.ಮೀ. **Ans.**

**ಪ್ರಶ್ನೆ 24.** ಆರು ಮುಖಗಳ ಕುಂದಿಲ್ಲದ ಎರಡು ದಾಳಗಳನ್ನು ಎಸೆದಾಗ, ಎರಡು ಮೇಲ್ಮುಖಗಳ ಸಂಖ್ಯೆಗಳ ಮೊತ್ತವು 9 ಆಗುವದರಸಂಭವನೀಯತೆ ಎಷ್ಟು ?

ರೀತಿ : ಸಂಭವಿಸಬಹುದಾದ ಎಲ್ಲ ಘಟನೆಗಳ ಸಂಖ್ಯೆ $=6\times 6=36$

ಮೇಲಿನ ಮುಖಗಳ ಸಂಖ್ಯೆಗಳ ಮೊತ್ತವು 9 ಆಗುವ ಘಟನೆಗಳ ಸಂಖ್ಯೆ $=(3+6),(4+5),(5+4),(6+3),=4$

$\therefore$ ಸಂಭವನೀಯತೆ $=\frac{\text{ಇಚ್ಛಿತ ಘಟನೆಗಳು}}{\text{ಒಟ್ಟು ಘಟನೆಗಳು}}=\frac{4}{36}$

$=\frac{1}{9}$ **Ans.**

**ಪ್ರಶ್ನೆ 25.** $(2+\sqrt{2})$ ಮತ್ತು $(2-\sqrt{2})$ ಮೂಲಗಳನ್ನು ಹೊಂದಿರುವ ವರ್ಗ ಸಮೀಕರಣವನ್ನು ರಚಿಸಿ.

ರೀತಿ : $m=2+\sqrt{2}$ ಮತ್ತು $n=2-\sqrt{2}$ ಆಗಿರಲಿ.

$\therefore$ ಮೂಲಗಳ ಮೊತ್ತ $m+n=2+\sqrt{2}+2-\sqrt{2}=4$. ಮತ್ತು ಮೂಲಗಳ ಗುಣಲಬ್ಧ $mn=(2+\sqrt{2})(2-\sqrt{2})$

$=(2)^2-(\sqrt{2})^2=4-2=2$

$\therefore$ ಸಮೀಕರಣ $x^2-(m+n)x+mn=0$.

ಅಥವಾ $x^2-4x+2=0$ **Ans.**

**ಪ್ರಶ್ನೆ 26.** '$m$' ಒಂದು ಸಂಖ್ಯೆ ಅದಕ್ಕೆ $-xy$ನ್ನು ಕೂಡಿಸಿ ಬರುವ ಮೊತ್ತವನ್ನು $pq$ ದಿಂದ ಭಾಗಿಸಿ, ಸಿಗುವ ಭಾಗಲಬ್ಧವು C ಗಿಂತ ಹೆಚ್ಚಾಗಿರುತ್ತದೆ. ಈ ಹೇಳಿಕೆಯನ್ನು ಬರೆಯಿರಿ.

ಉತ್ತರ : $\frac{m-xy}{pq}>C$ **Ans.**

**ಪ್ರಶ್ನೆ 27.** ಈ ಕೆಳಗೆ ಕೊಟ್ಟಿರುವ ಸಮೀಕರಣವು ಸರಿಯೇ ಪರಿಕ್ಷಿಸಿ.

i) $52 \equiv 73$ (ಮಾಡ್ Mod 7)

ii) $4 \odot 4 = 1$ (ಮಾಡ್ 5 ನಲ್ಲಿ)

ರೀತಿ : i) $52 \div 7 = 7$ ಶೇಷ 3.

$73 \div 7 = 10$ ಶೇಷ 3.

ಇಲ್ಲಿ ಶೇಷಗಳು ಸಮ ಅವೆ.

$\therefore$ $52 \equiv 73$ (ಮಾಡ್ 7) ಸರಿ.

ii) $4 \odot 4$ ಅಂದರೆ $4 \times 4 = 16$,

$16 \div 5 = 3$, ಶೇಷ 1.

$\therefore$ $4 \odot 4 = 1$ (ಮಾಡ್ 5) ಸರಿ.

**ಪ್ರಶ್ನೆ 28.** 40 ಗೋಲಿಗಳಲ್ಲಿ 30 ಕೆಂಪು ಬಣ್ಣದವು 20 ಕೆಂಪು ಮತ್ತು ಹಳದಿ ಬಣ್ಣದ ಮಿಶ್ರಣದವು ಹಳದಿ ಬಣ್ಣದ ಗೋಲಿಗಳೆಷ್ಟಿವೆ ಎಂಬುದನ್ನು ಕಂಡು ಹಿಡಿಯಿರಿ.

ರೀತಿ : $n(R)$ = ಕೆಂಪು ಬಣ್ಣದ ಗೋಲಿಗಳು = 30

$n(Y)$ = ಹಳದಿ ಬಣ್ಣದ ಗೋಲಿಗಳು = ?

$n(R \cup Y)$ ಒಟ್ಟು ಗೋಲಿಗಳು = 40

$n(R \cap Y)$ = ಕೆಂಪು ಮತ್ತು ಹಳದಿ ಮಿಶ್ರಿತ ಗೋಲಿಗಳು = 20

$\therefore$ $n(R) + n(Y) = n(R \cup Y) + n(R \cap Y)$

$\therefore$ $n(Y) = n(R \cup Y) + n(R \cap Y) - n(R) = 40 + 20 - 30 = 30$

$\therefore$ ಹಳದಿ ಬಣ್ಣದ ಗೋಲಿಗಳು = 30 Ans.

**ಪ್ರಶ್ನೆ 29.** $a+b+c=0$ ಆದರೆ $(b^2-4ac)$ಯು ಒಂದು ಪರಿಪೂರ್ಣವರ್ಗವೆಂದು ತೋರಿಸಿ.

ರೀತಿ : $a+b+c=0$ ಅಥವಾ $a+c=-b$

ಇನ್ನು $b^2-4ac = (-b)^2-4ac$

$= (a+c)^2 - 4ac$

$= a^2+2ac+c^2-4ac$

$= a^2-2ac+c^2$

$= (a-c)^2$ = ಪರಿಪೂರ್ಣ ವರ್ಗ Ans.

**ಪ್ರಶ್ನೆ 30.** ಛೇದವನ್ನು ಆಕರಣೀಕರಿಸಿ ಸುಲಭ ರೂಪಕ್ಕೆ ತನ್ನಿ

$$\frac{x}{\sqrt{x}+2\sqrt{y}}$$

ರೀತಿ : $\dfrac{x}{\sqrt{x}+2\sqrt{y}} = \dfrac{x}{\sqrt{x}+2\sqrt{y}} \times \dfrac{\sqrt{x}-2\sqrt{y}}{\sqrt{x}-2\sqrt{y}}$

$$= \frac{x(\sqrt{x}-2\sqrt{y})}{(\sqrt{x}+2\sqrt{y})(\sqrt{x}-2\sqrt{y})}$$

$$= \frac{x(\sqrt{x}-2\sqrt{y})}{(\sqrt{x})^2-(2\sqrt{y})^2}$$

$$= \frac{x(\sqrt{x}-2\sqrt{y})}{(x-4y)} \text{ Ans.}$$

**ಪ್ರಶ್ನೆ 31.** ಇದರಲ್ಲಿ $x$ ಮತ್ತು $y$ ನ್ನು ಬಿಡಿಸಿ.

$$\begin{bmatrix}0 & 2\\ x & 0\end{bmatrix} + \begin{bmatrix}y & 2\\ y & 3\end{bmatrix} = \begin{bmatrix}4 & 4\\ 2 & 3\end{bmatrix}$$

ರೀತಿ : $\begin{bmatrix}0 & 2\\ x & 0\end{bmatrix} + \begin{bmatrix}y & 2\\ y & 3\end{bmatrix} = \begin{bmatrix}4 & 4\\ 2 & 3\end{bmatrix}$

ಅಥವಾ $\begin{bmatrix}0+y & 2+2\\ x+y & 0+3\end{bmatrix} = \begin{bmatrix}4 & 4\\ 2 & 3\end{bmatrix}$

„ $\begin{bmatrix}y & 4\\ x+y & 3\end{bmatrix} = \begin{bmatrix}4 & 4\\ 2 & 3\end{bmatrix}$

$\therefore$ $y=4$ ಮತ್ತು $x+y=2$.

ಅಥವಾ $x+4=2$ ಅಥವಾ $x=2-4=-2$

$\therefore$ $x=-2$, $y=4$. Ans.

**ಪ್ರಶ್ನೆ 32.** ಒಬ್ಬನು ಒಂದು ವಿದ್ಯುತ್ ಗಾಳಿ ಯಂತ್ರವನ್ನು ರೂ. 500 ಕ್ಕೆ ರೂ. 100 ನಗದು ಕೊಟ್ಟು ಕೊಳ್ಳುವನು ನಂತರ 6 ತಿಂಗಳಕಾಲ, ತಿಂಗಳಿಗೊಮ್ಮೆ ರೂ. 70 ನ್ನು ಕಂತಿನಂತೆ ಕಟ್ಟುವನು ಅವನು ಕೊಟ್ಟ ಬಡ್ಡಿಯ ದರವೇನು ?

ರೀತಿ : ಗಾಳಿಯಂತ್ರದ ನಗದು ಬೆಲೆ = ರೂ. 500

ಅರಂಭದಲ್ಲಿ ಕೊಟ್ಟ ಹಣ = ರೂ. 100

ಕಂತಿನಿಂದ ಕೊಡಬೇಕಾದ ಹಣ = ರೂ. $(70 \times 6)$ ರೂ. 420

ಕಂತಿನ ಕರಾರಿನಿಂದ ಗಾಳಿಯಂತ್ರದ ಬೆಲೆ = ರೂ. $(100+420)$ = ರೂ. 520

$\therefore$ ಕೊಡಬೇಕಾಗುವ ಬಡ್ಡಿ = ರೂ. $(520-500)$ = ರೂ. 20

| ಅವಧಿ | ಬಡ್ಡಿಗೆ ಪಾತ್ರವಾದ ಹಣ |
|---|---|
| 1ನೇ ತಿಂಗಳ | 400.00 (500–100) |
| 2ನೇ ತಿಂಗಳ | 330.00 |
| 3ನೇ ತಿಂಗಳ | 260.00 |
| 4ನೇ ತಿಂಗಳ | 190.00 |
| 5ನೇ ತಿಂಗಳ | 220.00 |
| 6ನೇ ತಿಂಗಳ | 50.00 |
| ಒಟ್ಟು | =1350.00 ರೂ. |

ಇನ್ನು 1350 ರೂ ಗಳ 1 ತಿಂಗಳ ಬಡ್ಡಿ = 20 ರೂ.

$\therefore$ 100 ರೂ.ಗಳ 1 ತಿಂಗಳ ಬಡ್ಡಿ $= \frac{20 \times 100}{1350}$ ರೂ.

$\therefore$ 100 ರೂ.ಗಳ 12 ತಿಂಗಳ ಬಡ್ಡಿ

$= \frac{20 \times 100 \times 12}{1350} = \frac{160}{9}$ ರೂ.

$\therefore$ ಬಡ್ಡಿದರ $= 17.77\%$ Ans.

**ಪ್ರಶ್ನೆ 33.** $y = x^2$ ಮತ್ತು $y = x + 6$ ಉತ್ಪನ್ನದ ನಕ್ಷೆಯನ್ನು ರಚಿಸಿ. ಮತ್ತು $x^2 - x - 6 \; 0$ ಸಮೀಕರಣವನ್ನು ಬಿಡಿಸಿ.

ಉತ್ತರಕ್ಕೆ ಅಕ್ಟೋಬರ 1984ರ ಪ್ರಶ್ನೆ 25 ನೋಡಿ.

**ಪ್ರಶ್ನೆ 34.** ಕೆಳಗಿನ ದತ್ತಾಂಶಗಳಿಂದ ಪೈ ರೇಖಾನಕ್ಷೆ (ಸರಳ ಖಂಡರೇಖಾಲೇಖ)ಯನ್ನು ಎಳೆಯಿರಿ.

| ಪತ್ರಿಕೆಯ ಹೆಸರು | ಒಂದು ಚಿಕ್ಕನಗರದಲ್ಲಿ ಪ್ರಸಾರ ಸಂಖ್ಯೆ |
|---|---|
| ಅ) ಸುಧಾ | 500 |
| ಆ) ತರಂಗ | 300 |
| ಇ) ರೀಡರ್ಸ್ ಡೈಜೆಸ್ಟ್ | 100 |
| ಈ) ಮಯೂರ | 300 |

**ರೀತಿ :** ಒಟ್ಟು ಪ್ರತಿಗಳ ಸಂಖ್ಯೆ $= 500 + 300 + 100 + 300 = 1200$.

1200 ಪ್ರತಿಗಳು $\equiv 360^\circ$

$\therefore$ 1 ಪ್ರತಿ $\equiv \frac{360}{1200} = \frac{3^\circ}{10}$

$\therefore$ ಸುಧಾ $500 \times \frac{3}{10} = 150^\circ$

ತರಂಗ $= 300 \times \frac{3}{10} = 90^\circ$

ರೀಡರ್ಸ್ ಡೈಜೆಸ್ಟ್ $= 100 \times \frac{3}{10} = 30^\circ$

ಮಯೂರ $= 300 \times \frac{3}{10} = 90^\circ$




**ಪ್ರಶ್ನೆ 35.** ಮಾಡ್ 5 ($Z_5$) ಗುಣಾಕಾರದ ಸಂಪೂರ್ಣ ಸಂಖ್ಯೆಗಳ ಕೋಷ್ಟಕವನ್ನು ರಚಿಸಿ. ನಂತರ ಮಾಡ್ $Z_5$ ಗುಣಾಕಾರದ ಬೀಜಗಣಿತೀಯ ಸಂರಚನೆ ಎಂದು ತೋರಿಸಿ.

**ರೀತಿ :** $Z_5 - \{0, 1, 2, 3, 4, \}$ ಇರಲಿ.

| $Z_5 \odot$ | 0 | 1 | 2 | 3 | 4 |
|---|---|---|---|---|---|
| 0 | 0 | 0 | 0 | 0 | 0 |
| 1 | 0 | 1 | 2 | 3 | 4 |
| 2 | 0 | 2 | 4 | 1 | 3 |
| 3 | 0 | 3 | 1 | 4 | 2 |
| 4 | 0 | 4 | 3 | 2 | 1 |

ಇನ್ನು $2 \odot 3 = 1 \in Z_5$, $3 \odot 3 = 4 \in Z_5$

$4 \odot 3 = 2 \in Z_5$ $4 \odot 4 = 1 \in Z_5$.

$\therefore \forall a, b \in Z_5 \quad a \odot b = c \in Z_5$

$\therefore$ ($Z_5$ ಮಾಡ್ 5) ಆವೃತವಾಗಿದೆ.

$\therefore$ ($Z_5 \odot$ ಮಾಡ್ 5) ಒಂದು ಬೀಜಗಣಿತ ಸಂರಚನೆಯಾಗಿದೆ.

● ....

# ಗಣಿತ

## ಎಪ್ರಿಲ್-1987     2 ನೆಯ ಪತ್ರಿಕೆ

### ರೇಖಾಗಣಿತ

ವೇಳೆ : 2 ಗಂಟೆ)     (ಅಧಿಕ ಗುಣಗಳು 35

ಪ್ರಶ್ನೆ 1. $\triangle ABC$ಯಲ್ಲಿ $AB=AC$ ಮತ್ತು $\angle ABC=70^\circ$ ಆದರೆ $\angle BAC$ ಮತ್ತು $\angle ACB$ಗಳ ಅಳತೆ ಕಂಡುಹಿಡಿಯಿರಿ.

ದತ್ತ : AB AC,

$\angle ABC=70^\circ$

ಕಂಡುಹಿಡಿಯುವುದು :

$\angle BAC$ ಮತ್ತು $\angle ACB$




ರೀತಿ : $ABC\triangle$ ದಲ್ಲಿ $AB=AC$,

$\angle ABC=70^\circ$

$\therefore \angle ACB=\angle ABC=70^\circ$

ಇನ್ನು $\angle A-180^\circ-\angle ABC-\angle ACB$

$\therefore \angle ACB=70^\circ$

$=180^\circ-70^\circ-70^\circ=40^\circ$

$\angle BAC=40^\circ$

ಪ್ರಶ್ನೆ 2. AB,CDಗಳು O ಬಿಂದುವಿನಲ್ಲಿ ಪರಸ್ಪರ ಛೇದಿಸಿವೆ. $\angle AOC=80^\circ$ ಆದರೆ $\angle DOB$ ಮತ್ತು $\angle AOD$ಗಳ ಅಳತೆ ಕಂಡುಹಿಡಿಯಿರಿ.

ದತ್ತ : $\angle AOC=80^\circ$

ಕಂಡುಹಿಡಿಯುವುದು :

$\angle DOB$, $\angle AOD$




ರೀತಿ : $\angle DOB=$

$\angle AOC=80^\circ$........(ಶೃಂಗಾಭಿಮುಖ ಕೋನಗಳು)

$\angle AOD+\angle AOC=180^\circ$........ (CD ಸರಳರೇಖೆ)

ಅಥವಾ $\angle AOD=180^\circ-\angle AOC$

$=180^\circ-80^\circ=100^\circ$

$\therefore \angle DOB=80^\circ, \quad \angle AOD=100^\circ.$

ಪ್ರಶ್ನೆ 3. ಒಂದು ಗೋಲದ ತ್ರಿಜ್ಯವು $3\frac{1}{2}$ ಸೆಂ.ಮೀ. ಆದರೆ ಆದರ ಹೊರಮೈ ಕ್ಷೇತ್ರಫಲವನ್ನು ಕಂಡುಹಿಡಿಯಿರಿ.

ರೀತಿ : ಗೋಲದ ಹೊರಮೈ ಕ್ಷೇತ್ರ

$A=4\pi r^2$........($r=3\frac{1}{2}=\frac{7}{2}$ ಸೆಂ.ಮೀ.)

$\therefore 4\times\frac{22}{7}\times\frac{7}{2}\times\frac{7}{2}=154$ ಚ.ಸೆಂ.ಮೀ. Ans.

ಪ್ರಶ್ನೆ 4. PQRS ವಜ್ರಾಕೃತಿ ಅದರಲ್ಲಿ $PQ=5$ ಸೆಂ.ಮೀ. ಮತ್ತು $\angle P=60^\circ$ ಆದರೆ PSಬಾಹುವಿನ ಉದ್ದವನ್ನು ಮತ್ತು $\angle PSR$ದ ಅಳತೆಯನ್ನು ಕಂಡುಹಿಡಿಯಿರಿ.

ದತ್ತ : $PQ=5$ ಸೆಂ.ಮೀ. $\angle P=60^\circ$

ಕಂಡುಹಿಡಿಯುವುದು : PS ಮತ್ತು $\angle PSR$




ರೀತಿ : ವಜ್ರಾಕೃತಿಯಲ್ಲಿ ಎಲ್ಲ ಬಾಹುಗಳು ಪರಸ್ಪರ ಸಮ ಇರುತ್ತವೆ.

$\therefore PS=PQ=5$ ಸೆಂ.ಮೀ.

$\angle P+\angle PSR=180^\circ$........(PQ//SR)

ಅಥವಾ $\angle PSR=180^\circ-\angle P$

$=180^\circ-60^\circ$

........($\angle P=60^\circ$)

$=120^\circ.$

$\therefore PS=5$ ಸೆಂ.ಮೀ. $\angle PSR=120^\circ$

ಪ್ರಶ್ನೆ 5. $\triangle LMN$ನಲ್ಲಿ ಮಧ್ಯ ರೇಖೆ $\angle A=9$ಸೆಂ.ಮೀ. ಮತ್ತು G ಆದರ ಗುರುತ್ವಕೇಂದ್ರವಾಗಿದೆ LGಯ ಉದ್ದವನ್ನು ಕಂಡುಹಿಡಿಯಿರಿ.

ರೀತಿ : ಗುರುತ್ವಕೇಂದ್ರ Gಯು ಮಧ್ಯರೇಖೆ $\angle A$ದ ತ್ರಿಭಾಜಕ ಬಿಂದುವದೆ.

$\therefore \angle G=\frac{2}{3}\times\angle A=\frac{2}{3}\times 9=6$ ಸೆಂ.ಮೀ.

ಪ್ರಶ್ನೆ 6. ಒಂದು ವೃತ್ತದಲ್ಲಿ AB ಮತ್ತು CD ಎರಡು ಸಮಜ್ಯಾಗಳಿವೆ. AB ಜ್ಯಾವು ಕೇಂದ್ರದಿಂದ 4 ಸೆಂ.ಮೀ. ದೂರದಲ್ಲಿದೆ CD ಜ್ಯಾವು ಕೇಂದ್ರ

ಗಣಿತ

ದಿಂದ ಎಷ್ಟು ದೂರದಲ್ಲಿದೆ ಎಂಬುದನ್ನು ಕಂಡು ಹಿಡಿಯಿರಿ.

ರೀತಿ : ವೃತ್ತದಲ್ಲಿ ಸಮಜ್ಯಾಗಳು ವೃತ್ತಕೇಂದ್ರದಿಂದ ಸಮ ದೂರದಲ್ಲಿರುತ್ತವೆ. ಇಲ್ಲಿ ಜ್ಯಾ AB = ಜ್ಯಾ CD.
AB ದ ದೂರ = 4 ಸೆಂ.ಮೀ.
∴ ಜ್ಯಾ CDದ ದೂರ ಕೇಂದ್ರದಿಂದ=4ಸೆಂ.ಮೀ.

ಪ್ರಶ್ನೆ 7. ಒಂದು ಸಮಬಹುಭುಜಾಕೃತಿಯ ಪ್ರತಿ ಹೊರ ಕೋನವು $36^\circ$ ಆದರೆ ಬಹುಭುಜಾಕೃತಿಯ ಭುಜ ಗಳ ಸಂಖ್ಯೆ ಕಂಡುಹಿಡಿಯಿರಿ.

ರೀತಿ : ಬಹುಭುಜಾಕೃತಿಯ ಭುಜಗಳ ಸಂಖ್ಯೆ

$$=\frac{360^\circ}{\text{ಹೊರಕೋನ}} = \frac{360^\circ}{36^\circ} = 10 \text{ Ans.}$$

ಪ್ರಶ್ನೆ 8. ಇಲ್ಲಿ ಒಂದು ಚಿತ್ರವನ್ನು ಕೊಟ್ಟಿದೆ.
a) ಅದು ಯಾವ ಘನಾಕೃತಿಯನ್ನು ಸೂಚಿ ಸುತ್ತದೆ ?
b) ಅದರ ಮುಖಗಳಾದ DAB ಮತ್ತು DBCಗಳ ಛೇದನ ರೇಖೆಯನ್ನು ತಿಳಿಸಿ.




ಉತ್ತರ : a) ಚಿತ್ರವು ತ್ರಿಭುಜ ಗೋಪುರವನ್ನು ಸೂಚಿಸುತ್ತದೆ.
b) DAB ಮತ್ತು DBC ಮುಖಗಳು DB ರೇಖೆಯಲ್ಲಿ ಛೇದಿಸಿವೆ.

ಪ್ರಶ್ನೆ 9. ಈ ಕೆಳಗಿನ ವಾಕ್ಯಗಳಲ್ಲಿ ಖಾಲಿ ಜಾಗಗಳಲ್ಲಿ ಸೂಕ್ತ ಉತ್ತರಗಳನ್ನು ತುಂಬಿರಿ. (ದಪ್ಪಕ್ಷರದ ಪದಗಳು ತುಂಬಿದ ಪದಗಳು)

ಉತ್ತರ : a) ಎರಡು ಕ್ಷಿತಿಜ ಸಮತಲಗಳು ಪರಸ್ಪರ ಸಮಾಂತರವಾಗಿರುತ್ತವೆ.
b) ಮುಚ್ಚಿರುವ ಆಯತಾಕಾರವುಳ್ಳ ಒಂದು ಎಣ್ಣೆ ಡಬ್ಬಕ್ಕೆ ಮೂರು ಜೊತೆ ಸಮಾಂತರ ಸಮತಲಗಳಿರುತ್ತವೆ.

ಪ್ರಶ್ನೆ 10. $\triangle ABC$ ಯಲ್ಲಿ $AP \perp BC$ ಮತ್ತು $\angle ABC$ ಒಂದು ಲಘುಕೋನವಾಗಿದೆ.
$AC^2 = AB^2 + BC^2 - 2BC.BP$ ಎಂದು ಸಾಧಿಸಿ.

ದತ್ತ : $ABC\triangle$ ದಲ್ಲಿ $AP \perp BC$, $\angle ABC$ ಲಘುಕೋನ

ಸಾಧನೀಯ : $AC^2 = AB^2 + BC^2 - 2BC.BP$

ಸಾಧನೆ : $ACP$ $\triangle$ ದಲ್ಲಿ $\angle APC = 90^\circ$....(ದತ್ತ)




$\therefore AC^2 = AP^2 + PC^2$
$= AP^2 + (BC - BP)^2$
$= AP^2 + BC^2 - 2BC\,BP + BP^2$
$= AP^2 + BP^2 + BC^2 - 2BC.BP$
ಆದರೆ $AP^2 + BP^2 = AB^2$ .......( $\angle APB = 90^\circ$)
$AC^2 = AB^2 + BC^2 - 2BC.BP$

ಪ್ರಶ್ನೆ 11. 3 ಸೆಂ.ಮೀ. 4 ಸೆಂ.ಮೀ. ಮತ್ತು 5 ಸೆಂ. ಮೀ. ತ್ರಿಜ್ಯಗಳುಳ್ಳ ಮೂರು ವೃತ್ತಗಳನ್ನು ಅವುಗಳು ಒಂದನ್ನೊಂದು ಸ್ಪರ್ಶಿಸುವಂತೆ ಎಳೆದಿದೆ. ಅವುಗಳ ಕೇಂದ್ರಗಳು ಕ್ರಮವಾಗಿ X,Y,Z ಆದರೆ, $\triangle XYZ$ ನ ಸುತ್ತಳತೆ ಲೆಕ್ಕಾಚಾರ ಮಾಡಿ.

ದತ್ತ : ವೃತ್ತಗಳ ತ್ರಿಜ್ಯಗಳು 3 ಸೆಂ.ಮೀ. 4 ಸೆಂ.ಮೀ. ಮತ್ತು 5 ಸೆಂ.ಮೀ.

ಕಂಡುಹಿಡಿಯುವುದು : $\triangle XYZ$ ದ ಸುತ್ತಳತೆ




ರೀತಿ : P,Q,Rಗಳು ಸ್ಪರ್ಶಬಿಂದುಗಳಾಗಿರಲಿ.
$XY = XP + YP = 3 + 4 = 7$ ಸೆಂ.ಮೀ.
$YZ = YQ + ZQ = 4 + 5 = 9$ ಸೆಂ ಮೀ.
$XZ = XR + ZR = 3 + 5 = 8$ ಸೆಂ.ಮೀ.

$\therefore$ $\triangle XYZ$ ನ ಸುತ್ತಳತೆ $= XY + YZ + XZ$
$= (7+9+8)$ ಸೆಂ.ಮೀ.
$= 24$ ಸೆಂ.ಮೀ.

**ಪ್ರಶ್ನೆ 12.** $\triangle PQR$ನಲ್ಲಿ $PQ = PR = 10$ ಸೆಂ. ಮೀ. $QR = 12$ ಸೆಂ.ಮೀ. Pಯಿಂದ QRಗೆ ಎಳೆದ PA ಲಂಬದ ಉದ್ದವನ್ನು ಲೆಕ್ಕಾಚಾರ ಮಾಡಿ.

ದತ್ತ : $PQ = PR = 10$ ಸೆಂ.ಮೀ.
$QR = 12$ ಸೆಂ.ಮೀ.




ಕಂಡುಹಿಡಿಯುವುದು : PAನ ಅಳತೆ

ರೀತಿ : $PQR\triangle$ದಲ್ಲಿ $PQ = PR$........(ದತ್ತ)
ಮತ್ತು $PA \perp QR$...............(ದತ್ತ)
$\therefore$ $QA = AR = \frac{12}{2} = 6$ ಸೆಂ.ಮೀ.
ಇನ್ನು $PQA$ $\triangle$ದಲ್ಲಿ $\angle PAQ = 90^\circ$
$\therefore$ $PA^2 + QA^2 = PQ^2$
ಅಥವಾ $PA^2 = PQ^2 - QA^2$
,, $PA^2 = (10)^2 - (6)^2 = 100 - 36 = 64$
$PA = \sqrt{64} = 8$ $\therefore$ $PA = 8$ ಸೆಂ.ಮೀ.

**ಪ್ರಶ್ನೆ 13.** 3 ಸೆಂ.ಮೀ. ತ್ರಿಜ್ಯವುಳ್ಳ ಒಂದು ವೃತ್ತವನ್ನು ಎಳೆಯಿರಿ. ಅದರ ಕೇಂದ್ರದಿಂದ 5 ಸೆಂ.ಮೀ. ದೂರದ ಬಿಂದುವಿನಿಂದ ವೃತ್ತಕ್ಕೆ ಎರಡು ಸ್ಪರ್ಶಕಗಳನ್ನು ಎಳೆಯಿರಿ. ಸ್ಪರ್ಶಕಗಳ ಉದ್ದವನ್ನು ಅಳತೆ ಮಾಡಿ ಅದನ್ನು ಲೆಕ್ಕಾಚಾರದಿಂದ ತಾಳೆ ನೋಡಿ.

ಉತ್ತರಕ್ಕೆ ಏಪ್ರಿಲ್ 1986ರ ಪ್ರಶ್ನೆ 12 ನೋಡಿ

**ಪ್ರಶ್ನೆ 14.** ABCD ಟ್ರಾಪಿಜ್ಯದಲ್ಲಿ $AB // CD$ $AB = 12$ ಸೆಂ.ಮೀ. $CD = 8$ ಸೆಂ.ಮೀ. ಸಮಾಂತರ ಬಾಹುಗಳ ನಡುವಿನ ದೂರ 10 ಸೆಂ.ಮೀ. ಆದರೆ ಟ್ರಾಪಿಜ್ಯದ ವಿಸ್ತೀರ್ಣ ಕಂಡುಹಿಡಿಯಿರಿ.

ದತ್ತ : $AB // CD$, $AB = 12$ ಸೆಂ.ಮೀ. $CD = 8$ ಸೆಂ.ಮೀ. ಎತ್ತರ $= 10$ ಸೆಂ.ಮೀ.

ಕಂಡುಹಿಡಿಯುವುದು : ABCD ಟ್ರಾಪಿಜ್ಯದ ವಿಸ್ತೀರ್ಣ

ರೀತಿ : ABCD ಟ್ರಾಪಿಜ್ಯದ ವಿಸ್ತೀರ್ಣ
$= \frac{1}{2} \times$ ಎತ್ತರ$(AB + CD)$
$= \frac{1}{2} \times 10(12 + 8)$ ಚ.ಸೆಂ.ಮೀ.
$5(20) = 100$ ಚ.ಸೆಂ.ಮೀ.

**ಪ್ರಶ್ನೆ 15.** ತ್ರಿಭುಜದ ಮೂರು ಮಧ್ಯರೇಖೆಗಳು ಏಕಬಿಂದು ವ್ಯಾಪಿಗಳಾಗಿರುತ್ತವೆ ಎಂದು ಸಾಧಿಸಿ.

ದತ್ತ : ABC $\triangle$ದಲ್ಲಿ BE, CF ಮಧ್ಯರೇಖೆಗಳು G ದಲ್ಲಿ ಛೇದಿಸಿವೆ. AG ಕೂಡಿಸಿ ವೃದ್ಧಿಸಲು ಅದು BCಯನ್ನು Dದಲ್ಲಿ ಛೇದಿಸಲಿ.




ಸಾಧನೀಯ : AGD ಮಧ್ಯರೇಖೆ ಇರುತ್ತದೆ.

ರಚನೆ : $AG = GH$ ಆಗುವಂತೆ GD ಯನ್ನು H ದ ವರೆಗೆ ವೃದ್ಧಿಸಿ, BH ಮತ್ತು CH ಸೇರಿಸಿ.

ಸಾಧನೆ : ABH $\triangle$ ದಲ್ಲಿ
F ಇದು AB ದ ಮಧ್ಯಬಿಂದುವದೆ........(ದತ್ತ)
G ಇದು AH ದ ಮಧ್ಯಬಿಂದುವದೆ........(ರಚನೆ)
$\therefore$ $GF // BH$ ಮತ್ತು $GF = \frac{1}{2} BH$
ಆದರೆ GF ಮತ್ತು CGಗಳು ಒಂದೇ ಸರಳರೇಖೆಯಲ್ಲಿ ಅವೆ.
$\therefore$ $CG // BH$
ಇದರಂತೆ $BG // CH$ ಎಂದು ಸಾಧಿಸಬಹುದು
ಇನ್ನು BGCH ಚತುರ್ಭುಜದಲ್ಲಿ
$BG // CH$, $CG // BH$........(ಸಾಧಿಸಿದೆ)
$\therefore$ BGCH ಸಮಾಂತರ ಚತುರ್ಭುಜವಿದೆ.
ಇನ್ನು BC ಮತ್ತು GH ಗಳು BGCH ಸಮಾಂತರ ಚತುರ್ಭುಜದ ಕರ್ಣಗಳಿವೆ.
$\therefore$ BC ಮತ್ತು GH ಗಳು ಪರಸ್ಪರ D ದಲ್ಲಿ ಅರ್ಧಿಸುತ್ತವೆ.
$\therefore$ D ಇದು BC ದ ಮಧ್ಯಬಿಂದುವಿರುತ್ತದೆ.
$\therefore$ AGD ಅಥವಾ AD ಇದು ಮಧ್ಯರೇಖೆ ಇರುತ್ತದೆ.

AD, BE ಮತ್ತು CF ಮಧ್ಯರೇಖೆಗಳು ಒಂದೇ ಬಿಂದುವಿನಲ್ಲಿ ಛೇದಿಸಿವೆ ಅಥವಾ ಏಕಬಿಂದು ವ್ಯಾಪಿ ಆಗಿವೆ.

ಪ್ರಶ್ನೆ 16. AP ಮತ್ತು AQ ಗಳು A ಬಿಂದುವಿನಿಂದ ಒಂದು ವೃತ್ತಕ್ಕೆ ಎಳೆದ ಸ್ಪರ್ಶಕಗಳಾಗಿವೆ. ಸ್ಪರ್ಶ ಬಿಂದುಗಳಾದ P ಮತ್ತು Q ಗಳನ್ನು ಸೇರಿಸಿದೆ. ಚಿತ್ರದಲ್ಲಿ ತೋರಿಸಿರುವಂತೆ R ಬಿಂದುವು ವೃತ್ತ ಪರಿಧಿಯ ಮೇಲೆ ಒಂದು ಬಿಂದು. $\angle PAQ = 40^\circ$ ಮತ್ತು $\angle RPA$ $30^\circ$ ಆದರೆ $\angle RQP$ ಮತ್ತು $\angle RQA$ ಕಂಡುಹಿಡಿಯಿರಿ.

ದತ್ತ : $\angle PAQ = 40^\circ$, $\angle RPA = 30^\circ$

ಕಂಡುಹಿಡಿಯುವುದು : $\angle RQP$, $\angle RQA$.




ರೀತಿ : APQ $\triangle$ ದಲ್ಲಿ AP = AQ.........(ಬಾಹ್ಯ ಬಿಂದುವಿನಿಂದ ಸ್ಪರ್ಶಕಗಳು)

$\therefore$ $\angle APQ = \angle AQP$.

ಆದರೆ $\angle PAQ$ $40^\circ$.......( ತ್ತ)

$\therefore$ $\angle APQ$ $\angle AQP = 180 - 40^\circ$
$= 140^\circ$

$\therefore$ $\angle APQ$ $\angle AQP$ $70^\circ$

ಇನ್ನು $\angle RPA = \angle RQP$...........(ಪ. ವೃ. ಖಂಡದಲ್ಲಿನ $\angle$ ಗಳು)

ಆದರೆ $\angle RPA = 30^\circ$........(ದತ್ತ)

$\angle RQP$ $30^\circ$

ಇನ್ನು $\angle RQA = \angle AQP - \angle RQP$
$= 70^\circ$ $30^\circ = 40^\circ$

$\therefore$ $\angle RQP$ $30^\circ$, $\angle RQA = 40^\circ$

ಪ್ರಶ್ನೆ 17. ಯಾವುದೇ ವೃತ್ತದಲ್ಲಿ ಸ್ಪರ್ಶರೇಖೆಯು ಸ್ಪರ್ಶಬಿಂದುವಿನಲ್ಲಿ ಎಳೆದ ತ್ರಿಜ್ಯವು ವೃತ್ತ ಸ್ಪರ್ಶರೇಖೆಗೆ ಲಂಬವಾಗಿರುತ್ತದೆ ಎಂದು ಸಾಧಿಸಿ.

ದತ್ತ : O ಕೇಂದ್ರವುಳ್ಳ ವೃತ್ತಕ್ಕೆ AB ಸ್ಪರ್ಶಕವಿದ್ದು C ಸ್ಪರ್ಶಬಿಂದುವದೆ. CO ಸೇರಿಸಿದೆ.




ಸಾಧನೀಯ: $OC \perp AB$.

ರಚನೆ : ABದ ಮೇಲೆ Cದ ಹೊರತಾಗಿ D ಬಿಂದುವನ್ನು ಗುರುತಿಸಿ OD ಸೇರಿಸಿ.

ಸಾಧನೆ : AB ಸ್ಪರ್ಶಕವಿದ್ದು C ಸ್ಪರ್ಶಬಿಂದುವದೆ.

$\therefore$ Cದ ಹೊರತಾಗಿ ABದ ಮೇಲಿನ ಯಾವುದೇ ಬಿಂದುವು ವೃತ್ತದ ಹೊರಗೆ ಬೀಳುತ್ತದೆ.

$\therefore$ Dಯ ವೃತ್ತದ ಹೊರಗೆ ಇರುತ್ತದೆ.

$\therefore$ $OD > OC$ ತ್ರಿಜ್ಯ ಅಥವಾ $OC < OD$

$\therefore$ O ದಿಂದ AB ಮೇಲೆ OC ದ ಹೊರತಾಗಿ ಎಳೆಯಲು ಬರುವ ಎಲ್ಲ ಸರಳ ರೇಖೆಗಳಿಗಿಂತ OCಯು ಚಿಕ್ಕದಿರುತ್ತದೆ ಎಂದು ಸಾಧಿಸಬಹುದು.

$\therefore$ $OC \perp BA$.

ಪ್ರಶ್ನೆ 18. ಇಲ್ಲಿ ಕೊಟ್ಟಿರುವ ಜಾಲಾಕೃತಿಗೆ ಸಂಖ್ಯಾಯತವನ್ನು ತಯಾರಿಸಿ.

ರೀತಿ :

| | A | B |
|---|---|---|
| A | 0 | 4 |
| B | 4 | 0 |

$$\begin{bmatrix} 0 & 4 \\ 4 & 0 \end{bmatrix}$$

ಸಂಖ್ಯಾಯತ




ಪ್ರಶ್ನೆ 19. ಈ ಕೆಳಗೆ ಕೊಟ್ಟಿರುವ ಚಿತ್ರವು ಬಹುಭುಜ ಘನದ ಜಾಲಾಕೃತಿಯಾಗಿದೆ.

a) ಆ ಬಹುಭುಜ ಘನದ ಹೆಸರನ್ನು ತಿಳಿಸಿ.

b) ಆ ಬಹುಭುಜ ಘನಕ್ಕೆ ಎಷ್ಟು ಅಂಚುಗಳು ಮತ್ತು ಶೃಂಗಗಳು ಇವೆ ?

ಉತ್ತರ : a) ಚಿತ್ರದಲ್ಲಿ ತೋರಿಸಿದ ಜಾಲಾಕೃತಿಯು ಷಟ್ ಮುಖ ಘನದ್ದಾಗಿದೆ.



b) ಬಹುಭುಜ ಘನಕ್ಕೆ—
ಶೃಂಗಗಳು : 8, ಅಂಚುಗಳು : 12.

# ಗಣಿತ

**ಅಕ್ಟೋಬರ-1987 1 ನೆಯ ಪತ್ರಿಕೆ**

**(ಅಂಕಗಣಿತ-ಬೀಜಗಣಿತ)**

ವೇಳೆ : $2\frac{1}{2}$ ಗಂಟೆ) (ಅಧಿಕ ಗುಣಗಳು : 65

ಪ್ರಶ್ನೆ 1. 15 ಮತ್ತು 30 ರ ಮಧ್ಯದ ಎಲ್ಲಾ ಅವಿಭಾಜ್ಯ ಸಂಖ್ಯೆಗಳನ್ನು ಬರೆಯಿರಿ.

ಉತ್ತರ : 17, 19, 23, 29

ಪ್ರಶ್ನೆ 2. ಚಕ್ರಬಡ್ಡಿಯ ಮೂಲಕ ಆಗುವ ಮೊತ್ತವನ್ನು ಕಂಡುಹಿಡಿಯಲು ಬಳಸುವ ಸೂತ್ರ ಯಾವುದು ?

ಉತ್ತರ : ಸೂತ್ರ $A=P\left[1+\frac{R}{100}\right]^n$

ಇಲ್ಲಿ A=ಮೊತ್ತ, P=ಅಸಲು, R=ಬಡ್ಡಿದರ, n = ಅವಧಿ (ವರ್ಷಗಳಲ್ಲಿ)

ಪ್ರಶ್ನೆ 3 ರೂ. 110ರಂತೆ. ಶೇ. $6\frac{1}{4}$ರಲ್ಲಿ 4000 ಸ್ಟಾಕು ಮಾರಿದ್ದರಿಂದ ಬಂದ ಹಣವೆಷ್ಟು ?

ರೀತಿ : 100 ರೂ. ಸ್ಟಾಕು, ಮಾರುವುದರಿಂದ ಬರುವ ಹಣ = 110 ರೂ.

∴ 4,000 ರೂ. ಸ್ಟಾಕು ಮಾರುವುದರಿಂದ ಬರುವ ಹಣ $=\frac{110\times4000}{100}=4,400$ ರೂ.

ಸ್ಟಾಕು ಮಾರಿ ಬಂದ ಹಣ = ರೂ. 4,400 Ans.

ಪ್ರಶ್ನೆ 4. $3^{2m}=81$ ಆದರೆ, $m$'ನ ಬೆಲೆ ಎಷ್ಟು ?

ರೀತಿ : $3^{2m}=81$ ಅಥವಾ $3^{2m}=3^4$

ಅಥವಾ $2m=4$ ಅಥವಾ $m=\frac{4}{2}=2$

∴ $m=2$ Ans.

ಪ್ರಶ್ನೆ 5. $(a+b)^3$ ಮತ್ತು $a^2-b^2$ ಮ ಸಾ ಅ ಕಂಡುಹಿಡಿಯಿರಿ.

ರೀತಿ : $(a+b)^3=(a+b)(a+b)$........I

$a^2-b^2=(a+b)(a-b)$........II

I ಮತ್ತು II ರಿಂದ ಮ ಸಾ.ಅ. $=a+b$ Ans.

ಪ್ರಶ್ನೆ 6. $x(x+y)$, $y(x-y)$ ಮತ್ತು $(x^2-y^2)$ ಲ. ಸಾ. ಅ. ಕಂಡುಹಿಡಿಯಿರಿ.

ರೀತಿ : $x(x+y)$........I $y(x-y)$........II

$x^2-y^2=(x+y)(x-y)$........ III

I, II ಮತ್ತು III ರಿಂದ ಲ. ಸಾ ಅ. $=xy$

$(x+y)(x-y)=xy(x^2-y^2)$ Ans.

ಪ್ರಶ್ನೆ 7. $81^{\frac{3}{4}}$ ಇದನ್ನು ಸಂಕ್ಷೇಪಿಸಿ.

ರೀತಿ : $81^{\frac{3}{4}}=(3^4)^{\frac{3}{4}}=3^{4\times\frac{3}{4}}=3^3=27$ Ans.

ಪ್ರಶ್ನೆ 8. $3x^2+5=0$ ಸಮೀಕರಣದ ಮೂಲಗಳ ಮೊತ್ತ ಮತ್ತು ಗುಣಲಬ್ಧವನ್ನು ಕಂಡುಹಿಡಿಯಿರಿ.

ರೀತಿ : $3x^2+5=0$, ಇಲ್ಲಿ $a=3$, $b=0$, $c=5$.

∴ ಮೂಲಗಳ ಮೊತ್ತ $=\frac{-b}{a}=\frac{-0}{3}=0$ Ans.

ಮತ್ತು ಮೂಲಗಳ ಗುಣಲಬ್ಧ $=\frac{c}{a}=\frac{5}{3}$ Ans.

ಪ್ರಶ್ನೆ 9. 1 ರಿಂದ '$n$' ವರೆಗಿನ '$n$' ಸಂಖ್ಯೆಗಳ ಎಲ್ಲಾ ಸ್ವಾಭಾವಿಕ ಸಂಖ್ಯೆಗಳ ಮೊತ್ತವು $S_n$ ಆದರೆ, $S_{15}-S_5$ ಇದನ್ನು ಕಂಡುಹಿಡಿಯಿರಿ.

ರೀತಿ : $S_n=\frac{n(n+1)}{2}$

$\therefore S_{15}-S_5=\frac{15(15+1)}{2}-\frac{5(5+1)}{2}$

$=\frac{15\times16}{2}-\frac{5\times6}{2}=15\times8-(5\times3)$.

$=120-15=105$ Ans.

ಪ್ರಶ್ನೆ 10. $x:10::18:9$ ಆ ಅನುಪಾತದಲ್ಲಿ $x$ ನ ಬೆಲೆ ಕಂಡುಹಿಡಿಯಿರಿ.

ರೀತಿ : $x:10::18:9$

ಅಂತ್ಯಪದಗಳಗುಣಲಬ್ಧ = ಮಧ್ಯಪದಗಳ ಗುಣಲಬ್ಧ

$x\times9=10\times18$ ಅಥವಾ $x=\frac{10\times18}{9}$

$=10\times2=20$.

$x=20$ Ans.

ಪ್ರಶ್ನೆ 11. $12\frac{1}{2}\%$ ಗೆ ಸಮನಾದ ಭಿನ್ನರಾಶಿಯನ್ನು ಬರೆಯಿರಿ.

ರೀತಿ : $12\frac{1}{2}\%=\frac{25}{2}\times\frac{1}{100}=\frac{1}{8}$ ∴ $12\frac{1}{2}\%=\frac{1}{8}$ Ans

ಪ್ರಶ್ನೆ 12 $a=5$, $b=2$ ಆದರೆ, $(a+b)^3-(a+b)^2-(a+b)$ ಇದರ ಬೆಲೆ ಎಷ್ಟು ?

ರೀತಿ : $(a+b)^3-(a+b)^2-(a+b)$
$=(5+2)^3-(5+2)^2-(5+2)$
$=7^3-7^2-7=343-49-7=287$ Ans.

ಪ್ರಶ್ನೆ 13. ಲಾಗ್ 8 = 0.9031 ಆದರೆ ಲಾಗ್ 8000 ವನ್ನು ಕಂಡುಹಿಡಿಯಿರಿ.

ರೀತಿ : ಲಾಗ್ 8 = 0.9031

∴ ಲಾಗ್ 8000 = 3.9031 Ans.

ಪ್ರಶ್ನೆ 14. 1101 ಮತ್ತು 111 ಗಳ ಮೊತ್ತವನ್ನು ದ್ವಿಮಾನ ಪದ್ಧತಿಯಲ್ಲಿ ಬರೆಯಿರಿ.

ರೀತಿ : 1101
111
$10100_{(2)}$ ∴ ಮೊತ್ತ(ದ್ವಿಮಾನದಲ್ಲಿ) 10100 Ans.

ಪ್ರಶ್ನೆ 15. $5P_5$ ಇದರ ಬೆಲೆ ಎಷ್ಟು ?

ರೀತಿ : $5P_5=\frac{5}{(5-5)!}=\frac{5!}{0!}=\frac{5\times4\times3\times2\times1}{1}$
$=120$

ಪ್ರಶ್ನೆ 16. $4+y\sqrt{x}$ ಇದರ ಅಕರಣೀಕಾರ ಯಾವುದು ?

ಉತ್ತರ : $4+y\sqrt{x}$ ಇದರ ಅಕರಣೀಕಾರ $4-y\sqrt{x}$ ಆಗಿದೆ.

ಪ್ರಶ್ನೆ 17. 15 ಸಂಖ್ಯೆಗಳ ಸರಾಸರಿ 21, 10 ಸಂಖ್ಯೆಗಳ ಸರಾಸರಿ 20 ಉಳಿದ 5 ಸಂಖ್ಯೆಗಳ ಸರಾಸರಿ ಎಷ್ಟು ?

ರೀತಿ : 15 ಸಂಖ್ಯೆಗಳ ಮೊತ್ತ = $15\times21=315$
10 ಸಂಖ್ಯೆಗಳ ಮೊತ್ತ = $10\times20=200$
∴ ಉಳಿದ 5 ಸಂಖ್ಯೆಗಳ ಮೊತ್ತ = 315-200=115
∴ 5 ಸಂಖ್ಯೆಗಳ ಸರಾಸರಿ $=\frac{115}{5}=23$ Ans.

ಪ್ರಶ್ನೆ 18. ಸಂಕ್ಷೇಪಿಸಿ $\dfrac{1\frac{2}{3}+4\frac{5}{6}}{7\frac{4}{9}-2\frac{2}{3}}$

ರೀತಿ : $\dfrac{1\frac{2}{3}+4\frac{5}{6}}{7\frac{4}{9}-2\frac{2}{3}}=\dfrac{\frac{5}{3}+\frac{29}{6}}{\frac{67}{9}-\frac{8}{3}}=\dfrac{\frac{10+29}{6}}{\frac{67-24}{9}}=\dfrac{\frac{39}{6}}{\frac{43}{9}}$

$=\frac{39}{6}\times\frac{9}{43}=\frac{39\times3}{2\times43}=\frac{117}{86}=1\frac{31}{86}$ Ans.

ಪ್ರಶ್ನೆ 19. P ಎಂಬುದು ಒಂದು ಸ್ವಾಭಾವಿಕ ಸಂಖ್ಯೆ $P^3>P^2+5P$ ಆದರೆ $P^2>P+5$ ಎಂದು ಸಾಧಿಸಿ.

ರೀತಿ : $P^3>P^2+5P$ P ದಿಂದ ಭಾಗಿಸಲಾಗಿ,
$\frac{P^3}{P}>\frac{P^2}{P}+\frac{5P}{P}$ ಅಥವಾ $P^2>P+5$ Ans.

ಪ್ರಶ್ನೆ 20. $x$, $y$ನಂತೆ ಅನುಲೋಮವಾಗಿ ಮಾರ್ಪುಹೊಂದುವುದು. $x=40$ ಆದಾಗ $y=8$ ಆಗುವುದು $y=2$ ಆದಾಗ $x$ನ್ನು ಕಂಡುಹಿಡಿಯಿರಿ.

ರೀತಿ : $x\propto y$ ಅಥವಾ $x=ky$........I K = ಸ್ಥಿರ.
$x=40$, $y=8$, Iರಲ್ಲಿ ತುಂಬಲಾಗಿ,
$40=K\,8$ ಅಥವಾ $K=\frac{40}{8}=5$ ∴ K=5
ಇನ್ನು K = 5, $y=2$, Iರಲ್ಲಿ ತುಂಬಲಾಗಿ
$x=5\times2=10$ ∴ $y=2$ ಆದಾಗ
$x=10$ Ans.

ಪ್ರಶ್ನೆ 21. ಒಬ್ಬನು ತನ್ನ ಸೈಕಲ್ಲನ್ನು ಶೇ. 5 ನಷ್ಟಕ್ಕೆ ಮಾರಿದ. ಅದೇ ಸೈಕಲ್ಲನ್ನು ರೂ. 180 ಹೆಚ್ಚಿಗೆ ಮಾರಿದ್ದರೆ, ಅವನಿಗೆ ಶೇ. 10ರಷ್ಟು ಲಾಭ ಬರುತ್ತಿದ್ದಿತು. ಹಾಗಾದರೆ ಆ ಸೈಕಲ್ಲಿನ ಅಸಲು ಬೆಲೆ ಎಷ್ಟು ?

ರೀತಿ : ಸೈಕಲ್ಲಿನ ಅಸಲು ಬೆಲೆ ರೂ. 100 ಎಂದು ಕಲ್ಪಿಸಿ.
∴ 5% ನಷ್ಟಕ್ಕೆ ಮಾರಿದಾಗ ಬರುವ ಹಣ
= 100—5 = 95 ರೂ.
10% ಲಾಭಕ್ಕೆ ಮಾರಿದಾಗ ಬರುವ ಹಣ
= 100 + 10 = 110 ರೂ.
∴ 10% ಲಾಭಕ್ಕೆ ಮಾರಿದಾಗ ಬರುವ ಹೆಚ್ಚಿನ ಹಣ
= (110—95) ರೂ. = 15 ರೂ.
15ರೂ. ಹೆಚ್ಚಿಗೆ ಬಂದಾಗ ಅಸಲು ಬೆಲೆ 100 ರೂ.
∴ 180 ರೂ. ಹೆಚ್ಚಿಗೆ ಬಂದಾಗ ಅಸಲು ಬೆಲೆ
$=\frac{100\times180}{15}=1200$ ರೂ.
∴ ಸೈಕಲ್ಲಿನ ಅಸಲು ಬೆಲೆ = ರೂ. 1200 Ans.

ಪ್ರಶ್ನೆ 22. $nP_2=12$ ಸಮೀಕರಣದಲ್ಲಿ '$n$' ನ ಬೆಲೆಯನ್ನು ಕಂಡುಹಿಡಿಯಿರಿ

ರೀತಿ : $nP_2=12$ ಇಲ್ಲಿ $nP_2=n(n-1)$
ಅಥವಾ $n(n-1)=12$
,, $n^2-n-12=0$
,, $n^2-4n+3n-12=0$
,, $n(n-4)+3(n-4)=0$
,, $(n-4)(n+3)=0$

$n-4=0$ ಇದ್ದರೆ, $n=4$

$n+3=0$ ,, $n=-3$ ಇರಲಾರದು

$\therefore \quad n=4$ Ans.

ಪ್ರಶ್ನೆ 23. ಛೇದವನ್ನು ಆಕರಣೀಕರಿಸಿ ಸುಲಭರೂಪಕ್ಕೆ ತನ್ನಿ.

$$\frac{\sqrt{3}+\sqrt{5}}{\sqrt{3}-\sqrt{5}}$$

ರೀತಿ : $\frac{\sqrt{3}+\sqrt{5}}{\sqrt{3}-\sqrt{5}}=\frac{\sqrt{3}+\sqrt{5}}{\sqrt{3}-\sqrt{5}}\times\frac{\sqrt{3}+\sqrt{5}}{\sqrt{3}+\sqrt{5}}$

$$=\frac{(\sqrt{3}+\sqrt{5})^2}{(\sqrt{3}-\sqrt{5})(\sqrt{3}+\sqrt{5})}$$

$$=\frac{(\sqrt{3})^2+2(\sqrt{3})(\sqrt{5})+(\sqrt{5})^2}{(\sqrt{3})^2-(\sqrt{5})^2}$$

$$=\frac{3+2\sqrt{15}+5}{3-5}=\frac{8+2\sqrt{15}}{-2}$$

$$=\frac{2(4+\sqrt{15})}{-2}=-(4+\sqrt{15})\text{ Ans.}$$

ಪ್ರಶ್ನೆ 24. $2+\sqrt{2}$ ಮತ್ತು $2-\sqrt{2}$ ಮೂಲಗಳನ್ನು ಹೊಂದಿರುವ ವರ್ಗ ಸಮೀಕರಣವನ್ನು ರಚಿಸಿ.

ರೀತಿ : ಮೂಲಗಳು $m=2+\sqrt{2}$ ಮತ್ತು $n=2-\sqrt{2}$ ಇರಲಿ.

ಮೂಲಗಳ ಮೊತ್ತ $m+n=2+\sqrt{2}+2-\sqrt{2}$

$=4$

ಮತ್ತು ಮೂಲಗಳ ಗುಣಲಬ್ಧ $mn=(2+\sqrt{2})(2-\sqrt{2})=(2)^2-(\sqrt{2})^2$

$=4-2=2.$

ಸಮೀಕರಣ $x^2-(m+n)x+mn=0$

$x^2-4x+2=0$ Ans.

ಪ್ರಶ್ನೆ 25. $\begin{bmatrix}2x & 3\\1 & 0\end{bmatrix}=\begin{bmatrix}-x & 1\\1 & 0\end{bmatrix}+\begin{bmatrix}6 & 2\\0 & 0\end{bmatrix}$ ಆದರೆ '$x$'ನ್ನು ಬಿಡಿಸಿ.

ರೀತಿ : $\begin{bmatrix}2x & 3\\1 & 0\end{bmatrix}=\begin{bmatrix}-x & 1\\1 & 0\end{bmatrix}+\begin{bmatrix}6 & 2\\0 & 0\end{bmatrix}$

ಅಥವಾ $\begin{bmatrix}2x & 3\\1 & 0\end{bmatrix}=\begin{bmatrix}-x+6 & 1+2\\1+0 & 0+0\end{bmatrix}$

,, $\begin{bmatrix}2x & 3\\1 & 0\end{bmatrix}=\begin{bmatrix}-x+6 & 3\\1 & 0\end{bmatrix}$

$\therefore$ $2x=-x+6$ ಅಥವಾ $2x+x=6$

ಅಥವಾ $3x=6$ ಅಥವಾ $x=\frac{6}{3}=2.$

$\therefore$ $x=2$ Ans.

ಪ್ರಶ್ನೆ 26. $P=\{8,9,10,11,12,13\}$

$Q=\{10,11,12,13,14,15\}$ ಮತ್ತು

$R=\{12,13,14,16,18\}$ ಆಧರೆ

$P\cup(Q\cap R)$ ಕಂಡುಹಿಡಿಯಿರಿ.

ರೀತಿ : $P=\{8,9,10,11,12,13\}$

$Q=\{10,11,12,13,14,15\}$

$R=\{12,13,14,16,18\}$

$\therefore$ $Q\cap R=\{10,11,12,13,14,15\}$

$\cap\{12,13,14,16,18\}$

$=\{12,13,14\}$

$\therefore$ $P\cup(Q\cap R)=\{8,9,10,11,12,13\}$

$\cup\{12,13,14\}$

$=\{8,9,10,11,12,13,14\}$ Ans.

ಪ್ರಶ್ನೆ 27 ಒಬ್ಬ ವಿದ್ಯುತ್ ಬೀಸಣಿಗೆ (fan) ಯನ್ನು ರೂ. 500 ಕ್ಕೆ ಕಂತಿನ ಪ್ರಕಾರ ಕೊಂಡುಕೊಳ್ಳುವಾಗ ರೂ. 100 ಕೊಟ್ಟನು. ಆನಂತರ ಆರು ತಿಂಗಳ ಕಾಲ ತಿಂಗಳಿಗೆ ರೂ. 70 ರಂತೆ ಕಂತುಕೊಟ್ಟರೆ, ಅವನ ಬಡ್ಡಿ ದರ ಎಷ್ಟು ?

ರೀತಿ : ಬೀಸಣಿಗೆಯ ನಗದು ಬೆಲೆ $=500$ ರೂ.

ಕಂತಿನ ಪ್ರಕಾರ ಕೊಂಡಾಗ—

ಆರಂಭದಲ್ಲಿ ಕೊಡಬೇಕಾದ ಹಣ $=100$ ರೂ.

ಕಂತಿನಿಂದ ಕೊಡಬೇಕಾದ ಹಣ $=70\times6=420$ರೂ.

$\therefore$ ಕಂತಿನ ಪ್ರಕಾರ ಬೀಸಣಿಗೆಯ ಬೆಲೆ $=100+420$

$=520$ ರೂ.

$\therefore$ ಬಡ್ಡಿ $E=520-500=20$ ರೂ.

ಕಂತುಗಳ ಸಂಖ್ಯೆ $n=6$, ಕಂತಿನ ದರ $P=70$ರೂ

$$\text{ಬಡ್ಡಿದರ } R=\frac{2400E}{n[(n+1)P-2E]}$$

$$=\frac{2400\times20}{6[(6+1)70-2\times20]}$$

$$=\frac{400\times20}{7\times70-40}=\frac{400\times20}{490-40}$$

$$=\frac{400\times20}{450}=\frac{160}{9}=17\frac{7}{9}\%$$

$\therefore$ ಬಡ್ಡಿದರ $=17\frac{7}{9}\%$ Ans.

ಪ್ರಶ್ನೆ 28. $y=x^2+x-2$ ನಕ್ಷೆ ಬರೆದು $x^2+x-2=0$ ಎಂಬ ಸಮೀಕರಣದ ಮೂಲಗಳನ್ನು ಕಂಡು ಹಿಡಿಯಿರಿ.

